


# ಋಗ್ವೇದ ದರ್ಶನ

ಪ್ರಥಮ ಭಾಗ

ಭಾಷ್ಯಕಾರರು :

ಪಂ॥ ಸುಧಾಕರ ಚತುರ್ವೇದೀ

ಬೆಂಗಳೂರು

ಪ್ರಕಾಶಕರು :

ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ

ಕುಂಜಿಬೆಟ್ಟು, ಉಡುಪಿ – ೫೭೬ ೧೦೨. ದ. ಕ.

ಸೃಷ್ಟಿ ಸಂವತ್ ೧೯೭,೨೯,೪೯,೦೮೦

ಶ್ರಾವಣ ೧೯೮೦



## ಪ್ರಕಾಶಕರ ಮಾತು

ಓಂ ಶನ್ನೋ ಮಿತ್ರಃ ಶಂ ವರುಣಃ ಶನ್ನೋ ಭವತ್ವರ್ಯಮಾ ।

ಶನ್ನ ಇಂದ್ರೋ ಬೃಹಸ್ಪತಿಃ ಶನ್ನೋ ವಿಷ್ಣುರುರುಕ್ರಮಃ ।

ನಮೋ ಬ್ರಹ್ಮಣೇ ನಮಸ್ತೇ ವಾಯೋ ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ ।

ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ ।

ಋತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ ।

ತನ್ಮಾಮವತು ತದ್ವಕ್ತಾರಮವತು ।

ಅವತು ಮಾಮವತು ವಕ್ತಾರಂ ॥ [ತೈತ್ತಿರೀಯ ಉಪನಿಷತ್ತು ೧-೧]

"ಸರ್ವ ರಕ್ಷಕನಾದ ಪರಮಾತ್ಮನು, ಸರ್ವಮಿತ್ರನಾದ ಪ್ರಭುವು ನಮಗೆ ಶಾಂತಿ ಕೊಡಲಿ. ಪಾಪ ತಾಪ—ನಿವಾರಕ ವರಣೀಯ ಪ್ರಭುವು ನಮಗೆ ಶಾಂತಿ ಕೊಡಲಿ. ನ್ಯಾಯ ನಿಯಾಮಕ ಪ್ರಭು ನಮಗೆ ಶಾಂತಿ ನೀಡಲಿ. ವಿಶ್ವ ಬ್ರಹ್ಮಾಂಡದ ಏಕೈಕಾಧೀಶ್ವರನಾದ ಸರ್ವೇಶ್ವರನು ನಮಗೆ ಶಾಂತಿ ಕರುಣಿಸಲಿ. ಅಣುಅಣುವಿನಲ್ಲಿಯೂ ವ್ಯಾಪಕನಾಗಿರುವ ಸರ್ವಶಕ್ತನು ನಮಗೆ ಶಾಂತಿ ದಾನಮಾಡಲಿ."

"ಓ ಸರ್ವಶ್ರೇಷ್ಠ ! ನಿನಗೆ ಪ್ರಣಾಮ. ಓ ಪ್ರಾಣಾಧಾರ ನಿನಗೆ ಪ್ರಣಾಮ. ನೀನೇ ಪ್ರತ್ಯಕ್ಷ ಬ್ರಹ್ಮನಾಗಿರುವೆ. ನಿನ್ನನ್ನೇ ಪ್ರತ್ಯಕ್ಷ ಬ್ರಹ್ಮನೆನ್ನುವೆನು. ಶ್ರುತಿವಾಕ್ಯ ಹೇಳುವೆನು. ಸತ್ಯವನ್ನೇ ಹೇಳುವೆನು. ಆ ಸತ್ಯ ನನ್ನನ್ನು ರಕ್ಷಿಸಲಿ. ಅದೇ—ಸತ್ಯ ಉಪದೇಶಕನನ್ನೂ ರಕ್ಷಿಸಲಿ. ನನ್ನನ್ನೂ, ನನ್ನ ಗುರುವನ್ನೂ ಆ ಸತ್ಯವೇ ರಕ್ಷಿಸಲಿ."

ಓಂ ಶಾಂತಿಃ ಶಾಂತಿಃ ಶಾಂತಿಃ

ವೈದಿಕ ಧರ್ಮೀಯರ ಬಾಯಿಯಿಂದ ಹೊರಡುವ ಭಕ್ತಿಪ್ರದ ಮಾತುಗಳಿವು. ಪ್ರತಿಯೋರ್ವ ವೈದಿಕ ಧರ್ಮಿಯೂ ಶಾಂತಿಗಾಗಿ ಪರಮಾತ್ಮನಲ್ಲಿ ಬೇಡುತ್ತಲೇ ಇದ್ದಾನೆ. ಆದರೆ ಶಾಂತಿ ಸಿಕ್ಕದಿರಲು ಕಾರಣವೇನು? ನಮ್ಮ ಪ್ರಾರ್ಥನೆಗನುಸಾರವಾಗಿ ಕಾಯೇನ ವಾಚಾ ಮನಸಾ ಸತ್ಯವು ಹೊರ ಸೂಸುತ್ತಿದೆಯೇ? 'ಪ್ರಾಮಾಣಿಕತೆ ನಮ್ಮಲ್ಲಿದೆಯೇ? ಕೊಡುವ ದಾತನೊಬ್ಬನು ಇದ್ದಾನೆಂಬುದು ನಿಜ. ಆದರೆ

ಅವನನ್ನು ಸರಿಯಾಗಿ ಅರಿತಿದ್ದೇವೆಯೇ? ಅವನ ಸ್ವರೂಪವನ್ನು ತಿಳಿದಿದ್ದೇವೆಯೇ? ಇದನ್ನು ತಿಳಿಸುವ ಗುರು ನಮಗೇ ಲಭ್ಯವಾಗಿದ್ದಾನೆಯೇ? ಅಥವಾ ಅಂತಹ ಮಹಾತ್ಮರನ್ನು ಸಂದರ್ಶಿಸಲು, ಅವರಿಂದ ಜ್ಞಾನೋಪದೇಶ ಪಡೆಯಲು ನಾವೇನಾದರೂ ಕಷ್ಟಪಟ್ಟಿದ್ದೇವೆಯೇ? ಈ ಎಲ್ಲಾ ಪ್ರಶ್ನೆಗಳಿಗೂ ಸಿಗುವ ಉತ್ತರ ನಕಾರವೊಂದು ಮಾತ್ರ. ಅಶಾಂತಿಯ ಮಾರ್ಗದಲ್ಲಿ ಮುಂದಡಿ ಇಡುವ ಮಾನವನಿಗೆ ಶಾಂತಿ ದೊರಕುವುದಾದರೂ ಎಲ್ಲಿಂದ? ಅಸತ್ಯ ವ್ಯವಹಾರದಲ್ಲಿಯೇ ತೊಡಗಿರುವವನಿಗೆ ಸತ್ಯದ ದರ್ಶನವಾಗುವುದು ಹೇಗೆ? ಸುತ್ತಲೂ ಈಕ್ಷಿಸಿದಾಗ ಸಾಮಾನ್ಯ ಮನುಷ್ಯರಿಂದ ಹಿಡಿದು ಪ್ರಜಾಪಾಲಕರವರೆಗೂ ಶಾಂತಿಗಾಗಿ ಪರಿತಪಿಸುವ, ಅಶಾಂತಿಯನ್ನೇ ನಿರ್ಮಾಣ ಮಾಡುವ ಜನರೇ ಕಣ್ಣಿಗೆ ಗೋಚರವಾಗುತ್ತಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಪ್ರಾಪ್ತ ಸರ್ವಸ್ವನೂ, ಕಲ್ಯಾಣಕಾರಿಯೂ ಆದ ಆ ವಿಶ್ವಚೇತನನಲ್ಲಿ ಅನನ್ಯ ಶರಣಾಗುವುದೊಂದೇ ಮಾರ್ಗ. ಆದರೆ ಅವನನ್ನು ಹುಡುಕುವುದೆಲ್ಲಿ? ತೋರಿಸುವವರಾರು? ಆ ಜಗತ್ಪತಿಯ ಮಹಿಮೆಯನ್ನು ಸ್ಪಷ್ಟವಾಗಿ ಗಾನ ಮಾಡುವ ಆತನ ಸ್ವರೂಪವನ್ನು ತಿಳಿಸುವ ವೇದಗಳೇ ನಮಗೆ ದಾರಿದೀಪ. ಆ ಪ್ರಭುವಿನ ದಿವ್ಯವಾಣಿಯೇ ಸೃಷ್ಟಿಯ ಆದಿಯಲ್ಲಿ ಶಬ್ದರೂಪದಲ್ಲಿ ಪ್ರಕಟವಾದ ನಿರ್ಮಲ ಜ್ಞಾನವಿಜ್ಞಾನ ಭಂಡಾರವಾದ ವೇದಗಳು. ಈ ವೇದಜ್ಞಾನವನ್ನು ಕನ್ನಡ ಭಾಷೆಯಲ್ಲಿ ಪ್ರಕಟಿಸುವ ಸಂಕಲ್ಪದಿಂದ ಕನ್ನಡಮ್ಮನ ಪ್ರೀತಿಯ ಪುತ್ರರಾದ **ಶ್ರೀ ಪಂ॥ ಸುಧಾಕರ ಚತುರ್ವೇದೀ** ಬೆಂಗಳೂರು—ಇವರೊಡನೆ ಕೇಳಿಕೊಂಡೆವು. ನಮ್ಮ ನಿವೇದನೆಯನ್ನು ಸಹರ್ಷಚಿತ್ತರಾಗಿ ಸ್ವೀಕರಿಸಿ "**ಋಗ್ವೇದ ದರ್ಶನ**" ಎಂಬ ಹೆಸರಿನಿಂದ ವೇದಭಾಷ್ಯವನ್ನು ರಚಿಸಿದ್ದಾರೆ. ಈಗ ಅದರ ಮೊದಲ ಭಾಗವನ್ನು ಕನ್ನಡ ಬಾಂಧವರಿಗೆ ಅರ್ಪಿಸುತ್ತಿದ್ದೇವೆ.

ಈ ಹಿಂದೆ ಶ್ರೀಮನ್ಮಹಾರಾಜ ಜಯಚಾಮರಾಜೇಂದ್ರ ಒಡೆಯರ್‌ರವರ ಕೃಪಾಶ್ರಯದಲ್ಲಿ ಋಗ್ವೇದದ ಸಾಯಣ ಭಾಷ್ಯದ ಕನ್ನಡಾನುವಾದ ಪ್ರಕಟವಾಗಿದೆ. ಅದಲ್ಲದೆ 'ಪೂರ್ಣಪ್ರಜ್ಞ'ರೆಂದು ಖ್ಯಾತಿವೆತ್ತ ಆಚಾರ್ಯ ಮಧ್ವರಿಂದ ಋಗ್ಭಾಷ್ಯವು ಕೇವಲ ನಾಲ್ವತ್ತು ಸೂಕ್ತಗಳಷ್ಟು ಮಾತ್ರ ರಚಿಸಲ್ಪಟ್ಟು, ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳವರಿಂದ ಕನ್ನಡದಲ್ಲಿ ಭಾಷಾಂತರವಾಗಿ ಪ್ರಕಟವಾಗಿದೆ. ದ್ವೈತಾದ್ವೈತ ಪರ ವಾದಸರಣಿಯಲ್ಲಿಯೇ ಹೊರಟ ಇವೆರಡನ್ನೂ ಸರಿಯಾಗಿ ಓದಿದ ಜನತೆಗೆ ಋಗ್ವೇದದ ಸ್ಫುಟವಾದ ಅರ್ಥವು ಮನವರಿಕೆಯಾಗದೆ ಭ್ರಾಂತಿ ನಿರ್ಮಾಣವಾಗಿ ಅನೇಕ ಕಡೆ ಬರುವ ಸಂದೇಹಗಳಿಗೆ ಸರಿಯಾದ ಉತ್ತರ ಸಿಕ್ಕಿಲ್ಲ. ಯಾವ ಪಂಡಿತರೂ ಈ ಕಡೆ ಗಮನ ಹರಿಸಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಕನ್ನಡ ಜನತೆಯಲ್ಲಿ ವೇದಗಳೆಂದರೆ ಕೇವಲ ಪಾರಾಯಣ ಮಾಡಲಿಕ್ಕೆ ಮಾತ್ರವೆಂಬ ಅಭಿಪ್ರಾಯ ಮೂಡಿದೆ. ಅದರ ಬಗ್ಗೆ ಶ್ರದ್ಧೆಯೇ ಇಲ್ಲವಾಗಿದೆ. ಆದಕಾರಣ ನಿಶ್ಚಿತವಾದ ರೀತಿಯಲ್ಲಿ ವೇದಗಳ ಸಾರ್ವಭೌಮ ತತ್ವಗಳನ್ನು ಯಾವುದೇ ಮತ ಅಥವಾ ಸಂಪ್ರದಾಯಗಳ ಬಂಧನಕ್ಕೆ ಬಲಿ ಬೀಳದೆ, ಸೂರ್ಯಪ್ರಕಾಶದಂತೆ ಅತಿ ಸ್ಪಷ್ಟವಾಗಿ, ವೈಜ್ಞಾನಿಕವಾದ ವೇದಾರ್ಥವನ್ನು ಜನರ ಮನೋಮಂದಿರಕ್ಕೆ ಮುಟ್ಟುವಂತೆ ಪ್ರಕಟಪಡಿಸಬೇಕೆಂಬ ಸಂಕಲ್ಪವನ್ನು ತಾಳಿದೆವು. ಅದಕ್ಕಾಗಿಯೇ ನಿರ್ಮಾಣವಾದ **ವೈದಿಕ ಸಾಹಿತ್ಯ ಪ್ರಕಾಶನ ಸಮಿತಿಯ** ಮೂಲಕ ಈ ವೇದಭಾಷ್ಯವನ್ನು ಕನ್ನಡ ಜನತೆಯ ಮುಂದಿಡುತ್ತಿದ್ದೇವೆ.

ಹಲವಾರು ಶತಮಾನಗಳಿಂದಲೂ ಸ್ತ್ರೀಶೂದ್ರಾದಿಗಳಿಗೆ ವೇದಾಧಿಕಾರವಿಲ್ಲವೆಂಬ ಕೂಗು ಆಚಾರ್ಯತ್ರಯರಿಂದಲೂ, ಅನೇಕ ಪಂಡಿತರಿಂದಲೂ ಹೇಳಲ್ಪಟ್ಟು ಸ್ತ್ರೀ ಶೂದ್ರಾದಿಗಳು ಪವಿತ್ರವಾದ ವೇದಜ್ಞಾನದಿಂದ ವಂಚಿಸಲ್ಪಟ್ಟಿದ್ದರು. ಈಗ ಪ್ರಕಟಿಸಲ್ಪಟ್ಟ ಈ ಭಾಷ್ಯದಿಂದ ಈ ಭೀತಿ ನಿವಾರಿಸಲ್ಪಟ್ಟು ಸರ್ವರಿಗೂ ವೇದಾಧಿಕಾರವಿದೆ—ಎಂಬ ಸತ್ಯದ ಮನವರಿಕೆಯಾಗುವುದೆಂಬ ಭರವಸೆ ಇದೆ.

## ಪ್ರತ್ಯೇಕವಾದ ವೇದಭಾಷ್ಯ ರಚಿಸಲು ನಮ್ಮ ಮುಂದೆ ಬಂದ ವಿಚಾರಗಳು

ಈಗ ಭಾರತದಲ್ಲಿರುವ ಹಿಂದು-ಕ್ರೈಸ್ತ-ಮುಸಲ್ಮಾನ್ ಜನಾಂಗದವರಿಗೆ, ಪುರಾಣ, ಬೈಬಲ್, ಕುರಾನ್‌ಗಳಲ್ಲಿ ಬಂದಿರುವ ಮನರಂಜಿತ ಕಥೆಗಳನ್ನು ಓದಿದ ಜನರಿಗೆ ವೈಜ್ಞಾನಿಕವಾದ ವೇದಗಳ ಗಾಂಭೀರ್ಯ ಗ್ರಹಿಸಲು ಕಷ್ಟವಾಗಬಹುದು. ಆದರೆ ಈಗಿನ ವಿಜ್ಞಾನಿಗಳಿಗೂ ಆಶ್ಚರ್ಯವಾಗುವ ಸೃಷ್ಟಿಯ ರಚನೆ, ಸಮಸ್ತ ಪ್ರಾಣಿಗಳ ಹಾಗೂ ಮಾನವ ನಿರ್ಮಾಣದ ವೈಜ್ಞಾನಿಕ ವಿಧಾನ, ಮಾನವ ಪ್ರಪಂಚಕ್ಕೆ ಸಕಾಲದಲ್ಲಿಯೇ ಪ್ರಕಟವಾದ ಭಗವದ್ವಾಣಿಯಾದ ವೇದಗಳ ನಿರ್ಮಲ ಜ್ಞಾನ, ಸೃಷ್ಟಿಯ ಆದಿಯಲ್ಲೇ ಲಭ್ಯವಾಗಿತ್ತು.

ವೇದಗಳ ಭಾಷೆ ವೈದಿಕ ಭಾಷೆ. ಅದರ ಲಿಪಿ ವೈದಿಕ ಲಿಪಿ. ಕಾಲಕ್ರಮದಲ್ಲಿ ವ್ಯವಹಾರಕ್ಕೆ ಬೇಕಾಗುವ ರೀತಿಯಲ್ಲಿ ಭೂತ, ವರ್ತಮಾನ, ಭವಿಷ್ಯತ್‌ಕಾಲಗಳನ್ನು ನಿರ್ದೇಶಿಸಲು 'ಲ'ಕಾರಗಳನ್ನು ನಿರ್ಮಿಸಿ, ಸಂಸ್ಕಾರ ಮಾಡಿ 'ಸಂಸ್ಕೃತ'ವೆಂಬ ಭಾಷೆಯನ್ನು ಬಳಕೆಗೆ ತರಲಾಯಿತು. ಈ ಸಂಸ್ಕೃತ ಭಾಷೆಯನ್ನು ಬರೆಯಲು ವೈದಿಕ ಲಿಪಿಯಲ್ಲಿ ಬೇಕಾದ ಸುಧಾರಣೆಗಳನ್ನು ಮಾಡಿ ದೇವನಗರಿ (ಕಾಶಿ)ಯಲ್ಲಿ ಇಂದು ಪ್ರಚಲಿತವಾಗಿರುವ ದೇವನಾಗರಿ-ಲಿಪಿಯನ್ನು ರೂಪಿಸಿದರು. ಈ ನಡುವೆ ಗಮನದಲ್ಲಿರಿಸಬೇಕಾದ ಮತ್ತೊಂದು ಅಂಶವೆಂದರೆ, ವೈದಿಕ ಭಾಷೆ ಪ್ರಚಲಿತವಿದ್ದ ಕಾಲದಲ್ಲಿಯೂ ಜನಸಾಧಾರಣರು 'ಪ್ರಾಕೃತ' ಭಾಷೆಯನ್ನೇ ಮಾತನಾಡುತ್ತಿದ್ದರು. ಸಂಸ್ಕೃತ 'ದ್ವಿಜ'ರ ಅಥವಾ ದೇವಜನರ ಭಾಷೆಯಾಗಿದ್ದ ಕಾರಣ 'ದೇವಭಾಷೆ'ಯೆಂದು ಕರೆಯಲ್ಪಡುತ್ತದೆ. ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳು ಕಾಲಕ್ರಮದಲ್ಲಿ ಬೇರೆಬೇರೆ ರೂಪಗಳನ್ನು ಪಡೆದುಕೊಂಡು ಪಾಳಿ, ಮಾಗಧಿ, ಅರ್ಧಮಾಗಧಿ, ಮೊದಲಾದ ಭಿನ್ನಭಿನ್ನ ಭಾಷೆಗಳು ಪ್ರಚಲಿತವಾದವು.

ವೇದಗಳು ಸಾಮಾನ್ಯರಿಗೆ ಅರ್ಥಮಾಡಿಕೊಳ್ಳಲು ಸುಲಭವಾಗುವಂತೆ—ಋಷಿಮುನಿಗಳು—ಬ್ರಾಹ್ಮಣ ಗ್ರಂಥಗಳು, ಉಪನಿಷತ್ತು ಇತ್ಯಾದಿಗಳನ್ನೂ ರಚಿಸಿದರು. ಉಪನಿಷತ್ತುಗಳೇ ವೇದಾಂತದ ತಿರುಳು—ಎಂಬಷ್ಟು ಮಟ್ಟಿಗೆ ಪ್ರಖ್ಯಾತವಾದಾಗ ಕವಿಪುಂಗವರು ತಮ್ಮದೇ ಆದ ವಿಶಿಷ್ಟವಾದ ಅರ್ಥಸರಣಿಯನ್ನು ಪ್ರಚಾರ ಮಾಡಲು ಹೊಸ ಹೊಸ ಉಪನಿಷತ್ತುಗಳನ್ನು ರಚಿಸಿದರು. ಈ ಉಪನಿಷತ್ತುಗಳು ಸಾಕಷ್ಟು ಸಂಖ್ಯೆಯಲ್ಲಿ ಬೆಳೆದಿದ್ದರೂ ವೇದವಿದ್ವಾಂಸರು ಕೇವಲ ಹತ್ತನ್ನು ಮಾತ್ರ ಸರ್ವಮಾನಿತವೆನ್ನಬಹುದೆಂದು ಅಭಿಪ್ರಾಯಪಟ್ಟಿರುವರು. ಉಪನಿಷತ್ತು—ಎಂಬ ಹೆಸರು ಬಂದೊಡನೆ, ಅದರ ಬಗ್ಗೆ ಅಪಾರ ಗೌರವ ಜನತೆಯಲ್ಲಿ ಬೆಳೆದು ಬಂದಿರುವುದರಿಂದ ನಾಲ್ಕು ಶತಕದಷ್ಟು ಉಪನಿಷತ್ತುಗಳ ರಚನೆಯಾಯಿತು. ಎಷ್ಟಾದರೂ ಮಾನವ ಸ್ವಭಾವ ಪರಿವರ್ತನಶೀಲ ಹಾಗೂ ಹೊಸತನ್ನು ಕಾಣುವ ಮನೋಭಾವಕ್ಕನುಸಾರ

ನವೀನ ಸಾಹಿತ್ಯದ ಕಡೆಗೆ ಆಕರ್ಷಿತರಾದರು. ಉಪನಿಷತ್ತುಗಳೂ ಸಹಾ ಸಾಮಾನ್ಯ ಜನರಿಗೆ ಅರಿತುಕೊಳ್ಳಲು ಸಾಧ್ಯವಾಗದೆಂದೂ, ಸರಳವಾದ ಭಾಷೆಯಲ್ಲಿ ಕಥಾರೂಪದಲ್ಲಿ ಬರುವ ಸಾಹಿತ್ಯದಿಂದ ಜನರಿಗೆ ಧರ್ಮದ ಬಗ್ಗೆ ಹೆಚ್ಚಾಗಿ ತಿಳಿಸಬಹುದೆಂದು ಅರಿವಾದೊಡನೆ ಪುರಾಣಗಳ ರಚನೆಗೆ ಪ್ರಾರಂಭವಾಯಿತು. ಹೆಚ್ಚಾಗಿ ಮಾತನಾಡುವ, ಓದುವ ಭಾಷೆ ಸಂಸ್ಕೃತವೇ ಆಗಿದ್ದ ಕಾರಣ ಪುರಾಣಗಳೂ ಸಹಾ ಸಂಸ್ಕೃತ ಭಾಷೆಯಲ್ಲಿಯೇ ರಚಿಸಲ್ಪಟ್ಟು ಬೆಳಕಿಗೆ ಬಂದವು.

ವೈದಿಕ ಭಾಷೆಯ ವೈಖರಿಯೇ ಬೇರೆಯಾದ ಕಾರಣ ಧರ್ಮಾಧರ್ಮಗಳನ್ನು ಸುಲಭವಾಗಿ ಅರಿಯಲು ಆ ನಂತರ ರಚಿಸಲ್ಪಟ್ಟ ಪುರಾಣಗಳು ಜನರಿಗೆ ಹೆಚ್ಚು ಆಕರ್ಷಕವಾದವು. ರಾಮಾಯಣ, ಭಾರತ, ಭಾಗವತಾದಿ ಪುರಾಣಗಳು ಪ್ರಾರಂಭದಲ್ಲಿ ಪಠ್ಯಪುಸ್ತಕವಾಗಿದ್ದ ವಿಚಾರ ಭೋಜಪ್ರಬಂಧವನ್ನು ಓದಿದವರಿಗೆ ಅರಿವಾಗಬಹುದು. ಆದರೆ ಕವಿಗಳ, ಸಾಹಿತಿಗಳ ಸಂಖ್ಯೆ ಬೆಳೆದಂತೆ ಪುರಾಣಗಳ ಮೂಲರೂಪ ಬದಲಾಗಿ ಹೊಸ ರೂಪ ತಾಳಿದವಲ್ಲದೆ, ಸಂಖ್ಯೆಯೂ ಅದೇ ಪ್ರಕಾರ ಬೆಳೆಯಿತು. ಜನರನ್ನು ಆಕರ್ಷಿಸಲು ಹೊರಟ ಪುರಾಣಗಳು ವಾಸ್ತವಿಕತೆಯನ್ನು ಬಿಟ್ಟು ಮನೋರಂಜನೆಗೆ ಹೊರಟು ಒಬ್ಬೊಬ್ಬ ಕವಿ ಒಂದೊಂದು ವಿಧವಾಗಿ ಬರೆಯುತ್ತಾ, ತಮ್ಮ ಕವಿತಾ ಪ್ರೌಢಿಮೆಯನ್ನು ಪ್ರದರ್ಶಿಸಲು ಹೊರಟರಲ್ಲದೆ ಪರಸ್ಪರ ವಿರೋಧ ಬರುವ ವಿಚಾರಗಳ ಕಡೆಗೂ ಗಮನವೀಯಲಿಲ್ಲ. ಕೊನೆಗೆ ಎಲ್ಲವನ್ನೂ ವ್ಯಾಸರ ಹೆಸರಿನಲ್ಲಿ ಪ್ರಕಟಿಸಿ, ತಮ್ಮ ಸಾಹಿತ್ಯಕ್ಕೆ ಬೆಲೆ ಬರುವಂತೆ ಮಾಡಿಕೊಂಡರು.

ಈ ಪುರಾಣಗಳೆಲ್ಲಾ ಅಷ್ಟಾದಶ ಪುರಾಣಗಳೆಂದು ಕರೆಯಲ್ಪಟ್ಟವು. ಈ ಹದಿನೆಂಟು ಪುರಾಣಗಳಿಗೆ ಹದಿನೆಂಟು ಉಪಪುರಾಣಗಳೂ ರಚಿತವಾಗವು. ಹದಿನೆಂಟು ಮುಖ್ಯ ಪುರಾಣಗಳನ್ನು ಸಾತ್ವಿಕ–ರಾಜಸ–ತಾಮಸ; ಎಂಬುದಾಗಿ ಮೂರು ವಿಭಾಗಗಳನ್ನಾಗಿ ವಿಂಗಡಿಸಲಾಯಿತು. ಅತ್ಯಂತ ಪವಿತ್ರರೂ ಧರ್ಮಾತ್ಮರೂ, ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದಿಸುವ, ಮುಕ್ತಿಗೆ ಯೋಗ್ಯರಾದ ಜೀವರಿಗಾಗಿ ಆರು ಸಾತ್ವಿಕ ಪುರಾಣಗಳನ್ನೂ, ಹುಟ್ಟು ಸಾವುಗಳ ಬಂಧನದಲ್ಲಿಯೇ ಬೀಳುವಂತೆ ರಾಜಸ ಗುಣಪರಿಪೂರ್ಣರಾದ ಸಾಮಾನ್ಯ ಜೀವರುಗಳಿಗಾಗಿ ಆರು ರಾಜಸಪುರಾಣಗಳನ್ನೂ, ಮೋಕ್ಷಕ್ಕೆ ಅನರ್ಹರಾದ ಜೀವರುಗಳಿಗೆ ಅಂಧ ತಮಸ್ಸೇ ಗತಿಯಾದ ಕಾರಣ ಅಂತಹ ತಾಮಸೀ ಜೀವರುಗಳಿಗೆ ಆರು ತಾಮಸ ಪುರಾಣಗಳನ್ನೂ ಶ್ರೀಮನ್ನಾರಾಯಣನೇ ವೇದವ್ಯಾಸ ರೂಪದಲ್ಲಿ ಅವತರಿಸಿ ತ್ರಿವಿಧ ಜೀವರುಗಳಿಗಾಗಿ ಅವರವರ ಯೋಗ್ಯತಾನುಸಾರ ಗತಿ ಹೊಂದಿಸಲು ತ್ರಿವಿಧ ಪುರಾಣಗಳನ್ನು ರಚಿಸಿರುವನು ಎಂಬುದು ಒಂದು ವರ್ಗದವರ ಸಿದ್ಧಾಂತ. ಅದರೊಂದಿಗೆ ಪಂಚಭೇದ ತತ್ವವನ್ನು ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದಿಸಲು ವಾಯು ದೇವರ ಮೂರನೆಯ ಅವತಾರವಾದ ಶ್ರೀಮನ್ಮಧ್ವಾಚಾರ್ಯರೇ ಭಗವಾನ್ ವ್ಯಾಸರೊಡನೆ ಶಾಸ್ತ್ರಾರ್ಥ ಮಾಡಿ ಸರ್ವಮೂಲಾದಿ ಗ್ರಂಥಗಳನ್ನು ರಚಿಸಿದರು – ಎಂಬುದೂ ಇನ್ನೊಂದು ಪ್ರತೀತಿ. ಕಲಿಯುಗದಲ್ಲಿ ಕಲಿ ಪ್ರಧಾನವಾದ ಕಾರಣ, ಯುಗಧರ್ಮಕ್ಕನುಸಾರ ಜಡ ದೇವತಾರಾಧನೆ, ನಾಮ ಸಂಕೀರ್ತನವೇ ಮುಖ್ಯ ಎಂಬುದು ದಾಸಪಂಥದವರ ಅಂಬೋಣ. ಅದ್ವೈತ ಮತ ಸ್ಥಾಪಕರಾದ ಆದಿ ಶಂಕರರನ್ನು ಒಂದು ಕಡೆ ರುದ್ರ ದೇವರ ಅವತಾರವೆಂತಲೂ, ಇನ್ನೊಂದು ಕಡೆ ಮಣಿಮಂತನೆಂಬ ದೈತ್ಯನೆಂತಲೂ, ಮತ್ತೊಂದು ಕಡೆ 'ರಂಡಾಪುತ್ರ'

ನೆಂತಲೂ ಸಂಬೋಧಿಸಿರುವುದನ್ನು ಗಮನಿಸುವಾಗ ಆಚಾರ್ಯತ್ರಯರು ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಎಂಬ ಹೆಸರಿನಲ್ಲಿ ತಮ್ಮದೇ ಆದ ಸಿದ್ಧಾಂತಗಳನ್ನು ಪ್ರಚಾರ ಮಾಡಲು ಹೊರಟು ಪರಸ್ಪರ ದೂಷಿಸುತ್ತಾ, ಬೇರೆಬೇರೆ ಮತಗಳನ್ನು ಸ್ಥಾಪಿಸಿ ಶಿಷ್ಯಾದಿಗಳನ್ನು ಬೆಳೆಸಿಕೊಂಡು ಎಂದೆಂದಿಗೂ ಒಂದಾಗದಂತೆ, ಸದಾಕಾಲವೂ ಜಗಳಾಡುವಂತೆ ಒಂದು ವಿಲಕ್ಷಣ ಮಾರ್ಗವನ್ನು ನಿರ್ಮಿಸಿ ಹೋದರು – ಎಂಬುದು ವಿಚಾರವಂತರ ಅಭಿಪ್ರಾಯ.

ಗುರುತ್ರಯರು ತಮ್ಮ ಮತಸ್ಥಾಪನೆಗೆ ತಮ್ಮ ಸಿದ್ಧಾಂತ ಪ್ರತಿಪಾದನೆಗೆ ಬಹಳಷ್ಟು ಕಷ್ಟಪಟ್ಟಿರಬೇಕು. ಅವರ ಮನೋಭಾವನೆ ಉದಾತ್ತವಾಗಿದ್ದರೂ, ಅವರು ಹಿಡಿದ ದಾರಿಯಲ್ಲಿ ಹೃದಯ ವೈಶಾಲ್ಯ ತುಂಬಿಬರಲಿಲ್ಲ. ಆ ಕಾಲದ ಮತ್ತು ನಂತರದ ಅವರ ಶಿಷ್ಯರಿಂದಲೂ ಕೆಲವು ಅಪಚಾರವಾಗಿರಲೂ ಬಹುದು. ಅದರ ಕಹಿ ಅನುಭವಿಸುವವರು ಕೋಟಿ ಕೋಟಿ ಸಂಖ್ಯೆಯಲ್ಲಿರುವ ಈಗಿನ ಶಿಷ್ಯವರ್ಗವೆಂದರೆ ತಪ್ಪಾಗದು. ಸ್ವತಂತ್ರ ಭಾರತದ ಜನತೆ ಐಕಮತ್ಯದಿಂದ ಒಂದಾಗಿ ಜೀವನ ನಡೆಸಿಕೊಂಡು ರಾಷ್ಟ್ರಾಭಿವೃದ್ಧಿಯ ಕೆಲಸ ಮಾಡಬೇಕಾದರೆ, ಸರ್ವರನ್ನೂ ಒಂದಾಗಿಸುವ, ಜಾತಿ ಭೇದ, ಉಚ್ಚ-ನೀಚ ಭಾವನೆಗಳಿಗೆ ಅವಕಾಶ ನೀಡದ ವೈದಿಕ ಧರ್ಮವೊಂದೇ ಸಮರ್ಥವಾಗಿದೆ. ವೈದಿಕ ಧರ್ಮೀಯರಿಗೆ ವೇದಗಳೇ ಸ್ವತಃ ಪ್ರಾಮಾಣ್ಯ ಈ ಸತ್ಯ ಜನತೆಗೆ ಅರಿವಾದರೆ ನಾವೆಲ್ಲರೂ ಒಂದೇ---ಎಂಬ ಸದ್ಭಾವನೆ ಮೂಡಿದರೆ ಶಾಂತಿ ಲಭಿಸೀತು. ಒಂದಾಗಿ ಪ್ರೇಮದಿಂದ ಬಾಳಬಹುದು. ಈ ರೀತಿ ಸರ್ವರನ್ನೂ ಏಕೀಕರಿಸುವ ಯೋಗ್ಯತೆ ಬೇರೆ ಯಾವ ಶಾಸ್ತ್ರಗಳಿಗೂ ಇಲ್ಲ. ಯಾವುದೇ ಮತ ಗ್ರಂಥಗಳಿಂದಲೂ ಸಾಧ್ಯವಾಗದು. ಸಾರ್ವಭೌಮ ಈಶ್ವರವಾಣಿಯಾದ ವೇದಗಳು ಮಾತ್ರ ಮಾನವ ಜನಾಂಗವನ್ನು ಒಂದಾಗಿ ಮಾಡಲು ಶಕ್ತವಾಗಿವೆ. ವೈದಿಕ ಸಾಹಿತ್ಯವನ್ನು ಭಾರತದಲ್ಲಿ ಹೆಚ್ಚು ಹೆಚ್ಚಾಗಿ ಪ್ರಚಾರ ಮಾಡಲು ಸರ್ವರೂ ಪ್ರಯತ್ನಿಸಿದರೆ ಭಾರತವನ್ನು ಹಿಂದಿನ ಗೌರವಯುತ ರಾಷ್ಟ್ರವನ್ನಾಗಿ ಬೆಳಗಿಸಬಹುದು. ಈ ಮಹಾನ್ ಉದ್ದೇಶವನ್ನು ದೃಷ್ಟಿಪಥದಲ್ಲಿಟ್ಟು "ಋಗ್ವೇದ ದರ್ಶನ"ವನ್ನು ರಚಿಸಲಾಗಿದೆ. ಇದರ ಮೂಲಕ ಸರ್ವ ಮತಗಳವರ ಅಜ್ಞಾನಾಂಧಕಾರವು ದೂರವಾಗಿ ಸರ್ವರಿಗೂ ಸತ್ಯದ ಅರಿವಾದೀತು---ಎಂದು ದೃಢವಾಗಿ ಹೇಳಬಲ್ಲೆವು.

ಸರ್ವಧರ್ಮ ಸಮ್ಮೇಳನಗಳು ಅಲ್ಲಲ್ಲಿ ನಡೆಯುತ್ತಿರುವುದಾದರೂ ವೇದಿಕೆಯಲ್ಲಿ ಬೇರೆ ಬೇರೆ ಮತಸಂಪ್ರದಾಯಗಳವರು ಬಂದು ಸೇರುತ್ತಾರಾದರೂ ತಮ್ಮ ತಮ್ಮ ಮತಗಳ ಔನ್ನತ್ಯವನ್ನು ಹೇಳಿ ಕೈಚಪ್ಪಾಳೆ ತಟ್ಟಿಸಿಕೊಳ್ಳುತ್ತಾರೆಯೇ ಹೊರತು ನಮ್ಮ ಮಾನವ ಜನಾಂಗವನ್ನೇ ಒಂದಾಗಿ ಸೇರಿಸುವ ಪ್ರಯತ್ನ ಈ ವರೆಗೆ ನಡೆದಿಲ್ಲ. ಮತ-ಸಂಪ್ರದಾಯದ ದವಡೆಯಿಂದ ಬಿಡಿಸಿಕೊಳ್ಳುವ ತನಕ ಈ ಏಕತೆ ಕನಸಿನ ಮಾತೇ ಸರಿ. ಪ್ರಪಂಚದ ಜನರೆಲ್ಲಾ ವೇದಗಳನ್ನು—ವೈದಿಕ ಸಾಹಿತ್ಯವನ್ನು ಅನಾದಿ ಮತ್ತು ಅನಂತವೆಂದು ಮುಕ್ತಕಂಠದಿಂದ ಹೊಗಳುತ್ತಿರುವಾಗ ನಾವೇಕೆ ಅದರ ಬಗ್ಗೆ ಉದಾಸೀನರಾಗಬೇಕು? ಅದನ್ನೇ ಮಾನವನ ಏಕೀಕರಣಕ್ಕೆ ಬುನಾದಿ—ಎಂದು ಘೋಷಿಸಬಾರದೇಕೆ? ಆದರೆ ಮತೀಯ ಸ್ವಾರ್ಥ ಈ ಕೆಲಸಕ್ಕೆ ಅಡಚಣೆಯನ್ನುಂಟು ಮಾಡುತ್ತಿರುವುದು ನಿಶ್ಚಿತ. ಈ ಸಂಕಟಮಯ ವಾತಾವರಣವನ್ನು ಗಮನಿಸಿಯೇ ನಾವೀ ಪವಿತ್ರ ಸಂಕಲ್ಪ ತಾಳಿದೆವು. ಸಾರ್ವಜನಿಕರು ಇದನ್ನು ಆದರದಿಂದ ಸ್ವೀಕರಿಸಿ,



# "ಋಗ್ವೇದ ದರ್ಶನ"ದ ಭೂಮಿಕೆ

## ಈಶ ಪ್ರಾರ್ಥನಾ

ಓಂ ವಿಶ್ವಾನಿ ದೇವ ಸವಿತರ್ದುರಿತಾನಿ ಪರಾಸುವ ।

ಯದ್ ಭದ್ರಂ ತನ್ನ ಆಸುವ ॥ [ಋಗ್ವೇದ ೫-೮೨-೫]

"ಓ ಸರ್ವೋತ್ಪಾದಕ, ಸರ್ವಸತ್ಪ್ರೇರಕ ಪ್ರಕಾಶಮಾನ್ ದೇವ! ನಾವು ಕೈಗೊಂಡಿರುವ, ನಿನ್ನ ನಿರ್ಭ್ರಾಂತ ನಿರ್ಮಲ ಜ್ಞಾನದ ಪ್ರಸಾರಣದ ಕಡು ಕಠಿನ ಕಾರ್ಯ ದುಷ್ಕರ. ಹಲವಾರು ದುರಿತಗಳು ವಿಪರೀತವಾದ ದಿಕ್ಕಿಗೆ ಹೆಜ್ಜೆ ಹಾಕುವ ಕಪಿ ಕೆಲಸ, ನ್ಯಾಯವಲ್ಲದ ಗತಿ ಕ್ಷಣಕ್ಷಣಕ್ಕೂ ಮುಂದುವರಿಯುವಂತೆ ಭಗವನ್! ಈ ಸಮಸ್ತ ದುರಿತಗಳನ್ನೂ ನಮ್ಮಿಂದ ದೂರವಿಡು. ಕಲ್ಯಾಣ ಮಾರ್ಗವಾವುದಿದೆಯೋ ಅದರಲ್ಲಿಯೇ ನಡೆವಂತೆ ನಮಗೆ ಸಾಮರ್ಥ್ಯ ಕರುಣಿಸು."

## ವೇದಮಾತಾ ವಂದನಾ

ಸ್ತುತಾ ಮಯಾ ವರದಾ ವೇದಮಾತಾ ಪ್ರಚೋದಯಂತಾಂ

ಪಾವಮಾನೀ ದ್ವಿಜಾನಾಮ್ । ಆಯುಃ ಪ್ರಾಣಂ ಪ್ರಜಾಂ ಪಶುಂ

ಕೀರ್ತಿಂ ದ್ರವಿಣಂ ಬ್ರಹ್ಮವರ್ಚಸಂ । ಮಹ್ಯಂ ದತ್ವಾ ವ್ರಜತ

ಬ್ರಹ್ಮಲೋಕಂ ॥ [ಅಥರ್ವ:-೧೯-೭೧-೧]

ಸರ್ವಶಕ್ತನಾದ ಪರಮಾತ್ಮನ ಸ್ವರೂಪವನ್ನು ತಿಳಿಯಲು, ಅವನ ದೈವೀಗುಣಗಳನ್ನು ತನ್ನದನ್ನಾಗಿ ಮಾಡಿಕೊಳ್ಳುವ ಉದ್ದೇಶದಿಂದ ಯಾರು ದೃಢಸಂಕಲ್ಪ ತಾಳುತ್ತಾರೋ ಅವರಿಗೆ ವೇದಜ್ಞಾನದ ಸಂಸ್ಕಾರದ ಮೂಲಕ ದ್ವಿಜತ್ವವನ್ನು ದಾನ ಮಾಡಿ ಪಾವನೀಕರಿಸುವ ವೇದಮಾತೆಯೇ! ನಿನ್ನನ್ನು ಸ್ತುತಿಸುತ್ತೇವೆ. ಹುಟ್ಟಿನಿಂದ ನಾವೆಲ್ಲರೂ ಸಂಸ್ಕಾರವಿಲ್ಲದವರಾದ ಕಾರಣ, ಜ್ಞಾನವಿಹೀನರಾಗಿ ಪಶುಸದೃಶರಾಗಿದ್ದೆವು. ನಿನ್ನ ಅನುಗ್ರಹದಿಂದ ದ್ವಿಜತ್ವವನ್ನು ಹೊಂದಿದವರಾಗಿದ್ದರೂ, ಬೃಹತ್ ಪ್ರಕಾಶದ ಸ್ಥಿತಿ

ಯಾದ ಬ್ರಹ್ಮಲೋಕದ ಪ್ರಾಪ್ತಿಗಾಗಿ, ಬ್ರಹ್ಮವಿದ್ಯೆಯ ಅಧ್ಯಯನಕ್ಕಾಗಿ ಪೂರ್ಣ ಆಯುಷ್ಯವನ್ನು ಹೊಂದಿದವರಾಗೋಣ. ನಮ್ಮ ಪ್ರಾಣಶಕ್ತಿಯು ವರ್ಧಿಸಲಿ. ನಿನ್ನಿಂದ ಅನುಗ್ರಹಿತವಾದ ಜ್ಞಾನವು ಪ್ರವಾಹರೂಪವಾಗಿ ಹರಿದು. ನಮ್ಮ ಕಾಲದ ನಂತರವೂ ಶಾಶ್ವತವಾಗಿ ಉಳಿದು ಪ್ರಚುರಪಡಿಸಲು, ಯೋಗ್ಯರಾದ ಪ್ರಜೆಗಳನ್ನು ಅನುಗ್ರಹಿಸು. ನಾವು ಎಂದಿಗೂ ಅದೀನರಾಗದಂತೆ, ಕೀರ್ತಿಶಾಲಿಗಳಾಗಿ ಬಾಳು ವಂತಾಗಲಿ. ಇದರ ಪೋಷಕವಾಗಿ ಸಕಲ ಸಂಪತ್ತುಗಳೂ ಲಭಿಸುವಂತಾಗಲಿ. ಬ್ರಹ್ಮ ತೇಜಸ್ಸಿನಿಂದ ಕೂಡಿದ ಆತ್ಮಿಕ ದೈಹಿಕ ಬಲಗಳೆರಡೂ ಲಭಿಸಲಿ. ಜನತೆಯು ಅಜ್ಞಾನಾಂಧಕಾರಗಳನ್ನು ಬಿಡಿಸಿ, ಎಲ್ಲರನ್ನೂ ಮೇಲೆತ್ತುವ, ಜಾಗ್ರತಾವಸ್ಥೆಗೆ ತರುವ ತೇಜಸ್ಸು ನಮ್ಮನ್ನು ಪ್ರೇರಿಸಲಿ. ಇದೆಲ್ಲವನ್ನೂ ಪರಮಾತ್ಮನಾದ ನಿನ್ನ ಸಾಕ್ಷಾತ್ಕಾರಕ್ಕಾಗಿ ಸಮರ್ಪಿಸುತ್ತಾ, ನಿನ್ನ ಮಹಿಮೆಯ ಪ್ರಚಾರ ಮಾಡುತ್ತಾ, ನಿನ್ನ ಜ್ಞಾನ ಸರ್ವರಿಗೂ ಲಭಿಸುವಂತಾಗಲಿ—ಎಂಬ ಸಂಕಲ್ಪವನ್ನು ಹೊತ್ತು "ಋಗ್ವೇದ ದರ್ಶನ"ವನ್ನು ಸರ್ವ ಜನಹಿತಕ್ಕಾಗಿ ಪ್ರಕಟಿಸುವೆವು. ವೇದಮಾತಾ ! ನಿನಗಿದೋ ಅನಂತ ಪ್ರಣಾಮಗಳು. ನಿನಗಿದು ಸ್ವೀಕೃತವಾಗಲಿ !

ಆರ್ಷೇತಿಹಾಸಾನುಸಾರ, ಸೃಜನಾರಂಭದಲ್ಲಿ ಪೃಥಿವೀ, ಜಲದಂತೆ ತರಳವಾದ 'ಸಲಿಲ'ವೆಂಬ, ಮಂಜಿನ ವರ್ಷಣದಿಂದ ಮೊಬ್ಬುಮೊಬ್ಬಾಗಿ ಕಾಣುವ 'ನೀಹಾರ' ವೆಂದು, ಯಜುರಭಿವರ್ಣಿತವಾದ ತತ್ತ್ವದಿಂದಾವೃತವಾಗಿತ್ತು. [ಯಜು. ೧೭–೩೧ ಋಕ್ ೧೦–೧೨೯–೩] ಕ್ರಮ, ಕ್ರಮವಾಗಿ ಘನೀಭೂತವಾಗುತ್ತಾ ನಡೆದು ಸ್ಥೂಲವಾಗಿ ಪೃಥ್ವೀ—ಎಂಬ ಹೆಸರನ್ನು ತಳೆಯಿತು. ಈ ವಿಕಾಸ ಕ್ರಮವನ್ನು ಶತಪಥ ಬ್ರಾಹ್ಮಣ ಆಲಂಕಾರಿಕ ಶೈಲಿಯಲ್ಲಿ "ಜಲದಲ್ಲಿ ಮುಳುಗಿದ್ದ ಪೃಥ್ವಿಯನ್ನು 'ವಿಷ್ಣು'—ಎಂದರೆ ತನ್ನ ಕಿರಣಗಳ ಮೂಲಕ ಸರ್ವತ್ರ ಹರಡಿರುವ ಸೂರ್ಯನು. "ವರಾಹ"—ಎಂದರೆ ಮಳೆಗರೆಯುವ ಮೋಡಗಳ ಮೂಲದ್ರವ್ಯವಾದ ಜಲವನ್ನು 'ದಂಷ್ಟ್ರ'ಗಳ—ಎಂದರೆ ಕಿರಣಗಳೆಂಬ ಕೋರೆದಾಡೆಗಳ ಮೂಲಕ ಬಾಷ್ಪರೂಪಕ್ಕೆ, ಆವಿಯ ರೂಪಕ್ಕೆ ಪರಿವರ್ತಿಸಿ, ಭೂಮಿಯನ್ನು ಸ್ಥಳ ನಿವಾಸೀ ಜೀವರ ನಿವಾಸಕ್ಕೆ ಯೋಗ್ಯವಾಗಿ ಮಾಡಿದನು—ಎಂದು ಬಣ್ಣಿಸಿದೆ. ಭೂಗರ್ಭಶಾಸ್ತ್ರ—ಖಗೋಳ ಶಾಸ್ತ್ರಗಳನ್ನು ಬಲ್ಲವರು ಈ ವರ್ಣನೆಯ ಭವ್ಯ ವೈಖರಿಯನ್ನೂ, ಅರ್ಥಗೌರವವನ್ನೂ ಕಂಡು ಆಹ್ಲಾದಿತರಾಗುತ್ತಾರೆ. ಆದರೆ, ಜನಸಾಧಾರಣರ ದೌರ್ಬಲ್ಯ ಎಲ್ಲ ರಾಷ್ಟ್ರಗಳ ಸಮಕಾಲೀನರಲ್ಲಿಯೂ ಪ್ರಾಯಶಃ ಸಮಾನವೇ ಆಗಿರುತ್ತದೆ. ಬೈಬಲ್‌ನ ಜಲ ಪ್ಲಾವನ ನೋವಾನ ನಾವೆಗೆ ಸರಿತೂಗುವಂತೆ, ಮನುವು ತತ್ಕಾಲೀನ ಜಲಪ್ಲಾವನ ವಿಷ್ಣು ಮತ್ಸ್ಯಾವತಾರ ತಾಳಿ, ಮುಳುಗಿ ಹೋಗುತ್ತಿದ್ದ ಭೂಮಿಯಲ್ಲಿ ನೆಲೆಸಿದ್ದ ಜೀವರನ್ನೆಲ್ಲಾ ದೋಣಿಯೊಂದರಲ್ಲಿ ಸಾಗಿಸಿದನೆಂದು ಓದುತ್ತೇವೆ. ಗೂಢ ತಾತ್ವಿಕ ವರ್ಣನೆ ಪಾಮರರಿಗೆ ಅರ್ಥವಾಗದಾಗ ಶಾಸ್ತ್ರಗಳ ಹಾಗೂ ಜನತೆಯ ನಡುವೆ ಕಥಾ ವಾಚಕರು. ಪೌರಾಣಿಕರು ಧುಮುಕಿ ಪ್ಯಾಸಕ್ತೀತಗಳನ್ನು ನಿರ್ಮಿಸಿ ಭೌತಿಕ, ದೈವಿಕ, ಆತ್ಮಿಕ ತತ್ತ್ವಗಳನ್ನು ವೇದಾರ್ಥ ವಿಸ್ತಾರಕ್ಕಾಗಿಗಿಯೇ ರಚಿಸಿದ ಶತಪಥಾದಿಗಳಲ್ಲಿನ ಆಲಂಕಾರಿಕ ಕಥಾನಕಗಳ ಭಾವನೆಗಳನ್ನು ಶಾಸ್ತ್ರಕಾರರ ಬಳಿಯೇ ಬಿಟ್ಟು, ಕೇವಲ ಹೇತುವಿರುದ್ಧ, ಅವೈಜ್ಞಾನಿಕ ಕತೆಗಳನ್ನು ಕಟ್ಟಿ ಸಾಧ್ಯವಾದಷ್ಟೂ ಅಜ್ಞಾನವನ್ನು ಶ್ರೋತೃಗಳ ರಿಕ್ತಮಸ್ತಿಷ್ಕಗಳಲ್ಲಿ ತುಂಬಿಸುತ್ತಾರೆ. ಋಗ್ವೇದೀಯ ಶುನಃಶೇಫನ ಪ್ರಕರಣವನ್ನೇ ನೋಡಿರಿ:

ಶುನಃ ಶೇಫೋ ಹ್ಯಹ್ವದ್ಗೃಭೀತಸ್ತ್ರಿಷ್ವಾದಿತ್ಯಂ ದ್ರುಪದೇಷು ಬದ್ಧಃ ।
ಅವೈನಂ ರಾಜಾವರುಣೋ ಸಸೃಜ್ಯಾತ್ ವಿದ್ವಾನದಬ್ಧೋ ವಿಮುಮೋಕ್ತು
ಪಾಶಾನ್ ॥ [ಋಗ್ವೇದ ೧–೨೪–೧೩]

"[ಶುನಃ ಶೇಫಃ] ನಾಯಿಯಂತೆ ವಿವೇಚನಾ ಹೀನ ಭೋಗಾಪೇಕ್ಷೆಯಿಂದ ಉಬ್ಬಿಕೊಂಡ ಸುಖಾಪೇಕ್ಷೀ ಜೀವನು, [ತ್ರಿಷು ದ್ರುಪದೇಷು] ಸತ್ತ್ವ, ರಜಸ್ಸು, ತಮಸ್ಸು—ಎಂಬ ಮೂರು ಪ್ರಾಕೃತಿಕ ಬಂಧನಗಳಿಂದ, ಅಥವಾ ಮನಸ್ಸು, ಮಾತು, ಮೈ—ಎಂಬ ಮೂರು ಗೂಟಗಳಿಗೆ, [ಬದ್ಧಃ] ಬದ್ಧನಾಗಿ, [ಗೃಭೀತ] ಹಿಡಿಯಲ್ಪಟ್ಟವನಾಗಿ, [ಹಿ], ನಿಶ್ಚಯವಾಗಿ, [ಆದಿತ್ಯಂ] ಅಖಂಡನಾದ, ಸದಾ, ಸರ್ವಥಾ, ಸರ್ವವ್ಯಕ್ತಾವ್ಯಕ್ತ ಕಾರಣ–ಕಾರ್ಯರೂಪ ವಸ್ತು ಜಾತದಲ್ಲೆಲ್ಲಾ ಏಕರಸನಾಗಿ ವ್ಯಾಪಕನಾದ ಭಗವಂತನನ್ನು, [ಅಹ್ವತ್] ಬಿಡುಗಡೆಗಾಗಿ ಮೊರೆಯಿಟ್ಟು, ಕರೆಯುತ್ತಾನೆ. [ಏನಂ] ಈ ಶರಣಾಗತನಾದ ಬದ್ಧ ಜೀವಾತ್ಮನನ್ನು, [ರಾಜಾ] ನಿರಂತರ ನಿಷ್ಕಲಂಕ ದೇದೀಪ್ಯಮಾನನೂ, ಸರ್ವರಂಜಕನೂ, ವಿಶ್ವಶಾಸಕನೂ, [ವರುಣಃ] ಸರ್ವ ಪಾಪ–ಸಂತಾಪ–ಶಾಪದ ನಿವಾರಕನೂ, ಸರ್ವ ಸದ್ವೃತ್ತಿ–ಸದ್ಭಾವನಾ–ಸಂಯುಕ್ತರಾದ ತತ್ತ್ವದರ್ಶೀ–ತಥ್ಯಾನುವರ್ತೀ ಸಜ್ಜನರಿಗೂ ವರಣೀಯನೂ, ಸ್ವೀಕಾರ ಯೋಗ್ಯನೂ ಆದ ಪರಮಾತ್ಮನು, [ಅವ ವಿಸೃಜ್ಯಾತ್] ಬಂಧಪಾಶಗಳಿಂದಲೂ ಸಡಲಿಸುತ್ತಾನೆ. [ಅದಬ್ಧಃ] ಜೀವನದಲ್ಲಿ ಸಂಭವಿಸುವ ಕ್ಲೇಶಾವೇಶಗಳಿಗೆ ಸೋತು ಮಣಿಯದ ಆತ್ಮವಿಶ್ವಾಸೀ, ಸ್ವಾತ್ಮದಮನ ಸಮರ್ಥನಾದ, [ವಿದ್ವಾನ್] ಜಡ ಚೇತನಗಳ, ವಿಶ್ವಚೇತನ–ಪರಿಚ್ಛಿನ್ನ ಚೇತನರ, ಈಶ್ವರ–ಜೀವರ, ಕಾರಣ–ಕಾರ್ಯರೂಪಗಳ, ಸೂಕ್ಷ್ಮ–ಸ್ಥೂಲ, ಪ್ರಕೃತಿ–ವಿಕೃತಿಗಳ ಯಥಾರ್ಥ ಜ್ಞಾನಸಮಲಂಕೃತನಾದ ಜೀವನು, [ಪಾಶಾನ್] ತನ್ನನ್ನು ಬಿಗಿದಿರುವ ಬಂಧನಗಳೆಲ್ಲವನ್ನೂ, [ವಿಮುಮೋಕ್ತು] ಕತ್ತರಿಸಿ, ಕಡಿದೆಸೆಯಬೇಕು"—ಎಂದಿದೆ.. ಜೀವಾತ್ಮನು ತ್ರಿಗುಣಮಯೀ ಪ್ರಕೃತಿಯ ಬಂಧನವನ್ನು ಕಳಚಿ ಹಾಕಲು ಸಂಕಲ್ಪ ಮಾಡಲೇಬೇಕು. ಸ್ವಪ್ರಯತ್ನಹೀನ ರೋದನಾಸ್ವಾದದಲ್ಲಿಯೇ ತನ್ನ ಪುರುಷಾರ್ಥ ಸಾರ್ಥಕ್ಯಕಾಣುವವನ ಉದ್ಧಾರ ಪರಮಾತ್ಮನೂ ಮಾಡಲಾರನು. "ಮಹಿಮಾ ತೇ ಅನ್ಯೇನ ನ ಸಂನ್ನಶೇ ॥" [ಯಜು:–೨೩–೧೫]—"ಬೇರೊಬ್ಬನಿಂದ ನಿನ್ನ ಉದ್ಧಾರವಾಗದು"–ಎನ್ನುತ್ತಿದೆ ಯಜುರ್ವೇದ. "ಉದ್ಧರೇದಾತ್ಮನಾತ್ಮಾನಂ" [ಗೀತಾ:–೬–೫] "ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕು"; "ಆತ್ಮೈವ ಹ್ಯಾತ್ಮನೋ ಬಂಧುಃ ಆತ್ಮೈವ ರಿಪುರಾತ್ಮನಃ ॥" [ಗೀತಾ:–೬–೫]—"ತಾನೇ ತನ್ನ ಬಂಧು. ತಾನೇ ತನ್ನ ಶತ್ರು"—ಎಂದಿದ್ದಾನೆ ಯೋಗೇಶ್ವರ ಶ್ರೀ ಕೃಷ್ಣ. ಮತ್ತು ಪರಮಾತ್ಮ ನಿರಾಕಾರ. ಆಕಾರವಿಲ್ಲದಿದ್ದರೂ ಭಕ್ತಿಭಾವ ಭರಿತ ಭೋಕ್ತೃ ಜೀವನ ಆತ್ಮನಿವೇದನವನ್ನು ಆಲಿಸಬಲ್ಲ, "ಶೃಣ್ವಂತಂ ಚರಿತುರ್ಹವಂ"–[ಋಕ್:–೭–೯೪–೨]–"ಸ್ತುತಿಕರ್ತನ ನಿವೇದನವನ್ನಾಲಿಸುವ ಪ್ರಭುವನ್ನು"; "ಶ್ರುಧಿ ಶ್ರುತ್ಕರ್ಣ" [ಋಕ್:–೧–೪೪–೧೩]—"ಆಲಿಸುವ ಕಿವಿಯುಳ್ಳ ದೇವ! ಆಲಿಸು"—ಎಂಬ ವೇದೋಕ್ತಿಗಳು ಕೇವಲ ಶಬ್ದಜಾಲವಲ್ಲ. "ತದ್ವಿವಿದ್ಧಿ ಯಸ್ತ ಇಂದ್ರೋ ಜುಜೋಷತ್ ಸ್ತುಹಿ ಸುಷ್ಟುತಿಂ ನಮಸಾ ವಿವಾಸ। ಉಪಭೂಷ ಜರಿತರ್ಮಾ ರುವಣ್ಯಃ ಶ್ರಾವಯಾ ವಾಚ್ಯಂ ಕುವಿ. ದಂಗವೇದತ್" [ಋಕ್:–೮–೯೬–೧೨]. "ಓ ಜೀವ! ನಿನ್ನ ಪ್ರಭುವಿಗೇನುಬೇಕೆಂದರೆ,

ಅತ್ಯಂತೋತ್ತ್ಕಮವಾದ, ಸಜ್ಜನರ ಹೃದಯಾಂತರಾಳದಿಂದ ಹೊರ ಬೀಳುವ ಸ್ತುತಿಗೆ ಪಾತ್ರನಾದ ಭಗವಂತನನ್ನು ಸ್ತುತಿಸು. ವಿನಯಾವನತನಾಗಿ ವಿಶಿಷ್ಟ ವಿಧಿಯಿಂದ ಉಪಾಸಿಸು. ಅದೇ ದೇವದೇವನ ಬಳಿ ವಿರಾಜಿಸು. ರೋದಿಸಬೇಡ. ಅರಿಕೆ ಮಾಡಿಕೊಳ್ಳುವುದು ಏನಿದೆಯೋ, ಹೇಳಿಕೋ. ಭೂಮ್ಯಾದಿ ಅಖಿಲ ಬ್ರಹ್ಮಾಂಡ ಜ್ಞಾತೃವಾ ದೇವ. ಅವನು ನಿನ್ನ ಕಾಮನೆಯನ್ನು ತಿಳಿದೇ ತಿಳಿಯುವನು. ಓ ಪ್ರಿಯ ! ಅಳಬೇಡ".—ಈ ಋಕ್ಕು ಯಾವನಲ್ಲಿ ತಾನೇ ಸ್ಫೂರ್ತಿ ತಾರದು? ರೋದನ ಮೋದನ [ಆನಂದ]ವಲ್ಲ. "ಪ್ರಾಂಚೋ ಅ ಗಾಮ ನೃತಯೇ ಹಸಾಯ" [ಅಥರ್ವ ೧೨-೨-೨೨]—"ಮುಂದು ಮುಂದಕ್ಕೆ, ಸೌಜನ್ಯ ಧನ್ಯತಾಯುತರಾಗಿ, ಭಕ್ತಿಭಾವೋದ್ರೇಕದಿಂದ ಹೋಗೋಣ. ಆನಂದಮಯನ ಮಕ್ಕಳು ಅಳುವುದಾದರೂ ಏಕೆ? ನಗಿರಿ, ಹೌದು, ನಗಿರಿ. ಆದರೆ ಬರಿಯ ಹೊಗಳಿಕೆಯಿಂದ ರೋಮಾಂಚಿತನಾಗಿ, ಅಕ್ಬರನು, ಬೀರ್‌ಬಲನಿಗೆ, ಶ್ರೀಕೃಷ್ಣ ದೇವರಾಯ ತೆನ್ನಾಲೀ ರಾಮಕೃಷ್ಣನಿಗೆ 'ಬಕ್ಷೀಸು ಕೊಟ್ಟಂತೆ ಕೊಡುತ್ತಾ ಹೋಗುವವನಲ್ಲ ಪ್ರಾಪ್ತ ಸರ್ವಜ್ಞ, ಪೂರ್ಣ ತೃಪ್ತ ವಿರಾಡಾತ್ಮ. "If thou thinkst that God is influenced by thy flattery, thou verily art in fools paradise. It is to remember the divine qualities of God that thou praisest Him and not to please Him. "ನೀನು ನುಡಿಸುವುದು ಈಶನನ್ನು ಪ್ರೇರೇಪಿಸುವುದಕ್ಕಲ್ಲ; ಹಾಗೆ ತಿಳಿದಿರುವೆಯಾದಲ್ಲಿ ನೀನು ಮೂರ್ಖರ ನಾಕದಲ್ಲಿದ್ದೀಯೆ. ಈಶ ಸ್ತುತಿ ಟೊಳ್ಳು ಹೊಗಳಿಕೆಯಲ್ಲ. ಅವನ ದಿವ್ಯ ಗುಣಸ್ಮರಣಕ್ಕಾಗಿ ಸ್ತುತಿಸುವುದೇ ಹೊರತು, ಅವನನ್ನು ನಲಿಯಿಸಲಿಕ್ಕಲ್ಲ"—ಎಂದಿದ್ದರು, ಧರ್ಮಾರ್ಥ ಸಮರ್ಪಿತಾತ್ಮಾ ಶ್ರೀ॥ ಸ್ವಾಮೀ ಶ್ರದ್ಧಾನಂದಜೀ ಭಾವನೆ ಅತಿ ಸ್ಪಷ್ಟ. "ಗಿರಾ. ಮುಪಶ್ರುತಿಂಚರ" [ಋಕ್:-೧-೧೦-೩] — "ಭಗವನ್ ! ನನ್ನ ವಾಣಿಯನ್ನು ಅನುಗಾಮಿನಿಯಾಗಿ ಮಾಡು" — ಎಂದಿದೆ ಋಕ್. ತಾತ್ಪರ್ಯ — 'ಕೃತಿ ಮುನ್ನ; ಸ್ತುತಿ ಅನಂತರ ಬರಲಿ'—ಎಂದೇ. ಆದರೆ—ಅಜೀಗರ್ತನೆಂಬ ಋಷಿ, ಶುನಃ ಶೇಫನೆಂಬ ನರನ ಬಲಿ—ಇತ್ಯಾದಿ ವ್ಯಕ್ತಿ ಸಂಬದ್ಧ, ಕಾಲಸಂಮಿತ ಇತಿಹಾಸವನ್ನು ತೋರಿಸುವವರಿಗೆ—ತೋರಿಸಲು ಯತ್ನಿಸುವಂತಹ ಮಂದಿಗಳಿಗೆ ಶಾಸ್ತ್ರದ ಸ್ವರೂಪವೇ ತಿಳಿಯದು. "ಇತ್ಥಮೇವ ಕಾರ್ಯಂ; ತದನ್ಯಥಾ ನ ಕಾರ್ಯಮಿತಿ ವಿಧಿ-ನಿಷೇಧಾತ್ಮಕಂ ಶಾಸ್ತ್ರಂ".—"ಹೀಗೆಯೇ ಮಾಡಬೇಕು; ಇದಕ್ಕೆ ಪ್ರತಿಕೂಲವಾಗಿ ಮಾಡಬಾರದು—ಎಂದು ನಿರ್ದೇಶಿಸುವ ತಥ್ಯಯುಕ್ತ ವಾಕ್ಯಸಂದೋಹವೇ ಶಾಸ್ತ್ರ." ಹೀಗೆಯೇ, ಆಖ್ಯಾನ, ಉಪಾಖ್ಯಾನಾದಿ ಬ್ರಾಹ್ಮಣಾರಣ್ಯಕೋಪನಿಷದಾದಿಗಳಲ್ಲಿ ಕಂಡು ಬರುವ ಆಲಂಕಾರಿಕ ಕಥನಗಳನ್ನೂ ಯಾವುದೋ ಕಾಲದ, ಯಾವ ಯಾವದೋ ವ್ಯಕ್ತಿಗಳ ಐತಿಹಾಸಿಕ ಘಟನೆಗಳೆಂದು ಹೇಳುತ್ತಾ ಆತ್ಮ-ವಂಚನ-ಲೋಕವಂಚನ ಮಾಡಿಕೊಳ್ಳುವುದು ಶೋಚನೀಯ; ಅಷ್ಟೇ ದಯನೀಯರೂ ಅಹುದು.

ಆದರೆ, ವೇದಾಧ್ಯಯನ ಮಾಡಲು ಮಾನವ ಯಾವ ಯಾವ ಯೋಗ್ಯತೆಗಳನ್ನು ಗಳಿಸಿಕೊಳ್ಳಬೇಕು; ಬೆಳೆಯಿಸಿಕೊಳ್ಳಬೇಕು—ಎಂದು ಸ್ವತಃ ನಾವು ಮೇಲೆ ಉದ್ಧರಿಸಿರುವ ಮಂತ್ರವೇ ಹೇಳುತ್ತಿದೆ. ತತ್ತ್ವ ದರ್ಶನ ಸಾಮರ್ಥ್ಯ, ಮನಸ್ಸನ್ನು ಸತ್ಸಂಕಲ್ಪದಿಂದ ಸ್ಫೂರ್ತಿಯುಕ್ತವಾಗಿ ಮಾಡುವುದು, ಹತಾಶರಲ್ಲಿ ನವ್ಯ ಪ್ರೇರಣೆ ತುಂಬುವುದು, ಯಾರಿಗೂ ಯಾವುದೇ ರೀತಿಯಲ್ಲಿಯೂ ದ್ರೋಹ ಮಾಡದೇ ಇರುವುದು, ಸೂಕ್ಷ್ಮ

ದರ್ಶಿತ್ವ, ಸ್ವತಃ ಸದಾಚಾರಿತ್ವ, ಎಲ್ಲಕ್ಕೂ ಕಲಶೋಪಮವಾದ ಮಾನವೀಯ ದೃಷ್ಟಿಕೋನ—ಇವೆಲ್ಲವೂ ಬೇಕು. ನಾಲಗೆಯಿಂದ ಹೊರಡುವ ಒಂದೊಂದು ಮಾತೂ ಈ ವಿಧದ ವ್ಯಕ್ತಿತ್ವವನ್ನು ಅರಳಿಸಿಕೊಂಡಾಗ ಪರಮ ಪಾವನವಾದೀತು. ವೇದಗಳು ದನ ಕಾಯುತ್ತಾ ಯಾವುದೋ ಹುಲ್ಲುಗಾವಲಿನ ಮರದಡಿ ಕುಳಿತ ಬೇರೆ ಬೇರೆ ಗುರುಗಳ ಶಿಷ್ಯರುಗಳು ಕಾಲ ತಳ್ಳಲು ಒದರಿಕೊಂಡ ಹಾಡುಗಳಲ್ಲ; ಸಮಸ್ತ ಸತ್ಯವಿದ್ಯಾ ಬೋಧಕವಾದ, ಸಹಸ್ರ–ಸಹಸ್ರ ವೈಜ್ಞಾನಿಕ ಕಲಾಧಾರೆಗಳನ್ನು ಹರಿಯಿಸುವ, ಸರ್ವರನ್ನೂ ಪಾವನಗೊಳಿಸುತ್ತಾ ವಿರಾಜಿಸುವ ವಿಜ್ಞಾನದ ಬುಗ್ಗೆ. ಅನಾದಿ ನಿಧನಾ ನಿತ್ಯಾ ಆದಿ ಭಗವದ್ವಾಣಿ. "ಋತಸ್ಯ ಸದಸೋ ಜ್ಯೋತಿರಜಸ್ರ್ಯಾತ್" [ಋಗ್ವೇದ:–೧೦–೧೧೧–೨]—"ವೇದದಲ್ಲಿ ಸುಸ್ಥಿತನಾದವನ ವರ್ಚಸ್ಸು, ಆತ್ಮಿಕ ತೇಜಸ್ಸು ದೇದೀಪ್ಯಮಾನವಾಗಿರುವುದು": "ಋತಸ್ಯ ಜಿಹ್ವಾ ಪವತೇ ಮಧುಪ್ರಿಯಂ ವಕ್ತಾ ಪತಿರ್ಧಿಯೋ ಅಸ್ಯಾ ಅದಾಭ್ಯಃ।" [ಋಕ್:–೯–೭೩–೫]—"[ಋತಸ್ಯ ಜಿಹ್ವಾ] ವೇದಕ್ಕಾಗಿ ಮೀಸಲಿಟ್ಟ ನಾಲಿಗೆ, [ಪ್ರಿಯಂ ಮಧು] ಪ್ರಿಯವಾದ ಪರಿಶುದ್ಧ ಜ್ಞಾನವನ್ನು, [ಪವತೇ] ಸ್ರವಿಸುತ್ತಾ ಹೋಗುತ್ತದೆ. ಅಥವಾ, ಪ್ರಿಯನಾದ ಆತ್ಮನನ್ನು ಪಾವನಗೊಳಿಸುತ್ತದೆ. [ವಕ್ತಾ] ಈ ವೇದೋಪದೇಶಕನು, [ಅಸ್ಯಾಃ ಧಿಯಃ] ಈ ಬುದ್ಧಿಯ, [ಪತಿಃ] ಪಾಲಕನೂ, [ಅದಾಭ್ಯಃ] ಯಾರಿಂದಲೂ ಒತ್ತಾಯದಿಂದ ಬಾಗಿಸಲಾಗದವನೂ ಆಗುತ್ತಾನೆ": "ಋತಸ್ಯ ತಂತುರ್ವಿತತಃ ಪವಿತ್ರ ಆ ಜಿಹ್ವಾಯಾ ಅಗ್ರೇ ವರುಣಸ್ಯ ಮಾಯಯಾ"* [ಋಕ್:–೯–೭೩–೯]. "[ವರುಣಸ್ಯ] ದುಃಖ ನಿವಾರಕ, ವರಣೀಯ ಪರಮಾತ್ಮನ ನಿರ್ಭ್ರಾಂತ ಜ್ಞಾನದಿಂದ, [ಋತಸ್ಯ] ವೇದದ, [ಪವಿತ್ರಃ] ಪವಿತ್ರವಾದ, [ತಂತುಃ] ವಿಸ್ತಾರವು, [ಜಿಹ್ವಾಯಾಃ ಅಗ್ರೇ] ವೇದಜ್ಞನ ನಾಲಗೆಯ ಅಗ್ರದಲ್ಲಿ, [ವಿತತಃ] ಹರಡಿಕೊಂಡಿರುತ್ತದೆ." ಆದರೆ, ಅದೇ ಮಂತ್ರ ಮೊಳಗುತ್ತಲಿದೆ — "ಧೀರಾಶ್ಚಿತ್ತತ್ ಸಮಿನಕ್ಷಂತ ಆಶತಾತ್ರಾ ಕರ್ತಮವ ಪದಾತ್ಯ ಪ್ರಭುಃ।"–"[ಧೀರಾಃ ಚಿತ್] ಧೀರರಾದವರು ಮಾತ್ರ, ಮೇಧಾ ಪ್ರೇರಕರು ಮಾತ್ರ, [ತತ್] ಆ ವೇದವನ್ನು, [ಸಂ] ಸಮುಚಿತ ರೀತಿಯಲ್ಲಿ, ಒಗ್ಗೂಡಿದವರಾಗಿ, [ಇನಕ್ಷಂತಃ] ಹೃದ್ಗತವಾಗಿ ಮಾಡಿಕೊಂಡು, [ಆಶತ] ಅನುಷ್ಠಾನಕ್ಕೆ ತರುತ್ತಾರೆ. [ಅಪ್ರಭುಃ] ಅಶಕ್ತನು, ಇಂದ್ರಿಯಾರಾಮ ಭೋಗವಿಲಾಸಿಯು, ಅದನ್ನು ತಿಳಿಯಲಾರದವನು, [ಅತ್ರ] ಇಲ್ಲಿಯೇ, [ಕರ್ತಂ ಅವಪದಾತಿ] ಪತನದ ಕೂಪದಲ್ಲಿ, ಆಡಿಯಲ್ಲಿ, ಬಿದ್ದಿರುತ್ತಾನೆ". ಧೀರನೇ ವೇದಾಭಿಜ್ಞನಾದಾನು. ಇಂದ್ರಿಯಗಳನ್ನು ಗೆಲ್ಲಲಾರದ, ಬುದ್ಧಿಗೆ ಬೀಗ ಬಡಿದ ಮೂಢನಿಗೆ ಹಳ್ಳದಲ್ಲಿಯೇ ಬಿದ್ದಿರುವ ಭಾಗ್ಯವೇ ಲಭ್ಯ. ಹೆಚ್ಚೇಕೆ? "ವಕ್ತಾ ಅಸ್ಯಾಃ ಧಿಯಃ ಅದಾಭ್ಯಃ ಪತಿಃ"—"ವೇದೋಪದೇಶಕನು ಈ ಬುದ್ಧಿಯ ಸ್ವಾಮಿಯಾಗಿರುತ್ತಾನೆ; ಅದಮ್ಯನಾಗಿರುತ್ತಾನೆ. —ಎಂಬುದಿಷ್ಟೇ ಸಾಲದೇ, ವೇದಗಳ ಔನ್ನತ್ಯವನ್ನು ಘೋಷಿಸಲು? ವೇದಜ್ಞಾನ ಸಾಧಕನಿಗೆ ಇರಲೇಬೇಕಾದ ಅರ್ಹತಾ ವರ್ಣನೆಯನ್ನೂ ಹೇಳಿದ್ದೇವಲ್ಲವೇ? "ಸ ಮೇ ಶ್ರದ್ಧಾಂಚ ಮೇಧಾಂಚ ಜಾತವೇದಾಃ ಪ್ರಯಚ್ಛತುಃ" [ಅಥರ್ವ:–೧೯–೬೪–೧].—"ಆ ಸರ್ವವ್ಯಾಪಕ–ಸರ್ವಜ್ಞ

* "ಮೀಯತೇsನಯೇತಿ ಮಾಯಾ" —"ಯಾವುದರಿಂದ ಪ್ರತಿಯೊಂದು ವಸ್ತುವಿನ ಸತ್ಯಸ್ವರೂಪವನ್ನೂ ತಿಳಿಯಲಾಗುವುದೋ ಅದೇ ಮಾಯಾ."

ಪ್ರಭುವು ನನಗೆ ಶ್ರದ್ಧೆಯನ್ನೂ ಕರುಣಿಸಲಿ; ಬುದ್ಧಿಬಲವನ್ನೂ ಕರುಣಿಸಲಿ"—ಎಂಬ ವಿಧಾನವನ್ನು ಸೂಚಿಸುವ ವೇದಗಳ ಬಗೆಗೆ ಅಪಚಾರಭಾವ ತೋರುವ, ತಿರಸ್ಕಾರ ಭಾವನೆಯನ್ನು ವ್ಯಕ್ತಪಡಿಸುವ ಅವಿದ್ಯಾಪ್ರವೀಣ ವಿದ್ವಾನ್ ಪುರೋಗಾಮಿಗಳ ಮೇಲೆ ಅನುಕಂಪಾಭಾವ ತಾಳಬೇಕಷ್ಟೇ. ಶ್ರದ್ಧೆ—ಎಂದರೆ ಕುರುಡು ನಂಬಿಕೆಯಲ್ಲ: "ಶ್ರದಿತಿ ಸತ್ಯಂ ತದ್ಯೇನ ವಿಶ್ವಾಸೇನ ಧಾರ್ಯತೇ ಸಾ ಶ್ರದ್ಧಾ."—"ಶ್ರತ್ ಎಂದರೆ ಸತ್ಯ. ಆ ಸತ್ಯದಲ್ಲಿಡುವ ನಂಬಿಕೆಯೇ ಶ್ರದ್ಧೆ"—ಎಂಬಿಷ್ಟನ್ನು ಮರೆಯದಿದ್ದರೆ ಸಾಕು. ಅಂಧವಿಶ್ವಾಸ [Superstition] ಈ ಹಠವಾದಿಗಳಿಗೆಯೇ ಮೀಸಲಷ್ಟೇ; ವೇದಜ್ಞರ ಬಳಿ ಅದು ಸುಳಿಯುವಂತಿಲ್ಲ. ಈ ವೇದಜ್ಞಾನ ಪ್ರಕಾಶದ ಕಡೆ ತಿರುಗೋಣ. "ಶ್ಲೋಕಂ ದೇವಃ ಕೃಣುತೇ ಸ್ವಾಯ ಧರ್ಮಣೇ"—[ಋಕ್: ೪-೫೩-೩]—"ಜಗತ್ಪತಿಯು ತನ್ನ ಧರ್ಮ ಪ್ರಚಾಲನಕ್ಕಾಗಿ ಸೃಷ್ಟಿಯ ಆದಿಯಲ್ಲಿಯೇ ವೇದ ಪ್ರಕಾಶನ ಮಾಡುತ್ತಾನೆ"—ಎಂಬ ಶ್ರುತಿಯಿದೆ. ಸೃಷ್ಟಿಯಲ್ಲಿ ಅನೇಕ ಮಂದಿ ಸ್ತ್ರೀ ಪುರುಷರು ಹುಟ್ಟುತ್ತಾರೆ. ಇವರಲ್ಲಿಯೇ ಅಗ್ನಿ, ವಾಯು, ರವಿ, ಅಂಗಿರಾ—ಪದಸ್ಥಿತ ವೇದಜ್ಞಾನ ಗ್ರಾಹೀ ಋಷಿಗಳೂ, ಬ್ರಹ್ಮ ಮೊದಲಾದ ಋಷಿಗಳೂ ಇರುತ್ತಾರೆ. ದೈವೀ ಸೃಷ್ಟಿಯ ಕಾರಣದಿಂದಲೂ, ಪವಿತ್ರಾತ್ಮರು ಮತ್ತು ಜ್ಞಾನಿಗಳಾಗಿದ್ದುದರಿಂದಲೂ ಇವರನ್ನು ದೇವತೆಗಳೆಂದೂ ಕರೆದಿದ್ದಾರೆ.

ಮಾನವ ಯೋನಿಯು ಕರ್ಮಯೋನಿ—ಭೋಗಯೋನಿ—ಎರಡೂ ಅಹುದು. ಮಾನವೇತರವಾದ ಯೋನಿಗಳು ಜಾತಿ, ಆಯುಷ್ಯ ಮತ್ತು ಭೋಗಗಳು ನಿಶ್ಚಿತವಾದ ಯೋನಿಗಳಾಗಿವೆ. ತಮ್ಮ ತಮ್ಮ ಜಾತಿಯ ಸಹಜ ಪ್ರವೃತ್ತಿಗಳಿಗನುಸಾರವಾಗಿ ಇವುಗಳು ಆಹಾರ, ನಿದ್ರಾ, ಭಯ, ಮೈಥುನಾದಿ ಚಟುವಟಿಕೆಗಳನ್ನು ನಡೆಸುತ್ತವೆ. ಆದರೆ ಮನುಷ್ಯರು ತಮ್ಮ ತಮ್ಮ ಪೂರ್ವಕರ್ಮಗಳ ಫಲವನ್ನು ಅನುಭವಿಸುತ್ತಿದ್ದಂತೆ ಸತ್ಕರ್ಮ ಅಥವಾ ದುಷ್ಕರ್ಮಗಳನ್ನು ಮಾಡಿ ತಮ್ಮ ಮುಂದಿನ ಜೀವನದ ಭಾಗ್ಯವನ್ನು ನಿರ್ಮಿಸಬಲ್ಲರು. ಏಕೆಂದರೆ ಮನುಷ್ಯರಲ್ಲಿ ಬುದ್ಧಿಶಕ್ತಿಯಿದೆ. ಇದರಲ್ಲಿ ವಿಕಾಸ ಹೊಂದುವ ಗುಣವಿದೆ. ಜ್ಞಾನಸಂಗ್ರಹ ಮಾಡುವ ಯೋಗ್ಯತೆಯಿದೆ. ಆದರೆ ಜ್ಞಾನವು ಉಪಲಬ್ಧವಾದರೆ ಮಾತ್ರ ಬುದ್ಧಿಯು ವಿಕಾಸವನ್ನು ಹೊಂದುತ್ತದೆ. ಒಂದು ವೇಳೆ ಜ್ಞಾನವು ಇಲ್ಲದೆ ಹೋಗಿದ್ದರೆ, ಬುದ್ಧಿಯು ವ್ಯರ್ಥವಾಗುತ್ತಿತ್ತು. ಮನುಷ್ಯರ ಅವಸ್ಥೆಯು ಪಶುಗಳಿಗಿಂತಲೂ ಹೀನತರವಾಗುತ್ತಿತ್ತು.

ಸೃಷ್ಟಿಯ ನಿಯಮವನ್ನು ನೋಡಿರಿ. ಸೃಷ್ಟಿಕರ್ತನು ದೃಷ್ಟಿಗಿಂತ ಪೂರ್ವ ಪ್ರಕಾಶವನ್ನು ಕೊಟ್ಟಿದ್ದಾನೆ. ಪ್ರಕಾಶವಿಲ್ಲದ ಪಕ್ಷದಲ್ಲಿ ದೃಷ್ಟಿಯು ವ್ಯರ್ಥವಾಗುತ್ತಿತ್ತು. ಇದೇ ರೀತಿ, ಕಿವಿಗಳಿಗಿಂತ ಮೊದಲು ಶಬ್ದಗುಣಯುಕ್ತ ಆಕಾಶವನ್ನು, ಹಸಿವೆಯಾಗುವ ಮೊದಲು ಅನ್ನ, ಬಾಯಾರಿಕೆಯಾಗುವ ಮೊದಲು ನೀರು ಇತ್ಯಾದಿಗಳನ್ನು ಆತನು ಉತ್ಪನ್ನ ಮಾಡಿದ್ದಾನೆ. ಹೀಗಿರುವಾಗ, ಪರಮಾತ್ಮನು ಮನುಷ್ಯರಿಗೆ ಬುದ್ಧಿಯನ್ನು ಕೊಟ್ಟು ಒಂದು ವೇಳೆ ಜ್ಞಾನವನ್ನು ಕೊಡದಿದ್ದರೆ, ಅವರ ಬುದ್ಧಿಯು ಯಾವ ಉಪಯೋಗಕ್ಕೆ ಬರುತ್ತಿತ್ತು? ಆದುದರಿಂದ ಪರಮ ಕಾರುಣಿಕನಾದ ಭಗವಂತನು ಮಾನವ ಸೃಷ್ಟಿಯ ಆರಂಭದಲ್ಲಿಯೇ ಜ್ಞಾನವನ್ನೂ ಕರುಣಿಸಿದನು. ಇದು ಪಶುಪಕ್ಷಿಗಳಲ್ಲಿ ಕಂಡುಬರುವ ಸಹಜ ಪ್ರವೃತ್ತಿಯಲ್ಲ. ಯಾವ ರೀತಿಯಲ್ಲಿ ಪ್ರಕಾಶದಲ್ಲಿ ವಸ್ತುಗಳು ಗೋಚರವಾಗುತ್ತವೆಯೋ, ಅದೇ ರೀತಿಯಲ್ಲಿ ಈ ಜ್ಞಾನದಿಂದ ಸೃಷ್ಟಿಯ ಸಮಸ್ತ

ಪದಾರ್ಥಗಳ ಗುಣಧರ್ಮ ಮತ್ತು ಅವುಗಳ ಉಪಯೋಗ, ಅವುಗಳನ್ನು ರಚನೆ ಮಾಡಿದವನ ಪರಿಚಯ, ಸೃಷ್ಟಿಯ ಉದ್ದೇಶ್ಯ, ತಮ್ಮನ್ನು ತಾವೇ ತಿಳಿದುಕೊಳ್ಳುವ ಶಕ್ತಿ, ಉಚಿತ-ಅನುಚಿತದ ವಿವೇಕ, ಜೀವನದ ಲಕ್ಷ್ಯ, ಸೃಷ್ಟಿಕರ್ತನಿಗೂ, ಸೃಷ್ಟಿಗೂ, ಮತ್ತು ತಮಗೂ ಇರುವ ಸಂಬಂಧ, ಅರ್ಥಸಾಧನೆ ಮತ್ತು ಅನರ್ಥ ನಿವಾರಣೆಯ ಉಪಾಯ, ಅಭ್ಯುದಯ ನಿಃಶ್ರೇಯಸ್ಸಾದಿಗಳ ಸಿದ್ಧಿ, ಇತ್ಯಾದಿಗಳ ಅರಿವಾಗುತ್ತದೆ. ಸಹಜ ಪ್ರವೃತ್ತಿಯಿಂದ ಇದೆಲ್ಲಾ ಸಾಧ್ಯವಿಲ್ಲ. ಆದುದರಿಂದ ಜ್ಞಾನವು ಸಹಜಪ್ರವೃತ್ತಿ ಹಾಗೂ ಇಂದ್ರಿಯಗಳ ಸ್ವಾಭಾವಿಕ ಗುಣಗಳಿಂದ ಭಿನ್ನವಾಗಿದೆ. ಜ್ಞಾನವು ಪರಮಾತ್ಮನ ಸ್ವಾಭಾವಿಕ ಗುಣ. ಯಾವ ರೀತಿಯಲ್ಲಿ ಶ್ವಾಸೋಚ್ಛ್ವಾಸಗಳು ಪ್ರಾಣಿಗಳಿಗೆ ಸ್ವಾಭಾವಿಕವೋ ಅದೇ ರೀತಿಯಲ್ಲಿ ಸೃಷ್ಟಿಕಾಲದ ಜ್ಞಾನವನ್ನು ಹೊರಗೆ ಪ್ರಕಟಿಸುವುದು, ಪ್ರಳಯಕಾಲದಲ್ಲಿ ಆ ಜ್ಞಾನವನ್ನು ತನ್ನೊಳಗೇ ಧರಿಸಿಕೊಳ್ಳುವುದು ಪರಮಾತ್ಮನಿಗೆ ಸ್ವಾಭಾವಿಕವಾಗಿದೆ. ಈ ಜ್ಞಾನವು ನಾಶವಾಗುವುದಿಲ್ಲ. ಪರಮಾತ್ಮನಂತೆ ಅವನ ಜ್ಞಾನವೂ ನಿತ್ಯ. ಅದನ್ನೇ ವೇದವೆಂದು, ಈಶ್ವರೀಯ ಜ್ಞಾನವೆಂದು ಕರೆಯುತ್ತಾರೆ. ಪರಮಾತ್ಮನ ಸರ್ವಜ್ಞತ್ವದಿಂದ ಅದರಲ್ಲಿ ಪರಿವರ್ತನ, ಪರಿವರ್ಧನ, ರೂಪಾಂತರಾದಿಗಳ ಸಂಭವವೇ ಇಲ್ಲ.

ಸೃಷ್ಟಿಯ ಪ್ರಾರಂಭದಲ್ಲಿ ಸೃಷ್ಟಿಯಲ್ಲಿರುವ ಎಲ್ಲಾ ವಸ್ತುಗಳ ನಾಮರೂಪಗಳ ವರ್ಣನೆ, ಗುಣಧರ್ಮಗಳ ಜ್ಞಾನ, ವೈಜ್ಞಾನಿಕ ಲಕ್ಷಣಗಳಿಂದ ಕೂಡಿದ ಯಾವ ದೋಷವೂ ಇಲ್ಲದ ಬುದ್ಧಿಗಮ್ಯ ಮತ್ತು ಬುದ್ಧಿಯನ್ನು ಬೆಳಗಿಸುವ ವಾಣಿಯನ್ನು ಪರಮಾತ್ಮನು ಪ್ರಕಟಿಸುತ್ತಾನೆಂದು ವೇದವೇ ಹೇಳುತ್ತದೆ[೧]. ಆದುದರಿಂದಲೇ ಅವನನ್ನು "**ಪೂರ್ವೇಷಾಮಪಿ ಗುರುಃ**"—ಎಂದು ಹೇಳುತ್ತಾರೆ.[೨]

ವೇದವಾಣಿಯು ಪರಮಾತ್ಮನ ಅಮರ ಕಾವ್ಯವಾಗಿದೆ.[೩] ಇದು ನಾಶರಹಿತವಾದ ಪರಮ ವ್ಯೋಮದಲ್ಲಿ ಕಾರಣರೂಪ ಶಬ್ದವಾಗಿರುತ್ತದೆ. ಪೃಥ್ವಿಯಿಂದ ಹಿಡಿದು ಪರಮಾತ್ಮನ ವರೆಗೆ ಎಲ್ಲಾ ವಿಷಯಗಳ ಜ್ಞಾನವನ್ನೂ ಅದು ಅಳವಡಿಸಿಕೊಂಡಿದೆ.[೪] ಇದು ಎಲ್ಲಾ ಸತ್ಯವಿದ್ಯೆಗಳ ಭಂಡಾರ. ಇದರ ಲಾಭವನ್ನು ಪಡೆದು ಮನುಷ್ಯರು ಮೃತ್ಯುವನ್ನು ಗೆಲ್ಲಬಲ್ಲರು,[೫] ಎಂದರೆ, ಮುಕ್ತರಾಗಿ ಪರಾಂತಕಾಲ ತೀರುವವರೆಗೆ

[೧] ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ ನಾಮಧೇಯಂ ದಧಾನಾಃ । ಯದೇಷಾಂ ಶ್ರೇಷ್ಠಂ ಯದರಿಪ್ರಮಾಸೀತ್ಪ್ರೇಣಾ ತದೇಷಾಂ ನಿಹಿತಂ ಗುಹಾವಿಃ ॥ ಋಗ್ವೇದ ೧೦-೭೧-೧ ॥

[೨] ಸಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇದಾತ್ ॥ ಯೋಗದರ್ಶನ ೧-೨೬ ॥
ಋಚಃ ಸಾಮಾನಿ ಛಂದಾಂಸಿ ಪುರಾಣಂ ಯಜುಷಾ ಸಹ । ಉಚ್ಛಿಷ್ಟಾಜ್ಜಜ್ಞಿರೇ ಸರ್ವೇ ದಿವಿ ದೇವಾ ದಿವಿಶ್ರಿತಃ ॥ ಅಥರ್ವವೇದ ೧೧-೭-೨೪. ಮತ್ತು ಋಗ್ವೇದ ೧೦-೯೦-೯, ಯಜು ೩೧-೭, ಹಾಗೂ ಅಥರ್ವವೇದ ೧೦-೭-೨೦ನ್ನೂ ನೋಡಿರಿ.

[೩] ಅಂತಿಸಂತಂ ನ ಜಹಾತ್ಯಂತಿ ಸಂತಂ ನ ಪಶ್ಯತಿ । ದೇವಸ್ಯ ಪಶ್ಯ ಕಾವ್ಯಂ ನ ಮಮಾರ ನ ಜೀರ್ಯತಿ ॥ [ಅಥರ್ವ:-೧೦-೮-೩೨]

[೪] ಋಚೋ ಅಕ್ಷರೇ ಪರಮೇ ವ್ಯೋಮನ್ಯಸ್ಮಿಂದೇವಾ ಅಧಿ ವಿಶ್ವೇ ನಿಷೇದುಃ ॥
[ಋಗ್ವೇದ ೧-೧೬೪-೩೯ ॥]

[೫] ಯಸ್ಮಾತ್ಪಕ್ವಾದಮೃತಂ ಸಂಬಭೂವ ಯೋ ಗಾಯತ್ರ್ಯಾ ಅಧಿಪತಿರ್ಬಭೂವ । ಯಸ್ಮಿನ್ ವೇದಾ ನಿಹಿತಾ ವಿಶ್ವರೂಪಾಸ್ತೇನೌದನೇನಾತಿತರಾಣಿ ಮೃತ್ಯುಂ ॥ ಅಥರ್ವವೇದ ೪-೩೫-೬ ॥

ಜನನ-ಮರಣಗಳ ಚಕ್ರಕ್ಕೆ ಸಿಕ್ಕುವುದಿಲ್ಲ. ಅಜ್ಞಾನದ ಮೂಲಕ ಬರುವ ಅಸ್ವಾಭಾವಿಕ ವಾದ ಸಾವಿಗೆ ಸಿಕ್ಕರು. ಮೂರನೆಯದಾಗಿ, ಸತ್ಯಜ್ಞಾನದ ಸ್ವತ್ವ ಸಿದ್ಧಿಸಿ ಮೃತ್ಯುವಿನ ಬಂಧನದಿಂದ ಎಂದರೆ ಭಯದೀವ ಬಿಡುಗಡೆ ಹೊಂದುವರು.

ವೇದವಾಣಿಯನ್ನು ದೈವೀ ವಾಕ್ ಎಂದೂ ಹೇಳುತ್ತಾರೆ. ಏಕೆಂದರೆ ಇದು ದೇವತೆಗಳ ಅರ್ಥಾತ್ ಸೂರ್ಯ, ಚಂದ್ರಮಾ, ಅಗ್ನಿ, ವಾಯು--ಇತ್ಯಾದಿ ಶಕ್ತಿಗಳ ಮೂಕವಾಣಿಯಾಗಿದೆ. ಹೇಗೆಂದರೆ, ಈ ಎಲ್ಲಾ ವಸ್ತುಗಳು ತಮ್ಮತಮ್ಮ ಘಟಕದ್ರವ್ಯ ಗಳ ಸ್ವಭಾವಕ್ಕನುಸಾರವಾಗಿ ಅನವರತವೂ ವಿದ್ಯುತ್ತಿನ ತರಂಗಗಳನ್ನು ಬಿಡುಗಡೆ ಮಾಡುತ್ತಿರುತ್ತವೆ. ಈ ಅಲೆಗಳನ್ನು ಛಂದಸ್ಸೆಂದೂ ಹೇಳುತ್ತಾರೆ. ಈಗ ವಿಜ್ಞಾನಿಗಳು ಪ್ರಕಾಶದ ಅಲೆಗಳನ್ನು ಅಧ್ಯಯನ ಮಾಡಿ ಆ ಪ್ರಕಾಶದ ಯೋನಿಯ ಗುಣಧರ್ಮ ಗಳನ್ನು ಕಂಡುಹಿಡಿಯುತ್ತಾರೆ. ಆದಕಾರಣ ಈಗ ವಿಜ್ಞಾನಿಗಳು ಈ ತರಂಗಗಳ ಭಾಷೆ ಯನ್ನು ತಿಳಿದಿದ್ದಾರೆ. "ದೈವೀಂ ವಾಚಮಜನಯಂತ ದೇವಾಃ" [ಋ:-೮-೧೦೦-೧೧] ಅಂದರೆ ಮೇಲೆ ಹೇಳಿದ ದೇವತೆಗಳು ಉಕ್ತ ರೀತಿಯ ಛಂದೋಮಯ ಭಾಷೆ ಯನ್ನು ಉತ್ಪನ್ನ ಮಾಡುತ್ತಾರೆ ಎಂದು ವೇದವೇ ಹೇಳುತ್ತಿದೆ.[೬] ಸೂರ್ಯಾದಿ ಜಡ ದೇವತಾಧಾರದ ಅರ್ಥದಲ್ಲಿ ಮಾತ್ರವಲ್ಲ, ಸ್ವತಃ ಪರಮಾತ್ಮನ 'ದೇವ'ನಾಗಿರುವುದ ರಿಂದಲೂ ದೈವೀ ವಾಕ್ ಎನ್ನಿಸಲರ್ಹವೇ ಆಗಿವೆ, ವೇದಗಳು. ಈ ರೀತಿ ಪರಮ ವ್ಯೋಮದಲ್ಲಿ ವಿದ್ಯಮಾನವಾಗಿರುವ ವಿಜ್ಞಾನಮಯೀ ದೈವೀ ವಾಕ್ ಸೃಷ್ಟಿಯ ಆದಿಯಲ್ಲಿ ಸಮಾಧಿಸ್ಥರಾದ ಪರಮ ಪುನೀತರಾದ ಮೇಲೆ ಹೇಳಿದ ಪದಸ್ಥರಾದ ಶ್ರೇಷ್ಠ ಯೋಗಿಗಳಿಗೆ ಕೇಳಿಸುತ್ತದೆ. ಆ ದೈವೀವಾಣಿಯನ್ನು ಕೇಳಿ ಅವರ ಹೃದಯವು ಬೆಳಗುತ್ತದೆ. ಆ ವಾಣಿಯ ಮೂಲಕ ಪೂರ್ಣ ಜ್ಞಾನವನ್ನು ಪಡೆದು ಮಹದಾನಂದ ವನ್ನು ಅನುಭವಿಸುತ್ತಾರೆ. ಆ ದಿವ್ಯ ಜ್ಞಾನವನ್ನು, ಉಕ್ತ ದಿವ್ಯವಾಣಿಯ ಮೂಲರೂಪ ದಲ್ಲಿ ಆ ಋಷಿಗಳು ಇತರರಿಗೆ ಉಪದೇಶ ಮಾಡುತ್ತಾರೆ. ಅಗ್ನಿಪದಸ್ಥ-ವಾಯು ಪದಸ್ಥ-ಆದಿತ್ಯಪದಸ್ಥ ಹಾಗೂ ಅಂಗಿರಾಪದಸ್ಥ ಸಂಹಿತಾ ಜ್ಞಾನೋಪಾಸನಾ ಪ್ರಾಪ್ತ ನಾಲ್ವರನ್ನು "ದ್ರಷ್ಟೃ ಋಷಿ"ಗಳೆಂದೂ, ಮಂಡಲ, ಸೂಕ್ತ, ಅಧ್ಯಾಯ, ಕಾಂಡ, ಮಂತ್ರ ಮೊದಲಾದವುಗಳ ಆದ್ಯೋಪದೇಶಕರನ್ನು 'ಶ್ರುತ ಋಷಿ'ಗಳೆಂದೂ ಹೇಳುವು ದುಂಟು.

ಆಧುನಿಕ ವಿಜ್ಞಾನಿಗಳು ಮಾನವರ ಮಸ್ತಿಷ್ಕವನ್ನು ಒಂದು ಸ್ವಾಭಾವಿಕವಾದ ಟ್ರಾನ್ಸ್‌ಫಾರ್ಮರ್ ಎಂದು ಹೇಳುತ್ತಾರೆ. ಟ್ರಾನ್ಸ್‌ಫಾರ್ಮರ್ ಯಂತ್ರವು ವಿದ್ಯುತ್ತನ್ನು

---

[೬] [ದೈವೀಂ ವಾಚಮಜನಯಂತ ದೇವಾಃ] ತಾಂ ಮಾ ದೇವಾ ವ್ಯದಧುಃ ಪುರುತ್ರಾ ಭೂರಿ ಸ್ಥಾತ್ರಾಂ ಭೂರ್ಯಾವೇಶಯಂತೀಂ ॥ ಋಗ್ವೇದ ೧೦-೧೨೫-೩ ॥
ಬ್ರಹ್ಮಕೃತಾ ಮಾರುತೇನ ಗಣೇನ ॥ ಋಗ್ವೇದ ೩-೩೨-೨ ॥
ಸುಪರ್ಣಾ ವಾಚಮಕ್ರತೋಪ ದ್ಯವ್ಯಾಖರೇ ಕೃಷ್ಣಾ ಇಷಿರಾ ಅನರ್ತಿಷುಃ ॥ ಅಥರ್ವವೇದ [೬-೪೯-೩.]
ಇದನ್ನೇ ಅಂತರಿಕ್ಷ ದುಂದುಭಿಯೆಂದೂ ವರ್ಣಿಸಿದ್ದಾರೆ—
ಅಂತರಿಕ್ಷೇ ದುಂದುಭಯೋ ವಿತತಾ ವದಂತಿ ॥ ಜೈಮಿನೀಯ ಬ್ರಾಹ್ಮಣ ೨-೪೦೪ ॥
ಆಧುನಿಕ ವೈಜ್ಞಾನಿಕರು ಇದನ್ನು Music of the sphores ಅಥವಾ galactic noice ಎಂದು ಕರೆಯುತ್ತಾರೆ.

ಪ್ರಧಾನ ಕೇಂದ್ರದಿಂದ ಆಕರ್ಷಿಸಿ, ಅದನ್ನು ಊರ್ಜೆ, ಪ್ರಕಾಶ, ಉಷ್ಣತೆ ಮತ್ತು ಶಬ್ದಗಳನ್ನಾಗಿ ಪರಿವರ್ತಿಸುತ್ತದೆ. ಮನುಷ್ಯರ ಮಸ್ತಿಷ್ಕವು, ವಿಶೇಷವಾಗಿ ಯೋಗಿಗಳ ಮಸ್ತಿಷ್ಕವು ಈ ರೀತಿ ದಿವ್ಯವಾಣಿ ಹಾಗೂ ದಿವ್ಯ ಜ್ಞಾನದ ಕೇಂದ್ರವಾದ ಪರಮ ವ್ಯೋಮದಿಂದ ಇವೆರಡನ್ನೂ ಗ್ರಹಣ ಮಾಡಿಕೊಳ್ಳಬಲ್ಲುದು.

ಆಕಾಶವಾಣೀ ಪರಿವರ್ತನಕಾರೀ ಯಂತ್ರವನ್ನು ನೋಡಿರಿ. ಅದನ್ನು ವಿಭಿನ್ನ ಆಕಾಶವಾಣೀ ನಿಲ್ದಾಣಕ್ಕೆ ತಿರುಪಿ ಧ್ವನಿಗೊಳಿಸಿದಂತೆ, ಅಲ್ಲಿಯ ಧ್ವನಿಯ ಅಲೆಗಳನ್ನು, ನಮ್ಮ ಸ್ವೀಕರಣ ಯಂತ್ರವು ಗ್ರಹಣ ಮಾಡಿ ನಮಗೆ ಕೇಳಿಸುತ್ತದೆ. ಇದೇ ರೀತಿ ಯೋಗಿಗಳು ಕೂಡ ತಮ್ಮ ಮನಸ್ಸನ್ನು ಬಾಹ್ಯ ವಿಷಯಗಳಿಗೆ ಓಡದಂತೆ ಮಾಡಿ, ಅಂತರಾತ್ಮದಲ್ಲಿಯೇ ಜೀವಾತ್ಮನ ಸಂಬಂಧವನ್ನು ಪರಮಾತ್ಮನೊಂದಿಗೆ ಸ್ಥಾಪಿಸಿದಾಗ ಪರಮಾತ್ಮನ ಭಾಷೆ ಹಾಗೂ ಜ್ಞಾನವು ಅವರಿಗೆ ಭಾಸವಾಗುತ್ತದೆ. ಆದರೀ ಅಭ್ಯಂತರೀ ಜ್ಞಾನಸ್ಫೂರ್ತಿ ಯಾವುದೇ ಕಾಲದಲ್ಲಿಯೂ ಆಗಬಹುದು. ಆದರೆ—ವೇದಗಳ ಜ್ಞಾನೋದ್ಭಾಸನ ಸೃಷ್ಟಿಯ ಆದಿಯಲ್ಲಿ ಮಾತ್ರ ಸಂಭವ.

ಪ್ರಪಂಚದಲ್ಲಿ ತುಂಬಾ ಮಂದಿ ಸಾಧುಸಂತರಾಗಿ ಹೋದರು. ಅವರಲ್ಲಿ ಅನೇಕ ಮಂದಿ ಅವಿದ್ವಾಂಸರಾಗಿದ್ದರು. ಆದರೂ ಅವರು ಜ್ಞಾನಿಗಳಾಗಿದ್ದರು. ಏಕೆಂದರೆ, ವಿಶುದ್ಧ ಜ್ಞಾನವೂ ಇಂದ್ರಿಯಾತೀತವಾದುದು. ಅಂತರಾತ್ಮದಲ್ಲಿಯೇ ಅದು ಉದಯವಾಗುತ್ತದೆ. ವೈಜ್ಞಾನಿಕ ಜಗತ್ತಿನಲ್ಲಿ ಎಷ್ಟೆಲ್ಲಾ ಆವಿಷ್ಕಾರಗಳಾದುವೋ ಅವುಗಳ ಮೂಲವು ಅಂತರ್ಬೋಧೆಯೇ [Intuition] ಎಂದು ವಿಜ್ಞಾನಿಗಳು ಸ್ವೀಕರಿಸುತ್ತಾರೆ. ಅಂದರೆ ಸಾಮಾನ್ಯ ಮನುಷ್ಯರೂ ಕೂಡ ಜ್ಞಾನಸಿಂಧುವಿನಿಂದ ಬಿಂದುಗಳನ್ನು ಇಂದೂ ಸಂಗ್ರಹಿಸಬಲ್ಲರು. ಆದರೆ ಪೂರ್ಣಜ್ಞಾನ ಸಿಂಧುವಾದ ವೇದವನ್ನು ಪಡೆಯಲಿಕ್ಕೆ ವಿಶೇಷ ಯೋಗ್ಯತೆ, ತಪಸ್ಸು ಮತ್ತು ಪರಮಾತ್ಮನ ಕೃಪೆ ಬೇಕು.[೭] ಯಾವ ಯಾವ ಕಾಲದಲ್ಲಿಯೋ ಹೀಗೆ ಈಶ್ವರೀಯ ಜ್ಞಾನ ಆಗುತ್ತಾ ಹೋಗುವುದೆಂಬ ಪಕ್ಷದಲ್ಲಿ, ಆ ಪರಿಯ ಜ್ಞಾನ ಮೂಡುವ ಮುನ್ನ ಇದ್ದವರಿಗೆ ಅದನ್ನು ಕೊಡದ ದೋಷದ ಅಪರಾಧ ಪ್ರಭುವಿಗೂ ಸಂದೀತು. ಪ್ರಜಾಪತಿ ಪರಮಾ

[೭] ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ ಕೃಪಯನ್ನದೀಧೇತ್ ।
ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿರ್ವಾಚಮಸ್ಮಾ ಅಯಚ್ಛತ್ ॥
ಋಗ್ವೇದ ೧೦-೯೮-೭ ॥

ಅಂದರೆ, ಸಂಸಾರದ ಕಲ್ಯಾಣದ ಕಾಮನೆಯಿಂದ ಕೃಪಾಳು ಬೃಹಸ್ಪತಿ ಅಂದರೆ ಪರಮಾತ್ಮನು ಯೋಗವ್ರತದಲ್ಲಿ ಮುಗ್ನರಾದ ಋಷಿಗಳ ಹೃದಯದಲ್ಲಿ ಸರ್ವಕಾಮನೆಗಳನ್ನು ಪೂರ್ಣ ಮಾಡುವ ದೇವವಾಣಿಯನ್ನು ಪ್ರಕಾಶಿಸಿದನು.

"The plunge into the depths of consciousness -a subjective action which is the essence of absorption (dhyana) and marks a step further than thinking—with mind completely stilled, and in a poised receptive state of awareness, results in revelations. Such revelation or inner seeing may take the form of vision, of sudden realizations of great truths otherwise left unconcieved"—The Vadas, by Jeanine Miller, page 48. Rider & company, London. 1974.

ತ್ಮನ ಕರುಣೆ ಬೇಕೆಂಬುದೇನೋ ಸತ್ಯ. ಆದರೆ ಆ ಕರುಣೆಗೆ ಪಾತ್ರರಾದ ಸಾಧಕರು ಮಾತ್ರ ಅದನ್ನು ಪಡೆದು ವೇದಜ್ಞಾನ ಪ್ರಾಪ್ತಿಗೆ ಯೋಗ್ಯರಾದರು. ಎಂದರೆ ಸತತ ಸಾಧನಾ ನಿರತ ಋಷಿಗಳ ಹೃದಯಗಳಲ್ಲಿ ವೇದವಾಣಿಯು ಪ್ರವೇಶ ಮಾಡುತ್ತದೆ.[೮] ಋಷಿಗಳು ಕಾರಣರೂಪವಾದ ಆ ಪರಾವಾಕ್ಕನ್ನು ತಮ್ಮ ವಿಚಕ್ಷಣ ಬುದ್ಧಿಯಿಂದ, ಶಬ್ದ ಮತ್ತು ಅರ್ಥಗಳ ನಿತ್ಯ ಸಂಬಂಧದಿಂದ ಕೂಡಿದ ಭಾಷಾರೂಪದಲ್ಲಿ ಪ್ರಕಟ ಗೊಳಿಸುತ್ತಾರೆ. ಹೀಗೆ ಪ್ರಕಟಗೊಳಿಸಲೂ ಕೂಡ ಅವರಿಗೆ ಭಾಷಾಜ್ಞಾನವೂ ಮೊದಲೇ ಇರಬೇಕು. ಅಂತಃಸ್ಫೂರ್ತಿ—ಎನ್ನಿ; ವಿಚಾರಧಾರೆ—ಎನ್ನಿ; ಭಾವನಾಲಹರಿ—ಎನ್ನಿ. ಸಾರ್ಥಕ ಶಬ್ದವಾಣಿಯೇ ಇಲ್ಲದೆ, ಅದು ಮೂಡುವುದೂ ಇಲ್ಲ; ಪ್ರಕಟಿಸಲು ಸಾಧ್ಯವೂ ಇಲ್ಲ. ಆದ ಕಾರಣ ಭಗವಂತನು ವೇದಜ್ಞಾನ ಪ್ರದಾನ ಮಾಡುವಾಗಲೇ ಭಾಷಾಸಂಪತ್ತನ್ನೂ ಆ ಋಷಿಗಳಿಗೆ ಕೊಟ್ಟಿರುತ್ತಾನೆ. ಈ ಕ್ರಮದಿಂದಲೇ ಮಾನವರ ಸರ್ವತೋಮುಖೀ ಉನ್ನತಿಯು ಸಿದ್ಧಿಸಲು ಶಕ್ಯ.

ಈ ರೀತಿ ಪರಮ ಕಾರುಣಿಕನಾದ ಪರಮಾತ್ಮನ ಪರಮ ಕೃಪೆಗೆ ಪಾತ್ರರಾದ ಆ ಋಷಿಗಳು ಯಾರು? ಯಾವ ಕಾಲದಲ್ಲಿ ಅವರು ವೇದವಾಣಿಯನ್ನು ಪ್ರಥಮಬಾರಿ ಕೇಳಿದರು? ಈ ಇತಿಹಾಸವು ಬ್ರಾಹ್ಮಣ ಗ್ರಂಥಗಳಲ್ಲಿ ಸುರಕ್ಷಿತವಾಗಿದೆ. ಮಹಾ ತಪಸ್ವಿಗಳಾದ ನಾಲ್ಕು ಮಂದಿ ಋಷಿಗಳಿಗೆ ವೇದವಾಣಿಯು ನಾಲ್ಕು ರೂಪದಲ್ಲಿ ಪ್ರಕಟವಾಯಿತು. ಆ ಋಷಿಗಳೇ ಅಗ್ನಿ, ವಾಯು, ಆದಿತ್ಯ ಅಥವಾ ಸೂರ್ಯ ಮತ್ತು ಅಂಗಿರಾ—ಎಂಬ ಪದಸ್ಥರಾಗಿ ಪ್ರಸಿದ್ಧರಾಗಿದ್ದಾರೆ. ಅಗ್ನಿಗೆ* ಋಗ್ವೇದವೂ, ವಾಯು ವಿಗೆ ಯಜುರ್ವೇದವೂ, ಸೂರ್ಯನಿಗೆ ಸಾಮವೇದವೂ ಮತ್ತು—ಅಂಗಿರಾ ಋಷಿಗೆ ಅಥರ್ವವೇದವೂ, ಅಂತರಂಗದಲ್ಲಿ ಸ್ಫೂರ್ತಿಯ ರೂಪದಲ್ಲಿ ಲಭಿಸಿದವು.

ಋಗ್ವೇದ ಜ್ಞಾನಸ್ವರೂಪವಾದ ಪ್ರಕಾಶಕ್ಕೆ ನೆಲೆ; ಆದಕಾರಣ ಅದನ್ನು ಅಂತರ್ಗತವಾಗಿಸಿಕೊಂಡ ಋಷಿ 'ಅಗ್ನಿ' ಎಂಬ ಹೆಸರಿನ ಪದದಲ್ಲಿ ಸ್ಥಾಪಿತನಾದನು. ಯಜುರ್ವೇದ ಕರ್ಮಕ್ಕೆ ನೆಲೆ; ಆದ ಕಾರಣ, 'ವಾತಿ, ಚಲತಿ, ಕರೋತಿ' ಆದಿ ಕ್ರಿಯಾ ಸೂಚಕ ಧಾತುವಿನಿಂದ ಹೊರಟ 'ವಾಯು' ಎಂಬ ಪದ ಯಜುರ್ವೇದವನ್ನು ಪಡೆದ ಋಷಿಗೆ ಅರ್ಪಿತವಾಯಿತು. ಸಾಮವೇದ ಉಪಾಸನಾವಿಭಾಗದ ಆಶ್ರಯ. ಆದ ಕಾರಣ, 'ಆದತ್ತೇರಸಾನ್, ಆದತ್ತೇ ಭಾಸಂ, ಆದೀಪ್ತೋ ಭಾಸಾಭವತಿ'— 'ಆನಂದ ರಸವನ್ನು ಗ್ರಹಿಸು, ಪ್ರಕಾಶವನ್ನು ಪಡೆ, ಪ್ರಕಾಶಮಯನಾಗು' ಎಂಬರ್ಥ ಗಳನ್ನು ಸೂಚಿಸುವ 'ಆದಿತ್ಯ' ಎಂಬ ಪದ ಸಾಮವೇದವನ್ನು ಬೆಳಗಿಸಿಕೊಳ್ಳುವ ಋಷಿಗೆ ಸಂದಿತು. ಅಥರ್ವವೇದದ ಪ್ರಧಾನ ವಿಷಯ ವಿಜ್ಞಾನ: ತನುಮನಗಳ

---

[೮] ಯಜ್ಞೇನ ವಾಚಃ ಪದವೀಯಮಾಯನ್ತಾಮನ್ವವಿಂದನ್ನೃಷಿಷು ಪ್ರವಿಷ್ಟಾಂ ॥
[ಋಗ್ವೇದ ೧೦-೭೧-೩]
ಗುಹಾ ಸತೀರುಪತ್ಮನಾ ಪ್ರ ಯಚ್ಛೋಚಂತ ಧೀತಯಃ । ಕಣ್ವಾ ಋತಸ್ಯ ಧಾರಯಾ ॥
[ಋಗ್ವೇದ ೮-೬-೮]

* 'ರಾಷ್ಟ್ರಪತಿ ಪದಸ್ಥ'—ಎಂದು ಹೇಳುವ ಬದಲಿಗೆ, ಆ ಪದಸ್ಥನು ಸಾಕಷ್ಟು ಪ್ರಸಿದ್ಧನಾದ ಮೇಲೆ, 'ರಾಷ್ಟ್ರಪತಿ' ಎಂದೇ ನಿರ್ದಿಷ್ಟನಾಗುವಂತೆ 'ಅಗ್ನಿ'—ಇತ್ಯಾದಿ ಋಷಿಗಳ ಬಗ್ಗೂ ತಿಳಿಯಬೇಕು.

ಆರೋಗ್ಯದಿಂದ ಸಮಸ್ತ ವಿಧ ಉತ್ಕರ್ಷ ಹೊಂದುವಿಕೆ. ಅದೇ ಕಾರಣದಿಂದ, 'ತನ್ನಂತೆಯೇ ಎಲ್ಲ ದೇಹಧಾರಿಗಳನ್ನೂ ಭಾವಿಸಿ, ಮನಃಸ್ಥೈರ್ಯದಿಂದ ಐಹಿಕೋತ್ಕರ್ಷ ಸಾಧಿಸುವವನು, ಪ್ರಾಣದಂತೆ ಪ್ರಿಯನು—ಎಂಬರ್ಥ ಸೂಚಿಸುವ ಅಂಗಿರಾ ಎಂಬ ಪದದಿಂದ ಅಥರ್ವ ಜ್ಞಾನವನ್ನು ಪ್ರಭುವಿನಿಂದ ಕಂಡುಕೊಂಡ ಋಷಿ ಅಲಂಕರಿಸಲ್ಪಟ್ಟನು.

ಮಾನವೋತ್ಪತ್ತಿಯಾದ ಕಾಲದಲ್ಲಿಯೇ, ಮಾನವ ಸಮಾಜದ ಆದಾನ–ಪ್ರದಾನನಾದಿ ವ್ಯವಹಾರಗಳಲ್ಲಿ ಯಾವುದು ವಿಹಿತ, ಯಾವುದು ನಿಷಿದ್ಧ—ಎಂಬ ನಿಯಮ ನಿರೂಪಣೆಗಾಗಿಯೇ ವಿಧಿ–ನಿಷೇಧಾತ್ಮಕ ಮೂಲಶಾಸ್ತ್ರಗಳಾಗಿ, ವಿಶ್ವ ಮಾನವಜನಾಂಗದ ಜಗದ್ರಾಷ್ಟ್ರದ ಸಂವಿಧಾನದ ರೂಪದಲ್ಲಿ ವೇದಚತುಷ್ಟಯದ ಉದ್ಭಾಸನವಾಯಿತು. ಈಗ ನಾವು ಏಳನೆಯ ಮನ್ವಂತರವಾದ ವೈವಸ್ವತದಲ್ಲಿದ್ದೇವೆ. ಈ ಮುನ್ನ ಸ್ವಾಯಂಭುವ, ಸ್ವಾರೋಚಿಷ, ಔತ್ತಮೀ, ತಾಮಸ, ರೈವತ ಮತ್ತು ಚಾಕ್ಷುಷ—ಎಂಬ ಆರು ಮನ್ವಂತರಗಳು ತೀರಿವೆ. ಇದೀಗ ಏಳನೆಯ ವೈವಸ್ವತ ಮನ್ವಂತರ ನಡೆಯುತ್ತಿದೆ. ೭೧ ಚತುರ್ಯುಗಗಳಿಗೆ ಒಂದು ಮನ್ವಂತರ. ೪,೩೨,೦೦೦ ವರ್ಷಗಳಿಗೆ ಒಂದು ಕಲಿಯುಗ, ೮,೬೪,೦೦೦ ವರ್ಷಗಳಿಗೆ ಒಂದು ದ್ವಾಪರ. ೧೨,೯೬,೦೦೦ ವರ್ಷಗಳಿಗೊಂದು ತ್ರೇತಾಯುಗ. ಮತ್ತು ೧೭,೨೮,೦೦೦ ವರ್ಷಗಳಿಗೆ ಒಂದು ಸತ್ಯ ಅಥವಾ ಕೃತಯುಗ. ಈ ನಾಲ್ಕು ಯುಗಗಳ ಸಂಕಲದಿಂದ ೪೩,೨೦,೦೦೦ ವರ್ಷಗಳಿಗೆ ಒಂದು ಚತುರ್ಯುಗದ ಕಾಲವಾಗುತ್ತದೆ.

ಹೀಗೆ ಎಪ್ಪತ್ತೊಂದು ಚತುರ್ಯುಗ ಎಂದರೆ, ೩೦,೬೭,೨೦,೦೦೦ ವರ್ಷಗಳ ಒಂದು ಮನ್ವಂತರವಾಗುತ್ತದೆ. ಹೀಗೆ ಆರು ಮನ್ವಂತರಗಳಿಗೆ ೧,೮೪,೦೩,೨೦,೦೦೦ ವರ್ಷಗಳಾಗುತ್ತವೆ. ಈಗ ನಡೆಯುತ್ತಿರುವ ಏಳನೆಯ ಮನ್ವಂತರದಲ್ಲಿಯೂ ಇಪ್ಪತ್ತೇಳು ಚತುರ್ಯುಗಗಳು ಕಳೆದು ಹೋಗಿವೆ. ಇಪ್ಪತ್ತೆಂಟನೆಯ ಚತುರ್ಯುಗದಲ್ಲಿ ಪ್ರಾರಂಭದ ಕಲಿಯುಗದ ೫೦೮೦ ವರ್ಷಗಳೂ ಕಳೆದುಹೋಗಿವೆ. ಹೀಗೆ ವೇದೋತ್ಪತ್ತಿಯಾಗಿ, ಸಂಧಿಕಾಲಗಳೂ ಸೇರಿ ೧,೯೬,೦೮,೫೨೦೮೦ [ಒಂದು ವೃಂದ, ತೊಂಭತ್ತಾರು ಕೋಟಿ, ಎಂಟು ಲಕ್ಷ, ಐವತ್ತೆರಡು ಸಾವಿರದ ಎಂಭತ್ತು] ವರ್ಷಗಳಾದವು—ಎಂದು ಭಾರತೀಯ ಇತಿಹಾಸವು ಹೇಳುತ್ತದೆ.

ಪರಮಾತ್ಮನು ಹೀಗೆ ಅಭಿವ್ಯಕ್ತವಾದ ನಾಲ್ಕು ವೇದಗಳನ್ನೂ ಉಪರಿವರ್ಣಿತ ಋಷಿಗಳು ಮಹಾನ್ ಪ್ರಾಜ್ಞನಾದ ಮತ್ತೊಬ್ಬ ಋಷಿಗೆ ಬೋಧಿಸುವಂತೆ ವ್ಯವಸ್ಥೆ ಮಾಡಿರುತ್ತಾನೆ. ಹೀಗೆ ಚತುರ್ವೇದವೇತ್ತಾ ಋಷಿಯಾದವನು 'ಬ್ರಹ್ಮಾ' ಎನಿಸುತ್ತಾನೆ.[೯] ಬ್ರಹ್ಮನಿಂದ ವೇದವಿದ್ಯೆಯು ಪರಂಪರಾಗತವಾಗಿ ಉಪದೇಶಿಸಲ್ಪಡುತ್ತದೆ. ಈ ವಿದ್ಯೆಯೇ ಎಲ್ಲಾ ವೇದಗಳಿಗೂ ಆಧಾರ. ವೇದದ ದೈವೀಭಾಷೆಯೇ ಪ್ರಪಂಚದ ಎಲ್ಲಾ ಭಾಷೆಗಳಿಗೂ ಮೂಲ.

---

[೯] ಅಗ್ನಿ ವಾಯು ರವಿಭ್ಯಸ್ತು ತ್ರಯಂ ಬ್ರಹ್ಮ ಸನಾತನಂ । ದುದೋಹ ಯಜ್ಞಸಿದ್ಧ್ಯರ್ಥ ಮೃಗ್ಯಜುಃ ಸಾಮಲಕ್ಷಣಂ ॥ ಮನುಸ್ಮೃತಿ ೧–೨೩ ॥
ಚತ್ವಾರೋ ವೇದಾಃ ಮುಖೇ ಯಸ್ಯ ಇತಿ ಚತುರ್ಮುಖಃ ॥ ಅಂದರೆ ಯಾರಿಗೆ ನಾಲ್ಕೂ ವೇದಗಳು ಅರ್ಥ ಸಹಿತ ಕಂಠಸ್ಥವಾಗಿಯೋ ಅವನನ್ನು ಚತುರ್ಮುಖ ಎಂದೂ ಹೇಳುತ್ತಾರೆ

ಪ್ರಪಂಚದ ಅತಿ ಪ್ರಾಚೀನ ದೇಶಗಳ ಜನರೂ, ಮೂಲದಲ್ಲಿ ಭಾರತೀಯರೇ ಆಗಿದ್ದುದರಿಂದ ಇಲ್ಲಿಯ ಮಾತುಗಳನ್ನು ತಾವು ಬೇರೆ ಕಡೆಗೆ ಹೋಗಿ ನೆಲೆಸಿದ ಮೇಲೆಯೂ ಮರೆತಿಲ್ಲ. ಭಾಷೆಯ ಇತಿಹಾಸದ ಬಗ್ಗೆಯೂ ಹೀಗೆಯೇ ಹೇಳಬಹುದು. ಈಜಿಪ್ಟಿನ ವಿದ್ವಾಂಸರು, ತಮ್ಮ ಪವಿತ್ರ ಲೇಖನವನ್ನು 'ನ್ದ್ವಂತ್ರ' ಎಂದು ಕರೆಯುತ್ತಾರೆ. ನ್ದ್ವಂತ್ರವೆಂದರೆ, ಅವರ ಭಾಷೆಯಲ್ಲಿ ದೇವತೆಗಳ ಭಾಷೆಯೆಂದರ್ಥವಾಗುತ್ತದೆ.[10] ಆದುದರಿಂದ ಈ ಶಬ್ದವು 'ವೇದಮಂತ್ರ' ಶಬ್ದದ ಅಪಭ್ರಂಶವಾಗಿರಬೇಕೆಂದು ತೋರುತ್ತದೆ. ಗ್ರೀಕಿನ ಹೋಮರ್ ಕೂಡ ದೇವತೆಗಳ ಭಾಷೆ ಮತ್ತು ಮನುಷ್ಯರ ಭಾಷೆಯ ಉಲ್ಲೇಖ ಮಾಡಿದ್ದಾನೆ. ಗ್ರೀಕಿನ ಹೆರಾಕ್ಲಿಟಸ್, ಶಬ್ದಗಳು ಸ್ವಾಭಾವಿಕವಾಗಿಯೇ ಅಸ್ತಿತ್ವದಲ್ಲಿವೆಯೆಂದು ಹೇಳಿದ್ದಾನೆ. ಪ್ಲೇಟೋ ಮತ್ತು ಅವನಿಗಿಂತ ಪೂರ್ವ ಪೈಥಾಗೋರಸ್, ಇವರು ಬ್ರಹ್ಮಾಂಡವು ಸಂಗೀತ ಅಥವಾ ಛಂದಸ್ಸಿನ ಪರಿಣಾಮವೆಂದು ನಂಬಿದ್ದರು. ಈ ಛಂದಸ್ಸನ್ನು ರಚಿಸಿದವರು ದೇವತೆಗಳೆಂದು ಅವರು ಹೇಳುತ್ತಿದ್ದಾರೆ. ಅರಿಸ್ಟಾಟಲ್ ಎಪಿಕಾರ್ಮಸ್ ಮತ್ತು ಎಂಪೆಡೋಕ್ಲೀಸ್ ವಿಶ್ವ ರಚನೆಯ ಸಾಮಗ್ರಿಯು ದೇವತೆಗಳೇ ಎಂದು, ಹಿಂದಿನವರ ಮಾತುಗಳನ್ನು ಸ್ವೀಕರಿಸಿದ್ದರು. ಅವರ ದೇವತೆಗಳ ಕಲ್ಪನೆಯು ವೈದಿಕ ದೇವತೆಗಳ ಪ್ರತಿಬಿಂಬದಂತಿದೆ. ವೈದಿಕ ವಾಙ್ಮಯದಲ್ಲಿ, ಆಕಾಶಸ್ಥ ಪದಾರ್ಥಗಳನ್ನೂ, ಪ್ರಕಾಶವನ್ನು ನೀಡುವ ವಸ್ತುಗಳನ್ನೂ ದೇವತೆಗಳೆಂದು ಹೇಳಿದ್ದಾರೆ. ಯಾಕೆಂದರೆ ದೇವತಾ ಶಬ್ದದ ಅರ್ಥವೇ ದಾನ, ದೀಪನ, ದ್ಯೋತನ ಅಥವಾ ದ್ಯುಸ್ಥಾನವೆಂದಾಗುತ್ತದೆ. ಆದುದರಿಂದಲೇ ವಾಯು, ಅಗ್ನಿ, ಸೂರ್ಯ, ಚಂದ್ರಮಾ, ವಿದ್ಯುತ್ ಮೊದಲಾದುವುಗಳನ್ನು ದೇವತೆಗಳೆಂದು ಕರೆಯುತ್ತಾರೆ.

ವೇದ ಅಥವಾ ದೈವೀ ಭಾಷೆಯಿಂದಲೇ ಮಾನುಷೀ ಭಾಷೆಯ ಉತ್ಪತ್ತಿಯಾಯಿತು. ಮಾನುಷೀ ಭಾಷೆಯು ಬರಬರುತ್ತಾ ಅನೇಕ ರೂಪಗಳನ್ನು ತಾಳಿತು. ಬ್ರಾಹ್ಮಣ ಗ್ರಂಥಗಳಲ್ಲಿ ವೇದಭಾಷೆ ಹಾಗೂ ಮಾನುಷೀ ಭಾಷೆಯ ಮಿಶ್ರಣವಿದೆ. ಮುಂದೆ, ಮಾನುಷೀ ಭಾಷೆಯು ವೇದಭಾಷೆಯಿಂದ ಪೂರ್ಣ ಬೇರೆಯೇ ಆದಂತೆ ಕಾಣುತ್ತದೆ.

**ವೇದಭಾಷೆಯ ಕೆಲವು ಮುಖ್ಯ ವಿಶೇಷತೆಗಳು:**—ವೇದಭಾಷೆಯು ಲೌಕಿಕೀ ಭಾಷೆಯಿಂದ ಭಿನ್ನವಾಗಿದೆ. ಇದರ ಕೆಲವು ಮುಖ್ಯ ಲಕ್ಷಣಗಳು ಲೌಕಿಕ ಭಾಷೆಯಲ್ಲಿ ಕಂಡುಬರುವುದಿಲ್ಲ. ವೇದ ಮಂತ್ರಗಳ ಆನುಪೂರ್ವೀ ನಿತ್ಯವಾಗಿದೆ. ಇಲ್ಲಿ ಶಬ್ದಗಳನ್ನು

---

(10) Egyptians had their sacred writing...... "Writings of the words of the gods," often kept in a house of sacred writings. (The Religion of Ancient Egypt by Mercer. S. A. B. 1949, page 12)
"The language of gods and of men" Homer. (Asianic Elements in Greek civilization by Ramsay. page 299-303) The ancient people all ascribed their speech to the gods—Taraporewalla (Elements of the science of Language 1951. page 10.)

ಹಿಂದೆ ಮುಂದೆ ಮಾಡುವ ಅಧಿಕಾರವು ಯಾರಿಗೂ ಇಲ್ಲ. ಆದರೆ ವೇದದ ಶಾಖೆಗಳ ವರ್ಣಾನುಪೂರ್ವೀ ಅನಿತ್ಯವಾಗಿದೆ. ಯಾಕೆಂದರೆ, ಶಾಖೆಗಳು ಮನುಷ್ಯಕೃತವಾಗಿವೆ.

ವೇದಭಾಷೆಯ ಇನ್ನೊಂದು ವಿಶೇಷತೆ ಅದರ ನಿಯತ ವಾಚೋಯುಕ್ತಿಯಾಗಿದೆ. ಇಲ್ಲಿ ಅಗ್ನಿಮೀಳೇಯ ಬದಲಿಗೆ ವಹ್ನಿಮೀಳೇ ಎಂದು ಹೇಳಲಿಕ್ಕೆ ಸಾಧ್ಯವಿಲ್ಲ. ಆದರೆ ಲೌಕಿಕ ಭಾಷೆಯಲ್ಲಿ ಅಗ್ನಿವೇಶದ ಬದಲಿಗೆ ವಹ್ನಿವೇಶವೆಂದೂ ಹೇಳಬಹುದು.

ವೇದಭಾಷೆಯ ಮೂರನೆಯ ವಿಶೇಷತೆ ಅದರ ಛಾಂದಸೀ ಮುದ್ರೆ. ವೇದ ಭಾಷೆಯ ಅನುಕರಣೆ ಮಾಡಿ ಕೆಲವರು ಸಾಹಿತ್ಯ ರಚನೆಗಳನ್ನು ಮಾಡಿದ್ದಾರೆ. ಆದರೆ, ಅದರಲ್ಲಿ ಛಾಂದಸೀ ಮುದ್ರೆಯ ಅಭಾವವು ವೇದಭಾಷೆಯ ಸೂಕ್ಷ್ಮತೆಯನ್ನು ಬಲ್ಲವರಿಗೆ ಕೂಡಲೇ ಗೊತ್ತಾಗುತ್ತದೆ.

ನಾಲ್ಕನೆಯದಾಗಿ, ವೇದಭಾಷೆಯ ಶಬ್ದಗಳು ಸರ್ವತೋಮುಖವಾಗಿವೆ. ಅಧಿದೈವತ, ಅಧ್ಯಾತ್ಮ ಮತ್ತು ಅಧಿಯಜ್ಞ ಪ್ರಕರಣಗಳಿಗನುಸಾರವಾಗಿ ಒಂದೇ ಮಂತ್ರದ ಶಬ್ದಗಳು ಅನೇಕ ಅರ್ಥಗಳನ್ನು ಕೊಡಲು ಸಮರ್ಥವಾಗಿದೆ. ಉದಾಹರಣೆಗಾಗಿ ಇಂದ್ರ ಶಬ್ದಕ್ಕೆ ಪರಮಾತ್ಮ, ಜೀವಾತ್ಮ, ಮನಸ್ಸು, ಯಜ್ಞ, ವಿದ್ಯುತ್, ಸೂರ್ಯ ರಾಜಾ ಇತ್ಯಾದಿ ಅರ್ಥಗಳಿವೆ.

ಐದನೆಯದಾಗಿ ವೈದಿಕ ಭಾಷೆಯಲ್ಲಿ ಶಬ್ದಾರ್ಥ ಸಂಬಂಧವು ನಿತ್ಯವಾಗಿದೆ. ಲೌಕಿಕ ಭಾಷೆಯಂತೆ ರೂಢಾರ್ಥಗಳು ಇಲ್ಲಿಲ್ಲ.

ಆರನೆಯದಾಗಿ ವೇದದಲ್ಲಿ ಆಜ್ಞೆಯು ತ್ರಿಕಾಲಾಬಾಧಿತವೂ ನಿತ್ಯನೂತನವೂ ಆಗಿದೆ. ವೇದದಲ್ಲಿ ಕಂಡುಬರುವ ಬಭೂವ, ಅಭವತ್, ಅಭೂತ್ ಮೊದಲಾದ ಭೂತಕಾಲಿಕ ಕ್ರಿಯೆಗಳನ್ನು ನೋಡಿ, ವೇದದಲ್ಲಿ ಇತಿಹಾಸದ ಕಲ್ಪನೆಯನ್ನು ಮಾಡುತ್ತಾರೆ. ಇದಕ್ಕೆ ವೈದಿಕ ವ್ಯಾಕರಣದ ಅನಭಿಜ್ಞತೆಯೇ ಕಾರಣವಾಗಿದೆ. ಪಾಣಿನೀಯ ಅಷ್ಟಾಧ್ಯಾಯಿಯಲ್ಲಿ **"ಛಂಧಸಿ ಲುಂಗ್, ಲಂಗ್, ಲಿಟಃ"** ಎಂಬ ಸೂತ್ರ ಇದೆ. ಇದರ ತಾತ್ಪರ್ಯ ವಿಷ್ಟೇ. ವೇದದಲ್ಲಿ ಕಂಡುಬರುವ ಲುಂಗ್ ಲಕಾರದ ಅಭೂತ್. ಲಂಗ್ ಲಕಾರದ ಅಭವತ್ ಮತ್ತು ಲಿಟ್ ಲಕಾರದ ಬಭೂವ ಈ ಮೂರು ಭೂತಕಾಲಿಕ ಕ್ರಿಯೆಗಳೂ ವರ್ತಮಾನ ಕಾಲದಲ್ಲಿಯೇ ವ್ಯವಹರಿಸುತ್ತವೆ. ವೇದಮಂತ್ರಗಳ ಅರ್ಥ ಮಾಡುವಾಗ ಉಪರ್ಯುಕ್ತ ಮೂರು ಕ್ರಿಯೆಗಳ ಅರ್ಥ ಭವತಿ ಎಂದೇ ಮಾಡತಕ್ಕದ್ದು. ಉದಾಹರಣೆಗೆ **"ಯಃ ಪ್ರಾಣತೋ ನಿಮಿಷತೋ ಮಹಿತ್ವೈಕ ಇದ್ರಾಜಾ ಜಗತೋ ಬಭೂವ"** ಈ ಮಂತ್ರದ ಅರ್ಥ ಮಾಡುವಾಗ 'ಬಭೂವ' ಈ ಪರೋಕ್ಷ ಭೂತಕಾಲದ ಕ್ರಿಯೆಯ ಅರ್ಥ ವರ್ತಮಾನಕಾಲದ 'ಭವತಿ' ಎಂದೇ ಮಾಡಬೇಕು. ಸೃಷ್ಟಿಯ ಆದಿಯಲ್ಲಿಯೇ ಪರಮಾತ್ಮನಿಂದ ಬೋಧಿಸಲ್ಪಟ್ಟ ವೇದಗಳಲ್ಲಿ ಇತಿಹಾಸದ ಕಲ್ಪನೆ ಸರ್ವಥಾ ಸಲ್ಲದು.

ಇದನ್ನೇ ಇನ್ನೊಂದು ರೀತಿಯಲ್ಲಿ ವೇದ ಭಾಷೆಯು ಯೌಗಿಕ ಅರ್ಥಯುಕ್ತವಾದುದೆಂದು [Etymological sense] ಹೇಳುತ್ತಾರೆ. ಯೌಗಿಕ ಅರ್ಥಕ್ಕೆ ಆಧಾರವೇ ನಿತ್ಯವಾದ ಶಬ್ದಾರ್ಥ ಸಂಬಂಧವಾಗಿದೆ. ಆದುದರಿಂದಲೇ ವೈದಿಕ ಶಬ್ದಗಳ ಅರ್ಥವು ಲೋಕರೂಢಿಯನ್ನು ಹೊಂದಿಕೊಂಡಿಲ್ಲದೆ, ಸ್ವಯಂ ಉದ್ಭಾಸಿತವಾಗಬಲ್ಲದು.

ವೇದಭಾಷೆಯ ಇನ್ನೊಂದು ವಿಶೇಷತೆಯೇನೆಂದರೆ, ಲೌಕಿಕ ವ್ಯಾಕರಣಶಾಸ್ತ್ರವು ಪೂರ್ಣರೂಪದಲ್ಲಿ ಇದಕ್ಕೆ ಅನ್ವಯಿಸುವುದಿಲ್ಲ. ಆದುದರಿಂದಲೇ ಮಹರ್ಷಿ ಪಾಣಿನಿಯು ಅನೇಕ ಸ್ಥಾನಗಳಲ್ಲಿ 'ಬಹುಲಂ ಛಂದಸಿ' ಎಂದು ಹೇಳಿದ್ದಾನೆ. ಸಂಧಿ, ವಿಭಕ್ತಿ, ವಚನ, ಲಿಂಗ ಇತ್ಯಾದಿಗಳ ನಿಯಮವು ವೈದಿಕ ಭಾಷೆಯಲ್ಲಿ, ಲೌಕಿಕ ಭಾಷೆಗಿಂತ ಭಿನ್ನವಾಗಿದೆ. ವೇದದಲ್ಲಿ ಬರುವ ಲೇಟ್ ಲಕಾರವು [Vedic Subjunctive], ಲೌಕಿಕ ಭಾಷೆಯಲ್ಲಿ ಇಲ್ಲ. ಕ್ರಿಯಾಪದಗಳ ಸಮೃದ್ಧರೂಪವು, ವೇದಭಾಷೆಯಷ್ಟು ಇನ್ನು ಯಾವ ಭಾಷೆಯಲ್ಲೂ ಇಲ್ಲ. ಕೇವಲ 'ಕೃ' ಧಾತುವಿನಿಂದ ೩೩೬ ರೂಪಗಳು ಉತ್ಪನ್ನವಾಗುತ್ತವೆ. ಉದಾತ್ತಾದಿ ಸ್ವರಗಳ ಪ್ರಯೋಗವು ವೇದಭಾಷೆಯಲ್ಲಿ ಅತ್ಯಂತ ಎಚ್ಚರಿಕೆಯಿಂದ ಇಟ್ಟಂತೆ ಇದೆ. ಪ್ರಾರಂಭಿಕ ಲೌಕಿಕ ಭಾಷೆಯಲ್ಲಿ ಇವರ ಪ್ರಯೋಗವು ಸ್ವಲ್ಪ ಕಂಡುಬಂದರೂ, ಕಾಲಕ್ರಮೇಣ ಇದು ಪೂರ್ಣ ಲುಪ್ತವಾಗಿದೆ. ಹೀಗೆ ವೇದ ಭಾಷೆಗೂ, ಲೌಕಿಕ ಸಂಸ್ಕೃತ ಭಾಷೆಗೂ ಇನ್ನೂ ಅನೇಕ ಭೇದಗಳಿವೆ. ವೇದಭಾಷೆಯು ಯಾವ ಕಾಲದಲ್ಲಿಯೂ ಲೌಕಿಕ ಭಾಷೆಯಾಗಿದ್ದಿಲ್ಲ. ಲೌಕಿಕ ಭಾಷೆಯು ವೇದ ಭಾಷೆಯಿಂದ ಉತ್ಪನ್ನವಾಯಿತಷ್ಟೆ. ವೇದಭಾಷೆಗಿಂತ ಪೂರ್ವ ಯಾವ ಭಾಷೆಯೂ ಇರಲಿಲ್ಲ. ವೇದಗಳ ಪ್ರಕಾಶವಾದ ಬಳಿಕವೇ ಲೋಕದಲ್ಲಿ ಜ್ಞಾನ ಮತ್ತು ಭಾಷೆಯ ಪ್ರಚಾರವಾಯಿತು.

## ವೇದಗಳ ನಿತ್ಯತ್ವ:—

ಪರಮಾತ್ಮನು ನಿತ್ಯ, ಅವನ ಜ್ಞಾನವಾದ ವೇದವೂ ನಿತ್ಯ. ವ್ಯಾಕರಣ ಮಹಾಭಾಷ್ಯಕಾರ ಪತಂಜಲಿ ಮುನಿಯು, ಧ್ರುವಂ, ಕೂಟಸ್ಥಂ, ಅವಿಚಾಲಿ, ಅನಪಾಯಿ, ಅನುಪಜನಿ, ಅವಿಕಾರಿ, ಅನುತ್ಪತ್ತಿ, ಅವೃದ್ಧಿ, ಅವ್ಯಯಯೋಗಿ ಯತ್ತನ್ನಿತ್ಯಂ, ಎಂದು ಹೇಳಿ ನಿತ್ಯತ್ವದ ಲಕ್ಷಣವನ್ನು ವರ್ಣಿಸಿದ್ದಾನೆ. ಅಂದರೆ, ಕಾರಣರೂಪವಾದ ವೇದ ಶಬ್ದಗಳು ವೃದ್ಧಿ, ಕ್ಷಯ, ಉತ್ಪತ್ತಿ, ಲಯ, ವಿಕಾರಾದಿ ದೋಷಗಳಿಂದ ಮುಕ್ತವಾಗಿವೆ. ಇದೇ ಮಾತನ್ನು ವಾಕ್ಯಪದೀಯದ ರಚಯಿತನಾದ ಭರ್ತೃಹರಿಯು ವಾಕ್ ಅನಾದಿ ಮತ್ತು ನಿಧನರಹಿತ ಎಂದೂ, ಸೃಷ್ಟಿಯ ಪ್ರಾರಂಭದಲ್ಲಿ ಸ್ವಯಂಭೂ ಪರಮಾತ್ಮನು ಅದನ್ನು ಋಷಿಗಳ ಹೃದಯದಲ್ಲಿ ಪ್ರಕಟ ಮಾಡುತ್ತಾನೆ, ಆ ವಾಣಿಯು ವೇದಮಯವಾಗಿದೆ, ಅದು ದಿವ್ಯವಾಗಿದೆ ತಥಾ ಅದರಿಂದಲೇ ಎಲ್ಲಾ ಮಾನುಷೀ ಭಾಷೆಗಳ ಉತ್ಪತ್ತಿಯಾಗುತ್ತದೆಯೆಂದೂ ಒತ್ತಿ ಹೇಳಿದ್ದಾನೆ.[೧೧] ಈ ರೀತಿ ವೇದಶಬ್ದಗಳು ನಿತ್ಯವಾಗಿರುವುದರಿಂದ ಅವುಗಳ ಅರ್ಥವು ಗ್ರಾಹ್ಯವಾಗಿದೆ. ಅಂದರೆ, ಶಬ್ದಾರ್ಥ ಸಂಬಂಧವು ನಿತ್ಯವಾಗಿದೆ. ಶಬ್ದವಿಲ್ಲದಿದ್ದರೆ, ಅರ್ಥವೆಲ್ಲಿದೆ? ಇಷ್ಟಲ್ಲದೆ, ಒಂದೇ ಶಬ್ದವನ್ನು ಬೇರೆ ಬೇರೆ ಜನರು ಬೇರೆ ಬೇರೆ ಕಾಲದಲ್ಲಿ ಪ್ರಯೋಗ ಮಾಡುತ್ತಾರೆ. ಇದಕ್ಕೂ

---

[೧೧] ಅನಾದಿ ನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ।
ಆದೌ ವೇದಮಯೀ ದಿವ್ಯಾಯತಃ ಸರ್ವಾಃ ಪ್ರವೃತ್ತಯಃ ॥
[ವಾಕ್ಯಪದೀಯ, ಆಗಮಕಾಂಡ, ಶ್ಲೋಕ । ತಥಾ ಮಹಾಭಾರತ, ಶಾಂತಿಪರ್ವ, ಅಧ್ಯಾಯ ೨೨೪, ಶ್ಲೋಕ ೫೫.]

ಶಬ್ದದ ನಿತ್ಯತ್ವವೇ ಕಾರಣವಾಗಿದೆ.[೧೨] ಋಗ್ವೇದಾದಿ ನಾಲ್ಕು ವೇದಗಳು ಅನೇಕ ವಿದ್ಯೆಗಳಿಂದ ಸಂಪನ್ನವಾಗಿವೆ. ಯಾವ ರೀತಿಯಲ್ಲಿ ಸೂರ್ಯನು ತನ್ನ ಪ್ರಕಾಶದಿಂದ ಪ್ರಪಂಚದ ಎಲ್ಲಾ ವಸ್ತುಗಳನ್ನೂ ಪ್ರಕಾಶಿಸುತ್ತಾನೆಯೋ, ಯಾವ ರೀತಿಯಲ್ಲಿ ಅವನ ಪ್ರಕಾಶವೇ ಅವನ ಪರಿಚಯವನ್ನು ಮಾಡಿಕೊಡುತ್ತದೆಯೋ, ಅದೇ ರೀತಿಯಲ್ಲಿ ವೇದಗಳೂ ಪ್ರಪಂಚದ ಎಲ್ಲಾ ವಸ್ತುಗಳ ಜ್ಞಾನವನ್ನು ಪ್ರಕಾಶಿಸುತ್ತವೆ; ಸತ್ಯ ಅರ್ಥಗಳನ್ನು ಪ್ರಕಟಿಸುತ್ತವೆ. ಆದುದರಿಂದ ವೇದಗಳು ಸ್ವತಃ ಪ್ರಮಾಣ; ಅನ್ಯ ಶಾಸ್ತ್ರಗಳಂತೆ ಪರತಃ ಪ್ರಮಾಣಗಳಲ್ಲ. ಅಂದರೆ, ಯಾವ ರೀತಿಯಲ್ಲಿ ಲೋಕದಲ್ಲಿ ಜನರಿಗೆ ಸೂರ್ಯನ ಪರಿಚಯ ಮಾಡಿಕೊಡಲಿಕ್ಕೆ ಇತರರ ಆವಶ್ಯಕತೆ ಇಲ್ಲವೋ, ಸೂರ್ಯನೇ ಸ್ವತಃ ತನ್ನ ಪರಿಚಯವನ್ನು ಮಾಡಿಕೊಡುತ್ತಾನೆಯೋ ಅದೇ ರೀತಿಯಲ್ಲಿ, ವೇದಗಳು ತಮ್ಮ ಪರಿಚಯವನ್ನು ತಾವೇ ಮಾಡಿಕೊಡುತ್ತವೆ.[೧೩] ವೇದಗಳ ಆಧಾರದಿಂದ ಋಷಿಗಳು, ಜನಸಾಮಾನ್ಯರ ಉಪಕಾರಕ್ಕಾಗಿ ಶಾಸ್ತ್ರಗಳ ರಚನೆ ಮಾಡಿದ್ದಾರೆ; ಜ್ಞಾನದ ವಿಸ್ತಾರ ಮಾಡಿದ್ದಾರೆ. ಒಂದು ವೇಳೆ ವೇದಗಳೇ ಇಲ್ಲದಿರುತ್ತಿದ್ದರೆ, ಶಾಸ್ತ್ರಗಳ ರಚನೆ ಸಂಭವವಾಗುತ್ತಿರಲಿಲ್ಲ. ಯಾಕೆಂದರೆ, ಮೂಲವಿಲ್ಲದೆ ವೃಕ್ಷಗಳೂ, ವೃಕ್ಷದ ಶಾಖೆಗಳೂ ಉತ್ಪನ್ನವಾಗುವುದಿಲ್ಲ. ಅದೇ ರೀತಿ ಮೂಲಜ್ಞಾನವಿಲ್ಲದೆ, ಜ್ಞಾನದ ವಿಸ್ತಾರವಾಗುವುದೂ ಸಾಧ್ಯವಿಲ್ಲ. ಆ ಮೂಲಜ್ಞಾನವೇ ವೇದ.[೧೪] ಮೂಲಜ್ಞಾನವು ನಿತ್ಯವಾಗಿದೆ. ಈ ನಿತ್ಯಜ್ಞಾನವನ್ನು ಕೇವಲ ಸರ್ವಜ್ಞಾದಿ ಗುಣಗಳಿಂದ ಕೂಡಿದ ಪರಮಾತ್ಮನೇ ಕೊಡಬಲ್ಲನಲ್ಲದೆ, ಇತರ ಮನುಷ್ಯರಿಗೆ ಅದು ಸಾಧ್ಯವಲ್ಲ.[೧೫] ಆದುದರಿಂದಲೇ ಪರಮಾತ್ಮನೇ ಎಲ್ಲರ ಪರಮ ಗುರು; ಪ್ರಾಚೀನಕಾಲದ ಬ್ರಹ್ಮಾದಿ ಋಷಿಗಳಿಗೂ ಪರಂಪರಾಗತ ಕ್ರಮದಿಂದ ಅವನೇ ಗುರು. (ಯೋಗ ದರ್ಶನ ೧–೧–೨೬) ಆದುದರಿಂದಲೇ ಬ್ರಹ್ಮಾದಿ ಋಷಿಗಳು ಆದಿಕಾಲದಿಂದಲೂ ವೇದವನ್ನು ನಿತ್ಯವೆಂದು ಘೋಷಣೆ ಮಾಡುತ್ತಾ ಬಂದಿದ್ದಾರೆ.[೧೬]

ಪುನಃ, ಅನುಭವವಿಲ್ಲದೆ ಸಂಸ್ಕಾರವಿಲ್ಲ; ಸಂಸ್ಕಾರವಿಲ್ಲದೆ ಸ್ಮರಣೆಯಿಲ್ಲ; ಸ್ಮರಣೆಯಿಲ್ಲದೆ ಪ್ರವೃತ್ತಿಯು ಅಸಂಭವ. ಇಷ್ಟ–ಅನಿಷ್ಟಗಳ ಅನುಭವದಿಂದ ಸಂಸ್ಕಾರವಾಗುತ್ತದೆ; ಸಂಸ್ಕಾರದಿಂದ ಸ್ಮರಣೆ; ಆ ಸ್ಮರಣೆಯಿಂದ ಲೋಕದಲ್ಲಿ ಇಷ್ಟದ ಕಡೆಗೆ ಪ್ರವೃತ್ತಿ, ಅನಿಷ್ಟದ ಕಡೆಗೆ ಅಪ್ರವೃತ್ತಿಯು ಕಂಡುಬರುತ್ತದೆ. ಇದೇ ರೀತಿಯಲ್ಲಿ, ಒಂದು ಭಾಷೆಯನ್ನು ಕೇಳಿದರೂ, ಅನುಭವವಿಲ್ಲದೆ, ಆ ಭಾಷೆಯಲ್ಲಿ ವ್ಯವಹಾರವು

[೧೨] ನಿತ್ಯಸ್ತು ಸ್ಯಾದ್ದರ್ಶನಸ್ಯ ಪರಾರ್ಥತ್ವಾತ್ ॥ ಪೂರ್ವಮೀಮಾಂಸ ಅಧ್ಯಾಯ ೧, ಪಾದ ೧, ಸೂ. ೧೮ ತಥಾ– ..
ತದ್ವಚನಾದಾಮ್ನಾಯಸ್ಯ ಪ್ರಾಮಾಣ್ಯಂ ॥ ವೈಶೇಷಿಕ ದರ್ಶನ ೧–೩ ॥
ಅಂದರೆ, ವೇದವು ಈಶ್ವರೀಯ ಜ್ಞಾನವಾದುದರಿಂದಲೂ ಅದು ನಿತ್ಯ.
[೧೩] ನಿಜಶಕ್ತ್ಯಭಿವ್ಯಕ್ತೇಃ ಸ್ವತಃ ಪ್ರಾಮಾಣ್ಯಂ ॥ ಸಾಂಖ್ಯದರ್ಶನ ೫–೫೧ ॥
[೧೪] ಶಾಸ್ತ್ರಯೋನಿತ್ವಾತ್ ॥ ವೇದಾಂತದರ್ಶನ ೧–೧–೩ ॥
ಅತ ಏವ ಚ ನಿತ್ಯತ್ವಂ ॥ ವೇದಾಂತ ದರ್ಶನ ೧–೩–೨೯ ॥
[೧೫] ಕವಿರ್ಮನೀಷೀ ಪರಿಭೂಃ ಸ್ವಯಂಭೂ ಯಜುರ್ವೇದ ೪೦–೮ ॥
[೧೬] ಮಂತ್ರಾಯುರ್ವೇದವಚ್ಚ ತತ್ಪ್ರಾಮಾಣ್ಯಮಾಪ್ತಪ್ರಾಮಾಣ್ಯಾತ್ ॥ ನ್ಯಾಯದರ್ಶನ ೨–೧–೬೭ ॥

ಸಾಧ್ಯವಿಲ್ಲ. ಆದುದರಿಂದ ಸೃಷ್ಟಿಯ ಆದಿಯಲ್ಲಿ ಒಂದು ವೇಳೆ ಯಾವುದೇ ಭಾಷೆಯು ಅನುಭವವಾಗದಿರುತ್ತಿದ್ದರೆ, ಇಂದಿನ ಮನುಷ್ಯರು ಯಾವ ಭಾಷೆಯನ್ನೂ ಆಡುತ್ತಿರಲಿಲ್ಲ. ಆದಿ ಮಾನವರು ಸರ್ವ ಪ್ರಥಮ ಅನುಭವ ಮಾಡಿದ ಭಾಷೆಯೇ ವೇದ ಅಥವಾ ಶ್ರುತಿ. ಇದರಿಂದಲೇ ಮಾನವ ಭಾಷೆಯು ಉತ್ಪತ್ತಿಯಾಗಿದೆ. ಆದುದರಿಂದ ವೇದವು ನಿತ್ಯ.[೧೬]

ನಿತ್ಯವಾದ ದೈವೀ ವಾಕ್ ವೇದವನ್ನು ಮನುಷ್ಯರು ಪಡೆದುಕೊಳ್ಳುವ ಮೊದಲು, ಅದು ಅಂತರಿಕ್ಷದಲ್ಲಿ ಆಕಾಶವತ್ ಸಮರಸವಾಗಿತ್ತು. ಇದನ್ನೇ ಪ್ರಾಚೀನ ಋಷಿಗಳು ಅಂತರಿಕ್ಷ ದುಂದುಭಿಯೆಂದೂ, ಆಧುನಿಕ ವಿಜ್ಞಾನಿಗಳು cosmic music ಅಥವಾ music of the spheres ಎಂದೂ ವರ್ಣಿಸಿದ್ದಾರೆ. ಸೃಷ್ಟಿಕಾಲದಲ್ಲಿ, ಇದು ಗ್ರಹ ತಾರೆ ಇತ್ಯಾದಿ ಆಕಾಶೀಯ ಪದಾರ್ಥಗಳನ್ನು ಸೇರಿಕೊಂಡಿತು. ಯೋಗಬಲದಿಂದ ಋಷಿಗಳು ಆ ಅವ್ಯಕ್ತ, ಕಾರಣರೂಪ, ಪರಾವಾಕ್ಯನ್ನು ಗ್ರಹಣಮಾಡಿಕೊಂಡು, ತಮ್ಮ ಬುದ್ಧಿಬಲದಿಂದ, ಆಲೋಚಿಸಿ, ಅದಕ್ಕೆ ಕಾರ್ಯರೂಪ ವ್ಯಕ್ತ ವೈಖರೀ ಶಬ್ದದ ರೂಪವನ್ನು ಕೊಟ್ಟರು.[೧೭] ಆದುದರಿಂದಲೇ ಸೃಷ್ಟಿಯ ಆದಿಯಲ್ಲಿ ಋಷಿಗಳು ದೈವೀ ವಾಣಿಯ ಆಧಾರದ ಮೇಲೆ ನಿಂತ, ಆವಶ್ಯಕತಾನುಸಾರ ಅದಕ್ಕೆ ಸಂಸ್ಕಾರ ಮಾಡಿದ ಮಾನುಷೀ ವಾಣಿಯಲ್ಲಿ ವ್ಯವಹರಿಸುತ್ತಿದ್ದರು. ಇದೇ ಮಾನವೀ ಭಾಷೆಯ ಪ್ರಾರಂಭಿಕ ಸ್ಥಿತಿಯಾಗಿತ್ತು. ವೇದಗಳ ಶಾಖೆಗಳಲ್ಲಿಯೂ ಬ್ರಾಹ್ಮಣ ಗ್ರಂಥಗಳಲ್ಲಿಯೂ ಆ ಭಾಷೆಯ ಪರಿಚಯವು ಸಿಕ್ಕುತ್ತದೆ.[೧೮] ಈ ಐತಿಹಾಸಿಕ ಸತ್ಯವನ್ನೇ ಮಹರ್ಷಿ ಮನುವು ನಿಮ್ನ ಶ್ಲೋಕದಲ್ಲಿ ವರ್ಣಿಸಿದ್ದಾನೆ:—

ಸರ್ವೇಷಾಂ ತು ಸ ನಾಮಾನಿ ಕರ್ಮಾಣಿ ಚ
ಪೃಥಕ್ ಪೃಥಕ್ । ವೇದಶಬ್ದೇಭ್ಯ ಏವಾದೌ
ಪೃಥಕ್ ಸಂಸ್ಥಾಶ್ಚ ನಿರ್ಮಮೇ ॥ (ಮನುಸ್ಮೃತಿ ೧-೨೧)

ಅರ್ಥಾತ್, ಸೃಷ್ಟಿಯ ಆರಂಭದಲ್ಲಿ, ಜನರು ಎಲ್ಲಾ ಹೆಸರುಗಳನ್ನೂ, ಕರ್ಮಗಳನ್ನೂ ತಥಾ ವ್ಯವಸ್ಥೆಗಳನ್ನೂ ವೇದಭಾಷೆಯ ಆಧಾರದಿಂದಲೇ ಮಾಡಿಕೊಂಡರು. ಅಂದರೆ, ಮಾನವ ಭಾಷೆಯ ಆಧಾರವು ವೇದ, ಮಾನವ ಜ್ಞಾನದ ಆಧಾರವು ವೇದ, ಮಾನವ ಕರ್ಮಗಳ ಆಧಾರವೂ ವೇದ, ಮತ್ತು ಸಾಮಾಜಿಕ, ರಾಜಕೀಯ, ಧಾರ್ಮಿಕ ಮೊದಲಾದ ವ್ಯವಸ್ಥೆಗಳಿಗೂ ಮೂಲ ಆಧಾರವು ವೇದ.

---

[೧೬] ಸದಕಾರಣವನ್ನಿತ್ಯಂ ॥ ವೈಶೇಷಿಕ ದರ್ಶನ ೪-೧-೧ ॥

[೧೭] ದೈವೀಂ ವಾಚಮಜನಯಂತ ದೇವಾಃ ॥ ಋಗ್ವೇದ ೮-೧೦೦-೧೧ ॥
ಯಜ್ಞೇನ ವಾಚಃ ಪದವೀಯ ಮಾಯನ್ ತಾಂ...... ॥ ಋಗ್ವೇದ ೧೦-೭೧-೩ ॥
ಸಕ್ತುಮಿವ ತಿತಉನಾ ಪುನಂತೋ ಯತ್ರಧೀರಾ ಮನಸಾ ವಾಚಮಕ್ರತ ॥
[ಋಗ್ವೇದ ೧೦-೭೧-೨]

[೧೮] ತಸ್ಮಾದ್ ಬ್ರಾಹ್ಮಣ ಉಭೇ ವಾಚೌ ವದತಿ ದೈವೀಂ ಚ ಮಾನುಷೀಂ ಚ ॥
[ಕಾಠಕ ಸಂಹಿತಾ ೧೪-೫-೧]

**ವೇದಗಳ ವೇದತ್ವ ಅಥವಾ ವೇದಶಬ್ದದ ಅರ್ಥ ನಿರ್ವಚನ:—**

ಭಿನ್ನ ಭಿನ್ನ ಆಚಾರ್ಯರು ವಿಭಿನ್ನ ರೀತಿಯಲ್ಲಿ ವೇದ ಶಬ್ದದ ಅರ್ಥ ನಿರ್ವಚನವನ್ನು ಮಾಡಿದ್ದಾರೆ. ಸರ್ವಸಾಧಾರಣವಾಗಿ ವೇದ ಶಬ್ದವು ಐದು ಬೇರೆ ಬೇರೆ ಅರ್ಥಗಳುಳ್ಳ ಧಾತುಗಳಿಂದ ಉತ್ಪನ್ನವಾಗುತ್ತದೆ. ಹೇಗೆಂದರೆ, **ವಿದ್ ಜ್ಞಾನೇ** [ಅದಾದಿ ಗಣ], **ವಿದ್ ಸತ್ತಾಯಾಮ್** [ದಿವಾದಿ ಗಣ], **ವಿದ್ ವಿಚಾರಣೇ** [ರುಧಾದಿ ಗಣ], **'ವಿದ್ ಚೇತನ, ಆಖ್ಯಾನ, ನಿವಾಸೇಷು'** [ತುರಾದಿ ಗಣ], ಮತ್ತು **ವಿದಲೃ ಲಾಭೇ** [ತುದಾದಿ ಗಣ], ಆದುದರಿಂದ, "ವಿದಂತಿ = ಜಾನಂತಿ [ಯಾವುದರಿಂದ ಜನರು ಜ್ಞಾನವನ್ನು, ಅಥವಾ ಸತ್ಯವಿದ್ಯೆಯ ಅರಿವನ್ನು ಮಾಡಿಕೊಳ್ಳುತ್ತಾರೆಯೋ], ವಿದ್ಯಂತೇ = ಭವಂತಿ [ಯಾವುದರಲ್ಲಿ ಎಲ್ಲಾ ಸತ್ಯವಿದ್ಯೆಗಳೂ ಇವೆಯೋ], ವಿಂದಂತೇ = ವಿಚಾರಯಂತಿ [ಯಾವ ಜ್ಞಾನದ, ಅಥವಾ ವಿದ್ಯೆಯ ಆಧಾರದಿಂದ ಜನರು ವಿಚಾರ ಮಾಡಲು ಸಮರ್ಥರಾಗುತ್ತಾರೆಯೋ], ವೇದಯತೇ [ಯಾವ ಜ್ಞಾನ ಅಥವಾ ವಿದ್ಯೆಯಿಂದ ಜನರ ಬುದ್ಧಿಯು ಜಾಗ್ರುತವಾಗುತ್ತದೆಯೋ; ಋಷಿಗಳು ಯಾವ ವಿದ್ಯೆಯ ಪ್ರಚಾರ ಮಾಡುತ್ತಾರೆಯೋ; ಅಥವಾ ಯಾವುದರಿಂದ ಲೋಕದಲ್ಲಿ ಜ್ಞಾನ, ಐಶ್ವರ್ಯ, ಸುಖ, ಶಾಂತಿ ಇತ್ಯಾದಿಗಳು ನೆಲೆಸುತ್ತವೆಯೋ], ಮತ್ತು ವಿಂದಂತಿ, ವಿಂದಂತೇ = ಲಭಂತೇ [ಯಾವುದರಿಂದ ಜನರು ಸತ್ಯ ವಿದ್ಯೆಗಳನ್ನು ಪಡೆದುಕೊಂಡು ವಿದ್ವಾಂಸರಾಗುತ್ತಾರೆಯೋ] ಎಂದರೆ, ಸಂಕ್ಷಿಪ್ತವಾಗಿ, ಆದರೂ ಸ್ಪಷ್ಟವಾಗಿ, **"ಸರ್ವೇ ಮನುಷ್ಯಾಃ ಸರ್ವಾವಿದ್ಯಾಃ ಅಸಂಶಯಂ ಸತ್ಯವಿದ್ಯಾಯುಕ್ತಾಃ, ಯೇಷು ವಾ ತಥಾ ಯೈರೇವ ವಿದ್ವಾಂಸಸ್ತೇ ಭವಂತಿ ತೇವೇದಾಃ**"–ಎಂದರೆ, "ಸರ್ವ ಮಾನವರೂ ಯಾವವುಗಳಿಂದ ಸರ್ವವಿದ್ಯೆಗಳನ್ನೂ, ಸಂಶಯವಿಲ್ಲದೆ ಸತ್ಯವಿದ್ಯೆಗಳನ್ನೂ ಕಲಿತು ವಿದ್ವಾಂಸರಾಗುತ್ತಾರೋ, ಯಾವವುಗಳಲ್ಲಿ ಸಮಸ್ತ ಸತ್ಯವಿದ್ಯೆಗಳೂ, ಇರುತ್ತವೋ, ಅವೇ ಋಗ್ಯಜುಸ್ಸಾಮಾಥರ್ವ ವೇದಗಳು"—ಎಂದರೆ ಪೂರ್ಣ ಜ್ಞಾನ ಮತ್ತು ಸಮಸ್ತ ವಿದ್ಯೆಗಳ ಮಹಾನ್ ಸಾಗರವಾಗಿರುವ ಕಾರಣ, ತತ್ತ್ವತಃ ಅನಾದಿಯಾದ ಈಶ್ವರನ ಜ್ಞಾನವಾಗಿರುವುದರಿಂದ ಅನಾದಿಗಳೇ ಆದರೂ, ಪ್ರಚಲಿತವಾಗಿರುವ ಕಲ್ಪದ ದೃಷ್ಟಿಯಿಂದ ಆದ್ಯ ಜ್ಞಾನವನ್ನೇ ವೇದಗಳೆನ್ನುತ್ತಾರೆ. ಇವುಗಳಿಂದಲೇ ಮನುಷ್ಯರ ಬುದ್ಧಿಗಳು ವಿಕಸಿತವಾಗುತ್ತವೆ. ಜ್ಞಾನ–ವಿಜ್ಞಾನದ ಉನ್ನತಿಯಾಗುತ್ತದೆ. ಪ್ರಪಂಚದಲ್ಲಿ ಸುಖ ಸಮೃದ್ಧಿಗಳು ನೆಲೆಸುತ್ತವೆ. ತಾತ್ಕಾಲಿಕ ಆವಶ್ಯಕತಾ ಪೂರ್ತಿಗೆ ಬೇಕಾದ ಸ್ಮೃತಿರೂಪ ಶಾಸ್ತ್ರಗಳ ನಿರ್ಮಾಣವಾಗುತ್ತದೆ. ಸಂಗೀತ ಹಾಗೂ ಅನ್ಯ ಲಲಿತಕಲೆಗಳ, ಯಂತ್ರ ನಿರ್ಮಾಣಾದಿ ವೈಜ್ಞಾನಿಕ ಶಿಕ್ಷಣದ ವಿಚಕ್ಷಣೆ ಬೆಳೆದು ಬರುತ್ತದೆ. ಸಂಸ್ಕೃತಿ–ಸಭ್ಯತೆಗಳು ಸೌಂದರ್ಯ ಸಂಯುಕ್ತ ಜೀವನದ ಅಭಿನ್ನ ಅಂಗಗಳಾಗಿ, ಹಾಸು–ಹೊಕ್ಕಾಗಿ ಹೊಸೆದುಕೊಳ್ಳುತ್ತವೆ. ಮಾನವೀ ರಚನೆಗಳು ಸದಾ ಪೂರ್ಣವಾದ ವಿದ್ಯೆಗಳನ್ನು ಒಳಗೊಂಡಿರಲು ಸಾಧ್ಯವೇ ಇಲ್ಲ. ಸ್ಥಾನತಃ ಜೀವಾತ್ಮ ಪರಿಚ್ಛಿನ್ನ; ಏಕದೇಶೀಯ. **"ಪರಿಚ್ಛಿನ್ನಾ ಭರತಾ ಅರ್ಭಕಾಸಃ"** [ಋಕ್:–೭–೩೩–೬]. "ಶರೀರಧಾರಿಗಳಾಗುವ ಜೀವಾತ್ಮರು ಪರಿಚ್ಛಿನ್ನರು; ಎಂದರೆ—ಏಕದೇಶೀಯರು. ಅಣುಮಾತ್ರರು" ಎಂದಿದೆ. ಈ ಏಕದೇಶೀಯತ್ವ, ಅಲ್ಪಸ್ಥಾನೀಯತ್ವ ಅಲ್ಪಜ್ಞತ್ವದ ನೇರವಾದ ಕಾರಣವಾಗಿದೆ. ಎಂದ ಮೇಲೆ, ಅಲ್ಪಜ್ಞರಾದ ಮಾನವರ ರಚನೆಗಳಾದ ಗ್ರಂಥಗಳಲ್ಲಿ, ಸಂಪೂರ್ಣ ವಿದ್ಯಾಯುಕ್ತವಾಗಿರುವ ಕೃತಿಗಳನ್ನು ಕಾಣುವುದು ಮೂರು ಕಾಲಕ್ಕೂ ಸಿದ್ಧಿಸದ

ಹಗಲು ಕನಸು ಮಾತ್ರ. ಇದೇ ಕಾರಣದಿಂದ, ಪಾಣಿನೀಕೃತ ಅಷ್ಟಾಧ್ಯಾಯಿಯಲ್ಲಿರುವ ನಿಯಮಗಳು ಸಾಕಷ್ಟು ಇಲ್ಲವಾಗಿ, ಈ ಕೊರತೆಯನ್ನು ತುಂಬಿಸಲು ಕಾತ್ಯಾಯನ ಮುನಿಯು ವಾರ್ತಿಕೆಗಳನ್ನು ರಚಿಸಬೇಕಾಯಿತು; ಮಹಾ ಭಾಷ್ಯದಂತಹ ಬೃಹತ್ಕಾಯ ಗ್ರಂಥದ ಆವಶ್ಯಕತೆಯೂ ಉಂಟಾಯಿತು. ಆದರೆ, ವೇದಗಳು ಈಶ್ವರೀಯ. ಈಶ್ವರನ ಸರ್ವಜ್ಞದ ಮುದ್ರೆ, ಎಂದರೆ ಪೂರ್ಣ ವಿದ್ಯೋಪಬೃಂಹತ್ವ ಸ್ವಯಂಸಿದ್ಧ. ಮಾನವೀಯ ಗ್ರಂಥಗಳಲ್ಲಿ ಕಂಡುಬರುವ ವೃದ್ಧಿ, ಪರಿವರ್ತನ, ಪುನರ್ವಿಳನ ಮೊದಲಾದ ವಿಕಾರಗಳು ಸರ್ವಜ್ಞಪರಮೇಶ್ವರನ ಉದ್ಭಾಸಿತ ಜ್ಞಾನವೇದಗಳಲ್ಲಿ ಇರುವುದೇ ಇಲ್ಲ.

ವೇದವಿದ್ಯೆಗಳ ಬಲದಿಂದ ಮನುಷ್ಯರು ಪೃಥ್ವಿಯ ಮೇಲೆ ವಿಜಯಶಾಲಿಗಳಾಗಿ ಬಾಳಬಲ್ಲರು, ದುಷ್ಟಶಕ್ತಿಗಳನ್ನು ಗೆದ್ದು ಸುಖಶಾಂತಿಯಿಂದ ಜೀವಿಸಬಲ್ಲರು, ಪೃಥ್ವಿಯನ್ನು ಸ್ವರ್ಗವನ್ನಾಗಿ ಮಾಡಬಲ್ಲರು. ಹಿಂದೆ ಇಂದ್ರಾದಿ ದೇವತೆಗಳು [ವಿದ್ವಾಂಸರು], ಈ ವೇದವಿದ್ಯಾ ಬಲದಿಂದಲೇ ಅಸುರರನ್ನು, ಎಂದಲೆ, ['ಅಸೌ ಪಾ ಅಸುಷು ವಾ ರಮಂತೇ, ಭೌತಿಕೇಷು ಭೋಗೇಷು ರಮಂತೇ ಪ್ರಸೀದಂತೀತಿ ಆರಾಮಾಭಿಲಾಷಿಣೋಽಜಿತೇಂದ್ರಿಯಾ ಏವಾಸುರಾ ಭವಂತಿ.]—"ಪ್ರಾಣ ಸಹಿತ ಆದಷ್ಟು ಕಾಲವೂ ಇದ್ದು ಭೋಗ–ವಿಲಾಸಗಳಲ್ಲಿ ಆಸಕ್ತರಾಗಿರುವವರೇ ಅಸುರರು"—ಎಂಬ ವ್ಯುತ್ಪತ್ತಿಯಂತೆ, ರಾಕ್ಷಸೀ ವೃತ್ತಿಗಳಲ್ಲಿಯೇ ಮಗ್ನರಾಗಿರುವವರನ್ನು ಜೀವನ ಸಂಘರ್ಷದಲ್ಲಿ ಹಿಂದೆ ಬೀಳಿಸುತ್ತಾರೆ"—ಎಂಬ ಶ್ರುತಿವಾಕ್ಯವನ್ನು ಅಹರ್ನಿಶಿ ಆಲಿಸುತ್ತಿದ್ದರೂ, ಆಚರಣ ಅದಕ್ಕೆ ಧ್ವನಿ ಕೊಟ್ಟು ನಲಿವಂತೆ ಕಾಣದು. ನಿರುಕ್ತದಲ್ಲಿ ಯಾಸ್ಕರು ಮೇಲೆ ಉದ್ಧೃತವಾಗಿರುವ ವಚನಗಳನ್ನು ನಿರರ್ಥಕವಾಗಿ ಬರೆಯಲಿಲ್ಲ. ಕೆಳಗಣ ಶ್ರುತಿಯನ್ನೇ ಮೆಲುಕು ಹಾಕೋಣ, ಬನ್ನಿರಿ:—

**ವಿ ತಿಷ್ಠಧ್ವಂ ಮರುತೋ ವಿಕ್ಷ್ವಿಚ್ಛತ ಗೃಭಾಯತ ರಕ್ಷಸಃ ಸಂ ಪಿನಷ್ಟನ। ವಯೋ ಯೇ ಭೂತ್ವೀ ಪತಯಂತಿ ನಕ್ತಭಿರ್ಯೇ ವಾ ರಿಪೋ ದಧಿರೇ ದೇವೇ ಅಧ್ವರೇ ॥** [ಅಥರ್ವ:—೮—೪—೧೮.]

"[ಮರುತಃ] ಓ ಮಿತಭಾಷೀ, ಮಿತಕರ್ಮಾ ಸಂಮಿತಪಾದ, ಸಂಯತಾತ್ಮಾ, ಮರಣ–ಧರ್ಮಾ ಮಾನವರೇ! [ವಿ ತಿಷ್ಠಧ್ವಂ] ವಿಶೇಷ ಜಾಗರೂಕರಾಗಿರಿ. [ವಿಕ್ಷು] ಪ್ರಜಾಮಾತ್ರರಲ್ಲಿ, ವ್ಯಕ್ತಿ–ವ್ಯಕ್ತಿಗಳ ಹೃದಯಾಂತರಾಳದಲ್ಲಿ ಹುದುಗಿರುವ, [ರಕ್ಷಸಃ] ರಾಕ್ಷಸೀ ವೃತ್ತಿಯ ದುರ್ಜನರನ್ನು, [ಇಚ್ಛತ] ಗುರುತಿಸಬಯಸಿರಿ. [ಯೇ] ಯಾರು, [ನಕ್ತಭಿಃ] ರಾತ್ರಿಗಳಲ್ಲಿ, ಅಜ್ಞಾನಾಂಧಕಾರಾವೃತ ಸ್ಥಿತಿಯಲ್ಲಿ, [ವಯಃ] ಉದ್ದ–ಅಗಲಕ್ಕೂ ಹರಡಿಕೊಂಡು, [ಭೂತ್ವೀ] ಸಾಮರ್ಥ್ಯ–ಸಂಪನ್ನರಾಗಿ, [ಪತಯಂತಿ] ಹಾರಾಡಿ–ಹೋರಾಡಿ ಮೇಲೇರಿ ಬರುತಾರೋ, [ವಾ = ವೈ = ಅಥವಾ = ಮತ್ತು] [ಯೇ] ಯಾರು, [ದೇವೇ ಅಧ್ವರೇ] ಹಿಂಸಾರಹಿತವಾದ, ದಿವ್ಯವಾದ, ಜ್ಞಾನ–ವಿಜ್ಞಾನ ದೀಪ್ತಿಯಿಂದ ಬೆಳಗುವ ಉದಾರಾಶಯ ವಿದ್ವಜ್ಜನರ ಯಜ್ಞಕರ್ಮಗಳಲ್ಲಿ, [ರಪಃ] ಪಾತಕವನ್ನು ದೋಷವನ್ನು, [ದಧಿರೇ] ಉಂಟುಮಾಡುತ್ತಾರೋ, [ರಕ್ಷಸಃ] ಆ ರಕ್ಕಸರನ್ನು [ಗೃಭಾಯತ] ಹಿಡಿಯಿರಿ. [ಸಂ ಪಿನಷ್ಟನ] ಸರಿಯಾದ ರೀತಿಯಲ್ಲಿ ಚಚ್ಚಿಹಾಕಿರಿ."

ಅಭಿಜ್ಞ ಪಾಠಕರಿಗೆ ಇವರ ಮೇಲೆ ಟೀಕೆಯಾದರೂ ಏಕೆ? ಯಾಸ್ಕರ—"ರಕ್ಷಿತ ವ್ಯೋ ಅಸ್ಮಾದಿತಿ ರಹಸಿ ಕ್ಷಿಣೋತೀತಿ ವಾ"—"ಈ ದುರವಸ್ಥೆಯಿಂದ, ದುರ್ಗುಣ ದಿಂದ, ದುರ್ವೃತ್ತಿಯಿಂದ ದೂರವಿಟ್ಟು ಆತ್ಮನನ್ನು ರಕ್ಷಿಸಬೇಕು—ಎಂಬ ಕಾರಣದಿಂದ, ಅಥವಾ ರಹಸ್ಯವಾಗಿಯೇ ಪ್ರಹರಿಸುವ ಕಾರಣದಿಂದ, ಅದನ್ನು 'ರಕ್ಷಸ್' ಎನ್ನುತ್ತಾರೆ" ಎಂಬ ವಿವರಣದ ಬೆಳಕಿನಲ್ಲಿ ಉಪರ್ಯುದ್ಧೃತ ಮಂತ್ರವನ್ನು ಅವಲೋಕಿಸಿದಲ್ಲಿ 'ರಹಸಿ ಕ್ಷಿಣೋತಿ'—ಎಂಬುದು 'ನಕ್ತಭಿಃ'ಯಲ್ಲಿ ಅಡಗಿದೆ; ಅಜ್ಞಾನಾಂಧಕಾರ ದಲ್ಲಿಯೇ ಗುಪ್ತ ಪ್ರಹಾರ ಹೆಚ್ಚು; 'ಯೇ ವಯೋ ಭೂತ್ವೀ'—ಎಂಬಲ್ಲಿ ಪಾಠಕರು ಈ ಸ್ಥಿತಿಯನ್ನು ಗುರುತಿಸಬಹುದು. ಧರ್ಮವುಳ್ಳವನನ್ನು 'ಧಾರ್ಮಿಕ' ಎಂಬಂತೆ, 'ರಕ್ಷಸ್' ಉಳ್ಳವನು 'ರಾಕ್ಷಸ'—ಎನಿಸಿಕೊಳ್ಳುತ್ತಾನೆ. 'ರಕ್ಷಸ್' ಅವಗುಣ, ದುರ್ನಡತೆ, ದೋಷ, ದುರ್ವೃತ್ತಿ—ಎಂದು ಗ್ರಹಿಸಿದ್ದೇವೆ. 'ರಕ್ಷಸ್' ಹದ್ದು ಮೀರಿ ಹರಿದಾಗ, ತಾದಾತ್ಮ್ಯಭಾವ [ಅದೇ ಇದು—ಎಂಬ ಗ್ರಹಿಕೆ]ದಿಂದ, 'ಅವನಾರೆಂದು ತಿಳಿದೇನಯ್ಯ? ಸಾಕ್ಷಾತ್, ರೂಪತಳೆದ ಪಾಪವೇ ಅವನು'—ಎಂದು ತಿಳಿಗನ್ನಡ [ಬೇಕೆಂದರೆ 'ಹಳಿಗನ್ನಡ'ವೆಂದೇ ಗ್ರಹಿಸಿರಿ]ದಲ್ಲಿ ಹೇಳುವಂತೆ, 'ರಕ್ಷಸ್' ಎಂಬ ಪದ ವನ್ನೇ 'ರಾಕ್ಷಸ'ವೆಂಬ ಪದದ ಪರ್ಯಾಯವಾಚಕವಾಗಿ ಗ್ರಹಿಸುವುದು ಕಂಡುಬರುತ್ತದೆ. ಉದಾಹರಣೆಗೆ, ಗೀತೆಯಲ್ಲಿ "ಯಕ್ಷರಕ್ಷಃಪಿಶಾಚಾನ್ನಂ"—ಎಂಬಲ್ಲಿ 'ರಕ್ಷಸ್' ಶಬ್ದವನ್ನೇ 'ರಾಕ್ಷಸ' ಎಂಬರ್ಥದಲ್ಲಿ ಬಳಸಿದೆ; ರಾಮಾಯಣದಲ್ಲಿ "ಅಗ್ನಿಹೋತ್ರಂಚ ವೇದಾಶ್ಚ ರಾಕ್ಷಸಾನಾಂ ಗೃಹೇ ಗೃಹೇ"—ಎಂಬಲ್ಲಿ 'ರಾಕ್ಷಸ' ಎಂಬ ಶಬ್ದವೇ ಇದೆ. ಹೇಗೂ ಇರಲೊಲ್ಲದೇಕೆ? 'ರಾಕ್ಷಸ' ಒಂದು ಯೋನಿವಿಶೇಷವಲ್ಲ; 'ರಕ್ಷಸ್' ಪರ್ಯಾಯ ವಾಚಿಯಾಗಿ ಬಂದಾಗ, ಅದರ ಬಗೆಗೂ ಇದೇ ನಿಲುವು ಗ್ರಾಹ್ಯ. 'ರಕ್ಷಸ್' ಅವಗುಣ ಅಥವಾ ಕಾಮ-ಕ್ರೋಧಾದಿಗಳಂತಹ ಆತ್ಮೋತ್ಕರ್ಷ ಬಾಧಕ ತತ್ತ್ವಗಳಾಗಿ ಬಂದಾಗ, ಅದೂ ಹೇಯವೆಂದೇ ಗ್ರಾಹ್ಯವಾಗಬೇಕು. ಆ ಸ್ಥಿತಿಯಲ್ಲಿ ಮಾತ್ರ ಆತ್ಮೋದ್ಧಾರ ಸಾಧ್ಯ. ಮಾನವ ಎಷ್ಟು ದೊಡ್ಡ ಯೋಗಿಯೇ ಆಗಿರಲಿ; ವಿದ್ವತ್ಪ್ರಭಾಪ್ರಭಾವದಿಂದ ಜನತೆಯನ್ನು ಬೆರಗುಗೊಳಿಸಬಲ್ಲವನೇ ಆಗಿರಲಿ, ಅವನು ಕೊನೆಗೂ ಮಾನವನೇ. ಪಾಮರಕೋಟಿ, ಮತ್ತು ತಮ್ಮ ತಮ್ಮ ನಿಹಿತ ಸ್ವಾರ್ಥಗಳ ನ್ನುಳ್ಳ ವಿದ್ವಾಂಸರ ಮಂಡಲಿಯೂ ಕೂಡ, ತಾವು ಗುರುವೆಂದೋ, ಆಚಾರ್ಯನೆಂದೋ, ಭಗವದವತಾರವೆಂದೋ, ಸಂಪ್ರದಾಯ ಪ್ರವರ್ತಕರೆಂದೋ ನಂಬಿಕೊಂಡವರ ಕೊರಳಿಗೆ "ಸರ್ವಜ್ಞ, ಪೂರ್ಣಪ್ರಜ್ಞ, ಪೂರ್ಣಬೋಧ, ಬೋಧಿಸತ್ವ, ಅಪರೋಕ್ಷಜ್ಞಾನಿ"—ಎಂದು ಪ್ರಮಾಣಪತ್ರಿಕಾ ಮಣಿಗಣಸ್ಯೂತಮಾಲೆಗಳನ್ನು ಹಾಕಬಹುದು. ಆದರೆ ಸ್ವರೂಪತಃ ಅಲ್ಪಜ್ಞರೂ, ಅಲ್ಪಶಕ್ತರೂ ಆದ ಜೀವರು 'ಸರ್ವಜ್ಞ'ರಾಗಬೇಕಾದರೆ ಅವರ 'ಸರ್ವ' ನಿಜವಾಗಿಯೂ ಬಹಳ ಚಿಕ್ಕದೇ ಆಗಿರಬೇಕು. ಯಾವನೇ ಮಾನವನನ್ನು 'ಸರ್ವಜ್ಞ'ನೆಂದು ತಿಳಿಯುವ ಮಂದಿ, ತಮಗೇ ತಿಳಿಯದಂತೆ ಆತ್ಮವಂಚನೆ-ಭಗವ ದ್ವಂಚನೆ-ಧರ್ಮವಂಚನೆಗಳಲ್ಲಿ ಮಗ್ನರಾಗಿರುತ್ತಾರೆ. ವೇದಗಳು—"ನಮಸ ಇದ್ವೃಧಾಸಃ" [ಋಕ್:-೪-೬-೩೪.]—"ಮಾನವರೇ! ವಿನಯದಿಂದಲೇ ನೀವು ಸಮೃದ್ಧ ರಾಗತಕ್ಕವರು"—ಎನ್ನುತ್ತಿವೆ. ಮತ್ತೂ ಶ್ರುತಿ ಆರಾಧಕನ ಬಾಯಿನಿಂದ—"ಅಯಂ ಸೋ ಅಸ್ಮಿಯಃ ಪುರಾ" [ಋಗ್ವೇದ]—"ನಾನು ಅಂದು ಯಾವ ಜೀವನಾಗಿದ್ದೆನೋ, ಇಂದೂ ಅದೇ ಆಗಿರುವೆ"—ಎಂದು ನುಡಿಯುತ್ತಲಿದೆ. ಸತ್ಯವಿದು. 'ಅಹಂ

ಬ್ರಹ್ಮಾಸ್ಮಿ' ಆದಿ ಪ್ರಕರಣಬಾಹ್ಯ ಉಪನಿಷದ್ವಾಕ್ಯಗಳನ್ನು ಎಳೆದಾಡಿ, ಸಲ್ಲದ ಸೊಲ್ಲನ್ನು ಸಾರುವುದೇಕೆ?

ವಿಶಾಲಮನಸ್ಕತೆಯು ಪಾರ ವೇದಾನುಯಾಯಿಗಳಿಗೆ ಹೊಸದಲ್ಲ. "ಮಹಾ ಮನಸಾಂ ಭುವನಚ್ಯವಾನಾಂ ಘೋಷೋ ದೇವಾನಾಂ ಜಯತಾಮುದ. ಸ್ಥಾತ್" [ಋಕ್:-೧೦-೧೦೩-೮.]—"ಮಹಾ ಮನಸ್ಕರೂ, ಪಾಪಾಘಿನಾಶನಾರ್ಥವಾಗಿ ಭೂಮಿಯನ್ನೇ ತಲೆಕಾಲುಗಳನ್ನು ಕೆಳಗೆ-ಮೇಲೆ ಮಾಡುವ ಮಹಾನ್ ಕ್ರಾಂತಿಕಾರಿಗಳೂ, ವಿಜಯದ ಮೇಲೆ ವಿಜಯವನ್ನು ಗಳಿಸುತ್ತಾ ನಡೆಯುವ ಸರ್ವದಾ ಗೆಲುವನ್ನೇ ಗುರಿಯಾಗಿಟ್ಟುಕೊಂಡು ಮುನ್ನುಗ್ಗುವ ಸದಾಶಾಪಾರಿಗಳೂ ಆದ ಜ್ಞಾನಿಗಳ ಜಯಘೋಷ ಆಗಸಕ್ಕೇರುತ್ತದೆ"—ಎಂಬ ಋಗ್ಗಾನಗಾನ ಮೊಳಗುತ್ತಲೇ ಇದೆ. "ಕೃತಂ ಮೇ ದಕ್ಷಿಣೇ ಹಸ್ತೇ ಜಯೋ ಮೇ ಸವ್ಯ ಆಹಿತಃ" [ಅಥರ್ವ: ೭-೫೦-೮]—"ನನ್ನ ಬಲಗೈಯಲ್ಲಿ ಕೃತಿಯೇ ವಿರಾಜಿಸಿದೆ: ನನ್ನ ಎಡಗೈಯಲ್ಲಿ ಜಯವಿದೆಯೋ ಕುಣಿಯುತ್ತಿದೆ"; "ದೇವಪುತ್ರಾ ಋಷಯಸ್ತಚ್ಛೃಣೋತನ" [ಋಕ್:-೧೦-೬೨-೪]—"ಓ ಭಗವತ್ಪುತ್ರರೇ! ಸತ್ಯದರ್ಶನ ಸಮರ್ಥ ಪ್ರಗತಿಶೀಲರೇ! ಆಲಿಸಿರಿ, ಮನೆಯಲ್ಲಿಯೂ, ಹೃದಯ-ಹೃದಯದಲ್ಲಿಯೂ ನಿರಂತರ ನಿನದಿಸುತ್ತಿರುವ ಈಶ್ವರೀ ವಾಣಿಯನ್ನು"—ಎಂಬ ಶ್ರುತಿಘೋಷ ಯಾವ ಕುಂಭಕರ್ಣನ ಗೊಗ್ಗರು ಗೊರಕೆಯ ನಿದ್ದೆಯನ್ನು ತಾನೇ ಭಂಗಿಸದಿದ್ದೀತು? "The only begotten son of God"—"ಜಗತ್ಪಿತನ ಏಕಮಾತ್ರ ಔರಸಪುತ್ರನ" ಕತೆಯಿಲ್ಲಿಲ್ಲ. ಎಲ್ಲರೂ ದೇವಪುತ್ರರೇ! ಪುರುಷಾರ್ಥಿಗಳಾಗಿದ್ದಲ್ಲಿ, ಋಷಿತ್ವ ಸರ್ವರ ಸಂಪತ್ತೇ ಸರಿ. ವೇದಗಳ ಆಳವನ್ನಳೆಯುವ ಮಾನದಂಡ [Yard Stick] ಇಂದಿನ ನವಯುವಕ-ನವಯುವತಿಯರಲ್ಲಿ ಯಾರ ಬಳಿ ಇದ್ದೀತು?

ಅಹೋ ನಮ್ಮ ದುರ್ಭಾಗ್ಯ! ಎಲ್ಲ ಕಾಲಗಳಲ್ಲಿಯೂ, ಎಲ್ಲ ದೇಶಗಳಲ್ಲಿಯೂ ಎಲ್ಲ ಮಾನವರಿಗೂ ನಿಖರವಾಗಿ ಪಥ-ಪ್ರದರ್ಶನ ಮಾಡಬಲ್ಲ, ಎಲ್ಲ ಪ್ರಶ್ನೆಗಳಿಗೂ ಸಂತೃಪ್ತಿಕರ ಉತ್ತರಗಳನ್ನು ವೈಜ್ಞಾನಿಕ-ಹೇತುವಾದೀ [Rational] ರೀತಿಯಲ್ಲಿ ಕೊಡಬಲ್ಲ ಶಾಸ್ತ್ರಸಮ್ರಾಟ್ ವೇದ ಚತುಷ್ಟಯ ಕೈಕೆಳಗಿದ್ದರೂ, ತಮ್ಮ ಸ್ವಂತ ಭಾಷೆಗಳಲ್ಲಿಯೇ 'ಧರ್ಮ, ಕರ್ಮ' ಆದಿ ಪದಗಳಿಗೆ ಸಮಾನಾರ್ಥವಾಚೀ ಶಬ್ದಗಳನ್ನೇ ಹೊಂದಿರದ ಪಾಶ್ಚಿಮಾತ್ಯರ ಬಾಗಿಲನ್ನು ತಟ್ಟುವಷ್ಟು ಓದಿ, ಕೆಳಕ್ಕೆ ಬಿದ್ದಿದ್ದೇವಲ್ಲ!

ಆಯಿತು. ಈಗಲೂ ಏನೂ ಮಿಂಚಿಹೋಗಿಲ್ಲ. 'ಸಗ್ಗವನ್ನು ಬಗ್ಗಿಸಿ, ಒಗ್ಗಟ್ಟಿನಿಂದ ಧರಾತಳಕ್ಕೆ ಅದನ್ನು ಒಗ್ಗಿಸುವ ಉಗ್ಗಡಣೆ ಸಾಕಷ್ಟು ಆಗಿದೆ. "ಯತ್ರ ಶುಲ್ಕೋ ನ ಕ್ರಿಯತೇ ಅಬಲೇನ ಬಲೀಯಸೇ" [ಅಥರ್ವ:-೩-೨೯-೩]—"ಎಲ್ಲಿ ಬಲಹೀನನು ಬಲಶಾಲಿಗೆ ತೆರಿಗೆಯನ್ನು ತೆರನೋ, [ಆ ಸ್ವರ್ಗಕ್ಕೆ ಆತ್ಮದಾತಾ ಜ್ಞಾನಿಯು ಏರುತ್ತಾನೆ"]—ಎಂಬ ಶ್ರುತಿ ಕಿವಿಗಳಲ್ಲಿ ಮೊಳಗಿದರೆ, ಹೃದಯಗಳಿಗೆ ಇಳಿದು ಬಂದರೆ, ದುರ್ಬಲರ ಮೇಲೆ ಬಲಶಾಲಿಗಳು ಅತ್ಯಾಚಾರ ಮಾಡುವುದನ್ನು ಸರ್ವಥಾ ನಿಲ್ಲಿಸಿ, ಎಲ್ಲರೊಂದಿಗೂ ಸಲ್ಲಲಿತ ರೀತಿಯಲ್ಲಿ ಪ್ರೀತಿಯ ನೀತಿಯನ್ನೇ ವ್ಯವಹರಿಸುತ್ತಿದರೆ, ನಾಕವಿದೋ ಇಳಿದು ಬಂದಿತು ಧರೆಗೆ. ಇದು ಮಾನವತ್ವದ ಕನಿಷ್ಠ ಕೋರಿಕೆ. ಇದೇ ಧರ್ಮದಡಿಗಲ್ಲು; ಇದೇ ಧರ್ಮದ ಕರೆ." ಭೇದ ಬೇಡ; ಖೇದ ಬೇಡ; ಛೇದ ಬೇಡ;

ವೇದವಿರಲಿ; ಆಗ ಸರ್ವವೂ ಸತ್ಯ; ಸರ್ವವೂ ಶಿವ; ಸರ್ವವೂ ಸುಂದರ. ಕೇವಲ ವೇದಗಳಲ್ಲಿ ಮಾತ್ರ ಕಾಣಬಹುದಾದ ಅನುಪಮ ಔದಾರ್ಯವಿದು.

ಕೇವಲ ಆಧ್ಯಾತ್ಮಿಕೀ ವಿದ್ಯೆ ಮಾತ್ರವಲ್ಲ; ಲೌಕಿಕ ಜೀವನದ ಸಮಸ್ತ ವ್ಯವಹಾರಗಳ ಜ್ಞಾನವನ್ನೂ ಕೂಡ ಪ್ರಾಚೀನ ಮಾನವರು ವೇದಗಳಿಂದಲೇ ಪಡೆದುಕೊಳ್ಳುತ್ತಿದ್ದರು. "ವೇದಗಳ ಅಧ್ಯಯನವನ್ನೂ ಮಾಡಬೇಕೇ? ಕೇವಲ ಕಾಲದ ಮೌಲ್ಯವನ್ನೇ ನಿರ್ಧರಿಸಲಾರದ, ಆಲಸೀ ನಡೆ-ನುಡಿಯ ಪರಾನ್ನಪುಷ್ಟರು, ನಿರರ್ಥಕವಾಗಿ ಕಾಲವನ್ನು ಅಪವ್ಯಯ ಮಾಡಲು ಸಿದ್ಧರಾಗಿರುವವರು ಮಾತ್ರ ಆ ಕಸದ ಬುಟ್ಟಿಗೆ ಅರ್ಹವಾದ, ತಿಪ್ಪೆಗುಂಡಿಗೆ ತುಂಬಲು, ಕಾಲಾಂತರದಲ್ಲಿ ತಾನೂ ಗೊಬ್ಬರನಾಗಿ, ತಿಲದಷ್ಟೇ ಆಗಿರಲೊಲ್ಲದೇಕೆ, ಬೆಳೆಗೆ ಸ್ವಲ್ಪ ಸಹಾಯವಾಗಲಿ—ಎಂಬ ಭಾವನೆಯಿಂದ ಪ್ರೇರಿತರಾದವರು ಮಾತ್ರ ಪಠಿಸಲಿ ಆ ವೇದಗಳನ್ನು! ಬುದ್ಧಿಜೀವಿಗಳಾದ ನಾವು ಅಂತಹ ಗ್ರಂಥಗಳ ಹಾಳೆಗಳನ್ನು ಮಗುಚಿ ಹಾಕೆವು"—ಎಂದು ಇಂದಿನ ಮಹಾನ್ ಪ್ರಗತಿಶೀಲ ಯುವಕ ಮಂಡಲಿ ಬಂಡಾಯದ ಪ್ರಚಂಡ ಚಂಡಮಾರುತವನ್ನು ಎಬ್ಬಿಸುವುದು ಸರ್ವವಿದಿತ. ಸತ್ಯ, ಪೂರ್ಣ ಸತ್ಯ, ಕೇವಲ ಮಿಶ್ರಣ ರಹಿತ ಸತ್ಯ; ಸತ್ಯವಲ್ಲದ ಮತ್ತಾವ ತತ್ತ್ವವೂ ಅಲ್ಲ ಈ ಸಿಂಹಗರ್ಜನೆ. "ಹಾಳೆಗಳನ್ನು ಮಗುಚಿ ಹಾಕುವ" ಮಹಾನ್ ಪರಿಶ್ರಮವನ್ನೂ ಆಲಸ್ಯಮಯರೂ, ಭೂಭಾರ ಸ್ವರೂಪರೂ ಪರಾನ್ನಪುಷ್ಟರೂ ಆದ ಮಂದಬುದ್ಧಿಯ, ಸ್ಪಂದನಹೀನ ಹೃದಯದ, ಹಿಂದುಹಿಂದಕ್ಕೆಯೇ ಸರಿದುಹೋಗುತ್ತಿರುವ, ತಿಂದಷ್ಟೂ 'ಬಂದರಾದೀತು ಇನ್ನೂ ಒಂದಿಷ್ಟು ಅನ್ನ'—ಎಂಬವರ ಪಾಲಿಗೇ ಬಿಟ್ಟುಕೊಟ್ಟಿರುವ ಈ ಮಂದಿ, ಪಾಪ, ದಯನೀಯರಷ್ಟೇ. ಹಾಳೆಯನ್ನು ಮಗುಚಿಹಾಕಲೂ ಕೂಡ ಸ್ಫೈರಣೆಯಿಲ್ಲದ ಇಂತಹ ಮಂದಿಗಳು ಏನು ಓದಿದ್ದಾರು, ಏನು ತಿಳಿದಿದ್ದಾರು ವೇದಗಳ ಅಂತರತಮಸ್ಪರ್ಶೀ, ಸರ್ವಭೂತಹಿತಕಾರೀ ಸಾರ್ವಕಾಲಿಕ-ಸಾರ್ವದೇಶಿಕ-ಸತ್ಯವೃತ್ತಿ-ಸಂಗತ ದಿವ್ಯ ಸಂದೇಶವನ್ನು?

ಆದರೆ, ವೇದರಕ್ಷಣೆಗಾಗಿ ತಮ್ಮ ಆತ್ಮಗಳನ್ನೂ ಬಲಿ ಕೊಟ್ಟ ನಮ್ಮ ಪೂರ್ವಜರು ಈ ಕುದೃಷ್ಟಿಯನ್ನು, 'ನಾನು ತಿಳಿದಿರುವುದಷ್ಟೇ ಸತ್ಯ; ನನಗಾವುದು ತಿಳಿದಿಲ್ಲವೋ, ಅದೆಲ್ಲವೂ ಪೂರ್ಣತಃ ಸುಳ್ಳು'—ಎಂಬ ಕೂಪಮಂಡೂಕ ವೃತ್ತಿಯನ್ನು ತಳೆದಿರಲಿಲ್ಲ. "ಬಲ್ಲವನೇ ಬಲ್ಲ ಬೆಲ್ಲದ ಸವಿಯ"—ಎಂಬ ದಾಸೋಕ್ತಿಯನ್ನು ಅವರು ಅರ್ಥ ಮಾಡಿಕೊಂಡಿದ್ದರು. "**ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ ಋತಸ್ಯ ಧೀತಿ ರ್ವೃಜಿನಾನಿ ಹಂತಿ। ಋತಸ್ಯ ಶ್ಲೋಕೋ ಬಧಿರಾತತರ್ದ ಕರ್ಣಾ ಬುಧಾನಃ ಶುಚಮಾನ ಆಯೋಃ ॥** [ಋಕ್:-೪-೨೩-೮]. 'ಋತ'—ಎಂಬುದಕ್ಕೆ ಯಜ್ಞ, ಸತ್ಯ ನ್ಯಾಯ—ಮೊದಲಾದ ಹಲವಾರು ಅರ್ಥಗಳಿವೆ. ಈ ಮೇಲಣ ಮಂತ್ರ ವೇದದ ಪ್ರಕರಣದಲ್ಲಿದೆ. ಆದಕಾರಣ, "**ಬ್ರಹ್ಮ ವಾ ಋತಂ**" [ಶತಪಥ:-೪-೧-೪-೧೦]—"**ಬ್ರಹ್ಮವೇ ಋತ**"—ಎಂಬ ಶಾಸ್ತ್ರೋಕ್ತಿಯನ್ನೂ, "**ಬ್ರಹ್ಮೇತಿ ವೇದ**" ಎಂಬ ಮತ್ತೊಂದು ಶಾಸ್ತ್ರಕಥನವನ್ನೂ ಸಮನ್ವಯ ಮಾಡಿ ನೋಡಿರಿ. "ಋತವೆಂದರೆ ವೇದ"—ಎಂಬ ತಥ್ಯ ಹೃದ್ಗತವಾದೀತು. ಅಷ್ಟೇ ಯಾಗೂ ತಾರಾನಾಥ ತರ್ಕವಾಚಸ್ಪತಿಗಳ ಶಬ್ದಕೋಶಗಳನ್ನೇ ನೋಡಿರಿ. 'ಋತ' ಎಂಬ ಶಬ್ದಕ್ಕೆ ಸತ್ಯ, ಯಜ್ಞ

ಎಂದು ಮಾತ್ರವಲ್ಲ, "Divine law, Divine truth, vedas"—"ದೈವೀ ವಿಧಿ, ದೈವಿಕ ಸತ್ಯ, ವೇದಗಳು"—ಎಂದು ಬರೆದಿದ್ದಾರೆ. ಮತ್ತು ಬ್ರಹ್ಮ—ಎಂಬುದಕ್ಕೂ ಅನ್ಯ ಅರ್ಥಗಳೊಂದಿಗೆ 'ವೇದಗಳು'—ಎಂದೂ ಬರೆದಿದ್ದಾರೆ. ವೇದಗಳಲ್ಲಿರುವುದಾದರೂ ಏನು? ಅದೇ ಈಶ್ವರೀಯ ವಿಧಾನಾತ್ಮಕ ನಿಯಮಾವಳಿಗಳೇ. 'ಧರ್ಮ'—ಎಂಬರ್ಥವನ್ನೂ ಶಾಸ್ತ್ರವಾಕ್ಯಗಳು ಉಗ್ಗಡಿಸಿವೆ.

ಮುನ್ನ ಮಂಡಿಸಿರುವ ಮಂತ್ರ ಹೇಳುತ್ತಿರುವುದನ್ನು ಈಗ ಆಲಿಸಿರಿ. "[ಋತಸ್ಯ] ವೇದಚತುಷ್ಟಯದ, [ಶುರುಧಃ] ಪಾಪ ನಿವಾರಕ ಶಕ್ತಿಗಳು, [ಪೂರ್ವೀಃ ಸಂತಿ] ಅನಾದಿಯಾಗಿವೆ; ಆದಿರಹಿತವಾಗಿವೆ; ಸದಾಕಾಲೀನವಾಗಿವೆ. [ಋ] ನಿತ್ಯವಾಗಿಯೂ, [ಋತಸ್ಯ ಧೀತಿಃ] ವೇದಗಳ ಅನುಷ್ಠಾನ ಸಹಿತ ಧಾರಣವು, [ವೃಜಿನಾನಿ] ಪಾಪಗಳನ್ನು, [ಹಂತಿ] ನಿರ್ನಾಮ ಮಾಡಿಬಿಡುತ್ತದೆ. [ಋತಸ್ಯ ಶ್ಲೋಕಃ] ವೇದ ಪವಿತ್ರವು, [ಅಯೋಃ] ಸಜೀವನಾದ, ಚೇತನಯುಕ್ತನಾದ ಮಾನವನನ್ನು, [ಬೋಧಯನ್] ಎಚ್ಚರಿಸುತ್ತಾ, [ಶುಚಮಾನಃ] ಪಾವನಗೊಳಿಸುತ್ತಾ, [ಬಧಿರಾ ಕರ್ಣಾ] ಶ್ರವಣಶಕ್ತಿಯಿದ್ದರೂ ಸದುಪದೇಶವನ್ನಾಲಿಸದ, ಕಿವುಡನಲ್ಲವಾದರೂ ಕಿವುಡಾದಂತಿರುವ ಕಿವಿಗಳನ್ನು, [ತತರ್ದ] ತೆರೆದುಬಿಡುತ್ತದೆ". ಇದು ಸತ್ಯ; ಇದೇ ಸತ್ಯ.

ವೇದಗಳ ಅಧ್ಯಯನಕ್ಕಾಗಿ ಕೊಡುವ ಕಾಲ ಅತ್ಯಮೂಲ್ಯವಾದ ವೇಳೆಯ ಅಪವ್ಯಯ"—ಎಂದು ವೇದಗಳ ವಿಷಯದಲ್ಲಿ ನಾಸಿಕವೆ ಕಾಣಿಸುತ್ತ ಅರಿಯಲ್ಲದ, 'ನವಸಮಾಜ, ಸರ್ವಸಮತಾಭಾವನಾ ಬಲಯುಕ್ತ ಸಮಾಜ, ನವೀನವೇ ಆದ ಕ್ರಾಂತಿಕಾರೀ ಸಾಹಿತ್ಯದಿಂದಲೇ ಸಂಭವವಾದೀತು; ಹಳೆಯ, ಹಳಸಿದ, ಹೊಸ ಹೊಸ ಹಾದಿಗೆ ಅಡ್ಡ ನಿಲ್ಲುವ ಯಾವುದೇ ಶಾಸ್ತ್ರವೂ ಇಂದಿಗೆ ಹೊಂದದು" ಎಂದು ಸ್ವಯಂ ಘೋಷಿಸುವ ಇಂದಿನ ಪ್ರಜ್ಞಾಪಟುಗಳು, ಸ್ವತಃ ತಮಗೆ ಪ್ರಜ್ಞಾಪಟುತ್ವವಿದೆಯೋ—ಎಂದು ಕ್ಷಣಕಾಲ ಯೋಚಿಸಿದರೂ ಸಾಕು. ಸಾರಿ ಸಾರಿ, ಸಾರಿ ಹೇಳುತ್ತಿದ್ದೇವೆ—"ಪ್ರಜ್ಞಾಪಟುಗಳೇ! ಪ್ರಗತಿಯ ಪೂರ್ಣ ಗುತ್ತಿಗೆದಾರರೇ! ಮೊದಲು ಸ್ವಲ್ಪ ಅಂತರಂಗವನ್ನೇ ನೋಡಿಕೊಳ್ಳಿರಿ. ನೀವು ಎಳ್ಳಿನಷ್ಟೂ ಅರಿಯದ ಸತ್ಯಶಾಸ್ತ್ರಗಳನ್ನು ಖಂಡಿಸುವ ಮುನ್ನ, ನೀವು ಖಂಡಿಸುತ್ತಿರುವ ಶಾಸ್ತ್ರಗಳಲ್ಲಿ ಏನಿದೆ? ಏನಿಲ್ಲ? ಎಂದು ತಿಳಿಯಲು ಯತ್ನಿಸಿರಿ. ಇತಿಹಾಸದ ಕಡೆಗಾದರೂ ಒಂದು ಕಿರುನೋಟ ನಾಕಿರಿ.

ಧರ್ಮಾಧರ್ಮಗಳ ಲಕ್ಷಣಗಳಿಗೆ ವೇದಗಳೇ ಪ್ರಮಾಣಗಳಾಗಿವೆ. ವೇದವಾಕ್ಯಗಳು ಸ್ವತಃ ಪ್ರಮಾಣಗಳಾಗಿರುವುದರಿಂದ ಅವುಗಳಿಗೆ ಬೇರೆ ಪ್ರಮಾಣಗಳು ಬೇಕಿಲ್ಲ. ಈ ರೀತಿ ಪ್ರಮಾಣ ವಾಕ್ಯಗಳು ವೇದಗಳಲ್ಲಿರುವುದರಿಂದಲೇ ವೇದಗಳನ್ನು ವೇದಗಳೆನ್ನುತ್ತಾರೆ [ವಿದ್‌ಸತ್ತಾಯಾಂ].[೨೦] ಅಂದರೆ, ಪ್ರತ್ಯಕ್ಷಾದಿ ಪ್ರಮಾಣಗಳು ಸಿಕ್ಕದಾಗ ವೇದವಾಕ್ಯಗಳೇ ಶಬ್ದಪ್ರಮಾಣ. ವೇದಶಬ್ದಗಳನ್ನೇ ವಿಚಾರಿಸಿ ಧರ್ಮ ಮತ್ತು ಅರ್ಥಗಳನ್ನು ತಿಳಿದುಕೊಳ್ಳಬೇಕು [ವಿದ್‌ವಿಚಾರಣೆ].[೨೧] ಇದರ ತಾತ್ಪರ್ಯವೇನೆಂದರೆ,

---

[೨೦] ವಿದಂತ್ಯನನ್ಯ ಪ್ರಮಾಣವೇದ್ಯಂ ಧರ್ಮ ಲಕ್ಷಣಂ ಧರ್ಮಮಸ್ಮಾದಿತಿ ವಾ ವೇದಃ ॥ ಮನುಸ್ಮೃತಿ ಭಾಷ್ಯದಲ್ಲಿ ಮೇಧಾತಿಥಿ ॥

[೨೧] ತದ್ವಾರ್ಥಮಾರಂಭಣಾನಾಂ ತು ಕರ್ಮಣಾಂ ಸಮಾಮ್ನಾಯ—ಸಮಾಪ್ತೌ ವೇದ ಶಬ್ದಃ ॥ ಹಿರಣ್ಯಕೇಶೀಯ ಶ್ರೌತಸೂತ್ರ ॥ ನೇಂದ್ರಿಯಾಣಿ ನಾನುಮಾನಂ ವೇದಾಹ್ಯೇವೈನಂ ವೇದಯಂತಿ । ತಸ್ಮಾದಾಹುರ್ವೇದಾ ಇತಿ ತಿಪ್ಪಲಾದ ಶ್ರುತಿಃ ॥ ವಿದ್ಯು ತತ್ವಾರ್ಥದಲ್ಲಿ ಆನಂದ ತೀರ್ಥರು ॥

ಸೂರ್ಯನ ಬೆಳಕಿನಲ್ಲಿ ವಸ್ತುಗಳನ್ನು ತೋರಿಸಲು ಯಾವ ರೀತಿಯಲ್ಲಿ ಇತರ ದೀಪಗಳು ನಿರರ್ಥಕವೋ, ಅದೇ ರೀತಿ ವೇದವಾಕ್ಯಗಳ ಮುಂದೆ, ಇತರ ಪ್ರಮಾಣಗಳು ನಿರರ್ಥಕ. ಆದುದರಿಂದಲೇ ವೇದವು ಸೂರ್ಯನಿಗೆ ಸಮಾನವಾದ ಜ್ಯೋತಿಯೆಂದು ವೇದವೇ ಹೇಳುತ್ತದೆ.[೨೩] ಅಂದರೆ ವೇದವು ಸೂರ್ಯನಂತೆ ಸ್ವಯಂ ಜ್ಞಾನಪ್ರಕಾಶಕವಾಗಿದೆ. ಇಂದ್ರಿಯ ಮತ್ತು ಬುದ್ಧಿ ಎಲ್ಲಿ ತಲಪುವುದಿಲ್ಲವೋ ಅಲ್ಲಿ ವೇದವೇ ಆಧಾರ. ಆದುದರಿಂದ ಆಧುನಿಕ ವಿದ್ವಾಂಸರು ವೇದ ತತ್ತ್ವಾರ್ಥಗಳನ್ನು ನಿರ್ಣಯಿಸಲಿಕ್ಕೆ ಇಂದು ಪಾಶ್ಚಾತ್ಯ ರೀತಿಯ ಭಾಷಾ ವಿಜ್ಞಾನಾದಿಗಳಿಗೆ ಶರಣುಹೋಗುವುದು ನಿಷ್ಪ್ರಯೋಜನವೆಂದು ತಿಳಿದುಕೊಳ್ಳಬೇಕು.

ಉಕ್ತ ದೈವೀವಾಕ್ಕಿಗೆ ವೇದವೆಂದಲ್ಲದೆ, ಶ್ರುತಿ, ಮಂತ್ರ, ಛಂದಸ್, ನಿಗಮ ಮತ್ತು ಸಂಹಿತೆಗಳೆಂಬ ಸಂಜ್ಞೆಗಳೂ ವಿಶೇಷ ರೂಪದಲ್ಲಿ ಪ್ರಯುಕ್ತವಾಗಿವೆ. ಈ ಸಂಜ್ಞೆಗಳಿಗೆ ಅನ್ಯ ಸಾಧಾರಣ ಅರ್ಥಗಳಿದ್ದರೂ, ಮೂಲ ಪ್ರಮಾಣ ಗ್ರಂಥ ಅಥವಾ ಈಶ್ವರೀಯ ಜ್ಞಾನದ ಪ್ರಕರಣದಲ್ಲಿ, ಇವುಗಳು ವಿಶೇಷ ಅರ್ಥದಲ್ಲಿಯೇ ಪ್ರಯುಕ್ತವಾಗಿವೆ. ಸೃಷ್ಟಿಯ ಆರಂಭದಿಂದ ಇಂದಿನ ತನಕ ಬ್ರಹ್ಮಾದಿ ಋಷಿಗಳು ಯಾವುದರ ಮೂಲಕ ಎಲ್ಲಾ ಸತ್ಯವಿದ್ಯೆಗಳನ್ನು ಶ್ರವಣ ಮಾಡಿಕೊಂಡು ಬಂದಿರುವರೋ ಅದೇ ಶ್ರುತಿ ಅಂದರೆ ವೇದ. [ಆದಿ ಸೃಷ್ಟಿ ಮಾರಭ್ಯಾದ್ಯಪರ್ಯಂತಂ ಬ್ರಹ್ಮಾದಿಭಿಃ ಸರ್ವಾಃ ಸತ್ಯವಿದ್ಯಾಃ ಶ್ರೂಯಂತೇಽನಯಾ ಶ್ರುತಿಃ.] ಅಂದರೆ ನಾಲ್ಕೂ ವೇದಗಳೂ ಮಾನವ ಋಷಿಗಳ ರಚನೆಗಳಲ್ಲ; ಅವು ದೈವೀ ರಚನೆ.

ಪಂಚ ಜ್ಞಾನೇಂದ್ರಿಯಗಳಿಗೂ, ಮನಸ್ಸಿಗೂ ದುರ್ಗ್ರಾಹ್ಯವಾದ, ಅಂದರೆ, ಅತೀಂದ್ರಿಯ, ಅಥವಾ ಇಂದ್ರಿಯಗಳಿಗೆ ಅಂದದ, ಅಂದರೆ ಗೋಚರವಾಗದ ಜ್ಞಾನದ ರಾಶಿಯಾದುದರಿಂದ ವೇದಗಳನ್ನು ಮಂತ್ರಗಳೆಂದು ಹೇಳುತ್ತಾರೆ. [ಮತ್ರಿ ಗುಪ್ತ ಭಾಷಣೇ । ಗುಪ್ತಾನಾಂ ಪದಾರ್ಥಾನಾಂ ಭಾಷಣಂ ಯಸ್ಮಿನ್ವರ್ತತೇ ಸ ಮಂತ್ರೋ ವೇದಃ]. ಅಥವಾ ಯಾವುದರ ಮೂಲಕ ಜನರು ಸೃಷ್ಟಿಯ ಎಲ್ಲಾ ಪದಾರ್ಥಗಳ ಯಥಾರ್ಥ ಜ್ಞಾನವನ್ನು ಪಡೆದುಕೊಳ್ಳುತ್ತಾರೋ, ಅದನ್ನು ಮಂತ್ರವೆಂದು ಕರೆಯುತ್ತಾರೆ. [ಮನ ಜ್ಞಾನೇ । ಸರ್ವಧಾತುಭ್ಯಃಷ್ಟ್ರನ್ ಇತ್ಯುಣಾದಿ ಸೂತ್ರೇಣ ಷ್ಟ್ರನ್ । ಮನ್ಯಂತೇ ಜ್ಞಾಯಂತೇ ಸರ್ವೈರ್ಮನುಷ್ಯೈಃ ಸತ್ಯಾಃ ಪದಾರ್ಥಾಃ ಯೇನ ಯಸ್ಮಿನ್ವಾ ಸ ಮಂತ್ರೋ ವೇದಃ ॥]

ವೇದಗಳ ಅಧ್ಯಯನದಿಂದ ಅಜ್ಞಾನ, ಭ್ರಾಂತಿ, ಬುದ್ಧಿಮಾಲಿನ್ಯಾದಿಗಳು ದೂರವಾಗಿ ಮನುಷ್ಯರು ಎಲ್ಲಾ ಸತ್ಯವಿದ್ಯೆಗಳ ಪ್ರಾಪ್ತಿಯಿಂದ ವಿದ್ವಾಂಸರಾಗಿ ಮಹದಾನಂದಕ್ಕೆ ಪಾತ್ರರಾಗುತ್ತಾರೆ. ಆದುದರಿಂದ ವೇದವನ್ನು ಛಂದಸ್ಸೆಂದೂ [ಆನಂದ ದಾಯಕ] ಕರೆಯುತ್ತಾರೆ. [ವೇದಾಧ್ಯಯನೇನ ಸರ್ವವಿದ್ಯಾ ಪ್ರಾಪ್ತೇರ್ಮನುಷ್ಯ ಆಹ್ಲಾದೀ ಭವತಿ, ಸರ್ವಾರ್ಥಜ್ಞಾತಾ ಚಾತಶ್ಛಂದೋ ವೇದಃ ॥ ಛದಿ ಆಹ್ಲಾದ್ನೇ।[೨೪] [ಛಂದಸ್ಸಾದನಾತ್ [ನಿರುಕ್ತ] "ಪರಾಕ್ರಮಣದಿಂದ ಮರೆಮಾಡುವುದರಿಂದ".

[೨೩] ಬ್ರಹ್ಮ ಸೂರ್ಯ ಸಮಂ ಜ್ಯೋತಿಃ ॥ ಯಜುರ್ವೇದ ೨೩–೪೮ ॥

[೨೪] "ವೈಶ್ವದೇವೀಂ ವರ್ಚಸ ಆರಭಧ್ವಂ ಶುದ್ಧಾ ಭವಂತಃ ಶುಚಯಃ ಪಾವಕಾಃ । ಅತಿಕ್ರಾಮಂತೋ ದುರಿತಾ ಪದಾನಿ ಶತಂ ಹಿಮಾಃ ಸರ್ವವೀರಾಮದೇಮ ॥ ಅಥರ್ವವೇದ ೧೨–೨–೨೮ ॥

ವೇದಗಳ ಮೂಲಕ ಜನರಿಗೆ ಎಲ್ಲಾ ಸತ್ಯವಿದ್ಯೆಗಳ ಜ್ಞಾನವು ಚೆನ್ನಾಗಿ ಗಮನಕ್ಕೆ ಬರುತ್ತದೆ. ಆದುದರಿಂದ ವೇದವನ್ನು ನಿಗಮವೆಂದೂ ಕರೆಯುತ್ತಾರೆ. [ನಿಗಚ್ಛಂತಿ ನಿತರಾಂ ಜಾನಂತಿ ಪ್ರಾಪ್ನುವಂತಿ ವಾ ಸರ್ವವಿದ್ಯಾ ಯಸ್ಮಿನ್ ಸ ನಿಗಮೋ ವೇದೋ ಮಂತ್ರಶ್ಚೇತಿ ॥]

ಸಂಹಿತಾ ಶಬ್ದವು 'ಸಂ' ಪೂರ್ವಕ 'ಹಿ' ಧಾತುವಿನಿಂದ ಉತ್ಪನ್ನವಾಗಿದೆ. 'ಹಿ' ಧಾತುವಿಗೆ 'ಗತಿ' ಮತ್ತು 'ವೃದ್ಧಿ' ಅರ್ಥಗಳಿವೆ. ಗತಿ ಶಬ್ದಕ್ಕೂ ಜ್ಞಾನ, ಗಮನ ಮತ್ತು ಪ್ರಾಪ್ತಿಯೆಂಬ ಮೂರು ಅರ್ಥಗಳಿವೆ. ಆದುದರಿಂದ ಸಂಪೂರ್ಣ ಜ್ಞಾನದ ನಿಧಿ, ಜೀವಾತ್ಮರ ಉನ್ನತಿ ಮತ್ತು ಪರಮಗತಿಗೆ ಸಾಧನವಾದ ಸತ್ಯವಿದ್ಯೆಗಳ ಭಂಡಾರ. ಇಹಲೋಕದಲ್ಲಿ ಸುಖಸಮೃದ್ಧಿ ಮತ್ತು ಪರಲೋಕದಲ್ಲಿ ಸದ್ಗತಿಯ ಪ್ರಾಪ್ತಿಗೆ ಸಾಧನವೇ 'ಸಂಹಿತೆಯೆಂದೆನಿಸಿಕೊಂಡಿದೆ. ಇಷ್ಟಲ್ಲದೆ, ದೈವೀವಾಣಿಯಾದ ವೇದಭಾಷೆ ಯಲ್ಲಿ ಇನ್ನೊಂದು ವಿಶೇಷತೆಯಿದೆ. ಏನೆಂದರೆ, ಮನುಷ್ಯರ ಭಾಷೆಯು ಪದವಿಭಾಗ ಅಥವಾ ಸಂಧಿವಿಗ್ರಹಾದಿಗಳಿಂದ ಯುಕ್ತವಾಗಿದೆ. ವೇದಭಾಷೆಯು ಹೀಗಿಲ್ಲ. ಅದು ಗಂಗೆಯ ಜಲಧಾರೆಯಂತೆ ನಿರಂತರ ಪ್ರವಾಹಮಯವಾಗಿದೆ. ಪ್ರತಿ ಪದಗಳೂ, ವರ್ಣಗಳೂ, ಒಂದಕ್ಕೊಂದು ಸಂಧಿಸಿಕೊಂಡಿವೆ. ಪ್ರತಿಯೊಂದು ಪದಾಂತ್ಯದ ವರ್ಣವೂ ಮುಂದಿನ ಪದಾದಿಯ ವರ್ಣದೊಡನೆ, ವರ್ಣಸಂಧಿ ಅಥವಾ ಉದಾತ್ತ, ಅನುದಾತ್ತ, ಮತ್ತು ಸ್ವರಿತಗಳೆಂಬ ತ್ರಿಸ್ವರ್ಯ ಸಂಧಿಗಳಿಂದ ಸೇರಿಕೊಂಡಿದೆ. ಈ ನಿಯಮವು ಪ್ರತಿ ಪದಗಳಿಗೂ, ಪ್ರತಿ ಪಾದಗಳಿಗೂ, ಪ್ರತಿ ಮಂತ್ರ ಹಾಗೂ ಪ್ರತಿ ಸೂಕ್ತಗಳಿಗೂ ಅನ್ವಯಿಸುತ್ತದೆ[೨೫] ಆದುದರಿಂದಲೇ ವೇದ ಮಂತ್ರಗಳ ಅರ್ಥಕ್ಕೂ, ಆಯಾಯ ಮಂತ್ರಗಳ ಛಂದಸ್ಸಿಗೂ ಘನಿಷ್ಠ ಸಂಬಂಧವಿದೆಯೆಂದು ಹೇಳುತ್ತಾರೆ. ಲೌಕಿಕಭಾಷೆ ಯಲ್ಲಿ ಛಂದಸ್ಸಿನ ನಿಯಮಗಳಿಗೂ, ಶ್ಲೋಕಗಳಿಗೂ ಈ ರೀತಿ ಅರ್ಥಸಂಬಂಧವಿದ್ದಂತೆ ಕಾಣುವುದಿಲ್ಲ. ಈ ಕಾರಣದಿಂದಾಗಿಯೂ ವೇದಗಳನ್ನು ಸಂಹಿತೆಗಳೆಂದು ಕರೆಯು ತ್ತಾರೆ.

## ವೇದಗಳ ಮಹಿಮೆ: ಪ್ರಾಚೀನ ಆಚಾರ್ಯರ ದೃಷ್ಟಿಯಲ್ಲಿ:

ಪ್ರಾಚೀನ ಕಾಲದಿಂದಲೂ ಅನೇಕ ಮಂದಿ ವೇದಾಚಾರ್ಯರು ಬಹುವಿಧವಾಗಿ ವೇದಗಳ ಮಹಿಮೆಯನ್ನು ಹಾಡಿದ್ದಾರೆ. ವರ್ಣಾಶ್ರಮ ಧರ್ಮ, ಪುರುಷಾರ್ಥ ಸಾಧನೆ, ಸುಕರ್ಮ, ದುಷ್ಕರ್ಮ, ಅಕರ್ಮ ಅಥವಾ ನಿಷ್ಕರ್ಮ, ಕರ್ತವ್ಯ, ಅಕರ್ತವ್ಯ, ಧರ್ಮ, ಅಧರ್ಮ, ಅಥವಾ ಪಾಪ, ಪುಣ್ಯಾದಿಗಳ ಪ್ರಥಮ ಉಪದೇಶವು ವೇದ ಗಳಲ್ಲಿದೆ. ಆದುದರಿಂದ ವೇದವು ಎಲ್ಲಾ ಧರ್ಮಗಳ ಮೂಲ ಅಥವಾ ಆಧಾರವೆಂದು

---

ಅಂದರೆ, ವೇದಮಂತ್ರಗಳು ಮಾನವರ ಬುದ್ಧಿಯನ್ನು ಪವಿತ್ರ ಮಾಡಬಲ್ಲವು, ದುರಿತಗಳಿಂದ ಪಾರಾಗಲು ಸಹಾಯ ಮಾಡಬಲ್ಲವು ಮತ್ತು ಆನಂದವನ್ನು ಕೊಡಬಲ್ಲವು.

ಸ್ತುತಾ ಮಯಾ ವರದಾ ವೇದಮಾತಾ ಪ್ರ ಚೋದಯಂತಾಂ ಪಾವಮಾನೀ ದ್ವಿಜಾನಾಮ್ । ಆಯುಃ ಪ್ರಾಣಂ ಪ್ರಜಾಂ ಪಶುಂ ಕೀರ್ತಿಂ ದ್ರವಿಣಂ ಬ್ರಹ್ಮವರ್ಚಸಂ ಮಹ್ಯಂ ದತ್ವಾ ವ್ರಜತ ಬ್ರಹ್ಮಲೋಕಮ್ ॥ ಅಥರ್ವವೇದ ೧೯-೭೧-೧ ॥

[೨೫] ಪರಃ ಸನ್ನಿಕರ್ಷಃ ಸಂಹಿತಾ ॥ ಪಾಣಿನೀಯ ಅಷ್ಟಾಧ್ಯಾಯೀ ಸೂತ್ರಪಾಠ ೧-೪-೧೦೯ ॥

ಮಹರ್ಷಿ ಮನುವು ಹೇಳಿರುವನು.[೨೬] ಇಷ್ಟು ಮಾತ್ರವಲ್ಲದೆ, ಮನುಷ್ಯರ ವ್ಯವಹಾರದ ಭಾಷೆಯ ಉದಯವೂ ವೇದಭಾಷೆಯಿಂದಲೇ ಆಯಿತು. ಸೃಷ್ಟಿಯ ಪ್ರಾರಂಭದಲ್ಲಿ ವೇದಗಳಿಂದಲೇ ನಾಮಪದಗಳನ್ನೂ, ಕ್ರಿಯಾಪದಗಳನ್ನೂ ಆರಿಸಿ, ಜನರು ತಮ್ಮತಮ್ಮ ಮಕ್ಕಳು, ನದಿ, ದೇಶ, ಪರ್ವತ, ನಗರ ಮತ್ತು ಕರ್ಮಗಳಿಗೂ, ವ್ಯವಸ್ಥೆಗಳಿಗೂ ಹೆಸರಿಟ್ಟುಕೊಂಡು ಬಂದರು.[೨೭]

ವೇದಗಳು ಸರ್ವ ಸತ್ಯವಿದ್ಯೆಗಳ ಆಧಾರವಾಗಿವೆ.[೨೮] ಇದರಲ್ಲಿರುವ ಜ್ಞಾನವು ಅಪಾರವಾಗಿದೆ, ವಿದ್ಯೆಗಳು ಅನಂತವಾಗಿವೆ. ಆದುದರಿಂದಲೇ 'ಅನಂತಾ ವೈ ವೇದಾಃ[೨೯] ಎಂದು ಹೇಳುತ್ತಾರೆ. ಅಂದರೆ, ಆದಿಭಾಷೆಯ ಮತ್ತು ಆದಿಜ್ಞಾನದ ಸ್ವರೂಪವೇ ವೇದ, ಅಥವಾ ಆದಿಭಾಷೆ ಮತ್ತು ಜ್ಞಾನದ ಮೂಲವೇ ವೇದವೆಂದು ಪ್ರಾಚೀನ ಆಚಾರ್ಯರ ಮತವಾಗಿತ್ತು. ಪ್ರಾರಂಭದಲ್ಲಿ ಮಾನುಷೀ ಭಾಷೆಯು ವೈದಿಕ ಪದ ಬಾಹುಲ್ಯದಿಂದಲೂ, ಉದಾತ್ತಾದಿ ಸ್ವರಗಳಿಂದಲೂ ಯುಕ್ತವಾಗಿದ್ದು, ದೈವೀ ಮತ್ತು ಮಾನುಷೀ ಭಾಷೆಯಲ್ಲಿ ವಿಶೇಷ ಅಂತರವೇನೂ ಇರಲಿಲ್ಲ. ಕಾಲಕ್ರಮೇಣ ಮಾನುಷೀ ವಾಕ್ ದೈವೀ ವಾಕಿನಿಂದ ಬೇರೆಯಾಗುತ್ತಾ ಹೋಯಿತು. ಅಂದರೆ; ದೈವೀವಾಕ್ ಮಂತ್ರಮಯವಾಗಿದ್ದು, ಮಾನುಷೀ ಭಾಷೆಯು ವ್ಯವಹೃತ ಭಾಷೆಯ ರೂಪ ತಾಳಿ, ವಾಕ್ಯರಚನೆ, ಪದಗಳ ಆನುಪೂರ್ವಿ ಇತ್ಯಾದಿಗಳ ದೃಷ್ಟಿಯಲ್ಲಿ, ಮೂಲಭಾಷೆಗಿಂತ ಭಿನ್ನವಾಯಿತು. ಪ್ರಾರಂಭದಲ್ಲಿ, ವೈದಿಕ ಶಬ್ದಬಾಹುಲ್ಯದಿಂದ ಕೂಡಿದ ಮಾನುಷೀ ಭಾಷೆಯನ್ನು ಆತಿ ಭಾಷಾ ಅಥವಾ ಆದಿಭಾಷೆಯೆಂದೂ ಹೇಳುತ್ತಾರೆ. ಇದೇ ಭಾಷೆಯು ಕಾಲಕ್ರಮೇಣ, ಅಂದರೆ, ಮಹರ್ಷಿ ಪಾಣಿನಿಯ ಕಾಲದ ತನಕ [ಹೆಚ್ಚು ಕಡಿಮೆ ಇಂದಿನಿಂದ ಐದು ಸಾವಿರ ವರ್ಷಗಳ ಹಿಂದೆ], ಕೇವಲ, 'ಭಾಷೆ'ಯೆಂದೂ, 'ಆರ್ಯಭಾಷೆ'ಯೆಂದೂ ಕರೆಯಲ್ಪಟ್ಟಿತು. ವೇದಗಳ ಅಸ್ವಾಧ್ಯಾಯ, ಪ್ರಮಾದ, ಆಲಸ್ಯ, ಉಚ್ಚಾರಣಾ ದೋಷ, ತಥಾ ಭೌಗೋಲಿಕ ಕಾರಣಗಳಿಂದ ಮಾನುಷೀ ಭಾಷೆಯೂ ವಿಕೃತ ಅಥವಾ ಅಶುದ್ಧ ರೂಪ ತಾಳಿ ಮ್ಲೇಚ್ಛ ಅಥವಾ ಅನಾರ್ಯ ಭಾಷೆಯೆಂದುಕೊಂಡು ಭಾಷೆಯ ಇನ್ನೊಂದು ವರ್ಗವು ಮಾನುಷೀ ಭಾಷೆಯಲ್ಲಿ ಉದಯವಾಯಿತು. ಆರ್ಯರ

---

[೨೬] [ಎ] ವೇದೋಽಖಿಲೋ ಧರ್ಮಮೂಲಂ ॥ ಮನುಸ್ಮೃತಿ ೨-೬ ॥
[ಬಿ] ಧರ್ಮಜಿಜ್ಞಾಸಮಾನಾನಾಂ ಪ್ರಮಾಣಂ ಪರಮಂ ಶ್ರುತಿಃ ॥ ಮನುಸ್ಮೃತಿ ೨-೧೩ ॥
[ಸಿ] ವಿದಂತ್ಯನೇನ ಧರ್ಮಮಿತಿ ವೇದಃ ॥ ಅಮರಕೋಶ ಟೀಕೆಯಲ್ಲಿ ಕ್ಷೀರಸ್ವಾಮಿ ॥

[೨೭] ಸರ್ವೇಷಾಂ ತು ಸ ನಾಮಾನಿ ಕರ್ಮಾಣಿ ಚ ಪೃಥಕ್ ಪೃಥಕ್ । ವೇದಶಬ್ದೇಭ್ಯ ಏವಾದೌ ಪೃಥಕ್ ಸಂಸ್ಥಾಶ್ಚ ನಿರ್ಮಮೇ ॥ ಮನುಸ್ಮೃತಿ ೧-೨೧ ॥

[೨೮] ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚ ಚತುರ್ದಶ ॥ ಯಾಜ್ಞವಲ್ಕ್ಯ ಸ್ಮೃತಿ ॥

[೨೯] ಭರದ್ವಾಜೋ ಹ ತ್ರಿಭಿರಾಯುರ್ಭಿರ್ಬ್ರಹ್ಮಚರ್ಯಮುವಾಸ । ತಂ ಹ ಜೀರ್ಣಂ ಸ್ಥವಿರಂ ಶಯಾನಂ ಇಂದ್ರ ಉಪವ್ರಜ್ಯೋವಾಚ । ಭರದ್ವಾಜ । ಯತ್ತೇ ಚತುರ್ಥಮಾಯುರ್ದದ್ಯಾಂ ಕಿಮನೇನ ಕುರ್ಯಾ ಇತಿ । ಬ್ರಹ್ಮಚರ್ಯಮೇವೈತೇನ ಚರೇಯಮಿತಿ ಹೋವಾಚ । ತಂ ತ್ರೀನ್ ಗಿರಿರೂಪಾನವಿಜ್ಞಾತಾನಿವ ದರ್ಶಯಾಂಚಕಾರ । ತೇಷಾಂ ಹೈಕೈಕಸ್ಮಾನ್ಮುಷ್ಟಿಮಾದದೇ ॥ ಸ ಹೋವಾಚ ಭರದ್ವಾಜೇತ್ಯಾಮಂತ್ರ್ಯ ವೇದಾ ವಾ ಏತೇ ಅನಂತಾ ವೈ ವೇದಾಃ ಏತೈಸ್ತ್ರಿಭಿರಾಯುರ್ಭಿರನ್ವವೋಚಥಾಃ ಅಥ ತ ಇತರದನೂಕ್ತಮೇವ ॥ ತೈತ್ತಿರೀಯ ಬ್ರಾಹ್ಮಣ ೩-೧೦-೧೧ ॥

ವಂಶದಲ್ಲಿಯೇ ಹುಟ್ಟಿ, ಪತಿತರಾದ ಕಾರಣ ಅನಾರ್ಯ, ದಸ್ಯು, ರಾಕ್ಷಸ, ಪಿಶಾಚ, ಮ್ಲೇಚ್ಛ ಮೊದಲಾದ ಹೆಸರುಗಳನ್ನು ಗಳಿಸಿಕೊಂಡ ವ್ರಾತ್ಯಜಾತಿಗಳಲ್ಲಿ ಅಶುದ್ಧ ಭಾಷೆಯು ಪ್ರಚಾರವಿದ್ದುದರಿಂದ, ಇದು ಸರ್ವಸಾಧಾರಣ ಮಾನುಷೀ ಭಾಷೆಯಿಂದ ಭಿನ್ನವಾದ ಅನಾರ್ಯ ಅಥವಾ ಮ್ಲೇಚ್ಛ ಭಾಷೆಯೆಂದುಕೊಂಡಿತು. ದ್ರವಿಡ, ಆಂಧ್ರ, ಯವನ, ಕಿರಾತ, ಚೀನಾ, ಖಶಾ, ಪಾರದ, ಮೊದಲಾದ ಜನರು ಕೂಡ ಆರ್ಯರ ವಂಶಜರೇ. ಇವರು ಕ್ಷತ್ರಿಯರಾಗಿದ್ದು, ವೇದಗಳ ಜ್ಞಾನವಿಲ್ಲದೆ, ವಿದ್ವಾಂಸರ ಅಭಾವದಿಂದ, ಪ್ರಮಾದ ಆದಿ ದೋಷಗಳಿಂದ ಪತಿತರಾಗಿ ಆರ್ಯರಿಂದ ಬೇರೆ ಯಾದರು. ಸಮಯ ಕಳೆದಂತೆ ಅನಾರ್ಯ ಭಾಷೆಗಳಲ್ಲಿಯೂ ಅನೇಕ ಭೇದಗಳಾದವು. ಪ್ರಪಂಚದಲಿ ಇಂದು ಪ್ರಚಾರದಲ್ಲಿರುವ ಎಲ್ಲಾ ಭಾಷೆಗಳೂ ಅನಾರ್ಯ ಅಥವಾ ಮ್ಲೇಚ್ಛ ಭಾಷೆಗಳಿಂದಲೇ ಉತ್ಪನ್ನವಾಗಿವೆ. ಆರ್ಯ ಭಾಷೆಯಲ್ಲಿಯೂ ವಿದ್ಯಾಶೂನ್ಯ ರಾದವರನು ಶೂದ್ರರೆಂದು ಕರೆಯುತ್ತಿದ್ದರು. ಇವರ ಭಾಷೆಯು ಆರ್ಯ ಭಾಷೆಯ ದೃಷ್ಟಿಯಲ್ಲಿ ಅಶುದ್ಧ ಅಥವಾ ಸಂಸ್ಕಾರಹೀನವಾಗಿತ್ತು. ಕಾಲಕ್ರಮೇಣ ಇವರ ಸಂಖ್ಯೆಯು ಅಧಿಕವಾಗಿ ಬೆಳೆದು, ಸಂಸ್ಕಾರಹೀನವಾದ ಭಾಷೆಯು ಪ್ರಾಕೃತ ಅಂದರೆ, ಜನಸಾಮಾನ್ಯರ ಭಾಷೆಯೆಂದೂ, ವಿದ್ವಾಂಸರೂ, ಶಿಷ್ಟರೂ ಬಳಸುತ್ತಿದ್ದ ಸಂಸ್ಕಾರ ಯುಕ್ತವಾದ ಭಾಷೆಯು ಸಂಸ್ಕೃತ ಅಥವಾ ಶಿಷ್ಟಭಾಷೆಯೆಂದೂ ಪ್ರಸಿದ್ಧವಾಯಿತು. ಪ್ರಾಕೃತ ಭಾಷೆಯಲ್ಲಿಯೂ ಮೊದಲು ಒಂದೆರಡು ವರ್ಗಗಳಿದ್ದು, ಕಾಲಾಂತರದಲ್ಲಿ ಇವುಗಳ ಸಂಖ್ಯೆಯೂ ವೃದ್ಧಿಯಾಯಿತು. ಮಾಗಧೀ, ಅರ್ಧಮಾಗಧೀ, ಪಾಲೀ, ಮಹಾರಾಷ್ಟ್ರೀ, ಶೌರಸೇನೀ, ಮೊದಲಾದ ಭಾಷೆಗಳು ಪ್ರಾರಂಭದ ಪ್ರಾಕೃತ ಅಥವಾ ಅಪಭ್ರಂಶ ಭಾಷೆಗಳಾಗಿದ್ದು, ಉತ್ತರ ಭಾರತದಲ್ಲಿ ಪ್ರಚಲಿತವಾಗಿರುವ ಈಗಿನ ಹಿಂದೀ, ಗುಜರಾಥೀ, ಬಂಗಾಳೀ, ಮರಾಠೀ, ಪಂಜಾಬೀ ಮೊದಲಾದ ಭಾಷೆಗಳೆಲ್ಲಾ ಈ ಅಪಭ್ರಂಶ ಭಾಷೆಗಳಿಂದಲೇ ಹುಟ್ಟಿರುತ್ತವೆ. ಈ ರೀತಿಯಲ್ಲಿ, ಯೂರೋಪ್ ಮೊದಲಾದ ದೇಶಗಳ ಪ್ರಾಚೀನ ಭಾಷೆಗಳು ಅನಾರ್ಯ ಭಾಷೆಗಳಿಂದ ಹುಟ್ಟಿದಂತೆ ಮೇಲ್ನೋಟಕ್ಕೆ ಕಂಡರೂ, ಗ್ರೀಕ್, ಲೇಟಿನ್, ಇಂಗ್ಲಿಷ್, ಫ್ರೆಂಚ್, ರಷ್ಯಿಯನ್, ಅರಬೀ, ಜರ್ಮನ್ ಇತ್ಯಾದಿ ಭಾಷೆಗಳ ಆದಿಮೂಲವು ದೈವೀ ಅಥವಾ ವೇದವಾಣಿಯೇ ಆಗಿದೆ. ಈ ಭಾಷಾ ಇತಿಹಾಸವನ್ನು ಪ್ರಪಂಚದ ಎಲ್ಲಾ ಪ್ರಾಚೀನ ಜನಾಂಗಗಳೂ ಸ್ಮರಣೆಯಲ್ಲಿ ಇಟ್ಟುಕೊಂಡಿವೆ. ಯೂನಾನ್ ದೇಶದ ಹೋಮರ್ [ಕ್ರಿ.ಪೂ. ೮೦೦] ದೈವೀ ಮತ್ತು ಮಾನುಷೀ ಭಾಷೆಯ ಉಲ್ಲೇಖ ಮಾಡಿದ್ದಾನೆ. ಯೂನಾನ್ ದೇಶದ ಪ್ರಾಚೀನ ಕಾಲದ ವಿದ್ವಾಂಸರು, ದೇವತೆ ಅಂದರೆ ಅಗ್ನಿ, ವಾಯು, ಜಲ, ಪೃಥ್ವಿ, ಸೂರ್ಯ, ಚಂದ್ರಮಾದಿಗಳೆಂದು ತಿಳಿದುಕೊಂಡಿದ್ದರು. ಇವೆಲ್ಲಾ ಜಡದೇವತೆ ಗಳಾಗಿದ್ದು, ವೈದಿಕ ವಿಚಾರಕ್ಕನುಸಾರವಾಗಿವೆ.[೩೦] ಮಿಸ್ರದೇಶದಲ್ಲಿಯೂ, ಅಲ್ಲಿಯ ಪ್ರಾಚೀನ ಗ್ರಂಥಗಳಲ್ಲಿ ದೈವೀ ಭಾಷೆಯ ಉಲ್ಲೇಖವಿದೆ.

ಆಧುನಿಕ ಪಾಶ್ಚಾತ್ಯ ಭಾಷಾ ವಿಜ್ಞಾನಿಗಳೂ, ಅವರ ಉಚ್ಛಿಷ್ಟ ಭೋಜೀ ಭಾರತೀಯ ಪಂಡಿತರೂ, ದೈವೀ ಭಾಷೆಯ ರಹಸ್ಯವನ್ನರಿಯದೆ, ಮಂಡಿಸಿದ ಸಿದ್ಧಾಂತ

[೩೦] ಈ ದೇವತೆಗಳ ವಿಸ್ತಾರವಾದ ಚರ್ಚೆಯನ್ನು 'ವೇದಪ್ರಕಾಶ'ದಲ್ಲಿ ಪ್ರಕಾಶಿಸಲ್ಪಟ್ಟ ನಮ್ಮ 'ಯಜ್ಞೇನ ಯಜ್ಞಮಯಜಂತ ದೇವಾಃ' ಈ ಲೇಖನಮಾಲೆಯಲ್ಲಿ ನೋಡಬಹುದು.

ಗಳೆಲ್ಲಾ ಅರ್ಥಶೂನ್ಯವಾಗಿವೆ. "ಭಾಷಾ ವಿಜ್ಞಾನಿಗಳು ಇಂದು ಕೇವಲ ಒಂದು ಮಾತಿನಲ್ಲಿ ಮಾತ್ರ ಏಕಮತದಲ್ಲಿದ್ದಾರೆ: ಅದೇನೆಂದರೆ, ಭಾಷೆಯ ಉತ್ಪತ್ತಿಯ ಪ್ರಶ್ನೆಯು ಇಂದಿಗೂ ತೀರ್ಮಾನವಾಗಲಿಲ್ಲ, ಎಂದು ಇಟಲಿಯ ಪೋರಿಯೋ ಪ್ಯಾ ಹೇಳುತ್ತಾನೆ.[೩೧] ಕೊಲಂಬಿಯಾ ವಿಶ್ವವಿದ್ಯಾಲಯದ ಪ್ರೊಫೆಸರ್ ಎಡ್ಗರ್ ಸ್ಟುರ್ಟವಂಟ್ ಇಷ್ಟರ ತನಕ ಭಾಷೆಯ ಉತ್ಪತ್ತಿಯ ಬಗ್ಗೆ ಸಂಗ್ರಹ ಮಾಡಿದ ಪ್ರಮಾಣಗಳೆಲ್ಲಾ ನಿರರ್ಥಕವಾಗಿವೆಯೆಂದು ಭಾಷಾವಿಜ್ಞಾನಿಗಳು ಸ್ವೀಕರಿಸಿದ್ದಾರೆ, ಎಂದು ಹೇಳುತ್ತಾನೆ.[೩೨] ಆದುದರಿಂದ ವೇದವೇ ಮನುಷ್ಯರ ಆದಿಭಾಷೆ ಮತ್ತು ಆದಿ ಜ್ಞಾನದ ಮೂಲವೆಂಬ ಭಾರತೀಯ ಋಷಿಗಳ ಸಿದ್ಧಾಂತವು ಅಬಾಧಿತವಾಗಿ ನಿಂತಿದೆ.

ವೇದಗಳ ಇನ್ನೊಂದು ಮಹಿಮೆಯೇನೆಂದರೆ, ಅವುಗಳು ಧರ್ಮಾಧರ್ಮಜ್ಞಾನದ ಜಿಜ್ಞಾಸೆಯುಳ್ಳವರಿಗೆ ಪರಮ ಪ್ರಮಾಣವಾಗಿವೆ.[೩೩] ಇಂದು ಸಾಧಾರಣ ಜನರು, ವೇದಗಳನ್ನು ಹಿಂದುಗಳ ಧರ್ಮಗ್ರಂಥಗಳೆಂದು ಹೇಳುವುದುಂಟು. ಅಂದರೆ, ಯಾವ ರೀತಿಯಲ್ಲಿ ಬೈಬಲ್ ಕ್ರೈಸ್ತ ಸಂಪ್ರದಾಯಗಳ, ಕುರಾನ್ ಇಸ್ಲಾಂ ಮತಸಂಪ್ರದಾಯಗಳ, ಗ್ರಂಥಸಾಹೇಬವು ಸಿಕ್ಖರ, ಮತ್ತು ಅವೆಸ್ತಾವು ಪಾರಸಿಗಳ ಧರ್ಮಗ್ರಂಥಗಳೆನಿಸಿಕೊಂಡಿವೆಯೋ ಅದೇ ರೀತಿಯಲ್ಲಿ ವೇದಗಳು ಹಿಂದುಗಳಿಗೆ ಸಂಬಂಧಪಟ್ಟ ಗ್ರಂಥಗಳೆಂದು ಜನರ ವಿಚಾರವಾಗಿದೆ. ಇದು ಸರಿಯಲ್ಲ. ಯಾಕೆಂದರೆ, ಈ ಎಲ್ಲಾ ಗ್ರಂಥಗಳು ಮತಪ್ರಚಾರಕರ ಸ್ವರಚಿತ, ಅಜ್ಞಾನ, ಈರ್ಷ್ಯೆ, ದ್ವೇಷ, ಸಂಕೀರ್ಣ ಮನೋವೃತ್ತಿ ಇತ್ಯಾದಿ ದೋಷಗಳಿಂದ ಕೂಡಿವೆ. ಇವುಗಳಿಗೂ ವೇದಗಳಿಗೂ ಯಾವ ಸಾಮ್ಯತೆಯೂ ಇಲ್ಲ. ಯಾಕೆಂದರೆ, ವೇದಗಳು ಸತ್ಯವಿದ್ಯೆಗಳ ಭಂಡಾರ. ಸತ್ಯವಿದ್ಯೆಯೆಂದರೆ, ಎಲ್ಲಾ ಕಾಲದಲ್ಲಿಯೂ, ಎಲ್ಲಾ ಜನರಿಗೂ ಸಮಾನವಾದ ವಿದ್ಯೆ. ಉದಾಹರಣೆಗಾಗಿ, ಎರಡರಿಂದ ಹತ್ತನ್ನು ಗುಣಿಸಿದರೆ ಇಪ್ಪತ್ತಾಗುತ್ತದೆ. ಇದು, ಹಿಂದೆಯೂ ಇದೇ ರೀತಿಯಲ್ಲಿತ್ತು. ಈಗಲೂ ಸತ್ಯ. ಮುಂದೆಯೂ ಸತ್ಯವಾಗುವುದು. ಭಾರತೀಯರಿಗೂ ಇದೇ ಸರಿ, ಅಮೇರಿಕಾದವರಿಗೂ ಇದೇ ಸತ್ಯ. ಹಿಂದುಗಳಿಗೂ ಇದು ಒಪ್ಪಬೇಕಾದ ಮಾತು, ಕ್ರೈಸ್ತರೂ, ಮುಸಲ್ಮಾನರೂ ಇತರರೂ ಸ್ವೀಕರಿಸಬೇಕಾದ ಮಾತು. ಇಂತಹ ಸಾರ್ವಕಾಲಿಕ, ಸಾರ್ವದೇಶಿಕ ಸತ್ಯಸಿದ್ಧಾಂತಗಳನ್ನೇ ಸತ್ಯವಿದ್ಯೆಯೆಂದು ಹೇಳುತ್ತಾರೆ. ವೇದಗಳು ಇಂತಹ ಸತ್ಯವಿದ್ಯೆಗಳ ಗನಿ. ಪ್ರಾಚೀನ ಮಾನವರ ಧರ್ಮದ ಆಧಾರವೂ ಈ ಸತ್ಯವಿದ್ಯೆಗಳೇ ಆಗಿದ್ದವು.[೩೪] ಒಂದು ವೇಳೆ ಬೈಬಲ್, ಕುರಾನ್ ಇತ್ಯಾದಿಗಳನ್ನು

---

(31) If there is one thing on which all linguists are fully agreed, it is that the problem of the origin of human speech is still unsolved. (The Story of language page 18 London 1952)

(32) After much futile discussion linguists have reached the conclusion that the data with which they are yield little or no evidence about the origin of human speech. (An Introduction to Linguistic Science page 40. New Haven. 1948).

[೩೩] ಮನುಸ್ಮೃತಿ ೨-೧೩.

[೩೪] ಧರ್ಮಶಾಸ್ತ್ರಗಳೂ, ದರ್ಶನ ಗ್ರಂಥಗಳೂ, ಉಪದೇಶಗಳೂ ವೇದಗಳ ಆಧಾರದಿಂದಲೇ ರಚಿಸಲ್ಪಟ್ಟಿವೆ.

ಹೋಲಿಸುವುದಿದ್ದರೆ, ಅವುಗಳನ್ನು ಹಿಂದುಗಳ ಭಾಗವತಾದಿ ಪುರಾಣಗಳಿಗೆ ಹೋಲಿಸಬಹುದು. ಯಾಕೆಂದರೆ, ಇವುಗಳೆಲ್ಲಾ ಪಕ್ಷಪಾತಾದಿ ಅನೇಕ ದೋಷಗಳಿಂದ ತುಂಬಿವೆ. ಈ ಮತಸಂಪ್ರದಾಯಗಳ ಗ್ರಂಥಗಳಿಂದಾಗಿಯೇ ಪ್ರಪಂಚದಲ್ಲಿ ಇಂದು ನಾಸ್ತಿಕತೆ, ಅನಾಚಾರ, ಭ್ರಾಂತಿ, ದ್ವೇಷ, ಜಗಳ, ಅಶಾಂತಿ ಇತ್ಯಾದಿಗಳು ಹರಡಿವೆ. ಮಿಥ್ಯಾಕಲ್ಪಿತ ದೇವ–ದೇವಿಯರ ಉಪಾಸನೆಯೂ ಈ ದುಃಸ್ಥಿತಿಗೆ ತನ್ನ ಕಂತನ್ನು ಧಾರಾಳವಾಗಿಯೇ ಕಟ್ಟಿದೆ.

ವೇದವಿದ್ಯೆಗಳ ಆಧಾರದಿಂದಲೇ ಆದಿ ಮಾನವರು, ಜ್ಞಾನ–ವಿಜ್ಞಾನ, ಕಲಾ–ಕೌಶಲ, ಮತ್ತು ಶಿಲ್ಪಾದಿ ಶಾಸ್ತ್ರಗಳ ಉನ್ನತಿಯನ್ನು ಮಾಡಿದರು.[೩೫] ತ್ರೇತಾಯುಗದಲ್ಲಿ ಇದೇ ರೀತಿ ವಿಶೇಷ ಉನ್ನತಿಯನ್ನು ಜನರು ಪಡೆದಿದ್ದರೆಂದು ಮುಂಡಕೋಪನಿಷತ್ ಹೇಳುತ್ತದೆ.[೩೬] ಈ ರೀತಿ ವಿದ್ವಾಂಸರಿಗೆ ವೇದಗಳಲ್ಲಿ ನಾನಾ ಪ್ರಕಾರದ ವಿದ್ಯೆ ವೈಜ್ಞಾನಿಕರಿಗೆ ಹೊಸ ಹೊಸ ವೈಜ್ಞಾನಿಕ ರಹಸ್ಯಗಳೂ, ಪುರುಷಾರ್ಥಿಗಳಿಗೆ ವಿಭಿನ್ನ ಪ್ರಕಾರದ ನಿಃಶ್ರೇಯಸ್ಕರ ಕರ್ಮಗಳೂ, ಶಿಲ್ಪಿಗಳಿಗೆ ನಾನಾ ಪ್ರಕಾರದ ಯಂತ್ರರಹಸ್ಯಗಳೂ, ಜನಸಾಮಾನ್ಯರಿಗೆ ಧರ್ಮದ ಉಪದೇಶಗಳೂ ಕಂಡುಬರುತ್ತವೆ. ಆದುದರಿಂದಲೇ ವೇದಗಳು ಇವರಿಗೆಲ್ಲಾ ಕಣ್ಣುಗಳಂತೆ ಮಾರ್ಗದರ್ಶನ ಮಾಡುತ್ತವೆಯೆಂದೂ, ನಾಲ್ಕು ವರ್ಣ, ನಾಲ್ಕು ಆಶ್ರಮ, ಮೂರು ಲೋಕ, ಮತ್ತು ಮೂರು ಕಾಲಗಳ ಜ್ಞಾನವು ವೇದಗಳಲ್ಲಿಯೇ ಅಡಕವಾಗಿದೆಯೆಂದೂ ಋಷಿಗಳು ಹೇಳಿದ್ದಾರೆ.[೩೭] ಇಷ್ಟು ಮಾತ್ರ

---

[೩೫] ಕರ್ಮಸಂಪತ್ತಿರ್ಮಂತ್ರೋ ವೇದೇ ॥ ನಿರುಕ್ತ ೧–೨–೭ ॥

[೩೬] ಮಂತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯಂಸ್ತಾನಿ ತ್ರೇತಾಯಾಂ ಬಹುಧಾ ಸಂತತಾನಿ ॥ ಮುಂಡಕೋಪನಿಷತ್ ೧–೨–೧ ॥

[೩೭] ಪಿತೃದೇವ ಮನುಷ್ಯಾಣಾಂ ವೇದಶ್ಚಕ್ಷುಃ ಸನಾತನಂ ॥ ಮನುಸ್ಮೃತಿ ೧೨–೯೪ ॥
ಚಾತುರ್ವರ್ಣ್ಯಂ ತ್ರಯೋ ಲೋಕಾಶ್ಚತ್ವಾರಶ್ಚಾಶ್ರಮಾಃ ಪೃಥಕ್ । ಭೂತಂ ಭವ್ಯಂ ಭವಿಷ್ಯಂ ಚ ಸರ್ವಂ ವೇದಾತ್ಪ್ರಸಿದ್ಧ್ಯತಿ ॥ ಮನುಸ್ಮೃತಿ ೧೨–೯೭ ॥

* ಈ ಮನೂಕ್ತಿಯಲ್ಲಿ [೧೨–೯೭] "ಭೂತಂ ಭವ್ಯಂ ಭವಿಷ್ಯಂ ಚ ಈ ಕಾಲತ್ರಯ ದ್ಯೋತಕ ಶಬ್ದಗಳಿಗೆ ಫುಟ್‌ಪಾಥ್ ಸಂಸ್ಥಿತ ಜ್ಯೋತಿಷ್ಕರ, ಹಸ್ತಸಾಮುದ್ರಿಕರ ಹಾಗೂ "ಶುಕಶಾಸ್ತ್ರ [ಗಿಳಿಯ ಪಂಜರವಾನ್ ಭವಿಷ್ಯತ್ ನಿರ್ಣಯಕಾರರು] ಪ್ರವೀಣರನ್ನು ಸ್ಮರಿಸಬಾರದು. ಕಣಾದರಂತಹ ಮಹಾನ್ ದಾರ್ಶನಿಕರ 'ಕಾಲ'ದ ಪರಿಭಾಷೆಗೆ—"ಅಪರಸ್ಮಿನ್ನಪರಂ ಯುಗಪಚ್ಚಿರಂಕ್ಷಿಪ್ರಮಿತಿ ಕಾಲಲಿಂಗಾನಿ" [ವೈಶೇಷಿಕ:–೧–೨–೬]—"ಹಿಂದಿನದು, ಮುಂದಿನದು, ಒಟ್ಟಿಗೇ ಆದುದು, ತಡವಾದುದು, ಬೇಗನೇ ಆದುದು—ಎಂದು ಯಾವುದಾದರೂ ವಸ್ತುವಿನ ಅಥವಾ ವ್ಯಕ್ತಿಯ, ಸಮಾಜದ ಅಥವಾ ರಾಷ್ಟ್ರದ, ಮತ್ತಿದ ಇಲ್ಲವೇ ಘಟನೆಯ ಬಗೆಗೆ ನಿರ್ದೇಶಿಸುವಿಕೆಯೇ ಕಾಲದ ಕುರುಹು" ಎಂದು ಅನ್ವಾಪೇಕ್ಷಾ ಧಾರದಿಂದ ಲಕ್ಷಣ ಹೇಳಿದ್ದಾರೆ. ತತ್ತ್ವ ಅಥವಾ ಘಟನೆಯೇ ಇಲ್ಲದಾದಾಗ, ಕಾಲದ ಲಕ್ಷಣವೇನೆಂದು ಪ್ರಶ್ನಿಸಿದರೆ, ಇಂದಿನ ವೈಜ್ಞಾನಿಕರಂತೆ—"Space and time refuse to allow any specific definition" "ಆಕಾಶ ಹಾಗೂ ಕಾಲ ಯಾವುದೇ ನಿರ್ದಿಷ್ಟ ಪರಿಭಾಷೆಗೂ ಮಣಿಯುವುದಿಲ್ಲ"—ಎಂದೇ ಹೇಳಬೇಕಾದೀತು? ಇದೂ ಒಂದು ಉತ್ತರವೇ? ಮುಂದುವರಿದು—"ನಿತ್ಯೇಷ್ವಭಾವಾದನಿತ್ಯೇಷು ಭಾವಾತ್ಕಾರಣೇ ಕಾಲಾಖ್ಯೇತಿ" [ವೈಶೇಷಿಕ:–೨–೨–೯]—"ನಿತ್ಯತತ್ತ್ವಗಳಿಗೆ ಸಲ್ಲದು; ಅನಿತ್ಯ ತತ್ತ್ವಗಳಿಗೆ ಸಲ್ಲುವುದು. ಆದ ಕಾರಣ ಕಾರಣಕ್ಕೇ 'ಕಾಲ' ಅನ್ವಯಿಸುವುದು"—ಎಂದಿದ್ದಾರೆ ಕಣಾದರು. ಬೇರೆ ರೀತಿ ಹೇಳುವುದಾದರೆ, "ಈಶ್ವರ–ಜೀವ–ಪ್ರಕೃತಿ

ವಲ್ಲದೆ, ವೇದಶಾಸ್ತ್ರಗಳನ್ನು ಬಲ್ಲವನೇ ಸೇನಾಪತಿ, ನ್ಯಾಯಾಧೀಶ, ಅಥವಾ ಚಕ್ರವರ್ತಿ ರಾಜನಾಗಲು ಯೋಗ್ಯನೆಂದೂ, ಇತರರು ಅಯೋಗ್ಯರೆಂದೂ, ಇವರು ಸ್ಪಷ್ಟವಾಗಿ ಘೋಷಣೆ ಮಾಡಿದ್ದಾರೆ.[೩೮] ಈ ಆದರ್ಶದ ಪಾಲನೆಯಾದಷ್ಟು ಕಾಲ ಭಾರತವು ಸ್ವರ್ಣಭೂಮಿ ಅಥವಾ ಸ್ವರ್ಗವೆನಿಸಿಕೊಂಡಿತ್ತು. ಮತ್ತೆ ಮೂರ್ಖರು ಶಾಸಕರಾದಂತೆ ದೇಶದ ಅಧೋಗತಿಯೂ ಆಗಿ ಹೋಯಿತು.

ವೇದಜ್ಞಾನದ ಇನ್ನೊಂದು ಮಹತ್ವಪೂರ್ಣವಾದ ಮಾತೇನೆಂದರೆ, ಅದರಲ್ಲಿ ಪರಿಶೋಧಕ ಅಥವಾ ಶುದ್ಧಿಕಾರಕ ಗುಣವೂ ಇದೆ. ಯಾವ ರೀತಿಯಲ್ಲಿ ಅಗ್ನಿಯು ಪ್ರಬಲವಾದಾಗ, ಹಸಿ ಮರಗಿಡಗಳನ್ನೂ ಕೂಡ ಸುಡುತ್ತದೆಯೋ, ಅದೇ ರೀತಿ ವೇದಜ್ಞನು ತನ್ನ ಬುದ್ಧಿದೋಷ ಕರ್ಮದೋಷಾದಿಗಳನ್ನು ದೂರ ಮಾಡಿ ಆರ್ಯನಾಗುತ್ತಾನೆ; ಅಂದರೆ ಶ್ರೇಷ್ಠನಾಗುತ್ತಾನೆ.[೩೯] ಆದುದರಿಂದ ದ್ವಿಜರಾದವರು ಸದಾ ಕಾಲವೂ ವೇದವನ್ನೇ ಅಧ್ಯಯನ ಮಾಡಬೇಕು. ವಿಪ್ರರಾದವರಿಗೆ ವೇದಗಳ ಅಧ್ಯಯನ ಪ್ರಚಾರ ಮತ್ತು ವೇದಾನುಕೂಲ ವ್ಯವಹಾರವೇ ಪರಮ ತಪಸ್ಸು.[೪೦] ವೇದಗಳನ್ನು ಓದದೆ, ಇತರ ಅನ್ಯೈಚಿಕ ಅಥವಾ ಅನಾರ್ಯ ಗ್ರಂಥಗಳನ್ನು ಎಷ್ಟು ಓದಿದರೂ, ವೇದಾಧ್ಯಯನದ ಪ್ರಭಾವದಿಂದ ವ್ಯಸನಾದವನೂ ತನ್ನ ಪರಿವಾರ ಸಮೇತ ಪತಿತ

---

ಗಳಿಗೆ ಕಾಲ ಹೊಂದದು; ಕಾರ್ಯರೂಪ ಜಗತ್ತು ಹಾಗೂ ನಿತ್ಯನೇ ಆದರೂ ಆ ಜಗತ್ತಿನ ಸಂಪರ್ಕಕ್ಕೆ ಆಸಕ್ತ ಶರೀರದ ಮೂಲಕ ಸಿಕ್ಕುವುದರಿಂದ ಸದೇಹ ಜೀವರು—ಇವುಗಳಿಗೆ ವ್ಯವಹಾರಾರ್ಥ ಬಹಳ ಬಳಸುವುದಾದುದರಿಂದ, ಕಾರಣವನ್ನೇ 'ಕಾಲ'ವೆನ್ನಬಹುದು"—ಎನ್ನಬಹುದು. ಮಹರ್ಷಿ ದಯಾನಂದರು "ಸತ್ಯಾರ್ಥ ಪ್ರಕಾಶ"ದಲ್ಲಿ ಈಶ್ವರ ಹಾಗೂ ಪ್ರಕೃತಿಸೃಷ್ಟಿ ಕುರಿತು ವಿಸ್ತಾರವಾಗಿ ಬರೆದಿದ್ದಾರೆ. ಪಾಶ್ಚಾತ್ಯ ದಾರ್ಶನಿಕನೊಬ್ಬ ಕಾಲದ ವಿಷಯ ಚರ್ಚಿಸುತ್ತಾ "We can think of the past, guess or roughly comprehend about the future, but we can only live in the present.—"ಭೂತಕಾಲದ ಬಗೆಗೆ ಯೋಚಿಸಬಹುದು; ಭವಿಷ್ಯತ್ತಿನ ವಿಷಯವನ್ನು ಊಹಿಸಬಹುದು ಅಥವಾ ಅಸ್ಪಷ್ಟ ವಾಗಿ ಏನಾದರೂ ಕಲ್ಪನೆ ಮಾಡಬಹುದು; ಆದರೆ—ವರ್ತಮಾನದಲ್ಲಿ ಜೀವಿಸಲು ಮಾತ್ರ ಸಾಧ್ಯ" ಎಂದಿದ್ದಾನೆ. ಇದು ಹಕ್ಸ್ಲೇ—ಎಂಬ ದಾರ್ಶನಿಕನ ನಿರ್ಧಾರ. ಉರುಳಿದ ಒಂದೊಂದು ಕ್ಷಣವೂ ಅತೀತಗತವಾಗಿ ಹೋಗುವುದರಿಂದ, ವರ್ತಮಾನದ ಬಗೆಗೆ ಏನನ್ನೂ ಹೇಳಲಾಗದು—ಎಂಬುದಾತನ ಭಾವನೆ. ಅದು ತಪ್ಪಲ್ಲ. ಆದರೆ ಮೇಲೆ ಉದ್ಧೃತವಾದ "ಭೂತಂ, ಭವ್ಯಂ, ಭವಿಷ್ಯಂಚ" ಎಂಬ ಮನೂಕ್ತಿಗಳಿಗೆ ಎಲ್ಲಾ ಕಾಲಗಳಲ್ಲಿಯೂ ಸಂಭವಿಸಬಹುದಾದ ಘಟನೆಗಳನ್ನೆಲ್ಲಾ ವೇದಜ್ಞನು, ಆ ಮೂರರ ಪರಸ್ಪರಾಪೇಕ್ಷತ್ವದ ಪ್ರಭಾವದಿಂದ ಗ್ರಹಿಸಬಲ್ಲನು—ಎಂದೇ ಅರ್ಥ ಮಾಡಬೇಕು. ವರ್ತಮಾನ ಕ್ಷಣಮಾತ್ರದಲ್ಲೇ ಅತೀತವಾಗಿ ಹೋಗಿ, ಮಾನವೀಯ ಸ್ವಭಾವ ಸರ್ವದಾ ಏಕರೂಪವಾದ ಕಾರಣ, ಅದರ ಆಧಾರದ ಮೇಲೆ ಭವಿಷ್ಯದ ಊಹೆ ಸಂಭವ.—ಎಂಬುದೇ ತಾತ್ಪರ್ಯ.

[೩೮] ಸೇನಾಪತ್ಯಂ ಚ ರಾಜ್ಯಂ ಚ ದಂಡನೇತೃತ್ವಮೇವ ಚ । ಸರ್ವಲೋಕಾಧಿಪತ್ಯಂ ಚ ವೇದಶಾಸ್ತ್ರವಿದರ್ಹತಿ ॥ ಮನುಸ್ಮೃತಿ ೧೨-೧೦೦ ॥

[೩೯] ಯಥಾ ಜಾತಬಲೋ ವಹ್ನಿರ್ದಹತ್ಯಾರ್ದ್ರಾನಪಿ ದ್ರುಮಾನ್ । ತಥಾ ದಹತಿ ವೇದಜ್ಞಃ ಕರ್ಮಜಂ ದೋಷಮಾತ್ಮನಃ ॥ ಮನುಸ್ಮೃತಿ ೧೨-೧೦೧ ॥

[೪೦] ವೇದಮೇವ ಸದಾಭ್ಯಸ್ಯೇತ್ತಪಸ್ತಪ್ಸ್ಯಂದ್ವಿಜೋತ್ತಮಃ । ವೇದಾಭ್ಯಾಸೋ ಹಿ ವಿಪ್ರಸ್ಯ ತಪಃ ಪರಮಿಹೋಚ್ಯತೇ ॥ ಮನು. ೨-೧೬೬ ॥

# ವೇದಗಳ ಪರಿಮಾಣ

ವೇದಗಳು ನಾಲ್ಕೆಂದು ಪ್ರಸಿದ್ಧವಾಗಿದ್ದರೂ ಕೆಲವು ಕಡೆ ಮೂರು, ಕೆಲವು ಕಡೆ ಎರಡು, ಮತ್ತು ಕೆಲವು ಕಡೆ ಒಂದೇ ವೇದದ ಉಲ್ಲೇಖವಿರುವುದನ್ನೂ ಕಾಣಬಹುದು. ಇಷ್ಟು ಮಾತ್ರವಲ್ಲದೆ, ಇನ್ನು ಕೆಲವು ಗ್ರಂಥಗಳಲ್ಲಿ ವೇದಗಳು ಅನಂತವೆಂದೂ ಹೇಳಿದ್ದಾರೆ. ಈ ರೀತಿ ಈ ವಾಕ್ಯಗಳಲ್ಲಿ ತೋರಿಸಿದ ಪರಸ್ಪರ ವಿರೋಧಾಭಾಸವಿದ್ದಂತೆ ಕಂಡುಬರುತ್ತದೆ. ಆದರೆ, ನಿಜವಾಗಿ ಇಲ್ಲಿ ಏನೂ ವಿರೋಧಾಭಾಸವಿಲ್ಲ. ಪ್ರಕರಣಾನುಸಾರವಾಗಿ ವೇದ ಶಬ್ದದ ಅರ್ಥವನ್ನು ತಿಳಿದುಕೊಳ್ಳಬೇಕು.

ಸರ್ವಾನುಕ್ರಮಣಿಕೆಯಲ್ಲಿ, ನಾಲ್ಕೂ ವೇದಗಳಲ್ಲಿಯೂ ವಿನಿಯೋಗದ ದೃಷ್ಟಿಯಿಂದ ಋಕ್, ಯಜುಸ್ ಮತ್ತು ಸಾಮವೆಂಬ ಮೂರೇ ಪ್ರಕಾರದ ಮಂತ್ರಗಳಿವೆಯೆಂದು ಬರೆದಿದ್ದಾರೆ[೧] ಅರ್ಥಕ್ಕನುಸಾರವಾಗಿ ಪಾದವ್ಯವಸ್ಥೆಯಿರುವ ಮಂತ್ರಗಳನ್ನು ಋಕ್, ಗಾಯನಯೋಗ್ಯವಾದುದು ಸಾಮ, ಮತ್ತು ಉಳಿದ ಮಂತ್ರಗಳನ್ನು ಯಜುಸ್ ಎಂದು ಮೀಮಾಂಸಾ ದರ್ಶನದಲ್ಲಿ ಹೇಳಿದ್ದಾರೆ.[೨] ಆದರೆ, ಇಲ್ಲಿ ಮಂತ್ರಗಳ ಸ್ವರೂಪ [nature of the hymns]ಕ್ಕನುಸಾರವಾಗಿ ಅವುಗಳನ್ನು ಋಕ್, ಯಜುಸ್ ಮತ್ತು ಸಾಮವೆಂಬ ಹೆಸರುಗಳಿಂದ ಕರೆದಿದ್ದಾರೆ. ಮಹಾಭಾರತದಲ್ಲಿ[೩] ನಾಲ್ಕೂ ವೇದಗಳಲ್ಲಿ ಮೂರು ಪ್ರಕಾರದ ವಿದ್ಯೆಗಳಿವೆಯೆಂದು ಹೇಳಿದೆ. ಜ್ಞಾನ, ಕರ್ಮ ಮತ್ತು ಉಪಾಸನೆಗಳು ತ್ರೈವಿದ್ಯೆಯೆನಿಸಿಕೊಂಡಿವೆ.[೪] ಮನುಸ್ಮೃತಿಯಲ್ಲಿಯೂ ವೇದಗಳ ಈ ತ್ರೈವಿದ್ಯೆಯ ಉಲ್ಲೇಖವಿದೆ. ಈ ರೀತಿ ವೇದಗಳಲ್ಲಿ ಮೂರೇ ಪ್ರಕಾರದ ಮಂತ್ರಗಳೂ, ಮೂರೇ ಪ್ರಕಾರದ ವಿದ್ಯೆಗಳೂ ಇರುವಾಗ, ನಾಲ್ಕು ವೇದಗಳ ಅಸ್ತಿತ್ವಕ್ಕೆ ಕಾರಣವಾದರೂ ಏನು? ಈ ಪ್ರಶ್ನೆಗೆ ಮಹರ್ಷಿ ದಯಾನಂದರು ಹೀಗೆ ಉತ್ತರಕೊಟ್ಟಿದ್ದಾರೆ:—

**ಋಗ್ವೇದೇ[೫] ಸರ್ವೇಷಾಂ ಪದಾರ್ಥಾನಾಂ ಗುಣಪ್ರಕಾಶಃ ಕೃತೋಽಸ್ತಿ—**

"ಋಗ್ವೇದದಲ್ಲಿ ಸಮಸ್ತ ವಸ್ತುಗಳ ಗುಣಗಳ ಪ್ರಕಾಶನ ಮಾಡಲ್ಪಟ್ಟಿದೆ"- ಎಂದಾರಂಭಿಸಿ,

[೧] ವಿನಿಯೋಕ್ತವ್ಯರೂಪಶ್ಚ ತ್ರಿವಿಧಃ ಸಂಪ್ರದರ್ಶ್ಯತೇ ।
ಋಗ್ಯಜುಃಸಾಮರೂಪೇಣ ಮಂತ್ರೋ ವೇದಚತುಷ್ಟಯೇ ॥

[೨] ತೇಷಾಮೃಗ್ಯತ್ರಾರ್ಥವಶೇನ ಪಾದವ್ಯವಸ್ಥಾ । ಗೀತಿಷು ಸಾಮಾಖ್ಯಾ ।
ಶೇಷೇ ಯಜುಃ ಶಬ್ದಃ ॥

[೩] ತ್ರಯೀ ವಿದ್ಯಾಮವೇಕ್ಷೇತ ವೇದೇ ಸೂಕ್ತಮಥಾಂಗತಃ ।
ಋಕ್ಸಾಮವರ್ಣಾಕ್ಷರತೋ ಯಜುಷೋಽಥರ್ವಣಸ್ತಥಾ ॥

[ಮಹಾಭಾರತ, ಶಾಂತಿಪರ್ವ, ೧೩೫]

[೪] ಮನುಸ್ಮೃತಿ, ಅಧ್ಯಾಯ ೧೨, ಶ್ಲೋಕ ೧೧೧.

[೫] ಋಗ್ವೇದೇ ಸರ್ವೇಷಾಂ ಪದಾರ್ಥಾನಾಂ ಗುಣಪ್ರಕಾಶಃ ಕೃತೋಽಸ್ತಿ, ತಥಾ ಯಜುರ್ವೇದೇ ವಿದಿತಾನಾಂ ಪದಾರ್ಥಾನಾಂ ಸಕಾಶಾತ್ ಕ್ರಿಯಾಯೋಗಾನೇಕವಿಧ್ಯೋಪಕಾರ ಗ್ರಹಣಾಯ ವಿಧಾನಂ ಕೃತಮಸ್ತಿ, ತಥಾ ಸಾಮವೇದೇ ಜ್ಞಾನಕ್ರಿಯಾವಿದ್ಯಯೋರ್ದೀರ್ಘ ವಿಚಾರೇಣ ಫಲಾವಧಿಪರ್ಯಂತಂ ವಿದ್ಯಾವಿಚಾರಃ । ಅಥರ್ವವೇದೇಽಪಿ ತ್ರಯಾಣಾಂ ವೇದಾನಾಂ ಮಧ್ಯೇ ಯೋ ವಿದ್ಯಾವಿಚಾರೋ ವಿಹಿತೋಽಸ್ತಿ ತಸ್ಯ ಪೂರ್ತಿಕರಣೇನ ರಕ್ಷಣೋನ್ನತೀ ವಿಹಿತೇ ಸ್ತಃ । ಏತದರ್ಥಂ ವೇದಾನಾಂ ಚತುಷ್ಟಯೀ ವಿಭಾಗಾಃ ಸಂತಿ ॥

ಮತ್ತು ಯಜುರ್ವೇದದಲ್ಲಿ ಹೀಗೆ ಪ್ರಕಾಶಿತವಾದ ಗುಣಗಳನ್ನುಳ್ಳ ಪದಾರ್ಥಗಳಿಂದ ಅದಕ್ಕನುಸಾರ ಕ್ರಿಯಾತ್ಮಕವಾಗಿ ಅನೇಕ ವಿದ್ಯಾಧಾರದಿಂದ ಉಪಕಾರವನ್ನು ಗ್ರಹಿಸುವ ವಿಧಾನ ನಿರೂಪಿಸಲ್ಪಟ್ಟಿದೆ. ಹಾಗೆಯೇ ಸಾಮವೇದದಲ್ಲಿ ಪದಾರ್ಥಸ್ವರೂಪಜ್ಞಾನ ಮತ್ತು ತದನುವರ್ತೀ ಕ್ರಿಯೆ—ಎಂಬೀ ಎರಡು ವಿದ್ಯೆಗಳ ದೀರ್ಘವಾದ ಚಿಂತನದಿಂದ, ಫಲಪ್ರಾಪ್ತಿಯಾಗುವ ವರೆಗೆ ವಿದ್ಯೆಯ ಹಂತ–ಹಂತಗಳ ಬಗೆಗೂ ಪರ್ಯಾಲೋಚನ. ಅದೇ ರೀತಿ ಅಥರ್ವ ವೇದದಲ್ಲಿಯೂ, ಮೊದಲು ಹೇಳಿದ ಮೂರು ವೇದಗಳಲ್ಲಿ ಯಾವ ವಿದ್ಯಾಫಲ ವಿಷಯು ಮಂಡಿಸಲ್ಪಟ್ಟಿದೆಯೋ ಅದರ ಗ್ರಹಿಕೆಯನ್ನು ಮನಸ್ತೃಪ್ತಿ ಪರ್ಯಂತ ಪಡೆಯಲು ಉಪರ್ಯುಕ್ತ ವೇದತ್ರಯದ ಭಾಷಾಗಾಂಭೀರ್ಯ–ಪದಯೋಜನ ಪ್ರಾಗಲ್ಭ್ಯ ಹಾಗೂ ಕಥನ ಪ್ರೌಢಿಮೆಯಿಂದಾಗಿ [ಬುದ್ಧಿ ದೃಷ್ಟಿಯಿಂದಲೂ, ಆಚಾರ ಶುದ್ಧಿಯ ದೃಷ್ಟಿಯಿಂದಲೂ] ವೇದಾಧ್ಯಯನಕ್ಕೆ ಅಧಿಕಾರಿಗಳಾದರೂ ವಿಶೇಷ ಪ್ರಕಾಶಾಕಾಂಕ್ಷಿಗಳಿಗೆ ಜ್ಞಾನಾದಾನ ಸಾಮರ್ಥ್ಯವನ್ನು ಮತ್ತಷ್ಟು ಒದಗಿಸಿ, ವೇದಾರ್ಥ ಜಿಜ್ಞಾಸುಗಳ* ರಕ್ಷಣೆ ಹಾಗು ಉನ್ನತಿಗಳ ವಿಧಾನ ಅಭಿವರ್ಣಿತವಾಗಿವೆ. ಈ ಮೊದಲಾದುವುಗಳ ಸಲುವಾಗಿ, ವೇದಗಳೂ ನಾಲ್ಕು ವಿಭಾಗಗಳಿವೆ." [ಋಷಿಕೃತ ಋಗ್ವೇದಾದಿ ಭಾಷ್ಯ ಭೂಮಿಕೆಯ ಪ್ರಶ್ನೋತ್ತರ ಪ್ರಕರಣವನ್ನು ನೋಡಿರಿ.]

ಐತರೇಯ ಬ್ರಾಹ್ಮಣದಲ್ಲಿ **"ತ್ರಯೋ ವೇದಾ ಅಜಾಯಂತ। ಋಗ್ವೇದ ಏವಾಗ್ನೇರಜಾಯತ। ಯಜುರ್ವೇದೋ ವಾಯೋಃ ಸಾಮವೇದ ಆದಿತ್ಯಾತ್**"–ಎಂದು ಹೇಳಿದೆ. **ಅಗ್ನೇ ಋಚೋ ವಾಯೋರ್ಯಜೂಂಷಿ ಸಾಮಾನ್ಯಾದಿತ್ಯಾತ್** "–ಎಂದು ಛಾಂದೋಗ್ಯೋಪನಿಷತ್ತಿನಲ್ಲಿ ಕಂಡುಬರುತ್ತದೆ. **"ತೇಭ್ಯಸ್ತಪ್ತೇಭ್ಯಃತ್ರಯೋ ವೇದಾ ಅಜಾಯಂತಾಗ್ನೇರ್ಋಗ್ವೇದೋ ವಾಯೋರ್ಯಜುರ್ವೇದಃ ಸೂರ್ಯಾತ್ಸಾಮ ವೇದಃ**" ಎಂದಿದೆ ಶತಪಥದಲ್ಲಿ.

ಮಹರ್ಷಿ ಮನುಗಳು ಕೂಡ **"ಅಗ್ನಿವಾಯುರವಿಭ್ಯಸ್ತು ತ್ರಯೋ ಬ್ರಹ್ಮ ಸನಾತನಂ। ದುದೋಹ ಯಜ್ಞಸಿದ್ಧ್ಯರ್ಥಮೃಗ್ಯಜುಃ ಸಾಮಲಕ್ಷಣಂ**" ಎಂದು ಮೂರೇ ವೇದಗಳ ಹೆಸರನ್ನು ಎತ್ತಿದ್ದಾರೆ. ಆದರೆ, ಈ ಮೂರು ಸಂಜ್ಞೆಗಳು ಮಂತ್ರಗಳ ಮೂರು ಪ್ರಕಾರದ ಲಕ್ಷಣಗಳ ದ್ಯೋತಕವೆಂದೂ ಸ್ಪಷ್ಟೀಕರಿಸಿದ್ದಾರೆ. ಆದುದರಿಂದ ಎಲ್ಲೆಲ್ಲಿ, ಮೂರು ವೇದಗಳ ಉಲ್ಲೇಖವಿದೆಯೋ, ಅಲ್ಲಿ ಮೂರು ವೇದಗಳ ತಾತ್ಪರ್ಯ ಮೂರು ಪ್ರಕಾರದ ಮಂತ್ರಗಳೆಂದೇ ತಿಳಿದುಕೊಳ್ಳಬೇಕಲ್ಲದೆ, ಅಥರ್ವ

---

[ಋಗ್ವೇದಾದಿ ಭಾಷ್ಯಭೂಮಿಕಾ, ಪ್ರಶ್ನೋತ್ತರ ವಿಷಯಃ]

ಋಗ್ವೇದ ಮಂತ್ರಗಳನ್ನು ದ್ರುತ ವೃತ್ತಿಯಲ್ಲಿಯೂ, ಯಜುರ್ವೇದದ ಮಂತ್ರಗಳನ್ನು ಮಧ್ಯಮ ವೃತ್ತಿಯಲ್ಲಿಯೂ, ಸಾಮವೇದದ ಮಂತ್ರಗಳನ್ನು ವಿಲಂಬಿತ ವೃತ್ತಿಯಲ್ಲಿಯೂ, ಮತ್ತು ಅಥರ್ವವೇದದ ಮಂತ್ರಗಳನ್ನು ಈ ಮೂರೂ ವೃತ್ತಿಗಳಿಂದಲೂ ಪಾಠಮಾಡಬೇಕೆಂದು ಸ್ವಾಮಿ ದಯಾನಂದರು ಉಕ್ತಗ್ರಂಥದಲ್ಲಿ ಹೇಳಿದ್ದಾರೆ.

ಮಹರ್ಷಿ ದಯಾನಂದರ 'ರಕ್ಷಣೋನ್ನತೀ ವಿಹಿತಾಸ್ತಃ'—"ರಕ್ಷಣ ಮತ್ತು ಉನ್ನತಿಗಳು ವಿಹಿತವಾಗಿವೆ"—ಎಂಬ ಮಾತುಗಳಿಗೆ, ಮುನ್ನ ಹೇಳಿದ ಋಗ್ಯಜುಃಸಾಮ ವೋಕ್ತ ವಿದ್ಯೆಗಳ ರಕ್ಷಣ ಮತ್ತು ಉನ್ನತಿ—ಎಂದಾದರೂ ಹೇಳಬಹುದು. ಆದರೆ ಈ ಎಲ್ಲದರ ಮಾಧ್ಯಮದಿಂದ 'ಜಿಜ್ಞಾಸುಗಳ ರಕ್ಷಣೋನ್ನತಿಗಳು—ಎಂಬುದೇ ಅಧಿಕ ಗ್ರಾಹ್ಯವೆಂದು ತೋರುತ್ತದೆ. ಸಾಧಕನ ಸ್ಥಾನ ಸಾಧನದ ಸಾಧನಕ್ಕಿಂತ ಹೆಚ್ಚು ಉನ್ನತ—ಎಂಬುದೇ ಕಾರಣ.

ವೇದದ ಉತ್ಪತ್ತಿಯು ಬಹುಕಾಲದ ಬಳಿಕವಾಯಿತೆಂದು ಅನುಮಾನ ಪ್ರಮಾಣಕ್ಕೆ ಶರಣಾಗಿ, ಭ್ರಾಂತರಾಗಬೇಕಾಗಿಯೇ ಇಲ್ಲ.

ಋಗ್ವೇದವೇ ನಾಲ್ಕು ವೇದಗಳ ಹೆಸರನ್ನು ಹೇಳುತ್ತದೆ.[೬] ಇತರ ವೇದಗಳೂ ನಾಲ್ಕು ವೇದಗಳ ಉಲ್ಲೇಖ ಮಾಡುತ್ತವೆ.[೭] ಗೋಪಥ ಬ್ರಾಹ್ಮಣವೂ "**ಚತ್ವಾರೋ ವಾ ಇಮೇ ವೇದಾ ಋಗ್ವೇದೋ ಯಜುರ್ವೇದಃ ಸಾಮವೇದೋ ಬ್ರಹ್ಮ ವೇದಃ**" ಎಂದು ಹೇಳುತ್ತದೆ. ಮಹರ್ಷಿ ಪತಂಜಲಿಯೂ ವ್ಯಾಕರಣ ಮಹಾಭಾಷ್ಯದಲ್ಲಿ '**ಚತ್ವಾರೋ ವೇದಾಃ**' ಎಂದು ಹೇಳಿದ್ದಾರೆ. ಆದುದರಿಂದ ವೇದಸಂಹಿತೆಗಳು ನಾಲ್ಕು ಮತ್ತು ಇವೆಲ್ಲಾ ಸೃಷ್ಟಿಯ ಆರಂಭದಲ್ಲಿಯೇ ಪ್ರಕಟವಾಗಿವೆಯೆಂಬ ಮಾತು ಅನೇಕ ಶಬ್ದ ಪ್ರಮಾಣಗಳಿಂದ ಸ್ಪಷ್ಟವಾಗುತ್ತದೆ.

ಉಕ್ತ ನಾಲ್ಕು ಸಂಹಿತೆಗಳ ಸಂಜ್ಞೆಯ ಕುರಿತಾಗಿ ಈ ಕೆಳಗಿನ ವಿಚಾರಗಳು ಪ್ರಸಿದ್ಧ ವಾಗಿವೆ.

"**ಋಚ್‌ಸ್ತುತೌ**"—ಧಾತುವಿನಿಂದ 'ಋಕ್' ಪದದ ಉತ್ಪತ್ತಿಯಾಗಿದೆ. ಗುಣದೋಷಗಳ ಯಥಾರ್ಥ ವರ್ಣನೆಯೇ ಸ್ತುತಿ. ಮಹರ್ಷಿ ದಯಾನಂದರು "ಸತ್ಯಾರ್ಥ ಪ್ರಕಾಶ"ದ ಚತುರ್ಥ ಸಮುಲ್ಲಾಸದಲ್ಲಿ "**ಗುಣೇಷು ಗುಣಾರೋಪಣಂ ದೋಷೇಷು ದೋಷಾರೋಪಣಂ ಚ ಸ್ತುತಿಃ**"—ಎಂದರೆ—"ಗುಣಗಳಲ್ಲಿ ಗುಣಗಳನ್ನೇ ಪ್ರತಿ ಪಾದಿಸುವುದು ದೋಷಗಳಲ್ಲಿ ದೋಷಗಳನ್ನೇ ಪ್ರತಿಪಾದಿಸುವುದು 'ಸ್ತುತಿ'—ಎಂದಿ ದ್ದಾರೆ. ಹೀಗೆ, ಗುಣ–ಗುಣಿಗಳ ಸತ್ಯವಾದ ವರ್ಣನೆಯೇ ಸ್ತುತಿ. ಆದುದರಿಂದ ಋಗ್ವೇದದಲ್ಲಿ ವಸ್ತುತಃ ಆಧ್ಯಾತ್ಮಿಕ ಜ್ಞಾನವೇ ಇದ್ದರೂ ಆಧ್ಯಾತ್ಮ ವಿದ್ಯಾ ಪ್ರಚಲನವೂ ಸಾಂಸಾರಿಕ ವಸ್ತುಗಳೊಂದಿಗೂ ಸಂಬಂಧಯುಕ್ತವಾಗಿರುವ ಕಾರಣ, ಅಥರ್ವವೇದದ ಪ್ರಧಾನ ಪ್ರತಿಪಾದ್ಯ ವಿಷಯವಾದ ವಿಜ್ಞಾನವೂ ಬೀಜರೂಪ ದಲ್ಲಿರುವುದರಿಂದ ಬೀಜರೂಪದಲ್ಲಿ ಅಡಕವಾಗಿದೆ—ಎಂಬ ಮತವೂ ಇದೆ.

"**ಯಜುಷ್**" ಶಬ್ದವು 'ಯಜ್'* ಧಾತುವಿನಿಂದ ವ್ಯುತ್ಪನ್ನವಾಗಿದೆ. ಈ ಧಾತುವಿಗೆ 'ದೇವಪೂಜಾ, ಸಂಗತಿಕರಣ, ದಾನ'—ಎಂಬರ್ಥಗಳಿವೆ. ವೈದಿಕ ಕ್ರಿಯೆ ಗಳೆಲ್ಲಾ ಈ ಮೂರರಲ್ಲಿಯೇ ನಿಹಿತವಾಗಿವೆ. "ಯಜ್" ಧಾತುವಿನ ಕೇಂದ್ರೀಯ ಅರ್ಥವಾದ "ಸಂಗತಿಕರಣಕ್ಕೆ ಮುಖ್ಯತಃ ಎರಡು ಅರ್ಥ ಹೇಳಬಹುದು. "ಸಂಗತಿ ಕರಣ"—ಎಂದರೆ ಒಟ್ಟಾಗಿ, ಐಕಮತ್ಯದಿಂದ, ಹಿಂದೆ ಬಿದ್ದವರನ್ನೂ ಒಳಿತಾಗಿ ಒಗ್ಗೂಡಿಸಿಕೊಂಡು ಮುನ್ನಡೆಯುವುದು—ಒಂದರ್ಥ; "ಸಂಗತಿ + ಕರಣ"—ಎಂದರೆ ನಾನಾ ಭೌತಿಕ ದ್ರವ್ಯಗಳ ಸಂಪುತ್ರಣದಿಂದ ನವ–ನವ ವೈಜ್ಞಾನಿಕ ಆವಿಷ್ಕಾರಗಳನ್ನು

[೬] ಋಗ್ವೇದ, ಮಂಡಲ ೧೦, ಸೂಕ್ತ ೯೦, ಮಂತ್ರ ೯.

[೭] ಅಥರ್ವವೇದ ಕಾಂಡ ೧೫, ಸೂಕ್ತ ೭, ಮಂತ್ರ ೮.

* "ಯಜ್ಞ" ಶಬ್ದವೂ ಇದೇ ಧಾತುವಿನಿಂದ ಉತ್ಪನ್ನವಾಗಿರುವುದರಿಂದ, 'ದೇವಪೂಜಾ, ಸಂಗತಿಕರಣ, ದಾನ'—ಎಂಬ ಅರ್ಥತ್ರಯದ ಪ್ರಸ್ತಾಪವನ್ನು ಮಾಡದೆ, ಕೇವಲ 'ಸಂಗತಿ ಕರಣ'ದ ವಿವರಣೆಯನ್ನು ಮಾತ್ರ ಮಾಡಲು ಕಾರಣ, ವಿವೇಚನೀಯ ವಿಷಯ 'ಯಜ್ಞ' ವಾಗಿರದೆ, ಕೇವಲ 'ಯಜುರ್ವೇದ'ವಾಗಿರುವುದೇ. ಆದರೂ, ಈ "ಸಂಗತಿಕರಣ"ವೇ ಗಂಭೀರಾವಲೋಕನ ಮಾಡಿದಾಗ ದೇವಪೂಜಾ ಮತ್ತು ದಾನಗಳನ್ನೂ ತನ್ನ ವಿಶಾಲಗರ್ಭ ದಲ್ಲೇ ಅಡಗಿಸಿಕೊಂಡಿರುವುದು ಅಭಿವ್ಯಕ್ತವಾಗುತ್ತದೆ.

ಮಾಡುವುದು; ಕಲಾ-ಕೌಶಲ, ಯಾಂತ್ರಿಕೀ ಕೃತಿಗಳ ನಿರ್ಮಾಣ, ತದ್ದ್ವಾರಾ ಐಶ್ವರ್ಯ ಸಮಾರ್ಜನ ಮತ್ತು ವಿದ್ವತ್ಸಂಗದಿಂದ ವಿದ್ಯಾಭಿವೃದ್ಧಿ ಸಾಧನೆ—ಮೊದಲಾದ ವಿವಿಧ ಪ್ರಗತಿ ಸಾಧಿಸುವುದು, ಸಂಕ್ಷೇಪತಃ, ಜ್ಞಾನಕ್ಕೆ ಕ್ರಿಯಾತ್ಮಕ ರೂಪ ಕೊಡುವುದು—ಎಂದರೆ ಕರ್ಮಕಾಂಡವು ಯಜುರ್ವೇದದ ಪ್ರತಿಪಾದ್ಯ ವಿಷಯವಾಗಿದೆ.

"ಸಾಮನ್ + ವೇದ"—"ಅಥರ್ವನ್ + ವೇದ"-ಎರಡು ಪದಗಳನ್ನು ಕೂಡಿಸಿ 'ಅಥರ್ವವೇದ' ಎಂಬಂತೆ, ಸಾಮವೇದ—ಎನ್ನುತ್ತಾರೆ. ಸಾಮನ್—ಎಂಬ ಶಬ್ದಕ್ಕೆ ತೃಪ್ತಿಗೊಳಿಸುವಿಕೆ, ಸಮಾಧಾನಪಡಿಸುವಿಕೆ, ಸಂತೈಸುವಿಕೆ, ಸಂಧಿ-ಸಾಧನೆ [Truse are total stoppage of war], ಶಾಂತಿಗೊಳಿಸುವುದು—ಎಂಬ ನಾನಾರ್ಥಗಳಿದ್ದು, "ಸಾ + ಅಮ" ಎಂದು ಶಬ್ದ ವಿಭಜನೆ ಮಾಡಿ, 'ಸಾ'—ಎಂದರೆ ಪರಲೋಕ; 'ಅಮ' —ಎಂದರೆ ಇಹಲೋಕ; ಸಾ—ಎಂದರೆ ವಿರಾಡಾತ್ಮ, ಅಮ—ಎಂದರೆ ಜೀವಾತ್ಮ. ಇಹಪರ ಸಂಯೋಗವಾದಾಗ, ಪರಿಚ್ಛಿನ್ನಾತ್ಮ-ವಿರಾಡಾತ್ಮರ ಪರಸ್ಪರ ಘನಿಷ್ಠಸಂಪರ್ಕ ವಾದಾಗ, ಬೇರೆ ಮಾತಿನಲ್ಲಿ 'ಉಪಾಸನಾ' ಸ್ಥಿತಿ ಸಿದ್ಧಿಸಿದಾಗ, ಮೇಲೆ ಹೇಳಿದ ತೃಪ್ತಿ, ಶಾಂತಿ, ಆನಂದ—ಮೊದಲಾದ ಗುಣಗಳೆಲ್ಲಾ ಶಬ್ದಮಾತ್ರವಾಗಿ ಉಳಿಯದೆ ಬಾಳಿನ ಅನುಭೂತ ತತ್ವಗಳಾಗುತ್ತವೆ. ಇದೇ ಕಾರಣದಿಂದ ಸಾಮವೇದದ ಪ್ರಧಾನ ಪ್ರತಿಪಾದ್ಯ ವಿಷಯ 'ಉಪಾಸನಾ'—ಎಂದು ನಿಶ್ಚಿತವಾಗಿದೆ.

ಸಾ—ಎಂದರೆ ವಿರಾಡಾತ್ಮ, ವಿರಾಡಾತ್ಮನ ಶಕ್ತಿ; ಅಲ್ಲದೆ, ಅದೇ ಸಾ ಶಬ್ದಕ್ಕೆ ಲಕ್ಷ್ಮೀ ಎಂಬರ್ಥವೂ ಇದೆ. ಮಹರ್ಷಿ ದಯಾನಂದರು "ಸತ್ಯಾರ್ಥಪ್ರಕಾಶ"ದ ಪ್ರಥಮ ಸಮುಲ್ಲಾಸದಲ್ಲಿ "ಲಕ್ಷ ದರ್ಶನಾಂಕನಯೋಃ"—ಎಂಬೀ ಧಾತುವಿನಿಂದ ರೂಪಗೊಂಡಿದೆ ಲಕ್ಷ್ಮೀ ಎಂಬ ಶಬ್ದ. "ಯೋ ಲಕ್ಷಯತಿ ಪಶ್ಯತಿ ಅಂಕತೇ ಚಿಹ್ನಯತಿ ಚರಾಚರಂ ಜಗತ್ ಅಥವಾ ವೇದೈರಾಪ್ತೈರ್ಯೋಗಿಭಿಶ್ಚ ಯೋ ಲಕ್ಷ್ಯತೇ ಸ ಲಕ್ಷ್ಮೀ ಸರ್ವಪ್ರಿಯೇಶ್ವರಃ"—"ಸಕಲ ಜಗತ್ತನ್ನೂ ಈಕ್ಷಿಸುವವನೂ, ಲಕ್ಷಣಯುಕ್ತವನ್ನಾಗಿ ಮಾಡುವವನೂ ಆದುದರಿಂದ ಪರಮಾತ್ಮನು ಲಕ್ಷ್ಮೀ—ಎನಿಸು ತ್ತಾನೆ"—ಎಂದು ಬರೆದಿದ್ದಾರೆ. ಸ್ತ್ರೀ-ಪುರುಷ ಆದಿ ಲಿಂಗಗಳೇ, ಈಶ್ವರನು ನಿರಾಕಾರ ನಾದ ಕಾರಣ, 'ದೇವರು ನಾರಿಯೇ? ಲಕ್ಷ್ಮೀ-ಎಂಬ ಸ್ತ್ರೀಲಿಂಗಸ್ಥ ನಾಮಾಂಕಿತವೇಕೆ?" ಎಂಬ ಪ್ರಶ್ನೆಯೇ ಸಲ್ಲದು. ಲಿಂಗಗಳು ದೇಹಗಳಿಗೆ ಸಂಬಂಧಿಸಿವೆ. ಆತ್ಮನು, ಹಾಗೆಯೇ ಪರಮಾತ್ಮನು ಅಲಿಂಗರೇ. ವೇದಗಳಲ್ಲಿ 'ಬ್ರಹ್ಮ' ಎಂದು ನಪುಂಸಕ ಲಿಂಗದಲ್ಲಿ, 'ಈಶ್ವರ' ಎಂದು ಪುಲ್ಲಿಂಗದಲ್ಲಿಯೂ ನಿರ್ದಿಷ್ಟನಾಗಿದ್ದಾನೆ. ಹೀಗೆಯೇ 'ಶ್ರೀಃ, ಲಕ್ಷ್ಮೀ—ಇತ್ಯಾದಿ ಸ್ತ್ರೀಲಿಂಗದಲ್ಲಿಯೂ ವರ್ಣಿತನಾಗಿದ್ದಾನೆ. ಏಕೆಂದರೆ, ಮಾನವೀ ಭಾಷೆಯಲ್ಲಿಯೇ ಉಪದೇಶ ಕೊಡಬೇಕಲ್ಲವೇ?

ಈ ಸ್ಥಿತಿಯಲ್ಲಿ 'ಸಾ' ಎಂದರೆ, ಪರಲೋಕ, ಪರಮಾತ್ಮ, ಈಶ್ವರೀಶಕ್ತಿ—ಯಾವುದನ್ನಾದರೂ ಗ್ರಹಿಸಿರಿ. 'ಅಮ'—ಎಂದರೆ ಇಹಲೋಕ, ವ್ಯಕ್ತಿಗತ ಜೀವಾತ್ಮ. ಈ ಎರಡರ ಸಂಯೋಗವೇ ಸಾ + ಅಮ, ಸಾಮ. 'ಅಮ' ಧಾತುವಿಗೆ 'ಗತಿ ಚಲನೆ' ಎಂಬ ಕ್ರಿಯಾತ್ಮಕ ಅರ್ಥವಿದೆ. ಸ್ಥಾನ ಅಥವಾ ಸ್ಥಿತಿ [ನಿಲುವು]ಯ ದೃಷ್ಟಿಯಿಂದ, ಈ ಸಾಮ ಶಬ್ದದಲ್ಲಿನ ಅಮ ಸ್ಥಿತಿಸೂಚಕಾವ್ಯಯವಾಗಿ ಗೃಹೀತವಾದಾಗ 'ಸಾ' ಎಂದರೆ ಈಶ್ವರನ [ಅಮ] ಸಮೀಪಕ್ಕೆ, [ಅಮ] ಜೀವಾತ್ಮನ, [ಅಮ] ಚಲಿಸುವಿಕೆ—ಎಂಬ ತಾತ್ಪರ್ಯ ಹೊರ ಬೀಳುವುದು. ಈ ಈಶ್ವರನ ಸಮೀಪಕ್ಕೆ

ಜೀವಾತ್ಮನ ಸರಿಯುಖಿಕೆ 'ಉಪಾಸನೆ'ಯಲ್ಲದೇ ಬೇರೆ ಏನಾಗಲೂ ಸಾಧ್ಯವೇ ಇಲ್ಲ. ಹೀಗೆ ಸಾಮವೇದ ಉಪಾಸನಾ ಬೋಧಕವೇ ಆಗಿರುತ್ತದೆ. ಅಲ್ಲದೆ ಅಲ್ಪಜ್ಞತ್ವ—ಅಲ್ಪ ಶಕ್ತಿತ್ವಗಳಿಗೆ ಸ್ವರೂಪತಃ ಬದ್ಧನಾದ ಜೀವ ರೋಗ, ಸೇವಕತ್ವ [ಪರಾಧೀನತೆ], ಬಲ, ಶಕ್ತಿಗಳ ಸಂಬಂಧದಲ್ಲಿಯೂ ನ್ಯೂನತೆಗಳಿಗೆ ತುತ್ತಾಗುವುದು ಸಹಜ. ಇವೆಲ್ಲಾ ಜೀವಾತ್ಮನ ಅಪಕ್ವತೆಯ ನೇರವಾದ ಫಲಗಳೇ. ಅವುಗಳನ್ನು ದೂರೀಕರಿಸಲು ಜ್ಞಾನಾನಂದ ಶಾಂತಿ ಸಾಮರ್ಥ್ಯ ಸಂಪನ್ನ ಪರಮಾತ್ಮನ ಘನಿಷ್ಠ ಸಂಪರ್ಕ ಒಂದೇ ನಿಃಸಂಶಯವಾಗಿ, ಪೂರ್ಣತಃ ನಿಶ್ಚಿತವಾಗಿ ಉಪಲಬ್ಧವಾದ ಉಪಾಯ; ಪರಮಾತ್ಮನ ಸಂಗಡ ಜೀವಾತ್ಮನ ವ್ಯವಧಾನರಹಿತ ಘನಿಷ್ಠ ಸಂಪರ್ಕವನ್ನೇ 'ತ್ರಯೀವಿದ್ಯಾ'—ಎಂಬ ಪ್ರಕರಣದಲ್ಲಿ 'ಉಪಾಸನಾ' ಎನ್ನುತ್ತಾರೆ, ಸರ್ವವ್ಯಾಪಕತ್ವದಿಂದ ಪ್ರಭು–ಸಾಮೀಪ್ಯ ಸದಾ–ಸರ್ವದಾ ಸ್ವತಃ ಸಿದ್ಧವಾದ ತಥ್ಯ; ಕಾಲದೃಷ್ಟಿಯಿಂದಲೂ ಪರಮಾತ್ಮ ಜೀವಾತ್ಮ ರಿಬ್ಬರೂ ಅನಾದಿ–ಅಮಧ್ಯ–ಅನಂತರಾಗಿಯೇ ಇರುವುದರಿಂದ ಪರಮಾತ್ಮನು ಜೀವಾತ್ಮ ನಿಂದ ಒಂದಂಗುಲದ ಅರ್ಬುದಾಂಶದಷ್ಟೂ ದೂರವಿಲ್ಲ; ಅಂಗುಲದ ಅರ್ಬುದಾಂಶಾದಿ ಗಳ ಪ್ರಯೋಗವಾದರೂ ಏಕೆ? ಅವನಿಂದಿವನು, ಇವನಿಂದವನು ದೇಶ–ಕಾಲವೆರಡರ ದೃಷ್ಟಿಯಿಂದ 'ಇಬ್ಬರೂ ಒಂದೇ'—ಎನ್ನುವಂತಹ ಸ್ಥಿತಿಯಲ್ಲಿದ್ದೇ ಇದ್ದಾರೆ; ನಾಸ್ತಿ ಕನೋ–ಆಸ್ತಿಕನೋ, ಅಜ್ಞೇಯವಾದಿಯೋ–ಸಂದೇಹವಾದಿಯೋ, ವೈದಿಕನೋ–ಅವೈ ದಿಕನೋ, ವ್ಯಕ್ತಿ ಯಾವುದೇ ಪಂಥೀಯನಾಗಲಿ, ವಿರಾಟ್‌ಚೇತನ–ವ್ಯಕ್ತಿಚೇತನರು ಹಾಸು–ಹೊಕ್ಕಾಗಿ ಹೊಸೆದುಕೊಂಡಿರುವುದು ಅನಿರಾಕರಣೀಯವಾದ ತಥ್ಯ. ಅಷ್ಟೇ ತಥ್ಯ ಮತ್ತೊಂದಿದೆ. ಆಸ್ತಿಕೇತರರನ್ನು ಸ್ವಲ್ಪ ಮರೆಯೋಣ. ತಮ್ಮನ್ನು "ನೂರಕ್ಕೆ ನೂರಂಶ ಆಸ್ತಿಕರು"—ಎಂದು ತಿಳಿದುಕೊಂಡಿರುವವರೂ ಕೂಡ, ನಾನಾ ವ್ರತ–ಪೂಜಾ–ಹರಕೆ ಹೊತ್ತರೂ, ಆರ್ತರಾಗಿ—"ಹಾ ಭಗವನ್ ! ಅರೇ ಮೇರೇ ಮಾಲಿಕ್ ! ಹೇ ಮೇರೀ ಮಯ್ಯಾ ! ! ಓ ಮೇರೇ ದಯ್ಯಾ ! ! !" ಎಂದು ಕೊರಗುತ್ತಾರಲ್ಲ ! ಮೋದನ [ಆನಂದ]ದ ಜಾಗದಲ್ಲಿ ರೋದನವೇ ಮಣೆ ಹಾಕಿ ಕುಳಿತಿದೆಯಲ್ಲ ! ಕಾರಣವೇನು? ಉಪಾಸನಾ ನಿಷ್ಫಲವೇ? ಕೇವಲ ಕಲ್ಪನೆಯ ಕುರುಡು ಕಥನವೇ? ಅಥವಾ ಭಗವಂತ ಕರುಣಾಳುವೆಂಬುದು ಸುಳ್ಳೇ? ಅವನು ಆನಂದಮಯನೆಂಬುದೂ ನಿರಾಧಾರವಾದ, ನಿರ್ಬುದ್ಧಿ ನರನ ನುಡಿಗೋಪುರವೇ? ಅಲ್ಲ, ಈ ಆಕ್ಷೇಪಣೆ ಗಳಾವುದೂ ಜ್ಞಾನಿಗಳಿಗೆ ಸರಿತೋರದು. ಜೀವನ ಸರಸವಾಗುವುದಕ್ಕೂ, ವಿರಸ ವಾಗುವುದಕ್ಕೂ ಬೇರೊಂದು ಕಾರಣವೇ ಇದೆ. ಚಿತ್ತ ಏತರಲ್ಲಿ ನಿಲ್ಲುವುದೋ ಅದರಲ್ಲಿ ಸುಖ ಸಿಕ್ಕುವುದು; ಚಿತ್ತ ಯಾವುದರಲ್ಲಿ ನಿಲ್ಲದೋ ಅದರಿಂದ ಸುಖ ಸಿಕ್ಕದು. ಈ ಚಿತ್ತೈಕಾಗ್ರತೆ ಕೇವಲ ಬಾಯಿಮಾತಾದಲ್ಲಿ, ಅದು ಭಗವಂತನ ತಪ್ಪಲ್ಲ.

ಇಂದು ಬಹು ಮಂದಿ ಭಗವದಾರಾಧಕರದೂ ಇದೇ ಸ್ಥಿತಿ ಆಗಿದೆ. ತಚ್ಚಿತ್ತೈಕಾ ಗ್ರತಾ ಸಮುದ್ಭೂತವಾದ ಭಾವನಾತ್ಮಕ ದೂರವಿನ್ನೂ ದೂರವಾಗಿಲ್ಲ. ಈಗಿನಾವಶ್ಯಕತೆ ಯೊಂದೇ—ಈ ಭಾವನಾತ್ಮಕ ದೂರದ ಸಂಪೂರ್ಣ ವಿಧ್ವಂಸ. ವೇದಗಳಲ್ಲಿ ಹೇಳಿದೆ:–

—"**ಇಂದ್ರೇಣ ಸಂ ಹಿ ದೃಕ್ಷಸೇ । ಸಂಜಗ್ಮಾನೋ ಅಬಿಭ್ಯುಷಾ ॥ ಮಂದೂ ಸಮಾನ ವರ್ಚಸಾ ॥**"—[ಸಾಮ, ಉತ್ತರ ೮೫೦]—"ಓ ಜೀವಾತ್ಮನ್ ! [ಅಬಿ ಭ್ಯುಷಾ] ಪೂರ್ಣತಃ ನಿರ್ಭಯನಾದ, [ಇಂದ್ರೇಣ] ಸರ್ವೈಶ್ವರ್ಯವಾನ್, ಜೀವಮಾತ್ರರ ಮೇಲೆ ದಯೆ ತೋರುವ ಸರ್ವೇಶ್ವರನ, [ಸಂ] ಜೊತೆಗೂಡಿ, [ಹಿ] ದಿಟವಾಗಿಯೂ,

[ಸಂಜಗ್ಮಾ ನಃ] ಸಮುಚಿತ ಬಾಂಧವ್ಯ ಬೆಳೆಯಿಸಿಕೊಂಡು, [ದೃಕ್ಷಸೇ] ಶೋಭಿಸು ತ್ತಿರುವೆ. ಸ್ವಾತ್ಮ-ವಿರಾಡಾತ್ಮರು ಇಬ್ಬರೂ (ಸಮೀಚೀನ ಸಂಪರ್ಕ ಸಿದ್ಧಿಸಿದಾಗ) [ಮಂದೂ] ಈರ್ವರೂ ಆನಂದಮಯರೂ, [ಸಮಾನ ವರ್ಚಸಾ] ಸಾಮಾನ್ಯತ್ವ ಸಂಗತ ಆಧ್ಯಾತ್ಮಿಕ ತೇಜಸ್ಸಿನಿಂದ ವಿರಾಜಿಸುವಿರಿ." ಮತ್ತೆ ಬೇರೆ ಕಡೆ—"ತ್ವಂ ಹ್ಯಗ್ನೇ ಅಗ್ನಿನಾ ವಿಪ್ರೋ ವಿಪ್ರೇಣ ಸನ್ತ್ಸತಾ । ಸಖಾ ಸಖ್ಯಾ ಸಮಿಧ್ಯಸೇ ॥"—[ಋಕ್ :- ೮-೪೩-೧೪]. "[ಅಗ್ನೇ] ಹೇ ಬ್ರಹ್ಮಾಂಡಾಧಿನಾಯಕ ತೇಜೋಮಯ ಭಗವನ್ ! [ತ್ವಂ] ನೀನು, [ಹಿ] ಸತ್ಯವಾಗಿಯೇ, [ವಿಪ್ರಃ] ವಿಶೇಷ ಪ್ರಜ್ಞನೂ, [ಸನ್] ಸತ್ಯಸ್ವರೂಪನೂ, [ಸಖಾ] ಸರ್ವ ಮಿತ್ರನೂ ಆಗಿರುವೆ. ಈ ಗುಣಗಣ ಸಮನ್ವಿತನಾದ, ಯುಕ್ತನಾದ ನೀನು, [ಅಗ್ನಿನಾ] ಸರ್ವೇಂದ್ರಿಯಾಧಿನಾಯಕನೂ, ಎಂದರೆ ಜಿತೇಂದ್ರಿಯನೂ, ಜ್ಞಾನ ದ್ಯುತಿಮಂತನೂ, [ವಿಪ್ರೇಣ] ವಿಶೇಷ ಪ್ರಜ್ಞಾವಂತನೂ, [ಸತಾ] ಸತ್ಯಾಚಾರ ವಿಚಾರವಂತನೂ, [ಸಖ್ಯಾ] ದ್ವೇಷಾದಿ ಸಮಾಜ-ಭಂಜಕ ದುರ್ಗುಣಗಳಿಂದ ಸರ್ವಥಾ ಮುಕ್ತನಾಗಿ ಜೀವಮಾತ್ರರ ಬಗೆಗೆ ಮೈತ್ರೀ-ಭಾವನಾಧಾರಿಗಳಾಗಿರುವ ಭಕ್ತರಿಂದಲೇ, [ಸಮಿಧ್ಯಸೇ] ಚೆನ್ನಾಗಿ ಪ್ರಕಾಶಿತನಾಗುವೆ." ಈ ಮಂತ್ರದಲ್ಲಿ ಅಭಿವ್ಯಕ್ತವಾಗುವುದು ಒಂದು ಅತಿ ಪ್ರಮುಖ ತತ್ತ್ವವೆಂದರೆ—ಭಗವಂತ ಹಾಗೂ ಭಕ್ತರ ಗುಣಸಾದೃಶ್ಯ. ಉಪಾಸ್ಯನ ಗುಣಗಳಿಗೆ ವಿರುದ್ಧವಾದ ಗುಣಗಳು ಉಪಾಸಕನಲ್ಲಿದ್ದರೆ—ಸಾಕ್ಷಾತ್ಕಾರವಾಗುವುದು ಎಂದಿಗೂ ಸಾಧ್ಯವಲ್ಲ.

ಸಮಾನ ಶೀಲ ವ್ಯಸನೇಷುಸಖ್ಯಂ' ಎಂಬಂತೆ ಉಪಾಸ್ಯ ಉಪಾಸಕರಲ್ಲಿ ಗುಣಸಾಮ್ಯತೆ ಹೊಂದಿಕೊಂಡಿದ್ದರೆ ಸಾಮಾನ್ಯತಃ ನಾಲ್ಕು ವೇದಗಳು, ವಿಶೇಷತಃ ಸಾಮವೇದ ಅನಿವಾರ್ಯವೇ ಆದ ಸದಾ ಸಫಲ ಸಾಧನ. ಉದ್ಧರಣಗಳು ಬೇಕಾದಷ್ಟಿವೆ. ಸಾ + ಅಮ = ಆ ಈಶ ಹಾಗು ಈ ಜೀವನ [ಅಮ] ಸಾಮೀಪ್ಯ—ಎಂದರೆ ಈಶ-ಜೀವ-ಸಂಪರ್ಕದಿಂದ ಕೇವಲ ಸಚ್ಚಿಜ್ಜೀವ ಸಚ್ಚಿದಾನಂದನಾಗುವನೆಂದು ನೇರವಾಗಿಯೇ ಸಾರುವ ಸಾಮವೇದೀಯ ಮಂತ್ರಗಳು. ಹಿಂದೆ "ಇಂದ್ರೇಣ ಸಂಹಿದೃಕ್ಷಸೇ" [ಸಾಮ:-೮೫೦] ಯಾ [ಸಾಮ, ಉತ್ತರ-೪-೨-೧] ಉಪಾಸನಾ ಪರಿಣಾಮಗಳಲ್ಲಿ ಒಂದು ಮುಖ್ಯವಾದುದು ವೈರ-ನಿರ್ನಾಮ, ಅದನ್ನು "ತ್ವಂಹತ್ಯತ್ಸಪ್ತಭ್ಯೋ ಜಾಯಮಾನೋಽಶತ್ರುಭ್ಯೋಽಅಭವಃ ಶತ್ರುರಿಂದ್ರ । ಗೂಢೇ ದ್ಯಾವಾ-ಪೃಥಿವೀ ಅನ್ವವಿಂದೋ ವಿಭುಮದ್ಭ್ಯೋ ಭುವನೇಭ್ಯೋ ರಣಂ ಧಾಃ ॥ [ಸಾಮ, ೩೨೬] — "ಓ ಜೀವಾತ್ಮನ್ ! ನೀನು ಪಂಚಜ್ಞಾನೇಂದ್ರಿಯಗಳು ಮತ್ತು ಮನೋಬುದ್ಧಿಗಳಿಂದ ಸದೇಹನಾಗಿ ಬಂದು, ಶತ್ರುಗಳಲ್ಲದವರಿಗೂ ಶತ್ರುವಾಗಿ ಕುಳಿತೆ. ಅಥವಾ, ಕೇವಲ ಆತ್ಮೋತ್ಥಾನಕ್ಕೆಂದು ಕೊಟ್ಟ ಆ ಸಪ್ತಸಾಧನಗಳನ್ನು ದುರುಪಯೋಗ ಮಾಡಿ ಶತ್ರುವಾಗಿ ಕುಳಿತೆ. ದ್ಯಾವಾ ಪೃಥಿವಿಗಳು, ದ್ಯುಲೋಕ-ಭೂಲೋಕಗಳು, ಪರ-ಇಹಗಳು, ಗೂಢ, ಗಂಭೀರ ವಿಷಯಗಳು. ಅವನ್ನರಸುತ್ತಾ ಇರುವೆ, ಹೋರಾಡುತ್ತಿರುವೆ. ಸಾಫಲ್ಯ ಬೇಕೇ? 'ವಿಭುಮಾನ್ ಲೋಕಗಳಿಗಾಗಿ, ಸರ್ವವ್ಯಾಪಕ ಪ್ರಭುವೇ ಪ್ರಧಾನನಾಗಿರುವ ಸ್ಥಿತಿಗತಿಗಳಿಗಾಗಿ ಹೋರಾಡು; ಬಾಳು ಹಾಳಾಗದ ಸಜೀವ ಗಾನ ಹಾಡು"; "ತ್ವಂಹಿ ನಃ ಪಿತಾ ತ್ವಂ ಮಾತಾ" [ಸಾಮ, ಉತ್ತರ:- ೮-೬-೮.]—"ಸರ್ವಜಗನ್ನಿವಾಸ ಪ್ರಭೋ ! ನೀನೇ ನಮ್ಮ ತಂದೆ; ನೀನೇ ತಾಯಿ"; "ತ್ವಂ ದಾತಾ ಪ್ರಥಮೋ ರಾಧಸಾಮಸ್ಯಸಿ ಸತ್ಯ ಈಶಾನಕೃತ್ । ತುವಿದ್ಯುಮ್ನಸ್ಯ

ಯುಂಚ್ಯಾವೃಣೀಮಹೇ ಪುತ್ರಸ್ಯ ಶವಸೋ ಸಹಃ ॥ [ಉತ್ತರ ಸಾಮ:-೧೪೯೩]— "ಭಗವನ್ ! [ತ್ವಂ] ನೀನು, [ರಾಧಸಾಂ] ಸಂಪತ್ತುಗಳ, [ಪ್ರಥಮಃ] ಪ್ರಥಮ ಹಾಗೂ ವಿಶಾಲ ಮನಸ್ಕನಾದ, [ದಾತಾ] ದಾತೃವು, [ಅಸಿ] ಆಗಿದ್ದೀಯೆ. [ತುವಿದ್ಯುಮ್ನಸ್ಯ ಯುಂಜ್ಯಾ] ಮಹಾ ಶಕ್ತಿಮಾನ್ ಬೃಹತ್ತೇಜಸ್ವಾನ್ ಪ್ರಭುವಾದ ನಿನ್ನನ್ನೇ ಆಶ್ರಯಿಸಿದವರಾಗಿ, [ಪುತ್ರಸ್ಯ ಸಹಸಃ] ಪುತ್ರನ ಸಾಮರ್ಥ್ಯದ, [ಸಹಃ] ಸಹನ ಗುಣವನ್ನು, ಸಂಯಮವಾದ ಉಪಯೋಗವನ್ನು, [ವೃಣೀಮಹೇ] ಕೋರಿಕೊಳ್ಳುತ್ತೇವೆ. ಏಕೆಂದರೆ, [ಸತ್ಯಃ] ಸತ್ಯವಾನ್ [ಈಶಾನಕೃತ್] ನಿಯಮಪಾಲಕನು, ವ್ಯವಸ್ಥಾಪಕನು, [ಅಸಿ] ಆಗಿರುವೆ"; "ತ್ವಂ ಹಿ ವೃತ್ರಹನ್ನೇಷಾಂ ಪಾತಾ ಸೋಮಾನಾಮಸಿ । ಉಪನೋ ಹರಿಭಿ; ಸುತಂ ॥ [ ಸಾಮ:-೧೭೯೨]—"[ವೃತ್ರಹನ್] ಆವರಿಸಿ ಮುತ್ತಿಗೆ ಹಾಕುವ ಅಜ್ಞಾನಾಂಧಕಾರವನ್ನು ತೊಡೆದುಹಾಕುವ ಭಗವನ್ ! [ಏಷಾಂ ಸೋಮಾನಾಂ] ಈ ವೈಯಕ್ತಿಕ ಜೀವನಗಳ ರಸರೂಪರಾದ ಜೀವರ, [ಪಾತಾ ಅಸಿ] ರಕ್ಷಕನಾಗಿರುವೆ. [ಹರಿಭಿಃ ನಃ] ದುರ್ವೃತ್ತಿ ಹರಣ-ಸುವೃತ್ತ್ಯಾಕರ್ಷಣದ ಸಾಮರ್ಥ್ಯದಿಂದ ಕೂಡಿದ ನಮ್ಮ [ಸುತಂ] ಚಿಂತನ-ಮನನ-ಶ್ರವಣಾದಿಗಳಿಂದ ಹೊರಟ ರಚನೆಯನ್ನೂ ಕೂಡ, [ಉಪ] ನಮ್ಮ ಹೃದಯ ಸ್ಥಿತನಾಗಿದ್ದುಕೊಂಡು [ಪಾತಾ] ಪಾಲಿಸುವವನಾಗು. ರಚನೆಯನ್ನೂ ಕೂಡ, [ಉಪ] ನಮ್ಮ ಹೃದಯ ಸ್ಥಿತನಾಗಿದ್ದುಕೊಂಡು [ಪಾತಾ ಪಾಲಿಸುವವನಾಗು": ಶ್ರುಧೀ ಹವಂ ವಿಪಿಪಾನಸ್ಯಾದ್ರೇರ್ಬೋಧಾ ವಿಪ್ರಸ್ಯಾರ್ಚತೋ ಮನೀಷಾಂ । ಕೃಷ್ವಾ ದುವಾಂಸ್ಯಂತಮಾ ಸಚೇಮಾ ॥" [ ಸಾಮ:-೧೭೯೮] "[ಹೇ ಶತಕ್ರತೋ] ಓ ನೂರಾರು ಕ್ರಿಯೆಗಳನ್ನೂ, ವಿಧವಿಧವಾದ ಉತ್ತಮೋತ್ತಮ ವಿಚಾರಗಳ ಪ್ರಕಾಶಕನೂ ಆಗಿರುವ, ಸರ್ವಸಾಮರ್ಥ್ಯಸಂಪನ್ನ, ಅವ್ಯಕ್ತನಾದರೂ, ವ್ಯಕ್ತಿ-ವ್ಯಕ್ತಿಯ ಅಂತರತಮದಲ್ಲಿ ಸತ್ಪ್ರೇರಣೆ ನೀಡುವ ನಿರಾಕಾರ-ನಿರ್ವಿಕಾರ, ಅಖಂಡ ಹಾಗು ಏಕರಸ ವ್ಯಾಪಕ ವಿಭೋ ! [ಶತಕ್ರತು—ಎಂಬ ಶಬ್ದ ಇದರ ಮೇಲಣ ಮಂತ್ರದಿಂದ ಅಧ್ಯಾಹೃತ] [ಹವಂ] ಈ ಕರೆಯನ್ನು, ಮೊರೆಯನ್ನು, ಕೇಳಿಕೆಯನ್ನು, [ಶ್ರುಧೀ] ಆಲಿಸು. [ವಿಪಿಪಾನಸ್ಯ] ವಿಧ-ವಿಧದ ಆನಂದರಸ-ಶಾಂತಿರಸ-ಜ್ಞಾನರಸಾದಿಗಳನ್ನು ಆಸ್ವಾದಿಸುವ [ಅದ್ರೇಃ] ಪರ್ವತದಂತೆ ದೃಢನೂ, ನಿಶ್ಚಲನೂ ಆದರಣೀಯನೂ, [ವಿಪ್ರಸ್ಯ] ವಿಶಿಷ್ಟ ಪ್ರಾಜ್ಞನೂ [ಅರ್ಚತಃ] ನಿನ್ನನ್ನು ಆರಾಧಿಸುವವನೂ ಆದ ಸಜ್ಜನನಿಗೆ, [ಬೋಧ] ಅಧಿಕಾಧಿಕ ಜ್ಞಾನ-ಪ್ರದಾನ ಮಾಡು. [ಅರ್ಚತಃ ಮನೀಷಾಂ] ಆ ಉಪಾಸಕನ ಮನಃಸ್ಫೂರ್ತಿಯನ್ನು, [ಬೋಧ] ಎಚ್ಚರಿಸು.*

---

ದಾರ್ಶನಿಕ ದೃಷ್ಟಿಯಿಂದ ಈ ಆಲಿಸು, ಉಪದೇಶಿಸು, ಎಚ್ಚರಿಸು, ಸ್ಫೂರ್ತಿಕೊಡು'—ಈ ಮೊದಲಾದ ಮಾನವೀಯ ಕ್ರಿಯೆಗಳನ್ನು ತತ್ತದ್ವಿಷಯ ಗ್ರಾಹೀ ಇಂದ್ರಿಯ-ಚಿತ್ತ-ಅಂಗ-ಅವಯವಾದಿಗಳನ್ನೇ ಹೊಂದಿರದ ಸರ್ವದ್ರಷ್ಟ್ರಾ, ನಿರಾಕಾರನೂ, ಅದೇ ಕಾರಣದಿಂದ ಅವಯವೇಂದ್ರಿಯ ಮನಃ ಪ್ರಾಣಾದಿ ರಹಿತನೂ ಆದ ಪ್ರಭುವಿಗೆ ಅನ್ವಯಿಸುವುದು ಸರಿಯಲ್ಲ. ಆದಾನ-ಪ್ರದಾನ, ಆಗಮನ-ನಿರ್ಗಮನಾದಿ ಕ್ರಿಯೆಗಳನ್ನು ಮಾಡುವ ಸ್ವರೂಪತಃ ಇರುವ ಸಾಮರ್ಥ್ಯದಿಂದಲೇ ಸರ್ವಕರ್ಮಗಳನ್ನೂ ಮಾಡುತ್ತಾನೆ. "ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ । ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ । ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾಚ ॥ [ಶ್ವೇತಾಶ್ವತರ:-೬-೮.]—"ಭಗವಂತನು ಸ್ವಯಂಭೂ. ಆದುದರಿಂದ ಅವನಿಗೆ 'ಕಾರ್ಯ'ರೂಪವಿಲ್ಲ, ಎಂದರೆ, ಅವನು ನಿಮಿತ್ತ ಕಾರಣ [Efficient Cause]ನೇ

P.T.O.

ಧಾರಾಪ್ರವಾಹವಾಗಿ ಶಾಂತಿಯ ಹಾಗೂ ಆನಂದದ ಆತ್ಮೋನ್ನಾಯಕ ವೃಷ್ಟಿಯನ್ನೇ ಸುರಿಸುವ ಸಾಮವೇದದಿಂದ ಹೆಕ್ಕಿ–ಹೆಕ್ಕಿ ಪ್ರಮಾಣಗಳನ್ನು ಕೊಡುತ್ತಾ ಹೋಗಬಹುದು. ಆದರೆ—ಈ ಅಸಂಖ್ಯ ಪ್ರಮಾಣೋದ್ಧರಣದ ಲಾಲಸೆಯನ್ನು ಸಂಯತವನ್ನಾಗಿ ಮಾಡಿಕೊಂಡು, ಕೇವಲ ಇನ್ನೊಂದೇ ಒಂದು ಪ್ರಮಾಣವಿತ್ತು ಪ್ರಕರಣವನ್ನು ಕೊನೆ ಮುಟ್ಟಿಸೋಣ:—

**ತರತ್ಸ ಮಂದೀ ಧಾವತಿ ಧಾರಾ ಸುತಸ್ಯಾಂಧಸಃ ।**
**ತರತ್ಸ ಮಂದೀ ಧಾವತಿ ॥** [ಸಾಮ:–೫೦೦]

"[ಸ ಮಂದೀ] ಆ ಆನಂದರಸ ಪಾನದಿಂದ ಮೈಮರೆತ, ಆನಂದ ತುಂದಿಲ ಹೃದಯನಾಗಿ ಜಗದ ಇರುವಿಕೆಯನ್ನೇ ಮರೆತ ಆ ಉಪಾಸಕನು, [ತರತ್] ಜೀವನದ ಕಷ್ಟ–ಕ್ಲೇಶಗಳನ್ನೆಲ್ಲಾ ದಾಟುತ್ತಾ, [ಧಾವತಿ] ಆನಂದಸಾಗರನೆಡೆಗೆ ಓಡುತ್ತಾನೆ; ಮತ್ತು ಆತ್ಮನೈರ್ಮಲ್ಯವನ್ನು ಸಾಧಿಸಿಕೊಳ್ಳುತ್ತಾ* ಸಾಗುತ್ತಾನೆ. [ಸುತಸ್ಯ] ಭಕ್ತಿಭಾವನೆಯಿಂದ ಸಾರರೂಪವಾಗಿ, ಹಿಂಡಿ ತೆಗೆದ ಆನಂದರಸ, ಎಷ್ಟು ಕೋಟಿ ಜನರಲ್ಲಿ ಒಬ್ಬ ಭಾಗ್ಯವಂತನ ಪಾಲಿಗೆ ಇಳಿದು ಬಂದಿತೋ? 'ಸುತಸ್ಯ ಅಂಧಸಃ ಧಾರಾ' [ಧಾರಯಾ] ಅತ್ಯುತ್ತುಂಗ ಆಧ್ಯಾತ್ಮಿಕ ಭಾವನೆಯ ಮಥನದಿಂದ ಉತ್ಪನ್ನವಾದ ಆತ್ಮಿಕ ಆಹಾರ ರಸಧಾರೆಯೊಂದಿಗೆಯೇ, ತೇಲುತ್ತಾ–ಈಜುತ್ತಾ [ತರತ್] ಆಧಿ–ವ್ಯಾಧಿಗಳ, ಶಾಪ–ತಾಪಗಳ, ರುದನ–ತುದನ [ಶಿಖಿತ]ಗಳ ಅಡ್ಡಿ–ಆತಂಕಗಳನ್ನೆಲ್ಲಾ ತರಿದೊಟ್ಟಿ, ಬದಿಗಟ್ಟಿ, ದಾಟುತ್ತಾ, [ಸಮಂದೀ] ಆ ಆನಂದ ತಂದ ಆತ್ಮ ವಿಸ್ಮೃತಿಯುಕ್ತ ಭಾಗ್ಯವಾನ್ ಭಕ್ತನು, [ಧಾವತಿ] ತೀವ್ರಗಾಮಿಯಾಗಿ ಮುಂದೋಡುತ್ತಾನೆ; ಅಭ್ಯಂತರ ಅಶೌಚ–ಬಾಹ್ಯ ಮಾಲಿನ್ಯಗಳನ್ನು ತೊಳೆಯುತ್ತ–ತೊಳೆಯುತ್ತಲೇ ಅಗ್ರಗಾಮಿಯಾಗುತ್ತಾನೆ."

ಇನ್ನೇನು ಮಾಡಿಯಾನು ? 'ಸ್ವಾದಿಷ್ಠಯಾ ಮದಿಷ್ಠಯಾ' [ಸಾಮ:–೪೬೮] 'ಅತ್ಯಂತ ರುಚಿಕರ, ಅತ್ಯಂತ ಆತ್ಮವಿಸ್ಮೃತಿಪ್ರದ' ಆ ಭಗವದಾನಂದ; **ಯಸ್ತೇಮದೋವರೇಣ್ಯಸ್ತೇನಾಪವಸ್ವಾಂಧಸಾ । ದೇವಾವೀರಘಶಂಸಹಾ॥** ಸಾಮ:–೪೭೦] "ಓ ಆನಂದಮಯ! ನಿನ್ನ ಯಾವ ಪರಮ ಗ್ರಾಹ್ಯವೂ,

---

ಹೊರತು ಜಗತ್ತಿಗೆ ಉಪಾದಾನ ಕಾರಣನಲ್ಲ. ಸರ್ವವ್ಯಾಪಕನಾದ ಕಾರಣ, ಕೈಗಳು, ಕಾಲುಗಳು, ಕಣ್ಣುಗಳು, ಕಿವಿಗಳು, ಬಗೆಬಗೆಯ ಯಂತ್ರಾದಿ ಉಪಕರಣಗಳು—ಮೊದಲಾದುವುಗಳ ಆವಶ್ಯಕತೆ ಅವನಿಗಿಲ್ಲ. ಅವನಿಗೆ ಸಮನಾದವನೇ ಇಲ್ಲವೆಂದ ಮೇಲೆ, ಅವನಿಗಿಂತ ಅಧಿಕನಾದವನು ಯಾವನಿರಲಾದೀತು? ಅವನ ಪರಾಶಕ್ತಿಗಳು ವಿವಿಧವಾಗಿವೆ—ಎಂದು ಆಲಿಸಲ್ಪಟ್ಟಿವೆ. [ವಿವಿಧಾ ಇವ = ವಿವಿಧೇವ—ಎಂಬ ಪದ ಗ್ರಾಹ್ಯವಾದಲ್ಲಿ ನಾನಾ ವಿಧದವು ಎಂಬ ಹಾಗೆ ಎಂದೂ, ವಿವಿಧಾ ಏವ = ವಿವಿಧೈವ—ಎಂಬುದು ಗ್ರಾಹ್ಯವಾದಲ್ಲಿ ನಾನಾ ಪ್ರಕಾರದವೇ—ಎಂದೂ ಅರ್ಥವಾಗುತ್ತದೆ. ಎರಡೂ ವಿಧದ ಪಾಠಗಳು ನಮ್ಮ ದೃಷ್ಟಿಪಥದಲ್ಲಿ ಬಂದಿವೆ. ಎರಡು ಪಾಠಗಳಲ್ಲಿಯೂ ವಿಸರ್ಗವಿಲ್ಲದ ಕಾರಣ, ಪರಾಶಕ್ತಿಯೂ ಏಕವಚನಸ್ಥವೇ ಆಗಿರುವುದರಿಂದ, ಶಬ್ದಶಬ್ದಕ್ಕೂ ಬಿಡಿ ಬಿಡಿ ಅರ್ಥ ಮಾಡಿದಲ್ಲಿ ಸಿದ್ಧಿಸುವುದು ಏಕವಚನವೇ. ಆದರೆ, ಕನ್ನಡದಲ್ಲಿ ವಿವಿಧ' ಎಂದೊಡನೆ ಏಕಾಧಿಕ ತತ್ತ್ವಗಳೇ ಸಹಜವಾಗಿ ಮೂಡಿಬರುವುದರಿಂದ ಬಹುವಚನವನ್ನು ಬಳಸಿದ್ದೇವೆ. ತಾತ್ಪರ್ಯದಲ್ಲಿ ವ್ಯತ್ಯಾಸವಿಲ್ಲ. ಮುನ್ನಡೆದು ಈ ಔಪನಿಷತ್ಕ ಪ್ರಮಾಣ, ಅವನ ಜ್ಞಾನ, ಬಲ, ಕ್ರಿಯಾ—ಎಂಬ ಮೂರು ಭಿನ್ನ ಭಿನ್ನ ತತ್ತ್ವಗಳನ್ನೂ ಏಕೀಕರಿಸಿ, 'ಸ್ವಾಭಾವಿಕ' ಎಂದು ಏಕವಚನವನ್ನೇ ವ್ಯವಹರಿಸಿದ್ದಾರೆ. 'ಧಾವ' ಧಾತು 'ಓಡು, ತೊಳೆಯು'—ಎಂಬೆರಡು ಅರ್ಥಗಳನ್ನೂ ಹೊಂದಿದೆ.

ದೇವಗುಣ ಪ್ರಕಾಶಕವೂ, ಪಾತಕದ ಕಡೆಗೆ ಓಲುವ, ಪಾಪವನ್ನು ಹೊಗಳುವ ವೃತ್ತಿಯನ್ನೇ ತೀಡಿಹಾಕುವಂತಹುದೂ ಆದ ಆನಂದಾಹಾರವಿದೆಯೋ, ಅದರಿಂದ ನಮ್ಮನ್ನು ಪಾವನಗೊಳಿಸು. ಅಥವಾ, 'ನೀನು ದೇವಜನರ, ಸತ್ಯಾಚಾರ-ವಿಚಾರನಿಷ್ಠ, ಕರ್ತವ್ಯನಿರತ ಮಹಾ ವಿದ್ವಾನ್ ಮಾನವ ಶ್ರೇಷ್ಠರ ಪ್ರಕಾಶಕನೂ, ಪಾಪ ಪ್ರಶಂಸಕರ ದೂರೀಕರಣಕ್ಷಮನೂ, ಅಪಮೃತ್ಯುವಿನ ನಿವಾರಕನೂ ಆಗಿರುವೆ'—ಎಂದು ಈ ವಿಶೇಷಣಗಳನ್ನು ಭಗವಂತನಿಗೆಯೇ ಅನ್ವಯಿಸಿದರೂ ತಾತ್ಪರ್ಯದಲ್ಲಿ ವ್ಯತ್ಯಾಸ ಬಾರದು. ಆ 'ಅಂಧಸ್' ನಪುಂಸಕಲಿಂಗಸ್ಥವಾಗಿರುವುದಾದರೂ ಯಾವುದೇ ದೋಷವೂ ಬಾರದು.

ಈಗ ಅಥರ್ವ ವೇದದ ಬಗ್ಗೆ ತಿಳಿಯೋಣ:—ಅಥರ್ವವೇದವನ್ನು ಮನೋವೇದ, ನಿಗದ*, ಛಂದಸ್ಸು ಮತ್ತು ಬ್ರಹ್ಮವೇದವೆಂದೂ ಕರೆಯುತ್ತಾರೆ. ಇತರ ವೇದಗಳಿಗಿಂತ ಅಧಿಕವಾಗಿ ದೈನಂದಿನ ಧರ್ಮ-ಕರ್ಮಗಳನ್ನು, ನಿತ್ಯ-ನೈಮಿತ್ತಿಕ-ಆಹ್ನಿಕ-ದೈನಿಕ ಯಜ್ಞಾದಿಗಳನ್ನು ವರ್ಣಿಸುವುದರಿಂದ ನಿಗದ ಹಾಗೂ ನಿಗಾದ* ಎಂದೂ ಕರೆಯುತ್ತಾರೆ. ಅನೇಕ ಕಡೆಗಳಲ್ಲಿ "ಅಥರ್ವೈರ್ವಾ ಬ್ರಹ್ಮಾ"; "ಅಥರ್ವಾಂಗಿರೋಭಿರ್ಬ್ರಹ್ಮತ್ವಂ"—ಎಂಬಿತ್ಯಾದಿ ಪ್ರಕಾರದ ವಾಕ್ಯಗಳಿಂದ ಋತ್ವಿಕ್ಕುಗಳಲ್ಲಿ ಪ್ರಧಾನವಾದ ಬ್ರಹ್ಮನ ಸ್ಥಾನಕ್ಕೆ ಯೋಗ್ಯತೆ ಬರಬೇಕಾದರೆ — ಪ್ರಥಮ ವೇದತ್ರಯದೊಂದಿಗೆಯೇ ಅಥರ್ವವೇದದ ಜ್ಞಾನವೂ ಅನಿವಾರ್ಯತಃ ಬೇಕೇ ಆದುದರಿಂದ, ಬ್ರಹ್ಮತ್ವದ ಯೋಗ್ಯತಾ ಪ್ರಾಪ್ತಿಯೊಂದಿಗೆ ಈ ವೇದದ ಸ್ಫುಟವಾದ ಜ್ಞಾನ ಹೊಸೆದುಕೊಂಡಿರುವುದರಿಂದ, ಇದನ್ನು 'ಬ್ರಹ್ಮವೇದ'—ಎಂದೂ ಕರೆಯುವುದುಂಟು. ಈ ಕಥನ ಬ್ರಾಹ್ಮಣ ಗ್ರಂಥಗಳ ಅಭಿಮತಾನುಕೂಲವಾಗಿದೆ. ಅಲ್ಲದೆ, ಉನ್ನತ ಸೌಧಕ್ಕೆ 'ಕಲಶ' ಅಲಂಕಾರ ಪ್ರಾಯವಾಗಿರುವಂತೆ, ಈ ಅಥರ್ವವೇದ ವೇದಚತುಷ್ಟಯ ಮಂದಿರಕ್ಕೆ 'ಕಲಶಪ್ರಾಯ'ವಾಗಿರುವ ಕಾರಣದಿಂದಲೂ ಇದನ್ನು 'ಬ್ರಹ್ಮವೇದ' — ಎಂದು ನಿರ್ದಿಷ್ಟವಾಗಿದೆ. 'ಬ್ರಹ್ಮ' ಎಂಬ ಶಬ್ದ, ತಾದಾತ್ಮ್ಯಭಾವದಿಂದ [ರಾಮನೇ ಪಿತೃಭಕ್ತ; ಪಿತೃಭಕ್ತನೆಂದರೆ ರಾಮನೇ — ಎಂದು ವರ್ಣಿಸಿ, ರಾಮತ್ವವೇ ಪಿತೃಭಕ್ತತ್ವ; ಪಿತೃಭಕ್ತತ್ವವೇ ರಾಮತ್ವ. ಅದೇ ಇದು; ಇದೇ ಅದು—ಎಂದು ಅಲಂಕಾರಮಯೀ ಭಾಷೆಯಲ್ಲಿ ಹೇಳುವುದನ್ನು 'ತಾದಾತ್ಮ್ಯಭಾವ'ವೆನ್ನುತ್ತಾರೆ.]. ನೋಡಲ್ಪಟ್ಟಾಗ, ಬ್ರಹ್ಮಾಂಡಗತ ಸರ್ವವ್ಯಾಪಕ ಪುರುಷನೂ ಬ್ರಹ್ಮ, ಮನಸ್ಸು—ಇವೇ ಮೊದಲಾದ ಅರ್ಥಗಳೂ ಕೂಡ ಆಗುತ್ತವೆ.

"ಛಂದಾಂಸಿ ಛಾಂದನಾತ್" [ನಿರುಕ್ತ:-೧-೩-೧೨-೫] "ಬಚ್ಚಿಡುವುದು, ಮುಚ್ಚಿಡುವುದು" ಎಂಬರ್ಥಗಳನ್ನುಳ್ಳ 'ಛದಿ' ಧಾತುವಿನಿಂದ ಉದಿಸಿದ ಶಬ್ದ, "ಛಂದಸ್" ಛಾಂದೋಗ್ಯೋಪನಿಷತ್ತಿನಲ್ಲಿ ಬರುವ, "ದೇವತೆಗಳು ತಮ್ಮನ್ನು ನುಂಗಲು ಬಂದ ಮೃತ್ಯುವಿಗೆ ಸಿಕ್ಕ ಬಾರದೆಂದು ಜಲತಳದಲ್ಲಿ ಹುದುಗಿಕೊಂಡರು"—ಎಂಬ ಆಖ್ಯಾಯಿಕೆಯ ಆಧಾರದಿಂದ, "ಹುಗಿದಿಡುವುದು, ಮುಚ್ಚಿಡುವುದು ಯಾವುದೋ ಅದೇ ಛಂದಸ್"—ಎಂದು ಯಾಸ್ಕರೆಂದಿದ್ದಾರೆ. ಮತ್ತು 'ಛಂದಸ್' ಶಬ್ದಕ್ಕೆ 'ಇಚ್ಛೆ,

---

* ಅನ್ಯರ ಕಿವಿದೆರೆಯನ್ನು ಮುಟ್ಟಬಲ್ಲಷ್ಟು ಉಚ್ಚ ಧ್ವನಿಯಿಂದ ಘೋಷಿಸಲ್ಪಡುವ, ಗಾನ ಮಾಡಲ್ಪಡುವ ಯಾವುದೇ ಮಂತ್ರಸ್ತೋಮವಾದರೂ ನಿಗದ, ನಿಗಾದ-ಎಂಬರ್ಥವಿದೆ. ಆದರೆ, ಮುನ್ನ ವಿಸ್ತೃತಾರ್ಥ ಹೊಂದಿದ್ದ ಶಬ್ದಗಳೇ ಕಾಲಕ್ರಮದಲ್ಲಿ ಸಂಕುಚಿತಾರ್ಥ ಹೊಂದುವುದು ಭಾಷಾಶಾಸ್ತ್ರಜ್ಞರು ತಿಳಿದ ವಿಷಯವೇ. 'ಪಂಕಜ'—ಎಂದೊಡನೆ 'ತಾವರೆ'ಯೇ ಗ್ರಾಹ್ಯವಾಗುತ್ತದಷ್ಟೆ? ಪಂಕದಲ್ಲಿ ಕ್ರಿಮಿಕೀಟಗಳೂ ಹುಟ್ಟವೇ?

ಸುಖ, ಆನಂದ'—ಆದಿ ಸದರ್ಥಗಳೂ, ಮೋಸ, ಸೇಡು [ಹುಯ್ಯಿ], ದ್ರೋಹ, ಕುಟಿಲತೆ—ಮೊದಲಾದ ದುರರ್ಥಗಳೂ ಇವೆ. "ಚಿತ್ಪತಿರ್ಮಾ ಪುನಾತು, ವಾಕ್ಪತಿರ್ಮಾ ಪುನಾತು" [ಯಜು:-೪-೪.]—"ಚಿತ್ತದೊಡೆಯನಾದ ಭಗವಂತ ನನ್ನ ಚಿತ್ತವನ್ನು ಪಾವನಗೊಳಿಸಲಿ. ವಾಣಿಯ ಒಡೆಯನಾದ ಪರಮಾತ್ಮ ನನ್ನ ವಾಣಿಯನ್ನು ನಿರ್ಮಲಗೊಳಿಸಲಿ"; "**ತ್ರಿಭಿಪವಿತ್ರೈರಪುಪೋದ್ಧ್ಯರ್ಕಂ**" [ಋಕ್:-೩-೨೬-೮.] "**ಚರಿತಸ್ಯ ಭೂಮನಾ ಗಚ್ಛತ ಸವಿತುರ್ದಾಶುಷೋ ಗೃಹಂ**" [ಋಕ್:-೧-೧೧೦-೨]—ಎಂದರೆ ಕ್ರಮಶಃ "ಮಾನ್ಯನಾದ ಜೀವಾತ್ಮನನ್ನು ಸನ್ಮನಸ್ಸು, ಸದ್ವಾಣಿ, ಸಚ್ಛರೀರಗಳಿಂದ ಪಾವನಗೊಳಿಸಿಕೊಳ್ಳಬೇಕು"; 'ಸಚ್ಚಾರಿತ್ರ್ಯದ ಮಹಿಮೆಯಿಂದ ಸರ್ವದಾತೃವೂ ಸತ್ಪ್ರೇರಕನೂ ಆದ ಭಗವಂತನ ಗ್ರಾಹ್ಯವಾದ ಸ್ತರಕ್ಕೆ ಏರಿರಿ"; "**ಉಪಹೂತೋ ವಾಚಸ್ಪತಿರುಪಾಸ್ಮಾನ್ವಾಚಸ್ಪತಿರ್ಹ್ವಯತಾಂ**" [ಅಥರ್ವ:-೧-೧-೪] — "ನಮ್ಮಿಂದ ಮಾನಸಿಕ ಸಾಮೀಪ್ಯಕ್ಕಾಗಿ ಪ್ರಾರ್ಥಿತನಾದ, ವೇದವಾಗ್ಧಾರಕನೂ, ವಾಕ್ಪತಿಯೂ ಆದ ಪರಮಾತ್ಮನು, ನಮ್ಮನ್ನು ತಮ್ಮ ಸನಿಯಕ್ಕೆ ಕರೆದುಕೊಳ್ಳಲಿ."—ಈ ರೀತಿಯ ಪಾಠಗಳನ್ನು ಕಲಿಸುವ ವೈದಿಕ ಧರ್ಮದಲ್ಲಿ ಕೆಟ್ಟದಾವುದಕ್ಕೂ ಸ್ಥಾನವೇ ಇಲ್ಲ. ಎಂದಮೇಲೆ, ಅಥರ್ವವೇದದ ಇನ್ನೊಂದು ಹೆಸರಾದ ಛಂದೋವೇದದ ವಿವೇಚನ ಮಾಡುವಾಗ 'ಶುಭಕಾಮನಾ, ಸದಿಚ್ಛಾ, ಆನಂದ ಮೊದಲಾದುವನ್ನೇ ಗ್ರಹಿಸಬೇಕಷ್ಟೆ. ನಿಜವಾಗಿ ಅಥರ್ವವೇದ ಜೀವಾತ್ಮನಿಗೆ ಪರಮಾತ್ಮನ ಆನಂದವನ್ನೇ ಧಾರೆಯೆರೆಯುವುದು. ಆದುದರಿಂದ, ಛಂದಸ್ಸು—ಎಂದರೆ 'ಆನಂದ' ಎಂದೇ ಗ್ರಹಿಸಬೇಕು.

ಅನೇಕ ಕಡೆಗಳಲ್ಲಿ ವೇದಪದವನ್ನು ಏಕವಚನದಲ್ಲಿಯೂ ಉಲ್ಲೇಖಿಸಲಾಗಿದೆ. ಉದಾಹರಣೆಗೆ-**ವೇದೋಽಖಿಲೋಧರ್ಮಮೂಲಂ**' [ಮನುಸ್ಮೃತಿ:-೨-೬], '**ಪಿತೃದೇವ ಮನುಷ್ಯಾಣಾಂ ವೇದಶ್ಚಕ್ಷುಃ ಸನಾತನಂ**' [ಮನುಸ್ಮೃತಿ:-೧೨-೯೪], '**ಛಂದಃ ಪಾದೌತು ವೇದಸ್ಯ**' [ಪಾಣಿನೀಯ ಶಿಕ್ಷಾಸೂತ್ರ] ಮೊದಲಾದುವಿವೆ. ಇದಕ್ಕೆ ಕಾರಣವೇನೆಂದರೆ, ದೈವೀ ವಾಕ್ ಅಥವಾ ಈಶ್ವರೀಯ ಜ್ಞಾನದ ರೂಪದಲ್ಲಿ ವೇದವು ಒಂದೇ. ಮಂಗಳ ಪ್ರಕೃತಿ ಮತ್ತು ವಿಷಯಭೇದದ ಕಾರಣದಿಂದಾಗಿ ಮೇಲೆ ಹೇಳಿದಂತೆ ವೇದಗಳು ನಾಲ್ಕು ಎಂದು ಹೇಳಿದ್ದಾರೆ. ಎಂದರೆ, ಸಾಮೂಹಿಕ ದೃಷ್ಟಿಯಿಂದ ವೇದ ಒಂದು; ವಿಷಯಗಳ ದೃಷ್ಟಿಯಿಂದ ನಾಲ್ಕು ಎನ್ನಬಹುದು. ಮಾತ್ರವಲ್ಲ, ವೇದಗಳಲ್ಲಿ ಪರಾ ಮತ್ತು ಅಪರಾ ಎಂಬ ಎರಡು ಪ್ರಕಾರದ ವಿದ್ಯೆಗಳಿರುವುದರಿಂದ, ವೇದಗಳು ಎರಡು ಎಂಬುದೂ ಹಲಕಡೆ ಬಳಕೆಯಲ್ಲಿದೆ. ಪರಮಾತ್ಮನ ಯಥಾವತ್ ಪ್ರಾಪ್ತಿಯ ವಿದ್ಯೆಯು ಅತ್ಯಂತ ಉದಾತ್ತವಾದುದರಿಂದ ಅದನ್ನು ಪರಾವಿದ್ಯೆ *ಯೆಂದು

* ಈ ಪರಾ—ಅಪರಾ ವಿದ್ಯೆಗಳ ವಿಷಯ ವೈದಿಕ ಸಾಹಿತ್ಯದ ಮೂರ್ಧನ್ಯ ವಿದ್ವನ್ಮಣಿಗಳ ಮಸ್ತಿಷ್ಕವನ್ನೂ ಕುಕ್ಕಿ ತಿನ್ನುವ ವಿಷಯವೇ ಆಗಿದೆ. ಮಹಾಶಾಲ ಶೌನಕನಂತಹ ಆಧ್ಯಾತ್ಮಿಕೀ ವಿದ್ಯಾಭಿಜ್ಞನೂ ಕೂಡ ದಿಙ್ಮೂಢನಾಗಿ, ಅಂಗಿರಸ ಋಷಿಗೆ ಮೊರೆಯಿಡುತ್ತಾನೆ. ಅಧ್ಯಾತ್ಮವಿದ್ಯಾಧುರಂಧರ ಅಂಗಿರಸನು, ತನ್ನ ಉಪದೇಶ ಪ್ರದಾನ ಸಂದರ್ಭದಲ್ಲಿ "ದ್ವೇ ವಿದ್ಯೇ ವೇದಿತವ್ಯೇ... ಪರಾಚೈವಾ ಪರಾ ಚ" [ಮುಂಡಕ:-೧-೧-೪.]—"ಪರಾ ಮತ್ತು ಅಪರಾ ಎಂಬ ಎರಡು ವಿದ್ಯೆಗಳೂ ತಿಳಿಯಬೇಕಾದವು"—ಎಂದಾರಂಭಿಸಿ, "ತತ್ರಾಪರಾ ಋಗ್ವೇದೋ ಯಜುರ್ವೇದ ಸಾಮವೇದೋಽಥರ್ವವೇದಃ......... ಅಥ ಪರಾ ಯಯಾ ತದಕ್ಷರಮತಿಗಮ್ಯತೇ" [ಮುಂಡಕ:-೧-೧-೫.]—"ಈ ಸ್ಥಾನದಲ್ಲಿ, ಋಕ್, ಯಜುಃ, ಸಾಮ, ಅಥರ್ವವೆಂಬ

P.T.O.

ಹೇಳುತ್ತಾರೆ. ಕಾರ್ಯರೂಪವಾದ ಪೃಥ್ವಿ, ಅಪ್, ತೇಜಸ್ ಮೊದಲಾದ ಸ್ಥೂಲ ತತ್ತ್ವಗಳಿಂದ ಹಿಡಿದು, ಕಾರಣರೂಪವಾದ ಪ್ರಕೃತಿ ಪರ್ಯಂತ ಎಲ್ಲಾ ಪದಾರ್ಥಗಳ ಗುಣಜ್ಞಾನ ಮತ್ತು ಅದರ ಉಪಯೋಗದಿಂದ ಕಾರ್ಯಸಿದ್ಧಿ ಮತ್ತು ಉಪಕಾರ ಪಡೆದುಕೊಳ್ಳುವ ವಿದ್ಯೆಯೇ 'ಅಪರಾ'.

ವೇದವು ಈಶ್ವರೀಯ ಜ್ಞಾನದ ದೃಷ್ಟಿಯಿಂದ ಒಂದೇ ಆದರೂ, ಈ ಜ್ಞಾನವು ಅನಂತವಾಗಿದೆ; ಈ ದೈವೀ ವಾಕ್ ಆಕಾಶದಂತೆ ಸರ್ವವ್ಯಾಪಕವಾಗಿದೆ. ಮನುಷ್ಯರಿಗೆ ಇದರ ಕೊನೆಯ ಕಲ್ಪನೆಯನ್ನೂ ಮಾಡಲಾಗದು. ಆದುದರಿಂದ **ವೇದಗಳು ಅನಂತವೆಂದೂ*** ಹೇಳುತ್ತಾರೆ. ಇದರ ತಾತ್ಪರ್ಯವೇನೆಂದರೆ, ಮನುಷ್ಯರು ತಮ್ಮ ಸಾಮರ್ಥ್ಯ ಅಥವಾ ಬುದ್ಧಿಬಲಕ್ಕನುಸಾರವಾಗಿ ಬೇಕಾದಷ್ಟು ಜ್ಞಾನವನ್ನು ವೇದದಿಂದ ಪಡೆಯಬಹುದು. ಒಂದೇ ವೇದಮಂತ್ರದ ವ್ಯಾಖ್ಯಾನವನ್ನು ಒಬ್ಬ ಸಾಧಾರಣ ಬುದ್ಧಿಯ

---

ವೇದಗಳ ಅನ್ಯಶಾಸ್ತ್ರ ಗ್ರಂಥಗಳೊಂದಿಗೆ ಅಪರಾ; ಮತ್ತು ಯಾವುದರಿಂದ ಆ ಅಕ್ಷರ ಬ್ರಹ್ಮತತ್ತ್ವವನ್ನು ತಿಳಿಯಲ್ಪಡುವುದೋ, ಅದು ಪರಾ"—ಎನ್ನುತ್ತಾನೆ. "ಏನಿದು ಜಂಜಾಟ. ಚತುರ್ವೇದಗಳೂ ಅಪೌರುಷೇಯ—ಎನ್ನುವುದು; ಅದೇ ಉಸಿರಿನಲ್ಲಿ ಆ ವೇದಗಳಿಂದ ಬ್ರಹ್ಮ ಸಾಕ್ಷಾತ್ಕಾರವಾಗದು—ಎಂದು ಭಾಸವಾಗುವಂತೆ 'ಅಪರಾ' ವಿದ್ಯೆಯಲ್ಲಡಕುವುದು. ಇನ್ನಾವುದೋ ಆ ಅಕ್ಷರಬ್ರಹ್ಮವನ್ನು ಅರಿವಿಗೆ ತರುವ ವಿದ್ಯೆಯಿದೆ—ಎನ್ನುವುದು. ಎಂತಹ ಗೊಂದಲ?"—ಎಂದು ಮಹಾ ಪ್ರಾಜ್ಞರೂ ತಲೆ ಕೆರೆದುಕೊಳ್ಳುವಂತೆ ಮಾಡುವುದು"—ಎಂದು ಭ್ರಾಂತಿಯುಂಟು ಮಾಡುವುದು. ವಸ್ತುತಃ ಚತುರ್ವೇದಗಳಿಂದ ಬ್ರಹ್ಮ ಸಾಕ್ಷಾತ್ಕಾರ ಸಲ್ಲದು—ಎಂದೇ ಅಂಗಿರಸನ ಮತವೇ? ವೇದಗಳಿಂದ ಬೇರೆಯಾದ ಯಾವುದೇ ಗ್ರಂಥದ ಹೆಸರನ್ನೂ ಹೇಳದೆ ಬ್ರಹ್ಮತತ್ತ್ವದ ನಿರೂಪಣ ಮಾತ್ರ ಮಾಡಿರುವುದು ಅಂಗಿರಸನ ಮತ. 'ವೇದಗಳು ಅಕ್ಷರ ಸಾಕ್ಷಾತ್ಕಾರ ಸಾಧನವಲ್ಲ—ಎಂಬುದಂತೂ ಅಲ್ಲ'—ಎಂದು ನಿಖರವಾಗಿ ಹೇಳಬಹುದು. "ಹಾಗಾದರೆ, ಇನ್ನೇನು ಅಭಿಪ್ರಾಯ ಅಂಗಿರಸನದು?"—ಎಂಬ ಪ್ರಶ್ನೆ ಎದ್ದೇ ತೀರಿತು.

ಚಮತ್ಕಾರ ಕೇವಲ ಶಬ್ದಶಾಸ್ತ್ರಕ್ಕೆ ಸಂಬಂಧಿಸಿದೆ. 'ಅಪರಾ' ಎಂಬ ನುಡಿಗೆ, 'ಪರಾ'—ಎಂದರೆ ಶ್ರೇಷ್ಠ; ಶ್ರೇಷ್ಠವಲ್ಲದುದು "ಅಪರಾ"—ಎಂದೂ ಅರ್ಥ ಮಾಡಬಹುದು. ಅಪರಾ—ಎಂಬುದಕ್ಕೆ ಈ ಅರ್ಥ ಗ್ರಹಿಸಿದರೆ—ತೀರಿತು ಕತೆ. ಅಪೌರುಷೇಯವಾದ ವೇದಗಳೂ ಸಾಕ್ಷಾತ್ಕಾರ ಮಾಡಿಸಲಾರದ ವ್ಯರ್ಥ ಶಬ್ದಜಾಲ—ಎಂಬ ಅತಿ ಅನಿಷ್ಟ ನಿಷ್ಕರ್ಷೆಗೆ ಬರಬೇಕಾದೀತು! ಇದಂತೂ ಗ್ರಾಹ್ಯವೇ ಅಲ್ಲದ ಅರ್ಥ. 'ಅಪರಾ ಸಾ ಯಸ್ಯಾಃ ಪರಾ ನಾಸ್ತಿ ವಿದ್ಯಾ"—"ಯಾವುದಕ್ಕಿಂತ ಶ್ರೇಷ್ಠವಾದ ವಿದ್ಯೆ ಇಲ್ಲವೋ, ಅದೇ ಅಪರಾ ವಿದ್ಯಾ"—ಎಂಬ ಮತ್ತೊಂದರ್ಥವಿದೆ. ನಿಶ್ಚಯವಾಗಿ ಇದೇ ಗ್ರಾಹ್ಯಾರ್ಥ. ಏಕೆಂದರೆ—ವೇದಗಳಿಗೆ ಸಿಕ್ಕಲೇಬೇಕಾದ ಸ್ಥಾನ-ಮಾನಗಳು ಈ ಅರ್ಥದಿಂದಲೇ ಲಭಿಸೀತು. ಹಾಗಾದರೆ, 'ಪರಾ' ವಿದ್ಯೆಯ ಗತಿ? ಚಿಂತೆಗೆ ಕಾರಣವಿಲ್ಲ, 'ಪರಾ' ಎಂದರೆ ಶ್ರೇಷ್ಠ—ಎಂಬ ಅರ್ಥ ಅಖಂಡ; ಖಚಿತ. ಹೀಗೆ ಅಪರಾ–ಪರಾ ಎಂಬ ವಿದ್ಯೆ ಕುರಿತು ಮಾತನಾಡುವಾಗ ಅಂಗಿರಸರ ಅಭಿಪ್ರಾಯವಿದೇ. ಅರ್ಥವರಿಯದೆ, ಸಾಕ್ಷಾತ್ಕಾರಕ್ಕೆ ಬೇಕಾದ ಮನೋಭಾವವನ್ನೇ ಬೆಳೆಯಿಸಿಕೊಳ್ಳದೆ 'ಓದುವುದೇ ಪುಣ್ಯ'—ಎಂದು, ವೇದಗಳನ್ನು ಕೇವಲ ರೂಢಿಗಾಗಿ [Dogmatic approach] ಓದಿದಾಗ, ಅವು 'ಅಪರಾ' ಎಂಬುದು ಸತ್ಯ; ಅವನ್ನೇ ಮನನ-ಚಿಂತನ-ತಪಸ್ಯಾಪೂರ್ವಕ ಅಧ್ಯಯನ ಮಾಡಿದಾಗ [Progmatic approach] ಅವೇ ಪರಾವಿದ್ಯಾ.'

* 'ಅನಂತಾ ವೈ ವೇದಾಃ'—ಎಂದು ವೇದಗಳ ಅರ್ಥವಂತಿಕೆಯ ಬಹುತ್ವದಿಂದ—ಎಂದಲ್ಲಿ ಅದು ಸರಿ. ಕಾವ್ಯಗಳಲ್ಲಿ ಅಧಿಕ್ಯ ವರ್ಣಿಸುವಾಗ, 'ಬಹಳ' ಎಂದು ಹೇಳಬೇಕಾದಾಗ, "ಆ ಶ್ರೀಮಂತನ ಐಶ್ವರ್ಯ ಅನಂತವೇ ಕಾಣಯ್ಯ"—ಎಂಬಂತೆ, 'ಅನಂತ' ಎನ್ನಬಹುದು. ವೇದ

ಪಂಡಿತನು ಎಷ್ಟು ಮಾಡಬಲ್ಲನೋ, ಅವನಿಗಿಂತ ಹೆಚ್ಚಿನ ಯೋಗ್ಯತೆ ಉಳ್ಳವನು ಅದಕ್ಕಿಂತಲೂ ವಿಶೇಷ ರೀತಿಯಲ್ಲಿ ಅದೇ ಮಂತ್ರದ ವ್ಯಾಖ್ಯಾನ ಮಾಡಬಲ್ಲನು.

ಉಕ್ತ ನಾಲ್ಕು ಸಂಹಿತೆಗಳನ್ನಲ್ಲದೆ, ಬ್ರಾಹ್ಮಣ, ಉಪನಿಷತ್, ಉಪವೇದಾದಿಗಳನ್ನೂ, ವೇದಗಳೆಂದು ಕೆಲವರು ಕರೆಯುತ್ತಾರೆ. ಇದು ಭ್ರಾಂತಿಜನಕವಾಗಿದೆ. ಇಲ್ಲಿ, ವೇದಗಳು ಸಮಸ್ತ ಸತ್ಯವಿದ್ಯಾ ಭಂಡಾರವಾಗಿದ್ದು, ಅಷ್ಟೇ ಏಕೆ, ಮೂಲವೇ ಆಗಿದ್ದು, ಅವುಗಳ ದೃಢವಾದ ತಳಪಾಯದ ಮೇಲೆ ರಚಿತವಾಗಿರುವ ಗ್ರಂಥಗಳನ್ನೂ, ವೇದಮಂತ್ರಗಳ ಮೇಲೆ ಋಷಿಜನರು ಮಾಡಿರುವ ವ್ಯಾಖ್ಯಾನಗಳನ್ನೂ ಔಪಚಾರಿಕವಾಗಿ, ದ್ವಾಪರದ ಐತಿಹಾಸಿಕ ಘಟನಾಕಾಲದಲ್ಲಿ ಶ್ರೀಕೃಷ್ಣನು ಕೊಟ್ಟ ಉಪದೇಶವಾದ ಭಗವದ್ಗೀತೆ, ಉಪನಿಷತ್ತುಗಳ ಅತಿ ಮೂಲ್ಯವಾದ ಆಧಾರದ ಮೇಲೆ ನಿಂತ ಕಾರಣ, ಅದೂ ಕೂಡ 'ಉಪನಿಷತ್ತು'—ಎಂದು ನಿರ್ದೇಶಿಸಲ್ಪಡುವಂತೆ, 'ವೇದ' ಎನ್ನಬಹುದಷ್ಟೇ. ಋಷಿ–ಮುನಿಕೃತ ಬ್ರಾಹ್ಮಣೋಪನಿಷತ್ತುಗಳನ್ನೂ ಕೇವಲ ಅವುಗಳ, ವೇದಾನುಕೂಲತೆಯಿಂದಾಗಿ 'ವೇದ' ಎನ್ನಬಹುದಾದರೂ, ಅವು ಮೂಲ ವೇದಸಂಹಿತೆಗಳಂತೆ ಅಪೌರುಷೇಯವಲ್ಲದ ಕಾರಣ; ಸಂಹಿತೆಗಳಷ್ಟೇ ಪ್ರಾಮಾಣಿಕವಲ್ಲ; ಸಂಹಿತೆಗಳಿಗೆ ಸಮನಾದ ಸ್ತರದಲ್ಲಿ ಅವುಗಳನ್ನು ಸ್ಥಾಪಿಸುವುದು ಸತ್ಯವಾದ ಅರ್ಥದಲ್ಲಿ ಬುದ್ಧಿಸಂಗತವಲ್ಲ; ತರ್ಕ–ಪ್ರಮಾಣಗಳ ಪ್ರಹಾರಗಳನ್ನು ಅವು ಸಹಿಸಲಾರವು. ಅದೇ ಕಾರಣದಿಂದ, ಮಹರ್ಷಿ ದಯಾನಂದರು **"ನ ಬ್ರಾಹ್ಮಣಾನಾಂ, ನೋಪನಿಷದಾಂ ವೇದತ್ವಂ; ಕೇವಲಂ ಸಂಹಿತಾನಾಮೇವ ವೇದತ್ವಂ ತೂಪಪದ್ಯತೇ"**–"ಬ್ರಾಹ್ಮಣ ಗ್ರಂಥಗಳ, ಉಪನಿಷತ್ತುಗಳ ವೇದತ್ವ ಗ್ರಾಹ್ಯವಲ್ಲ. ಕೇವಲ ಸಂಹಿತೆಗಳಿಗೆ ವೇದತ್ವ ಶೋಭಿಸುತ್ತದೆ"—ಎಂದುದು ಸರ್ವರಿಗೂ ಗ್ರಾಹ್ಯ. ಸಂಹಿತೇತರ ಬ್ರಾಹ್ಮಣಾರಣ್ಯಕೋಪನಿಷತ್ತುಗಳನ್ನೂ ವೇದವೆಂದೇ ಕರೆಯುವ ಹಲ ಜನರ ನಿಲುವು ಅನುಚಿತ.

ತಾತ್ಪರ್ಯವಿಷ್ಟೇ, ಕೇವಲ ನಾಲ್ಕು ಸಂಹಿತೆಗಳಿಗೆ ಮಾತ್ರ ಅನ್ವಯಿಸುತ್ತದೆ. ಯಾಕೆಂದರೆ, ಇವೇ ಶ್ರುತಿಗಳು; ಇದೇ ಆದಿಜ್ಞಾನ ಮತ್ತು ಆದಿಭಾಷೆಯುಷ್ಟೇ ರೂಪ. ಇತರ ಗ್ರಂಥಗಳು ಮನುಷ್ಯ ಕೃತ ರಚನೆಗಳು, ಶ್ರುತಿಸಂಜ್ಞೆಗೆ ಅರ್ಹವಲ್ಲ. ಒಂದು ವೇಳೆ, ಅಂತಃಪ್ರೇರಣೆಯಿಂದ ಬರೆದ ಸಾಹಿತ್ಯಗಳನ್ನು ಶ್ರುತಿಗಳೆಂದು ಸ್ವೀಕರಿಸಿದರೆ, ಕಾಳಿದಾಸನ ಮೇಘದೂತ, ಶೇಕ್ಸ್‌ಪಿಯರನ ನಾಟಕಗಳು, ಇವನ್ನೆಲ್ಲಾ ಶ್ರುತಿಗಳೆಂದೇ ಹೇಳಬೇಕು. ಇದರಿಂದ ಅನರ್ಥವಾಗುವುದು ನಿಶ್ಚಿತ. "ಇದಮಿತ್ಥಂ"—"ಇದು ಹೀಗೆಯೇ" ಎಂಬ ನಿಶ್ಚಯಾತ್ಮಕತೆಯೇ ಇಲ್ಲವೆಂದ ಮೇಲೆ, ತಪ್ಪುಗಳ ಮೂಲ್ಯಾಂಕನ ಮಾಡುವುದಾದರೂ ಹೇಗೆ?

---

ಗಳನ್ನೂ ಕೂಡ. ಆದರೆ—ಮಂತ್ರ ಸಂಖ್ಯಾದ್ಯಕ್ಷ್ಮಿಯಿಂದ ಹಾಗೆಂದರೆ, ಯಾವನು ಬೇಕಾದರೂ ತನ್ನ ಮತವನ್ನು ಈ 'ಅನಂತತ್ವ'ದ ಕೊಡೆಯಡಿ ತೂರಿಸಬಹುದು. ಮೂಲ ಪ್ರಮಾಣವನ್ನೇ ಕೇಳಿದಾಗ, "ಅದು "ಅದು ವೇದಗಳ ಲುಪ್ತ ಭಾಗಗಳಾಗಳಾವುದರಲ್ಲಿಯೋ ಇತ್ತು"–ಎಂದು ಹೇಳಿ ನುಣುಚಿಕೊಳ್ಳಬಹುದು. ಯಹೂದ್ಯ-ಕ್ರೈಸ್ತರ ಕಿತ್ತಾಟದಲ್ಲಿ, ಕ್ಯಾಥೋಲಿಕ್-ಪ್ರಾಟೆಸ್ಟೆಂಟ್ ಸಂಘರ್ಷದಲ್ಲಿ ತಮಗೆ ಅಭೀಷ್ಟವಾದುದರ ಸಿದ್ಧಿಗಾಗಿ ಬೈಬಲಿನಲ್ಲಿಯೇ ಹಲವು ಕಂಡಿಕೆಗಳನ್ನು ತೂರಿಸುವುದು, ವಿಪಕ್ಷೀಯರು ಅವನ್ನು ಪ್ರಕ್ಷಿಪ್ತ (apocryphal) ವೆಂದು ಹೊರದೂಡುವುದು ನಡೆದು ಬಂದ ಐತಿಹಾಸಿಕ ಘಟನೆಯೇ ಈ ಮಾರ್ಗ ನಿಶ್ಚಯಾತ್ಮಿಕತೆಯ ಘೋರ ಶತ್ರು; ಸರ್ವಥಾ ತ್ಯಾಜ್ಯ.

# ವೇದಗಳ ಋಷಿ, ದೇವತೆ ಛಂದಸ್ಸು ಮತ್ತು ಸ್ವರಗಳು

ಸಂಹಿತೆಗಳನ್ನು ತೆರೆಯುವಾಗ, ಪ್ರತಿಯೊಂದು ಸೂಕ್ತ ಅಥವಾ ಅಧ್ಯಾಯದ ಮೇಲೆ ಋಷಿ, ದೇವತೆ, ಛಂದಸ್ಸು ಮತ್ತು ಸ್ವರಗಳ ಹೆಸರುಗಳನ್ನು ನಾವು ಕಾಣ ಬಹುದು.[೧] ಇವುಗಳ ರಹಸ್ಯವನ್ನು ತಿಳಿಯದೆ, ವೇದಾಧ್ಯಯನ ಮಾಡಿ ಪ್ರಯೋಜನ ವಿಲ್ಲ. ವಿಶೇಷವಾಗಿ, ಋಷಿ ಮತ್ತು ದೇವತೆಗಳ ಕುರಿತಾಗಿ ಜನರಲ್ಲಿ ತುಂಬಾ ಭ್ರಾಂತಿಯು ಹರಡಿದೆ. ಋಷಿಗಳೆಂದರೆ ಮಂತ್ರಗಳ ರಚನೆ ಮಾಡಿದವರೆಂದೂ, ಇವರಲ್ಲಿ ಪ್ರಾಚೀನ ಮತ್ತು ನವೀನ ಋಷಿಗಳಿರುವರೆಂದೂ, ಹಾಗೂ ದೇವತೆಗಳೆಂದರೆ ಇಚ್ಛಾನು ಸಾರ ಸಾಕಾರಗೊಳ್ಳುವ, ಭಕ್ತರ ಅಥವಾ ಯಾಜ್ಞಿಕರ ಕಾಮನೆಗಳನ್ನು ಪೂರ್ಣಗೊಳಿ ಸುವ ಮಾಯಾವಿಗಳೆಂದೂ ಜನರಲ್ಲಿ ಭ್ರಮೆ ಇದೆ. ಈ ದೇವತೆಗಳ ರಹಸ್ಯವನ್ನು ತಿಳಿಯದೆ ವೈದಿಕ ಕಾಲದ ಜನರು ಅನೇಕೇಶ್ವರವಾದಿಗಳೆಂದೂ, ವೈದಿಕ ಧರ್ಮವು ಅಸಭ್ಯ ರಾದ ಆಚಾರ್ಯರ ಮತಸಂಪ್ರದಾಯವೆಂದೂ ತಪ್ಪು ಕಲ್ಪನೆಯ ಪ್ರಚಾರ ಮಾಡ ಲಾಗುತ್ತಿದೆ. ಆದುದರಿಂದ, ಈ ವಿಷಯಗಳ ಕುರಿತಾಗಿ, ಪ್ರಾಚೀನ ಋಷಿಗಳ ವಿಚಾರ ವೇನು? ಭ್ರಾಂತಿಗೆ ಕಾರಣವೇನು? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನು ನೋಡುವ.

**ಋಷಿ**:—ಋಷಿ ಶಬ್ದವು, ವ್ಯಾಕರಣದ ದೃಷ್ಟಿಯಲ್ಲಿ 'ಋಷೀ' ಧಾತುವಿನಿಂದ ಉತ್ಪನ್ನವಾಗಿದೆ, ಮತ್ತು 'ಋಷೀ' ಧಾತುವಿಗೆ 'ಗತಿ'ಯೆಂಬ ಅರ್ಥವಿದೆ.[೨] ಗತಿ ಯೆಂದರೆ, ಜ್ಞಾನ, ಪ್ರಾಪ್ತಿ ಮತ್ತು ಗಮನವೆಂದು ಅರ್ಥವಾಗುತ್ತದೆ. ಆದುದರಿಂದ ಋಷಿಯೆಂದರೆ ಪ್ರಾಪ್ತಜ್ಞಾನರು ಅಥವಾ ಜ್ಞಾನಿ ಎಂಬ ಅರ್ಥ.

ಜ್ಞಾನಿಗಳನ್ನು ಸಾಮಾನ್ಯವಾಗಿ ಋಷಿಗಳೆಂದು ಕರೆಯಬಹುದು. ಆದರೆ, ಜ್ಞಾನಿಗಳೆಂದು ಯಾರನ್ನು ಹೇಳುವುದು? ಕೆಲವರಿಗೆ ಸಂಗೀತದ ಜ್ಞಾನವಿದೆ. ಹೀಗೆ ಬೇರೆ ಬೇರೆ ವ್ಯಕ್ತಿಗಳಿಗೆ, ಬೇರೆ ಬೇರೆ ವಿಷಯಗಳ ಜ್ಞಾನವಿರುತ್ತದೆ. ಕಾನೂನು, ನಿರ್ದಿಷ್ಟ ಮಾರ್ಗ, ಭಾಷೆ, ಕಾಲ, ದೇಶ—ಇತ್ಯಾದಿ ವಿಷಯಗಳಲ್ಲಿ ಜ್ಞಾನಯುಕ್ತ ರಾದವರಿದ್ದಾರೆ. ಇವರನ್ನೆಲ್ಲಾ 'ಜ್ಞಾನಿಗಳು'—ಎನ್ನಲಾದೀತೇ? ಆದೀತು. ಆದರೆ, ವೇದಗಳಂತಹ ಮಾನವೋತ್ತರ ಹಾಗೂ ಈಶ್ವರೀಯ ತತ್ತ್ವಜ್ಞಾನದ ಕ್ಷೇತ್ರದಲ್ಲಿ ಇವರನ್ನೆಲ್ಲಾ 'ಋಷಿ' ಎಂಬರ್ಥದಲ್ಲಿ ಜ್ಞಾನಿಗಳೆನ್ನಲು ಸಾಧ್ಯವಿಲ್ಲ. ಆಚಾರ್ಯ ಸಾಯಣರು ತಮ್ಮ ಋಗ್ವೇದ ಭಾಷ್ಯಾ ಪ್ರಕರಣದಲ್ಲಿ, ಮುನ್ನುಡಿಯಲ್ಲಿ—"ಅತೀಂದ್ರಿ ಯಸ್ಯ ವೇದಸ್ಯ ಪರಮೇಶ್ವರಾನುಗ್ರಹೇಣ ಪ್ರಥಮತೋ ದರ್ಶನಾತ್ ಋಷಿತ್ವಂ" — "ವೇದ ಅತೀಂದ್ರಿಯ [Super-natural, Super-Rational, transcendental or Super-Sensory] ವಿಷಯ ಸಂಪನ್ನ ಜ್ಞಾನ ಪರಿಪೂರ್ಣ ಭಂಡಾರ. ಪರಮಾತ್ಮನ ಅನುಗ್ರಹದಿಂದ ಪ್ರಥಮತಃ ಯಾವನಿಗೆ ಅದರ ದರ್ಶನ ವಾಗುವುದೋ ಅವರೇ ಋಷಿಗಳು"—ಎಂದು ಪ್ರಾಚೀನ ವಿದ್ವಾಂಸರ ಹೆಜ್ಜೆಯ ಗುರುತಿನ ಮೇಲೆಯೇ ಹೆಜ್ಜೆಯಿಟ್ಟು ನಡೆದು, ಪ್ರಾಚೀನರ ಅಭಿಮತವನ್ನೇ ಉದ್ಧರಿಸಿ

---

[೧] ಸ್ವರಗಳನ್ನು ಕೇವಲ ಸ್ವಾಮೀ ದಯಾನಂದರು ಸಂಪಾದಿಸಿದ ಸಂಹಿತೆಗಳಲ್ಲಿ ಕಾಣಿಸಲಾಗಿದೆ.

[೨] ಋಷೀ ಗತೌ [ತುದಾದಿ ಗಣ] ಸರ್ವಧಾತುಭ್ಯಃಇನ್ [ಉಣಾದಿ ಸೂತ್ರ] ಇತ್ಯನೇನ ಇನ್ ॥ ಇಗುಪಧಾತ್ಕಿತ್ [ಉಣಾದಿ ಸೂತ್ರ] ಇತ್ಯನೇನ ಗುಣ ನಿಷೇಧಃ ॥ ಋಷ್ ಇನ್ = ಋಷಿ ।

ದ್ದಾರೆ. ಇದರಿಂದಲೂ ವೇದಮಂತ್ರಾರ್ಥ ದರ್ಶನ ಮಾಡಿದ ಜ್ಞಾನಿಗಳನ್ನು ಮಾತ್ರ 'ಋಷಿ'ಗಳೆನ್ನಬಹುದು. ಎಲ್ಲ ಜ್ಞಾನಿಗಳೂ, ಋಷಿಗಳಲ್ಲ; ಆದರೆ—ಎಲ್ಲ ಋಷಿಗಳೂ ಜ್ಞಾನಿಗಳಾಗಿಯೇ ಇರುತ್ತಾರೆ. "ಯಸ್ಮಾತ್ಕೋಶಾದುದಭರಾಮ ವೇದಂ ತಸ್ಮಿನ್ನಂತರವದಧ್ಮ ಏನಂ । ಕೃತಮಿಷ್ಟಂ ಬ್ರಹ್ಮಣೋ ವೀರ್ಯೇಣ ತೇನ ಮಾ ದೇವಾಸ್ತಪಸಾವತೇಹ ॥ [ಅಥರ್ವ:-೧೯-೭೨-೧] — "[ಯಸ್ಮಾತ್ ಕೋಶಾತ್] ಯಾವ ಜ್ಞಾನಕೋಶ ಸ್ವರೂಪ ಪರಮಾತ್ಮನಿಂದ, [ವೇದಂ] ವೇದವನ್ನು, [ಉತ್ ಅಭರಾಮ] ಹೆಕ್ಕಿ ತುಂಬಿಸಿಕೊಳ್ಳುತ್ತೇವೋ, [ತಸ್ಮಿನ್ನಂತಃ] ಆ ಪರಮಾತ್ಮನಲ್ಲಿಯೇ, [ಏನಂ] ಈ ವೇದವನ್ನು, [ಅವದಧ್ಮಃ] ಮತ್ತೆ ಇಟ್ಟುಬಿಡುತ್ತೇವೆ. [ಬ್ರಹ್ಮಣಃ ವೀರ್ಯೇಣ] ವೇದಬಲದಿಂದ, [ಇಷ್ಟ ಕೃತಂ] ನಮ್ಮ ಅಭೀಷ್ಟವು ಸಿದ್ಧಿಸಿತು. [ದೇವಾಃ] ಸತ್ಯನಿಷ್ಠ ಉದಾರಾತ್ಮ ಜ್ಞಾನ ತೇಜೋ ವಿರಾಜಮಾನ ವಿದ್ವಜ್ಜನರೇ ! [ತೇನ ತಪಸಾ] ನಿರ್ಭ್ರಾಂತ ಜ್ಞಾನರೂಪವಾದ ತಪಸ್ಸಿನಿಂದ, [ಇಹ] ಈ ಜಗತ್ತಿನಲ್ಲಿ, [ಮಾ ಅವತ] ನನ್ನನ್ನು ರಕ್ಷಿಸಿರಿ." ವೇದ ಈಶ್ವರೀಯ ಕೃತಿ. ಪರಿಪೂರ್ಣ ಸ್ವಚ್ಛಜ್ಞಾನ, ಮತ್ತು ಅದರ ಪ್ರಾಪ್ತಿ ಮಹಾನ್ ತಪಸ್ಸು. ಬೀಜರೂಪದಿಂದ ಸಮಸ್ತ ವಿದ್ಯೆಗಳನ್ನೂ ತನ್ನ ವಿಶಾಲಗರ್ಭದಲ್ಲಿ ಅಡಗಿಸಿಕೊಂಡಿರುವ ವೇದ, ವಸ್ತುತಃ ಈಶ್ವರನಾಮದ ವಿಶಾಲ ಕೋಶದಲ್ಲಿ ಸದಾ ಇರುವ ಶುಭ್ರ ಜ್ಞಾನದ ಅಲೌಕಿಕ ಐಶ್ವರ್ಯ. ಐಹಿಕ ವಿಷಯ ಜ್ಞಾನವೂ ವೇದದಲ್ಲಿದ್ದರೂ, ವೇದಗಳ ಮುಖ್ಯ ಪ್ರತಿಪಾದ್ಯ ವಿಷಯ ಈಶ್ವರ ಸಾಕ್ಷಾತ್ಕಾರವೇ ಆಗಿರುವ ಕಾರಣ, ಈಶ್ವರ ಸಾಕ್ಷಾತ್ಕಾರ ಪ್ರಧಾನ; ಅನ್ಯ ವಿಷಯ ಗೌಣ. ಒಂದು ಪ್ರಭುಸಾಕ್ಷಾತ್ಕಾರವಾದಲ್ಲಿ, ಬೇರೆ ಎಲ್ಲದರ ಸಾಕ್ಷಾತ್ಕಾರ ಸುಲಭಾತಿಸುಲಭ. ವೇದವೂ ಅಷ್ಟೇ; ಅದರ ಪ್ರಾಪ್ತಿಯೂ ಅಷ್ಟೇ: ದುಃಸಾಧ್ಯ ತಪಃ ಸಾಧನೆಯೇ. ಇಂತಹ ತಪೋಮಯ ಜೀವನ ನಿರ್ವಾಹಕರು ಮಾತ್ರ "ಋಷಿ"ಗಳಾದಾರು. ಬಂಧವಿಮೋಚನಕ್ಕಾಗಿಯೇ ಪ್ರಭುದತ್ತ ವೇದಜ್ಞಾನವನ್ನು, ಅವನನ್ನು ಬದಿಗೊತ್ತಿ, ಬೇರೆ ಬೇರೆ ಜ್ಞಾನಕ್ಷೇತ್ರಗಳಲ್ಲಿ ಏಳಿಗೆ ಸಾಧಿಸಲು, ವೇದಗಳ ಜ್ಞಾನದ ವಿನಿಯೋಗ ಮಾಡಿದಲ್ಲಿ, ಐಹಿಕೋತ್ಕರ್ಷವೇನೋ ಆದೀತು. ಆದರೆ, ಅಂತಹ ಕಾರ್ಯ ಆತ್ಮನಿಗೆ ಶಾಂತಿಯನ್ನೂ ತಾರದು; ಆನಂದವನ್ನೂ ಒದಗಿಸದು. ಆತ್ಮ-ಶಾಂತಿಯನ್ನು, ಆತ್ಮಾನಂದವನ್ನು ಬಲಿಕೊಟ್ಟು, ವೇದಗಳಿಂದ ಐಹಿಕ ಸುಖ ಸಾಧನಗಳ ಸಂಪಾದನೆಯತ್ತಲೇ ಹರಡಿದರೆ, ಮಾನವ ದಾನವನಾದಾನು. ಆತ್ಮಾರಾಮನಾಗದೆ, ಇಂದ್ರಿಯಾರಾಮನಾದಲ್ಲಿ, ರೋಗ-ಶೋಕ-ಸಂತಾಪ-ಪಾಪಗಳೇ ಜೋಳಿಗೆಗೆ ಬಿದ್ದಾವು. ಋಷಿತ್ವ ಲಭಿಸಿದ ಮೇಲೆಯೂ ಅವಿಚ್ಛಿನ್ನ ಜಾಗರೂಕತೆಯಿಲ್ಲವಾದರೆ, ಹೊರಟುದು ನಿಶ್ಚಲ ಶಾಂತಿಗಾಗಿ; ಪಡೆದುದು ಕೇವಲ ಭ್ರಾಂತಿಯನ್ನು.

'**ಋಷಿ**' ಎಂಬ ಶಬ್ದ, "**ಋ, ಋಷ್, ಋಷ್, ಋಷೀ**"-ಈ ನಾಲ್ಕು ಧಾತುಗಳಿಂದಲೂ ವ್ಯುತ್ಪನ್ನವಾಗುವುದು. ಈ ಎಲ್ಲಾ ಧಾತುಗಳಿಗೂ ಭಿನ್ನ-ಭಿನ್ನ ಅರ್ಥಗಳಿರುವುದಾದರೂ, ಎಲ್ಲಕ್ಕೂ ಸಾಮಾನ್ಯ [Common to all] ಅರ್ಥ 'ಗತಿ'— ಎಂಬುದು. ಈ ಗತಿ ಶಬ್ದಕ್ಕೂ "ಜ್ಞಾನ, ಪ್ರಾಪ್ತಿ, ಗಮನ" ಎಂಬ ಮೂರು ಅರ್ಥಗಳಿವೆ. ಆದರೂ ಒಂದು 'ಗಮನ' ಎಂಬರ್ಥವನ್ನೇ ಹಿಡಿದು ಮುನ್ನಡೆದರೂ, ಪಥ ಆಧ್ಯಾತ್ಮಿಕವಾಗಿದ್ದಲ್ಲಿ, ಈ ಜ್ಞಾನ-ಪ್ರಾಪ್ತಿಗಳೂ ಅನಿರೀಕ್ಷಿತವಾಗಿಯೇ ನಮ್ಮ ಜೋಳಿಗೆಗೆ ಬೀಳುವುದರಲ್ಲಿ ಸಂದೇಹವಿಲ್ಲ. ಹೀಗೆ, ಋಷಿಗಳಾರು?—ಎಂದು ಪ್ರಶ್ನಿಸಿದಾಗ,

ಬರುವ ಉತ್ತರವಿಷ್ಟೇ: "ಋಷಿರ್ದರ್ಶನಾತ್, ಋಷಿಃ ಸಂಪ್ರಾಪ್ತ ಪ್ರಗತಿಶೀಲತ್ವಾತ್"—"ಅತೀಂದ್ರಿಯ ಜ್ಞಾನ ದರ್ಶನಕ್ಷಮನು—ಎಂದರೆ, ಇಂದ್ರಿಯಗಳ ಹಿಡಿತಕ್ಕೆ ಸಿಕ್ಕದ, ಪ್ರತ್ಯಕ್ಷವಲ್ಲದ, ಪರೋಕ್ಷವಾದರೂ ಅಪರೋಕ್ಷವೆಂಬಷ್ಟು ಸ್ಫುಟವಾದ ತತ್ತ್ವ ದರ್ಶನ ಮಾಡಬಲ್ಲವನು ಋಷಿ; ಪರದ ಬಗೆಗಂತೂ, ಇಹದ ಬಗೆಗೂ ಅಂತೆಯೇ ವೃಷ್ಟಿಯಿತ್ತು, ವ್ಯೆಯಕ್ತಿಕ, ಪಾರಿವಾರಿಕ, ಸಾಮಾಜಿಕ, ರಾಷ್ಟ್ರೀಯ, ಅಂತರರಾಷ್ಟ್ರೀಯ, ಆರ್ಥಿಕ, ಸಾಂಸ್ಕೃತಿಕ—ಮೊದಲಾದ ಕ್ಷೇತ್ರಗಳಲ್ಲಿಯೂ ಪ್ರಾಮಾಣಿಕವೂ, ನಿಃಸ್ವಾರ್ಥವೂ, ಸರ್ವಹಿತಕಾರಿಯೂ ಆದ ಪ್ರಶಸ್ತಪಥದಲ್ಲಿ ಪ್ರಗತಿ ಸಾಧಿಸುವವನೂ ಋಷಿಯೇ.

ಕಾಲಕ್ರಮೇಣ ಋಷಿ ಶಬ್ದಾರ್ಥವು ವಿಶಾಲವಾಗುತ್ತಾ ಬಂದಂತೆ ಕಾಣುತ್ತದೆ. "ಋಷಿರ್ಮಂತ್ರಾರ್ಥಜ್ಞಃ" ಎಂದರೆ ವೇದಮಂತ್ರಗಳ ಅರ್ಥವನ್ನು ತಿಳಿದುಕೊಂಡವರು ಋಷಿಗಳೆಂದು ಬೋಧಾಯನ ಧರ್ಮಸೂತ್ರ ೨-೬-೩೬ರ ವ್ಯಾಖ್ಯಾನದಲ್ಲಿ ಗೋವಿಂದ ಸ್ವಾಮಿಗಳು ಹೇಳಿದ್ದಾರೆ. "ಋಷಿರ್ಮಂತ್ರಾಣಾಂ ವ್ಯಾಖ್ಯಾತಾ" ಎಂದರೆ, ವೇದ ಮಂತ್ರಗಳ ವ್ಯಾಖ್ಯೆ ಮಾಡುವವರನ್ನೂ ಋಷಿಗಳೆಂದು ಉವ್ವಟರು ಹೇಳಿದ್ದಾರೆ. "ಋಷೇರ್ದ್ರಷ್ಟ ದೃಷ್ಟಾರ್ಥಸ್ಯ ಪ್ರೀತಿರ್ಭವತ್ಯಾಖ್ಯಾನ ಸಂಯುಕ್ತಾ" ಎಂದರೆ, ಮಂತ್ರಾರ್ಥದ ದರ್ಶನ ಮಾಡಿದವರನ್ನು ಯಾಸ್ಕಾಚಾರ್ಯರು ಋಷಿಗಳೆಂದಿದ್ದಾರೆ [ನಿರುಕ್ತ ಕಾಂ: ೧೦-೧೦-೨]. ಋಷಿಗಳಲ್ಲದವರಿಗೆ, ತಪೋಹೀನರಿಗೆ ಮಂತ್ರಾರ್ಥವು ಗೋಚರವಾಗುವುದಿಲ್ಲವೆಂದು ಇವರ ನಂಬಿಕೆ [ನಿರುಕ್ತ:-೧೩-೧೨೧] ಇನ್ನೊಂದು ಕಡೆಯಲ್ಲಿ, "ಸಾಕ್ಷಾತ್ಕೃತ ಧರ್ಮಾಣ ಋಷಯೋ ಬಭೂವುಃ". ಎಂದರೆ, ವೇದ ಮಂತ್ರಗಳಲ್ಲಿ ಉಪದಿಷ್ಟ ಕರ್ಮ ಹಾಗೂ ಆ ಕರ್ಮಗಳ ಫಲಗಳನ್ನು ಚೆನ್ನಾಗಿ ತಿಳಿದುಕೊಂಡ ದೂರದರ್ಶಿ ಅಥವಾ ಸೂಕ್ಷ್ಮಮತಿಗಳಾದ ವ್ಯಕ್ತಿಗಳನ್ನೇ ಋಷಿಗಳೆಂದೂ ಇವರೇ ಹೇಳಿದ್ದಾರೆ [ನಿರುಕ್ತ:-೧-೨೦-೩] ವಾತ್ಸ್ಯಾಯನ ಕೃತ ನ್ಯಾಯಸೂತ್ರ ವ್ಯಾಖ್ಯಾನದಲ್ಲಿ, ಮಂತ್ರಾರ್ಥದರ್ಶನ ಮಾಡಿದವರೂ, ಅದರ ವ್ಯಾಖ್ಯಾನ ಮಾಡಿದವರೂ, ಅಲ್ಲದೆ ಬ್ರಾಹ್ಮಣಗ್ರಂಥ, ಇತಿಹಾಸ, ಪುರಾಣ, ಮತ್ತು ಧರ್ಮಶಾಸ್ತ್ರಗಳ ಉಪದೇಶಕರೂ ಋಷಿಗಳೆನ್ನಿಸಿಕೊಳ್ಳುತ್ತಾರೆಯೆಂದು ಹೇಳಿದ್ದಾರೆ.[೩] ವೇದಮಂತ್ರಾರ್ಥ ದರ್ಶನ ಮಾಡಿದ ಋಷಿಗಳೇ ಆಯುರ್ವೇದಾದಿ ಉಪವೇದಗಳ ಉಪದೇಶ ಮಾಡಿದ್ದಾರೆ.[೪] ಎಂದರೆ, ಶಾಸ್ತ್ರಕಾರರೂ ಋಷಿಗಳು. ಆನಂದತೀರ್ಥರು ಋಗ್ಭಾಷ್ಯದಲ್ಲಿ "ಯಃ ಪಶ್ಯತಿಸ್ವಯಂ ವಾಕ್ಯಂ ಸ ಋಷಿಸ್ತಸ್ಯ ಕೀರ್ತಿತಃ" ಎಂದು ಹೇಳಿದ್ದಾರೆ. ಇದನ್ನು ಸ್ಪಷ್ಟಪಡಿಸುತ್ತಾ ಋಗ್ಭಾಷ್ಯ ಟೀಕೆಯಲ್ಲಿ, "ಯಥಾ ಯಃ ಸ್ವಯಮಧ್ಯಯನೇನ ವಿನೈವ ಯದ್ವಾಕ್ಯಂ ಪಶ್ಯತಿ ಸ ತಸ್ಯ ವಾಕ್ಯಸ್ಯರ್ಷಿಃ ಪ್ರಕೀರ್ತಿತಃ" ಎಂದರೆ, ಸಾಮಾನ್ಯ ವಿದ್ವಾಂಸರಂತೆ, ಗುರುಮುಖೇನ ಅಧ್ಯಯನ ಮಾಡದೆಯೇ ಸ್ವಯಂ ತಪಸ್ಸು ಅಥವಾ ಯೋಗಬಲದಿಂದ ಯಾರು ಮಂತ್ರಗಳ ವಿಶೇಷ ಅರ್ಥವನ್ನು ತಿಳಿದುಕೊಳ್ಳುತ್ತಾರೆಯೋ, ಅವರು ಆ

[೩] ಯ ಏವ ಮಂತ್ರಬ್ರಾಹ್ಮಣಸ್ಯ ದೃಷ್ಟಾರಃ ಪ್ರವಕ್ತಾರಶ್ಚ ತೇ ಖಲ್ವಿತಿಹಾಸ ಪುರಾಣಸ್ಯ ಧರ್ಮಶಾಸ್ತ್ರಸ್ಯಚೇತಿ ॥ ನಿರುಕ್ತ, ೪-೧-೬೨ ॥

[೪] ಯ ಏವಾಪ್ತಾ ವೇದಾರ್ಥಾನಾಂ ದೃಷ್ಟಾರಃ ಪ್ರವಕ್ತಾರಶ್ಚ ತ ಏವಾಯುರ್ವೇದ ಪ್ರಭೃತೀನಾಮಿತಿ ॥ ನ್ಯಾಯಸೂತ್ರ ವ್ಯಾಖ್ಯಾನ ೨-೨-೬೭.

ಮಂತ್ರಗಳ ಋಷಿಗಳೆನಿಸಿಕೊಳ್ಳುತ್ತಾರೆಯೆಂದು ಹೇಳಿದ್ದಾರೆ. ತಾವಾಗಿಯೇ ಮಂತ್ರಗಳ ಸೂಕ್ಷ್ಮ ರಹಸ್ಯಗಳನ್ನು ತಿಳಿದುಕೊಳ್ಳುವವರು ಋಷಿಗಳೆಂದು ಅರ್ಥವಾಗುತ್ತದೆ.[೫]

ಋಷಿ ಶಬ್ದದ ಮೇಲೆ ಹೇಳಿದ ವ್ಯಾಖ್ಯೆಗಳು, ಋಗ್ವೇದದ **"ತಮೇವ ಋಷಿಂ"** ಈ ಮಂತ್ರದ[೬] ಮುಂದೆ ಅಪೂರ್ಣವೆಂದು ಗೊತ್ತಾಗುತ್ತದೆ. ಇಲ್ಲಿ, ಯಜ್ಞಯಾಗಾದಿಗಳಲ್ಲಿ ಮಂತ್ರಗಳ ಪ್ರಯೋಗವಿಧಿ, ಸಾಮಗಾಯನ, ಮಂತ್ರಗಳ ಅಧ್ಯಾತ್ಮ, ಅಧಿದೈವ, ಅಧಿಯಜ್ಞ, ಅಧಿಲೋಕಗಳೆಂಬ * ವಿವಿಧ ಪ್ರಕಾರದ ಅರ್ಥ ಇತ್ಯಾದಿಗಳನ್ನು ಬಲ್ಲವರಲ್ಲಿ ಶ್ರೇಷ್ಠನೂ, ದೀಕ್ಷಾವಂತನೂ ಆದವನೇ ಋಷಿ, ಬ್ರಾಹ್ಮಣ ಅಥವಾ ವೇದಜ್ಞನೆಂದು ಹೇಳಿದೆ.

ಈ ಎಲ್ಲಾ ಪ್ರಮಾಣಗಳಿಂದ, ಋಷಿಗಳೆಂದರೆ, ಸಂಹಿತೆಗಳನ್ನು ಆದಿಯಲ್ಲಿ ಪಡೆದವರು, ಮಂತ್ರಗಳ ಅರ್ಥಗಳನ್ನು ಕರತಲಾಮಲಕದಂತೆ, ಅಥವಾ ಪ್ರತಿಬಿಂಬದಂತೆ ಕಂಡವರು, ವೇದಮಂತ್ರಗಳ ಆಧಾರದ ಮೇಲೆ ಶಾಸ್ತ್ರಗ್ರಂಥಗಳನ್ನೂ, ವೇದಮಂತ್ರಗಳ ವ್ಯಾಖ್ಯಾನ ಗ್ರಂಥಗಳನ್ನೂ, ರಚಿಸಿದವರು, ಆಪ್ತ ಪುರುಷರು, ತಥಾ ನಿರ್ಮಲ ಜ್ಞಾನಿಗಳು ಎಂಬ ಅರ್ಥಗಳು ಪ್ರಸಿದ್ಧಿಯಲ್ಲಿವೆ ಎಂದು ಗೊತ್ತಾಗುತ್ತದೆ. ಇಷ್ಟುಮಾತ್ರವಲ್ಲದೆ, ಋಷಿ ಸಂಜ್ಞೆಗೆ ಇನ್ನೂ ಕೆಲವು ಅರ್ಥಗಳಿರುವುದನ್ನೂ ಕಾಣಬಹುದು:

ಮನುಸ್ಮೃತಿಯ ಪ್ರಾರಂಭದಲ್ಲಿಯೇ, ಭಾಷ್ಯಕಾರನಾದ ಮೇಧಾತಿಥಿಯು **"ಋಷಿರ್ವೇದಃ । ತದಧ್ಯಯನ - ವಿಜ್ಞಾನ-ತದನುಷ್ಠಾನಾತಿಶಯಯೋಗಾತ್ ಪುರುಷೇಽಪ್ಯೃಷಿ ಶಬ್ದಃ"** ಅಂದರೆ, ಜ್ಞಾನರಾಶಿಯಾದ ವೇದವನ್ನು ಋಷಿಯೆನ್ನುತ್ತಾರೆ. ಅಲ್ಲದೆ, ಅದರ ಅಧ್ಯಯನ, ವಿಜ್ಞಾನದ ಉನ್ನತಿ, ಹಾಗೂ ವೇದೋಪದೇಶದ ಅತಿಶಯ ಅನುಷ್ಠಾನದಿಂದ ಮನುಷ್ಯರೂ ಋಷಿಗಳೆನ್ನಿಸಿಕೊಳ್ಳುತ್ತಾರೆ, ಎಂದೂ ಹೇಳಲಾಗಿದೆ. ವೇದಕ್ಕೆ ಋಷಿ ಶಬ್ದವು ಪ್ರಯುಕ್ತವಾಗಿರುವುದನ್ನು ಅನೇಕ ಮಂದಿ ಸಮರ್ಥಿಸಿದ್ದಾರೆ. ಹರದತ್ತಮಿತ್ರರ ಪದಮಂಜರಿಯಲ್ಲಿ ಪಾಣಿನೀಯ ಸೂತ್ರ ೧-೧-೧೬ರಲ್ಲಿ **"ಋಷಿರ್ವೇದಃ"** ಎಂದು ಬರೆದಿದೆ. ಯಾದವಪ್ರಕಾಶರ ವೈಜಯಂತೀ ಕೋಶದಲ್ಲಿ **"ಋಷಿಸ್ತು ವೇದೇ"** ಮತ್ತು ಶಾಶ್ವತ ಕೋಶ, ಶ್ಲೋಕ ೭೧೯ದಲ್ಲಿರಯೂ **"ಋಷಿರ್ವೇದೇ"** ಎಂದೂ ಬರೆದಿರುವುದನ್ನು ನೋಡಬಹುದು. ನೈಯಾಯಿಕರು ತರ್ಕವನ್ನು ಋಷಿಯೆಂದು ಕರೆಯುತ್ತಾರೆ. ಯಾಸ್ಕರೂ ಈ ಮಾತಿನ ಉಲ್ಲೇಖವನ್ನು ಮಾಡಿದ್ದಾರೆ.[೭]

ಈ ರೀತಿ ಋಷಿ ಶಬ್ದಕ್ಕೆ ವ್ಯಾಪಕ ಅರ್ಥವಿದ್ದರೂ, ಸೂಕ್ತ ಅಥವಾ ಅಧ್ಯಾಯಗಳ ಮೇಲೆ ತೋರಿಸಿರುವ ಋಷಿಗಳ ಹೆಸರುಗಳು, ವಿಶಿಷ್ಟಾರ್ಥ ಪರವಾಗಿದೆ. ಸಂಬಂಧಪಟ್ಟ

---

[೫] ಪಶ್ಯತಿ ಹ್ಯಸೌ ಸೂಕ್ಷ್ಮಾನಪ್ಯರ್ಥಾನ್......... ॥ ನಿರುಕ್ತ ೨-೧೧-ರಲ್ಲಿ ದುರ್ಗಾಚಾರ್ಯ ಟೀಕೆ.

* ಐಹಿಕ-ಆಮುಷ್ಮಿಕ ಎಂಬೆರಡು ಶಬ್ದಗಳಿಂದಲೇ ಈ ಎಲ್ಲವನ್ನೂ ಗ್ರಹಿಸುವ ಪರಿಪಾಠವೂ ಇದೆ

[೬] ತಮೇವ ಋಷಿಂ ತಮು ಬ್ರಾಹ್ಮಣಮಾಹುರ್ಯಜ್ಞನ್ಯಂ ಸಾಮಗಾಮುಕ್ಥಶಾಸಂ । ಸ ಶುಕ್ರಸ್ಯ ತನ್ವೋ ವೇದ ತಿಸ್ರೋ ಯಃ ಪ್ರಥಮೋ ದಕ್ಷಿಣಯಾ ರರಾಧ ॥ ಋಗ್ವೇದ ೧೦-೧೦೭-೬ ॥

[೭] ಮನುಷ್ಯಾ ವಾ ಋಷಿಷೂತ್ಕ್ರಾಮತ್ಸು ದೇವಾನಬ್ರುವನ್ಕೋನಃ ಋಷಿರ್ಭವಿಷ್ಯತೀತಿ । ತೇಭ್ಯ ಏತಂ ತರ್ಕಮೃಷಿಂ ಪ್ರಾಯಚ್ಛನ್ಮಂತ್ರಾರ್ಥ ಚಿಂತಾಭ್ಯೂಹಮಭ್ಯೂಢಂ ॥ ನಿರುಕ್ತ ॥

ಮಂತ್ರಗಳ ಸೂಕ್ಷ್ಮ ಅರ್ಥಗಳನ್ನು ಕಂಡುಹಿಡಿದು ಪ್ರಸಿದ್ಧರಾದ ಕಾರಣ, ನೆನಪಿಗಾಗಿ ಅವರ ಹೆಸರುಗಳನ್ನು ಆಯಾಯ ಮಂತ್ರಗಳ ಮೇಲೆ ಅವರ ಹೆಸರುಗಳನ್ನು ತೋರಿಸಲಾಗುತ್ತದೆ. [ಹಾಗೆಯೇ ಸೂಕ್ತದಲ್ಲಿ ಪ್ರಯುಕ್ತವಾಗಿದ್ದು, ತಮ್ಮ ಹೃದಯಕ್ಕೊಪ್ಪಿದ ಶಬ್ದವನ್ನೇ ತಮ್ಮ ಹೆಸರಾಗಿಟ್ಟುಕೊಂಡರು—ಎನ್ನಲೂ ಕೂಡ ಸಾಧ್ಯವಿದೆ.] ಈಗ ಪ್ರಸಿದ್ಧರಾಗಿರುವ ಋಷಿಗಳಿಗಿಂತ ಮುಂಚೆ ಅದೇ ಮಂತ್ರಗಳಿಗೆ ಬೇರೆ ಋಷಿಗಳಿದ್ದರು. ಒಂದೇ ಸೂಕ್ತ ಅಥವಾ ಅಧ್ಯಾಯಕ್ಕೆ ಬೇರೆ ಬೇರೆ ಸಮಯದಲ್ಲಿ ಬೇರೆ ಬೇರೆ ಋಷಿಗಳು ಆಗಿಹೋದರು. ಹೊಸ ರಹಸ್ಯ ಅಥವಾ ನವೀನ ದೃಷ್ಟಿಕೋಣವನ್ನು ಮುಂದಿಟ್ಟು ಹೊಸ ಋಷಿಗಳು ಬಂದಾಗ, ಹಳೆಯ ಋಷಿಗಳ ಹೆಸರುಗಳನ್ನು ಜನರು ಮರೆತುಬಿಟ್ಟರು. ಹೀಗೆ, ಈ ಋಷಿಗಳು ಮಂತ್ರಗಳ ರಹಸ್ಯಗಳ ಆವಿಷ್ಕಾರ ಮಾಡಿದವರಲ್ಲದೆ, ಮಂತ್ರಗಳ ರಚನೆ ಮಾಡಿದವರಲ್ಲ.

ಒಂದೆ, ಇಷೇತ್ವಾದಿಯಿಂದ ಹಿಡಿದು ಖಂ ಬ್ರಹ್ಮ ಪರ್ಯಂತ ಸಂಪೂರ್ಣ ಯಜುರ್ವೇದದ ಮಂತ್ರಾರ್ಥ ದ್ರಷ್ಟಾ ಋಷಿ ವಿವಸ್ವಾನನಾಗಿದ್ದನು. ಬಳಿಕ, ಪರಮೇಷ್ಠೀ ಪ್ರಾಜಾಪತ್ಯನು ಕರ್ಮ ವಿಭಾಗದಿಂದಾಗಿ ದರ್ಶಪೂರ್ಣ ಮಾಸ ಮಂತ್ರಗಳ ಋಷಿಯೆಂದೆನಿಸಿದನು.[೮] ಮೊದಲು ಋಗ್ವೇದ ಮಂಡಲ ೧೦, ಸೂಕ್ತ ೬೧ ಮತ್ತು ೬೨ರ ಋಷಿಯು ಮನುವಾಗಿದ್ದನು. ಈಗ ಈ ಸೂಕ್ತಗಳ ಋಷಿಯು ಅವನ ಮಗನಾದ ನಾಭಾನೇದಿಷ್ಠನಾಗಿದ್ದಾನೆ. (ಐತರೇಯ ಬ್ರಾಹ್ಮಣ ೫-೧೪.) ಋಗ್ವೇದ ಮಂಡಲ ೪, ಸೂಕ್ತ ೧೬ರ ಋಷಿಯು ಮೊದಲು ವಿಶ್ವಾಮಿತ್ರನಾಗಿದ್ದನು. ಬಳಿಕ ವಾಮದೇವನು ಆ ಸೂಕ್ತದ ಋಷಿಯೆಂದು ಪ್ರಸಿದ್ಧನಾದನು.[೯] ಋಗ್ವೇದ ಮಂಡಲ, ಸೂಕ್ತ ೬೬ರ ಋಷಿಗಳು ನೂರು ಮಂದಿ ವೈಖಾನಸರು. ಇದರಿಂದಲೂ, ಈ ಋಷಿಗಳು ಮಂತ್ರಗಳ ರಚನೆ ಮಾಡಿದವರಲ್ಲವೆಂದು ಸ್ಪಷ್ಟವಾಗುತ್ತದೆ.

ಆದರೆ, ವೇದದಲ್ಲಿಯೇ ಮಂತ್ರಕೃತ್, ಬ್ರಹ್ಮಕೃತ್ [ನವಭಾರತ ನಿರ್ಮಾಪಕ ಈ ಭೀಮ ಸಂನ್ಯಾಸೀ ದಯಾನಂದ ಸರಸ್ವತೀ—ಎಂದಿದ್ದಾರೆ ಸ್ವಯಂ ಅರವಿಂದರು. ಇದರ ಭಾವನೆ ಸ್ಪಷ್ಟ, ಹಾಗೆಯೇ 'ಮಂತ್ರಕೃತ್, ಬ್ರಹ್ಮಕೃತ್' ಪ್ರಯೋಗ.] ಇತ್ಯಾದಿ ಪ್ರಯೋಗಗಳು ಬಂದಿರುವುದನ್ನು ನೋಡಿ, ಋಷಿಗಳು ಮಂತ್ರಗಳ ರಚನೆ ಮಾಡಿದವರೆಂದು ಕೆಲವರಿಗೆ ಭ್ರಾಂತಿಯಾಗುತ್ತದೆ. ಋಗ್ವೇದ ಮಂಡಲ ೯, ಸೂಕ್ತ, ೧೧೪, ಮಂತ್ರ ೨ರಲ್ಲಿ 'ಋಷೇ ಮಂತ್ರಕೃತಾಂ' ಎಂದಿದೆ. ಋಗ್ವೇದಮಂಡಲ ೬, ಸೂಕ್ತ ೩೫, ಮಂತ್ರ ೩ರಲ್ಲಿ 'ಬ್ರಹ್ಮಕೃತ್' ಎಂಬ ಪ್ರಯೋಗವೂ ಇದೆ. ಬ್ರಹ್ಮ ಶಬ್ದವೂ ವೇದದ ಪರ್ಯಾಯವಾಚಿಯಾಗಿದೆ. ಕೆಲವರು ಇಲ್ಲಿ 'ಕೃತ್' ಪದವನ್ನು ನೋಡಿ ಮೋಸ ಹೋಗಿದ್ದಾರೆ. ಕೃ-ಧಾತುವಿಗೆ ಮಾಡು ಎಂಬ ಅರ್ಥ ಮಾತ್ರವಲ್ಲದೆ, ದರ್ಶನ ಎಂಬ ಅರ್ಥವೂ ಇದೆ. ಐತರೇಯ ಬ್ರಾಹ್ಮಣದಲ್ಲಿ, "ಋಷಿರತೀಂದ್ರಿಯ ದೃಷ್ಟಾ ಮಂತ್ರ

[೮] ಇಷೇತ್ವಾದಿ ಖಂ ಬ್ರಹ್ಮಾಂತಂ ವಿವಸ್ವಾನ ಪಶ್ಯತ್ ತತಃ ಪ್ರತಿ ಕರ್ಮ ವಿಭಾಗೇನ ಬ್ರಾಹ್ಮಣಾನುಸಾರೇಣ ಋಷಯೋವೇದಿತ ವ್ಯಾಃ । ಪರಮೇಷ್ಠೀ ಪ್ರಾಜಾಪತ್ಯೋ ದರ್ಶಪೂರ್ಣ ಮಾಸ ಮಂತ್ರಾಣಾಂ ಋಷಿರ್ದೇವಾ ವಾ ಪ್ರಾಜಾಪತ್ಯಾಃ ॥ ಸರ್ವಾನುಕ್ರಮಣಿಕೆ ೧-೨ ॥

[೯] ತಾನ್ ವಾ ಏತಾನ್ ವಿಶ್ವಾಮಿತ್ರಃ ಪ್ರಥಮಮಪಶ್ಯತ್ । ತಾನ್ ವಿಶ್ವಾಮಿತ್ರೇಣ ದೃಷ್ಟಾನ್ ವಾಮದೇವೋ ಅಸೃಜತ್ ॥ ಗೋಪಥ ಬ್ರಾಹ್ಮಣ ೬-೧ ॥

**ಕೃತ್, ಕರೋತಿರ್ದರ್ಶನಾರ್ಥಃ"** ಅಂದರೆ, ಇಂದ್ರಿಯಾತೀತ ಜ್ಞಾನವನ್ನು ಪಡೆಯುವ ಸಾಮರ್ಥ್ಯ ಉಳ್ಳವರನ್ನು ಋಷಿಗಳೆಂದು ಹೇಳುತ್ತಾರೆ; ಇವರನ್ನು 'ಮಂತ್ರಕೃತ್' ಎಂದು ಹೇಳುವುದುಂಟು; ಆದರೆ, ಇಲ್ಲಿ ಮಂತ್ರಕೃತ್ ಎಂದರೆ, ಮಂತ್ರಾರ್ಥ ದರ್ಶನ ಮಾಡುವವರು ಎಂದು ಅರ್ಥ; ಯಾಕೆಂದರೆ 'ಕೃ' ಧಾತುವಿಗೆ ದರ್ಶನ ಎಂಬ ಅರ್ಥವೂ ಇದೆ. ಐತರೇಯ ಬ್ರಾಹ್ಮಣ ೬–೧. ಮಹಾ ಭಾಷ್ಯಕಾರ ಆಚಾರ್ಯ ಪತಂಜಲಿಯು ಪಾಣಿನಿಯ ಸೂತ್ರ ೬–೧–೯ರಲ್ಲಿ, **"ಕರೋತಿರಯ ಮಭೂತಪ್ರಾದುರ್ಭಾವೇ ದೃಷ್ಟಃ"** ಎಂದು ತೋರಿಸಿದ್ದಾನೆ. ಅಂದರೆ, ಹಿಂದೆ ಇಲ್ಲದೆ ಇದ್ದುದನ್ನು ಉಂಟು ಮಾಡುವುದು, ರೂಪಾಂತರಗೊಳಿಸುವುದು. ಹಿಂದೆ ಯಾರಿಗೂ ಗೊತ್ತಿಲ್ಲದ ರಹಸ್ಯವನ್ನು ಪ್ರಸಿದ್ಧಿ ಮಾಡುವುದು, ಆವಿಷ್ಕಾರ ಮಾಡುವುದು ಅಥವಾ ಹೊಸ ರೂಪ ಕೊಡುವುದು—ಎಂಬ ಅರ್ಥದಲ್ಲಿ ಕರೋತಿ ಪದವು ಪ್ರಯುಕ್ತವಾಗಿದೆ. ಆದುದರಿಂದ, ವೇದಮಂತ್ರಗಳ ಅಪ್ರಸಿದ್ಧ ಅಥವಾ ಗುಪ್ತವಾಗಿದ್ದ ಅರ್ಥಗಳನ್ನು ಕಂಡುಹಿಡಿಯುವವರನ್ನು ಋಷಿಗಳೆನ್ನುತ್ತಾರೆ, ಮಂತ್ರಕೃತ್ ಅಥವಾ ಬ್ರಹ್ಮಕೃತ್ ಎಂದರೆ, ಮಂತ್ರಗಳನ್ನು ಅಥವಾ ವೇದಗಳನ್ನು ರಚಿಸಿದವರೆಂದು ತಿಳಿದುಕೊಳ್ಳಬಾರದು. ಇದು ವೈದಿಕ ಸಿದ್ಧಾಂತಕ್ಕೆ ವಿರುದ್ಧವಾದ ಮಾತು.

ಲೋಕದಲ್ಲಿ ಚರ್ಮಕಾರ, ಸುವರ್ಣಕಾರ, ಲೋಹಕಾರಾದಿ ಪ್ರಯೋಗಗಳಿವೆ. ಇಲ್ಲಿ ಚರ್ಮ, ಸುವರ್ಣ ಲೋಹಾದಿಗಳನ್ನು ನಿರ್ಮಾಣ ಮಾಡುವವರೆಂಬ ಅರ್ಥವಾಗುವುದಿಲ್ಲ. ಉಕ್ತ ಪದಾರ್ಥಗಳು ಮೊದಲೇ ಇದ್ದುವು. ಅವುಗಳಿಂದ ವಿಭಿನ್ನ ಪ್ರಕಾರದ ಹೊಸ ಹೊಸ ವಸ್ತುಗಳನ್ನು ಮಾಡುವುದರಿಂದ ಇವರಿಗೆ ಮೇಲಿನ ಹೆಸರುಗಳು ಬಂದುವು. ಆದುದರಿಂದ ವ್ಯವಹಾರದಲ್ಲಿಯೂ, 'ಕಾರ'ನೆಂದರೆ ಮೂಲವಸ್ತುವನ್ನು ಮಾಡುವವನೆಂಬ ಅರ್ಥವೇ ಅಲ್ಲದೆ, ಮೂಲವಸ್ತುವಿಗೆ ಹೊಸ ರೂಪ ಕೊಡುವವನನ್ನೂ 'ಕಾರ'ನೆಂದು ಕರೆಯುತ್ತಾರೆ. ಹೀಗಿರುವಾಗ, ಮಂತ್ರಕೃತ್ ಅಥವಾ ಮಂತ್ರಕಾರನೆಂದರೆ, ಮಂತ್ರವನ್ನು ರಚಿಸಿದವನೆಂಬ ಅರ್ಥವೇ ಆಗಬೇಕೆಂದಿಲ್ಲ. ಮಂತ್ರಗಳ ಮೇಲೆ ಹೊಸ ರೀತಿಯಲ್ಲಿ ವ್ಯಾಖ್ಯಾನ ಮಾಡುವವರು, ಯಜ್ಞ, ಯಾಗಾದಿಗಳಲ್ಲಿ ಅವುಗಳ ಹೊಸ ವಿನಿಯೋಗವನ್ನು ಹೇಳಿ ಕೊಡುವವರು, ಮಂತ್ರಗಳ ಹೊಸ ಅರ್ಥಗಳನ್ನು ಅಥವಾ ಹಿಂದೆ ಯಾರಿಗೂ ಗೊತ್ತಿಲ್ಲದ ಅರ್ಥವನ್ನು ತೋರಿಸುವವರು,[೧೦] ಮಂತ್ರಗಳ ಶಬ್ದಗಳನ್ನು ಹೊಸ ರೀತಿಯಲ್ಲಿ ಅಳವಡಿಸಿ ಪಾಠ ಮಾಡುವವರು, ಅಥವಾ ಶಾಖಾ ಪ್ರವರ್ತಕರಾದವರನ್ನು ಮಂತ್ರಕೃತ್ ಎಂದು ತಿಳಿದುಕೊಳ್ಳಬೇಕು. ಅಂತೂ ಋಷಿಗಳು ಮಂತ್ರಗಳ ರಚನೆ ಮಾಡಿದವರಲ್ಲ ಎಂಬ ಮಾತು ಅಸಂದಿಗ್ಧ ಸತ್ಯವಾಗಿದೆ.

ಕಾತ್ಯಾಯನರು ಸರ್ವಾನುಕ್ರಮಣಿಕೆಯಲ್ಲಿ "ಯಸ್ಯ ವಾಕ್ಯಂ ಸ ಋಷಿಃ" ಎಂದು ಹೇಳಿದ್ದಾರೆ. ಇಲ್ಲಿ ವಾಕ್ಯವೆಂದರೆ, ವೇದವಾಕ್ಯವಲ್ಲ, ವೇದಮಂತ್ರಗಳ ವ್ಯಾಖ್ಯಾನವೆಂದು ತಿಳಿದುಕೊಳ್ಳಬೇಕು. ಒಂದು ವೇಳೆ ಈ ಋಷಿಗಳನ್ನು ಮಂತ್ರಗಳ ರಚನೆ

---

[೧೦] ಮಂತ್ರಗಳ ಹೊಸ ಅರ್ಥ ಅಥವಾ ವಿನಿಯೋಗವನ್ನು ತೋರಿಸುವುದೆಂದರೆ, ತರ್ಕಹೀನ, ಕೇವಲ ಕಾಲ್ಪನಿಕ ಅಥವಾ ವೈದಿಕ ಪರಂಪರೆಗೆ ವಿರುದ್ಧವಾದ ಮಾತುಗಳನ್ನು ಪ್ರಸಿದ್ಧಿ ಮಾಡುವುದೆಂದು ತಿಳಿದುಕೊಳ್ಳಬಾರದು. ಯಾಕೆಂದರೆ, 'ಬುದ್ಧಿಪೂರ್ವಾ ವಾಕ್ಯಕೃತಿರ್ವೇದೇ' [ವೈಶೇಷಿಕ ದರ್ಶನ ೬–೧–೧]. ಅಂದರೆ, ವೇದವಾಕ್ಯಗಳು ತರ್ಕಸಂಗತವಾಗಿವೆ. ತರ್ಕಹೀನ, ಅಥವಾ ಅವೈಜ್ಞಾನಿಕ ಮಾತುಗಳಿಗೆ ವೇದಗಳಲ್ಲಿ ಎಡೆ ಇಲ್ಲ.

ಮಾಡಿದವರೆಂದು ನಂಬಿದರೆ, ಋಗ್ವೇದ ಮಂಡಲ ೯, ಸೂಕ್ತ ೬೭ರಲ್ಲಿ ಒಟ್ಟಿಗೆ ೩೦ ಮಂತ್ರಗಳಿವೆ. ಈ ಮಂತ್ರಗಳ ಋಷಿಗಳು ನೂರು ಮಂದಿ ವೈಖಾನಸರು. ಈ ನೂರು ಮಂದಿ ಋಷಿಗಳು ಕೂಡಿ ಮೂವತ್ತು ಮಂತ್ರಗಳನ್ನು ರಚಿಸಿದರೆಂಬ ಮಾತು ವಿಚಿತ್ರ ವಾಗಿ ತೋರುವುದಿಲ್ಲವೇ?

ಋಷಿಗಳು ಮಂತ್ರಗಳ ರಚನೆ ಮಾಡಿದವರೆಂಬ ಭ್ರಾಂತಿಯು ಬೌದ್ಧರಕಾಲದಿಂದ ನಡೆದುಬಂದಂತೆ ತೋರುತ್ತದೆ. ಶಾಂತರಕ್ಷಿತನ ತತ್ವಸಂಗ್ರಹದಲ್ಲಿ—

ಯಥೋಕ್ತಂ ಭಗವತಾ ಇತ್ಯೇತೇ ಆನಂದ।

ಪೌರಾಣಾ ಮಹರ್ಷಯೋ ವೇದಾನಾಂ ಕರ್ತಾರೋ

ಮಂತ್ರಾಣಾಂ ಪ್ರವರ್ತಯಿತಾರಃ। 'ಮಂತ್ರಾಣಾಂ ಪ್ರವರ್ತಯಿತಾರಃ'— ಎಂಬುದಕ್ಕೆ 'ವೇದಮಂತ್ರ ರಚಯಿತೃಗಳು'—ಎಂದು ಅರ್ಥ ಮಾಡಿದ್ದಾರೆ. 'ಪ್ರವ ರ್ತನೆ'—ಎಂದರೆ ಸಂಚಾಲನೆ ಮಾಡಿದರು—ಎಂದಿದ್ದರೂ ಕೂಡ, "ಮಂತ್ರಕೃತ್" "ಬ್ರಹ್ಮಕೃತ್" ಈ ಪದಗಳಲ್ಲಿನ 'ಕೃ' ಧಾತುವಿನ ಪ್ರಯೋಗದಿಂದ ಭ್ರಾಂತರಾಗಿದ್ದಾರೆ —ಎನಿಸುತ್ತದೆ.

ಯಾವ ಅರ್ಥದಲ್ಲಿ ಮಂತ್ರಕೃತ್ ಪದವು ಪ್ರಯುಕ್ತವಾಗಿದೆಯೋ ಅದೇ ಅರ್ಥ ದಲ್ಲಿ 'ಮಂತ್ರದ' ಪದವೂ ಬಂದಿದೆ. "ಅಜ್ಞೋ ಭವತಿ ವೈ ಬಾಲಃ ಪಿತಾಭವತಿ ಮಂತ್ರದಃ" ಎಂಬ ಮನುಸ್ಮೃತಿಯ [೨-೧೫೩] ಶ್ಲೋಕದಲ್ಲಿ "ವೇದಮಂತ್ರಗಳ ಜ್ಞಾನವಿಲ್ಲದವನು ಬಾಲಕ [ಮೂರ್ಖ]ನೆಂದೂ ಮಂತ್ರಗಳ ವ್ಯಾಖ್ಯಾನ ಉಪದೇಶ ಮಾಡುವವನನ್ನು ಪಿತನೆಂದೂ ಹೇಳಿದ್ದಾರೆ. ಅಂದರೆ ಮಂತ್ರಗಳ ಅರ್ಥವ್ಯಾಖ್ಯಾನ ಮಾಡುವವನು ಪಿತೃಸಮಾನ, ಅವನೇ ಪೂಜ್ಯ, ಅವನೇ ಹಿರಿಯ. ಕೇವಲ ವಯಸ್ಸಿನಲ್ಲಿ ಹಿರಿಯನಾದವನು ಪೂಜ್ಯನಲ್ಲ ಎಂದು ಇದರ ತಾತ್ಪರ್ಯ. ಇಲ್ಲಿ 'ಮಂತ್ರದಃ' ಅಂದರೆ ಮಂತ್ರಗಳ ರಚನೆ ಮಾಡುವವನೆಂದು ಅರ್ಥವಾಗುವುದಿಲ್ಲ.

ಮಂತ್ರದ್ರಷ್ಟಾ ಋಷಿಗಳಲ್ಲಿ ಶತರ್ಚಿ, ಮಧ್ಯಮ, ಕ್ಷುದ್ರ ಸೂಕ್ತ ಮತ್ತು ಮಹಾ ಸೂಕ್ತರೆಂಬ ಭೇದಗಳಿವೆ. ಈ ಭೇದಗಳು ದೃಷ್ಟ ಮಂತ್ರಗಳ ಸಂಖ್ಯೆಯ ಆಧಾರದ ಮೇಲೆ ಹೊಂದಿಕೊಂಡಿವೆ. ನೂರು ಅಥವಾ ಹೆಚ್ಚಿನ ಮಂತ್ರಗಳ ದ್ರಷ್ಟರಾದ ಋಷಿ ಗಳನ್ನು ಶತರ್ಚಿಗಳೆಂದೂ, ಇದಕ್ಕಿಂತ ಕಡಿಮೆ ಮಧ್ಯಮ ಋಷಿಗಳೆಂದೂ, ಸಣ್ಣ ಸೂಕ್ತ ಗಳ ಋಷಿಗಳನ್ನು ಕ್ಷುದ್ರ ಸೂಕ್ತರೆಂದೂ ಮತ್ತು ದೊಡ್ಡ ದೊಡ್ಡ ಸೂಕ್ತಗಳ ಋಷಿ ಗಳನ್ನು ಮಹಾಸೂಕ್ತರೆಂದೂ ಹೇಳುತ್ತಾರೆ. ಋಗ್ವೇದದ ಪ್ರಥಮ ಮಂಡಲದ ಋಷಿ ಮಧುಚ್ಛಂದರು ಶತರ್ಚಿಗಳು: ಎರಡನೆಯ ಮಂಡಲದಿಂದ ಏಳನೆಯ ಮಂಡಲದ ತನಕ ಬರುವ ಋಷಿಗಳಲ್ಲಿ ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಗೌತಮ, ಅತ್ರಿ, ಭರದ್ವಾಜ, ವಸಿಷ್ಠ, ಪ್ರಾಗಾಥರನ್ನು ಮೊದಲಾದವರು ಮಧ್ಯಮ ಋಷಿಗಳು ಮತ್ತು ಹತ್ತನೇ ಮಂಡಲದ ಋಷಿಗಳು ಕ್ಷುದ್ರಸೂಕ್ತರೆಂದೂ ಮಹಾಸೂಕ್ತರೆಂದೂ ಪ್ರಸಿದ್ಧಿ ಇದೆ.[11]

[11] ಅಥ ಋಷಯಃ ಶತರ್ಚಿನೋ ಮಾಧ್ಯಮಾ ಗೃತ್ಸಮದೋ ವಿಶ್ವಾಮಿತ್ರೋ ವಾಮದೇವೋ ತ್ರಿರ್ಭರದ್ವಾಜೋ ವಸಿಷ್ಠಃ ಪ್ರಗಾಥಾಃ ಪಾವಮಾನ್ಯಃ ಕ್ಷುದ್ರಸೂಕ್ತಾ ಮಹಾಸೂಕ್ತಾ ಇತಿ ॥ ಆಶ್ವಲಾಯನ ಗೃಹ್ಯಸೂತ್ರ ॥

ಯೋಗ್ಯತೆಯ ಆಧಾರದಿಂದಲೂ ಋಷಿಗಳ ವರ್ಗೀಕರಣ ಮಾಡಿದ್ದಾರೆ. ಇಲ್ಲಿ ಋಷಿಗಳಲ್ಲಿ ಎಂಟು ಭೇದಗಳಿದ್ದಂತೆ ಕಾಣುತ್ತದೆ, ಹೇಗೆಂದರೆ—[೧] ಬ್ರಹ್ಮರ್ಷಿ, [೨] ಮಹರ್ಷಿ, [೩] ಋಷಿ, [೪] ಋಷಿಕ, [೫] ಋಷಿಪುತ್ರ [೬] ಶ್ರುತರ್ಷಿ, [೭] ರಾಜರ್ಷಿ ಮತ್ತು [೮] ದೇವರ್ಷಿ. ಇವರಲ್ಲಿ ಅಂತಿಮ ಸ್ಥಾನೀಯರಾದ ಋಷಿಗಳು, ಮಂತ್ರ ದ್ರಷ್ಟಾ ಋಷಿಗಳ ವರ್ಗಕ್ಕೆ ಸೇರಿದವರಲ್ಲವೆಂದು ಕಾಣುತ್ತದೆ. ವಿಶೇಷ ವಿದ್ವತ್ತಿನ ದೆಸೆಯಿಂದಾಗಿ ಜನಕಾದಿ ರಾಜರನ್ನು ರಾಜರ್ಷಿಗಳೆಂದೂ, ನಾರದಾದಿ ಮುನಿಗಳನ್ನು ದೇವರ್ಷಿಗಳೆಂದೂ ಕರೆದಿರುವಂತೆ, ಋಷಿಗಳಲ್ಲಿ ಅತಿ ಶ್ರೇಷ್ಠರಾದವರನ್ನು ಮಹರ್ಷಿಗಳೆನ್ನುತ್ತಾರೆ.[೧೨] ಭೃಗು, ಮರೀಚಿ, ಅತ್ರಿ, ಅಂಗಿರಸ, ಪುಲಹ, ಪುಲಸ್ತ್ಯ, ಕ್ರತು, ಮನು, ದಕ್ಷ ಮತ್ತು ವಸಿಷ್ಠರು ಮಹರ್ಷಿಗಳೆನ್ನಿಸಿಕೊಂಡಿದ್ದಾರೆ.[೧೩] ಇವರು ಅಯೋನಿಜ ಅಥವಾ ಅಮೈಥುನೀ ಸೃಷ್ಟಿಯಲ್ಲಿ ಹುಟ್ಟಿದವರೆಂದು ತಿಳಿದುಬರುತ್ತದೆ. ಇವರು ಜನ್ಮಜಾತ ಋಷಿಗಳಾಗಿದ್ದರೆಂದೂ ಪ್ರಸಿದ್ಧಿ ಇದೆ. ಇವರನ್ನು ಬ್ರಹ್ಮನ ಮಾನಸಪುತ್ರರೆಂದೂ ವರ್ಣಿಸಿದ್ದಾರೆ. ಮಹರ್ಷಿಗಳ ಪುತ್ರರಾದ ಉಶನಾಕಾವ್ಯ ಅಥವಾ ಶುಕ್ರಾಚಾರ್ಯ, ಬೃಹಸ್ಪತಿ, ಕಶ್ಯಪ, ಚ್ಯವನ, ಉತಥ್ಯ, ವಾಮದೇವ, ಅಗಸ್ತ್ಯ, ಉಶಿಕ್, ಕರ್ದಮ, ವಿಶ್ರವಸ್, ಶಕ್ತಿ, ವಾಲಖಿಲ್ಯ, ಮತ್ತು ಅರ್ವತರು ಎರಡನೆ ವರ್ಗದ ಋಷಿಗಳು. ಇವರು ತಪಸ್ಸು ಮಾಡಿ ಋಷಿತ್ವವನ್ನು ಪಡೆದವರು.[೧೪] ವತ್ಸರ, ನಗ್ನಹೂ, ಭರದ್ವಾಜ, ದೀರ್ಘತಮಾ, ಬೃಹದುಕ್ಥ, ಶರದ್ವತ, ವಾಜಶ್ರವಸ್, ಸುಮಿತ್ರ, ವಸ್ಯಾಶ್ವ, ಪರಾಶರ, ದಧೀಚ, ಶಂಶಪಾ, ವೈಶ್ರವಣಾದಿಗಳು ಋಷಿಕರೆಂದು ಪ್ರಸಿದ್ಧರಾಗಿದ್ದಾರೆ. ಋಷಿಕ, ಋಷಿಪುತ್ರ, ಶ್ರುತರ್ಷಿ ಭೇದಗಳು ಸ್ಪಷ್ಟವಾಗಿಲ್ಲ.

ಋಷಿಗಳಲ್ಲಿ ನಾಲ್ಕೂ ವೇದಗಳೂ ಯಾರಿಗೆ ಸಾದ್ಯಂತ, ಸರಹಸ್ಯವಾಗಿ ಗೋಚರವಾಗುತ್ತವೆಯೋ ಅವರನ್ನು ಬ್ರಹ್ಮರ್ಷಿಗಳೆಂದು ಕರೆಯುತ್ತಾರೆ.

ಅಗ್ನಿ, ವಾಯು, ಸೂರ್ಯ ಮತ್ತು ಅಥರ್ವರೆಂಬ * ನಾಲ್ಕು ಮಂದಿ ಆದಿ ಋಷಿಗಳು, ನಾಲ್ಕು ವೇದಗಳನ್ನು ಪಡೆದರು, ಅವ್ಯಕ್ತಾ ವಾಣಿಗೆ ವ್ಯಕ್ತರೂಪವನ್ನು ಕೊಟ್ಟರು. ಈ ನಾಲ್ಕು ಋಷಿಗಳಿಂದ ಮಹರ್ಷಿ ಬ್ರಹ್ಮನು ನಾಲ್ಕೂ ವೇದಗಳನ್ನು ಪಡೆದು, ಅವುಗಳಲ್ಲಿ ಅಡಕವಾಗಿರುವ ಜ್ಞಾನದ ವಿಸ್ತಾರವನ್ನು ಮಾಡಿದನು. ಆ ಬಳಿಕ ಬಂದ ಋಷಿಗಳು ಇದೇ ಮೂಲ ವಾಣಿ ಮತ್ತು ಜ್ಞಾನದ ಆಧಾರದಿಂದ ಹೊಸಹೊಸ ಆವಿಷ್ಕಾರಗಳನ್ನು ಮಾಡಿ ಮಾನವ ಜಾತಿಗೆ ಮಹದುಪಕಾರವನ್ನು ಮಾಡಿದರು. ಶಾಸ್ತ್ರಗಳನ್ನು ಬರೆದು ಜ್ಞಾನ ವಿಜ್ಞಾನದ ಬೆಳವಣಿಗೆಗೆ ತಳಹದಿಯನ್ನು ಹಾಕಿದರು.

---

[೧೨] ಪರತ್ವೇನರ್ಷಯೋ ಯಸ್ಮಾತ್ ಸ್ಮೃತಾಸ್ತಸ್ಮಾನ್ಮಹರ್ಷಯಃ ॥

[೧೩] ಮನುಸ್ಮೃತಿ [೧–೩೫]ಯಲ್ಲಿ ನಾರದರ ಹೆಸರೂ ಬರುತ್ತದೆ. ಅಲ್ಲಿ ಮನುವಿನ ಹೆಸರಿಲ್ಲ. ಮಹಾಭಾರತ [೧–೬೫–೧೦]ದಲ್ಲಿ ಕೇವಲ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಃ ಮತ್ತು ಕ್ರತುವಿನ ಹೆಸರು ಬರುತ್ತದೆ.

[೧೪] ಋಷೀಣಾಂ ತಪ್ಯತಾಮುಗ್ರಂ ತಪಃ ಪರಮದುಷ್ಕರಂ ಮಂತ್ರಾಃ ಪ್ರಾದುರ್ಭಭೂಪೂರ್ವೇ ಪೂರ್ವಮನ್ವಂತರೇಷ್ವಿಹ । ಅಸಂತೋಷಾದ್ಭಯಾದ್ದುಃಖಾತ್ಸುಖಾಚ್ಛೋಕಾಚ್ಚ ಪಂಚಧಾ ॥ ಋಷೀಣಾಂ ತಪಃ ಕಾರ್ತ್ಸ್ನ್ಯೇನ ದರ್ಶನೇನ ಯದೃಚ್ಛಯಾ ॥ [ಪುರಾಣವಾಕ್ಯ].

* ಪ್ರಕರಣದ ಪ್ರಾರಂಭದಲ್ಲಿ ಪ್ರಥಮಸ್ಥಾನೀಯ ಋಷಿ ವರ್ಣನೆ ಮಾಡಿರುವುದನ್ನು ಸ್ಮೃತಿಪಥದಲ್ಲಿಟ್ಟುಕೊಂಡರೆ, ಈ ವಿಷಯ ಸಾಮಗ್ರಿಯ ಮೇಲೆಲ್ಲಾ ಅಧಿಕಾರ ಮಾಡಲು ಸುಕರ.

ಮಂತ್ರದ್ರಷ್ಟಾ ಋಷಿಗಳು ೯೦ ಅಥವಾ ೯೨ ಮಂದಿ ಇದ್ದಾರೆ. ಇವರೆಲ್ಲಾ ಬೇರೆ ಬೇರೆ ಕುಲಗಳಿಗೆ ಸೇರಿದವರು. ಭೃಗು ಕುಲದಲ್ಲಿ ಕಾವ್ಯ [ಶುಕ್ರ], ಪ್ರಚೇತಾ, ದಧ್ಯಙ [ಆಥರ್ವಣ], ಆಪ್ನವಾನ್, ಔರ್ವ [ಋಚೀಕ], ಜಮದಗ್ನಿ, ವಿದ, ಸಾರಸ್ವತ, ಆರ್ಷ್ಟಿಷೇಣ, ಚ್ಯವನ, ವೀತಹವ್ಯ, ಸುಮೇಧಾ, ವೈನ್ಯಪೃಥು, ದಿವೋದಾಸ, ವಾಧ್ರ್ಯಶ್ವ, ಗೃತ್ಸಮದ ಮತ್ತು ಶೌನಕರು ಹುಟ್ಟಿದರು. ಭೃಗು ಕುಲದ ಋಷಿಗಳಿಗೂ ಅಥರ್ವ ವೇದಕ್ಕೂ ವಿಶೇಷ ಸಂಬಂಧವಿದ್ದಂತೆ ತೋರುತ್ತದೆ. ಶೌನಕರ ಹೆಸರಲ್ಲಿ ಆಥರ್ವವೇದದ ಒಂದು ಶಾಖೆಯೇ ಪ್ರಸಿದ್ಧವಾಗಿದೆ. ಈ ವೇದದ ಅನೇಕ ಸೂಕ್ತಗಳ ಋಷಿಗಳು ಭೃಗು, ಗೃತ್ಸಮದ, ಶುಕ್ರ ಮೊದಲಾದವರಾಗಿದ್ದಾರೆ.

ಅಂಗಿರಾ ಎಂಬ ಪದಾಸೀನನಲ್ಲದೆ, 'ಅಂಗಿರಾ' ಎಂದೇ ವೈಯಕ್ತಿಕ ನಾಮಧಾರೀ ಋಷಿಕುಲದಲ್ಲಿ, ಭರದ್ವಾಜ, ತ್ರಿತ ಬಾಷ್ಕಲಿ, ಋತವಾಕ್, ಗರ್ಗ, ಶಿನಿ, ಸಂಕೃತಿ, ಗುರು ವೀತ, ಮಾಂಧಾತಾ, ಅಂಬರೀಷ, ಯುವನಾಶ್ವ, ಪುರುಕುತ್ಸ, ತ್ರಸದಸ್ಯು, ಸದಸ್ಯುಮಾನ್, ಅಹಾರ್ಯ, ಅಜಮೀಢ, (ಅಜಮೀಳ್ಹ, ಅಜಮೀಡ—ಎಂಬ ಭೇದಗಳೂ ಇವೆ.) ಋಷಭ, ಕಪಿ, ಪೃಷದಶ್ವ, ವಿರೂಪ, ಕಣ್ವ, ಮುದ್ಗಲ, ಉತಥ್ಯ, ಶರದ್ವಾನ್, ವಾಜ ಶ್ರವಾ, ಅಯಾಸ್ಯ, ಸುವಿತ್ತಿ, ವಾಮದೇವ, ಅಸಿಜ, ಬೃಹದುಕ್ಥ, ದೀರ್ಘತಮಾ, ಮತ್ತು ಕಕ್ಷೀವಾನ್ ಋಷಿಗಳು ಹುಟ್ಟಿದರು. ಈ ಋಷಿಗಳೂ ಅಥರ್ವವೇದದೊಡನೆ ವಿಶೇಷ ಸಂಬಂಧವನ್ನು ಇಟ್ಟುಕೊಂಡಿದ್ದರು. ಇವರಲ್ಲಿ ಕೆಲವರು ಕ್ಷತ್ರಿಯರಿದ್ದರು.

ಮಹರ್ಷಿ ಕಶ್ಯಪರ ಕುಲದಲ್ಲಿ ವತ್ಸಾರ, ನೈಧ್ರುವ, ರೈಭ್ಯ, ಅಸಿತ, ಮತ್ತು ದೇವಲರು; ಅತ್ರಿ ಕುಲದಲ್ಲಿ, ಅರ್ಚನಾನಾ, ಶ್ಯಾವಾಶ್ವ, ಗವಿಷ್ಠಿರ, ಅವಿಹೋತ್ರ, ಮತ್ತು ಪೂರ್ವಾತಿಥಿ; ವಸಿಷ್ಠರ ಕುಲದಲ್ಲಿ, ಶಕ್ತಿ, ಪರಾಶರ, ಇಂದ್ರಪ್ರಮತಿ, ಭರದ್ವಸು, ಮೈತ್ರಾವಾರುಣಿ, ಮತ್ತು ಕುಂಡಿನ; ಕೌಶಿಕ [ವಿಶ್ವಾಮಿತ್ರ]ರ ಕುಲದಲ್ಲಿ ದೇವರಾತ, ಉದ್ಗಲ [ಬಲ], ಮಧುಚ್ಛಂದಸ್, ಅಘಮರ್ಷಣ, ಅಷ್ಟಕ, ಲೋಹಿತ, ಕತ, ಕೀಲ, ದೇವಶ್ರವಾ, ರೇಣು, ಪೂರಣ, ಮತ್ತು ಧನಂಜಯರು, ಹಾಗೂ ಅಗಸ್ತ್ಯರ ಕುಲದಲ್ಲಿ ದೃಢದ್ಯುಮ್ನ [ದೃಢಾಯು], ಮತ್ತು ಇಂದ್ರಬಾಹು [ವಿಧ್ಮವಾಹ], ಮಂತ್ರದ್ರಷ್ಟಾ ಋಷಿಗಳೆಂದು ಪ್ರಸಿದ್ಧರಾಗಿದ್ದಾರೆ. ವೈವಸ್ವತ ಮನು, ಮತ್ತು ಪುರೂರವಾ [ಐಲರಾಜ]ರು ಕ್ಷತ್ರಿಯ ಋಷಿಗಳೆಂದೂ, ಭಲಂಧನ, ವತ್ಸ ಮತ್ತು ಸಂಕೀಲರು ವೈಶ್ಯ ಋಷಿಗಳೆಂದೂ ವಿಶೇಷ ಖ್ಯಾತಿಯನ್ನು ಪಡೆದಿದ್ದಾರೆ.

ಮಂತ್ರದ್ರಷ್ಟಾ ಋಷಿಗಳ ಹೆಸರುಗಳಲ್ಲಿ ಮೂರು ವಿಧಗಳಿವೆ. ಮೊದಲನೆಯ ದಾಗಿ ಇಂತಹ ಸೂಕ್ತಕ್ಕೆ ಇಂತಹ ಋಷಿಗಳೆಂದು ಪ್ರಸಿದ್ಧರಾದವರು; ಎರಡನೆಯದಾಗಿ ಮಂತ್ರಗಳಲ್ಲಿ ಬರುವ ಋಷಿಗಳ ಹೆಸರುಗಳಿಂದಲೇ ಪ್ರಖ್ಯಾತರಾದವರು; ಮತ್ತು ಮೂರನೆಯದಾಗಿ ಮಂತ್ರಗಳ ದೇವತೆಗಳ ಹೆಸರುಗಳಿಂದ ಪ್ರಖ್ಯಾತರಾದವರು. ಮೊದ ಲನೆಯ ವರ್ಗದ ಋಷಿಗಳ ಹೆಸರುಗಳು ಸಂಬಂಧಪಟ್ಟ ಮಂತ್ರಗಳಲ್ಲಿ ದೇವತೆ ಅಥವಾ ಋಷಿಗಳ ಹೆಸರಿನ ರೂಪದಲ್ಲಿ ಬರುವುದಿಲ್ಲ. ಇವರನ್ನು ಸಾಮಾನ್ಯ ಋಷಿಗಳೆಂದೂ, ವೇದಮಂತ್ರಗಳಲ್ಲಿ ಬರುವ ಋಷಿ ಅಥವಾ ದೇವತೆಗಳ ಹೆಸರಲ್ಲಿಯೇ ಪ್ರಖ್ಯಾತರಾದ ಋಷಿಗಳನ್ನು ಉತ್ಕೃಷ್ಟ ವರ್ಗದ ಋಷಿಗಳೆಂದು ಹೇಳುತ್ತಾರೆ. ವಿಶೇಷ ಮಹತ್ವಪೂರ್ಣ ವಾದ ಆವಿಷ್ಕಾರದಿಂದಾಗಿ ಸಂಬಂಧಪಟ್ಟ ಋಷಿಗಳಿಗೆ, ಮಂತ್ರಗಳ ದೇವತೆಗಳ ಹೆಸರೇ ಪ್ರಸಿದ್ಧವಾಯಿತು, ಮತ್ತು ಅವರ ಮೂಲ ಹೆಸರುಗಳನ್ನು ಜನರು ಮರೆತುಹೋದ

ರೆಂದು ಗೊತ್ತಾಗುತ್ತದೆ. ಈಗಲೂ ಲೋಕದಲ್ಲಿ ಗಿರಿ, ಪುರಿ ಮೊದಲಾದ ಹೆಸರುಗಳು, ಇದೇ ರೀತಿಯಲ್ಲಿ ಪ್ರಸಿದ್ಧವಾಗಿಲ್ಲವೇ?

ಋಗ್ವೇದ ಮಂಡಲ ೧೦, ಸೂಕ್ತ ೭೩ರಲ್ಲಿ ಆರು ಮಂತ್ರಗಳಿವೆ. ಆರೂ ಮಂತ್ರಗಳಲ್ಲಿ ಧ್ರುವ ಶಬ್ದವು ಬಂದಿದೆ. ಮಂತ್ರದೇವತೆ ರಾಜ್ಞಃ ಸ್ತುತಿಯಾಗಿದೆ. ಈ ಸ್ತುತಿಯೂ ಆರೂ ಮಂತ್ರಗಳಲ್ಲಿ ಬಂದಿದೆ. ಈ ಸೂಕ್ತದ ಋಷಿಯೂ ಧ್ರುವನೆಂದು ಪ್ರಸಿದ್ಧಿ. ಋಗ್ವೇದ, ಮಂಡಲ ೧೦, ಸೂಕ್ತ ೧೭೦ರ ದೇವತೆ ಸೂರ್ಯನಾಗಿದ್ದಾನೆ. ಈ ಸೂಕ್ತದ ನಾಲ್ಕೂ ಮಂತ್ರಗಳಲ್ಲಿಯೂ ವಿಭ್ರಾಟ್ ಶಬ್ದವು ಬಂದಿದೆ. ಈ ಸೂಕ್ತದ ಋಷಿಯೂ ವಿಭ್ರಾಟ್‌ಸೂರ್ಯನು. ಋಗ್ವೇದ, ಮಂಡಲ ೧೦, ಸೂಕ್ತ ೧೬೧ರ ದೇವತೆ ರಾಜಯಕ್ಷ್ಮಘ್ನ. ಇದರ ಋಷಿಯ ಹೆಸರೂ ಯಕ್ಷ್ಮನಾಶನ ಪ್ರಾಜಾಪತ್ಯವೆಂದು. ಇದೇ ಮಂಡಲದಲ್ಲಿ ಸೂಕ್ತ ೧೫೯ರ ದೇವತೆ ಶಚೀ ಪೌಲೋಮಿ. ಋಷಿಯ ಹೆಸರೂ ಶಚೀ ಪೌಲೋಮಿ ಎಂದು. ಸೂಕ್ತ ೧೪೦ರ ದೇವತೆ ಅಗ್ನಿ, ಋಷಿಯ ಹೆಸರೂ ಅಗ್ನಿ ಪಾವಕನೆಂದು. ಈ ರೀತಿ ಮಂತ್ರದೇವತೆಗಳ ಹೆಸರಲ್ಲಿ ಪ್ರಸಿದ್ಧರಾದ ಅನೇಕ ಮಂದಿ ಮಂತ್ರದ್ರಷ್ಟಾ ಋಷಿಗಳಿದ್ದಾರೆ. ಇಂತಹ ಹೆಸರುಗಳು ಋಷಿಗಳ ವಿಶೇಷಜ್ಞತೆಯನ್ನು ತೋರಿಸುತ್ತವೆ.

ಈಗ, ಋಷಿಗಳೆಂದರೆ ಜ್ಞಾನಿಗಳೆಂದು ಸಾಮಾನ್ಯ ಅರ್ಥವಿದ್ದರೂ, ವೇದ ಮಂತ್ರಗಳ ಮೇಲೆ ತೋರಿಸಿರುವ ಋಷಿಗಳು ಆಯಾಯ ಮಂತ್ರಗಳ ದ್ರಷ್ಟಾರೆಂದೂ, ಅಥವಾ ವೇದಮಂತ್ರಗಳ ಗುಪ್ತ ಅಲ್ಲದೆ ಅತೀಂದ್ರಿಯ ರಹಸ್ಯಗಳನ್ನು ಪ್ರಕಟ ಮಾಡಿದವರೆಂದೂ, ಮಂತ್ರಗಳ ಜ್ಞಾನದ ಆಧಾರದಿಂದ ಶಾಸ್ತ್ರಗಳ ರಚನೆ ಮಾಡಿದವರೆಂದೂ, ಸ್ಪಷ್ಟವಾಗುತ್ತದೆ. ಆದುದರಿಂದ, ಋಷಿಗಳೆಂದರೆ ಮಂತ್ರಗಳ ರಚನೆ ಮಾಡಿದವರೆಂಬ ಮಾತು ಸರ್ವಥಾ ಅಸತ್ಯ. ಇಷ್ಟಲ್ಲದೆ, ಋಷಿಗಳ ಯೋಗ್ಯತೆಯನ್ನು ಪಡೆಯದೆಯೇ, ಕೇವಲ ಭಾಷಾಪಾಂಡಿತ್ಯದ ಗರ್ವದಿಂದ, ಅನೇಕ ಮಂದಿ ಮನಬಂದಂತೆ, ವೇದಮಂತ್ರಗಳ ಅನುವಾದವನ್ನು ಮಾಡಿದ್ದಾರೆ. ಇವರಲ್ಲಿ ರಾವಣ, ಸಾಯಣ, ಮಹೀಧರ, ಮೊದಲಾದ ಭಾರತೀಯ ಪಂಡಿತರೂ, ಮ್ಯಾಕ್ಸ್‌ಮುಲ್ಲರ್, ವಿಲ್ಸನ್ ಮೊದಲಾದ ಪಾಶ್ಚಾತ್ಯ ಪಂಡಿತರೂ ಇದ್ದಾರೆ. ಮಂತ್ರಾರ್ಥ ದರ್ಶನದ ರಹಸ್ಯ ಅಥವಾ ಋಷಿತ್ವ ಎಂದರೇನೆಂಬುದನ್ನು ಅರಿಯದೆ, ಕೆಲವರು, ಈ ಅನುವಾದಕರನ್ನೂ ಋಷಿಗಳೆಂದು ಕರೆಯುವುದುಂಟು. ಇದು ಹಾಸ್ಯಾಸ್ಪದ. ಈ ಅನುವಾದಕರು, ಒಂದು ಬದಿಯಲ್ಲಿ ಆರ್ಷ ಪರಂಪರೆಯನ್ನು ಉಪೇಕ್ಷಿಸಿದ್ದಾರೆ. ಇನ್ನೊಂದು ಕಡೆಯಲ್ಲಿ ಯೋಗಸಾಧನೆಯಿಂದ ತಮ್ಮ ಮನೋಗತಿಯನ್ನು ಸೂಕ್ಷ್ಮಗೊಳಿಸಲು ಯತ್ನಿಸಲೂ ಇಲ್ಲ. ಆದರೂ, ವೇದಭಾಷ್ಯ ಕಾರ್ಯದಲ್ಲಿ ದುಸ್ಸಾಹಸವನ್ನು ಮಾಡಿ, ಅನರ್ಥವನ್ನುಂಟುಮಾಡಿದ್ದಾರೆ. ಈ ವಿಷಯದ ವಿಶೇಷ ಚರ್ಚೆಯನ್ನು ವೇದ ಭಾಷ್ಯಕಾರರ ಪ್ರಕರಣದಲ್ಲಿ ಮಾಡುತ್ತೇವೆ.

ದೇವತೆ:—ಋಷಿಗಳ ನಂತರ, ಸೂಕ್ತ ಅಥವಾ ಅಧ್ಯಾಯಗಳ ಪ್ರಾರಂಭದಲ್ಲಿ ದೇವತೆಗಳ ಹೆಸರುಗಳನ್ನೂ ಸೂಚಿಸಲಾಗುತ್ತದೆ. ಇಲ್ಲಿ ದೇವತೆಗಳೆಂದರೆ, ಮಂತ್ರಗಳಲ್ಲಿ ವರ್ಣಿಸಿದ ವಿಷಯಗಳೆಂದು ಋಷಿಗಳು ಸ್ಪಷ್ಟವಾಗಿ ಹೇಳಿದ್ದಾರೆ. "ಋಷಿರಪಿದೇವೋ ಭವತಿ. ಅತೀ ತಾನಾಮುಪ ದಿಷ್ಟಾನ್ ವಿಷಯಾನ್ ಪುನಃಪುನರ್ನ್ವರ್ಣಶಾಂ ಸ್ಮರಣಸೌಕರ್ಯಾರ್ಥಂ ರಚಾಯಂತಿ ಭಾಷ್ಯಂ." "ದೇವೋದ್ಯೋತನಾತ್" ಅಂದರೆ, ಜ್ಞಾನದ ಪ್ರಕಾಶವಾದುದರಿಂದ ಮಂತ್ರ ಅಥವಾ ಮಂತ್ರಗತ ವಿಷಯಗಳು ದೇವತೆ

ಗಳು.[೧೫] "ದೈವತಜ್ಞೋ ಹಿ ಮಂತ್ರಾಣಾಂ ತದರ್ಥಮವಗಚ್ಛತಿ", ಅಂದರೆ, ಯಾರು ಈ ದೇವತೆಗಳ ರಹಸ್ಯವನ್ನು ಬಲ್ಲರೋ, ಅವರೇ ಮಂತ್ರಗಳ ಅರ್ಥವನ್ನೂ ಬಲ್ಲರು, ಎಂದು ಶೌನಕಾಚಾರ್ಯರು ಘೋಷಿಸಿದ್ದಾರೆ [ಬೃಹದ್ದೇವತಾ. ೧—೨]. ಆದುದರಿಂದ ಈ ದೇವತೆಗಳನ್ನು ಮೊದಲು ಚೆನ್ನಾಗಿ ತಿಳಿದುಕೊಳ್ಳಬೇಕು. "ಯತ್ಕಾಮಃ ಋಷಿರ್ಯಸ್ಯಾಂ ದೇವತಾಯಾಮಾರ್ಥಪತ್ಯಮಿಚ್ಛನ್ ಸ್ತುತಿಂ ಪ್ರಯುಂಕ್ತೇ ತದ್ದೈವತಃ ಸ ಮಂತ್ರೋ ಭವತಿ" (ನಿರುಕ್ತ ೭—೧—೧.) ಅಂದರೆ, ಋಷಿಯು ಯಾವ ದೃಷ್ಟಿಯಿಂದ, ಮಂತ್ರಾರ್ಥ ಪ್ರಕಾಶದ ಇಚ್ಛೆಯನ್ನು ಮಾಡುತ್ತಾನೆಯೋ ಆ ದೃಷ್ಟಿಯ ಅರ್ಥವೇ ಸಂಬಂಧಪಟ್ಟ ಮಂತ್ರದ ದೇವತೆ. ಉದಾಹರಣೆಗಾಗಿ, "ಅಗ್ನಿಮೀಳೇ ಪುರೋಹಿತಂ..." ಋಗ್ವೇದದ ಈ ಪ್ರಥಮ ಮಂತ್ರದ ದೇವತೆಯು ಅಗ್ನಿ ಎಂದು ತೋರಿಸಿದೆ.

ಆಧ್ಯಾತ್ಮಿಕ ದೃಷ್ಟಿಯಲ್ಲಿ ಅಗ್ನಿ ಎಂದರೆ ಪರಮಾತ್ಮನೆಂದೂ, ಅಧಿದೈವ ಪ್ರಕರಣದಲ್ಲಿ ಸೂರ್ಯ, ವಿದ್ಯುತ್. ಬೆಂಕಿ ಎಂದೂ. ಅಧಿಯಜ್ಞಾರ್ಥದಲ್ಲಿ ಯಜ್ಞ ಅಥವಾ ಯಜ್ಞೇಶ್ವರ ಅಗ್ನಿ ಎಂದೂ, ಅಧಿಲೋಕ ಅರ್ಥದಲ್ಲಿ ರಾಜ, ವಿದ್ವಾನ್, ಅಥವಾ ಜನನಾಯಕ ಎಂದೂ ಅರ್ಥವಾಗುತ್ತದೆ.* ಅಧ್ಯಾತ್ಮ ದೃಷ್ಟಿಯಿಂದ ಋಷಿಯು ಮಂತ್ರವನ್ನು ನೋಡಿದರೆ, ಮಂತ್ರದ ದೇವತೆ ಪರಮಾತ್ಮ ಮತ್ತು ಅಧಿದೈವ ದೃಷ್ಟಿಯಿಂದ ನೋಡಿದರೆ, ಸೂರ್ಯಾದಿ ವಿಷಯಗಳೂ, ಮಂತ್ರದ ದೇವತೆ ಎಂದೆನಿಸುತ್ತದೆ. ಇಲ್ಲಿ ಮಂತ್ರದಲ್ಲಿಯೇ ಅಗ್ನಿಯ ಸ್ತುತಿಯು ಸ್ಪಷ್ಟವಾಗಿದೆ. ಒಂದು ವೇಳೆ ಮಂತ್ರದಲ್ಲಿ ದೇವತೆಯ ಸಂಜ್ಞೆಯೇ ಇಲ್ಲವಾದರೆ, ಯಾವ ದೇವತೆಯೆಂದು ಗೊತ್ತಾಗುವುದು ಹೇಗೆ? ಇದು ಋಷಿಗಳ ಕಾರ್ಯ. ಪ್ರಕರಣಾನುಸಾರವಾಗಿ ಇವರು ಮಂತ್ರಗಳ ದೇವತೆಗಳನ್ನು ನಿಶ್ಚಿತ ಮಾಡುತ್ತಾರೆ.

ಇಲ್ಲಿ ಮೂರು ಮಾತುಗಳು ಸ್ಪಷ್ಟವಾಗುತ್ತವೆ. ಒಂದನೆಯದಾಗಿ, ಮಂತ್ರಗಳ ದೇವತೆಗಳೆಂದರೆ ಮಂತ್ರಗಳಲ್ಲಿ ಪ್ರತಿಪಾದಿತ ವಿಷಯಗಳು. ಎರಡನೆಯದಾಗಿ, ಈ ದೇವತೆಗಳು ರಹಸ್ಯಮಯವಾದ ಮಹಿಮೆಯಿಂದ ಕೂಡಿದ ಅಥವಾ ಮಾಯಾವಿ ಸಾಕಾರ ದೇವತೆಗಳಲ್ಲ. ಯಜುರ್ವೇದ ಅಧ್ಯಾಯ ೪, ಮಂತ್ರ ೪ರ ದೇವತೆ—ಅಂದರೆ, ವಿಷಯ ಪರಮಾತ್ಮ ; ಅಥರ್ವವೇದ ಕಾಂಡ ೬, ಸೂಕ್ತ ೭೬ರ ದೇವತೆ ವೈದ್ಯ; ಸೂಕ್ತ ೧೪೦ರ ದೇವತೆ ಹಲ್ಲುಗಳು [ದಂತಾ]; ಯಜುರ್ವೇದ ಅಧ್ಯಾಯ ೨೯, ಮಂತ್ರ ೧೯ರ ದೇವತೆ ಮನುಷ್ಯರು; ಇದೇ ರೀತಿ ದಂಪತಿ, ಸರ್ಪ, ಪೃಥ್ವಿ, ನದಿ, ಯಜ್ಞ, ಬಾಣ, ಜ್ಞಾನ, ವಾಕ್ ಇತ್ಯಾದಿಗಳೂ ಮಂತ್ರದೇವತೆಗಳಾಗಿವೆ. ಇಂದ್ರ, ವರುಣ, ಮಿತ್ರ, ಸೋಮ ಅಶ್ವಿನೀ ಮೊದಲಾದ ದೇವತೆಗಳೂ, ನಿಜವಾಗಿ ಯಾವುದೇ ಪ್ರಕಾರದ ಸಾಕಾರ ದೇವತೆಗಳಲ್ಲ; ಇವುಗಳು ಮಂತ್ರಗಳಲ್ಲಿ ಪ್ರತಿಪಾದಿತವಾದ ಜ್ಞಾನದ ವಿಷಯಗಳು. ಈ ರಹಸ್ಯವನ್ನರಿಯದೆ, ಯಜ್ಞಾದಿಗಳಲ್ಲಿ ಈ ದೇವತೆಗಳನ್ನು ಕರೆಯುವ ಮತ್ತು ಅವರನ್ನು ತೃಪ್ತಿ ಮಾಡುವ ಭ್ರಾಂತಿಜನ್ಯ ಕಲ್ಪನೆಯು ಜನರಲ್ಲಿ ಬೆಳೆದುಬಂದಂತೆ ಕಾಣು

---

[೧೫] ದೇವತಾ ಶಬ್ದದ ವಿವರಣೆಯನ್ನು ವೇದಪ್ರಕಾಶದಲ್ಲಿ "ಯಜ್ಞೇನ ಯಜ್ಞಮ ಯಜಂತ ದೇವಾಃ" ಈ ಲೇಖನದ ಪ್ರಾರಂಭದಲ್ಲಿಯೇ ಕೊಟ್ಟಿದ್ದೇನೆ.

* ಜೀವನ ಲೀಲಾ ಪರಿಸಮಾಪ್ತ್ಯ ನಂತರಂ, ಪ್ರೇತ್ಯ ಕಾರ್ಯೋ ಪ್ರಜ್ವಾಲಿತೋಽಗ್ನಿರ್ದಕ್ಷಿಣಾಗ್ನಿರಿತಿ ಸ್ಮರ್ಯತೇ. ಪುನಶ್ಚ, ಭುಕ್ತಾನ್ನ ಪಾಚನಾರ್ಥಂ ಯೋಽಗ್ನಿರ್ಗೃಹ್ಯತೇ, ಸ ವೈಶ್ವಾನರ ಇತಿ, All this in between ಎಂದು ಅರ್ಥವಾಗುತ್ತದೆ.... ಅಧ್ಯಾತ್ಮ—

ತ್ತದೆ. ಇದರ ಆಧಾರದಿಂದ, ಪಾಶ್ಚಾತ್ಯ ವಿದ್ವಾಂಸರೂ ವೇದಗಳಲ್ಲಿ ಉಪಾಸ್ಯ ದೇವೋಚ್ಚತಾವಾದ [Henotheism] ಅಥವಾ ಅನೇಕೇಶ್ವರವಾದ, ಇನ್ನೂ ಏನೇನೋ ವಾದಗಳನ್ನು ಮುಂದಿಟ್ಟಿದ್ದಾರೆ. ಇದು ಶೋಚನೀಯ. ಸರಿಯಾದ ಅರ್ಥದಲ್ಲಿ ಗ್ರಹಿಸಿದರೆ, ಬಹುದೇವತಾವಾದ ವೇದಗಳಲ್ಲಿಲ್ಲವೇ ಇದೆ.

ಮೂರನೆಯದಾಗಿ, ಯಾವ ರೀತಿಯಲ್ಲಿ ಋಷಿಗಳು ಶಾಶ್ವತವಲ್ಲವೋ ಅದೇ ರೀತಿಯಲ್ಲಿ ದೇವತೆಗಳ ಹೆಸರುಗಳೂ ಶಾಶ್ವತವಲ್ಲ. ಯಾವ ದೇವತೆಯನ್ನು ಮಂತ್ರ ದ್ರಷ್ಟಾ ಋಷಿಯು ಪ್ರಸಿದ್ಧ ಮಾಡುತ್ತಾನೆಯೋ ಆ ದೇವತೆಯೇ ಪ್ರಸಿದ್ಧವಾಗುತ್ತದೆ. [ಈ ವಾದವನ್ನು ದಿವಂಗತ ಶ್ರೀ॥ ಶ್ರೀ. ದಾ. ಸಾತವಳೇಕರರು ಚಂಚಲ ದೇವತಾವಾದ ವೆಂದು ನಿರ್ದೇಶಿಸುತ್ತಿದ್ದರು. ದೇವತಾ ಪ್ರತಿಪಾದ್ಯ ವಿಷಯವಾಗಿದ್ದು, ಅದೇ ಬದಲಾಯಿಸುವುದಾದಲ್ಲಿ, ಯಾವುದೇ ಮಂತ್ರಾರ್ಥವನ್ನು 'ಇದು ಹೀಗೆಯೇ ಸರಿ'—ಎಂದು ಹೇಳುವುದಾದರೂ ಹೇಗೆ?—ಎಂಬ ಪ್ರಶ್ನೆ ಇನ್ನೂ ಉಳಿದೇ ಇದೆ.] ಆದುದರಿಂದ, ಮಂತ್ರಗಳ ಮೇಲೆ ತೋರಿಸಿರುವ ದೇವತೆಗಳ ಹೆಸರುಗಳು ಮಂತ್ರಾರ್ಥ ನಿರ್ಣಯಕ್ಕೆ ಸಹಾಯಕವಾಗುವುದು ಮಾತ್ರವಲ್ಲದೆ, ಇವು ಐತಿಹಾಸಿಕ ಮಹತ್ವವನ್ನೂ ಹೊಂದಿಕೊಂಡಿವೆ.

ಶತಪಥ ಬ್ರಾಹ್ಮಣ ೪–೫–೭–೨ರಲ್ಲಿ ಮೂವತ್ತ ಮೂರು ದೇವತೆಗಳ ಉಲ್ಲೇಖವಿದೆ. ಯಥಾ ಅಗ್ನಿ, ವಾಯು, ಪೃಥ್ವಿ, ಅಂತರಿಕ್ಷ, ಸೂರ್ಯ, ಚಂದ್ರಮಾ, ಆಕಾಶ ಮತ್ತು ನಕ್ಷತ್ರಗಳೆಂದು ಎಂಟು ವಸುಗಳು; ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ, ನಾಗ, ಕೂರ್ಮ, ಕೃಕಿಲಾ, ದೇವದತ್ತ, ಧನಂಜಯ ಮತ್ತು ಜೀವಾತ್ಮಾ ಎಂದು ಹನ್ನೊಂದು ರುದ್ರರು; ಚೈತ್ರ, ವೈಶಾಖಾದಿ ಹನ್ನೆರಡು ಮಾಸಗಳು, ಹನ್ನೆರಡು ಆದಿತ್ಯರು; ಯಜ್ಞ, ವಿದ್ಯುತ್ ಅಥವಾ ಇಂದ್ರ, ಮತ್ತು ಪ್ರಜಾಪತಿ ಪರಮೇಶ್ವರನು ಮೂವತ್ತನಾಲ್ಕನೆಯ ದೇವತೆ. ಯಜುರ್ವೇದ ೨೪–೨೦ರಲ್ಲಿ ವಾತ, ಸೂರ್ಯ, ಮರುತ, ಚಂದ್ರಮಾ, ವಸು, ರುದ್ರ, ಆದಿತ್ಯ, ವಿಶ್ವೇದೇವಾ, ಬೃಹಸ್ಪತಿ, ಇಂದ್ರ ಮತ್ತು ವರುಣರನ್ನು ದೇವತೆಗಳೆಂದು ವರ್ಣಿಸಿದೆ.

ವೇದಮಂತ್ರಗಳಲ್ಲಿ ಈ ದೇವತೆಗಳ ಸ್ತುತಿ ಇದೆ. ಈ ಸ್ತುತಿಯು ಉತ್ತಮ ಶ್ರೇಣಿಯ ಕಾವ್ಯಶೈಲಿಯಲ್ಲಿ—ಶ್ಲೇಷಾದಿ ಅಲಂಕಾರಗಳಿಂದ ಯುಕ್ತವಾಗಿರುವುದರಿಂದ ಜೀವಂತವೂ ರೋಚಕವೂ ಆಗಿದೆ. ಸಾಮಾನ್ಯವಾಗಿ ಸ್ತುತಿ ಎಂದರೆ ಹೊಗಳುವುದು ಎಂದು ಜನರು ತಿಳಿದುಕೊಳ್ಳುತ್ತಾರೆ. ಇದು ಸರಿಯಲ್ಲ. ವಸ್ತುಗಳ ಗುಣಧರ್ಮಗಳ ಯಥಾರ್ಥ ವರ್ಣನೆಯೇ ಸ್ತುತಿ. ಗುಣದಲ್ಲಿ ದೋಷಾರೋಪಣೆ ಮತ್ತು ದೋಷದಲ್ಲಿ ಗುಣಾರೋಪಣೆ ಮಾಡುವುದೇ ನಿಂದೆ—ಎಂಬ ತಥ್ಯ ಸದಾ ಸ್ಮರಣೀಯ.

ಪ್ರಕರಣಾನುಸಾರವಾಗಿ ಆಯಾಯ ದೇವತೆಗಳ ಅಂದರೆ ವಿಷಯಗಳ ಮಹತ್ವವನ್ನು ಮಂತ್ರಗಳಲ್ಲಿ ತೋರಿಸಲಾಗಿದೆ. ಆದರೆ, ಇಲ್ಲಿ ಪುರಾಣಗಳಲ್ಲಿ ಯಾವ ರೀತಿಯಲ್ಲಿ ವಿಷ್ಣು ಭಕ್ತರು ವಿಷ್ಣುವಿನ ಸ್ತುತಿಯನ್ನೂ ಇತರ ದೇವತೆಗಳ ನಿಂದೆಯನ್ನೂ, ಶಾಕ್ತರು ಶಕ್ತಿಯ ಸ್ತುತಿಯನ್ನೂ ಇತರ ದೇವತೆಗಳ ನಿಂದೆಯನ್ನೂ, ಇದೇ ರೀತಿ ಶೈವರೂ, ಗಾಣಪತ್ಯರೂ ಪಕ್ಷಪಾತಪೂರ್ಣ ಭಕ್ತಿಯನ್ನು ಪ್ರದರ್ಶಿಸಿ, ಕೇವಲ ತಮ್ಮ ಇಷ್ಟ ದೇವತೆಯ ಮಹಿಮೆಯನ್ನು ಕೊಂಡಾಡಿ, ಬೇರೆ ದೇವತೆಗಳು ಹೀನರೆಂಬ ಭಾವನೆಯನ್ನು ತೋರಿಸುತ್ತಾರೆಯೋ ಇಂತಹ ಕೀಳುಮಟ್ಟದ ಭಕ್ತಿ ಅಥವಾ ಉಪಾಸನೆಯ

ಗಂಧವೂ ವೇದಗಳಲ್ಲಿಲ್ಲ. "ಎಲ್ಲಾ ದೇವರೂ ಒಂದೇ; ನಾವು ಹಲವು" ಎಂಬ ತರ್ಕ ಹೀನ ಸಿದ್ಧಾಂತವೂ ಇಲ್ಲಿಲ್ಲ.[೧೫]* ಪರಮಾತ್ಮನು ಒಬ್ಬನೇ, ಅವನ ಹೆಸರುಗಳು ಅನೇಕ ವಾಗಿವೆ. ಅಗ್ನಿ, ಯಮ, ಮಾತರಿಶ್ವಾ ಇತ್ಯಾದಿ ನೂರಾರು ಹೆಸರುಗಳು ಒಬ್ಬನೇ ಸೃಷ್ಟಿ ಕರ್ತನ ವಿಶೇಷಣಗಳಾಗಿದ್ದು, ಪ್ರತಿಯೊಂದು ಹೆಸರೂ ಅವನ ಗುಣ, ಕರ್ಮ, ಸ್ವಭಾವಗಳನ್ನು ಸೂಚಿಸುತ್ತವೆ.[೧೬] ಆದರೆ ಈ ಹೆಸರುಗಳು ಅನೇಕಾರ್ಥಗಳುಳ್ಳವಾಗಿರು ವುದರಿಂದ, ಪ್ರಕರಣಾನುಸಾರವಾಗಿ ಮಂತ್ರಾರ್ಥಗಳನ್ನು ತಿಳಿದುಕೊಳ್ಳಬೇಕು.

**ಛಂದಸ್ಸು ಮತ್ತು ಸ್ವರಃ**—ಋಷಿ ಮತ್ತು ದೇವತೆಗಳ ಹೆಸರುಗಳ ಬಳಿಕ, ಮಂತ್ರಗಳ ಮೇಲೆ ಛಂದಸ್ಸು ಮತ್ತು ಸ್ವರಗಳ ಹೆಸರುಗಳನ್ನೂ ತೋರಿಸುತ್ತಾರೆ. ಮುಖ್ಯವಾಗಿ ವೇದಗಳಲ್ಲಿ ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ರಥಂತರಾ ಮತ್ತು ಜಗತೀ ಎಂಬ ಎಂಟು ವಿಧವಾದ ಛಂದಸ್ಸುಗಳಿವೆ. ಋಗ್ವೇದ [೧೦–೧೩೦]. ಈ ಛಂದಸ್ಸುಗಳು ಅಕ್ಷರ ಛಂದಸ್ಸುಗಳಾಗಿವೆ. ಗಾಯತ್ರಿಯಲ್ಲಿ ಎಂಟು ಅಕ್ಷರಗಳ ಮೂರು ಪಾದಗಳಿವೆ. ಅಂದರೆ, ಇಪ್ಪತ್ತನಾಲ್ಕು ಅಕ್ಷರಗಳಿಂದ ಗಾಯತ್ರೀ ಛಂದಸ್ಸು. ಇದರ ಅಕ್ಷರಗಳ ಸಂಖ್ಯೆಯಲ್ಲಿ ಹೆಚ್ಚುಕಡಿಮೆಯಾದಂತ, ಗಾಯತ್ರೀ ಛಂದಸ್ಸಿನ ಉಪಭೇದಗಳಾಗುತ್ತವೆ.[೧೭] ಗಾಯತ್ರೀ ಛಂದಸ್ಸಿಗೆ ನಾಲ್ಕು ನಾಲ್ಕು ಅಕ್ಷರ ಗಳನ್ನು ಸೇರಿಸಿಕೊಂಡು ಹೋದಂತೆ ಇತರ ಛಂದಸ್ಸುಗಳ ಉತ್ಪನ್ನವಾಗುತ್ತದೆ. ಇಪ್ಪತ್ತೆಂಟು ಅಕ್ಷರಗಳಿಂದ ಉಷ್ಣಿಕ್, ಮೂವತ್ತೆರಡು ಅಕ್ಷರಗಳಿಂದ ಅನುಷ್ಟುಪ್, ಮೂವತ್ತಾರು ಅಕ್ಷರಗಳಿಂದ ಬೃಹತೀ, ನಲ್ವತ್ತು ಅಕ್ಷರಗಳಿಂದ ಪಂಕ್ತಿ ,ನಲ್ವತ್ತನಾಲ್ಕು ಅಕ್ಷರಗಳಿಂದ ತ್ರಿಷ್ಟುಪ್, ಮತ್ತು ನಲ್ವತ್ತೆಂಟು ಅಕ್ಷರಗಳಿಂದ ಜಗತೀ ಛಂದಸ್ಸು ನಿರ್ಮಾಣವಾಗುತ್ತದೆ. ಈ ಛಂದಸ್ಸುಗಳ ಅಕ್ಷರಗಳ ಸಂಖ್ಯೆಯಲ್ಲಿ ಎರಡು ಅಕ್ಷರಗಳು ಕಡಿಮೆಯಾದಾಗ ವಿರಾಟ್ ಛಂದವು ಉತ್ಪನ್ನವಾಗುತ್ತದೆಯೆಂದು ಶೌನಕರು ಹೇಳು ತ್ತಾರೆ. ಅತಿ ವಿಸ್ತಾರವಾದ ಛಂದಸ್ಸೆಂದರೆ ಸ್ವರಾಡ್ ಕೃತಿ. ಇದರಲ್ಲಿ ೧೦೭ ಅಕ್ಷರಗಳಿವೆ.

ಸರ್ವಾನುಕ್ರಮಣಿಕೆಯಲ್ಲಿ **ಋಜುಷಾಮನಿಯತಾಕ್ಷರತ್ವಾದೇತೇಷಾಂ ಛಂದೋ ನ ವಿದ್ಯತೇ**' ಅಂದರೆ ಯಜುರ್ವೇದದ ಮಂತ್ರಗಳ ಅಕ್ಷರಗಳ ಸಂಖ್ಯೆ ನಿಯ ಮಿತವಾಗಿಲ್ಲದಿರುವುದರಿಂದ ಅವುಗಳನ್ನು ಛಂದಸ್ಸುಗಳೆಂದು ಹೇಳಲಾಗುವುದಿಲ್ಲವೆಂದು ಹೇಳಿದ್ದಾರೆ. ಇದು ಸರಿಯೆಂದು ತೋರುವುದಿಲ್ಲ. ವೈದಿಕ ಛಂದಸ್ಸುಗಳ ನಿಯಮಾನು ಸಾರವಾಗಿ ಇವೆಲ್ಲಾ ನಿಯಮಬದ್ಧವಾಗಿಯೇ ಇವೆ. ಛಂದಸ್ಸು ಪದ್ಯಾತ್ಮಕ ಮಾತ್ರವಲ್ಲ;

---

* "ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ"—ಎನ್ನುವಾಗಲೂ ಅನೇಕ ಉಪಾಸನೀಯ ದೇವರುಗಳ ಇರುವಿಕೆಯನ್ನು ಅಂಗೀಕರಿಸಿಯೇ, ಆ ಮೇಲೆ ಸಮನ್ವಯ ಪ್ರಯತ್ನ ಮಾಡ ಲ್ಪಡುವ ಕಾರಣ, ಈ ವಾದವೇ ನಿರಾಧಾರ.

[೧೫] ಋಷೀಣಾಂ ತಪ್ಯತಾಮುಗ್ರಂ ತಪಃ ಪರಮದುಷ್ಕರಂ । ಮಂತ್ರಾಃ ಪ್ರಾದುರ್ಭಭೂವುರ್ಹಿ ಪೂರ್ವಮನ್ವಂತರೇಷ್ವಿಹ । ಅಸಂತೋಷಾದ್ಭಯಾದ್ದುಃಖಾತ್ಸುಖಾಚ್ಛೋಕಾಚ್ಚ ಪಂಚಧಾ ॥ ಋಷೀಣಾಂ ತಪಃ ಕಾರ್ತ್ಸ್ನ್ಯೇನ ದರ್ಶನೇನ ಯದೃಚ್ಛಯಾ ॥ [ಪುರಾಣವಾಕ್ಯ].

[೧೬] ದೇವತಾ ಶಬ್ದದ ವಿವರಣೆಯನ್ನು "ವೇದಪ್ರಕಾಶದಲ್ಲಿ ಯಜ್ಞೇನ ಯಜ್ಞಮಯಜಂತ ದೇವಾಃ ಈ ಲೇಖನದ ಪ್ರಾರಂಭದಲ್ಲಿಯೇ ಕೊಟ್ಟಿದ್ದೇವೆ.

[೧೭] ಇಲ್ಲಿ, ವೇದಗಳಲ್ಲಿ ಅನೇಕೇಶ್ವರವಾದ [Polytheism] ಹಿನೋಥೀಸ್ಮ್ [Henotheism] ಕಥೋನೆಥೀಸ್ಮ್ [Kethonetheism] ಮೊದಲಾದ ಭ್ರಾಂತಿಜನ್ಯ ಸಿದ್ಧಾಂತಗಳಿಗೆ ಆಸ್ಪದ ವಿಲ್ಲವೆಂದು ಸ್ಪಷ್ಟವಾಗುತ್ತದೆ.

ಗದ್ಯಾತ್ಮಕವೂ ಆಗಿದೆ. "ನಾ ಛಂದಸಿ ವಾಗುಚ್ಚರತಿ" ಎಂದರೆ, ವೇದವಾಣಿಯು ಛಂದೋರಹಿತವಾಗಿಲ್ಲವೆಂದು ನಿರುಕ್ತದ [೭-೨] ಟೀಕೆಯಲ್ಲಿ ದುರ್ಗಾಚಾರ್ಯರು ಹೇಳಿದ್ದಾರೆ. "ಛಂದೋಹೀನೋ ನ ಶಬ್ದೋಽಸ್ತಿ, ನ ಛಂದಃ ಶಬ್ದವರ್ಜಿತಂ ॥" ಎಂದು ಭರತನಾಟ್ಯಶಾಸ್ತ್ರ [೧೪-೪೫]ದಲ್ಲಿಯೂ, "ಛಂದೋಭೂತಮಿದಂ ಸರ್ವಂ ವಾಙ್ಮಯಂ" ಎಂದು ಜಯಕೀರ್ತಿಯ ಛಂದೋನುಶಾಸನದಲ್ಲಿಯೂ ಇದೇ ಸಿದ್ಧಾಂತ ವನ್ನು ಮಂಡಿಸಿದ್ದಾರೆ.

"ಛಂದಃ ಪಾದೌ ತು ವೇದಸ್ಯ" ಎಂದರೆ, ವೇದಮಂತ್ರಗಳು ಛಂದಸ್ಸನ್ನು ಆಧರಿಸಿಕೊಂಡಿವೆ. ಇದರ ತಾತ್ಪರ್ಯವೇನೆಂದರೆ, ಮಂತ್ರಗಳ ಅರ್ಥಕ್ಕೂ, ಛಂದಸ್ಸಿಗೂ ಘನಿಷ್ಠ ಸಂಬಂಧವಿದೆ. ಅಗ್ನಿಗೆ ಗಾಯತ್ರೀ, ಇಂದ್ರನಿಗೆ ತ್ರಿಷ್ಟುಪ್, ಸೋಮನಿಗೆ ಅನುಷ್ಟುಪ್ ಎಂದು ಮುಂತಾಗಿ ದೇವತೆಗಳಿಗೂ, ಛಂದಸ್ಸುಗಳಿಗೂ ಇರುವ ಸಂಬಂಧ ವನ್ನು ವೇದವೇ ತೋರಿಸುತ್ತದೆ. ಋ. [೧೦-೧೩೦.] ಎಂದಮಾತ್ರಕ್ಕೆ ಅಗ್ನಿದೇವತಾಕ ಮಂತ್ರಗಳೆಲ್ಲಾ ಗಾಯತ್ರೀ ಛಂದಸ್ಸಿನಲ್ಲಿವೆ; ಇಂದ್ರಸಂಬದ್ಧವಾದುವೆಲ್ಲಾ ತ್ರಿಷ್ಟುಪ್ ನಲ್ಲಿವೆ—ಇತ್ಯಾದಿ ಕಲ್ಪನೆ ಸಲ್ಲದು. ಅಗ್ನಿಪರಕ ಮಂತ್ರಗಳು ಜಗತೀ ಛಂದಸ್ಸಿನ ನಲ್ಲಿಯೂ ಇವೆ [ಋಕ್.-೧೦-೧೧೫] ಸೂಕ್ತ ನೋಡಿರಿ. ಋಗ್ವೇದ ೧೦ನೆಯ ಮಂಡಲದ ೭ರಿಂದ ೯ನೆಯ ಮಂತ್ರಗಳು ಇಂದ್ರಪರಕವಾದರೂ ಬೃಹತೀ ಛಂದಸ್ಸಿನಲ್ಲಿವೆ.

ಹಾಗಾದರೆ, ಋಗ್ವೇದದ "ಅಗ್ನೇರ್ಗಾಯತ್ರ್ಯಭವತ್ಸಯುಗ್ವೋಷ್ಣಿಹಯಾ ಸವಿತಾ ಸಂಬಭೂವ। ಅನುಷ್ಟುಭಾ ಸೋಮ ಉಕ್ಥೈರ್ಮಹಸ್ವಾನ್ ಬೃಹಸ್ಪತೇ ಬೃಹತೀ ವಾಚಮಾವತ್" [ಋಗ್ವೇದ-೧೦-೧೩೦-೪]. ಹಾಗೂ ಅದರ ಅನಂತರದ ಮಂತ್ರದ ಭಾವನೆಯಾದರೂ ಏನು? ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ತ್ರಿಷ್ಟುಪ್—ಆದಿಗಳು ಛಂದಸ್ಸುಗಳ ಹೆಸರುಗಳಷ್ಟೇ. ಜೊತೆಗೆ "ಗಾಯಂತಂ ತ್ರಾಯತ ಇತಿ ಗಾಯತ್ರೀ"—"ಅರ್ಥ ಸಹಿತ ಪಠಿಸುವವರಿಗೆ ತ್ರಾಣದಾಯಕವಾಗುವುದು" —ಎಂಬ ಛಂದ—ಎಂದರೆ ಅಭಿಲಾಷಾಯುಕ್ತವಾಗಿ ಅಗ್ನಿಯು ಎಂದರೆ ಪರಮಾತ್ಮಾ ತೇಜೋಮಯ ಸರ್ವಾಗ್ರಣಿಯ ಸ್ತುತಿ ಮಾಡಲ್ಪಟ್ಟಿದೆ. ಉಷ್ಣಿಕ್ [ಉಷ್ಣಿಕ]— ಎಂದರೆ ಸುಪ್ತ ಚೇತನದಲ್ಲಿ ಜಾಗೃತಿಯ ತೀವ್ರತ್ವವನ್ನು, ಉಗ್ರತ್ವವನ್ನೂ, ತೀಕ್ಷ್ಣತ್ವ ವನ್ನೂ ತರುವ ಅಭಿಲಾಷೆಯಿಂದ 'ಸವಿತೃ'ವನ್ನು, ಪ್ರೇರಕನೂ, ಪರಮೈಶ್ವರ್ಯದಾಯಕನೂ ಆದ ಭಗವಂತನನ್ನು ಜಿಜ್ಞಾಸುಗಳ ಮುಂದೆ ಅಭಿವರ್ಣಿತನನ್ನಾಗಿ ಮಾಡಲಾಗುತ್ತದೆ; ವಿರಾಟ್ ಜಗತ್ತಿನ ವಿಶ್ಲೇಷಣದಿಂದ ಪಿಲ್ಲವರ ರಸರೂಪನೂ, ಆನಂದಮಯನೂ ಆದ ರಸರೂಪನಾದ ಜಗತ್ಪತಿಯನ್ನು ಅನುಷ್ಟುಪ್—ಎಂದರೆ, ಅನು। ಸ್ತುಭ್, ವ್ಯಕ್ತಿ— ವ್ಯಕ್ತಿಯ ಗುಣ—ಕರ್ಮ—ಸ್ವಭಾವವನ್ನನುಸರಿಸಿ, ಅಥವಾ ಪ್ರಭುವಿನ ಸ್ವರೂಪಾನುಗುಣ ವಾಗಿ ಹೊಗಳುವ, ಸ್ತುತಿಸುವ ಹಾಗೂ ವಾದಕಾಘಾತದಿಂದ ಪ್ರಸನ್ನನಾಗುವವರಿಂದ ಜೀವನನ್ನು ತಡೆಗಟ್ಟುವ 'ಛಂದ'—ಎಂದರೆ ಕಾಮನೆಯಿಂದ ಪ್ರಕಾಶಿತನನ್ನಾಗಿ ಮಾಡಲಾಗುತ್ತದೆ"—ಇತ್ಯಾದಿ ಭಾವನೆಗಳನ್ನು ಗ್ರಹಿಸಬೇಕು. 'ಛಂದ' ಅಥವಾ 'ಛಂದಸ್' ಶಬ್ದಕ್ಕೆ 'ಅಭಿಲಾಷೆ, ಶುಭೇಚ್ಛೆ, ಹೆಬ್ಬಯಕೆ'—ಎಂಬರ್ಥಗಳಿಗೆ, ಅಕ್ಷರ ಸಂಖ್ಯಾಧಾರಿತ ಅಥವಾ ಮಾತ್ರಾಗಣಯುಕ್ತ ಪದ್ಯಾತ್ಮಕ ಛಂದಸ್ಸು'—ಎಂಬರ್ಥಕ್ಕಿಂತ ಹೆಚ್ಚು ಪ್ರಾಧಾನ್ಯ ಕೊಡಬೇಕು. ಲೌಕಿಕ ಛಂದಸ್ಸುಗಳಲ್ಲಿ ಈ ವಿಶೇಷತೆಯು ಕಂಡು ಬರುವುದಿಲ್ಲ.

"ತೇಷಾಂ ಯತ್ರಾರ್ಥವಶೇನ ಪಾದವ್ಯವಸ್ಥಾ ಸಾ ಋಕ್" ಎಂದು ಜೈಮಿನಿ ಮುನಿಯು ಹೇಳಿದ್ದಾರೆ. ಅಂದರೆ ವೇದಮಂತ್ರಗಳ ಪಾದವ್ಯವಸ್ಥೆಯು ಸಾರ್ಥಕವಾಗಿದೆ. ಉದಾಹರಣೆಗಾಗಿ ಋಗ್ವೇದ, ಮಂಡಲ ೧, ಸೂಕ್ತ ೧, ಮಂತ್ರ ೨ರಲ್ಲಿ "ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯಃ......" ಎಂದಿದೆ. ಇಲ್ಲಿ ಹತ್ತು ಅಕ್ಷರಗಳಿವೆ. ಮುಂದಿನ ಪಾದದಲ್ಲಿ "ನೂತನೈರುತ" ಎಂದಿದೆ. ಇಲ್ಲಿ ಐದೇ ಅಕ್ಷರಗಳಿವೆ. ಈ ಪಾದವು ಪೂರ್ಣವಾಗಬೇಕಾದರೆ, ಅಥವಾ ಸಾರ್ಥಕವಾಗಬೇಕಾದರೆ, 'ಈಡ್ಯಃ' ಪದವನ್ನು ಇದರೊಟ್ಟಿಗೆ ಸೇರಿಸಬೇಕು. ಈ ರೀತಿ, ಕೆಲವು ವೇಳೆ, ಮೂರನೇ ಅಥವಾ ನಾಲ್ಕನೇ ಪಾದದ ಕ್ರಿಯಾಪದಗಳನ್ನು ಹಿಂದಿನ ಪಾದಗಳೊಂದಿಗೆ ಸೇರಿಸಬೇಕಾಗುತ್ತದೆ.

ಛಂದಸ್ಸುಗಳಿಗೂ ನಾದ ಸ್ವರಗಳಿಗೂ ಅನ್ಯೋನ್ಯ ಸಂಬಂಧವಿದೆ. ಗಾಯತ್ರೀ ಷಡ್ಜದಲ್ಲಿಯೂ, ತ್ರಿಷ್ಟುಪ್ ಧೈವತದಲ್ಲಿಯೂ, ಅನುಷ್ಟುಪ್ ಗಾಂಧಾರದಲ್ಲಿಯೂ ಇದೆ. ನಿಷಾದ ಮತ್ತು ಗಾಂಧಾರಗಳು ಉದಾತ್ತದಲ್ಲಿಯೂ, ಋಷಭ ಮತ್ತು ಧೈವತಗಳು ಅನುದಾತ್ತದಲ್ಲಿಯೂ, ಷಡ್ಜ, ಮಧ್ಯಮ ಮತ್ತು ಪಂಚಮಗಳು ಸ್ವರಿತದಲ್ಲಿಯೂ ಇವೆಯೆಂದು ಯಾಜ್ಞವಲ್ಕ್ಯ ಶಿಕ್ಷಾ ಶಾಸ್ತ್ರದಲ್ಲಿದೆ.[೧೮] ಉದಾತ್ತಾದಿ ಸ್ವರಗಳು ಅರ್ಥ ನಿರ್ಣಯಕ್ಕೆ ಸಹಾಯಕವಾಗುತ್ತವೆ.

ಷಡ್ಜಾದಿ ಸ್ವರಗಳ ಉಲ್ಲೇಖವನ್ನು ಕೇವಲ ಸ್ವಾಮಿ ದಯಾನಂದರು ಮಾತ್ರ ಮಾಡಿದಂತೆ ತೋರುತ್ತದೆ. ಇತರರು ಇವುಗಳನ್ನು ಉಪೇಕ್ಷಿಸಿದ್ದಾರೆ. ಸ್ವರವಿಜ್ಞಾನ [acoustics]ವು ಪ್ರಗತಿಹೊಂದಿದಂತೆ, ಈ ಸ್ವರಗಳ ಮಹತ್ವವೂ ವಿಶೇಷವಾಗಿ ಬೆಳಕಿಗೆ ಬರಬಹುದೆಂದು ನಮ್ಮ ನಂಬಿಕೆ.

## ವೇದ ವಿಷಯ

ಪ್ರಾಚೀನ ವೇದಾಚಾರ್ಯರೆಲ್ಲಾ ವೇದಗಳನ್ನು ಪೂರ್ಣ ಜ್ಞಾನದ, ಅಥವಾ ಎಲ್ಲಾ ವಿದ್ಯೆಗಳ ಪುಸ್ತಕವೆಂದು ಘೋಷಣಾಪೂರ್ವಕವಾಗಿ ಹೇಳಿದ್ದಾರೆ. ವೇದಾರ್ಥದ್ಯೋತಕ ಪ್ರತಿಯೊಂದು ಸಂಜ್ಞೆಯೂ ಇದೇ ಅಭಿಪ್ರಾಯವನ್ನು ಹೇಳುತ್ತದೆ ಎಂಬುದನ್ನು ಈ ಮೊದಲೇ ನೋಡಿದ್ದೇವೆ. ವೇದಮಂತ್ರಗಳ ಸಂಖ್ಯೆಯು ನಿಶ್ಚಿತವಾಗಿದ್ದು ಅದಕ್ಕೆ ಮಿತಿ ಇದೆ. ಆದರೆ ಮನುಷ್ಯರ ಜ್ಞಾನಕ್ಕೆ ಮಿತಿ ಇಲ್ಲ. ಜ್ಞಾನವು ಉತ್ತರೋತ್ತರ ವೃದ್ಧಿಯಾಗುತ್ತದೆ. ವಿದ್ಯೆಗಳೂ ಉನ್ನತಿಯನ್ನು ಹೊಂದುತ್ತಿರುತ್ತವೆ.[೧] ಹೀಗಿರುವಾಗ ವೇದಗಳಲ್ಲಿ ಎಲ್ಲಾ ಜ್ಞಾನಗಳೂ ಇವೆ, ವೇದಗಳೇ ಎಲ್ಲಾ ವಿದ್ಯೆಗಳಿಗೂ ಮೂಲ ಎಂಬ ಮಾತಿನ ಮೇಲೆ ಕೆಲವರಿಗೆ ಸಂದೇಹ ಹುಟ್ಟುತ್ತದೆ. ಈ ಸಂದೇಹವು ಸರಿಯಲ್ಲ. ಯಾಕೆಂದರೆ, ಮನುಷ್ಯರ ಮಸ್ತಕಕ್ಕೆ ಮಿತಿ ಇದೆ. ಆದರೆ, ಅದರೊಳಗಿರುವ ವಿಚಾರಶಕ್ತಿ,

---

[೧೮] ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ
॥ ಋಗ್ವೇದ: ೧-೧೬೪-೪೬ ॥

[೧] ಈ ವಿಷಯದಲ್ಲಿ ಆಧುನಿಕ ಭಾಷಾ ವಿಜ್ಞಾನಿಗಳ ವಿಚಾರಗಳು ಭ್ರಾಂತಿಪೂರ್ಣವಾಗಿಯೂ, ಅನಿರ್ಧಾರಿತವಾಗಿಯೂ ಇರುವುದರಿಂದ, ಅವುಗಳಿಗೆ ಮಹತ್ವ ಕೊಡಬೇಕಾಗಿಲ್ಲ.

ಕಲ್ಪನಾ ಅಥವಾ ಊಹಾಶಕ್ತಿಗೆ ಮಿತಿ ಇಲ್ಲ. ಮನುಷ್ಯರ ಭಾಷೆಗೆ ಮಿತಿ ಇದೆ. ಇಂಗ್ಲಿಷ್ ಭಾಷೆಯಲ್ಲಿ ಹೆಚ್ಚು ಕಡಿಮೆ ಆರು ಲಕ್ಷ ಶಬ್ದಗಳಿವೆ: ವರ್ಣಗಳು ಕೇವಲ ಇಪ್ಪತ್ತೈದು. ದೇವನಾಗರಿಯಲ್ಲಿ ಅರವತ್ತುನಾಲ್ಕು ವರ್ಣಗಳಿವೆ. ಆದರೆ, ಅವುಗಳಿಂದ ಉತ್ಪನ್ನವಾದ ಶಬ್ದಗಳೂ ಅನಂತ, ಸಾಹಿತ್ಯಗಳೂ ಅನಂತ, ವಿದ್ಯೆಯೂ ಅನಂತ. ಇದೇ ರೀತಿ ವೇದಮಂತ್ರಗಳ ಸಂಖ್ಯೆಗೆ ಮಿತಿ ಇದ್ದರೂ, ಅದರ ಜ್ಞಾನಕ್ಕೆ ಮಿತಿ ಇರಬೇಕೆಂದಿಲ್ಲ. ಈ ವೇದಮಂತ್ರಗಳೆಲ್ಲಾ ವಿಭಿನ್ನ ವಿದ್ಯೆಗಳ ಬೀಜಗಳು. ಈ ಬೀಜಗಳನ್ನು ಬೆಳೆಸುವವರು ಋಷಿಗಳು, ವಿದ್ವಾಂಸರು. ಆದರೂ ಅವಕ್ಕೆ ನಿಶ್ಚಿತವಾದ, ಕರಾರುವಾಕ್ಕಾದ ಅರ್ಥವಿಲ್ಲ; ಅರ್ಥಕ್ಕೆ ಮಿತಿಯಿಲ್ಲ—ಎಂದರೆ ವೇದಗಳಿಂದ ಪ್ರಯೋಜನವಿಲ್ಲ—ಎಂದಂತೆಯೇ ಸರಿ.

ಯತ್ನೇನಾನುಮಿತೋಽಪ್ಯರ್ಥಃ ಕುಶಲೈರನು ಮಾತೃಭಿಃ ।
ಅಭಿಯುಕ್ತತರೈರನ್ಯೈರನ್ಯಥೈವೋಪ ಪದ್ಯತೇ ॥ [ವಾಕ್ಯಪದೀಯ ೧-೩೪]

ಎಂದು ಭರ್ತೃಹರಿಯು ಹೇಳಿದ್ದಾನೆ. ಅಂದರೆ, ಕುಶಲವಿದ್ವಾಂಸರು ತಮ್ಮ ತಮ್ಮ ಬುದ್ಧಿಶಕ್ತಿ, ತಪಸ್ಸು, ಸ್ವಾಧ್ಯಾಯ ಮತ್ತು ಯೋಗ್ಯತೆಗನುಸಾರವಾಗಿ ಮಂತ್ರಾರ್ಥಗಳನ್ನು ಅಧಿಕಾಧಿಕವಾಗಿ ಅರಿತುಕೊಂಡು ವಿವರಿಸುತ್ತಾರೆ. ಜ್ಞಾನವು ಉತ್ತರೋತ್ತರವಾಗಿ ಬೆಳೆಯುತ್ತದೆ—ಎನ್ನಬಹುದು. ಯಾರ ಮಂತ್ರಭಾಷ್ಯವೂ ಅಂತಿಮ ವಾಕ್ಯವೆಂದು ಹೇಳಲಿಕ್ಕೆ ಸಾಧ್ಯವಿಲ್ಲ.* ಆದುದರಿಂದಲೇ "ಅನಂತಾ ವೈ ವೇದಾಃ" ಅಂದರೆ ವೇದವಿದ್ಯೆಯು ಅನಂತವೆಂದು ಪ್ರಾಚೀನ ಋಷಿಗಳು ಒಪ್ಪಿಕೊಂಡಿದ್ದಾರೆ. ವೇದವು ಆದಿಭಾಷೆ ಮತ್ತು ಆದಿ ಜ್ಞಾನದ ಸ್ವರೂಪ. ವೇದಕ್ಕಿಂತ ಪ್ರಾಚೀನ ಭಾಷೆಯಾಗಲೀ ವಿದ್ಯೆಯಾಗಲೀ ಬೇರೆ ಇಲ್ಲ. ವೇದಜ್ಞಾನದಿಂದಲೇ ಮಾನವರ ಜ್ಞಾನದ ವಿಕಾಸವಾಯಿತು. ವೇದಭಾಷೆಯಿಂದಲೇ ಪ್ರಾರಂಭದಲ್ಲಿ ಇತರ ಭಾಷೆಗಳು ಉತ್ಪನ್ನವಾದುವು. ಇಂಡೋ-ಯುರೋಪಿಯನ್, ಅಥವಾ ದ್ರಾವಿಡ ಭಾಷೆಗಳು ಕೂಡ ವೇದಭಾಷೆಯಿಂದಲೇ ಉತ್ಪನ್ನವಾಗಿ, ಈಗ ಬೇರೆ ಬೇರೆಯಾಗಿ ಬೆಳೆದಿವೆ.

ವೇದಗಳಲ್ಲಿರುವ ಜ್ಞಾನವು ಅಸ್ಪಷ್ಟವಾಗಿಯೂ, ಸಂದಿಗ್ಧವಾಗಿಯೂ ಇರುವುದರಿಂದ ಅದಕ್ಕೆ ವೈಜ್ಞಾನಿಕ ದೃಷ್ಟಿಯಿಂದ ಏನೂ ಮಹತ್ವವಿಲ್ಲವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಇದೂ ಸರಿಯಲ್ಲ. ಯಾಕೆಂದರೆ, ವೇದಮಂತ್ರಗಳನ್ನು ಚೆನ್ನಾಗಿ ತಿಳಿದುಕೊಳ್ಳಲು ವಿಶೇಷ ಯೋಗ್ಯತೆಯು ಬೇಕು. ಗಂಭೀರ ಅಧ್ಯಯನ ಬೇಕು. ಮೇಲೆ

---

* ಇಲ್ಲಿಯೂ ಹಿಂದಿನ ಟಿಪ್ಪಣಿಯೇ ಅನ್ವಯಿಸುತ್ತದೆ. ವೇದ ಜ್ಞಾನದ ಅನಂತತೆಯನ್ನು ಮಾನವನ ಸೀಮಿತ ಬುದ್ಧಿಗೆ ಹೋಲಿಸಿದಾಗ ಹೀಗೆನಿಸಬಹುದು. ಅರ್ಥಕ್ಕೇ ಮಿತಿಯಿಲ್ಲವೆಂದು ಅರ್ಥ ಮಾಡಿದರೆ, ಮರಳಿ ವೇದಗಳ ಉಪಯೋಗಿತ್ವ ಶೂನ್ಯಕ್ಕೆ ಸಮವೇ ಆದೀತು. ಅನಂತನಾದ ಭಗವಂತನ ವಾಣಿಗೆ ಅನಂತತ್ವವೇ ಸಮುಚಿತ. ಆದರೆ ವೇದೋಪದೇಶವಾಗಿರುವುದು ಮಾನವನಿಗಾಗಿ ಕಾರಣ, ಮಾನವನ ಸರ್ವಾಂಗೀಣ ಉನ್ನತಿಗೆ ಬೇಕಾದಷ್ಟನ್ನು ಮಾತ್ರ ಬೋಧಿಸಿದ್ದಾನೆ. ಗಣಿತಶಾಸ್ತ್ರ ಪ್ರವೀಣ ನೊಬೆಲ್ ಬಹುಮಾನಿತನಾದರೂ ಪ್ರಾಧ್ಯಾಪಕನು ಪ್ರಾಥಮಿಕ ಶಾಲಾ ಬಾಲಕರಿಗೆ ಮಿಲಿಯನ್-ಬಿಲಿಯನ್‌ಗಳ, ತ್ರಿಕೋಣ-ವರ್ಗ-ಶಬ್ದವರ್ಗಗಳನ್ನು ಹೇಳುತ್ತಿದ್ದರೆ, ಅವನ ಪ್ರಾವೀಣ್ಯದಿಂದ ಆ ಬಾಲಕರಿಗೆ ಆಗಬಹುದಾದ ಲಾಭವಾದರೂ ಏನಿದೆ?

ಮೇಲೆ ಓದಿದವರಿಗೆ ವೇದ ಜ್ಞಾನವು ಅಸ್ಪಷ್ಟವಾಗಿ ಕಾಣುವುದು ಸ್ವಾಭಾವಿಕ. ವೇದಗಳ ಪ್ರತಿಯೊಂದು ಮಂತ್ರವೂ, ಪ್ರತಿಯೊಂದು ಪದವೂ ಜ್ಞಾನಯುಕ್ತವಾಗಿದೆ.[೨] ವೈದಿಕ ಶಬ್ದಗಳು ಯೌಗಿಕ ಅರ್ಥಗಳನ್ನು ಹೊಂದಿಕೊಂಡಿವೆ. ಅಂದರೆ, ಧಾತ್ವರ್ಥದ ಆಧಾರದಿಂದ ಶಬ್ದಗಳ ಅರ್ಥವನ್ನು ಕಂಡುಹಿಡಿಯಬೇಕು.[೩] ಸತ್ಯಪ್ರಮಾಣ, ಸುತರ್ಕ, ಮಂತ್ರಗಳಲ್ಲಿರುವ ಶಬ್ದಗಳ ಪೂರ್ವಾಪರ ಪ್ರಕರಣ, ವ್ಯಾಕರಣಾದಿ ಆರು ವೇದಾಂಗಗಳು, ಶತಪಥಾದಿ ಬ್ರಾಹ್ಮಣ ಗ್ರಂಥಗಳು, ಪೂರ್ವ ಮೀಮಾಂಸಾದಿ ಶಾಸ್ತ್ರ, ಶಾಖೆಗಳು, ಉತ್ತಮ ಆಚಾರ್ಯರ ಮೂಲಕ ಶಿಕ್ಷಣ, ಆತ್ಮಶುದ್ಧಿ, ಮಹರ್ಷಿಗಳ ವೇದವ್ಯಾಖ್ಯಾನ, ಮತ್ತು ಪರಮಾತ್ಮನ ಅನುಗ್ರಹ ಇತ್ಯಾದಿಗಳ ಸಹಾಯತೆ ಇಲ್ಲದೆ ವೇದಮಂತ್ರಗಳ ಯಥಾರ್ಥ ಜ್ಞಾನವು ಮನುಷ್ಯರ ಹೃದಯದಲ್ಲಿ ಪ್ರಕಾಶಿಸುವುದಿಲ್ಲ. ಇಲ್ಲಿ ವಿಚಾರಹೀನತೆ, ದುರಾಗ್ರಹ ಅಥವಾ ಹಠಸಾಹಸಗಳಿಂದ ಏನೂ ಪ್ರಯೋಜನವಾಗುವ ಹಾಗೆ ಇಲ್ಲ. ಆದುದರಿಂದ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಯುಕ್ತವಾದ ತರ್ಕವೇ ನಿಜವಾಗಿ ಮಂತ್ರಗಳ ಅರ್ಥವನ್ನು ತೋರಿಸುವ ಋಷಿ ಎಂದು ಪ್ರಾಚೀನ ಋಷಿಗಳೇ ಹೇಳಿದ್ದಾರೆ.[೪] ಈ ರೀತಿ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಯುಕ್ತವಾದ ತರ್ಕಕ್ಕೆ ಹೊರತಾದ ಮಾತುಗಳಿಗೆ ವೇದಗಳಲ್ಲಿ ಸ್ಥಾನವೇ ಇಲ್ಲ. ವೇದಗಳ ಪ್ರತಿಯೊಂದು ವಾಕ್ಯಗಳೂ ವಿಜ್ಞಾನಮಯ ವಾಕ್ಯಗಳಾಗಿವೆ ಎಂದು ಪ್ರಾಚೀನ ವೇದಾಚಾರ್ಯರು ಹೇಳಿರುವಾಗ, ಯಾರಿಗಾದರೂ ಅದರಲ್ಲಿ ಜ್ಞಾನವು ಕಂಡುಬರದಿದ್ದರೆ, ಅಥವಾ ವೇದಮಂತ್ರಗಳ ಜ್ಞಾನವು ಅಸ್ಪಷ್ಟವಾಗಿ, ಇಲ್ಲವೇ ಸಂದಿಗ್ಧವಾಗಿ ತೋರಿದರೆ, ಅದಕ್ಕೆ ಅವರ ದೃಷ್ಟಿದೋಷ ಮತ್ತು ಯೋಗ್ಯತೆಯ ಅಭಾವವೇ ಕಾರಣವಿರಬೇಕು, ಎಂಬುದು ನಿಶ್ಚಿತ.

ಹಾಗಾದರೆ ವೇದಗಳಲ್ಲಿ ಏನೆಲ್ಲಾ ವಿಷಯಗಳಿವೆ ಎಂಬ ಪ್ರಶ್ನೆ. ವಿಷಯಗಳು ಅನಂತವಾಗಿವೆ. ಅವುಗಳನ್ನೆಲ್ಲಾ ನಾಲ್ಕು ವಿಧವಾಗಿ ವಿಂಗಡಿಸಬಹುದು ಹೇಗೆಂದರೆ— ವಿಜ್ಞಾನ, ಕರ್ಮ, ಉಪಾಸನಾ ಮತ್ತು ಜ್ಞಾನಕಾಂಡ. ಈ ನಾಲ್ಕು ವಿಭಾಗಗಳಲ್ಲಿ, ವಿಜ್ಞಾನ ಕಾಂಡವೇ ಮುಖ್ಯವಾಗಿದೆ. ತೃಣದಿಂದ ಹಿಡಿದು ಪರಮಾತ್ಮನ ತನಕ ಎಲ್ಲಾ ಪದಾರ್ಥಗಳ ಸ್ಪಷ್ಟ ವರ್ಣನೆ ಇದರಲ್ಲಿದೆ. ಅದರಲ್ಲಿಯೂ ಪರಮಾತ್ಮನ ವಿಷಯವು ಮುಖ್ಯವಾಗಿದೆ. ಕರ್ಮಕಾಂಡವು ಕ್ರಿಯಾಪ್ರಧಾನವಾಗಿದೆ. ಕರ್ಮವಿಲ್ಲದೆ ವಿದ್ಯಾಭ್ಯಾಸ

---

[೨] ಬುದ್ಧಿಪೂರ್ವಾ ವಾಕ್ಯಕೃತಿರ್ವೇದೇ ॥ ವೈಶೇಷಿಕ ದರ್ಶನ ೬-೧-೧ ॥

[೩] ನಿಗಮನಿರುಕ್ತ ವ್ಯಾಕರಣವಶೇನ ಧಾತುತೋಽರ್ಥಃ ಕಲ್ಪಯಿತವ್ಯಃ ॥ ಮೀಮಾಂಸಾಭಾಷ್ಯ ೧-೨-೪೧ ॥

ನಾಮ ಚ ಧಾತುಜಮಾಹ ನಿರುಕ್ತೇ ವ್ಯಾಕರಣೇ ಶಕಟಸ್ಯ ಚ ತೋಕಂ ॥ ಮಹಾಭಾಷ್ಯ ೩-೩-೧ ॥

[೪] ತತ್ಪ್ರಕೃತೀತರದ್ವರ್ತನಸಾಮಾನ್ಯಾದಿತ್ಯಯಂ ಮಂತ್ರಾರ್ಥಚಿಂತಾಭ್ಯೂಹೋಽಭ್ಯೂಢೋಽಪಿ ಶ್ರುತಿತೋಽಪಿ ತರ್ಕತೋ ನ ತು ಪೃಥಕ್ತ್ವೇನ ಮಂತ್ರಾ ನಿರ್ವಕ್ತವ್ಯಾಃ, ಪ್ರಕರಣಶ ಏವ ತು ನಿರ್ವಕ್ತವ್ಯಾ ನಹ್ಯೇಷು ಪ್ರತ್ಯಕ್ಷಮಸ್ತ್ಯನೃಷೇರತಪಸೋ ವಾ । ಪಾರೋವರ್ಯ್ಯವಿತ್ಸು ತು ಖಲು ವೇದಿತೃಷು ಭೂಯೋವಿದ್ಯಃ ಪ್ರಶಸ್ಯೋ ಭವತೀತ್ಯುಕ್ತಂ ಪುರಸ್ತಾನ್ಮನುಷ್ಯಾ ವಾ ಋಷಿಷೂತ್ಕ್ರಾಮತ್ಸು ದೇವಾನಬ್ರುವನ್ಕೋ ನ ಋಷಿರ್ಭವಿಷ್ಯತೀತಿ ತೇಭ್ಯ ಏತಂ ತರ್ಕಮೃಷಿಂ ಪ್ರಾಯಚ್ಛನ್ ಮಂತ್ರಾರ್ಥ ಚಿಂತಾಭ್ಯೂಹಮಭ್ಯೂಢಂ ತಸ್ಮಾದ್ಯದೇವ ಕಿಂ ಚಾನೂಚಾನೋಽಭ್ಯೂಹತ್ಯಾರ್ಷಂ ತದ್ಭವತಿ ॥ [ನಿರುಕ್ತ, ಅ. ೧೩-ಖಂಡ-೧೨]

ಮತ್ತು ಜ್ಞಾನವು ಪೂರ್ಣವಾಗುವುದಿಲ್ಲ. ಕರ್ಮಕಾಂಡವು ಎರಡು ವಿಧವಾಗಿದೆ. ಒಂದನೆಯದಾಗಿ ಪರಮಾರ್ಥ, ಮತ್ತು ಎರಡನೆಯದಾಗಿ ಲೋಕವ್ಯವಹಾರ. ಮೋಕ್ಷ ಅಂದರೆ ಎಲ್ಲಾ ದುಃಖಗಳಿಂದ ಬಿಡುಗಡೆ ಹೊಂದಿ ಕೇವಲ ಪರಮಾತ್ಮನ ಆನಂದಾನುಭೂತಿಯ ಸ್ಥಿತಿ. ಈ ಸ್ಥಿತಿಗಾಗಿ ಮಾಡುವ ಪುರುಷಾರ್ಥ ನಿಷ್ಕಾಮ ಮಾರ್ಗವಾಗಿದೆ. ಏಕೆಂದರೆ ಇದರಲ್ಲಿ ಸಾಂಸಾರಿಕ ಭೋಗಗಳ ಕಾಮನೆ ಇರುವುದಿಲ್ಲ. ಲೋಕವ್ಯವಹಾರ ಅಂದರೆ ಸಂಸಾರದ ಭೋಗಗಳ ಪ್ರಾಪ್ತಿಗಾಗಿ ಮಾಡುವ ಧರ್ಮಾನುಕೂಲ ಕರ್ಮಗಳು ಸಕಾಮ ಕರ್ಮಗಳಾಗಿವೆ. ಅಗ್ನಿಹೋತ್ರದಿಂದ ಹಿಡಿದು ಅಶ್ವಮೇಧ ಪರ್ಯಂತ ವರ್ಣಿತವಾದ ವಿವಿಧ ಪ್ರಯತ್ನಗಳು ಕರ್ಮಕಾಂಡದ ವಿಷಯವಾಗಿವೆ. ಈ ಯಜ್ಞಗಳಲ್ಲಿ ಕಸ್ತೂರಿ, ಕೇಸರಿ, ಇತ್ಯಾದಿ ಸುಗಂಧಿತ ದ್ರವ್ಯಗಳನ್ನೂ, ಕ್ಷೀರಾದಿ ಮಿಷ್ಟಾನ್ನಗಳನ್ನೂ ಬೆಣ್ಣೆ, ಹಾಲು, ಅನ್ನಾದಿ ಪುಷ್ಟಿಕಾರಕ ವಸ್ತುಗಳನ್ನೂ ಮತ್ತು ಸೋಮಲತಾದಿ ರೋಗನಾಶಕ ಔಷಧಿಗಳನ್ನೂ ಹಾಕುತ್ತಾರೆ. ಇದರಿಂದ ವಾಯು ಮತ್ತು ವೃಷ್ಟಿಜಲವು ಶುದ್ಧವಾಗುತ್ತದೆ. ಈ ರೀತಿ ಉಕ್ತ ಯಜ್ಞಗಳು ಜಗತ್ತಿಗೆ ಲಾಭದಾಯಕವಾಗಿವೆ. ಭೋಜನ, ವಸ್ತ್ರ, ವಿಮಾನಾದಿ ಯಾನ, ಕಲಾಕೌಶಲ, ಯಂತ್ರಾದಿಗಳೂ, ಸಾಮಾಜಿಕ ವ್ಯವಸ್ಥೆಗಳೂ ವಿಶೇಷವಾಗಿ ಅವುಗಳನ್ನು ಮಾಡುವವರಿಗೆ ಪ್ರಯೋಜನಕಾರಿಯಾಗಿವೆ.[೫]

ಜಗತ್ತಿನಲ್ಲಿ ಇಂದು ಮನುಷ್ಯರು ಸರ್ವಾಧಿಕವಾಗಿ ಜಲ ವಾಯು ಪ್ರದೂಷಣೆಗೆ ಕಾರಣರು. ಈ ಪ್ರದೂಷಣೆಯನ್ನು ದೂರ ಮಾಡಲು ಇಷ್ಟರ ತನಕ ಬಳಕೆಯಲ್ಲಿ ಬಂದಿರುವ ಕ್ರಿಮಿನಾಶಕ ರಸಾಯನ ಔಷಧಿಗಳು ಇನ್ನೊಂದು ರೀತಿಯಲ್ಲಿ ಹಾನಿಕಾರಕವೆಂದು ಸಿದ್ಧವಾಗಿದೆ. ಈ ರಾಸಾಯನಿಕ ಔಷಧಿಗಳಿಂದ ನಮ್ಮ ಅನ್ನಪಾನಾದಿಗಳೂ ವಾಯುವೂ ವಿಷಮಯವಾಗಿವೆ. ಆದುದರಿಂದ ಜಲ ವಾಯುಗಳ ಶುದ್ಧಿಗೆ ಮೇಲೆ ಹೇಳಿದ ಪದಾರ್ಥಗಳಿಂದ ನಿಯಮಪೂರ್ವಕ ಯಜ್ಞ ಮಾಡುವುದೊಂದೇ ಉತ್ತಮ ಉಪಾಯವಾಗಿದೆ. ಪದಾರ್ಥವಿಜ್ಞಾನವಿಲ್ಲದ ಕೆಲವರು, ಹಾಲು, ತುಪ್ಪಾದಿಗಳನ್ನು ಅಗ್ನಿಗೆ ಹಾಕಿ ಸುಟ್ಟರೆ ಅದು ನಾಶವಾಗುತ್ತದೆ ಎಂದೂ, ಆದುದರಿಂದ ಇದು ಆರ್ಥಿಕ ದೃಷ್ಟಿಯಿಂದ ಅನುಪಯುಕ್ತವೆಂದೂ ತರ್ಕಿಸುತ್ತಾರೆ. ಇದು ಸರಿಯಲ್ಲ. ಹಾಲು, ತುಪ್ಪ ಮೊದಲಾದುವನ್ನು ಸೇವಿಸುವುದರಿಂದ ಮನುಷ್ಯರಿಗೆ ಎಷ್ಟು ಲಾಭವಾಗುತ್ತದೆಯೋ, ಅವುಗಳನ್ನು ವಿಧಿಪೂರ್ವಕವಾಗಿ ಅಗ್ನಿಗೆ ಹಾಕಿದಾಗ ಅದಕ್ಕಿಂತ ಅಧಿಕ ಲಾಭವಾಗುತ್ತದೆ. ಅಗ್ನಿಗೆ ಹಾಕಿದ ದ್ರವ್ಯಗಳು ಸುಟ್ಟು ನಾಶವಾಗುವುದಿಲ್ಲ. ಅದರ ಬದಲಿಗೆ ಅವುಗಳು ಅಗ್ನಿಯ ಮೂಲಕ ಸೂಕ್ಷ್ಮವಾಗಿ ಪರಿವರ್ತನೆ ಹೊಂದಿ ವಾಯುವಿನ ಮೂಲಕ ಹರಡಿ, ಜಲ ವಾಯುಗಳನ್ನು ಶುದ್ಧವಾಗಿಯೂ, ಸುಗಂಧಿತವಾಗಿಯೂ ಮಾಡಿ ಅಧಿಕ ಜನರಿಗೆ ಪ್ರಯೋಜನವನ್ನು ಕೊಡುತ್ತವೆ. ಯಜ್ಞದಿಂದ ವನಸ್ಪತಿಗಳೂ ಔಷಧಿಗಳೂ ಅಧಿಕ ಶಕ್ತಿಶಾಲಿಯಾಗಿ ಬೆಳೆಯುತ್ತವೆ. ಭೂಮಿಯು ಅಧಿಕ ಫಲವತ್ತಾಗುತ್ತದೆ. ಅಗ್ನಿಹೋತ್ರಾದಿಗಳ ರಹಸ್ಯವಿದೇ ಆಗಿದೆ. ಉಪಾಸನೆ ಎಂದರೆ, ಪರಮಾತ್ಮನ ಸ್ವರೂಪದಲ್ಲಿ ಧ್ಯಾನಮಗ್ನನಾಗಿ, ಸತ್ಯ ಭಾಷಣಾದಿಗಳ ಮೂಲಕ ಅವನ ಆಜ್ಞೆಯ ಪಾಲನೆ ಮಾಡುವುದು. ಪಾತಂಜಲ ಯೋಗದರ್ಶನದಲ್ಲಿ ಇದರ ವಿಶೇಷ ವರ್ಣನೆ ಇದೆ.

---

[೫] ದ್ರವ್ಯಸಂಸ್ಕಾರಕರ್ಮಸು ಪರಾರ್ಥತ್ವಾತ್ಫಲಶ್ರುತಿರರ್ಥವಾದಃ ಸ್ಯಾತ್ ॥ ಪೂರ್ವಮೀಮಾಂಸಾ ೪-೩-೧ ॥

ಪದಾರ್ಥಗಳ ಗುಣಧರ್ಮಗಳ ಯಥಾರ್ಥ ವರ್ಣನೆಯೇ ಸ್ತುತಿ. ವೇದಮಂತ್ರಗಳಲ್ಲಿ ಸೃಷ್ಟಿಯಲ್ಲಿರುವ ಪ್ರತಿಯೊಂದು ವಸ್ತುವಿನ ವರ್ಣನೆ ಇದೆ. ಈ ಜ್ಞಾನವಿಲ್ಲದೆ ವಿಜ್ಞಾನ, ಕರ್ಮ ಅಥವಾ ಉಪಾಸನೆಯು ಸಾಧ್ಯವಿಲ್ಲ. ಮಂತ್ರಗಳು ಜ್ಞಾನದಿಂದ ತುಂಬಿರುವುದರಿಂದಲೇ ಅವುಗಳನ್ನು ಋಷಿಗಳೆಂದೂ, ದೇವತೆಗಳೆಂದೂ ಕರೆಯುತ್ತಾರೆ.

ಋಗ್ವೇದದಲ್ಲಿ ಸಮಸ್ತ ಪದಾರ್ಥಗಳ ಉತ್ಪತ್ತಿ, ಗುಣ, ಧರ್ಮಗಳ ವರ್ಣನೆ ಇದೆ. ಈ ಜ್ಞಾನವೇ ಸಂಸ್ಕಾರ ಮತ್ತು ಪ್ರವೃತ್ತಿಗಳಿಗೆ ಕಾರಣ. ಯಜುರ್ವೇದದಲ್ಲಿ ಈ ಪ್ರವೃತ್ತಿಯ ನಿರೂಪಣೆ ಅರ್ಥಾತ್ ಕ್ರಿಯಾಕಾಂಡದ ವರ್ಣನೆ ಇದೆ. ಧರ್ಮ ಅಂದರೆ ನ್ಯಾಯಮಾರ್ಗದಲ್ಲಿ ನಡೆಯುವ ಉಪದೇಶ, ಬೇರೆ ಬೇರೆ ವಿದ್ಯೆಗಳು ಮತ್ತು ಇತರ ವ್ಯವಹಾರಕ್ಕೆ ಉಪಯುಕ್ತವಾಗುವಂತಹ ಮಾತುಗಳು ಯಜುರ್ವೇದದಲ್ಲಿವೆ. ಕ್ರಿಯೆ ಅಥವಾ ಪುರುಷಾರ್ಥದಿಂದ ಆನಂದವನ್ನು ಪ್ರಾಪ್ತಿ ಮಾಡಿಕೊಳ್ಳುವ ಉಪಾಯವು ಸಾಮವೇದದಲ್ಲಿದೆ. ಈ ಮೂರು ವೇದಗಳಲ್ಲಿ ಉಳಿದ ವಿದ್ಯೆ, ಎಲ್ಲಾ ವಿದ್ಯೆಗಳ ರಕ್ಷಣೋಪಾಯ, ಸಂಶಯ ನಿವಾರಣೆ ಇತ್ಯಾದಿಗಳು ಅಥರ್ವವೇದದಲ್ಲಿವೆ ಎಂದು, ಮೊದಲು ನೋಡಿದ್ದೇವೆ. ಜ್ಞಾನವನ್ನು ಕ್ರಿಯೆಗೆ ತಂದು, ಅದರಿಂದ ವಿಶೇಷ ಲಾಭ ಪಡೆಯುವುದೇ ವಿಜ್ಞಾನ. ಜ್ಞಾನವು ಲಾಭದಾಯಕವಾಗುವಂತೆ ವಿಧಿಯುಕ್ತವಾಗಿ ಕಾರ್ಯ ಮಾಡುವ ಉಪಾಯವೇ ವಿದ್ಯೆ. ಈ ರೀತಿ ವೇದಗಳು ಎಲ್ಲಾ ವಿದ್ಯೆಗಳ ಪುಸ್ತಕಗಳಾಗಿವೆ. ಆದರೆ ಆಧುನಿಕ ಪಾಶ್ಚಾತ್ಯ ವಿದ್ಯೆಯಂತೆ ನಿತ್ಯವೂ ತಿದ್ದುಪಡಿ, ಪರಿವರ್ತನೆ, ಸಂಶೋಧನೆಗಳಾಗುವ ವಿದ್ಯೆಯು ವೇದವಿದ್ಯೆಯಲ್ಲ. ವೇದವಿದ್ಯೆಗಳು ಸತ್ಯವಿದ್ಯೆಗಳಾಗಿವೆ. ಇವುಗಳಲ್ಲಿ ಮಿಥ್ಯಾತ್ವ ಮೊದಲಾದ ದೋಷಗಳಿಲ್ಲ.

## ಭಾಷಾ ಜ್ಞಾನ

ವೇದಮಂತ್ರಗಳು ಜ್ಞಾನಪೂರ್ಣವಾಗಿದ್ದು, ಧ್ವನಿರೂಪದಲ್ಲಿ ಅಥವಾ ಅವ್ಯಕ್ತ ವಾಣಿಯ ರೂಪದಲ್ಲಿ ಸದಾ ಸರ್ವವ್ಯಾಪಕನೂ ಅವಿನಾಶಿಯೂ ಆದ ಪರಮಾತ್ಮನಲ್ಲಿ ವಿರಾಜಮಾನವಾಗಿರುತ್ತವೆ.[೬] ಈ ಅವ್ಯಕ್ತವಾಣಿಯ ಮೂಲಕವೇ ಪರಮಾತ್ಮನು ಮನುಷ್ಯರಿಗೆ ಸೃಷ್ಟಿಯ ಆದಿಯಲ್ಲಿ ಜ್ಞಾನವನ್ನು ಕರುಣಿಸುತ್ತಾನೆ. ಋಷಿಗಳು, ಸಮಾಧಿಸ್ಥರಾಗಿ ಈ ವಾಣಿಯನ್ನೂ ಜ್ಞಾನವನ್ನೂ ಪಡೆದು ಇದಕ್ಕೆ ಶುದ್ಧ ವ್ಯಕ್ತವಾಣಿ ಅಂದರೆ ವರ್ಣಮಯ ಹಾಗೂ ಸಾರ್ಥಕವಾದ ನಿರೂಪವನ್ನು ಕೊಡುತ್ತಾರೆ.[೭] ಧಾತು ಪ್ರಾತಿಪದಿಕ, ಪ್ರತ್ಯಯ ಮತ್ತು ನಿಪಾತಗಳ ಪ್ರತಿಯೊಂದು ವರ್ಣವೂ ಅರ್ಥಯುಕ್ತವಾಗಿದೆ.[೮] ಪರಮಾತ್ಮನೇ ಸೃಷ್ಟಿಯ ಆರಂಭಕಾಲದಲ್ಲಿ ಮನುಷ್ಯರಿಗೆ ಇಂತಹ ವೈಜ್ಞಾನಿಕ ಭಾಷೆಯನ್ನು ಕೊಡುತ್ತಾನೆ ಎಂದು ವೇದವೇ ಹೇಳುತ್ತದೆ—

---

[೬] ಋಚೋ ಅಕ್ಷರೇ ಪರಮೇ ವ್ಯೋಮನ್ ಯಸ್ಮಿಂ ದೇವಾ ಅಧಿ ವಿಶ್ವೇನಿಷೇದುಃ । ಯ ಸ್ತನ್ನ ವೇದ ಕಿಮೃಚಾ ಕರಿಷ್ಯತಿ ಯ ಇತ್ತದ್ವಿ ದುಸ್ತ ಇಮೇ ಸಮಾಸತೇ । ಋಗ್ವೇದ ೧-೧೬೪-೩೯॥

[೭] ಸಕ್ತುಮಿವ ತಿತವುನಾ ಪುನಂತೋ ಯತ್ರಧೀರಾ ಮನಸಾ ವಾಚಮಕ್ರತ । ಋಗ್ವೇದ ೧೦-೭೧-೨ ॥

[೮] ಅರ್ಥವಂತೋ ವರ್ಣಾಃ । ಧಾತುಪ್ರಾತಿಪದಿಕ ಪ್ರತ್ಯಯ ನಿಪಾತಾನಾಮೇಕ ವರ್ಣಾನಾಮರ್ಥ ದರ್ಶನಾತ್ । ಧಾತವಃ ಏಕವರ್ಣಾಃ ಅರ್ಥವಂತೋಕ ದೃಶ್ಯಂತೇ । ಪ್ರಾತಿಪದಿಕಾನ್ಯೇಕ ವರ್ಣಾನ್ಯರ್ಥವಂತಿ । ನಿಪಾತಾ ಏಕವರ್ಣಾ ಅರ್ಥವಂತ ॥ ವ್ಯಾಕರಣ ಮಹಾಭಾಷ್ಯ ॥

ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ
ನಾಮಧೇಯಂ ದಧಾನಾಃ । ಯದೇಷಾಂ ಶ್ರೇಷ್ಠಂ ಯದರಿ.
ಪ್ರಮಾಸೀತ್ಪ್ರೇಣಾ ತದೇಷಾಂ ನಿಹಿತಂ ಗುಹಾವಿಃ ॥ [ಋ. ೧೦-೭೧-೧]

ಅಂದರೆ, ಸೃಷ್ಟಿಯಲ್ಲಿರುವ ಸಂಪೂರ್ಣ ಪದಾರ್ಥಗಳ ಪರಿಚಯಾತ್ಮಕ ಸಂಜ್ಞೆಗಳಿಂದ ಕೂಡಿದ, ದೋಷರಹಿತ ಅಂದರೆ ಶುದ್ಧ ವೈಜ್ಞಾನಿಕ ಲಕ್ಷಣಯುಕ್ತವಾದ, ಋಷಿಗಳ ಹೃದಯ: ಗುಹೆಂಗುಲ್ಲಿ ಪ್ರಕಟವಾಗುವ, ಮತ್ತು ಬುದ್ಧಿಯನ್ನು ಬೆಳಗಿಸುವ ವಾಣಿಯನ್ನು ಬೃಹಸ್ಪತಿ ಪರಮಾತ್ಮನು ಸೃಷ್ಟಿಯ ಪ್ರಾರಂಭದಲ್ಲಿಯೇ ಮನುಷ್ಯರಿಗೆ ಕೊಡುತ್ತಾನೆ. ಒಂದು ವೇಳೆ ಮನುಷ್ಯರಿಗೆ ಈ ಭಾಷೆ ಮತ್ತು ಜ್ಞಾನವು ಆದಿಯಲ್ಲಿ ದೊರೆಯದಿರುತ್ತಿದ್ದರೆ, ಮನುಷ್ಯರ ಉನ್ನತಿಯಾಗುತ್ತಿದ್ದಿಲ್ಲ. ಅವರು ಪಶುಗಳಂತೆಯೇ ಇರುತ್ತಿದ್ದರು. ಈ ಆದಿ ಭಾಷೆ ಮತ್ತು ಜ್ಞಾನವು, ಮಾನವ ಜಾತಿಯ ಮುಂದಿನ ಉನ್ನತಿ, ಜ್ಞಾನದ ವಿಕಾಸ, ಸಂಸ್ಕೃತಿ ಮತ್ತು ಸಭ್ಯತೆಯ ಬೆಳವಣಿಗೆಗೆ ನಿಮಿತ್ತವಾಗಿರುವುದರಿಂದ, ಇದನ್ನು ನೈಮಿತ್ತಿಕ ಜ್ಞಾನವೆಂದು ಕರೆಯುತ್ತಾರೆ. ಇದು ಸ್ವಾಭಾವಿಕ ಜ್ಞಾನಕ್ಕಿಂತ ಭಿನ್ನವಾಗಿದೆ. ಸ್ವಾಭಾವಿಕ ಜ್ಞಾನವು ಪ್ರಾಣಿಗಳಲ್ಲಿಯೂ ಇದೆ. ಆದರೆ ಅದರ ವಿಕಾಸವಾಗುವುದಿಲ್ಲ. ನೈಮಿತ್ತಿಕ ಜ್ಞಾನವು ವಿಕಸಿತ ಜ್ಞಾನವೃಕ್ಷದ ಬೀಜದಂತಿದೆ. ಒಂದು ವೇಳೆ ಈ ಆದಿಜ್ಞಾನವು ಪೂರ್ಣ ವಿಕಸಿತವಾಗಿದ್ದು ಸವಿಸ್ತಾರ ವರ್ಣನೆಯಿಂದ ಕೂಡಿದ್ದುದಾದರೆ, ಮನುಷ್ಯರ ಮನನಶಕ್ತಿಯು ಕುಂಠಿತವಾಗುತ್ತಿತ್ತು. ಸಂಪೂರ್ಣ ಮಾನವ ಜಾತಿಯು ರೂಢಿವಾದದೊಳಗೆ ಮುಳುಗಿ ಹೋಗುತ್ತಿತ್ತು. ಪುರುಷಾರ್ಥವು ನಿರರ್ಥಕವೆನಿಸುತ್ತಿತ್ತು. ಈ ರೀತಿ ವೇದಜ್ಞಾನವು ಮಾನವ ಜಾತಿಯ ಅಧಃಪತನಕ್ಕೆ ಕಾರಣವಾಗುತ್ತಿತ್ತು. ಇಷ್ಟು ಮಾತ್ರವಲ್ಲದೆ, ಸವಿಸ್ತಾರ ವರ್ಣನೆಯಿಂದ ಕೂಡಿದ ಜ್ಞಾನದ ರಕ್ಷಣೆ ಮತ್ತು ಅದರ ಪಠನಪಾಠವೂ ಕಷ್ಟಸಾಧ್ಯವಾಗುತ್ತಿತ್ತು.

ವೇದಭಾಷೆಯನ್ನು ದೈವೀಭಾಷೆ ಎಂದೂ ಕರೆಯುತ್ತಾರೆ. ಯಾಕೆಂದರೆ, ಇದು ದಿವ್ಯಭಾಷೆಯಾಗಿದೆ, ಜ್ಞಾನಯುಕ್ತವಾಗಿದೆ ಮತ್ತು ನಾಶರಹಿತವಾಗಿದೆ. ಇದರಿಂದಲೇ ಮಾನುಷೀ ಭಾಷೆಯ ಉತ್ಪತ್ತಿಯಾಗಿದೆ. ಪ್ರಾರಂಭದಲ್ಲಿ, ಮಾನುಷೀ ಭಾಷೆಯಲ್ಲಿ ವೈದಿಕ ಶಬ್ದಗಳು ಪ್ರಚುರವಾಗಿದ್ದುವು. ಮತ್ತು ಸಸ್ವರವಾಗಿದ್ದುವು. ಇದನ್ನು ಅತಿಭಾಷೆಯೆಂದೂ ಕರೆಯುತ್ತಾರೆ. ಈ ಅತಿಭಾಷೆಯಿಂದಲೇ ಆರ್ಯಭಾಷೆಗಳೂ ಅನಾರ್ಯಭಾಷೆ*ಗಳೂ ಉತ್ಪನ್ನವಾದುವು. ಅಪಭ್ರಂಶದಿಂದಾಗಿ ಮ್ಲೇಚ್ಛಭಾಷೆಗಳು ಬೆಳೆದುವು. ಕಾಲಕ್ರಮೇಣ ಮ್ಲೇಚ್ಛಭಾಷೆಗಳು ಜನಸಾಮಾನ್ಯರ ಭಾಷೆಯಾಗಿ ಪ್ರಾಕೃತ ಭಾಷೆಗಳೆಂದೆನಿಸಿಕೊಂಡುವು. ಶುದ್ಧಭಾಷೆಯು ಸಂಸ್ಕೃತ ಅಥವಾ ಶಿಷ್ಟಭಾಷೆ ಎನಿಸಿತು. ಮೊದಲು ಪ್ರಾಕೃತ ಭಾಷೆಗಳ ಸಂಖ್ಯೆಯು ಒಂದೆರಡು ಇದ್ದು, ನಂತರ ಅವುಗಳ ಸಂಖ್ಯೆಯು ಹತ್ತು-ಹನ್ನೆರಡರ ತನಕ ಬೆಳೆಯಿತು. ಮಾಗಧೀ, ಅರ್ಧಮಾಗಧೀ, ಪಾಲೀ, ಶೌರಸೇನೀ, ಪೈಶಾಚೀ ಇತ್ಯಾದಿ ಪ್ರಾಕೃತ ಭಾಷೆಯ ಭೇದಗಳು ಪ್ರಾದೇಶಿಕ ಭಿನ್ನತೆಯ ದೆಸೆಯಿಂದಾಗಿ ಉತ್ಪನ್ನವಾದುವು. ಕಾಲಕ್ರಮೇಣ ಪ್ರಾಕೃತ ಭಾಷೆಗಳ

---

* ಆರ್ಯಭಾಷೆ-ಅನಾರ್ಯ ಭಾಷೆ-ಎನ್ನುವುದು ಕೇವಲ ಪ್ರಾದೇಶಿಕ ದೃಷ್ಟಿಯಿಂದ ಆರ್ಯ-ದ್ರಾವಿಡ-ಎಂಬ ಮಾತುಗಳು ಶ್ರೇಷ್ಠತ್ವ-ನೀಚತ್ವ ದ್ಯೋತಕವಲ್ಲ.

ಲ್ಲಿಯೂ ಸಾಹಿತ್ಯ ನಿರ್ಮಾಣವಾದುದರಿಂದ ಅವುಗಳ ವ್ಯಾಕರಣ ಗ್ರಂಥಗಳ ರಚನೆಯೂ ಆಗಿರುತ್ತದೆ. ಈ ರೀತಿ ಜನಸಾಮಾನ್ಯರ ಭಾಷೆಯು ವೈದಿಕ ಭಾಷೆಯಿಂದ ದೂರ ಸರಿದಂತೆ, ಜನರಿಗೆ ವೈದಿಕ ಹಾಗೂ ಲೌಕಿಕ ಸಾಹಿತ್ಯಗಳ ಅಧ್ಯಯನ ಮಾಡಲು ಕಷ್ಟ ವಾಯಿತು. ಇದನ್ನು ದೂರ ಮಾಡಲು ಸಂಸ್ಕೃತದಲ್ಲಿಯೂ ವ್ಯಾಕರಣ ಗ್ರಂಥಗಳ ರಚನೆಯಾಯಿತು. ಪಾಣಿನಿಯ ಅಷ್ಟಾಧ್ಯಾಯೀ ಸೂತ್ರಪಾಠವು ವೈದಿಕ ಮತ್ತು ಲೌಕಿಕ ಸಂಸ್ಕೃತ ಶಬ್ದಗಳ ಲಕ್ಷಣಗಳನ್ನು ಪೂರ್ಣವಾಗಿ ವಿವರಿಸುತ್ತದೆ.

ಮಾನವ ಜಾತಿಯ ಪ್ರಾದುರ್ಭಾವವು, ಸರ್ವ ಪ್ರಥಮ ಹಿಮಾಚಲ ಪ್ರದೇಶ ದಲ್ಲಿಯೇ ಆಯಿತು. ಆದಿ ಮಾನವರು ಋಷಿಗಳೂ, ವಿದ್ವಾಂಸರೂ ಆಗಿದ್ದುದರಿಂದ ಅವರನ್ನು ದೇವತೆಗಳೆಂದೂ, ಅವರ ರಾಜ್ಯವನ್ನು ದೇವಭೂಮಿಯೆಂದೂ ಕರೆಯು ತ್ತಿದ್ದರು. ಅವರು ಶ್ರೇಷ್ಠ ಪುರುಷರಾಗಿದ್ದುದರಿಂದ ಆರ್ಯರೆಂದೂ, ಅವರ ರಾಜ್ಯ ವನ್ನು ಆರ್ಯಾವರ್ತವೆಂದೂ ಹೇಳುತ್ತಿದ್ದರು. ಮಹರ್ಷಿ ಮನುವಿನ ಕಾಲದಲ್ಲಿ ವಿಂಧ್ಯಾಚಲದ ವರೆಗೆ ಆರ್ಯಾವರ್ತವು ವಿಸ್ತರಿಸಿತ್ತು. ಆರ್ಯರಿಂದಲೇ ಜ್ಞಾನಲೋಪ ಮತ್ತು ಧರ್ಮಲೋಪದಿಂದಾಗಿ ಅನಾರ್ಯರು ["ಸೀಳು ಹಾಗೂ ಆಳು"—ಎಂಬ ರಾಜನೀತಿಯ ಕೊಂಕಿನಿಂದ ಆಂಗ್ಲರು ಆರ್ಯ–ದ್ರಾವಿಡ ಕಲಹಕ್ಕೆ ಬೀಜ ಬಿತ್ತಿದ್ದರು. ಈ ಭೇದ ಕೇವಲ ಕೃತಕ. ಆರ್ಯರೆನಿಸಿಕೊಂಡವರಲ್ಲಿಯೂ ದಸ್ಯುಗಳಿದ್ದರು; ದ್ರಾವಿಡ ರೆನಿಸಿಕೊಂಡವರಲ್ಲಿಯೂ ದಸ್ಯುಗಳೆನಿಸಿಕೊಂಡವರಿದ್ದರು. ಮನುವೂ ಸಹಾ ಹೀಗೆಯೇ ಹೇಳಿದ್ದಾನೆ.] ಅಥವಾ ಅಸುರರು ಉತ್ಪನ್ನರಾದರು. ಅನಾರ್ಯರು ದಕ್ಷಿಣ ಭಾರತದಲ್ಲಿ ಮೊದಲು ನೆಲೆಸಿದರು. ಅವರ ವಂಶಜರು ಮುಂದೆ, ಭಾರತವನ್ನು ಬಿಟ್ಟು ಹೊರಗಿನ ಭೂಖಂಡಗಳನ್ನೂ ಹೋಗಿ ಸೇರಿದರು. ಈ ರೀತಿ ಪೃಥ್ವಿಯ ಮೇಲೆ ಸರ್ವತ್ರ ಭಾರತೀಯ ಆರ್ಯರ ವಂಶಜರೇ ನೆಲೆಸಿದ್ದಾರೆ.

ಆರ್ಯ ಸಂಜ್ಞೆಯು ಮೊದಲು 'ವಿಜಾನೀಹ್ಯಾರ್ಯಾನ್ಯೇಚ ದಸ್ಯವಃ [ಋ:–೧–೫೧–೮] ಎಂಬ ಈ ವೇದವಾಕ್ಯದಲ್ಲಿ ಬರುತ್ತದೆ. ಪುನಃ ಅಹಂ ಭೂಮಿಮದದಾಮಾರ್ಯಾಯ' [ಋ:–೪–೨೬–೨] 'ಇಂದ್ರಂ ವರ್ಧಂತೋಽಪ್ತುರಃ ಕೃಣ್ವಂತೋ ವಿಶ್ವಮಾರ್ಯಂ' [ಋ:–೯–೬೩–೫] ಇತ್ಯಾದಿ ಅನೇಕ ಕಡೆಗಳಲ್ಲಿ ಆರ್ಯ ಶಬ್ದವು ಬರುತ್ತದೆ. ಎಲ್ಲಾ ಪ್ರಾಚೀನ ಭಾಷ್ಯಕಾರರು ಆರ್ಯ ಶಬ್ದದ ಅರ್ಥ = ಶ್ರೇಷ್ಠರು ಅಥವಾ ಭದ್ರರೆಂದು ಹೇಳಿದ್ದಾರೆ. ಆದುದರಿಂದ ಆರ್ಯ ಶಬ್ದವು ನಿಜವಾಗಿ ಗುಣವಾಚಕ ವಾಗಿದ್ದು ವಿಶೇಷಣವಾಗಿ ಪ್ರಯುಕ್ತವಾಗಿದೆ ಎಂದು ಸ್ಪಷ್ಟವಾಗುತ್ತದೆ. ವೈದಿಕ ವಾಙ್ಮಯದಲ್ಲಿ ಇದು ಜಾತಿವಾಚಕ ಶಬ್ದವೇ ಅಲ್ಲ. ಮನುಸ್ಮೃತಿಯಲ್ಲಿ[೯] ಪೌಂಡ್ರ ಔಡ್ರ, ದ್ರವಿಡ, ಕಾಂಭೋಜ, ಯವನ, ಶಕ, ಪಾರದಾ, ಪಲ್ಹವ, ಚೀನ, ಕಿರಾತ, ದರದ ಮತ್ತು ಖಶರು ಆರ್ಯರಲ್ಲಿ ಕ್ಷತ್ರಿಯ ವರ್ಣದವರೆಂದೂ, ವೈದಿಕ ಕ್ರಿಯಾಕರ್ಮ

[೯] ಶನಕೈಸ್ತು ಕ್ರಿಯಾಲೋಪಾದಿಮಾಃ ಕ್ಷತ್ರಿಯ ಜಾತಯಃ ।
ವೃಷಲತ್ವಂ ಗತಾಲೋಕೇ ಬ್ರಾಹ್ಮಣಾದರ್ಶನೇನ ಚ ॥
ಪೌಂಡ್ರಕಾಶ್ಚೌಡ್ರದ್ರವಿಡಾಃ ಕಾಂಬೋಜಾಯವನಾಃ ಶಕಾಃ ।
ಪಾರದಾ ಪಲ್ಹವಾಶ್ಚೀನಾಃ ಕಿರಾತಾದರದಾಃ ಖಶಾಃ ॥

ಮನುಸ್ಮೃತಿ ೧೦–೪೩,೪೪ ॥

ಗಳನ್ನು ಬಿಟ್ಟುದರಿಂದಲೂ ವಿದ್ವಾಂಸರ ಅಭಾವದಿಂದಲೂ ಪತಿತರಾದರೆಂದು ಬರೆದಿದೆ. ಆದುದರಿಂದ ದ್ರವಿಡಾದಿ ಅನಾರ್ಯರು ಆರ್ಯರಿಂದಲೇ ಹುಟ್ಟಿದವರೆಂದು ಋಷಿಗಳ ಮತವಾಗಿದೆ. ಮಹಾಭಾರತದಲ್ಲಿಯೂ ಪಿಶಾಚರು, ರಾಕ್ಷಸರು, ಪ್ರೇತರು, ಮತ್ತು ನಾನಾ ಪ್ರಕಾರದ ಮ್ಲೇಚ್ಛ ಜಾತಿಯ ಜನರು, ಮೂಲದಲ್ಲಿ ಆರ್ಯರೇ ಆಗಿದ್ದು, ಅಜ್ಞಾನ, ಸ್ವಚ್ಛಂದತೆ ಇತ್ಯಾದಿಗಳ ವಶದಿಂದ ನಿಂದಿತರಾದರೆಂದು ಬರೆದಿದೆ.[೧೦] ಐತರೇಯ ಬ್ರಾಹ್ಮಣದಲ್ಲಿ ಆಂಧ್ರ, ಪುಂಡ್ರ, ಪುಲಿಂದ, ಶಬರ, ಪುಕ್ಕಸ—ಮೊದಲಾದವರು ವಿಶ್ವಾಮಿತ್ರನ ಮಕ್ಕಳೆಂದೂ, ಶಾಪಗ್ರಸ್ತರಾಗಿ ಪತಿತರಾದರೆಂದೂ ಇತಿಹಾಸವಿದೆ. ಇಲ್ಲಿಯೂ ಆಂಧ್ರಾದಿಗಳೂ ಆರ್ಯರೇ ಆಗಿದ್ದರೆಂಬುದಕ್ಕೆ ಪ್ರಮಾಣವಿದೆ. ಈ ರೀತಿ ಆರ್ಯರ ಸಂತತಿಯವರೇ ವಿಶ್ವದಲ್ಲಿ ಹರಡಿರುವರೆಂದೂ, ಗುಣಕರ್ಮಗಳ ದೋಷದಿಂದ ಪತಿತರಾಗಿ ಅನಾರ್ಯರೆಂದೆನಿಸಿಕೊಂಡರೆಂದೂ, ಆರ್ಷ ಇತಿಹಾಸವು ಹೇಳುತ್ತದೆ. ಈ ಇತಿಹಾಸವನ್ನು ತಿಳಿಯದೆ, ಕೆಲವು ಯುರೋಪಿನ ಅರ್ಧ ಪಂಡಿತರು, ಅಭಿಮಾನ ಮತ್ತು ಕಲುಷಿತ ಬುದ್ಧಿಯಿಂದ ಆರ್ಯ ಮತ್ತು ಅನಾರ್ಯರ ಒಂದು ಹೊಸ ಇತಿಹಾಸದ ಕಲ್ಪನೆ ಮಾಡಿದರು. ಆರ್ಯರು ಹೊರಗಿನಿಂದ ಭಾರತಕ್ಕೆ ಬಂದರು. ಎಂದು ಪ್ರಚಾರ ಮಾಡಿದರು. ಇಷ್ಟರ ತನಕ ಇವರಿಗೆ ಯಾವುದೇ ಒಂದು ಪ್ರಮಾಣವೂ ಸಿಗದಿದ್ದರೂ, ಆರ್ಷ ಇತಿಹಾಸದ ಜ್ಞಾನವಿಲ್ಲದ ಕೆಲವು ಭಾರತೀಯ ಪಂಡಿತರೂ ಇದೇ ಅಸತ್ಯ ಇತಿಹಾಸದ ಪ್ರಚಾರ ಮಾಡುತ್ತಿರುವುದು ಶೋಚನೀಯವಾಗಿದೆ.

ಇಲ್ಲಿ ನಮ್ಮ ಅಭಿಪ್ರಾಯವಿಷ್ಟೆ—ಪ್ರಪಂಚದ ಎಲ್ಲಾ ಆರ್ಯ ಮತ್ತು ಅನಾರ್ಯ ಭಾಷೆಗಳು ಮೂಲ ವೈದಿಕ ಭಾಷೆಯಿಂದಲೇ ಉತ್ಪನ್ನವಾಗಿವೆ. ವರ್ಣ ಮತ್ತು ಸ್ವರಗಳ ಲೋಪ, ಆಗಮ ವಿಕಾರ, ವಿಪರ್ಯಯ, ವ್ಯತ್ಯಯ, ಗ್ರಾಮ್ಯಾದಿ ಶಬ್ದಗಳ ಬೆರಕೆ ಇತ್ಯಾದಿ ಅನೇಕ ಕಾರಣಗಳಿಂದ ಮೂಲ ಭಾಷೆಯಲ್ಲಿ ಪರಿವರ್ತನೆಯಾಗಿ, ಕಾಲಭೇದ ಮತ್ತು ಪ್ರದೇಶ ಭೇದಗಳಿಂದಾಗಿಯೂ ಭಾಷೆಯಲ್ಲಿ ಭಿನ್ನತೆಯು ಉತ್ಪನ್ನವಾಯಿತು. ಆದಿಭಾಷೆಯು, ಆಧುನಿಕ ಭಾಷೆಗಳಿಗಿಂತ ಅಧಿಕ ಕ್ಲಿಷ್ಟವಾಗಿಯೂ, ಅಧಿಕ ವೈಜ್ಞಾನಿಕವಾಗಿಯೂ ಇದ್ದುವೆಂದು ಭಾಷಾ ವಿಜ್ಞಾನಿಗಳು ಸ್ವೀಕರಿಸಿದ್ದಾರೆ. ಭಾಷಾ ರಹಸ್ಯದ ಮುಂದೆ ಡಾರ್ವಿನನ ವಿಕಾಸ ವಾದದ ಸಿದ್ಧಾಂತವು ನುಚ್ಚುನೂರಾಗಿ ಹೋಗುತ್ತದೆ. ಯಾಕೆಂದರೆ, ಮಾನುಷೀ ಭಾಷೆಗಳಲ್ಲಿ ವಿಕಾಸಕ್ಕಿಂತ ಅಧಿಕವಾಗಿ ಹ್ರಾಸವೇ ಆದಂತೆ ಕಾಣುತ್ತದೆ.[೧೧]

## ಬ್ರಹ್ಮಜ್ಞಾನ

ಪರಮಾತ್ಮನು ಇಂದ್ರಿಯಗಳಿಗೆ ಅಗೋಚರನು, ಮನಸ್ಸಿಗೆ ಅಗ್ರಾಹ್ಯನು [ಯಜು. ೪೦–೪]. ಹೀಗಿರುವಾಗ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಪರಮಾತ್ಮನನ್ನು ಸಿದ್ಧಪಡಿಸ

---

[೧೦] ಪಿಶಾಚಾಃ ರಾಕ್ಷಸಾಃ ಪ್ರೇತಾಃ ವಿವಿಧ ಮ್ಲೇಚ್ಛಜಾತಯಃ ।
ಪ್ರನಷ್ಟ ಜ್ಞಾನವಿಜ್ಞಾನಾಃ ಸ್ವಚ್ಛಂದಾಚಾರ ಚೇಷ್ಟಿತಾಃ ॥
ಶಾಂತಿಪರ್ವ, ಅಧ್ಯಾಯ ೧೮೮, ಶ್ಲೋಕ ೧೮ ॥

[೧೧] ನೋಡಿರಿ, ಪಂ. ಭಗವದ್ದತ್ತರ ಭಾಷಾ ಕಾ ಇತಿಹಾಸ್, [ಹಿಂದಿ] ಇತಿಹಾಸ ಪ್ರಕಾಶನ ಮಂಡಲ, ೧–೫೮ ಪಂಜಾಬೀ ಬಾಗ್. ಡಿಲ್ಲಿ,–೨೪.

ಲಾಗುವುದಿಲ್ಲ. ಅನಂತನೂ ಅನಾದಿಯೂ ಅನುಪಮನೂ, ನಿರಾಕಾರ ಮತ್ತು ನಿರ್ವಿಕಾರ ಸರ್ವಾಂತರ್ಯಾಮಿ ಮತ್ತು ಸರ್ವವ್ಯಾಪಕನಾದ ಪರಮಾತ್ಮನ ಜ್ಞಾನವನ್ನು ಮನುಷ್ಯರು ತಮ್ಮ ಪುರುಷಾರ್ಥದಿಂದ ಸಿದ್ಧಿಸಲಾರರು. ಇದಕ್ಕೆ ಅವನ ಕೃಪೆಯು ಬೇಕು. ವೇದಜ್ಞಾನವು ಅವನ ಕೃಪೆಯ ಫಲ. ಪರಮಾತ್ಮನ ಸ್ವರೂಪ, ಅವನ ಮಹಿಮೆ, ಅವನ ಕಾರ್ಯ ಇತ್ಯಾದಿಗಳ ಜ್ಞಾನವು ವೇದಗಳಲ್ಲಿಯೇ ಅಡಕವಾಗಿದೆ. ವೇದಗಳು ಸ್ವತಃ ಪ್ರಮಾಣಗಳಾಗಿರುವುದರಿಂದ ಯಾವ ರೀತಿಯಲ್ಲಿ ಸೂರ್ಯನನ್ನು ತೋರಿಸಲಿಕ್ಕೆ ಬೇರೆ ದೀಪಗಳ ಆವಶ್ಯಕತೆ ಇಲ್ಲವೋ ಅದೇ ರೀತಿಯಲ್ಲಿ ವೇದಜ್ಞಾನವನ್ನು ಸಿದ್ಧಪಡಿಸಲು ಇತರ ಪ್ರಮಾಣಗಳು ನಿರರ್ಥಕವಾಗಿವೆ.

ಪರಮಾತ್ಮನು ಸೃಷ್ಟಿಕರ್ತನು, ಜಡ ಮತ್ತು ಚೇತನ ಜಗತ್ತಿನ ರಾಜ ಮತ್ತು ಪಾಲಕನು, ಮನುಷ್ಯರ ಬುದ್ಧಿಗಳನ್ನು ಬೆಳಗಿಸುವವನು ಮತ್ತು ಅವರಿಗೆ ಆನಂದವನ್ನು ಕೊಡುವವನು.[೧೨] ಓಂ, ಖಂ ಮತ್ತು ಬ್ರಹ್ಮ—ಈ ಶಬ್ದಗಳು ಪರಮಾತ್ಮನ ಹೆಸರುಗಳು [ಯಜು. ೪೦-೧೭]. ಪರಬ್ರಹ್ಮ ಪರಮಾತ್ಮನಿಗಿಂತ ಉತ್ತಮವಾದ ವಸ್ತು ಇನ್ನೊಂದಿಲ್ಲ. ಆತನು ಎಲ್ಲಾ ಕಡೆಗಳಲ್ಲಿಯೂ ಇದ್ದಾನೆ. ಅವನು ಎಲ್ಲರ ಕರ್ಮಾಧ್ಯಕ್ಷ. ಅಗ್ನಿ, ಸೂರ್ಯ ಮತ್ತು ವಿದ್ಯುತ್ ಎಂಬ ಮೂರು ಜ್ಯೋತಿಗಳನ್ನು ಪ್ರಜೆಗಳ ಉಪಕಾರಕ್ಕಾಗಿಯೇ ಪರಮಾತ್ಮನು ರಚಿಸಿದ್ದಾನೆ.[೧೩] ಅವನು ಈಕ್ಷಣ ಅಂದರೆ ಯಥಾರ್ಥ ವಿಚಾರ, ಸರ್ವಾಧಾರವಾದ ಪ್ರಾಣ, ಶ್ರದ್ಧೆ ಅಂದರೆ ಸತ್ಯದಲ್ಲಿ ವಿಶ್ವಾಸ, ಆಕಾಶ, ವಾಯು, ಅಗ್ನಿ, ಜಲ ಮತ್ತು ಪರಾಕ್ರಮ, ತಪಸ್ಸು ಅಂದರೆ ಧರ್ಮಾನುಷ್ಠಾನ ಮತ್ತು ಸತ್ಯಾಚರಣೆ, ಮಂತ್ರರೂಪ ವೇದವಿದ್ಯೆ, ಕರ್ಮ ಅಥವಾ ಪ್ರಯತ್ನ, ಮತ್ತು ನಾಮ ಅಂದರೆ ದೃಶ್ಯಾದೃಶ್ಯ ವಸ್ತುಗಳ ಹೆಸರುಗಳೆಂಬ ಹದಿನಾರು ಕಲೆಗಳಿಂದ ಕೂಡಿದವನಾಗಿದ್ದಾನೆ. ಆದುದರಿಂದ ಅವನನ್ನು ಷೋಡಶೀ ಎಂದೂ ಹೇಳುತ್ತಾರೆ. ಪ್ರಜಾಪತಿಯಾದ ಪರಮಾತ್ಮನು ಅಜನ್ಮನು. ಆದರೆ ಅವನು ಎಲ್ಲರ ಜನ್ಮಕ್ಕೆ ಕಾರಣನು. ಅವನೇ ಎಲ್ಲರನ್ನೂ ಧಾರಣೆ ಮಾಡಿಕೊಂಡಿದ್ದಾನೆ. ಅಣು ಪರಮಾಣುಗಳಲ್ಲಿಯೂ ಅವನು ಓತಪ್ರೋತನಾಗಿದ್ದಾನೆ.[೧೪] ಪರಮಾತ್ಮನು ಜಗನ್ನಿಯಾಮಕನಾಗಿದ್ದಾನೆ [ಅಥರ್ವ ೭-೧-೧]. ವೇದಜ್ಞಾನವನ್ನೂ ಅವನೇ ಪ್ರಕಾಶಿಸುತ್ತಾನೆ [ಅಥರ್ವ ೭-೬೧-೨]. ಅವನು ಅಕಾಯನು, ಶುದ್ಧನು ಮತ್ತು ಪವಿತ್ರನು [ಯಜು. ೪೦-೮]. ಅವನ ಪ್ರತಿಮೆ ಅಂದರೆ ಸಮತೂಕವಾದುದು ಇಲ್ಲ [ಯಜು. ೩೨-೩]. ಮೃತ್ಯುಭಯದಿಂದ ಪಾರಾಗಬೇಕಾದರೆ ಪರಮಾತ್ಮನ ಪ್ರಾಪ್ತಿಯಾಗಲೇಬೇಕು. ಇದಕ್ಕೆ ಬೇರೆ ಉಪಾಯವೇ ಇಲ್ಲ.[೧೫] ಆದುದರಿಂದ ಸರ್ವವ್ಯಾಪಕನಾದ ಪರಮಾತ್ಮನ ಅತ್ಯಂತ ಉತ್ತಮ ಆನಂದರೂಪ ಮತ್ತು ಪ್ರಾಪ್ತಿ ಮಾಡಿಕೊಳ್ಳಲು ಯೋಗ್ಯವಾದಂತಹ ಮೋಕ್ಷಪದವನು ವಿದ್ವಾಂಸರು ಸದಾ ನೋಡುತ್ತಿರುತ್ತಾರೆ ಅಥವಾ ಅದಕ್ಕೆ ಹಂಬಲಿಸುತ್ತಿದ್ದಾರೆ.[೧೬]

---

[೧೨] ತಮೀಶಾನಂ ಜಗತಸ್ತಸ್ಥುಷಸ್ಪತಿಂ ॥ ಋಗ್ವೇದ ೧-೮೯-೫ ॥

[೧೩] ಯಸ್ಮಾನ್ನ ಜಾತಃ ಪರೋ ಅನ್ಯೋ ಅಸ್ತಿ ॥ ಯಜುರ್ವೇದ ೮-೩೬ ॥

[೧೪] ಪ್ರಜಾಪತಿಶ್ಚರತಿ ಗರ್ಭೇಽಂತರಜಾಯಮಾನೋ ॥ ಯಜುರ್ವೇದ ೩೧-೧೯ ॥

[೧೫] ತಮೇವ ವಿದಿತ್ವಾತಿಮೃತ್ಯುಮೇತಿ ॥ ಯಜುರ್ವೇದ ೩೧-೧೮ ॥

[೧೬] ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ॥ ಋಗ್ವೇದ ೧-೨೨-೨೦ ॥

ಈ ರೀತಿ ನೂರಾರು ಮಂತ್ರಗಳು ಬ್ರಹ್ಮಜ್ಞಾನದ ವರ್ಣನೆಯಿಂದ ತುಂಬಿವೆ. ಇದೇ ವೇದಗಳ ಮುಖ್ಯ ವಿಷಯುವಾಗಿದೆ. ಇತರ ವಿಷಯುಗಳು ಗೌಣವಾಗಿವೆ. ಉಪ ನಿಷತ್ತುಗಳಲ್ಲಿಯೂ, ವೇದಾಂತಶಾಸ್ತ್ರದಲ್ಲಿಯೂ, ಬ್ರಹ್ಮನ ವಿಸ್ತಾರ ವರ್ಣನೆ ಇದೆ. ಇದೂ ವೇದಗಳ ಆಧಾರದಲ್ಲಿಯೇ ಇದೆ.

ಪರಮಾತ್ಮನ ನಿಜವಾದ ಜ್ಞಾನವನ್ನು ಪಡೆದುಕೊಂಡು, ಅವನ ಸ್ತುತಿ, ಧರ್ಮ ಅಥವಾ ಸತ್ಯಾಚರಣೆ, ಅವನ ಆಜ್ಞಾಪಾಲನೆ, ಪ್ರಾರ್ಥನೆ ಇತ್ಯಾದಿಗಳಿಂದ ಕೂಡಿದ ಪುರುಷಾರ್ಥರೂಪೀ ಉಪಾಸನೆಯಿಂದ ಅವನ ಸಾಕ್ಷಾತ್ಕಾರ ಮಾಡಿಕೊಳ್ಳುವ ಕಲೆ ಯನ್ನೇ ಬ್ರಹ್ಮವಿದ್ಯೆ ಎಂದು ಕರೆಯುತ್ತಾರೆ. ಇದನ್ನೇ ಪರಾವಿದ್ಯೆಯೆಂದೂ ಹೇಳುತ್ತಾರೆ. ಈ ವಿದ್ಯೆಯಿಂದಲೇ ಶಾಶ್ವತ ಸುಖವು ಒದಗುತ್ತದೆ. ಇತರ ಅಪರಾ ವಿದ್ಯೆಗಳಿಂದ* ಸಾಂಸಾರಿಕ ಬಂಧನದಿಂದ ಬಿಡುಗಡೆಯಾಗುವುದಿಲ್ಲ, ಶಾಶ್ವತ ಸುಖವೂ ಸಿಗುವುದಿಲ್ಲ.

## ಸೃಷ್ಟಿಜ್ಞಾನ

ಸೃಷ್ಟಿಯ ಮೊದಲು ಎಲ್ಲಾ ಜಗತ್ತಿನ ಸ್ವಾಮಿಯೂ, ಪೃಥ್ವೀ ಸೂರ್ಯಾದಿಗಳ ಧಾರಕನೂ, ಸುಖಸ್ವರೂಪನೂ ಮತ್ತು ಪರಂಜ್ಯೋತಿಯೂ ಆದ ಪರಮಾತ್ಮನು ಮಾತ್ರ ಇದ್ದನು. ಅವನೇ ಎಲ್ಲಾ ಲೋಕಲೋಕಾಂತರಗಳನ್ನು ರಚಿಸಿ ಧಾರಣೆ ಮಾಡಿ ಕೊಂಡಿದ್ದಾನೆ.[೧೭] ಅದಕ್ಕಿಂತ ಮೊದಲು ಕೇವಲ ಜಗತ್ತಿನ ಉಪಾದಾನ ಕಾರಣವಾದ ಪ್ರಕೃತಿಯು ಮಾತ್ರ ಇತ್ತು. ಪರಮಾತ್ಮನು ಪ್ರಕೃತಿಯ ಒಳಗೂ ಹೊರಗೂ ಓತ ಪ್ರೋತನಾಗಿದ್ದನು [ಯಜು. ೩೧–೫]. ಅವನ ಈಕ್ಷಣೆ ಅಂದರೆ ಯಥಾರ್ಥ ವಿಚಾ ರದ ದೆಸೆಯಿಂದಾಗಿ ಪ್ರಕೃತಿಯಲ್ಲಿ ಕ್ಷೋಭೆ [ಚಲನೆ] ಉತ್ಪನ್ನವಾಗಿ ಅದರಿಂದ ವಿರಾಟ್ ಅಥವಾ ಆಪ್ತತ್ವ, ಆ ತತ್ತ್ವದಿಂದ ಮಹತ್ತತ್ತ್ವ ಅಥವಾ ಹಿರಣ್ಯಾಂಡ, ಹಿರಣ್ಯಾಂಡದಿಂದ ಅಹಂಕಾರ, ಬಳಿಕ ಪಂಚತನ್ಮಾತ್ರೆಗಳೂ, ಪಂಚ ಮಹಾಭೂತಗಳೂ, ಇಂದ್ರಿಯ ತತ್ತ್ವ ಗಳೂ, ಚರಾಚರ ಜಗತ್ತೂ ಕ್ರಮಶಃ ಉತ್ಪನ್ನವಾಗುತ್ತವೆ. ಋಗ್ವೇದದ ಪುರುಷಸೂಕ್ತ, ನಾಸದೀಯ ಸೂಕ್ತ ಮತ್ತು ಇನ್ನೂ ಹಲವಾರು ಮಂತ್ರಗಳಲ್ಲಿ ಸೃಷ್ಟಿಯ ಉತ್ಪತ್ತಿಯ ವರ್ಣನೆ ಇದೆ.

## ಪೃಥಿವ್ಯಾದಿ ಲೋಕಜ್ಞಾನ

ಪೃಥ್ವಿ, ಸೂರ್ಯ ಚಂದ್ರಮಾದಿ ಲೋಕಗಳು ತಮ್ಮ ತಮ್ಮ ಅಕ್ಷಗಳಲ್ಲಿ ತಿರುಗು ತ್ತಿವೆ. ಜಲವು ಪೃಥ್ವಿಯ ಜನನಿ, ಸೂರ್ಯನು ಜನಕ, ಯಾಕೆಂದರೆ, ಜಲದ ಪರಮಾಣು ಗಳಿಂದಲೇ ಪೃಥ್ವಿಯ ಉತ್ಪತ್ತಿಯಾಗುತ್ತದೆ, ಮತ್ತು ಪೃಥ್ವಿಯು ಸೂರ್ಯನ ಸುತ್ತಲೂ

---

* ಹಿಂದೆ ಹೇಳಲ್ಪಟ್ಟುದರೊಂದಿಗೆ, ಈ ಸಂದರ್ಭದಲ್ಲಿ 'ಪರಾ' ಎಂದರೆ ಅನುಷ್ಠಾನಾತ್ಮಕ [Practical or Practicable] ಶ್ರೇಷ್ಠ ವಿದ್ಯೆ, 'ಅಪರಾ' ಎಂದರೆ ಸಿದ್ಧಾಂತಾತ್ಮಕ [thearitical] ಶ್ರೇಷ್ಠ ವಿದ್ಯೆ—ಎಂದರಿತರೆ ಯಾವ ಭ್ರಾಂತಿಯೂ ಉಳಿಯದು.

[೧೭] ಹಿರಣ್ಯಗರ್ಭಃ ಸಮವರ್ತತಾಗ್ರೇ........ ॥ ಋಗ್ವೇದ ೧೦–೧೨೧–೧ ॥

ಸದಾ ತಿರುಗುತ್ತಿದೆ.[೧೮] ಚಂದ್ರನು ಪೃಥ್ವಿಯ ಸುತ್ತಲೂ ಪರಿಭ್ರಮಣ ಮಾಡುತ್ತಿದ್ದಾನೆ ಕೆಲವು ಬಾರಿ ಅವನು ಸೂರ್ಯ ಮತ್ತು ಪೃಥ್ವಿಯ ನಡುವೆ ಬರುತ್ತಾನೆ.[೧೯]

ಪೃಥ್ವಿಯು ಗೋಳಾಕಾರವಾಗಿದೆ. ಇದರ-ಅರ್ಧಭಾಗವು ಸೂರ್ಯನ ಪ್ರಕಾಶ ದಿಂದ ಬೆಳಗುತ್ತದೆ, ಶೇಷ ಅರ್ಧ ಭಾಗದಲ್ಲಿ ಕತ್ತಲೆ.[೨೦] ಪೃಥ್ವಿಯು ಸೂರ್ಯನ ಆಕರ್ಷಣಶಕ್ತಿಯಿಂದಾಗಿಯೇ ನಿಂತಿದೆ.[೨೧] ಇದರ ದೈನಿಕ ಮತ್ತು ವಾರ್ಷಿಕಗಳೆಂಬ ಎರಡು ವೃತ್ತಾವೃತ್ತಗಳಿವೆ. ೩೦ ದಿನಗಳು ಮತ್ತು ೧೨ ತಿಂಗಳುಗಳು ಪೃಥ್ವಿಯ ಧಾಮ ಗಳಾಗಿವೆ.[೨೨] ಯಾವ ಮಾರ್ಗದಿಂದ ಪೃಥ್ವಿಯು ಚಲಿಸುತ್ತದೆಯೋ ಅದೇ ರಾಶಿಪಥ ವಾಗಿದೆ. ವೇದಗಳಲ್ಲಿ ಅದನ್ನು ವೈಶ್ವಾನರ ಎಂದು ಕರೆಯಲಾಗಿದೆ.[೨೩] ವೇದಗಳಲ್ಲಿ ಗ್ರಹಣದ ವರ್ಣನೆಯೂ ಇದೆ. ರೇಖಾಗಣಿತದ ಜ್ಞಾನವಿಲ್ಲದವರು ಇದನ್ನು ಕಂಡು ಮುಗ್ಧರಾಗುತ್ತಾರೆ. ವಿದ್ವಾಂಸರು ಗಣಿತದ ಆಧಾರದಿಂದ ಆ ಸಮಯವನ್ನು ಕಂಡು ಹಿಡಿಯುತ್ತಾರೆ, ತುರೀಯ ಯಂತ್ರದಿಂದ ಸೂರ್ಯನನ್ನು ನೋಡುತ್ತಾರೆ.[೨೪]

ಸೂರ್ಯನು ತನ್ನ ಆಕರ್ಷಣ ಶಕ್ತಿಯಿಂದ ಪೃಥಿವ್ಯಾದಿ ಲೋಕಗಳನ್ನು ಧಾರಣೆ ಮಾಡಿಕೊಂಡಿದ್ದಾನೆ, ಮತ್ತು ಪರಮಾತ್ಮನು ಸೂರ್ಯಾದಿ ಲೋಕಗಳನ್ನು ಧಾರಣೆ ಮಾಡಿಕೊಂಡಿದ್ದಾನೆ.[೨೫] ಪರಮಾತ್ಮನಿಂದಲೇ ಸೂರ್ಯಾದಿ ಲೋಕಗಳು ಪ್ರಕಾಶವನ್ನು ಪಡೆದುಕೊಳ್ಳುತ್ತವೆ, ಮತ್ತು ಸೂರ್ಯನಿಂದ ಚಂದ್ರಾದಿ ಲೋಕಗಳು ಪ್ರಕಾಶವನ್ನು ಪಡೆದುಕೊಳ್ಳುತ್ತವೆ. ಸೂರ್ಯನ ಕಿರಣಗಳು ಚಂದ್ರನ ಮೇಲೆ ಬಿದ್ದು ಪ್ರತಿಫಲಿಸಿ ಪೃಥ್ವಿಯ ಮೇಲೆ ಬೀಳುವುದರಿಂದ ಅವುಗಳು ತಂಪಾಗಿರುತ್ತವೆ. ಯಾವ ಕಡೆಯಲ್ಲಿ ಭೂಮಿಯ ನೆರಳು ಸೂರ್ಯನ ಕಿರಣಗಳನ್ನು ತಡೆಯುತ್ತದೆಯೋ ಆ ಕಡೆಯಲ್ಲಿ ಅಧಿಕ ಶೀತವಿರುತ್ತದೆ. ಯಾವ ಕಡೆಗಳಲ್ಲಿ ಸೂರ್ಯನ ಕಿರಣಗಳು ಓರೆಯಾಗಿ ಬೀಳು

---

[೧೮] ಆಯಂ ಗೌಃ ಪ್ರಶ್ನಿರಕ್ರಮೀದಸದನ್ಮಾತರಂ ಪುರಃ ॥
ಪಿತರಂ ಚ ಪ್ರಯನ್ತ್ಸ್ವಃ ॥ ಯಜುರ್ವೇದ ೩-೬ ॥

ಯಾ ಗೌರ್ವರ್ತ್ತನಿಂ ಪರ್ಯೇತಿ ನಿಷ್ಕೃತಂ ಪಯೋ·········॥ ಋಗ್ವೇದ ೧೦-೬೫-೬ ॥

[೧೯] ತ್ವಂ ಸೋಮ ಪಿತೃಭಿಃ ಸಂವಿದಾನೋಽನು········· ॥ ಋಗ್ವೇದ ೮-೪೮-೧೩ ॥

[೨೦] ಚಕ್ರಾಣಾಸಃ ಪರೀಣಹಂ ಪೃಥಿವ್ಯಾಹಿರಣ್ಯೇನ ಮಣಿನಾ········· ॥ ಋ. ೧-೩೩-೮ ॥

[೨೧] ಸವಿತಾ ಯಂತ್ರೈಃ ಪೃಥಿವೀಮರಮ್ಣಾತ್ ಅಸ್ಕಂಭನೇ
ಸವಿತಾ ದ್ಯಾಮದೃಂಹತ ॥ ಋಂ ೧೦-೧೪೯-೧ ॥

[೨೨] ಯಸ್ಯಾ ಕೃಷ್ಣಮರುಣಂ ಚ ಸಂಹಿತೇ ಅಹೋರಾತ್ರೇ ವಿಹಿತೇ ಭೂಮ್ಯಾಮಧಿ ।
ವರ್ಷೇಣ ಭೂಮಿಃ ಪೃಥಿವೀ ವೃತ್ತಾವೃತ್ತಾ ಸಾನೋದಧಾತುಭದ್ರಯಾ ಪ್ರಿಯೇ
ಧಾಮಾನಿ ಧಾಮಾನಿ ॥ [ಅಥರ್ವ ೧೨-೧-೫೨]

[೨೩] ವೈಶ್ವಾನರಸ್ಯ ಪ್ರತಿಮೋಪರಿ ದ್ಯೌರ್ಯಾವದ್ರೋದಸೀ ವಿಬಬಾಧೇ ಅಗ್ನಿಃ ॥
[ಅಥರ್ವ ೮-೯-೬]

[೨೪] ಯತ್ವಾ ಸೂರ್ಯ ಸ್ವರ್ಭಾನು ಸ್ತಮಸಾವಿಧ್ಯದಾಸುರಃ ।
ಅಕ್ಷೇತ್ರವಿದ್ಯಥಾ ಮುಗ್ಧೋ ಭುವನಾನ್ಯದೀಧಯುಃ ॥ ಋ. ೫-೪೦-೫ ॥
ಸ್ವರ್ಭಾನೋರಧ ಯದಿಂದ್ರ ಮಾಯಾ ಅವೋದಿವೋ ವರ್ತಮಾನಾ ಅವಾಹನ್ ।
ಗೂಢಂ ಸೂರ್ಯಂ ತಮಸಾಪವ್ರತೇನ ತುರೀಯೇಣ ಬ್ರಹ್ಮಣಾವಿಂದದತ್ರಿಃ ॥
ಋಂ ೫-೪೦-೬ ॥

[೨೫] ಋಗ್ವೇದ ೬-೧-೬, ೩, ೪, ೫; ೪-೫-೧೦-೩; ಯಜುರ್ವೇದ ೩೩-೪೨ ॥

ತ್ತವೆಯೋ ಆ ಕಡೆಗಳಲ್ಲಿಯೂ ಉಷ್ಣತೆ ಕಡಿಮೆ. ಚಂದ್ರನ ಪ್ರಕಾಶದಿಂದ ಮತ್ತು ವಾಯುವಿನಿಂದ ಸೋಮಲತೆ ಮತ್ತು ಇತರ ಓಷಧಿಗಳು ಪುಷ್ಟಿಯಾಗಿ ಬೆಳೆಯುತ್ತವೆ. ಇವುಗಳಿಂದ ಪೃಥ್ವಿಯೂ ಸುಫಲೆಯಾಗುತ್ತಾಳೆ [ಅಥರ್ವ. ೧೪–೧–೧೩.೨].

ಈ ರೀತಿ ಲೋಕಲೋಕಾಂತರಗಳ ಸ್ಥಿತಿ, ಗತಿ, ಆಕರ್ಷಣೆ, ಪ್ರಕಾಶಾದಿ ಧರ್ಮಗಳ ಜ್ಞಾನವನ್ನು ವಿವರಿಸುವ ಅನೇಕ ಮಂತ್ರಗಳು ವೇದಗಳಲ್ಲಿವೆ. ಇವುಗಳ ಆಧಾರದಿಂದಲೇ ಮನುಷ್ಯರಿಗೆ ಋತುಜ್ಞಾನ, ಕಾಲಜ್ಞಾನ, ಆಕರ್ಷಣಾಪಕರ್ಷಣಾದಿ ವಿದ್ಯೆಗಳ ಜ್ಞಾನವು ದೊರೆತಿದೆ. ವಸಿಷ್ಠ ಮುನಿ ಮೊದಲಾದವರು ರಚಿಸಿದ ವೇದಾಂಗ ಜ್ಯೋತಿಷ, ಸೂರ್ಯ ಸಿದ್ಧಾಂತಾದಿಗಳಲ್ಲಿ ಈ ಜ್ಞಾನದ, ವಿಸ್ತಾರ ಪೂರ್ವಕ ವರ್ಣನೆ ಇದೆ.

## ಆಯುರ್ವೇದ ಜ್ಞಾನ

ಋತು ಸಂಧಿಕಾಲಗಳಲ್ಲಿ ವಿಭಿನ್ನ ವ್ಯಾಧಿಗಳು ಉತ್ಪನ್ನವಾಗುತ್ತವೆ. ಅವುಗಳ ನಿವಾರಣೆಗಾಗಿ ಭೈಷಜ್ಯಯಜ್ಞ ಮಾಡಬೇಕೆಂದು ಋಷಿಗಳು ಹೇಳಿದ್ದಾರೆ. ಇದಕ್ಕೆ ದೇಶ, ಕಾಲ ಮತ್ತು ಪದಾರ್ಥಗಳ ಜ್ಞಾನವು ಅತ್ಯಾವಶ್ಯಕವಾಗಿದೆ. ವೈದ್ಯಕ ಶಾಸ್ತ್ರಜ್ಞನನ್ನು ಭೈಷಜ್ಯಯಜ್ಞಕ್ಕೆ ಬ್ರಹ್ಮನನ್ನಾಗಿ ನೇಮಕ ಮಾಡುತ್ತಾರೆ. ವೈದ್ಯಕ ಶಾಸ್ತ್ರಜ್ಞನು ವನಸ್ಪತಿ ಮತ್ತು ಓಷಧಿಗಳ ಗುಣಜ್ಞಾನವನ್ನು ಚೆನ್ನಾಗಿ ತಿಳಿದವನಾಗಿರುತ್ತಾನೆ. ಔಷಧಿಗಳ ಬಗ್ಗೆ **'ಯಸ್ಯ ದೇಶಸ್ಯ ಯೋಜಂತುಃತ್ತತ್ತಸ್ಯೌಷಧಂ ಹಿತಂ'** ಅಂದರೆ ಪ್ರಾಣಿಗಳಿಗೆ ತಮ್ಮ ತಮ್ಮ ದೇಶಗಳಲ್ಲಿ ಉತ್ಪನ್ನವಾಗುವ ಓಷಧಿಗಳೇ ಹಿತಕರವಾಗಿರುತ್ತವೆ ಎಂದು ಹೇಳುತ್ತಾರೆ. ಓಷಧಿಗಳ ಮೇಲೆ ಋತುಗಳ ಪ್ರಭಾವವೂ ಬೀಳುತ್ತಿರುತ್ತದೆ. ದೇಶ, ಕಾಲ ಮತ್ತು ಪದಾರ್ಥಗಳ ಗುಣಜ್ಞಾನವೂ ಆಯುರ್ವೇದದ ವಿಷಯವಾಗಿದೆ. ಶರೀರ ಜ್ಞಾನ, ಮತ್ತು ರೋಗಗಳ ನಿದಾನಗಳು ಇದಕ್ಕೆ ಪೂರಕವಾಗಿವೆ. ವೇದಗಳಲ್ಲಿ ಇವುಗಳ ವಿಸ್ತೃತ ವರ್ಣನೆ ಇದೆ.

**"ಅಗ್ನಿರ್ಹಿಮಸ್ಯ ಭೇಷಜಂ"** ಅಂದರೆ ಉಷ್ಣವು ಶೀತಕ್ಕೆ ಔಷಧಿಯಾಗಿದೆ [ಯಜು. ೨೩–೧೭]. ಇದೇ ರೀತಿಯಲ್ಲಿ ಶೀತವು ಉಷ್ಣಕ್ಕೆ ಔಷಧಿಯಾಗಿದೆಯೆಂದು ತಿಳಿದುಕೊಳ್ಳಬೇಕು. ವೇದಗಳಲ್ಲಿ ಅಗ್ನಿಷೋಮೌ ದೇವತೆಗಳ ವಿಸ್ತೃತ ವರ್ಣನೆ ಇದೆ. ಇದು ಅಗ್ನಿ ಮತ್ತು ಜಲದ ಗುಣಧರ್ಮದ ವರ್ಣನೆಯಾಗಿದೆ.

ಯಜುರ್ವೇದದಲ್ಲಿ ಹವನಕ್ಕೆ ಯೋಗ್ಯ ಒಂದು ಔಷಧಿವಿಶೇಷವನ್ನು ಅಂಬ ಎಂದು ವರ್ಣಿಸಲಾಗಿದೆ. ಇದು ನೂರಾರು ಪ್ರದೇಶಗಳಲ್ಲಿ, ಸಾವಿರಾರು ರೂಪಗಳಲ್ಲಿ ಉತ್ಪನ್ನವಾಗುತ್ತದೆ. ಇದು ಯಜ್ಞದಲ್ಲಿ ಪ್ರಯುಕ್ತವಾಗುತ್ತದೆ ಮತ್ತು ಆರೋಗ್ಯ ದಾಯಕವಾಗಿದೆ.[೨೬] ಔಷಧಿಗಳು ಅನೇಕ ಪ್ರಕಾರವಾಗಿವೆ; ಕೆಲವು ಫಲ ಕೊಡುತ್ತವೆ. ಕೆಲವು ಫಲ ಕೊಡುವುದಿಲ್ಲ; ಕೆಲವು ಹೂ ಕೊಡುತ್ತವೆ, ಕೆಲವು ಹೂ ಕೊಡುವುದಿಲ್ಲ.[೨೭]

---

[೨೬] ಶತಂ ವೋ ಅಂಬ ಧಾಮಾನಿ ಸಹಸ್ರಮುತ ವೋರುಹಃ ।
ಅಧಾ ಶತಕ್ರತ್ವೋ ಯೂಯಮಿಮಂ ಮೇ ಅಗದಂ ಕೃತ ॥ ಯಜು ೧೨–೭೬ ॥

[೨೭] ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ ॥
ಬೃಹಸ್ಪತಿಪ್ರಸೂತಾಸ್ತಾ ನೋ ಮುಂಚಂತ್ವಂಹಸಃ ॥ ಯಜು ೧೨–೮೯ ॥

ಕೆಲವು ಔಷಧಿಗಳು ಆಕಾಶದಿಂದ ಬೀಳುತ್ತವೆ. ಇವುಗಳಲ್ಲಿ ಜೀವನ ಶಕ್ತಿ ಇದೆ. ಇವುಗಳ ಸೇವನೆ ಮಾಡುವವರು ಯಾವಾಗಲೂ ರೋಗಗಳಿಂದ ಪೀಡಿತರಾಗುವುದಿಲ್ಲ.[೨೮]

ನಮ್ಮ ಶರೀರವು ಅನಿತ್ಯ ಮತ್ತು ಅಸ್ಥಿರವಾಗಿದೆ. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ಸಿದ್ಧಿಗಾಗಿ ಔಷಧಿಗಳ ಸೇವನೆಯಿಂದ ಈ ಶರೀರದ ರಕ್ಷಣೆ ಮಾಡಿಕೊಳ್ಳಬೇಕು [ಯಜು. ೧೨–೭೯]. ದುಷ್ಕರ್ಮಗಳನ್ನು ಮಾಡದೆ, ನಿಯಮಪೂರ್ವಕವಾಗಿ ಔಷಧಿಗಳ ಸೇವನೆ ಮಾಡಿದರೆ, ಅವುಗಳು ನಮ್ಮನ್ನು ತಾಯಿಯಂತೆ ಪುಷ್ಟಿಯಾಗಿ ಬೆಳೆಸುತ್ತವೆ [ಯಜು. ೧೨–೮೩]. ಔಷಧಿಗಳನ್ನು ಒಗೆದು ತೆಗೆಯುವಾಗ ಅವುಗಳು ನಿರ್ಮೂಲವಾಗದಂತೆ ನೋಡಬೇಕು [ಯಜು. ೧೨–೯೫]. ವೈದ್ಯನ ಬಳಿಯಲ್ಲಿ ರೋಗನಾಶಕ ಔಷಧಿಗಳು ಸುಸಂಗ್ರಹವಾಗಿಯೂ ಸುಸಜ್ಜಿತವಾಗಿಯೂ ಇರಬೇಕು.[೨೯]

ಇಂತಹ ನೂರಾರು ಮಂತ್ರಗಳು ವೇದಗಳಲ್ಲಿವೆ. ಇವುಗಳಲ್ಲಿ ವೈದ್ಯಶಾಸ್ತ್ರದ ಪೂರ್ಣ ಜ್ಞಾನವಿದೆ. ಇವುಗಳ ಆಧಾರದಿಂದಲೇ ಪ್ರಾಚೀನ ಋಷಿಗಳು ಆಯುರ್ವೇದದ ಉನ್ನತಿ ಮತ್ತು ಪ್ರಚಾರ ಮಾಡಿರುವರು. ಚರಕ, ಸುಶ್ರುತ ಮತ್ತು ಧನ್ವಂತರಿ ಕೃತ ನಿಘಂಟು ಆಯುರ್ವೇದದ ಜ್ಞಾನದಿಂದ ಪೂರ್ಣವಾಗಿವೆ.

## ಗಣಿತಜ್ಞಾನ

ವೇದಗಳಲ್ಲಿ ಅಂಕಗಣಿತ ಬೀಜಗಣಿತ ಮತ್ತು ರೇಖಾಗಣಿತ ಜ್ಞಾನವೂ ಇದೆ. ಒಂದು, ಹತ್ತು, ನೂರು, ಸಾವಿರ ಇದೇ ರೀತಿ ಪರಾರ್ಧದ ತನಕ ಸಂಖ್ಯೆಗಳ ವರ್ಣನೆ ಇದೆ.[೩೦] ಅಂಕಗಣಿತವು ನಿಶ್ಚಿತ ಮತ್ತು ಸಂಖ್ಯಾತ ಪದಾರ್ಥಗಳ ಗಣನೆಗೆ ಪ್ರಯುಕ್ತವಾಗುತ್ತದೆ. ಅಜ್ಞಾತ ಪದಾರ್ಥಗಳ ಗಣನೆಗೆ ಬೀಜಗಣಿತವು ಬೇಕಾಗುತ್ತದೆ. ಇದು ಕೂಡ ವೇದಮಂತ್ರಗಳಿಂದಲೇ ಸಿದ್ಧವಾಗುತ್ತದೆ.[೩೧]

"ಭುವನದ ಮಧ್ಯಭಾಗ ಯಾವುದು? ನಾನು ಪೃಥ್ವಿಯ ಅಂತ್ಯ ಮತ್ತು ಭುವನದ ಕೇಂದ್ರ ಯಾವುದೆಂದು ಕೇಳುತ್ತೇನೆ. ಇದಕ್ಕೆ ಉತ್ತರ: ಯಜ್ಞವೇ ಭುವನದ ಕೇಂದ್ರ, ಯಜ್ಞವೇದೀಯೇ ಪೃಥ್ವಿಯ ಅಂತ್ಯಭಾಗ [ಯಜು. ೨೩–೬೧–೬೨]

---

[೨೮] ಅವಪತಂತೀರವದಂದಿವ ಓಷಧಯಸ್ಪರಿ......... ॥ ಯಜು. ೧೨–೯೧ ॥

[೨೯] ಯತ್ರೌಷಧೀಃ ಸಮಗ್ಮಥ ರಾಜಾನಃ ಸಮಿತಾವಿವ ।
ವಿಪ್ರಃ ಸ ಉಚ್ಯತೇ ಭಿಷಗ್ರಕ್ಷೋಹಾಮೀವಚಾತನಃ ॥ ಋಗ್. ೧೦–೯೭–೬ ॥

[೩೦] ಇಮಾ ಮೇ ಅಗ್ನ ಇಷ್ಟಕಾ ಧೇನವಃ ಸಂತ್ವೇಕಾ ಚ ದಶ ಚ ದಶ ಚ ಶತಂ ಚ ಶತಂ ಚ ಸಹಸ್ರ. ಚ ಸಹಸ್ರಂ ಚಾಯುತಂ ಚಾಯುತಂ ಚ ನಿಯುತಂ ಚ ನಿಯುತಂ ಚ ಪ್ರಯುತಂ ಚಾರ್ಬುದ. ಚ ಸಮುದ್ರಶ್ಚ ಮಧ್ಯಂ ಚಾಂತಶ್ಚ ಪರಾರ್ಧಶ್ಚೈತಾ ಮೇ ಅಗ್ನ ಇಷ್ಟಕಾ ಧೇನವಃ ಸಂತ್ವ ಮುತ್ರಾಮುಷ್ಮಿಂಲೋಕೇ ॥ ಯಜು. ೧೭–೨ ॥

ಏಕಾ ಚ ಮೇ ತಿಸ್ರಶ್ಚ ಮೇ ತಿಸ್ರಶ್ಚ ಮೇ ಪಂಚ ಚ ಮೇ ಪಂಚ ಚ ಮೇ ಸಪ್ತ ಚ ಮೇ ಸಪ್ತ ಚ ಮೇ ನವ ಚ ಮೇ ನವ ಚ ಮೇ ಏಕಾದಶ ಚ ಮ......... ॥ ಯಜು. ೧೮–೨೪ ॥

ಚತಸ್ರಶ್ಚ ಮೇಽಷ್ಟೌ ಚ ಮೇಽಷ್ಟೌ ಚ ಮೇ ದ್ವಾದಶ ಚ ಮೇ ದ್ವಾದಶ ಚ ಮೇ ಷೋಡಶ ಚ ಮೇ......... ॥ ಯಜು. ೧೮–೨೫ ॥

[೩೧] ಅಗ್ನ ಆ ಯಾಹಿ ವೀತಯೇ......... ॥ ಸಾಮವೇದ. ಪ್ರ ೧–ಮಂತ್ರ ೧ ॥
ಈ ರೀತಿ ಮಂತ್ರಗಳ ಸಂಕೇತಗಳಿಂದಲೂ ಬೀಜಗಣಿತವು ಉತ್ಪನ್ನವಾಗುತ್ತದೆ.

ಇದರ ತಾತ್ಪರ್ಯವೇನೆಂದರೆ, ಈ ಭುವನ ಹಾಗೂ ಪೃಥ್ವಿಯು ಗೋಳಾಕಾರವಾಗಿದೆ, ಮತ್ತು ಗೋಳಾಕೃತಿಯ ಪ್ರತಿಯೊಂದು ಭಾಗವೂ ಅದರ ಕೇಂದ್ರಸ್ಥಾನವಾಗಿದೆ, ಅದರ ಅಂತ್ಯಭಾಗವೂ ಆಗಿದೆ; ಯಜ್ಞವೇದಿಯ ರಚನೆಯಲ್ಲಿ ರೇಖಾಗಣಿತವಿದೆ. ಯಜ್ಞವೇದಿಗಳು ಗೋಳ, ತ್ರಿಕೋಣ, ಚತುಷ್ಕೋಣ, ಮೊದಲಾದ ಆಕಾರಗಳಲ್ಲಿ ಇರುತ್ತವೆ. ರೇಖಾಗಣಿತಕ್ಕೆ ಇದು ಉತ್ತಮ ದೃಷ್ಟಾಂತವಾಗಿದೆ.

ಪೃಥ್ವಿಯ ನಾಲ್ಕು ಕಡೆಯೂ ಕಾಣುವ ಅಂತ್ಯ ರೇಖೆಯನ್ನು ಪರಿಧಿ ಮತ್ತು ಮೇಲಿನಿಂದ ಕೆಳಗೆ ಅಂತ್ಯದ ತನಕದ ರೇಖೆಯನ್ನು ವ್ಯಾಸವೆನ್ನುತ್ತಾರೆ. ಇದೇ ರೀತಿ ತಿರ್ಯಕ್ ವಿಷುವತ್ ರೇಖೆಗಳೂ ಉತ್ಪನ್ನವಾಗುತ್ತವೆ. ವೇದಮಂತ್ರಗಳ ಆಧಾರದಿಂದಲೇ ಗಣಿತವಿದ್ಯೆಯ ವಿಕಾಸವಾಯಿತು. ವೇದಾಂಗ ಜ್ಯೋತಿಷದ ಆಧಾರವೇ ಗಣಿತವಿದ್ಯೆಯಾಗಿದೆ.

## ನೌವಿಮಾನಾದಿ ಜ್ಞಾನ

ವೇದಮಂತ್ರಗಳಲ್ಲಿ ನೆಲ, ಜಲ ಮತ್ತು ಆಕಾಶಮಾರ್ಗದಲ್ಲಿ ಓಡಾಡುವ ಯಾನಗಳ ವರ್ಣನೆ ಇದೆ. ವಿಮಾನವೆಂದರೆ ಪಕ್ಷಿಗಳಂತೆ ಹಾರಾಡುವ ಯಾನವೆಂದು ಅರ್ಥವಾಗುತ್ತದೆ. ವಿ = ಪಕ್ಷಿ + ಮಾನ ಯಾನ, ಗತಿ, ಸಮಾನತೆ.* ಯಾರು ಅಂತರಿಕ್ಷ ಅಥವಾ ಜಲಮಯ ಸಮುದ್ರದಲ್ಲಿ ಚಲಿಸುವಂತಹ ಪಕ್ಷಿಸಮಾನ ವಿಮಾನ, ನೌಕಾದಿಗಳನ್ನು ರಚಿಸುವ, ಅವುಗಳನ್ನು ಚಲಿಸುವ ಹಾಗೂ ರಕ್ಷಣೆ ಮಾಡುವ ವಿದ್ಯೆಗಳನ್ನು ಕಲಿಯುತ್ತಾರೋ ಅವರೇ ಜ್ಞಾನವಿಜ್ಞಾನಗಳ ಉನ್ನತಿ ಮಾಡಿ ಲಾಭ ಪಡೆಯುತ್ತಾರೆ ಎಂದು ಋಗ್ವೇದದ ಮಂತ್ರವು ಹೇಳುತ್ತದೆ.[೩೨] **'ಯದಕ್ರಂದಃ ಪ್ರಥಮಂ ಜಾಯಮಾನ ಉದ್ಯನ್ತ್ಸಮುದ್ರಾದುತ ವಾ ಪುರೀಷಾತ್ । ಶ್ಯೇನಸ್ಯ ಪಕ್ಷಾ ಹರಿಣಸ್ಯ ಬಾಹೂ ಉಪಸ್ತುತ್ಯಂ ಮಹಿ ಜಾತಂ ತೇ ಅರ್ವನ್** [ಋ. ೧-೧೬೩-೧]. ಈ ಮಂತ್ರದಲ್ಲಿ ಹಾರಾಡುವ ಕುದುರೆಯ ಆಕೃತಿಯ ವಾಯು ಯಾನದ ವರ್ಣನೆ ಇದೆ. ಇದರ ಎರಡೂ ಪಕ್ಕಗಳಲ್ಲಿ ಗರುಡನಂತಹ ರೆಕ್ಕೆಗಳಿವೆ, ಹರಿಣ ಮೃಗದಂತಹ ನೆಲಮಾರ್ಗದಲ್ಲಿ ಓಡಬಲ್ಲ ಕಾಲುಗಳಿವೆ. ಇದು ಉದಯೋನ್ಮುಖ ಸೂರ್ಯನಂತೆ ಮೇಲಕ್ಕೇರುತ್ತದೆ. ಹೀಗೆ ಮೇಲೆ ಏರುವಾಗ ಶಬ್ದವನ್ನೂ ಮಾಡುತ್ತದೆ. ಇದು ಅಗ್ನಿಯ ಬಲದಿಂದ ಚಲಿಸುತ್ತದೆ ಮತ್ತು ಪ್ರಶಂಸನೀಯವಾಗಿದೆ. ಅಂತರಿಕ್ಷದಲ್ಲಿ ಹಾರಾಡುವ, ಮತ್ತು ನೀರಿನಲ್ಲಿಯೂ ಸುರಕ್ಷಿತವಾಗಿ ಚಲಿಸುವ, ಎಡೆಬಿಡದೆ ಮೂರು ದಿನ ಮತ್ತು ಮೂರು ರಾತ್ರಿಗಳ ದೀರ್ಘ ಸಮಯ, ಸುಖಪೂರ್ವಕವಾಗಿ ನೆಲ, ಜಲ ಮತ್ತು ಆಕಾಶದಲ್ಲಿ ಹೋಗಬಲ್ಲ ಯಾನದ ವರ್ಣನೆಯೂ ಋಗ್ವೇದ ೧-೮-೮ರಲ್ಲಿದೆ. ಆಪಘಾತಗಳಿಂದ ಪಾರಾಗಲು ನೂರಾರು ರಕ್ಷಣೋಪಾಯಗಳಿಂದ ಸುಸಜ್ಜಿತವಾದ, ಅಗ್ನಿಶಕ್ತಿಯಿಂದ ಓಡಬಲ್ಲ ವಿಮಾನದ ವರ್ಣನೆಯೂ ಇಲ್ಲಿದೆ. ವಿಮಾನಗಳನ್ನು ಲೋಹ, ತಾಮ್ರ

* [ವಿ = ವಿಯತ್] ಆಕಾಶ ಅಥವಾ ಆಕಾಶಗಾಮೀ ಪಕ್ಷಿ: [ಮಾನ = ಪರಿತೋಷ, ಸಮಾನತೆ, ಗಮನ, ಚಲನ. ವಿಮಾನ = ಆಕಾಶಗಾಮೀ ಪಕ್ಷಿಯ ಹಾಗೆ ಸಂಚರಿಸುವ ವಾಹನ].

[೩೨] ವೇದಾ ಯೋ ವೀನಾಂ ಪದಮಂತರಿಕ್ಷೇಣ ಪತತಾಂ । ವೇದ ನಾವಃ ಸಮುದ್ರಿಯಃ ॥ [ಋ. ೧-೨೫-೭]

ಮತ್ತು ಬೆಳ್ಳಿಯಿಂದ ರಚಿಸುತ್ತಾರೆ. ಮುನ್ನೂರು ಕೀಲುಗಳಿಂದ [ತ್ರಿಶತಾ ಶಂಕವಃ] ವಿಮಾನವನ್ನು ಜೋಡಿಸುವುದು, ಮತ್ತು ಒಂದು ಗುಂಡಿಯನ್ನು ಒತ್ತಿ ಅದರ ಭಾಗಗಳನ್ನು ಬೇರ್ಪಡಿಸುವುದು, ಮೊದಲಾದ ವಿವರಣೆಗಳೂ, ಮನೋವೇಗದಲ್ಲಿ ಹಾರಾಡಬಲ್ಲ, ವಿದ್ಯುಚ್ಛಕ್ತಿಯಿಂದ ಚಲಿಸುವ, ಅರ್ವತ್ತು ಕಲಾಯಂತ್ರ [propulsir means] ಚಕ್ರ [master controller], ಮೂರು ನಭ್ಯಗಳು [rallars], ಹಿಂದೆ ಮುಂದೆ ಚಲನೆ ಹಾಗೂ ಆಕಾಶದಲ್ಲಿಯೇ ನಿಲ್ಲಿಸುವ ಉಪಾಯಗಳಿಂದ ಯುಕ್ತವಾದ ಉತ್ಕೃಷ್ಟ ಪ್ರಕಾರದ ವಿಮಾನಗಳ ವರ್ಣನೆಯೂ ಋಗ್ವೇದದಲ್ಲಿದೆ. ಯಜುರ್ವೇದದ ಒಂದು ಮಂತ್ರದಲ್ಲಿ ಭೂಮಿಯಾನ, ಅಂತರಿಕ್ಷಯಾನ, ಮತ್ತು ಭೂಗರ್ಭಯಾನದ ಉಲ್ಲೇಖ ಇದೆ [ಯಜುರ್ವೇದ ೬–೨೧].

ವಿಮಾನ ವಿದ್ಯೆಯು ಮಹಾ ಗಂಭೀರ ಶಿಲ್ಪವಿದ್ಯೆಯಾಗಿದೆ. ಸಾಮಾನ್ಯರಿಗೆ ಇದು ಗೊತ್ತಾಗುವುದಿಲ್ಲ. ಈ ವಿಷಯದಲ್ಲಿಯೂ ವೇದಗಳಲ್ಲಿ ಅನೇಕ ಮಂತ್ರಗಳಿವೆ. ಇದು ಕೇವಲ ಕಲ್ಪನೆ ಮಾತಲ್ಲ. ವಾಸ್ತವಿಕತೆ. ಆದರೆ, ಆತ್ಮ–ಶ್ರೇಷ್ಠತ್ವ ಮನೋಭಾವ [superiority complex]ದಿಂದ ಪೀಡಿತರಾದ ಹತ್ತೊಂಬತ್ತನೆಯ ಶತಮಾನದ ಯುರೋಪಿನ ಪಂಡಿತರು ಈ ವಾಸ್ತವಿಕತೆಯನ್ನು ಸ್ವೀಕರಿಸಲಿಕ್ಕೆ ಸಿದ್ಧರಿರಲಿಲ್ಲ. ಐವತ್ತು ವರ್ಷಗಳ ಹಿಂದೆಯೂ ವಿಶ್ವದ ವಿಜ್ಞಾನಿಗಳು, ಪ್ರಾಚೀನ ಕಾಲದಲ್ಲಿ ವಿಜ್ಞಾನದ ಇಂತಹ ಪ್ರಗತಿಯ ಮಾತುಗಳನ್ನು ಸಂದೇಹಪೂರ್ವಕವಾಗಿ ಗಣಿಸುತ್ತಿದ್ದರು. ಈಗ ವಿದೇಶೀಯ ವಿದ್ವಾಂಸರಲ್ಲಿ ಇಂತಹ ದೃಷ್ಟಿಕೋಣವು ಮಾಯವಾದರೂ, ಗೌರಾಂಗ ಪ್ರಭುಗಳು [white-complexioned Rulers, now, Rulers replaced by Scholars or Scientists] ಹೇಳಿದುದೆಲ್ಲಾ ವೇದವಾಕ್ಯವೆಂದು ನಂಬಿರುವ ಭಾರತೀಯ ವಿದ್ವಾಂಸರು ಆಧುನಿಕ ವಿಜ್ಞಾನ ಮತ್ತು ಪ್ರಾಚೀನ ಆರ್ಷ ವಿದ್ಯೆ—ಇವುಗಳ ಕೇವಲ ಮೇಲುಮೇಲಿನ ಪರಿಚಯವನ್ನು ಸಂಪಾದಿಸಿಕೊಂಡ, ಗಂಭೀರ ಅಧ್ಯಯನವಿಲ್ಲದ ಕೆಲವು ಭಾರತೀಯ ಪಂಡಿತಮಾನಿಗಳು ಇಂದೂ ಈ ಸಂದೇಹಭಾವ [scepticism]ದಿಂದ ಪೀಡಿತರಾಗಿದ್ದಾರೆ.

ಈ ವಿಷಯದಲ್ಲಿ ಆಧುನಿಕ ವಿಮಾನಶಾಸ್ತ್ರ [aeronautics] ಪ್ರವೀಣರೂ, ಪ್ರಾಚೀನ ಭಾರತೀಯ ಶಾಸ್ತ್ರ ಗ್ರಂಥಗಳ ಅಧ್ಯಯನ ಮಾಡಿದವರೂ ಆದ ಏಯರ್ ಕಮ್ಯಾಂಡರ್ ಶ್ರೀ ಎಂ. ಎಸ್. ಗೋಯಲ್, ಡಿಲ್ಲಿ, ಇವರ ವಿಚಾರಗಳು ಧ್ಯಾನಾರ್ಹವಾಗಿವೆ. ಪ್ರಾಚೀನ ಕಾಲದಲ್ಲಿ ಭಾರತೀಯರು ವಿಮಾನ ವಿದ್ಯೆಯಲ್ಲಿ ನಿಷ್ಣಾತರಾಗಿದ್ದರೆಂದು ಸಿದ್ಧಪಡಿಸಲು ಇವರು ಅನೇಕ ಪ್ರಮಾಣಗಳನ್ನು ಕೊಟ್ಟಿದ್ದಾರೆ.[೩೩]

(33) "Another remarkable and astonishing feature of the Hindus science of war which would prove that the ancient Hindus cultivated every science to perfection, was that the Hindus could fight battles in the air. It is said that the ancient Hindus 'could navigate the air, and not only navigate it but fight battles in it, like so many war eagles combating for the dominion of the clouds. To be so perfect in aeronautics, they must have known all the arts and sciences relating to the science,

## ಧರ್ಮಜ್ಞಾನ

ವೇದಗಳಲ್ಲಿ ನ್ಯಾಯ, ಸತ್ಯ ಮತ್ತು ನಿಷ್ಪಕ್ಷಪಾತಯುಕ್ತ ಆಚರಣೆಯ ಉಪದೇಶವಿದೆ. ಇದೇ ವೈದಿಕ ಧರ್ಮದ ಲಕ್ಷಣ. ಇದರ ಪಾಲನೆಗಾಗಿ [ಸಂಗಚ್ಛಧ್ವಂ] ಜನರು ಸತ್ಯ, ನ್ಯಾಯ ಮತ್ತು ಪರಸ್ಪರ ಪ್ರೇಮದ ವ್ಯವಹಾರವನ್ನು ಮಾಡಿಕೊಂಡಿರಬೇಕು. ವಿರೋಧವನ್ನು ಬಿಟ್ಟುಬಿಡಬೇಕು. ಹಿಂಸಾಚರಣೆ ಮಾಡಬಾರದು. ಅಭಿಮಾನವನ್ನು ತಾಳಬಾರದು. [ಸಂವದಧ್ವಂ] ಪರಸ್ಪರ ನಿಂದೆ, ವ್ಯರ್ಥವಾದ ವಿವಾದ, ಕಟುವಚನ ಇತ್ಯಾದಿಗಳನ್ನು ತ್ಯಜಿಸಿ ಸದಾ ಸತ್ಯ ಮತ್ತು ಪ್ರಿಯ ವಚನಗಳನ್ನೇ ಆಡಬೇಕು. ಮನುಷ್ಯರು ತಮ್ಮ ವಾಣಿಯನ್ನು ಪರಸ್ಪರ ಸುಖ ಮತ್ತು ಉನ್ನತಿಗಾಗಿ

---

including the strata and currents of the atmosphere, the relative temperature, humidity and density and the specific gravity of the various gases.

"Vimana Vidya was a science which has now completely disappeared. A few years ago, facts concerning this science found in ancient records were rejected as absurd and impossible of belief. But wireless telegraphy and the recent developments in airships have prepared people to entertain the idea of the possibility of human knowledge advancing so far as to make it practicable for men to navigate the air as they navigate the sea. And, a day will come as assuredly as that the day will follow the night, when not only will the ancient Hindu greatness in this science be recognised, but the results achieved by them will again be achieved by men.

"That the ancient Hindus were masters of the science of chemistry, machanics, meteorology is proved by one of the most wonderful of human achievements. This was the Vimana Vidya.

The airships of the western world give us an idea of what vimanas may have been like. Fifty years ago a viman was considered an impossibility. But happily those days of western scepticism are over, and a viman, for its practical advantages, is looked upon as an ideal of scienrific achievement. A European critic says; Viman Vidya (navigation of the air) was a complete science amongst the ancient Hindus. They were its masters and used it for all practical purposes'.

...... Viman Vidya is thus clearly mentioned in the Vedas. (Reference the Yajur Veda (VI.21)."

(Extracts from 'Vedic Scientific Research' by Air Commodore S. N. Goyal, Air Headquarters, New Delhi, 1957. Annexure 6. page 4—5)

ಉಪಯೋಗಿಸಬೇಕು. [**ಸಂ ವೋ ಮನಾಂಸಿ ಜಾನತಾಂ**] ಜನರು ತಮ್ಮ ತಮ್ಮ ಮನಸ್ಸಿನ ವಿಕಾಸವನ್ನು ಸಾಧಿಸುತ್ತಿರಬೇಕು, ಜ್ಞಾನಸಾಧನೆಯಲ್ಲಿರಬೇಕು. ತಾವು ಜ್ಞಾನಿಗಳಾಗಿ ಇತರರ ಬುದ್ಧಿಯನ್ನು ಬೆಳಗಿಸುವ ಕಾರ್ಯವನ್ನು ಮಾಡುತ್ತಿರಬೇಕು. ಒಬ್ಬರಿಗೊಬ್ಬರು ಪ್ರೀತಿ, ನೆಮ್ಮದಿ ಇತ್ಯಾದಿಗಳು ಬೆಳೆಯುವಂತೆ ಪ್ರಯತ್ನಿಸುತ್ತಿರಬೇಕು. [**ದೇವಾ ಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ**] ಯಾವ ರೀತಿಯಲ್ಲಿ ಹಿಂದೆ ಪೂರ್ಣ ಜ್ಞಾನಿಗಳೂ ಧಾರ್ಮಿಕರೂ ಆದ ವಿದ್ವಾಂಸರು ಸರ್ವರಿಗೂ ಭಜನೀಯ ಅಥವಾ ಪೂಜನೀಯ ಪರಮಾತ್ಮನನ್ನು ಉಪಾಸನೆ ಮಾಡಿಕೊಂಡು ಅವನು ಪ್ರಕಾಶಿಸಿದ ವೇದಧರ್ಮ, ಮತ್ತು ವೇದಜ್ಞಾನದ ಆಚರಣೆ ಮತ್ತು ಪ್ರಚಾರ ಮಾಡಿಕೊಂಡು ಬಂದಿರುವರೋ ಅದೇ ರೀತಿಯಲ್ಲಿ ಇತರ ಜನರೂ ನಡೆದುಕೊಂಡು ಬರಬೇಕು. ಯಾಕೆಂದರೆ, ಧರ್ಮಜ್ಞಾನಕ್ಕೆ ಮೂರು ಹೇತುಗಳಿವೆ. ಒಂದನೆಯದಾಗಿ, ಧರ್ಮಾತ್ಮರಾದ ವಿದ್ವಾಂಸರಿಂದ ಉಪದೇಶ ಅಥವಾ ಶಿಕ್ಷಣ; ಎರಡನೆಯದಾಗಿ, ಆತ್ಮಶುದ್ಧಿ, ಮತ್ತು ಸತ್ಯಜ್ಞಾನದ ಜಿಜ್ಞಾಸೆ; ಮತ್ತು ಮೂರನೆಯದಾಗಿ, ಈಶ್ವರೀಯ ಜ್ಞಾನ ವೇದಗಳ ಸ್ವಾಧ್ಯಾಯ.*

ವೇದಗಳು, ಮನುಷ್ಯರು ಸದಾಕಾಲವೂ ನಿರ್ಭಯರಾಗಿ ಪೃಥ್ವಿಯ ಮೇಲೆ ವಿಹರಿಸಬೇಕೆಂದು ಬೋಧಿಸುತ್ತವೆ. ಭಯವು ಮನುಷ್ಯನ ಬಹು ದೊಡ್ಡ ಶತ್ರು. ಭಯಕ್ಕೆ ಕಾರಣ ಮನುಷ್ಯರ ಅಜ್ಞಾನ, ಶರೀರ ಮತ್ತು ಮಾನಸಿಕ ದೌರ್ಬಲ್ಯವಾಗಿದೆ. ಇವುಗಳನ್ನು ಮನುಷ್ಯರು ದೂರ ಮಾಡಿಕೊಳ್ಳಬೇಕೆಂದು ಮಂತ್ರಗಳು ಹೇಳುತ್ತವೆ [ಅಥರ್ವ ೧೯–೧೫–೫,೬]. ಈ ರೀತಿ ಸತ್ಯಾಚರಣೆ, ವೈರಾಗ್ಯ, ವಿದ್ಯೆ, ಬುದ್ಧಿ, ಈಶ್ವರ ಭಕ್ತಿ ಮತ್ತು ನಿರ್ಭಯತೆಗಳು ಧರ್ಮದ ಲಕ್ಷಣಗಳೆಂದು ತಿಳಿದುಕೊಳ್ಳಬೇಕು. ಧರ್ಮದ ಇನ್ನೊಂದು ಲಕ್ಷಣವೆಂದರೆ ಆತ್ಮಸಮ್ಮಾನದ ಭಾವನೆ. ಎಲ್ಲಿ ಜನರು ದೀನರಾಗಿದ್ದಾರೋ ಅಲ್ಲಿ ಧರ್ಮದ ಕ್ಷಯವಾಗಿದೆ ಎಂದು ತಿಳಿದುಕೊಳ್ಳಬೇಕು. ಆದುದರಿಂದ 'ಅದೀನಾಃ ಸ್ಯಾಮಶರದಃಶತಂ' [ಯಜು. ೩೬–೨೪] ಎಂದು ವೈದಿಕ ಪ್ರಾರ್ಥನೆಯು ಹೇಳುತ್ತದೆ.

ಋಗ್ವೇದದ ಒಂದು ಮಂತ್ರವು[೩೪] ಮನುಷ್ಯರು ಗೂಗೆ, ತೋಳ, ನಾಯಿ, ಚಕ್ರವಕ್ಕಿ ಗೃಧ್ರನ ಮತ್ತು ಗರುಡನ ನಡತೆಯನ್ನು ದೂರ ಮಾಡಬೇಕೆಂದು ಹೇಳುತ್ತದೆ. ಗೂಗೆಯು ಬೆಳಕನ್ನು ಬಯಸುವುದಿಲ್ಲ. ಅದಕ್ಕೆ ಕತ್ತಲೆಯಲ್ಲಿಯೇ ಆನಂದ. ಇದೇ ರೀತಿಯ ಸ್ವಭಾವ ಕೆಲವು ಮನುಷ್ಯರಲ್ಲಿಯೂ ಇದೆ. ಅವರಿಗೆ ಜ್ಞಾನಸಂಪಾದನೆಯಲ್ಲಿ ಉತ್ಸುಕತೆ ಇರುವುದಿಲ್ಲ. ಧರ್ಮೋಪದೇಶಗಳಲ್ಲಿ ರುಚಿ ಇಲ್ಲ. ಹೊಟ್ಟೆ ತುಂಬಿದರಾಯಿತು. ಅಂಧವಿಶ್ವಾಸ, ಕಾಳು ರೂಢಿ ಇವುಗಳಲ್ಲಿಯೇ ತೃಪ್ತಿ. ಇದು ಮೂರ್ಖತೆಯ ಲಕ್ಷಣ. ಆದುದರಿಂದ ಧರ್ಮವಿರುದ್ಧ ಮಾತು. ಇದೇ ಗೂಗೆಯ ನಡತೆ.

ತೋಳನ ನಡತೆ ಎಂದರೆ ಕ್ರೋಧ ಮತ್ತು ಹಿಂಸಕ ಸ್ವಭಾವ. ಮನುಷ್ಯರು ಕ್ರೋಧ ಮತ್ತು ಹಿಂಸೆಯನ್ನು ಬಿಟ್ಟುಬಿಡಬೇಕು. ಕ್ಷಮೆ, ಭೂತದಯೆ, ಮತ್ತು

---

* "ತ್ರಯೋಧರ್ಮಸ್ಕಂಧಾ ಯಜ್ಞೋಽಧ್ಯಯನಂ ದಾನಮಿತಿ"—[ಛಾಂದೋಗ್ಯೋಪನಿಷತ್ :– ೨–೨೩–೧.]—ಇದರೊಂದಿಗೆ ಹೋಲಿಸಿ ನೋಡಿರಿ.

[೩೪] ಉಲೂಕಯಾತುಂ ಶುಶೂಲೂಕಯಾತುಂ ಜಹಿ ಶ್ವಯಾತುಮುತ ಕೋಕಯಾತುಂ.........
[ಋಗ್ವೇದ ೭–೧೦೪–೨೨]

ಸಮದೃಷ್ಟಿ—ಇವು ಧರ್ಮದ ಕೆಲವು ಮುಖ್ಯ ಲಕ್ಷಣಗಳು. ಕ್ರೋಧ ಮತ್ತು ಹಿಂಸೆ ಅಧರ್ಮದ ಲಕ್ಷಣಗಳು. ನಾಯಿಯ ನಡತೆ ಎಂದರೆ ದೈನ್ಯತೆ ಅಥವಾ ಆತ್ಮಸಮ್ಮಾನದ ಭಾವನೆಯ ಪೂರ್ಣ ಅಭಾವ. ಇದೂ ಕೂಡ ಅಧರ್ಮ. ಚಕ್ರವಕ್ಕಿಯು ಕಾಮುಕತೆಗೆ ಪ್ರಸಿದ್ಧವಾಗಿದೆ. ಕಾಮುಕತೆಯೂ ಧರ್ಮವಿರುದ್ಧವಾದುದು. ಇದೇ ರೀತಿ ಗರುಡ ಪಕ್ಷಿಯೂ ಗರ್ವಕ್ಕೆ ಹೆಸರುವಾಸಿಯಾಗಿದೆ. ಗರ್ವವು ಮನುಷ್ಯರ ಪತನಕ್ಕೆ ಕಾರಣ ವಾಗುತ್ತದೆ. ಆದುದರಿಂದ ಇದು ಕೂಡ ಧರ್ಮವಲ್ಲ. ಅಂತೆಯೇ ಗೃಧ್ರ (ಹದ್ದು) ಪಕ್ಷಿಯು ಲೋಭತನಕ್ಕೆ ಹೆಸರಾದುದು ಲೋಭಮನುಷ್ಯನನ್ನು ಮಾನವತ್ವದಿಂದ ಜಾರುವಂತೆ ಮಾಡುತ್ತದೆ ಆದ್ದರಿಂದ ಧರ್ಮವಿರುದ್ಧವಾದುದು. ಇಂತಹ ಧರ್ಮವಿರುದ್ಧ ಆಚರಣೆಗಳನ್ನು ಮನುಷ್ಯರು ದೂರ ಮಾಡಬೇಕೆಂದು ವೇದಗಳ ಉಪದೇಶವಾಗಿದೆ.*

ಇನ್ನೊಂದು ಕಡೆಯಲ್ಲಿ ಹಿಂಸೆ, ಕಳ್ಳತನ, ವ್ಯಭಿಚಾರ, ಮದ್ಯಪಾನ, ಜೂಜಾಟ, ಸುಳ್ಳು ಹೇಳುವುದು, ಮತ್ತು ಈ ದುರಭ್ಯಾಸಗಳಿರುವ ಪಾಪಿಗಳ ಸಂಗತಿ—ಇವುಗಳಿಂದಲೂ ಮನುಷ್ಯರು ದೂರ ಸರಿಯಬೇಕೆಂದು ವೇದವು ಹೇಳುತ್ತದೆ.[೩೫] ಈ ವ್ಯಸನಗಳು ಧರ್ಮವಿರುದ್ಧವಾಗಿವೆ. ಇವುಗಳಿಗೆ ಬಲಿಯಾಗದಿರುವುದೇ ಸದಾಚಾರ ಅಥವಾ ಧರ್ಮ.

ಉತ್ತಮ ವಿದ್ಯೆಯನ್ನು ಸಂಪಾದಿಸುವುದು ಮತ್ತು ಅದರ ಪ್ರಚಾರ ಮಾಡುವುದು ಹಾಗೂ ಶ್ರೇಷ್ಠ ಕರ್ಮ ಯಜ್ಞಾದಿಗಳನ್ನು ಮಾಡುವುದು ಮತ್ತು ಮಾಡಿಸುವುದು ಯಾರ ಗುಣಕರ್ಮ ಸ್ವಭಾವವೋ ಅವರಿಗೆ ಬ್ರಾಹ್ಮಣ ವರ್ಣದ ಅಧಿಕಾರವನ್ನೂ, ಶೌರ್ಯ, ಧೈರ್ಯ, ಕಾರ್ಯಕುಶಲತೆ, ದಕ್ಷತೆ, ಬಲ, ಪರಾಕ್ರಮ, ಸೇವಾಭಾವನೆ, ದುಷ್ಟರ ಮರ್ದನ, ಶ್ರೇಷ್ಠರ ಪಾಲನೆ, ರಕ್ಷಣೆ ಇತ್ಯಾದಿ ಗುಣಕರ್ಮ ಸ್ವಭಾವಗಳಿಂದ ಯುಕ್ತರಾದವರಿಗೆ ಕ್ಷತ್ರಿಯ ವರ್ಣದ ಅಧಿಕಾರವನ್ನೂ, ಕೃಷಿ, ಪಶುಪಾಲನೆ, ವ್ಯಾಪಾರ, ಉದ್ಯೋಗಾದಿಗಳಲ್ಲಿ ನಿರತರಾದವರಿಗೆ ವೈಶ್ಯ ವರ್ಣದ ಅಧಿಕಾರವನ್ನೂ ಕೊಡಬೇಕು. ರಾಷ್ಟ್ರದ ಸ್ಥಾಪನೆ, ವ್ಯವಸ್ಥೆ, ರಕ್ಷಣಾದಿಗಳ ಮೂಲಕ ಪ್ರಜೆಗಳ ಉನ್ನತಿ, ಸುಖಶಾಂತಿಗಳಿಗೆ ಕ್ಷತ್ರಿಯರು ಪ್ರಯತ್ನಿಸಬೇಕು. ಎಲ್ಲರೂ ಶ್ರೇಷ್ಠ ಗುಣಗಳನ್ನು ಧಾರಣೆ ಮಾಡಲು ಪ್ರಯತ್ನಿಸಬೇಕು, ಸತ್ಯವಿದ್ಯೆಯ ಪ್ರಚಾರ ಮಾಡಬೇಕು, ಧನಾದಿ ಐಶ್ವರ್ಯದ ವೃದ್ಧಿ, ಅದರ ರಕ್ಷಣೆ ಮತ್ತು ಸುಪಾತ್ರದಾನದಲ್ಲಿ ವಿನಿಯೋಗ ಮಾಡಬೇಕು.[೩೬] ಮನುಷ್ಯರು ವೀರ್ಯ ರಕ್ಷಣೆ, ಉತ್ತಮ ಅನ್ನಪಾನಾದಿಗಳ ಸೇವನೆ, ಮತ್ತು ಸದಾಚಾರದ ನಿಯಮಗಳಿಂದ ಆಯುಷ್ಯ ವೃದ್ಧಿಗೆ ಪ್ರಯತ್ನಿಸಬೇಕು, ಸ್ವಸ್ಥ, ಸುಂದರ ರೂಪಕ್ಕಾಗಿ ಪ್ರಯತ್ನಿಸಬೇಕು, ಮತ್ತು ಉತ್ತಮ ಗುಣ ಮತ್ತು ಶ್ರೇಷ್ಠ ಕರ್ಮಗಳಿಂದ ಹೆಸರು ಗಳಿಸಲು ಪ್ರಯತ್ನಿಸಬೇಕು. ಯಾಕೆಂದರೆ, ಇವರಿಂದ ಇತರರಿಗೂ ಉತ್ತಮ ಗುಣಧಾರಣೆ ಮತ್ತು ಶ್ರೇಷ್ಠ ಕರ್ಮ ಮಾಡುವುದಕ್ಕೆ ಪ್ರೇರಣೆ ದೊರೆಯುತ್ತದೆ. ಶ್ರೇಷ್ಠ ಪುರುಷರ ಹಾಗೂ ಪರಮಾತ್ಮನ ಸ್ತುತಿ, ಕೀರ್ತನೆಗಳನ್ನೂ ಮಾಡಬೇಕು.

---

* ಈ ಬಗ್ಗೆ ವಿಸ್ತೃತ ವಿವರಣೆಗೆ "ಆದರ್ಶ ಮಾನವ" ಎಂಬ ಗ್ರಂಥವನ್ನು ಅವಲೋಕಿಸಿರಿ.

[೩೫] ಸಪ್ತಮರ್ಯಾದಾಃ ಕವಯಸ್ತತಕ್ಷುಃ ......... ॥ ಋ. ೧೦-೫-೬ ॥

[೩೬] ಬ್ರಹ್ಮ ಚ ಕ್ಷತ್ರಂ ಚ ರಾಷ್ಟ್ರಂ ಚ ವಿಶಶ್ಚ ತ್ವಿಷಿಶ್ಚ ಯಶಶ್ಚ, ವರ್ಚಶ್ಚ ದ್ರವಿಣಂ ಚ ॥
[ಅಥರ್ವ. ೧೨-೫-೮]

ಇದರಿಂದ ಶ್ರೇಷ್ಠ ಗುಣಗಳ ಗ್ರಹಣ ಮತ್ತು ಧಾರಣೆಗೆ ಸಹಾಯತೆ ದೊರೆಯುತ್ತದೆ. ಯೋಗಾಭ್ಯಾಸದಿಂದ ಪ್ರಾಣವನ್ನು ದೃಢವನ್ನಾಗಿ ಮಾಡಬೇಕು. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಪರಿಶೀಲಿಸಿ ಸತ್ಯವನ್ನು ಗ್ರಹಣ ಮಾಡಿಕೊಳ್ಳಬೇಕು.[೩೭]

ಆಚಾರ್ಯ ಉಪನಯಮಾನೋ ಬ್ರಹ್ಮಚಾರಿಣಂ [ಅ. ೧೧-೫-೩] ಇತ್ಯಾದಿ ಮಂತ್ರಗಳಲ್ಲಿ ಬ್ರಹ್ಮಚರ್ಯ ಆಶ್ರಮಧರ್ಮದ ವರ್ಣನೆ ಇದೆ. ತಂದೆತಾಯಿಗಳ ಸಂಬಂಧದಿಂದ ಮಕ್ಕಳ ಜನ್ಮವಾಗುತ್ತದೆ. ಇದು ಪ್ರಥಮ ಜನ್ಮ ಮತ್ತು ಪಶುಗಳಿಗೂ ಇದು ಸಮಾನವಾಗಿದೆ. ಮತ್ತೆ ಆಚಾರ್ಯರೂಪೀ ತಂದೆ, ವಿದ್ಯಾರೂಪೀ ತಾಯಿಯಿಂದ ಮನುಷ್ಯರಿಗೆ ದ್ವಿತೀಯ ಜನ್ಮವು ದೊರೆಯುತ್ತದೆ. ಈ ದ್ವಿತೀಯ ಜನ್ಮವನ್ನು ಪಡೆಯದೆ, ಯಾರಿಗೂ ಮನುಷ್ಯತ್ವವು ಪ್ರಾಪ್ತಿಯಾಗುವುದಿಲ್ಲ. ಆದುದರಿಂದ ಪ್ರತಿಯೊಬ್ಬರಿಗೂ ಈ ಜನ್ಮವನ್ನು ಪ್ರಾಪ್ತಿ ಮಾಡಿಕೊಳ್ಳುವುದು ಅತ್ಯಂತ ಆವಶ್ಯಕವಾಗಿದೆ. ಎಂಟನೇ ವರ್ಷ ಪ್ರಾಯದಲ್ಲಿ ಆಚಾರ್ಯ ಕುಲಕ್ಕೆ ಹೋಗಿ, ಅಲ್ಲಿ ಬ್ರಹ್ಮ ಅಂದರೆ ವೇದ ಮತ್ತು ಪರಮಾತ್ಮನ ವಿಚಾರದಲ್ಲಿ ತತ್ಪರರಾಗಬೇಕು. ಇದರಿಂದಾಗಿಯೇ ವಿದ್ಯಾರ್ಥಿಗಳು ಬ್ರಹ್ಮಚಾರಿಗಳೆನ್ನಿಸಿಕೊಳ್ಳುತ್ತಾರೆ.

ಪೂರ್ಣ ವಿದ್ಯೆಯನ್ನು ಸಂಪಾದಿಸಿದ ಬಳಿಕ ಸ್ತ್ರೀ ಪುರುಷರು ತಮ್ಮ ತಮ್ಮ ಯೋಗ್ಯತೆಗನುಸಾರವಾಗಿ, ವಿವಾಹದ ನಿಯಮಕ್ಕನುಸಾರವಾಗಿ ಸ್ವಯಂವರವನ್ನು ಮಾಡಿಕೊಂಡು ಗೃಹಸ್ಥಾಶ್ರಮವನ್ನು ಪ್ರವೇಶ ಮಾಡಬೇಕು. ಪತಿ ಮತ್ತು ಪತ್ನಿಯ ಹೃದಯ ಜಲದಂತೆ ಶಾಂತವಾಗಿರಬೇಕು [ಸಮ ಆಪೋ ಹೃದಯಾನಿ ನೌ][೩೮]. ಮತ್ತು ಬೇರೆ ಬೇರೆ ನದಿಗಳ ನೀರನ್ನು ಬೆರೆಸಿದ ಮೇಲೆ ಅವು ಬೆರೆತು ಒಂದಾಗುವಂತೆ ದಂಪತಿಗಳ ಹೃದಯಗಳು ಒಂದಾಗಿಯೇ ಹೋಗಬೇಕು. ಗ್ರಾಮ ನಿವಾಸಿಗಳನ್ನು, ವನವಾಸಿಗಳನ್ನು, ಸಭಾಪುರುಷರನ್ನು ಯಥಾಯೋಗ್ಯ ಸೇವೆಯಿಂದ ತೃಪ್ತಿ ಮಾಡಬೇಕು. ಇಂದ್ರಿಯಗಳ ಶಕ್ತಿಯನ್ನು ಬೆಳೆಸಬೇಕು. 'ಅನೃಣಾ ಅಸ್ಮಿನ್ನನೃಣಾ ಪರಸ್ಮಿನ್ ತೃತೀಯೇ ಲೋಕೇ ಅನೃಣಾಃ ಸ್ಯಾಮ...... [ಅ. ೬-೧೧೭-೩೦]. ಅಂದರೆ, ಗೃಹಸ್ಥಾಶ್ರಮದಲ್ಲಿ ಸ್ತ್ರೀ ಪುರುಷರು ದೇವಋಣ, ಪಿತೃಋಣ ಮೊದಲಾದುವುಗಳಿಂದ ಮುಕ್ತರಾಗಲಿಕ್ಕೆ ಪ್ರಯತ್ನ ಮಾಡಬೇಕಲ್ಲದೆ, ಸಾಕಷ್ಟು ಧನಧಾನ್ಯಗಳನ್ನು ಸಂಗ್ರಹಿಸಿ, ಇನ್ನೊಬ್ಬರಿಗೆಋಣ ಕೇಳಿ ತಿನ್ನುವ ಪರಿಸ್ಥಿತಿ ಬರದಂತೆ ನೋಡಬೇಕು. "ಪುಷ್ಟಿಂ ಪಶೂನಾಂ ಪರಿ ಜಗ್ರಭಾಹಂ......" [ಅಥರ್ವ ೧೯-೩೧-೫]. ಅಂದರೆ, ಗೌ ಆದಿ ಪಶುಗಳನ್ನೂ ಚೆನ್ನಾಗಿ ಸಾಕಿ ಸಾಕಷ್ಟು ಹಾಲು ಬೆಣ್ಣೆ ಇತ್ಯಾದಿಗಳನ್ನು ಉತ್ಪನ್ನ ಮಾಡಬೇಕು. ಧಾನ್ಯ ಮತ್ತು ಔಷಧಿಗಳನ್ನು ವೃದ್ಧಿ ಮಾಡಬೇಕು. ಸೇವಕ, ಅನಾಥ, ವಿಧವೆ, ವೃದ್ಧ ಜನರನ್ನು ವಿಕಲಾಂಗರನ್ನೂ ಸಾಕಬೇಕು. "ಸಾಯಂ ಸಾಯಂ ಗೃಹಪತಿರ್ನೋ ಅಗ್ನಿಃ ಪ್ರಾತಃ ಪ್ರಾತಃ ಸೌಮನಸ್ಯದಾತಾ......" [ಅಥರ್ವ ೧೯-೫೫-೩,೪]. ಅಂದರೆ, ಗೃಹಸ್ಥಾಶ್ರಮದಲ್ಲಿ ಪ್ರಾತಃ ಮತ್ತು ಸಾಯಂಕಾಲ ಎರಡೂ ಹೊತ್ತು ಅಗ್ನಿಹೋತ್ರಗಳು ನಡೆಯಬೇಕು. ಇದರಿಂದ ಗೃಹಗಳಲ್ಲಿ ನೆಮ್ಮದಿಯು ಬೆಳೆಯುತ್ತದೆ.

---

[೩೭] ಆಯುಷ್ಟ ರೂಪಂ ಚ ನಾಮ ಚ ಕೀರ್ತಿಶ್ಚ ಪ್ರಾಣಶ್ಚಾಪಾನಶ್ಚ ಚಕ್ಷುಶ್ಚ ಶ್ರೋತ್ರಂ ಚ ॥ [ಅಥರ್ವ. ೧೨-೫-೯]

[೩೮] ಯದ್ ಗ್ರಾಮೇ ಯದರಣ್ಯೇ'ಯತ್ಸಭಾಯಾಂ......... ॥ ಯಜು. ೩-೪೫ ॥

ಇದನ್ನು ದೇವಯಜ್ಞವೆಂದು ಹೇಳುತ್ತಾರೆ. ಇದೇ ರೀತಿ ಪಿತೃಯಜ್ಞ, ಬಲಿವೈಶ್ವ ದೇವ ಇತ್ಯಾದಿಗಳ ವರ್ಣನೆಯೂ ವೇದದಲ್ಲಿದೆ.[೩೯] ಇವುಗಳು ಗೃಹಸ್ಥಾಶ್ರಮಿಗಳ ಧರ್ಮ ಅಂದರೆ ಕರ್ತವ್ಯವಾಗಿವೆ.

ಗೃಹಸ್ಥಾಶ್ರಮದಂತೆ, ವಾನಪ್ರಸ್ಥ ಮತ್ತು ಸಂನ್ಯಾಸಾಶ್ರಮ, ಗರ್ಭಾದಾನಾದಿ ಸಂಸ್ಕಾರಗಳು ರಾಜನ ಧರ್ಮ, ಪ್ರಜೆಗಳ ಧರ್ಮ ಇತ್ಯಾದಿಗಳ ಜ್ಞಾನವೂ ವೇದಮಂತ್ರ ಗಳಲ್ಲಿ ಪೂರ್ಣವಾಗಿದೆ.

## ಕರ್ಮಜ್ಞಾನ

ಯಾವ ರೀತಿಯಲ್ಲಿ ವೇದಗಳಲ್ಲಿ ಬ್ರಹ್ಮಜ್ಞಾನ, ಸೃಷ್ಟಿಜ್ಞಾನ, ಮತ್ತು ಧರ್ಮ ಜ್ಞಾನದ ವರ್ಣನೆಯು ಪೂರ್ಣವಾಗಿ ಇದೆಯೋ, ಅದೇ ರೀತಿ ಇವುಗಳಲ್ಲಿ ಕರ್ಮ ಜ್ಞಾನವೂ ಪೂರ್ಣವಾಗಿದೆ. ವೇದಗಳಲ್ಲಿ ಕರ್ಮವನ್ನು ಯಜ್ಞವೆಂದು ಕರೆಯಲಾಗಿದೆ. ಮೂರು ಪ್ರಕಾರದ ಯಜ್ಞಗಳ ವರ್ಣನೆಯನ್ನು ಇಲ್ಲಿ ನಾವು ನೋಡಬಹುದು. ಅಗ್ನಿ ಹೋತ್ರದಿಂದ ಹಿಡಿದು ಅಶ್ವಮೇಧ ಪರ್ಯಂತ ಕರ್ಮಕಾಂಡವು ಒಂದನೆಯ ರೀತಿಯ ಯಜ್ಞ; ಪ್ರಕೃತಿಯಿಂದ ಹಿಡಿದು ಪೃಥ್ವಿಯ ತನಕ ಜಗತ್ತಿನ ರಚನೆಯ ರಹಸ್ಯ ಮತ್ತು ಅದರ ಜ್ಞಾನದಿಂದ ಶಿಲ್ಪಾದಿ ವಿದ್ಯೆಗಳ ಉನ್ನತಿ ಮತ್ತು ಪ್ರಚಾರ, ಇವು ಎರಡನೆಯ ರೀತಿಯ ಯಜ್ಞ; ಸತ್ಸಂಗ, ಸ್ವಾಧ್ಯಾಯಾದಿಗಳು, ಮತ್ತು ಯೋಗಾಭ್ಯಾಸ—ಇದು ಮೂರನೆಯ ರೀತಿಯ ಯಜ್ಞವಾಗಿದೆ. ಈ ವಿಷಯಗಳನ್ನೇ ಮಂತ್ರಗಳ ದೇವತೆ ಗಳೆನ್ನುತ್ತಾರೆ. ಜ್ಞಾನ ಮತ್ತು ಕರ್ಮದ ಉಚಿತ ಸಮನ್ವಯವೇ ವಿದ್ಯೆ.

'ಯೋ ಯಜ್ಞಃ ವಿಶ್ವತಸ್ತಂತುಭಿಸ್ತ ಏಕಶತಂ......' ಋ.] ೧೦-೧೩೦ ಇತ್ಯಾದಿ ಮಂತ್ರಗಳಲ್ಲಿ ನೂರಾರು ಪ್ರಕಾರದ ಯಜ್ಞಗಳ ವರ್ಣನೆ ಇದೆ. 'ಆಯು ರ್ಯಜ್ಞೇನ ಕಲ್ಪತಾಂ......' ಇತ್ಯಾದಿ ಯಜುರ್ವೇದೀಯ ಮಂತ್ರಗಳಲ್ಲಿ ಯಜ್ಞ ದಿಂದ ಏನೇನು ಲಾಭವಾಗುತ್ತದೆ, ಎಂದು ಹೇಳಿದೆ [ಯಜು. ೧೮-೨೯].

'ಯಜ್ಞೇನ ಯಜ್ಞಮಯಜಂತ ದೇವಾಃ...[ಋ. ೧೦-೯೦-೧೬] ಎಂಬ ಮಂತ್ರದಲ್ಲಿ ವಿದ್ವಾಂಸರು ಯಜ್ಞಮಯ ಕರ್ಮ ಅರ್ಥಾತ್, ಲೋಭ, ಮೋಹ, ಅಥವಾ ಕರ್ಮಫಲದ ಅಭಿಲಾಷೆಗಳನ್ನು ಇಟ್ಟುಕೊಳ್ಳದೆ, ಕೇವಲ ಕರ್ತವ್ಯಬುದ್ಧಿಯಿಂದ ವೇದೋಕ್ತಕಾರ್ಯಗಳನ್ನು ಮಾಡಿಕೊಂಡು, ಪರಮಾತ್ಮನನ್ನು ಆರಾಧಿಸುತ್ತಾರೆ, ಇದ ರಿಂದಲೇ ಪೃಥ್ವಿಯು ಸುಖ, ಶಾಂತಿ, ಮತ್ತು ಸಮೃದ್ಧಿಯಿಂದ ತುಂಬಿ ಸ್ವರ್ಗವಾಗುತ್ತದೆ ಎಂದು ಹೇಳಿದೆ.

## ಉಪಾಸನೆ

ಮುಕ್ತಿ ಎಂದರೆ ಸಾಂಸಾರಿಕ ತಾಪತ್ರಯಗಳಿಂದ ಬಿಡುಗಡೆಯಾಗುವ ಉಪಾಯವೇ ಉಪಾಸನೆಯಾಗಿದೆ. ಉಪಾಸನೆಯಿಂದಲೇ ಮನುಷ್ಯರು ಜನ್ಮ ಮರಣಗಳ ದುಃಖ ದಿಂದ ಪಾರಾಗಬಲ್ಲರು. ಮುಕ್ತಿ ಸಾಧನೆ ಅಥವಾ ಉಪಾಸನೆ ಕೇವಲ ಮನುಷ್ಯ

---

[೩೯] ಯಜು. ೧೯-೫೫, ಅಥರ್ವ. ೧೯-೫೫-೬; ೧೫-೧೦-೧, ೨, ೧೫-೧೧-೧, ೨ ॥

ಯೋನಿಯಲ್ಲಿ ಮಾತ್ರ ಸಂಭವ. ಅನೇಕ ಜನ್ಮಗಳ ಶುಭ ಕರ್ಮಗಳ ಫಲಸ್ವರೂಪವಾಗಿ ಜೀವರಿಗೆ ಎಲ್ಲಾ ಯೋನಿಗಳಿಗಿಂತಲೂ ಉತ್ತಮವಾದ ಮನುಷ್ಯ ಯೋನಿಯು ದೊರೆಯುತ್ತದೆ. ಪುನಃ ಅದು ಯಾವಾಗ ದೊರೆಯುವುದೆಂದು ಹೇಳಬರುವುದಿಲ್ಲ. ಆದುದರಿಂದ ಇದೇ ಜೀವನದಲ್ಲಿ ಮನುಷ್ಯರು ಮೋಕ್ಷ ಸಾಧನೆಯನ್ನು ಮಾಡಬೇಕು. ಬಾರಿ ಬಾರಿ ಈ ಸಂದರ್ಭವು ಸಿಗುವುದಿಲ್ಲ. ಆದುದರಿಂದ—

ಯುಂಜಂತಿ ಬ್ರಧ್ನಮರುಷಂ ಚರಂತಂ ಪರಿ ತಸ್ಥುಷಃ
ರೋಚಂತೇ ರೋಚನಾ ದಿವಿ ॥ [ಋ. ೧-೬-೧]

ಅರ್ಥಾತ್, ವಿದ್ವಾಂಸರೂ ಯೋಗಿಗಳೂ ಆದ ಭಕ್ತರು ಸರ್ವ ವ್ಯಾಪಕನೂ, ಸರ್ವಜ್ಞನೂ, ಕರುಣಾಳುವೂ, ಪರಮಾನಂದದಾಯಕನೂ ಆದ ಪರಮಾತ್ಮನಲ್ಲಿ ತಮ್ಮ ತಮ್ಮ ಆತ್ಮಗಳನ್ನು ಉಪಾಸನೆಯ ಮೂಲಕ ಸ್ಥಾಪಿಸುತ್ತಾರೆ. ಆಗ ಅವರ ಆತ್ಮಗಳು ಅವಿದ್ಯಾದಿ ದೋಷರೂಪೀ ಅಂಧಕಾರದಿಂದ ಬಿಡುಗಡೆ ಹೊಂದಿ ಸರ್ವ ಪ್ರಕಾಶಕನಾದ ಪರಮೇಶ್ವರನ ಘನಿಷ್ಠ ಸಂಪರ್ಕ ಪಡೆದು, ಅಸದೃಶವಾದ ಆನಂದದಿಂದ ಕೂಡಿ ಬೆಳಗುತ್ತದೆ.

ಸೀರಾ ಯುಂಜಂತಿ ಕವಯೋ ಯುಗಾ ವಿ ತನ್ವತೇ ಪೃಥಕ್
ಧೀರಾ ದೇವೇಷು ಸುಮ್ನಯಾ ॥ [ಯಜು. ೧೨-೬೭]

ಎಂದರೆ, ಪರಮಾತ್ಮನ ಧ್ಯಾನದಲ್ಲಿ ಆಸಕ್ತರಾದ ವಿದ್ವಾಂಸರು ಪ್ರಾಣಾಯಾಮದ ಮೂಲಕ, ನಾಡಿಗಳಲ್ಲಿ ಯುಕ್ತನಾಗಿರುವ ಆತ್ಮನ ಮೂಲಕ ಅವನ ಧಾರಣೆಯನ್ನು ಮಾಡುತ್ತಾರೆ, ಮತ್ತು ಯೋಗಯುಕ್ತವಾದ ಕರ್ಮದಲ್ಲಿ ತತ್ಪರರಾದ ಈ ಭಕ್ತರು ತಮ್ಮ ಜ್ಞಾನ ಮತ್ತು ಆನಂದವನ್ನು ವೃದ್ಧಿ ಮಾಡಿಕೊಳ್ಳುತ್ತಾರೆ.

ಅಷ್ಟಾವಿಂಶಾನಿ ಶಿವಾನಿ ಶಗ್ಮಾನಿ ಸಹಯೋಗಂ
ಭಜಂತು ಮೇ............ [ಅಥರ್ವ. ೧೯-೧-೨]

ಅಂದರೆ, ಯೋಗಾಭ್ಯಾಸಪೂರ್ವಕ ಪರಮಾತ್ಮನ ಉಪಾಸನೆ ಮಾಡಿದರೆ, ಅವನ ಕೃಪೆಯಿಂದ ಹತ್ತು ಇಂದ್ರಿಯಗಳು, ಹತ್ತು ಪ್ರಾಣಗಳು, ಮನ, ಬುದ್ಧಿ, ಚಿತ್ತ, ಅಹಂಕಾರ, ಮತ್ತು, ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ ಈ ಇಪ್ಪತ್ತೆಂಟು ತತ್ವಗಳು ಕಲ್ಯಾಣಕಾರಿಯಾಗುತ್ತವೆ. ಈ ರೀತಿ ಉಪಾಸಕರ ಯೋಗಕ್ಷೇಮಗಳು ಸಿದ್ಧಿಸುತ್ತವೆ.

ಪರಮಾತ್ಮನ ಉಪಾಸನೆಯಲ್ಲಿ ಅಂಧಶ್ರದ್ಧೆ ಮತ್ತು ಅಜ್ಞಾನಕ್ಕೆ ಎಡೆ ಇಲ್ಲ. ಸ್ವಾರ್ಥ, ಕಾಮ, ಕ್ರೋಧಾದಿಯುಕ್ತ ಪ್ರಾರ್ಥನೆಗೂ ಎಡೆ ಇಲ್ಲ. ಅಹಂಕಾರ ಅಭಿಮಾನ ತಾನು ತನ್ನದೆಂಬ ಭಾವನೆಗಳು, ಅಂತಃಕರಣವನ್ನು ಮಲಿನ ಮಾಡಿ, ಅದರಲ್ಲಿ ಪರಮಾತ್ಮನ ಅನುಭೂತಿ ಮೂಡದಂತೆ ಮಾಡುತ್ತವೆ. ಈ ದೋಷಗಳು ಪರಮಾತ್ಮನ ಕೃಪಾಧಾರೆಯು ಆತ್ಮನ ಕಡೆಗೆ ಹರಿಯದಂತೆ ತಡೆಗಟ್ಟುತ್ತವೆ. ಪಾಖಂಡ ಪ್ರಾರ್ಥನೆ,

ಭಜನೆಗಳೂ ಉಪಾಸನೆಯ ಮಾರ್ಗದಲ್ಲಿ ಸಿರರ್ಥಕವಾಗಿವೆ. ವೇದವಾಣಿಯ ಮೂಲಕ ಪರಮಾತ್ಮನು ಜನರು ಯಾವ ರೀತಿಯಲ್ಲಿ ಉಪಾಸನೆ ಮಾಡಬೇಕೆಂದು ಹೇಳುತ್ತಾನೆ—

ಯುನಕ್ತ ಸೀರಾವಿ ಯುಗಾ ತನುಧ್ವಂ ಕೃತೇಯೋನೌ

ವಪತೇಹ ಬೀಜಂ ......... [ಯಜು. ೧೨-೬೮]

ಅಂದರೆ, ಉಪಾಸಕರು, ಯೋಗಾಭ್ಯಾಸ ಪೂರ್ವಕ ಪರಮಾತ್ಮನಲ್ಲಿ ಆತ್ಮಯುಕ್ತರಾಗಬೇಕು. ಅವರ ಕರ್ಮಗಳು ಉಪಾಸನೆಗೆ ಯೋಗ್ಯ ಅಂದರೆ ಪವಿತ್ರವಾಗಿರಬೇಕು, ಮನಸ್ಸು ಕೂಡಾ ಸ್ಥಿರವಾಗಿರಬೇಕು; ಮನಸ್ಸು ಪರಮಾತ್ಮನ ಧ್ಯಾನದಲ್ಲಿ ಸ್ಥಿರವಾಗಬೇಕಾದರೆ ಪ್ರಾಣಾಯಾಮವು ಅಗತ್ಯವಾಗಿದೆ: ಶುದ್ಧಾಂತ ಕರಣದಿಂದ ಪರಮಾನಂದ ಮತ್ತು ಸೃಷ್ಟಿ ರಚನೆಯ ಮೂಲ ಕಾರಣನಾದ ಪರಮಾತ್ಮನಲ್ಲಿ [ವಪತೇಹ ಬೀಜಂ] ವಿಧಿಪೂರ್ವಕ ಉಪಾಸನೆಯ ಮೂಲಕ ವಿಜ್ಞಾನರೂಪ ಬೀಜವನ್ನು ಬಿತ್ತಬೇಕು; ಮತ್ತು [ಗಿರಾ ಚ] ವೇದವಾಣಿಯ ಮೂಲಕ ಹಾಗೂ ವೇದವಿದ್ಯೆಯ ಸಹಾಯತೆಯಿಂದ, ಸ್ತುತಿಪ್ರಾರ್ಥನಾದಿ ರೂಪೀ ಜಲಸೇಚನೆಯಿಂದ, ಬೀಜವು ಬೆಳಕಿಗೆ ಬರುವಂತೆ ಮಾಡಬೇಕು; ಸತತವೂ ಈ ರೀತಿ ನಡೆಸಿಕೊಂಡು ಬಂದರೆ, ಆ ವಿಜ್ಞಾನವಾಯ ಅಥವಾ ಬುದ್ಧಿಪೂರ್ವಕವಾದ ಭಕ್ತಿಯ ಬೀಜವು ಬೆಳೆದು ಶುದ್ಧ ಆನಂದರೂಪ ಪಕ್ವ ಫಲವನ್ನು ಕ್ಷಿಪ್ರದಲ್ಲಿಯೇ ಕೊಡುತ್ತದೆ. ಅತ್ಯಂತ ನಿಕಟನಾಗಿದ್ದರೂ, ಅಜ್ಞಾನಾದಿ ದೋಷಗಳಿಂದ ದೂರವಾಗಿ ತೋರುವ ಪರಮಾತ್ಮನು, ಈ ರೀತಿಯ ಉಪಾಸನೆಯಿಂದ ಉಕ್ತ ದೋಷಗಳನ್ನೆಲ್ಲಾ ದೂರ ಮಾಡಿ ಆನಂದ, ಶಾಂತಿ ಮೊದಲಾದ ಗುಣಗಳಿಂದ ಕೂಡಿದ ತನ್ನ ಕೃಪೆಯಿಂದ ಉಪಾಸಕರನ್ನು ಕೃತಕೃತ್ಯರನ್ನಾಗಿ ಮಾಡುತ್ತಾನೆ. ಆದುದರಿಂದ ಜನರು, ಈ ಯೋಗಮಾರ್ಗದಲ್ಲಿ ನಡೆದು ಮೋಕ್ಷಸುಖವನ್ನು [ವಿತನುಧ್ವಂ] ವಿಸ್ತರಿಸಬೇಕು.

ಪರಮಾತ್ಮನು ನೇರವಾಗಿ ಮನುಷ್ಯರಿಗೆಲ್ಲಾ ಈ ರೀತಿ ಉಪದೇಶ ಮಾಡುತ್ತಾನೆ—

ನಮಸ್ತೇ ಅಸ್ತು ಪಶ್ಯತ ಪಶ್ಯ ಮಾ ಪಶ್ಯತ ॥ [ಅಥರ್ವ. ೧೩-೪-೪೮]

ಅಂದರೆ, ಎಲ್ಲರೂ ಪರಮಾತ್ಮನನ್ನು ಅಹಂಕಾರ, ದರ್ಪ, ಅಭಿಮಾನಾದಿಗಳನ್ನು ತೊರೆದು ಪ್ರೇಮಪೂರ್ವಕವಾಗಿ, ಪರಮ ಮಿತ್ರನಂತೆ ಅಂತಃಕರಣದಲ್ಲಿ ನೋಡಬೇಕು. ಅವನ ಆಜ್ಞೆ, ಅವನು ಕರುಣಿಸಿದ ವೇದವಿದ್ಯೆ—ಇವುಗಳನ್ನು ಸರಿಯಾಗಿ ತಿಳಿದುಕೊಂಡು ಅದೇ ರೀತಿ ಆಚರಣೆ ಕೂಡ ಮಾಡಬೇಕು. ಮಕ್ಕಳು ತಂದೆಯನ್ನು ಕೇಳುವಂತೆ ಮನುಷ್ಯರೆಲ್ಲಾ ಪರಮ ಹಿತನಾದ ಪರಮಾತ್ಮನಲ್ಲಿ ಅವನ ಕೃಪಾದೃಷ್ಟಿ ತಮ್ಮ ಮೇಲೆ ಸದಾಕಾಲವೂ ಇರಲೆಂದು ವಿನಯ ಮಾಡಿಕೊಳ್ಳಬೇಕು.

ಈ ರೀತಿ ನೂರಾರು ಮಂತ್ರಗಳಲ್ಲಿ ಉಪಾಸನೆಯ ಜ್ಞಾನವು ವೇದದಲ್ಲಿದೆ. ಯೋಗದರ್ಶನದಲ್ಲಿ ಇದರ ವಿಸ್ತಾರಪೂರ್ವಕ ವಿಧಿ ವ್ಯಾಖ್ಯಾನಗಳಿವೆ.

---

ವಿ.ಸೂ.: ಪುಟ ೭೭ರಲ್ಲಿನ 'ಸೀರಾ ಯುಂಜಂತಿ' ಮತ್ತು ೭೮ರಲ್ಲಿನ 'ಯುನಕ್ತಸೀರಾ'—ಎಂಬ ಮಂತ್ರಗಳು ಕೃಷಿಪರಕವೆಂದು ಬಹು ಜನ ವಿದ್ವಾಂಸರ ಮತವಿದ್ದರೂ, ಈ ಮಂತ್ರಗಳಿಗೆ ಉಪಾಸನಾಪರಕ ಅರ್ಥ ವೇದಗಳು ಪ್ರಧಾನತಃ ಆಧ್ಯಾತ್ಮಿಕ ವಿದ್ಯಾಯುಕ್ತ. ಆದುದರಿಂದ ಹೋಲಿಕೆಯಿಲ್ಲ.

## ಪುನರ್ಜನ್ಮ

ಈ ಪ್ರಪಂಚದಲ್ಲಿ ಮುಖ್ಯವಾಗಿ ಎರಡು ಪ್ರಕಾರದ ಜನ್ಮಗಳನ್ನು ನಾವು ನೋಡುತ್ತೇವೆ. ಒಂದನೆಯದಾಗಿ ಮನುಷ್ಯ ಜನ್ಮ ಮತ್ತು ಎರಡನೆಯದಾಗಿ ಪಶು, ಪಕ್ಷಿ, ಕೀಟ, ಮರಬಳ್ಳಿ ಇತ್ಯಾದಿ ನೀಚ ವರ್ಗದ ಜನ್ಮ. ಮನುಷ್ಯ ಜನ್ಮದಲ್ಲಿಯೂ ಮುಖ್ಯವಾಗಿ ಮೂರು ಭೇದಗಳಿವೆ. ಯಥಾ--ಪಿತೃ, ದೇವ, ಮತ್ತು ಸಾಮಾನ್ಯ ಮನುಷ್ಯರು* ಪಿತೃಗಳೆಂದರೆ ಜ್ಞಾನಿಗಳು, ಋಷಿಗಳು; ದೇವ ಎಂದರೆ ವಿದ್ವಾಂಸರು. ಪುಣ್ಯ ಅಧಿಕ ಅಥವಾ ಪಾಪ-ಪುಣ್ಯಗಳು ಸರಿಸಮಾನವಾಗಿದ್ದರಿಂದ ಮನುಷ್ಯ ಜನ್ಮವೂ, ಪುಣ್ಯ ಕಡಿಮೆ, ಪಾಪ ಅಧಿಕವಾಗಿದ್ದುದರಿಂದ ನೀಚ ಜನ್ಮಗಳೂ ಒದಗುತ್ತವೆ. ಈ ರೀತಿ ಜೀವರು ತಮ್ಮ ತಮ್ಮ ಕರ್ಮಫಲಗಳನ್ನು ಅನುಭವಿಸುತ್ತಾರೆ, ಮತ್ತು ಬಾರಿಬಾರಿ ತಂದೆ ತಾಯಿಗಳ ಶರೀರವನ್ನು ಪ್ರವೇಶ ಮಾಡಿ ಶರೀರ ಧಾರಣ ಮತ್ತು ಶರೀರ ತ್ಯಾಗ ಎಂಬ ಜನ್ಮ ಮರಣದ ಚಕ್ರಕ್ಕೊಳಗಾಗಿರುತ್ತಾರೆ."°

ಜೀವಾತ್ಮರು ಶರೀರವನ್ನು ಬಿಟ್ಟು ಹೋದ ಮೇಲೆ, ಅಂದರೆ, ಮನುಷ್ಯಾದಿ ಪ್ರಾಣಿಗಳು ಸತ್ತಮೇಲೆ, ಪೃಥ್ವಿ ಮೊದಲಾದ ಪದಾರ್ಥಗಳಲ್ಲಿ ಸಂಚರಿಸುತ್ತಾ ತಮ್ಮ ತಮ್ಮ ಕರ್ಮಗಳಿಗನುಸಾರವಾಗಿ ಮತ್ತು ಪರಮಾತ್ಮನ ವ್ಯವಸ್ಥೆ ಪ್ರಕಾರ ಪುನಃ ಇನ್ನೊಂದು ಜನ್ಮವನ್ನು ಪಡೆಯುತ್ತಾರೆ.[೪೧] ಕರ್ಮಕ್ಕನುಸಾರವಾಗಿ ಪರಮಾತ್ಮನ ಪುನರ್ಜನ್ಮ ವ್ಯವಸ್ಥೆಯ ವರ್ಣನೆ ಹೀಗಿದೆ--

ಉಗ್ರಶ್ಚ ಭೀಮಶ್ಚ ಧ್ವಾಂತಶ್ಚ ಧುನಿಶ್ಚ ।
ಸಾಸಹ್ವಾಂಶ್ಚಾಭಿಯುಗ್ವಾ ಚ ವಿಕ್ಷಿಪಃ ಸ್ವಾಹಾ ॥ [ಯಜು. ೩೯-೭]

ಅರ್ಥಾತ್, ಹಿಂಸಕರೂ, ದುಷ್ಟ ಪಾಪಿಗಳೂ, ಉಗ್ರ ಅಂದರೆ ಕ್ರೂರ ವ್ಯಾಘ್ರಾದಿಗಳಾಗಿಯೂ, ಧರ್ಮಾಚರಣೆಯ ಸ್ವಭಾವದವರು ಶಾಂತ ಪ್ರಕೃತಿಯ ಯೋನಿಯಲ್ಲಿಯೂ, ಭಯಂಕರ ಸ್ವಭಾವದವರು ಅದೇ ಸ್ವಭಾವದ ಜೀವಿಗಳಾಗಿಯೂ, ಶಾಂತ ಪ್ರಕೃತಿಯವರು ಸತ್ಪುರುಷರಾಗಿಯೂ, ಇನ್ನೊಬ್ಬರಿಗೆ ಅಭಯದಾನ ಮಾಡುವವರು ಅಥವಾ ಇನ್ನೊಬ್ಬರ ಪ್ರಾಣರಕ್ಷಣೆಯಲ್ಲಿ ತತ್ಪರರಾದ ವ್ಯಕ್ತಿಗಳು ನಿರ್ಭಯರಾಗಿಯೂ, ವಿದ್ಯಾಶೂನ್ಯರು ಅಂಧಕಾರದಲ್ಲಿ ಅಂದರೆ ಜಡಪ್ರಕೃತಿಯ ಯೋನಿಗಳಲ್ಲಿಯೂ, ವಿದ್ವಾಂಸರೂ, ಯೋಗಿಗಳೂ ಜ್ಞಾನಿಗಳಾಗಿಯೂ. ತೇಜಸ್ವಿಗಳಾಗಿಯೂ, ಅಜಿತೇಂದ್ರಿಯರು ನಾಯಿ, ಕಪೋತಾದಿ ಚಂಚಲ ಯೋನಿಗಳಲ್ಲಿಯೂ ಜಿತೇಂದ್ರಿಯರು ಧೃತಿ ಸಂಪನ್ನರಾಗಿಯೂ, ಸ್ಥಿರಬುದ್ಧಿಯ ವಿದ್ವಾಂಸರಾಗಿಯೂ ತಮ್ಮ ತಮ್ಮ ಕರ್ಮಫಲಗಳನ್ನು ಸಂಸ್ಕಾರರೂಪದಲ್ಲಿ ಹೊಂದಿಕೊಂಡು ಪರಮಾತ್ಮನ ಸೃಷ್ಟಿ ವ್ಯವಸ್ಥೆ ಮತ್ತು ಕರ್ಮಫಲದ ಸಿದ್ಧಾಂತಕ್ಕನುಸಾರವಾಗಿ ವಿಶೇಷವನ್ನು ಪಡೆದು ಪುನರ್ಜನ್ಮ ತಾಳಿಕೊಂಡು

---

* ಪಿತೃಯಾನ, ದೇವಯಾನ, ಸಾಧಾರಣ ಮಾನವ ಯಾನಗಳ ಆಧಾರದಿಂದಾಗುವ ಭೇದವಿವು. ಇವುಗಳಲ್ಲಿ ಯಾನಪರಿವರ್ತನಕ್ಕೆ ಅವಕಾಶವಿದೆ.

[೪೦] ದ್ವೇ ಸೃತೀ ಅಶೃಣವಂ ಪಿತೃಣಾಮಹಂ ದೇವಾನಾಮುತ ಮರ್ತ್ಯಾನಾಂ । ತಾಭ್ಯಾಮಿದಂ ವಿಶ್ವಮೇಜತ್ಸಮೇತಿ ಯದಂತರಾ ಪಿತರಂ ಮಾತರಂ ಚ ॥ ಯಜು. ೧೯-೪೭ ॥

[೪೧] ಪ್ರಜಾಪತಿಃ ಸಂಭ್ರಿಯಮಾಣಃ ಸಮ್ರಾಟ್ ಸಂಭೃತೋ ವೈಶ್ವದೇವಃ......... ॥
[ಯಜು. ೩೯-೫]

ಸುಖದುಃಖಗಳನ್ನು ಅನುಭವಿಸಿಕೊಂಡಿರುತ್ತಾರೆ. ವೇದಬೋಧನದ ಪರಿಣಾಮವಾಗಿ ಮಾನವ ಸಮಾಜ ಆರ್ಯತ್ವಯುಕ್ತವಾಗಲಿ. ಶುದ್ಧ ಜ್ಞಾನದಿಂದ ಎಷ್ಟು ದೂರ ಬಂದಿದ್ದೇವೆ. ಈಗಲಾದರೂ ಎಚ್ಚೆತ್ತುಕೊಳ್ಳೋಣ. ವಿದ್ವತ್ತ್ವ, ಅನುಷ್ಠಾನಗಳಿಂದ ತಾಮಸೀ ವೃತ್ತಿಯನ್ನು ದೂರಕ್ಕಟ್ಟಿ, ಸಾತ್ವಿಕರಾಗಿ, ಆತ್ಮಪ್ರಗತಿ ಸಾಧಿಸೋಣ.

ಜೀವಾತ್ಮರನ್ನು ವಿಕ್ಷೇಪದ ಮೂಲಕ ಬೇರೆ ಬೇರೆ ಯೋನಿಗಳ ಕಡೆಗೆ ಒಯ್ಯುವವನು ವಾಯುವು.* ವಾಯುವನ್ನು ವೇದಗಳಲ್ಲಿ ಯಮನೆಂದೂ ಕರೆಯಲಾಗಿದೆ. ಪುನರ್ಜನ್ಮದ ವಿಸ್ತೃತ ವ್ಯಾಖ್ಯೆ ಮನುಸ್ಮೃತಿಯ ಅಧ್ಯಾಯ ೧೨, ಸುಶ್ರುತ, ಸಾಂಖ್ಯ ದರ್ಶನ, ತಥಾ ಉಪನಿಷದಾದಿ ಗ್ರಂಥಗಳಲ್ಲಿದೆ. ಈ ವ್ಯಾಖ್ಯೆಯು ವೇದಮಂತ್ರಗಳನ್ನೇ ಆಧರಿಸಿಕೊಂಡಿದೆ. ಪುನರ್ಜನ್ಮದ ರಹಸ್ಯವನ್ನು ಹೇಳುವ ನೂರಾರು ಮಂತ್ರಗಳಿವೆ. ಇಲ್ಲಿ ಕೇವಲ ಉದಾಹರಣೆಗಾಗಿ ಮಾತ್ರ ಒಂದೆರಡು ಮಂತ್ರಗಳನ್ನು ತೋರಿಸಿದ್ದೇವೆ. ಬುದ್ಧಿವಂತರಿಗೆ ವಿಶೇಷ ವಿವರಣೆಯ ಅಗತ್ಯವಿರುವುದಿಲ್ಲ.

## ಮೋಕ್ಷಜ್ಞಾನ

ಯಾವ ರೀತಿಯಲ್ಲಿ ಅನ್ಯ ವಿಷಯಗಳ ಜ್ಞಾನವು ವೇದಗಳಲ್ಲಿ ಸವಿಸ್ತಾರವಾಗಿದೆಯೋ ಅದೇ ರೀತಿಯಲ್ಲಿ ಮೋಕ್ಷದ ಜ್ಞಾನವೂ ವೇದಗಳಲ್ಲಿ ಪೂರ್ಣವಾಗಿದೆ. ಉಪಾಸನೆ ಅಥವಾ ಯೋಗವಿದ್ಯೆಯ ಮುಖ್ಯ ಲಕ್ಷ್ಯವೇ ಮೋಕ್ಷಪ್ರಾಪ್ತಿಯಾಗಿದೆ.

ಪರಮಾತ್ಮನು ನಮ್ಮೆಲ್ಲರ ದುಃಖಗಳನ್ನು ದೂರ ಮಾಡುವ ಬಂಧುವು, ಅವನೇ ನಮ್ಮ ಜನ್ಮಹೇತು, ಸುಖದಾತೃ ಮತ್ತು ಪಾಲಕನಾಗಿದ್ದಾನೆ. ಅವನೇ ನಮ್ಮ ಯಜ್ಞಾದಿ ಶ್ರೇಷ್ಠ ಕಾರ್ಯಗಳನ್ನು ಪೂರ್ಣಗೊಳಿಸುತ್ತಾನೆ. ಅವನಲ್ಲಿಯೇ ವಿದ್ವಾಂಸರು ಮೋಕ್ಷವನ್ನು ಗಳಿಸಿ ಸದಾ ಆನಂದದಲ್ಲಿರುತ್ತಾರೆ.[೪೨]

ಜ್ಞಾನಯಜ್ಞದಿಂದ ತಮ್ಮ ತಮ್ಮ ಆತ್ಮಗಳನ್ನು ಬೆಳಗಿಸಿ, ಕರ್ಮಯಜ್ಞದಿಂದ ಅರ್ಹತೆಯನ್ನು ಪಡೆದು, ಉಪಾಸನಾಯಜ್ಞದ ಮೂಲಕ ಆತ್ಮರೂಪ ದ್ರವ್ಯವನ್ನು ದಕ್ಷಿಣೆಯ ರೂಪದಲ್ಲಿ ಪರಮಾತ್ಮನಿಗೆ ಸಮರ್ಪಿಸಿ ಜನರು ಮೋಕ್ಷಸುಖವನ್ನು ಪಡೆದು ಪರಮಾನಂದದಲ್ಲಿರುತ್ತಾರೆ. ಈ ರೀತಿ ಮೋಕ್ಷವನ್ನು ಗಳಿಸಿದ ಜನರು, ತಮಗಿಂತ ಮೊದಲು ಮೋಕ್ಷವನ್ನು ಸಾಧಿಸಿದ ಜೀವಾತ್ಮರೊಂದಿಗೆ ಮೆರೆಯುತ್ತಾರೆ.[೪೩]

---

* ವಾಯು—ಎಂದರೆ ಪ್ರಾಣ-ತ್ರಾಣ ಪ್ರದಾನದಿಂದ ವಿರಾಟ್ ಸರ್ವವನ್ನೂ ಸಂಚಾಲನಗೈಯುವ ಪರಮಾತ್ಮನೂ ಅಹುದು; ಶ್ವಾಸೋಚ್ಛ್ವಾಸದ್ವಾರಾ ಜೀವರನ್ನು ಸದೇಹಾವಸ್ಥೆಯಲ್ಲಿಡುವ ಗಾಳಿಯೂ ಅಹುದು. ಆದರೆ—"ನ ಶೋಷಯತಿ ಮಾರುತಃ" "[ಗೀತಾ:-೨-೨೩.]—"ಗಾಳಿ ಅವನನ್ನು ಒಣಗಿಸಲೂ, ತೂರಲೂ ಅಸಮರ್ಥ."—ಎಂದಿದ್ದಾರೆ ಗೀತಾಚಾರ್ಯರು. ಸರ್ವಸಂಚಾಲಕ ಸ್ನೇಹಸ್ನಿಗ್ಧ ಸವಿತೃದೇವನು ಸ್ಥಾನಾಂತರಕರಣ ಶಕ್ತನು. ಮಹರ್ಷಿ 'ಯಮೇನ, ವಾಯು ನಾ"—ಎಂದು ತಮ್ಮ ಸಂಸ್ಕಾರವಿಧಿಯಲ್ಲಿ ಬರೆದೂ ಇದ್ದಾರೆ.

[೪೨] ಸ ನೋ ಬಂಧುರ್ಜನಿತಾ ಸ ವಿಧಾತಾ ಧಾಮಾನಿವೇದ ಭುವನಾನಿ ವಿಶ್ವಾ......... ॥ [ಯಜು. ೩೨-೧೦]

[೪೩] ವಿ ಯಜ್ಞೇನ ದಕ್ಷಿಣಯಾ ಸಮಕ್ತಾ ಇಂದ್ರಸ್ಯ ಸಖ್ಯಮಮೃತತ್ವಮಾನಶ ॥ [ಋ. ೧೦-೬೨-೧]

"ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ" [ಋಕ್:–೧–೨೨–೨೦] ಅಂದರೆ, ಸರ್ವವ್ಯಾಪಕನಾದ ಪರಮಾತ್ಮನ ಮೋಕ್ಷವೆಂಬ ಅತ್ಯಂತ ಉತ್ತಮವಾದ, ಆನಂದಸ್ವರೂಪವಾದ ಪರಮಪದವನ್ನು ಪ್ರಾಪ್ತಿ ಮಾಡಲು ವಿದ್ವಾಂಸರು ಯಾವಾಗಲೂ ನೋಡುತ್ತಿರುತ್ತಾರೆ. 'ಯಸ್ಯಚ್ಛಾಯಾಽಮೃತಂ'[ಯಜು ೨೫–೧೩] ಅಂದರೆ, ಪರಮಾತ್ಮನ ಆಶ್ರಯವೇ ಮೋಕ್ಷ ಸುಖದ ಹೇತುವಾಗಿದೆ. "ಬೃಹಜ್ಜ್ಯೋತಿಃ ಕರಿಷ್ಯತಃ ಸವಿತಾ ಪ್ರಸುವಾತಿ ತಾನ್" [ಯಜು. ೧೧–೩.] ಅಂದರೆ, ಸತ್ಯ, ಪ್ರೇಮದ ಮೂಲಕ ಯಾರು ಪರಮಾತ್ಮನ ಉಪಾಸನೆ ಮಾಡುತ್ತಾರೋ ಅವರನ್ನು ಆ ದಯಾಮಯನು ಮೋಕ್ಷಸುಖವನ್ನು ಕೊಟ್ಟು ದುಃಖದಿಂದ ಪೂರ್ಣ ಮುಕ್ತರನ್ನಾಗಿ ಮಾಡುತ್ತಾನೆ.*

ಜನಸಾಮಾನ್ಯರ ನಂಬಿಕೆ ಏನೆಂದರೆ, ಒಂದು ಬಾರಿ ಮೋಕ್ಷಕ್ಕೆ ಹೋದವರು ತಿರುಗಿ ಜನ್ಮತಾಳುವುದಿಲ್ಲ. ಇದು ಸರಿಯಲ್ಲ. ಯಾಕೆಂದರೆ, ಒಂದು ವೇಳೆ ಮೋಕ್ಷಕ್ಕೆ ಹೋದವರೆಲ್ಲಾ ಪುನಃ ತಿರುಗಿ ಜನ್ಮತಾಳದಿದ್ದರೆ, ಒಂದು ಸಮಯದಲ್ಲಿ ಸೃಷ್ಟಿಯಲ್ಲಿ ಜೀವರಾಶಿಗಳೇ ಇಲ್ಲದಂತಾದೀತು. ಅಲ್ಲದೆ, ವೇದಗಳಲ್ಲಿಯೂ ಮೋಕ್ಷವೆಂದರೆ ಎಂದೆಂದಿಗೂ ತಿರುಗಿ ಬರಲಾಗದ ಅವಸ್ಥೆಯೆಂದು ಹೇಳಿಲ್ಲ. ಹಾಗೆ ಒಂದು ವೇಳೆ ಇದ್ದರೂ ಕೂಡ, ಅದು ಮೋಕ್ಷವಲ್ಲ, ಬಂಧನ. ಮೋಕ್ಷವೆಂದರೆ, ದುಃಖಗಳಿಂದ ಬಿಡುಗಡೆ. ಶರೀರವಿರುವ ತನಕ ದುಃಖವಿದ್ದೇ ಇರುತ್ತದೆ. ಮೋಕ್ಷವನ್ನು ನಾಕವೆಂದೂ ಕರೆಯುತ್ತಾರೆ. ನಾಕವೆಂದರೆ ದುಃಖದ ಅತ್ಯಂತ ಅಭಾವ, ಅರ್ಥಾತ್ ಆನಂದವೇ ಆನಂದ.

"ಕೋನೋ ಮಹ್ಯಾ ಅದಿತಯೇ ಪುನರ್ದಾತ್......" [ಋ. ೧–೨೪–೧] ಅರ್ಥಾತ್, ಪರಮಾತ್ಮನು ಮೋಕ್ಷವನ್ನು ಪಡೆದವರಿಗೂ ಭೂಮಿಯ ಮೇಲೆ ಪುನಃ ತಂದೆ ತಾಯಿಗಳನ್ನು ಕಾಣುವ ಹಾಗೆ ಜನ್ಮವನ್ನು ಒದಗಿಸುತ್ತಾನೆ. ಇಲ್ಲಿ ವೇದ ಮಂತ್ರವು ಸ್ಪಷ್ಟವಾಗಿ ಮೋಕ್ಷಕ್ಕೆ ಹೋದವರು ಪುನರ್ಜನ್ಮಕ್ಕೆ ಒಳಗಾಗುತ್ತಾರೆ ಎಂದು ಹೇಳುತ್ತದೆ. ಆದರೆ ಮೋಕ್ಷಕಾಲವು ಸುದೀರ್ಘವಾಗಿರುವುದರಿಂದ ಅಲ್ಲಿಂದ ಜೀವಾತ್ಮರು ತಿರುಗಿ ಬರುವುದಿಲ್ಲ ಎಂದು ಜನರು ತಿಳಿದುಕೊಳ್ಳುತ್ತಾರೆ. ಈ ರೀತಿ ನೂರಾರು ಮಂತ್ರಗಳಲ್ಲಿ ಮೋಕ್ಷದ ವರ್ಣನೆಯೂ ಇದೆ. ಇದರ ವಿಶೇಷ ವ್ಯಾಖ್ಯಾನವು ವೇದಾಂತದರ್ಶನ, ಉಪನಿಷದಾದಿ ಗ್ರಂಥಗಳಲ್ಲಿ ಇದೆ.

ಹೀಗೆ, ವೇದಗಳು ಎಲ್ಲಾ ಸತ್ಯವಿದ್ಯೆಗಳ ಪುಸ್ತಕವಾಗಿವೆ. ಇವು ಅನಂತವಿದ್ಯೆಯ ಭಂಡಾರ.[೪೪] ವೇದವಾಕ್ಯಗಳನ್ನು ಇಷ್ಟರ ತನಕ ಯಾರೂ ಸುಳ್ಳೆಂದು ಸಿದ್ಧಪಡಿಸಲಿಲ್ಲ.

---

ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ

॥ ಋ. ೧–೧೬೪–೫೦ ॥

* ಎಂದರೆ, ಭಗವಂತ ತನ್ನನ್ನು ಹೊಗಳಿದವರಿಗೆ ಸುಖ ಕೊಡುತ್ತಾನೆ; ದುಃಖ ಮುಕ್ತರನ್ನಾಗಿ ಮಾಡುತ್ತಾನೆ—ಎಂಬ ಅಸಭ್ಯಾರ್ಥ ಸಲ್ಲದು. ಪ್ರಭು ಗುಣಗಾನದಿಂದ ಭಕ್ತರ ಚಿತ್ತ ಅತ್ತ ಹೊರಳಿ, ಅವನ ಗುಣಗಳನ್ನು ತಾವೂ ಧರಿಸಿ, ಮೋಕ್ಷಯೋಗ್ಯರಾದಾಗ, ಮೋಕ್ಷ ಲಭ್ಯ —ಎಂಬುದೇ ಈ ಮಂತ್ರದ ಆಶಯ, ಸಂಕೇತ, ಉಪದೇಶ ಹಾಗೂ ತಾತ್ಪರ್ಯ.

೪೪] ನಾಲ್ಕೂ ವೇದಗಳಲ್ಲಿರುವ ಪ್ರಸಿದ್ಧ ವಿದ್ಯೆಗಳ ಸೂಚಿಯೊಂದನ್ನು ಸ್ವಾಮಿ ದಯಾನಂದ ಸರಸ್ವತಿಯವರು ತಯಾರಿಸಿದ್ದಾರೆ. ಅದರಲ್ಲಿ ನೂರಾರು ವಿದ್ಯೆಗಳ ಹೆಸರುಗಳಿವೆ.

ವಿಜ್ಞಾನವು ಪ್ರಗತಿ ಹೊಂದಿದಂತೆ ವೇದಜ್ಞಾನವು ಸತ್ಯವೆಂದು ಸಿದ್ಧವಾಗುತ್ತಾ ಬಂದಿದೆ. ವರ್ತಮಾನ ವಿಜ್ಞಾನವು ಕೇವಲ ಭೌತಿಕ ಪ್ರಪಂಚಕ್ಕೆ ಸಂಬಂಧಿಸಿದೆ. ಆದುದರಿಂದ ಇದು ಅಪೂರ್ಣ. ಇಷ್ಟಲ್ಲದೆ, ಭೌತಿಕ ಸಂಸಾರದ ಅನೇಕ ರಹಸ್ಯಗಳನ್ನು ಆಧುನಿಕ ವಿಜ್ಞಾನಿಗಳು ಇಷ್ಟರ ತನಕ ಕಂಡುಹಿಡಿಯಲು ಅಸಮರ್ಥರಾಗಿದ್ದಾರೆ. ಹಾಗೂ ಆಧುನಿಕ ವಿಜ್ಞಾನದ ಬೆಳವಣಿಗೆಯು ಅಸಂತುಲಿತವಾಗಿರುವುದರಿಂದ ಜಗತ್ತಿನಲ್ಲಿ ಅಶಾಂತಿ ಮತ್ತು ನಾನಾ ಪ್ರಕಾರದ ದುಃಖಗಳಿಗೆ ಕಾರಣವಾಗಿದೆ. ಆದುದರಿಂದ ಆಧುನಿಕ ವಿಜ್ಞಾನವು ವೇದವಿದ್ಯೆಯ ಆಧಾರದಲ್ಲಿ ಬೆಳೆದಾಗ, ಮತ್ತು ವೈಜ್ಞಾನಿಕರು ವೇದಮಾರ್ಗದಲ್ಲಿ ನಡೆದುಕೊಂಡು ಹೋದಾಗಲೇ ವಿಶ್ವದ ಕಲ್ಯಾಣವಾಗುವುದೆಂಬ ಮಾತು ನಿಜವಾಗಿದೆ.

## ವೇದವ್ಯಾಖ್ಯಾನ ಅಥವಾ ಮಂತ್ರಾರ್ಥ ದರ್ಶನಕ್ಕೆ ಬೇಕಾದ ಯೋಗ್ಯತೆ

ವೇದಗಳು ಅನಂತವಿದ್ಯೆಗಳ ಭಂಡಾರವೆಂದು ಋಷಿಗಳು ಹೇಳಿದ್ದಾರೆ. ಈಗ ನಾಲ್ಕೂ ವೇದಗಳೂ ಮುದ್ರಿತವಾಗಿ ದೊರೆಯುತ್ತವೆ. ಸಣ್ಣ ದೊಡ್ಡ ದೇಶೀಯ ಮತ್ತು ವಿದೇಶೀಯ ಪಂಡಿತರ ಭಾಷ್ಯಗಳೂ ದೊರೆಯುತ್ತವೆ. ಇವುಗಳನ್ನು ಯಾರೂ ಓದಬಹುದು. ಆದರೆ ಈ ರೀತಿ ನಾಲ್ಕೂ ವೇದಗಳನ್ನು ಓದಿ ಯಾರಾದರೂ ಚತುರ್ವೇದವಿದನಾದ ಬ್ರಹ್ಮನೆಂದುಕೊಳ್ಳಬಲ್ಲನೇ? ಸಾಧ್ಯವಿಲ್ಲ. ಲೋಕದಲ್ಲಿ ಮಹಾ ಕವಿಗಳು ಬರೆದ ಕಾವ್ಯಗಳನ್ನು ವಿಶೇಷ ಯೋಗ್ಯತೆಯುಳ್ಳ ವಿದ್ವಾಂಸರು ವಿವರಿಸಿದಾಗ ಮಾತ್ರ ಗೊತ್ತಾಗುತ್ತದೆ. ಮಿಲ್ಟನ್ ಕವಿಯ ಕಾವ್ಯಗಳು ಸಾಧಾರಣ ಇಂಗ್ಲಿಷ್ ಭಾಷೆಯ ಜ್ಞಾನವಿದ್ದವನಿಗೆ ಅರ್ಥವಾಗುವುದಿಲ್ಲ. ಪಾಣಿನಿಯ ಅಷ್ಟಾಧ್ಯಾಯಿಯನ್ನು ವಿವರಿಸಲು ಮಹಾಭಾಷ್ಯದ ಅವಶ್ಯಕತೆ ಬಿತ್ತು. ಈಗ ಆ ಮಹಾಭಾಷ್ಯವನ್ನು ಕಲಿಯುವುದೂ ಮಹಾರಾಜ್ಯವನ್ನು ಆಳುವುದೂ ಸಮಾನರೂಪದಲ್ಲಿ ಕಠಿಣ ಕೆಲಸವೆಂದು ಹೇಳುತ್ತಾರೆ. ಇದೇ ರೀತಿ ಹೈಯರ್ ಮೆಥಮೆಟಿಕ್ಸ್, ಅಥವಾ ಇಲೆಕ್ಟ್ರಾನಿಕ್ ಇಂಜಿನಿಯರಿಂಗ್, ಈ ವಿಷಯದ ಪುಸ್ತಕಗಳು ಆಂಗ್ಲ ಭಾಷೆಯಲ್ಲಿದ್ದರೂ, ಕೇವಲ ಭಾಷೆಯ ಪಾಂಡಿತ್ಯದಿಂದ ಈ ವಿಷಯಗಳು ಎಲ್ಲರಿಗೂ ಅರ್ಥವಾಗುವುದಿಲ್ಲ. ಈ ಸಾಧಾರಣ ವಿಷಯಗಳಿಗೂ, ವಿಶೇಷ ಯೋಗ್ಯತೆ ಬೇಕು. ವೇದಗಳು ಪರಮಾತ್ಮನ ಅಮರ ಕಾವ್ಯ; ಸೃಷ್ಟಿವ್ಯಾಕರಣದ ಅದ್ಭುತ ಸೂತ್ರಗ್ರಂಥಗಳು; ವಿಶ್ವರಚನೆಯ ಮಹಾ ವೈಜ್ಞಾನಿಕ ಪಾಠಪುಸ್ತಕಗಳು, ಕಾವ್ಯ ಮತ್ತು ವಿಜ್ಞಾನದ ಸಂಗಮದ ಮನೋಹರ ರಚನೆಗಳು, ದರ್ಶನ ಮತ್ತು ಕರ್ಮಕಾಂಡ, ಜ್ಞಾನ ಮತ್ತು ಉಪಾಸನಾಕಾಂಡದ ಸುಂದರ ಸಂಯೋಗದ ಉತ್ತಮ ಉದಾಹರಣೆಗಳು, ಮೂರು ಕಾಲಗಳಲ್ಲಿಯೂ ಮಾನವ ಬುದ್ಧಿಯನ್ನು ಚಕಿತಗೊಳಿಸುವಂತಹ ರಹಸ್ಯಪೂರ್ಣ ಜ್ಞಾನರಾಶಿ. ಈ ನಾಲ್ಕು ಸಂಹಿತೆಗಳು ಜ್ಞಾನದ ಅನ್ವೇಷಕರಿಗೆ ಯಾವಾಗಲೂ ಒಂದು ಪಂಥಾಹ್ವಾನ. ಇಂತಹ ಮಹತ್ವಪೂರ್ಣ ಗ್ರಂಥಗಳನ್ನು ಕೆಲವರು ಕೇವಲ ಸಂಸ್ಕೃತ ಭಾಷೆಯ ಪಾಂಡಿತ್ಯದ ದರ್ಪದಿಂದಲೂ, ಇನ್ನು ಕೆಲವರು ಈಗಲೂ ಶೈಶವಾವಸ್ಥೆಯಲ್ಲಿರುವ

ಪಾಶ್ಚಾತ್ಯ ಭಾಷಾವಿಜ್ಞಾನದ ಅಭಿಮಾನದಿಂದಲೂ ಹೀಗೆಯೇ ವಿವರಿಸಲು ದುಃಸ್ಸಾಹಸ ಮಾಡುತ್ತಾರೆ. ಇವರಿಗೆಲ್ಲಾ ವೇದಮಂತ್ರಗಳ ಅರ್ಥವೇನು ಗೊತ್ತಾಗಬೇಕು?

ಯಾಸ್ಕಾಚಾರ್ಯರು ಹೇಳಿರುವಂತೆ, ಸತ್ಯಪ್ರಮಾಣ, ಸುತರ್ಕ, ಶಬ್ದಗಳ ಪೂರ್ವಾಪರ ಪ್ರಕರಣಜ್ಞಾನ, ಶಿಕ್ಷಾ, ವ್ಯಾಕರಣ ಮೊದಲಾದ ಆರು ವೇದಾಂಗಗಳು, ಪೂರ್ವ ಮೀಮಾಂಸಾದಿ ಆರು ಉಪವೇದಾಂಗಗಳು, ಶತಪಥಾದಿ ಬ್ರಾಹ್ಮಣಗ್ರಂಥಗಳು, ಶಾಖಾಂತರ ಸಹಿತ ನಾಲ್ಕು ಸಂಹಿತೆಗಳು—ಇವುಗಳ ಪೂರ್ಣ ಜ್ಞಾನ, ಉತ್ತಮ ವಿದ್ವಾಂಸರ ಉಪದೇಶ, ಆತ್ಮಶುದ್ಧಿ, ಪೂರ್ವ ಮಹರ್ಷಿಗಳ ವ್ಯಾಖ್ಯಾನದ ಜ್ಞಾನ ಮತ್ತು ಪರಮಾತ್ಮನ ಅನುಗ್ರಹ—ಇವುಗಳಲ್ಲದೆ ವೇದಮಂತ್ರಗಳ ಅರ್ಥವು ಯಾರಿಗೂ ಹೃದಯಂಗಮವಾಗುವ ಹಾಗಿಲ್ಲ [ನಿರುಕ್ತ. ೧೩–೧೨]. ಅಂದರೆ, ವೇದಗಳ ಜಿಜ್ಞಾಸುಗಳಿಗೆ ತೀವ್ರಬುದ್ಧಿ ಅಥವಾ ತರ್ಕಶಕ್ತಿ, ಶಾಸ್ತ್ರೀಯ ಹಾಗೂ ನೈತಿಕ ಯೋಗ್ಯತೆ, ಸಾಧನೆ ಮತ್ತು ಈಶ್ವರನ ಕೃಪಾಪಾತ್ರತೆ ಬೇಕೇ ಬೇಕು. ಅಂದರೆ ಅಯೋಗಜ್ಞರು, ಅತಪಸ್ವಿಗಳು ಮೂಲ ವೇದಗಳನ್ನು ಓದಿ ಏನೂ ಪ್ರಯೋಜನವಿಲ್ಲ, ಆದುದರಿಂದಲೇ ಅನೃಷಿಗಳಿಗೂ ಅತಪಸ್ವಿಗಳಿಗೂ ವೇದಮಂತ್ರಗಳು ಪ್ರತ್ಯಕ್ಷವಾಗುವುದಿಲ್ಲವೆಂದು ಯಾಸ್ಕರೆನ್ನುತ್ತಾರೆ. '**ಆಚಾರಹೀನಂ ನ ಪುನಂತಿ ವೇದಾಃ**' ಅಂದರೆ ಆಚಾರಹೀನರನ್ನು ವೇದಗಳು ಸುಧಾರಿಸುವ ಹಾಗಿಲ್ಲ—ಎಂಬ ಲೋಕೋಕ್ತಿಯ ಅಭಿಪ್ರಾಯವೂ ಇದೇ ಆಗಿದೆ. ಕಣ್ಣು, ಕಿವಿ, ಇತ್ಯಾದಿಗಳು ಎಲ್ಲರಿಗೂ ಸಮಾನವಾಗಿರಬಹುದು. ಆದರೆ ಮನೋಗತಿಯು ಎಲ್ಲರಿಗೂ ಸಮಾನವಾಗಿಲ್ಲ.[೧] ಆದುದರಿಂದ ಮನುಷ್ಯರ ಬುದ್ಧಿಶಕ್ತಿಯು ಅಧಿಕವಾದಂತೆ, ಅವರು ಅಧಿಕಾಧಿಕ ಜ್ಞಾನವನ್ನು ವೇದಮಂತ್ರಗಳಿಂದ ಸಂಪಾದಿಸುತ್ತಾರೆ.[೨] ಯೋಗಿಗಳಿಗೆ ವೇದಮಂತ್ರಗಳ ಮೂಲಕ ಅರ್ಥವು ಪ್ರತಿಬಿಂಬದಂತೆ ಹೊಳೆಯುತ್ತದೆ.[೩] ಪ್ರಾಚೀನ ಕಾಲದಲ್ಲಿ ಋಷಿಗಳಿಗೆ ವೇದಮಂತ್ರಗಳ ಅರ್ಥವು ಹಸ್ತಾಮಲಕದಂತೆ ಭಾಸವಾಗುತ್ತಿತ್ತು.[೪] ಆದರೆ ಕಾಲವು ಕಳೆದುಹೋದಂತೆ ಈ ಯೋಗ್ಯತೆಯು ಹ್ರಾಸವಾಗುತ್ತಾ ಬಂದಂತೆ ಕಾಣುತ್ತದೆ. ಆದುದರಿಂದ ವೇದಮಂತ್ರಗಳ ವ್ಯಾಖ್ಯಾನದ ಆವಶ್ಯಕತೆಯು ಅನುಭವವು ಜನರಿಗಾಯಿತು. ಈ ರೀತಿ ವೇದಗಳ ಶಾಖಾಂತರಗಳು, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳು, ಹಾಗೂ ವೇದಾಂಗ, ಉಪವೇದಾದಿಗಳೂ, ಭಾಷ್ಯಗ್ರಂಥಗಳೂ ಉತ್ಪನ್ನವಾದುವು.

ಪ್ರಾಚೀನ ವೇದಾಚಾರ್ಯರು ವೇದಮಂತ್ರಗಳ ಕೆಲವು ವಿಶೇಷತೆಗಳನ್ನು ಕಂಡು ಹಿಡಿದಿದ್ದರು. ಮಂತ್ರಗಳ ಆನುಪೂರ್ವೀಯು ಇಂತಹ ಒಂದು ಮಹತ್ವದ ವಿಶೇಷತೆಯಾಗಿದೆ. ಇಂದಿನ ವರೆಗೆ ಅಗ್ನಿ ಶಬ್ದದ ಬದಲಿಗೆ ವಹ್ನಿ ಶಬ್ದ, ಅಥವಾ ವಹ್ನಿ ಶಬ್ದದ ಬದಲಿಗೆ ಅಗ್ನಿ ಶಬ್ದವನ್ನು ಯಾರೂ ಮಂತ್ರಗಳಲ್ಲಿ ಪ್ರಯೋಗ ಮಾಡಲಿಲ್ಲ. ಇದೇ

---

[೧] ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾಬಭೂವುಃ ॥
ಋಗ್ವೇದ ೧೦–೭೧–೭ ॥

[೨] ವಾಕ್ಯಪದೀಯ ೧–೩೪ ॥

[೩] ಯತ್ರ ವಾಚೋ ನಿಮಿತ್ತಾನಿ ಚಿಹ್ನಾನೀವಾಕ್ಷರ ಸ್ಮೃತೇಃ ।
ಶಬ್ದಪೂರ್ವೇಣ ಯೋಗೇನ ಭಾಸಂತೇ ಪ್ರತಿಬಿಂಬವತ್ ॥ ವಾಕ್ಯಪದೀಯ ೧–೨೦ ॥

[೪] ಸಾಕ್ಷಾತ್ ಕೃತಧರ್ಮಾಣ ಋಷಯೋ ಬಭೂವುಃ ॥ ನಿರುಕ್ತ ॥

ರೀತಿ 'ಅಗ್ನಿಮೀಳೇ'ಯ ಬದಲಿಗೆ ಯಾರೂ 'ಈಳೇಽಗ್ನಿಂ'* ಎಂದು ಸಂಹಿತೆಯಲ್ಲಿ ಹೇಳಲಿಲ್ಲ. ಯಾವ ರೀತಿಯಲ್ಲಿ ಮಂತ್ರಗಳ ಧ್ವನಿಯು ಆಕಾಶದಲ್ಲಿ ಕೇಳಿಬಂತೋ ಅದೇ ಕ್ರಮದಲ್ಲಿ ಅದನ್ನು ಈ ತನಕವೂ ಇಟ್ಟಿದ್ದಾರೆ. ಇದನ್ನು ಬದಲಾಯಿಸುವ ಅಧಿಕಾರ ಯಾರಿಗೂ ಇಲ್ಲ. ಆದುದರಿಂದ ಈ ನಿಯತಾನುಪೂರ್ವೀಯು ವೇದಮಂತ್ರಗಳ ಒಂದು ವಿಶೇಷತೆ ಎಣಿಸಿದೆ.

ವೇದಮಂತ್ರಗಳ ಇನ್ನೊಂದು ವಿಶೇಷತೆ ಏನೆಂದರೆ, ವೇದವಾಣಿಯು ಆಕಾಶೀಯ, ದೇವತೆಗಳು ಆಕಾಶೀಯ, ಮಂತ್ರಗತ ಋಷಿಗಳು ಆಕಾಶೀಯ, ನದಿ-ನಗರಾದಿಗಳು ಆಕಾಶೀಯ, ಮಂತ್ರಗಳ ಛಂದಸ್ಸೂ ಆಕಾಶೀಯ. ಇವೆಲ್ಲಾ ಸಾರ್ವಕಾಲಿಕ, ಮತ್ತು ಸಾರ್ವದೇಶಿಕ ವಿಷಯಗಳು. ಆದುದರಿಂದ ವೇದಗಳಲ್ಲಿ ಯಾವುದೇ ದೇಶದ ಐತಿಹಾಸಿಕ ಋಷಿಮುನಿ, ರಾಜ, ನದಿ, ನಗರ ಅಥವಾ ಯುದ್ಧಾದಿಗಳ ವರ್ಣನೆ ಇಲ್ಲವೇ ಇಲ್ಲ. ವೇದಮಂತ್ರಗಳ ಅರ್ಥವನ್ನು ತಿಳಿದುಕೊಳ್ಳಲು ಅಧ್ಯಾತ್ಮ, ಆಧಿದೈವತ, ಅಧಿಯಜ್ಞ ಮತ್ತು ಅಧಿಲೋಕ ಎಂಬ ವಿಭಿನ್ನ ಅರ್ಥಗಳ ಜ್ಞಾನವು ಅತ್ಯಾವಶ್ಯಕ. ಬ್ರಾಹ್ಮಣ, ನಿರುಕ್ತ, ಮೊದಲಾದ ಗ್ರಂಥಗಳಲ್ಲಿ ಈ ವಿಷಯದ ಮಾರ್ಗದರ್ಶನ ಇದೆ. ಈ ವಿಭಿನ್ನ ಅರ್ಥಗಳು ಒಂದಕ್ಕೊಂದು ಪೂರಕವಾಗಿವೆ.

ವೇದಮಂತ್ರಗಳ ಮೂರನೆಯ ವಿಶೇಷತೆಯನ್ನು ಕುಮಾರಿಲ ಭಟ್ಟ ಮೊದಲಾದವರು ಛಾಂದಸೀ ಮುದ್ರೆ ಎಂದು ಹೇಳಿದ್ದಾರೆ. ಅಂದರೆ ವೈದಿಕ ಛಂದಸ್ಸಿನಲ್ಲಿ ಯಾರಾದರೂ ಶ್ಲೋಕಗಳ ರಚನೆ ಮಾಡಿದರೆ, ವೇದಗಳ ಸೂಕ್ಷ್ಮತೆಯನ್ನು ಅರಿತ ವಿದ್ವಾಂಸರು ತತ್‌ಕ್ಷಣವೇ ಅವುಗಳಲ್ಲಿ ಛಾಂದಸೀ ಮುದ್ರೆಯ ಅಭಾವವಿರುವುದನ್ನು ತೋರಿಸಬಲ್ಲರು. ವೇದಗಳ ಅಪೌರುಷೇಯತ್ವಕ್ಕೆ ಇದೂ ಒಂದು ಪ್ರಮಾಣ.

ಇಷ್ಟಲ್ಲದೆ, ವೇದ ಶಬ್ದಗಳು ಸರ್ವತೋಮುಖಿಯಾಗಿವೆ. ಲೌಕಿಕ ಶಬ್ದಗಳಂತೆ, ವೈದಿಕ ಶಬ್ದಗಳ ಅರ್ಥವು ಪರಿಮಿತವಾಗಿಲ್ಲ. ಒಂದೇ ಮಂತ್ರದಲ್ಲಿ, ಪ್ರಕರಣವು ಬದಲಾದಾಗ ಅದರಲ್ಲಿರುವ ಒಂದೇ ಶಬ್ದದ ಅರ್ಥವೂ ಬದಲಾಗುತ್ತದೆ. ಉದಾಹರಣೆಗಾಗಿ ಇಂದ್ರ ಶಬ್ದಕ್ಕೆ ಪ್ರಕರಣಾನುಸಾರವಾಗಿ ಪರಮಾತ್ಮ, ಸೂರ್ಯ, ವಿದ್ಯುತ್, ಜೀವಾತ್ಮ, ಮನಸ್ಸು, ರಾಜಾ, ಯಜ್ಞ ಇತ್ಯಾದಿ ಅರ್ಥಗಳಾಗುತ್ತವೆ. ಇದೇ ರೀತಿ ಅಗ್ನಿ ಎಂದರೂ ಪರಮಾತ್ಮ, ವಿದ್ಯುತ್, ಯಜ್ಞ, ವಿದ್ವಾಂಸ ಎಂದು ಮುಂತಾದ ಅರ್ಥಗಳಾಗುತ್ತವೆ. ಇದಕ್ಕೆ ಕಾರಣವೇನೆಂದರೆ, ವೈದಿಕ ಭಾಷೆಯು ವೈಜ್ಞಾನಿಕತೆ. ಇದರ ವರ್ಣಗಳು ಸಾರ್ಥಕವಾಗಿವೆ. ಶಬ್ದಗಳೂ ಸಾರ್ಥಕವಾಗಿವೆ. ವೈದಿಕ ಶಬ್ದಗಳನ್ನು ಯೌಗಿಕ ಅರ್ಥ [etymological meaning] ಯುಕ್ತವಾದುವೆಂದು ಹೇಳುತ್ತಾರೆ. ಅಂದರೆ, ಇವುಗಳು ಧಾತ್ವರ್ಥಗಳನ್ನು ಹೊಂದಿಕೊಂಡಿವೆ. ಆದುದರಿಂದ ಪ್ರಕರಣಾನುಸಾರವಾಗಿಯೇ ವೈದಿಕ ಶಬ್ದಗಳ ಅರ್ಥ ನಿರ್ಧಾರವಾಗುತ್ತದೆ.

ವೇದವಾಕ್ಯಗಳು ಬುದ್ಧಿಪೂರ್ವಕವಾಗಿರುವುದರಿಂದ[೫] ತರ್ಕ, ಪ್ರಮಾಣಾದಿಗಳಿಗೆ ವಿರುದ್ಧವಾಗಿ ಅರ್ಥ ಮಾಡಲಾಗದು. ವಿಜ್ಞಾನಕ್ಕೆ ಅನುಕೂಲವಾದ ತರ್ಕವೇ ನಿಜ

---

* ಇದು ಕೇವಲ ಸಂಹಿತಾ ಪಾಠ ಕುರಿತು ಹೇಳಿದ ಮಾತು. ಜಟಾದಿಂದ ಆರಂಭಿಸಿ ಘನದ ವರೆಗೆ ಎಂಟು ವಿಕೃತಿಗಳನ್ನು ಮಹರ್ಷಿಗಳು ಹೇಳಿದ್ದಾರೆ. ಜಟಾ ಹಾಗು ಇನ್ನೂ ಹಲವು ವಿಕೃತಿಗಳಲ್ಲಿ ಶಬ್ದಗಳ ಸ್ಥಾನಾಂತರೀಕರಣವಿದೆ.

[೫] ಬುದ್ಧಿಪೂರ್ವಾ ವಾಕ್ಯಕೃತಿರ್ವೇದೇ ॥ ವೈಶೇಷಿಕ ದರ್ಶನ ೬-೧-೧ ॥

ವಾಗಿಯೂ ಋಷಿ ಎಂದು ಪ್ರಾಚೀನ ವೇದಾಚಾರ್ಯರು ಹೇಳಿದ್ದಾರೆ. ಆದುದರಿಂದ ವೇದಮಂತ್ರಗಳ ವ್ಯಾಖ್ಯಾನ ಮಾಡುವವರು ಈ ಎಲ್ಲಾ ರಹಸ್ಯಗಳನ್ನೂ ತಿಳಿದು ಕೊಳ್ಳಬೇಕು.

ವೇದಮಂತ್ರಗಳ ವ್ಯಾಖ್ಯಾನದ ಬಗ್ಗೆ, ಋಷಿಗಳು ಇನ್ನೊಂದು ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ಅದೇನೆಂದರೆ, ಈ ಅರ್ಥಗಳು ಮೇಲೆ ಹೇಳಿದ ವಿಭಿನ್ನ ಪ್ರಕಾರದ ವೈದಿಕ ಯಜ್ಞಗಳಲ್ಲಿ ಉಪಯುಕ್ತವಾಗಬೇಕು.[೬] ಯಜ್ಞ ಅಂದರೆ ಶ್ರೇಷ್ಠತಮ ಕರ್ಮವಾಗಿರು ವುದರಿಂದ[೭], ದುಷ್ಕೃತ್ಯ ಅಥವಾ ಕುವಿಚಾರಗಳನ್ನು ಪ್ರೇರಿಸುವ ಮಂತ್ರ-ವ್ಯಾಖ್ಯಾನಗಳು ವೇದವಿರುದ್ಧವಾಗಿವೆ.

ಕಡೆಗೆ, ಒಂದು ಮಾತು ವೇದಗಳನ್ನು ಓದಲಿಚ್ಛಿಸುವವರು ಗಮನದಲ್ಲಿಟ್ಟು ಕೊಳ್ಳಬೇಕಾದುದೇನೆಂದರೆ, ಯಾವಾತನು ಅವಿದ್ಯಾರೂಪೀ ನಿದ್ರೆಯಿಂದ ಎಚ್ಚತ್ತಿರು ವನೋ, ಪವಿತ್ರ ಅಂತಃಕರಣದಿಂದ ವೇದವಿದ್ಯೆಯನ್ನು ಪ್ರಾಪ್ತಿ ಮಾಡಿಕೊಳ್ಳಲು ಬಲವಾಗಿ ಇಚ್ಛಿಸುತ್ತಿರುವನೋ ವೇದವಿದ್ಯೆಯು ಅವನಿಗೆ ಮಾತ್ರ ಲಭಿಸುವುದಲ್ಲದೆ,[೮] ಪವಿತ್ರ, ಮೇಧಾವೀ, ಜಿತೇಂದ್ರಿಯ, ಪ್ರಮಾದರಹಿತ, ಕರ್ತವ್ಯಶೀಲ, ವಿನಯಶೀಲ, ಹಾಗೂ ಮನ, ವಚನ, ಮತ್ತು ಕಾರ್ಯದಲ್ಲಿ ಗುರುಜನರನ್ನು ಆದರಿಸುವ ಸ್ವಭಾವ ಉಳ್ಳವನಲ್ಲಿ ಮಾತ್ರ ಆ ವಿದ್ಯೆಯು ಫಲಿಸುವುದೆಂದು ಋಷಿಗಳು ಹೇಳಿದ್ದಾರೆ.[೯] ಆದುದರಿಂದ ಈ ಲಕ್ಷಣಗಳಿಲ್ಲದ ಪಂಡಿತರ ವೇದ-ಭಾಷ್ಯಗಳನ್ನು ಓದಿ ಪ್ರಯೋಜನ ವಿಲ್ಲ, ಹಾಗೂ, ಉಕ್ತ ಪ್ರಕಾರದ ಪಾತ್ರತೆ ಇಲ್ಲದವರು ವೇದಗಳನ್ನು ಓದಿ ಫಲವಿಲ್ಲ. ವೇದಗಳು ಕತೆ, ಕಾದಂಬರಿ ಅಥವಾ ಸಾಧಾರಣ ಕವಿತೆಗಳಲ್ಲ; ಗಂಭೀರ ಮನನ, ಅಥವಾ ಚಿಂತನ ಮಾಡಬೇಕಾದಂತಹ ವಿಷಯಗಳಾದುದರಿಂದಲೇ ಅವುಗಳನ್ನು ಮಂತ್ರ ಗಳೆಂದು ಹೇಳುತ್ತಾರೆ.

## ವೇದಗಳ ಶಾಖೆಗಳು

ವೇದವಾಣಿಯು ಮೂಲಸ್ಥಿತಿಯಲ್ಲಿ ಪ್ರವಾಹಮಯವಾಗಿತ್ತು. ಆದುದ ರಿಂದಲೇ ಇದನ್ನು ಸಂಹಿತೆ ಎಂದು ಕರೆಯುತ್ತಾರೆ. ಇದರಲ್ಲಿ ಪದಗಳು ಒಂದಕ್ಕೊಂದು ಸೇರಿ ಸಂಧಿಯುಕ್ತವಾಗಿದ್ದುವು. ಉದಾತ್ತಾದಿ ಸ್ವರಗಳಿಂದಾಗಿಯೇ ಮಂತ್ರಗಳು ಪ್ರವಾಹಮಯವಾಗಿ ಕಾಣುತ್ತಿದ್ದುವು. ಇದೇ ಪದಗಳ ಸ್ವಾಭಾವಿಕ ಸ್ಥಿತಿಯಾಗಿತ್ತು.[೧೦] ಕಾಲಕ್ರಮೇಣ, ಮಾನುಷೀ ಭಾಷೆಯು ವೇದಭಾಷೆಗಿಂತ ಭಿನ್ನವಾಗುತ್ತಾ ಬಂತಲ್ಲದೆ, ಜನರಲ್ಲಿ ಮೇಧಾಶಕ್ತಿಯೂ ಕಡಿಮೆಯಾಗುತ್ತಾ ಬಂತು. ಆದುದರಿಂದ ಜನರಿಗೆ ಮಂತ್ರಗಳ ಅರ್ಥವನ್ನು ತಮಗಿಂತ ಶ್ರೇಷ್ಠ ಆಚಾರ್ಯರಿಂದ ಕಲಿಯಬೇಕಾಗಿ ಬಂತು.

---

[೬] ಯಜ್ಞೇನ ವಾಚಃ ಪದವೀಯಮಾಯಂತಾಮನ್ವವಿಂದನ್ನೃಷಿಷು ಪ್ರವಿಷ್ಟಾಂ ॥ ಋಗ್. ೧೦-೭೧-೩ ॥

[೭] ಯಜ್ಞೋ ವೈ ಶ್ರೇಷ್ಠತಮಂ ಕರ್ಮ ॥ ಶತಪಥಬ್ರಾಹ್ಮಣ ೧-೭-೧-೫ ॥

[೮] ಯೋ ಜಾಗಾರ ತಮೃಚಃ ಕಾಮಯಂತೇ......... ॥ ಋಗ್. ೫-೪೪-೧೪ ॥

[೯] ನಿರುಕ್ತ ೨-೧ ॥ ಮತ್ತು ಮನುಸ್ಮೃತಿ ೨-೧೧೪ ॥

[೧೦] ಪದಪ್ರಕೃತಿಃ ಸಂಹಿತಾ ॥ ಋಕ್, ಪ್ರಾತಿಶಾಖ್ಯ ॥ ಮತ್ತು ಪರಃ ಸನ್ನಿಕರ್ಷಃ ಸಂಹಿತಾ ಅಷ್ಟಾಧ್ಯಾಯೀ ಸೂತ್ರಪಾಠ ೧-೪-೧೦೯ ॥

ಆ ಸಮಯದಲ್ಲಿ ಮಂತ್ರಗಳಲ್ಲಿರುವ ಪದಗಳನ್ನು ಸಂಧಿ ಬಿಂಗಡಿಸಿ ತೋರಿಸುವ ಪದ್ಧತಿಯು ಪ್ರಾರಂಭವಾಯಿತು. ಈ ರೀತಿ ಪದ ಪಾಠದ ಕ್ರಮವು ಉತ್ಪನ್ನವಾಯಿತು. ಇದು ವೇದಭಾಷ್ಯದ ಪ್ರಾರಂಭಿಕ ಸ್ಥಿತಿಯಾಗಿತ್ತು. ಇದರೊಟ್ಟಿಗೆಯೇ ವೇದಗಳ ಶಾಖೆಗಳೂ ಉತ್ಪನ್ನವಾದುವೆಂದು ತೋರುತ್ತದೆ.

ಯದ್ಧಿ ಸಂಧಿವಿವರ್ತಯತಿ ತನ್ನಿರ್ಭುಜಸ್ಯ ರೂಪಂ
ಅಥ ಯಚ್ಛುದ್ಧೇ ಅಕ್ಷರೇ ಅಭಿವ್ಯಾಹರತಿ ತತ್ಪ್ರತೃಣ್ಣಸ್ಯ ॥
[ಐತರೇಯ ಆರಣ್ಯಕ ೩-೧೩]

ಅಂದರೆ, ಮಂತ್ರಗಳ ಮೂಲ ಸ್ವರೂಪವು ನಿರ್ಭುಜ ಸಂಹಿತೆ, ಮತ್ತು ಸಂಧಿ ಬಿಂಗಡಿಸಿ ಓದುವುದು ಪ್ರತೃಣ್ಣ ಸಂಹಿತೆ. ಇಲ್ಲಿ ಮಂತ್ರಗಳಲ್ಲಿ ಯಾವುದೇ ರೀತಿಯ ನ್ಯೂನಾಧಿಕತೆ ಇಲ್ಲ. ಪ್ರಾಚೀನ ಕಾಲದಲ್ಲಿ ಇದೇ ರೀತಿಯ ಶಾಖೆಗಳಿದ್ದುವು. ಉದಾಹರಣೆಗಾಗಿ, "ಅಗ್ನಿಮೀಳೇ ಪುರೋಹಿತಂ" ಎಂಬ ಪಾಠವು ನಿರ್ಭುಜ ಸಂಹಿತೆ ಮತ್ತು "ಅಗ್ನಿಂ । ಈಳೇ । ಪುರೋಹಿತಂ" ಎಂಬುದು ಪ್ರತೃಣ್ಣ ಸಂಹಿತೆ. ಕೆಲವರು ಕೇವಲ ಸಂಹಿತಾಪಾಠವನ್ನೂ ಕಲಿಯಲಿಕ್ಕೆ ಪ್ರಾರಂಭ ಮಾಡಿದರು. ಈ ಶಾಖೆಗಳಿಂದಾಗಿಯೇ ಗೋತ್ರಗಳೂ ಬಳಕೆಗೆ ಬಂದುವು. ಶಾಖಾ ಪ್ರವರ್ತಕರೇ ಗೋತ್ರಪ್ರವರ್ತಕರೆಂದು ಪ್ರಸಿದ್ಧರಾದರು. ವೇದಗಳನ್ನು ಕಲಿಸುವವನು ಪಿತನೆಂದೂ ಅಜ್ಞಾನಿಯು ಬಾಲಕನೆಂದೂ ಋಷಿಗಳು ಹೇಳಿದ್ದಾರೆ.[೧೧] ಈ ರೀತಿ ಪದಪಾಠವು ಪ್ರಥಮ ವೇದಭಾಷ್ಯವೆಂದೂ, ಶಾಖೆಗಳು ಅತಿ ಪ್ರಾಚೀನ ಕಾಲದ ವೇದಪಾಠದ ಪದ್ಧತಿಗಳೆಂದೂ ಗೊತ್ತಾಗುತ್ತದೆ.

ಕಾಲಕ್ರಮೇಣ ವೇದಗಳ ಶುದ್ಧ ಸ್ವರೂಪದ ರಕ್ಷಣೆಗಾಗಿ ಮಂತ್ರಗಳನ್ನು ಪಾಠ ಮಾಡುವ ಅನೇಕ ಕ್ರಮಗಳ ಆಯೋಜನೆಯಾಯಿತು. ಪ್ರತಿಯೊಂದು ಕ್ರಮವೂ ಬೇರೆ ಬೇರೆ ಶಾಖೆಯಾಗಿ ಪ್ರಸಿದ್ಧವಾಯಿತು. ಮೇಲೆ ಹೇಳಿದ ಎರಡು ಪ್ರಕಾರದ ಸಂಹಿತೆಗಳ ಯೋಗ ಮತ್ತು ಘನ, ಜಟಾ, ಮಾಲಾ ಮೊದಲಾದ ಭೇದಗಳಿಂದ ಮೂಲ ಸಂಹಿತೆಗಳ ಸ್ವರೂಪದಲ್ಲಿ ವಿಕೃತ ರೂಪಗಳಾಗುತ್ತವೆ.[೧೨] ಮೂಲ ಸಂಹಿತೆಯೊಟ್ಟಿಗೆ ಪದವಿಗ್ರಹ, ಹಾಗೂ ಪದಗಳ ವಿಕೃತಿಯನ್ನು ಕೂಡ ಪಾಠ ಮಾಡಿದರೆ, ಅದು ಕ್ರಮಸಂಹಿತೆಯೆನಿಸುತ್ತದೆ.

ವ್ಯಾಸ ಮುನಿಗಳು ಜಟಾ, ಮಾಲಾ, ಶಿಖಾ, ಲೇಖಾ, ಧ್ವಜ, ದಂಡ, ರಥ, ಮತ್ತು ಘನ ಎಂಬ ಎಂಟು ಪಾಠಭೇದಗಳನ್ನು ಉಲ್ಲೇಖಿಸಿದ್ದಾರೆ.[೧೩] ಈ ಭೇದಗಳಿಂದಾಗಿ ಪ್ರಾರಂಭದಲ್ಲಿ ಎಂಟು ಶಾಖಾಭೇದಗಳಾದುವು. ಬಳಿಕ ಹತ್ತು, ಹನ್ನೆರಡು ಶಾಖೆಗಳಾಗುತ್ತವೆ. ಪ್ರಾಚೀನ ವೇದಾಚಾರ್ಯರು ಇಷ್ಟರಲ್ಲಿಯೇ ತೃಪ್ತರಾಗದೆ, ಗೋತ್ರ

---

[೧೧] ಅಜ್ಞೋ ಭವತಿ ವೈ ಬಾಲಃ ಪಿತಾ ಭವತಿ ಮಂತ್ರದಃ ।
ಅಜ್ಞಂ ಹಿ ಬಾಲಮಿತ್ಯಾಹುಃ ಪಿತೇತ್ಯೇವ ತು ಮಂತ್ರದಂ ॥ ಮನುಸ್ಮೃತಿ ೨-೧೫೩ ॥

[೧೨] ಅಗ್ರ ಉ ಏವೋಭಯಮಂತರೇಣೋಭಯ ವ್ಯಾಪ್ತಂ ಭವತಿ ॥ ಐತರೇಯ ಆರಣ್ಯಕ [೩-೧೩]

[೧೩] ಜಟಾ ಮಾಲಾ ಶಿಖಾಲೇಖಾ ಧ್ವಜೋ ದಂಡೋ ರಥೋ ಘನಃ ।
ಅಷ್ಟೌ ವಿಕೃತಯಃ ಪ್ರೋಕ್ತಾಃ ಕ್ರಮಪೂರ್ವಾ ಮನೀಷಿಭಿಃ ॥ ವಿಕೃತವಲ್ಲೀ ೧-೫ ॥

ಪ್ರವರ್ತನೆ ಮತ್ತು ಶಾಖಾಸಂಪ್ರದಾಯಗಳಿಂದ ಪ್ರೇರಿತರಾಗಿ ಇನ್ನೂ ಅನೇಕ ಶಾಖೆಗಳಿಗೆ ಜನ್ಮವಿತ್ತರು. ದೇವತೆ, ಋಷಿ, ಅರ್ಥ, ಛಂದೋಭೇದಗಳಿಂದ ಸೂಕ್ತಭೇದಗಳೂ ಉತ್ಪನ್ನವಾದುವು, ಎಂದು ಶೌನಕಾಚಾರ್ಯರು ಹೇಳಿದ್ದಾರೆ.[೧೪] ದೇವತೆಗಳ ಆಧಾರದ ಮೇಲೆ ರಚಿಸಿದ ಸೂಕ್ತ ಕ್ರಮದಿಂದ ದೈವತಶಾಖೆ, ಋಷಿಗಳ ಹೆಸರುಗಳನ್ನನುಸರಿಸಿ ಆರ್ಷ ಶಾಖೆ, ಅರ್ಥವನ್ನನುಸರಿಸಿ ಅರ್ಥಶಾಖೆ ಮತ್ತು ಛಂದಸ್ಸುಗಳನ್ನನುಸರಿಸಿ ಛಾಂದಸ ಶಾಖೆ ಏದಾಯಿತು. ಹೀಗೆ ಪ್ರತಿಯೊಂದು ಸಂಹಿತೆಗೂ ಹತ್ತು ಹದಿನೈದು ಶಾಖೆಗಳಾದುವು. ಗೋತ್ರಪ್ರವರ್ತಕ ಋಷಿಗಳಿಗೆ ಇಷ್ಟೇ ಶಾಖೆಗಳ ಪರಿಚಯವಿದ್ದಂತೆ ಕಾಣುತ್ತದೆ. ಮಂತ್ರಗಳ ಪಾಠಕ್ರಮದಲ್ಲಿ ಇಷ್ಟೊಂದು ಭೇದಗಳಾದರೂ, ಇಷ್ಟರತನಕ ಮೂಲಮಂತ್ರಗಳಲ್ಲಿ ಯಾವುದೇ ರೀತಿಯ ಭೇದವಾಗಲೀ ನ್ಯೂನಾಧಿಕತೆಯಾಗಲೀ ಉತ್ಪನ್ನವಾಗಲಿಲ್ಲ. ಪಠನಪಾಠನ ಕ್ರಮವು ಮಾನುಷೀ ಆದುದರಿಂದ ಅವರಲ್ಲಿ ಭಿನ್ನತೆ, ಅಥವಾ ವೈವಿಧ್ಯತೆಯು ಉತ್ಪನ್ನವಾಗುವುದು ಸ್ವಾಭಾವಿಕ. ಆದರೆ, ಮೂಲ ಸಂಹಿತೆಗಳಲ್ಲಿ ಯಾವ ರೀತಿಯ ಭಿನ್ನತೆ ಅಥವಾ ವಿಕೃತಿಯು ಆಗಬಾರದೆಂದೇ ಪ್ರಾಚೀನ ವೇದಾಚಾರ್ಯರ ವಿಚಾರವಾಗಿತ್ತು. 'ಆಖ್ಯಾ ಪ್ರವಚನಾತ್'[೧೫] ಅಂದರೆ ಪ್ರವಚನದ ಭೇದದಿಂದಲೇ ಶಾಖಾಭೇದಗಳಾದುವೆಂದು ಜೈಮಿನಿ ಋಷಿಗಳೂ ಹೇಳಿದ್ದಾರೆ. ಇದರಿಂದ ವೇದಗಳ ಶಾಖೆಗಳೆಂದರೆ, ವೇದಗಳ ಭಾಗ, ಅಂಶ, ಚರಣ ಎಂದಿತ್ಯಾದಿ ಅರ್ಥ ಮಾಡುವುದು ಸರಿಯಲ್ಲ, ಶಾಖೆಗಳೆಂದರೆ, ಪಠನ ಮಾಡುವ ಶೈಲಿ, ಕ್ರಮ ಅಥವಾ ಪ್ರವಚನ ಎಂದೇ ತಿಳಿದುಕೊಳ್ಳಬೇಕು. ಪತಂಜಲೀ ಋಷಿಗಳೂ ಕೂಡ'ಗೋತ್ರಂ ಚ ಚರಣೈಃ ಸಹ' ಅಂದರೆ, ಗೋತ್ರಗಳು ಚರಣ, ಆಚರಣೆ, ಪಠನ, ಅಧ್ಯಯನ, ಅಂದರೆ, ಶಾಖೆಗಳೊಟ್ಟಿಗೆ ನಡೆಯುತ್ತವೆ ಎಂದು ಹೇಳಿದ್ದಾರೆ.[೧೬] 'ಚರಣ ಶಬ್ದಾಧ್ಯಯನ ವಚನಃ' ಅರ್ಥಾತ್, ಚರಣವೆಂದರೆ ಅಧ್ಯಯನವೆಂದೇ ಅರ್ಥವಾಗುತ್ತದೆ ಎಂದು ಕೈಯಟರು ಮಹಾಭಾಷ್ಯಾಕಾರಿಕೆಯಲ್ಲಿ ವಿವರಿಸಿದ್ದಾರೆ. ಇದರಿಂದಲೂ, ವೇದಗಳ ಶಾಖೆಗಳೆಂದರೆ ವೃಕ್ಷ ಅಥವಾ ನದಿಗಳ ಶಾಖೆಗಳಂತೆ ಅಲ್ಲ, ಇವು ಕೇವಲ ಪಠನಪಾಠನ, ಅಥವಾ ಅಧ್ಯಯನ, ಪ್ರವಚನ ಕ್ರಮದ ಪರಂಪರೆ ಅಥವಾ ಸಂಪ್ರದಾಯ, ಎಂದೇ ಅರ್ಥವಾಗುತ್ತದೆ.[೧೭]

ಸಮಯವು ಕಳೆದಂತೆ, ವೇದಗಳ ಪ್ರವಚನಭೇದ, ಮತ್ತು ತದನುಸಾರವಾಗಿ ಶಾಖಾಭೇದಗಳಲ್ಲಿ ಉತ್ತರೋತ್ತರ ವೃದ್ಧಿಯಾಯಿತು. ಮಹಾ ಭಾಷ್ಯಕಾರ ಪತಂಜಲಿ ಮುನಿಗಳು ನಾಲ್ಕೂ ಸಂಹಿತೆಗಳಿಗೆ ಒಟ್ಟು ೧೧೩೧ ಶಾಖೆಗಳಿದ್ದುವೆಂದೂ, ಸರ್ವಾನುಕ್ರಮಣಿಕೆಯಲ್ಲಿ ೧೧೩೭, ಕೂರ್ಮಪುರಾಣದಲ್ಲಿ ೧೧೩೦, ಚರಣವ್ಯೂಹದಲ್ಲಿ

[೧೪] ದೇವತಾರ್ಷಾರ್ಥ ಛಂದೇಭ್ಯೋ ವೈವಿಧ್ಯಂ ತಸ್ಯ ಜಾಯತೇ ॥ ಬೃಹದ್ದೇವತಾ [೧-೧೪]

[೧೫] ಮೀಮಾಂಸಾ ದರ್ಶನ ೧-೧-೩೦

[೧೬] ವ್ಯಾಕರಣ ಮಹಾಭಾಷ್ಯ ೪-೧-೬೩ ॥

[೧೭] "ತತ್ತ್ವತೋ ನ ಹಿ ವೇದಶಾಖಾವೃಕ್ಷಶಾಖೇವ ನಾಪಿ ನದೀಶಾಖೇವ ಪ್ರತ್ಯುತಾಧ್ಯೇತೃಭೇದಾತ್ ಸಂಪ್ರದಾಯ ಭೇದಜಸ್ಯಾಧ್ಯಯನ ವಿಶೇಷ ರೂಷೈವ." ಐತರೇಯಾಲೋಚನೆಯಲ್ಲಿ ಪಂಡಿತ ಸತ್ಯವ್ರತ ಸಾಮಶ್ರಮಿ.

೧೧೧೭ ಶಾಖೆಗಳಿದ್ದುವೆಂದೂ ಬರೆದಿದ್ದಾರೆ. ಅನ್ಯ ಗ್ರಂಥಗಳಲ್ಲಿಯೂ ಶಾಖೆಗಳ ಒಟ್ಟು ಸಂಖ್ಯೆಗಳ ಕುರಿತಾಗಿ ಭಿನ್ನಾಭಿಪ್ರಾಯಗಳಿವೆ.[೧೮]

ಈ ಭಿನ್ನಾಭಿಪ್ರಾಯಗಳಿಗೆ ಕಾರಣವೇನೆಂದರೆ, ಪ್ರಾರಂಭದಲ್ಲಿ ಶಾಖಾಭೇದವು ಪಾಠಕ್ರಮ ಭೇದವನ್ನೇ ಹೊಂದಿಕೊಂಡಿತ್ತು. ಮಂತ್ರಗಳಲ್ಲಿ ನ್ಯೂನಾಧಿಕತೆ ಅಥವಾ ಶಬ್ದಭೇದಗಳಿರಲಿಲ್ಲ. ಆದರೆ, ಕೃಷ್ಣ ಯಜುರ್ವೇದದ ಉತ್ಪತ್ತಿಯಾದ ಕೂಡಲೇ ವೇದಗಳ ಶಾಖೆಗಳಲ್ಲಿ ಈ ಭೇದವೂ ಉತ್ಪನ್ನವಾಯಿತು. ಮೂಲಸಂಹಿತೆಯಲ್ಲಿ ರಾವಣಾದಿ ಕೃತ ಸಾಹಿತ್ಯ, ಬ್ರಾಹ್ಮಣ ಹಾಗೂ ಬ್ರಾಹ್ಮಣೇತರ ಭಾಗಗಳ ಮಿಶ್ರಣ, ಮೂಲಮಂತ್ರಗಳ ಪಾಠದಲ್ಲಿ ಶಬ್ದ ಪರಿವರ್ತನೆ, ಲೋಪ ಇತ್ಯಾದಿಗಳಿಂದಲೂ ಶಾಖಾ ಭೇದಗಳಾದುವು.

ಮೂಲಮಂತ್ರಗಳ ಸ್ವರೂಪವನ್ನು ಬದಲಾಯಿಸದೆ, ಅಥವಾ ಅದರಲ್ಲಿ ನ್ಯೂನಾಧಿಕತೆಯನ್ನುಂಟು ಮಾಡದೆ, ಕೇವಲ ಪಾಠಕ್ರಮದ ದೃಷ್ಟಿಯಿಂದ ಉತ್ಪನ್ನವಾದ ಶಾಖೆಗಳೆಲ್ಲಾ ಆರ್ಯಶಾಖೆಗಳೆನಿಸಿಕೊಂಡಿವೆ. ಶಾಕಲ, ಬಾಷ್ಕಲ ಶಾಖೆಗಳು ಆರ್ಯಶಾಖೆಗಳಾಗಿವೆ. ತೈತ್ತಿರೀಯ, ಕಾಠಕಾದಿ ಶಾಖೆಗಳಲ್ಲಿ ಮೂಲಮಂತ್ರಗಳಲ್ಲಿ ಭೇದವನ್ನುಂಟುಮಾಡಿದ್ದಾರೆ. ಇವುಗಳಲ್ಲಿ ಆಸುರೀಸಾಹಿತ್ಯ, ಬ್ರಾಹ್ಮಣ ಭಾಗ, ಮತ್ತು ಕಪೋಲಕಲ್ಪಿತ ಬಾಹ್ಯ ಸಂಸ್ಕೃತ ವಾಕ್ಯಗಳ ಮಿಶ್ರಣವಿದೆ. ಮಂತ್ರಾಂಶಗಳ ಲೋಪ ಮತ್ತು ವಿಕೃತಿಗಳಿವೆ. ಉದಾಹರಣೆಗಾಗಿ ಶೌನಕಶಾಖೆಯಲ್ಲಿ "ಶನ್ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ" [ಅಥರ್ವ. ೧-೬-೧] ಎಂದಿದೆ. ಆದರೆ ಪೈಪ್ಪಲಾದ ಶಾಖೆಯಲ್ಲಿ "ಶನ್ನೋ ದೇವೀರಭಿಷ್ಟಯ" ಎಂದಿದೆ. ಈ ರೀತಿ ಮೂಲ ಸಂಹಿತೆಯಲ್ಲಿ ಭೇದ ಉತ್ಪನ್ನ ಮಾಡಿದ ಶಾಖೆಗಳು ಅನಾರ್ಯ ಶಾಖೆಗಳೆನಿಸಿಕೊಂಡಿವೆ.

**ಋಗ್ವೇದ ಶಾಖೆಗಳು:**—ಮೇಲೆ ಹೇಳಿದಂತೆ ಒಂದು ಸಮಯದಲ್ಲಿ ಋಗ್ವೇದದ ಇಪ್ಪತ್ತೊಂದು ಶಾಖೆಗಳು ಪ್ರಸಿದ್ಧವಾಗಿದ್ದುವು. ಆದರೆ ಈಗ ಕೇವಲ ಎರಡೇ ಶಾಖೆಗಳು ಸಿಗುತ್ತವೆ: ಶಾಕಲ ಮತ್ತು ಬಾಷ್ಕಲ ಶಾಖೆಗಳು. ಹಿಂದೆ ಶಾಕಲ ಋಷಿಯು ಬಹಳ ಪ್ರಯತ್ನ ಪಟ್ಟು, ಋಗ್ವೇದದ ಎಲ್ಲಾ ಋಚೆಗಳನ್ನು ಅಧ್ಯಯನ ಮಾಡಿದನೆಂದೂ, ಅವನ ನಂತರ ಅನ್ಯ ನಾಲ್ಕು ಶಾಖಾಕಾರರು ಋಗ್ವೇದದ ಪ್ರವಚನ ಮಾಡಿದರು ಎಂದೂ ಋಕ್ ಪ್ರಾತಿ ಶಾಖ್ಯೆಯಲ್ಲಿ ಹೇಳಿದೆ.[೧೯] ಶಾಕಲ ಶಾಖೆಯ ಸಂಹಿತೆಯು ಆದಿ ಮತ್ತು

---

[೧೮] ಏಕಶತಮಧ್ವರ್ಯು ಶಾಖಾ ಸಹಸ್ರವರ್ತ್ಮಾ ಸಾಮವೇದಃ ।
ಏಕವಿಂಶತಿಧಾ ಬಾಹ್ವೃಚ್ಯಂ ನವಧಾಽಥರ್ವಣೋ ವೇದಃ ॥ ವ್ಯಾಕರಣ ಮಹಾಭಾಷ್ಯ ॥
ಏಕವಿಂಶತಿ ಭೇದೇನ ಋಗ್ವೇದ ಕೃತವಾನ್ ಪುರಾ ।
ಶಾಖಾನಾಂ ತು ಶತಂ ನಾಥ ಯಜುರ್ವೇದಮಥಾಕರೋತ್ ॥
ಸಾಮವೇದಂ ಸಹಸ್ರೇಣ ಶಾಖಾನಾಂ ಚ ವಿಭೇದತಃ ।
ಅಥರ್ವಾಣಮಥೋ ವೇದಂ ವಿಭೇದ ನವಕೇನ ತು ॥ ಕೂರ್ಮಪುರಾಣ ॥
ಸಾಮವೇದಸ್ಯ ಕಿಲ ಸಹಸ್ರಭೇದಾ ಆಸನ್ ।
ಯಜುರ್ವೇದಸ್ಯ ಷಡಶೀತಿಭೇದಾ ಭವಂತಿ ಅಥರ್ವವೇದಸ್ಯ ನವಭೇದಾ ಭವಂತಿ ॥
ಚರಣವ್ಯೂಹ ॥

[೧೯] ಋಚಾಂ ಸಮೂಹ ಋಗ್ವೇದಸ್ತಮಭ್ಯಸ್ಯ ಪ್ರಯತ್ನತಃ ।
ಪಠಿತಃ ಶಾಕಲೇನಾದೌ ಚತುರ್ಭಿಸ್ತದನಂತರಂ ॥

ಅಂತ್ಯವು ಒಂದೇ ರೀತಿಯಾಗಿದೆ. ಸರ್ಪದ ಚಲನೆಯಂತೆ ಇದರ ಗತಿಯೂ ಸಮಾನವಾಗಿದೆ ಎಂದು ಐತರೇಯ ಬ್ರಾಹ್ಮಣದಲ್ಲಿ ವರ್ಣನೆ ಇದೆ.[೨೦] ಮಂಡಲ, ಅನುವಾಕ, ಮತ್ತು ಸೂಕ್ತಗಳ ರೂಪದಲ್ಲಿ ಮಂತ್ರಗಳ ವ್ಯವಸ್ಥೆ ಇರುವುದು ಶಾಕಲ ಸಂಹಿತೆಯ ಲಕ್ಷಣ.[೨೧] ಇದೇ ಅತಿ ಪ್ರಾಚೀನ ಉಪಲಬ್ಧ ಋಗ್ವೇದದ ಶಾಖೆಯಾಗಿದೆ.

ಶಾಕಲ ಋಷಿಯ ಶಿಷ್ಯ ಪರಂಪರೆಯಲ್ಲಿ ಆಚಾರ್ಯ ಶಿಶಿರ, ಬಾಷ್ಕಲ, ಶಂಖ, ವಾತ ಮತ್ತು ಆಶ್ವಲಾಯನ—ಈ ಐದು ಮಂದಿ ಮಾತ್ರ ಶಾಖಾ ಪ್ರಚಾರಕರಾದರು.[೨೨] ಇವರಲ್ಲಿ ಬಾಷ್ಕಲನು ಋಗ್ವೇದವನ್ನು ಅಷ್ಟಕ, ಅಧ್ಯಾಯ ಮತ್ತು ವರ್ಗಗಳಾಗಿ ವಿಂಗಡಿಸಿದನು. ಶಾಕಲ ಶಾಖೆಯಲ್ಲಿ ಹತ್ತು ಮಂಡಲಗಳಿರುವುದರಿಂದ ಅದನ್ನು ದಾಶತಯೀ ಸಂಹಿತೆಯೆಂದೂ ಕರೆಯುವುದುಂಟು. ಉಕ್ತ ಎರಡೂ ಶಾಖೆಗಳಲ್ಲಿಯೂ ಕೇವಲ ಮಂತ್ರಗಳ ವಿಂಗಡದ ಕ್ರಮದಲ್ಲಿ ಮಾತ್ರ ಭೇದವಲ್ಲದೆ ಬೇರೆ ಯಾವ ಭೇದವೂ ಇಲ್ಲ. ಈ ಎರಡೂ ಶಾಖೆಗಳೂ ಈಗ ಒಟ್ಟಾಗಿ ದೊರೆಯುತ್ತವೆ. ಶಾಕಲನ ಇನ್ನೊಬ್ಬ ಶಿಷ್ಯ ಶಂಖನು ಪ್ರಚಾರ ಮಾಡಿದ ಶಾಂಖಾಯನೀ ಶಾಖೆಯು ಕಲ್ಕತ್ತೆಯ ಏಶಿಯಾಟಿಕ್ ಸೊಸೈಟಿ ಗ್ರಂಥಾಲಯದಲ್ಲಿ ದೊರೆಯುತ್ತದೆ. ಇದು ಅಸ್ತವ್ಯಸ್ತವಾಗಿಹೋಗಿದೆ. ಅಲ್ಲದೆ, ಶಾಕಲ ಶಾಖೆಗಿಂತ ಇದು ಅಧಿಕ ಮಹತ್ವಪೂರ್ಣವಾದ ಶಾಖೆಯಲ್ಲ.

**ಯಜುರ್ವೇದದ ಶಾಖೆಗಳು**:—ಯಜುರ್ವೇದದ ನೂರ ಒಂದು ಶಾಖೆಗಳಿದ್ದುವೆಂದು ಮೇಲೆ ತಿಳಿಸಿದ್ದೇವೆ. ಇವುಗಳಲ್ಲಿ ಹದಿನೈದು ಶಾಖೆಗಳು ಶುಕ್ಲ ಯಜುರ್ವೇದಕ್ಕೆ ಮತ್ತು ಎಂಬತ್ತಾರು ಶಾಖೆಗಳು ಕೃಷ್ಣಯಜುರ್ವೇದಕ್ಕೆ ಸೇರಿವೆ. ಈಗ ಉಕ್ತ ನೂರ ಒಂದು ಶಾಖೆಗಳಲ್ಲಿ ಸಿಗುವುದು ಕೇವಲ ಐದು ಮಾತ್ರ. ಇವುಗಳಲ್ಲಿ ಮೂರು ಶಾಖೆಗಳು ಕೃಷ್ಣಯಜುರ್ವೇದಕ್ಕೆ ಸಂಬಂಧಪಟ್ಟಿವೆ. ಕೃಷ್ಣಯಜುರ್ವೇದವು ರಾವಣನ ಕಾಲದಿಂದ ನಡೆದುಬಂದಿದೆ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ. ಇದರಲ್ಲಿ ಮೂಲ ಯಜುರ್ವೇದ ಸಂಹಿತೆಯ ಮಂತ್ರಗಳು ಪೂರ್ಣವಿಲ್ಲ. ಅಲ್ಲದೆ, ರಾವಣ ಕೃತ ವೇದ ಭಾಷ್ಯ, ಬ್ರಾಹ್ಮಣ ಗ್ರಂಥ ಇತ್ಯಾದಿಗಳ ಆಂಶಿಕ ಮಿಶ್ರಣವನ್ನೂ ಕೃಷ್ಣಯಜುರ್ವೇದದಲ್ಲಿ ಕಾಣಬಹುದು.

**ಕೃಷ್ಣ ಯಜುರ್ವೇದದ ಶಾಖೆಗಳಲ್ಲಿ** ಈಗ ದೊರೆಯುವ ಮೂರು ಶಾಖೆಗಳಲ್ಲಿ ಒಂದು ತೈತ್ತಿರೀಯದ ಶಾಖೆ ಮತ್ತು ಎರಡು ಚರಕರ ಶಾಖೆಗಳಾಗಿವೆ. ಕಠ ಮತ್ತು ಮೈತ್ರಾಯಣೀ ಶಾಖೆಗಳು ಚರಕರ ಶಾಖೆಗಳು. ತೈತ್ತಿರೀಯ ಶಾಖೆಯವರೇ ಕೆಲವರು ಚರಕನೆಂಬ ಅಧ್ವರ್ಯುವನ್ನು ಆರಿಸಿ ಯಜ್ಞ ಮಾಡುತ್ತಿದ್ದುದರಿಂದ ಅವರಿಗೆ ಚರಕರೆಂದು ಹೆಸರಾಯಿತು, ಎಂದು ಪ್ರಸಿದ್ಧಿ ಇದೆ. ಕೃಷ್ಣಯಜುರ್ವೇದದ ಇನ್ನೊಂದು ಆಪಸ್ತಂಬ ಶಾಖೆಯೂ ಕೆಲವು ಕಡೆಗಳಲ್ಲಿ ಬಳಕೆಯಲ್ಲಿದ್ದಂತೆ ಕಾಣುತ್ತದೆ. ಕೃಷ್ಣ ಯಜುರ್ವೇದದ ಶಾಖೆಗಳೆಲ್ಲಾ ಆರ್ಯ ಸಂಪ್ರದಾಯಕ್ಕೆ ಸೇರಿದವುಗಳಲ್ಲ. ತೈತ್ತಿರೀಯ

---

[೨೦] ಯದಸ್ಯ ಪೂರ್ವಮಪರಂ ಯದಸ್ಯ ಯದ್ವಸ್ಯ ಪರಂ ತದ್ವಸ್ಯ ಪೂರ್ವಂ । ಅಹೇರಿವ ಸರ್ಪಣಾಂ ಶಾಕಲಸ್ಯ ನ ವಿಜಾನಂತಿ ಯತರತ್ ಪರಸ್ಮಾತ್ ॥ ಐತರೇಯ ಬ್ರಾಹ್ಮಣ ೧೪–೫ ॥

[೨೧] ಋಗ್ವೇದೇ ಶೈಶಿರೀಯಾಯಾಂ ಸಂಹಿತಾಯಾಂ ಯಥಾಕ್ರಮಂ ।
ಪ್ರಮಾಣಮನುವಾಕಾನಾಂ ಸೂಕ್ತೈಃ ಶೃಣುತ ಶಾಕಲಾಃ ॥ ಅನುವಾಕಾನುಕ್ರಮಣಿಕೆ ॥

[೨೨] ಶಿಶಿರೋ ಬಾಷ್ಕಲಃ ಶಾಂಖೋ ವಾತಶ್ಚೈವಾಶ್ವಲಾಯನಃ ।
ಪಂಚೈತೇ ಶಾಕಲಾಃ ಶಿಷ್ಯಾಃ ಶಾಖಾಭೇದ ಪ್ರವರ್ತಕಾಃ ॥ ವಿಕೃತವಲ್ಲೀ ಟೀಕೆ ॥

ಶಾಖೆಯಲ್ಲಿ ಹೊರಗಿನ ಸಾಮಗ್ರಿಗಳನ್ನು ಸೇರಿಸಿದ್ದಾರೆ. ಕಠ ಮತ್ತು ಮೈತ್ರಾಯಣಿ ಶಾಖೆಗಳಲ್ಲಿ ಅನೇಕ ಮೂಲಮಂತ್ರಗಳನ್ನು ಬಿಟ್ಟಿದ್ದಾರೆ. ಇಷ್ಟು ಮಾತ್ರವಲ್ಲದೆ ಅಲ್ಲಲ್ಲಿ ಪಾಠಭೇದವೂ ಕಂಡುಬರುತ್ತದೆ. ತೈತ್ತಿರೀಯ ಶಾಖೆಯಲ್ಲಿ ಮಂತ್ರಗಳ ಒಟ್ಟು ಸಂಖ್ಯೆ ೧೮೦೦೦ದ ತನಕ ಮುಟ್ಟಿದೆ. ಆದರೆ ಕಠ ಶಾಖೆಯಲ್ಲಿ ಕೇವಲ ೨೬೪ ಮತ್ತು ಮೈತ್ರಾಯಣಿ ಶಾಖೆಯಲ್ಲಿ ೭೫೪ ಮಂತ್ರಗಳಿವೆ.[೨೩]

ಯಜುರ್ವೇದದ ಉಳಿದ ಎರಡು ಶಾಖೆಗಳು ವಾಜಸನೇಯಿ ಶಾಖೆಗಳೆಂದು ಕೊಂಡಿವೆ. ಇವುಗಳು ಮಾಧ್ಯಂದಿನೀಯ ಮತ್ತು ಕಾಣ್ವ ಶಾಖೆಗಳೆಂದು ಪ್ರಸಿದ್ಧವಾಗಿವೆ. ದಕ್ಷಿಣ ಭಾರತದಲ್ಲಿ ಕಾಣ್ವ ಶಾಖೆಯು ಅಧಿಕ ಪ್ರಚಾರದಲ್ಲಿದೆ. ಇದರಲ್ಲಿ ಬೃಹದಾರಣ್ಯಕ ಭಾಗವು ಮಿಶ್ರಿತವಾಗಿದೆ. ಉವಟ ಮಹೀಧರ ದಯಾನಂದಾದಿ ವಿದ್ವಾಂಸರು ಮಾಧ್ಯಂದಿನೀಯ ಶಾಖೆಯ ಭಾಷ್ಯ ಬರೆದಿದ್ದಾರೆ. ಯಾಕೆಂದರೆ ಇದೇ ಮೂಲ ಯಜುರ್ವೇದದ ಸಂಹಿತೆಯೆಂದು ವಿದ್ವಾಂಸರ ಅಭಿಪ್ರಾಯ. ಶಂಕರಾಚಾರ್ಯರ ಪ್ರಧಾನ ಶಿಷ್ಯರಾದ ಸುರೇಶ್ವರಾಚಾರ್ಯರು ಕಾಣ್ವ ಸಂಹಿತೆಯ ಭಾಷ್ಯಕಾರರಾಗಿದ್ದರೆಂದು ವೇದಸರ್ವಸ್ವದಲ್ಲಿ ಸ್ವಾಮಿ ಹರಿಪ್ರಸಾದರು ಹೇಳಿದ್ದಾರೆ.

**ಸಾಮವೇದದ ಶಾಖೆಗಳು** —ಸಾಮವೇದದ ಶಾಖೆಗಳ ಸಂಖ್ಯೆ ಒಂದು ಕಾಲದಲ್ಲಿ ಸಾವಿರದ ತನಕ ಮುಟ್ಟಿತ್ತು. ಈಗ ಅವೆಲ್ಲಾ ಲುಪ್ತವಾಗಿವೆ. ಚರಣವ್ಯೂಹದ ಟೀಕೆಯಲ್ಲಿ ಮಹೀದಾಸರು ಸಾಮವೇದದ ಹದಿನಾರು ಶಾಖೆಗಳಲ್ಲಿ ಈಗ ಕೇವಲ ಮೂರು ಮಾತ್ರ ಸಿಕ್ಕುತ್ತವೆ—ಎಂದು ಹೇಳಿದ್ದಾರೆ.[೨೪] ಈ ಶಾಖೆಗಳು ಕೌಥುಮ, ರಾಣಾಯನೀ ಮತ್ತು ಜೈಮಿನೀಯ ಶಾಖೆಗಳೆಂದು ಪ್ರಸಿದ್ಧವಾಗಿವೆ. ಕೌಥುಮ ಮತ್ತು ರಾಣಾಯನಿ ಶಾಖೆಯಲ್ಲಿ ಅಧ್ಯಾಯ ಮತ್ತು ವಿಷಯ ವಿವರಗಳಲ್ಲೂ ಭೇದವಿಲ್ಲ. ಜೈಮಿನೀಯ ಶಾಖೆಯಲ್ಲಿ ಮಂತ್ರಗಳ ಸಂಖ್ಯೆ ಮತ್ತು ಪಾಠದಲ್ಲಿ ಭೇದವಿದೆ.

**ಅಥರ್ವವೇದದ ಶಾಖೆಗಳು** —ಅಥರ್ವವೇದದ ಒಂಬತ್ತು ಶಾಖೆಗಳಲ್ಲಿ ಈಗ ಕೇವಲ ಪೈಪ್ಪಲಾದ ಮತ್ತು ಶೌನಕ ಶಾಖೆಗಳು ಮಾತ್ರ ಸಿಗುತ್ತವೆ. ಗೋಪಥ ಬ್ರಾಹ್ಮಣಕ್ಕನುಸಾರವಾಗಿ ಅಥರ್ವವೇದದಲ್ಲಿ ಇಪ್ಪತ್ತು ಕಾಂಡಗಳಿವೆ. ಆದರೆ ಪೈಪ್ಪಲಾದ ಶಾಖೆಯಲ್ಲಿ ಹತ್ತೊಂಬತ್ತು ಕಾಂಡಗಳು ಮಾತ್ರ ಇವೆ. ಸ್ವಾಮಿ ಹರಿಪ್ರಸಾದರು ಅಥರ್ವವೇದದಲ್ಲಿ ಕೇವಲ ಹತ್ತೇ ಕಾಂಡಗಳಿವೆಯೆಂದು ಹೇಳಿದ್ದಾರೆ.[೨೫] ಇವರುಗಳನುಸಾರವಾಗಿ ಅಥರ್ವವೇದವು ಸ್ತುವಾನಮಗ್ನೇ [೧-೭-೧] ಎಂಬ ಮಂತ್ರದಿಂದ ಪ್ರಾರಂಭವಾಗುತ್ತದೆ ಮತ್ತು ವಶಾಂ ದೇವಾ [೧೦-೧೦-೩೪] ಈ ಮಂತ್ರದೊಟ್ಟಿಗೆ ಸಮಾಪ್ತವಾಗುತ್ತದೆ. ಉಳಿದ ಹತ್ತು ಕಾಂಡಗಳು ಆಗಿರೋ ವೇದ ಪರಿಶಿಷ್ಟವಾಗಿವೆ ಎಂದು ಇವರ ಅಭಿಪ್ರಾಯ. ಆದರೆ ಅಥರ್ವವೇದದ 'ಯಸ್ಮಾದೃಚೋ ಅಪಾತಕ್ಷನ್ ... ಅಥರ್ವಾಂಗಿರಸೋ ಮುಖಂ [ಅ ೧೦-೭-೨೦]

---

[೨೩] ಅಷ್ಟಾದಶ ಯಜುಃ ಸಹಸ್ರಮಧೀತ್ಯ ಶಾಖಾಪಾರೋ ಭವತಿ ॥ ಚರಣವ್ಯೂಹ ॥
ಮೂಲ ಯಜುರ್ವೇದದಲ್ಲಿ ಒಟ್ಟು ಮಂತ್ರಗಳ ಸಂಖ್ಯೆ ೧೯೦೦—
ದ್ವೇ ಸಹಸ್ರೇ ಶತಂ ನ್ಯೂನಂ ಮಂತ್ರೇ ವಾಜಸನೇಯಕೇ ॥

[೨೪] ಆಸಾಂ ಷೋಡಶಶಾಖಾನಾಂ ಮಧ್ಯೇ ತಿಸ್ರಃ ಶಾಖಾ ವರ್ತಂತೇ ಗುರ್ಜರದೇಶೇ ಕೌಥುಮೀ ಪ್ರಸಿದ್ಧಾ ಕರ್ಣಾಟಕೇ ಜೈಮಿನೀಯಾ ಪ್ರಸಿದ್ಧಾ ಮಹಾರಾಷ್ಟ್ರೇ ತು ರಾಣಾಯನೀಯಾ ॥

[೨೫] ನೋಡಿರಿ ವೇದಸರ್ವಸ್ವ ಪುಟ ೧೦೮

ಎಂಬ ಮಂತ್ರವು ಹತ್ತನೇ ಕಾಂಡದಲ್ಲಿಯೇ ಬರುವುದರಿಂದ ಅಥರ್ವಾಂಗಿರಸ ಸಂಬಂಧವು ಸಿದ್ಧವಾಗುತ್ತದೆ. ಆದುದರಿಂದ ಅಥರ್ವವೇದದಲ್ಲಿ ಹತ್ತೇ ಕಾಂಡಗಳಿವೆ ಎಂಬ ಮಾತು ಪ್ರಾಮಾಣಿಕವಲ್ಲ.

ಪೈಪ್ಪಲಾದ ಶಾಖೆಯು **"ಶಂನೋದೇವೀರಭಿಷ್ಟಯ......"** ಎಂಬ ಮಂತ್ರದಿಂದ ಆರಂಭವಾಗುತ್ತದೆ.[೨೬]

**ಮೂಲ ಸಂಹಿತೆಗಳಿಗೂ ಶಾಖೆಗಳಿಗೂ ಇರುವ ಭೇದ**:—ಈ ಮೊದಲು ಹೇಳಿದಂತೆ ಈ ಎಲ್ಲಾ ಶಾಖೆಗಳೂ ವೇದಗಳ ಪಠನಪಾಠನ ಕ್ರಮದ ವೈವಿಧ್ಯತೆಯನ್ನು ತೋರಿಸುತ್ತವೆಯಲ್ಲದೆ, ಈ ಶಾಖೆಗಳು ವೇದ ಪ್ರವಚನ ಅಥವಾ ಭಾಷ್ಯೆಯ ಪ್ರಾರಂಭಿಕ ಸ್ಥಿತಿಯನ್ನೂ ಸೂಚಿಸುತ್ತವೆ. ಆದುದರಿಂದಲೇ ಕೆಲವು ಶಾಖೆಗಳು ಕೇವಲ ಪದಪಾಠ ಮಾತ್ರವಾಗಿವೆ.

ವೇದಗಳ ಶಾಖೆಗಳು ಮೂಲ ಅಪೌರುಷೇಯ ಸಂಹಿತೆಗಳಲ್ಲ. **"ತೇನಪ್ರೋಕ್ತಂ"** [ಅಷ್ಟಾಧ್ಯಾಯಿಸೂತ್ರಪಾಠ ೪–೩–೧೦೧] ಎಂಬ ಸೂತ್ರದ ಭಾಷ್ಯೆಯಲ್ಲಿ **"ಯೋತ್ವಸೌ ವರ್ಣಾನುಪೂರ್ವೀ ಸಾಽನಿತ್ಯಾ । ತದ್‌ಭೇದಾಚ್ಚೈ ತದ್ಭವತಿ ಕಾಠಕಂ ಕಾಲಾಪಕಂ ಮೋದಕಂ ಪೈಪ್ಪಲಾದಿಕಮಿತಿ"** ಎಂದು ಪತಂಜಲಿ ಮುನಿಗಳು ಹೇಳಿದ್ದಾರೆ. ಇದೇ ಸಂದರ್ಭದಲ್ಲಿ **"ಪ್ರೋಕ್ತಂ ತೇನ ವ್ಯಾಖ್ಯಾತಂ ತದಧ್ಯಾಪಿತಂ ವಾ ಪ್ರೋಕ್ತಮಿತ್ಯುಚ್ಯತೇ"** ಎಂದು ನ್ಯಾಸಕಾರರು ಹೇಳಿದ್ದಾರೆ. ಇಲ್ಲಿ ಶಾಖೆಗಳು ವೇದಗಳ ಪಾಠಗಳು, ಪ್ರವಚನಗಳು; ಮೂಲ ಸಂಹಿತೆಗಳಲ್ಲವೆಂದು ಸ್ಪಷ್ಟವಾಗುತ್ತದೆ. ಪುನಃ **"ಅನುವಾದೇ ಚರಣಾನಾಂ"** ಎಂಬ ಸೂತ್ರದ [ಅ. ಸೂತ್ರಪಾಠ ೨–೪–೩] ಭಾಷ್ಯದಲ್ಲಿ **"ಅನುವದತೇ ಕಠ ಕಲಾಪಸ್ಯ"** ಎಂದು ಪತಂಜಲಿ ಮುನಿಗಳು ಉದಾಹರಣೆಯನ್ನೂ ಕೊಟ್ಟಿದ್ದಾರೆ. ಕಠರೆಂಬ ವೇದಾಚಾರ್ಯರು ಕಲಾಪ ಶಾಖೆಯನ್ನು ಅನುಸರಿಸಿ ಮಂತ್ರಗಳ ವ್ಯಾಖ್ಯಾನಮಾಡುತ್ತಾರೆ ಎಂದು ಈ ಉದಾಹರಣೆಯ ಅರ್ಥ. ಇದರಿಂದ ಕೆಲವು ಶಾಖೆಗಳು ಅವುಗಳಿಗಿಂತಲೂ ಮೊದಲು ಪ್ರಚಾರದಲ್ಲಿದ್ದ ಅನ್ಯ ಶಾಖೆಗಳ ವ್ಯಾಖ್ಯಾನಗಳಾಗಿವೆ ಎಂದೂ ಗೊತ್ತಾಗುತ್ತದೆ.

ಮೂಲ ಸಂಹಿತೆಗಳ ವರ್ಣಾನುಪೂರ್ವಿಯು ನಿತ್ಯವಾಗಿದೆ; ಆದರೆ ಶಾಖೆಗಳ ವರ್ಣಾನುಪೂರ್ವಿಯು ಅನಿತ್ಯವೆಂದು ಹೇಳಿ ಪತಂಜಲಿ ಮುನಿಗಳು ಸಂಹಿತೆಗಳಿಗೂ ಶಾಖೆಗಳಿಗೂ ಇರುವ ವ್ಯತ್ಯಾಸವನ್ನು ಸ್ಪಷ್ಟವಾಗಿ ತೋರಿಸಿದ್ದಾರೆ.[೨೭] ಶತಪಥ ಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯರು ಮೂಲಸಂಹಿತೆಗಳನ್ನು ದೈವೀಪಾಠ ಮತ್ತು ಶಾಖೆಗಳನ್ನು ಮಾನುಷಪಾಠವೆಂದು ಬಳಕೆಯಲ್ಲಿದ್ದ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಮಾನುಷ ಪಾಠವು ಯಜ್ಞದಲ್ಲಿ ನಡೆಯುವುದಿಲ್ಲ. ಆದುದರಿಂದ ವೇದಗಳ ಶಾಖೆಗಳು ಅಪೌರುಷೇಯುವಲ್ಲ ಎಂದು ಪ್ರಾಚೀನ ವೇದಾಚಾರ್ಯರ ಅಭಿಪ್ರಾಯುವಾಗಿತ್ತು.[೨೮]

---

[೨೬] ಶಂನೋದೇವೀರಭಿಷ್ಟಯ ಇತ್ಯೇವಮಾದಿ ಕೃತ್ವಾ ಅಥರ್ವವೇದಮಧೀಯತೇ ॥ ಗೋಪಥ ಬ್ರಾಹ್ಮಣ ೧–೧೯ ॥

[೨೭] ಸ್ವರೋನಿಯತಾಮ್ನಾಯೇಽಸ್ಯ ವಾಮಶಬ್ದಸ್ಯ । ವರ್ಣಾನುಪೂರ್ವೀ ಖಲ್ವಪ್ಯಾಮ್ನಾಯೇ ನಿಯತಸ್ಯ ವಾಮಶಬ್ದಸ್ಯ ॥ ವ್ಯಾಕರಣ ಮಹಾಭಾಷ್ಯ ೫–೨–೫೯ ॥

[೨೮] ತದು ಹೈಕೇಽನ್ವಾಹುಃ । ಹೋತಾ ಯೋ ವಿಶ್ವವೇದಸ ಇತಿ । ......... ತದ್ ತಥಾ ನ ಬ್ರೂಯಾತ್ ಮಾನುಷಂ ಹ ತೇ ಯಜ್ಞೇ ಕುರ್ವಂತಿ......... । ಯಥೈವ ಋಚಾಽನುಕ್ತಮೇವಾನು ಬ್ರೂಯಾದ್ಧೋತಾರಂ ವಿಶ್ವವೇದಸಾಮಿತಿ ॥ ಶತಪಥ ಬ್ರಾಹ್ಮಣ ೧–೪–೧–೩೫ ॥

# ವೇದಗಳ ಪದಪಾಠಗಳು

ವೇದಗಳ ಶಾಖೆಗಳು ವೇದಪಾಠಕ್ರಮ ಅಥವಾ ಪ್ರವಚನಗಳೆಂಬುದನ್ನು ನೋಡಿದ್ದೇವೆ ಶಾಖೆಗಳ ಉದಯವು ವೇದಭಾಷ್ಯದ ಪ್ರಾಥಮಿಕ ಸ್ಥಿತಿ ಎಂಬುದನ್ನೂ ಉಲ್ಲೇಖಿಸಿದ್ದೇವೆ ಸಮಯ ಕಳೆದಂತೆ ಜನರಿಗೆ ವೇದಮಂತ್ರಗಳು ಅಧಿಕ ಕ್ಲಿಷ್ಟವಾಗಿಯೂ ಅರ್ಥಗಳು ಅಧಿಕ ಅಸ್ಪಷ್ಟವಾಗಿಯೂ ಕಂಡುಬಂದಿರಬೇಕು ವೇದವಾಕ್ಯಗಳು ಸಂಹಿತೆಯ ರೂಪದಲ್ಲಿರುವುದರಿಂದ ಪ್ರಾತಿಪದಿಕ ಪ್ರತ್ಯಯ ಸಮಾಸ ಇತ್ಯಾದಿಗಳನ್ನು ಬಿಡಿಸಿ ತೋರಿಸಿ ಮಂತ್ರಾರ್ಥವು ಅಧಿಕ ಸುಗಮವಾಗುವಂತೆ ಮಾಡಲಾಯಿತು ಮಂತ್ರಗಳ ಈ ರೀತಿಯ ಪದವಿಭಾಗ ಪದ್ಧತಿಯೂ ಬಹು ಪುರಾತನ ಕಾಲದಿಂದಲೇ ನಡೆದು ಬಂದಿದೆ ಇದರಿಂದ ಮುಂದಿನ ಭಾಷ್ಯಕಾರರಿಗೆ ತುಂಬಾ ಸಹಾಯತೆಯು ದೊರೆಯಿತು ಅಲ್ಲದೆ ಮನಬಂದಂತೆ ಮಂತ್ರಗಳ ಪದವಿಭಾಗ ಮತ್ತು ತದನುಸಾರವಾಗಿ ಅರ್ಥ ಮಾಡುವುದು ಈ ಪದಪಾಠದಿಂದಾಗಿ ಅಸಾಧ್ಯವಾಯಿತು ಒಂದು ದೃಷ್ಟಿಯಿಂದ ಪದಪಾಠಗಳು ಮೂಲ ಸಂಹಿತೆ ಅರ್ಥವನ್ನು ಸುರಕ್ಷಿತವಾಗಿಡಲು ಸಹಾಯಕವಾಗಿವೆ

ಋಗ್ವೇದದ ಪದಪಾಠಕಾರರಲ್ಲಿ ಶಾಕಲ್ಯ ಮತ್ತು ರಾವಣರ ಹೆಸರುಗಳು ಪ್ರಸಿದ್ಧವಾಗಿವೆ ಯಜುರ್ವೇದದ ಮಾಧ್ಯಂದಿನ ಮತ್ತು ಕಾಣ್ವ ಶಾಖೆಗಳ ಪದಪಾಠಕಾರರ ಹೆಸರುಗಳು ಸಂದಿಗ್ಧವಾಗಿವೆ ಆತ್ರೇಯರು ತೈತ್ತಿರೀಯ ಸಂಹಿತೆಯ ಪದಪಾಠಕಾರರೆಂದು ಹೇಳುತ್ತಾರೆ ಗಾರ್ಗ್ಯರು ಸಾಮವೇದದ ಪದಪಾಠಕಾರರು ಆದರೆ ಅಥರ್ವವೇದದ ಪದಪಾಠಕಾರರ ಹೆಸರು ಅಜ್ಞಾತವಾಗಿದೆ

## ಪದಪಾಠದ ಕೆಲವು ನಿಯಮಗಳು

ಪದಪಾಠದಲ್ಲಿ ಸಮಾಸ ಪದಗಳನ್ನು ಬಿಡಿಸುವಾಗ ಬೇರೆ ಬೇರೆ ಭಾಗವನ್ನು ಸೂಚಿಸುವುದಕ್ಕಾಗಿ ಈ ರೀತಿ ऽ ಅವಗ್ರಹ ಚಿಹ್ನೆಯನ್ನು ಉಪಯೋಗಿಸುತ್ತಾರೆ ಹೇಗೆಂದರೆ—

ಪುರೋಹಿತಂ [ಋಗ್ ೧–೧–೧] — ಪುರಃऽಹಿತಂ

ತ್ರಿಸಪ್ತಾಃ [ಅಥರ್ವ ೧–೧–೧] — ತ್ರಿऽಸಪ್ತಾಃ

ಶುಕ್ಲ ಯಜುರ್ವೇದ ತೈತ್ತಿರೀಯ ಮೈತ್ರಾಯಣೀಯ ಮತ್ತು ಸಾಮವೇದದ ಪದಪಾಠಗಳಲ್ಲಿ ಪೂರ್ಣಪದಗಳ ಪುನರಾವೃತ್ತಿ ಮಾಡುವ ಕ್ರಮ ಇದೆ ಉದಾಹರಣೆಗೆ–

ಶ್ರೇಷ್ಠತಮಾಯ [ಶುಕ್ಲಯಜು ೧–೧]—ಶ್ರೇಷ್ಠತಮಾಯೇತಿ ಶ್ರೇಷ್ಠऽತಮಾಯ

ತೈತ್ತಿರೀಯ ಶಾಖೆಯಲ್ಲಿ ಅವಗ್ರಹದ ಬದಲಿಗೆ – ಈ ರೀತಿಯ ಚಿಹ್ನೆಯನ್ನು ಉಪಯೋಗಿಸುತ್ತಾರೆ, ಹೇಗೆಂದರೆ —

ಶ್ರೇಷ್ಠತಮಾಯೇತಿ ಶ್ರೇಷ್ಠ—ತಮಾಯ

ಋಗ್ವೇದ, ಯಜುರ್ವೇದ [ಶುಕ್ಲ], ಮೈತ್ರಾಯಣೀ ಮತ್ತು ಅಥರ್ವವೇದಗಳ ಪದಪಾಠಗಳಲ್ಲಿ ಇವ ಶಬ್ದವು ಸಮಸ್ತ ಪದವೆಂದು ಗಣನೆ ಮಾಡಲಾಗುತ್ತದೆ—

ಪಿತೇವ — ಪಿತಾಽಇವ [ಋಗ್. ೧–೧–೯]

ರಾಜೇವ — ರಾಜೇವೇತಿ ರಾಜಾಽಇವ [ಯಜು. ೧೩–೯]

ವಸ್ನೇವ — ವಸ್ನೇವೇತಿ ವಸ್ನಾ—ಇವ [ಮೈತ್ರಾ. ೧–೧೦–೨]

ಪಿತೇವ + ಪಿತಾಽಇವ [ಅಥರ್ವ. ೨–೧೩–೧]

ಸಾಮವೇದ ಮತ್ತು ತೈತ್ತಿರೀಯ ಪದಪಾಠಗಳಲ್ಲಿ ಇವ ಎಂಬುದು ಬೇರೆ ಪದವೆಂದು ಗಣಿಸಲಾಗಿಗುತ್ತದೆ—

ಕ್ಷೋಣೀರಿವ — ಕ್ಷೋಣೀ । ಇವ [ಸಾಮ.ಪೂ. ೪–೪–೪]

ರಾಜೇವ — ರಾಜಾ । ಇವ ತ್ರೈ. ಸಂ. ೧–೨–೧೪–೨೮

ಪದಪಾಠದಲ್ಲಿ ಅವಗ್ರಹವನ್ನು ಪ್ರಯೋಗಿಸಿದಾಗ ಕೆಲವು ಸ್ವರವ್ಯತ್ಯಾಸಗಳಾಗುತ್ತವೆ. ಸ್ವರಿತದ ಬಳಿಕ ಅವಗ್ರಹವು ಬಂದರೆ, ಆ ಬಳಿಕದ ಅನುದಾತ್ತವು ಪ್ರತ್ಯಯವಾಗುತ್ತದೆ. ಉದಾತ್ತದ ಬಳಿಕ ಅನುದಾತ್ತವು ಬಂದರೆ ಅದು ಸ್ವರಿತವಾಗುತ್ತದೆ—

ವೀರವತ್ತಮಂ — ವೀರವತ್ಽತಮಂ [ಋಗ್. ೧–೧–೩]

ಶ್ರೇಷ್ಠತಮಾಯ — ಶ್ರೇಷ್ಠತಮಾಯೇತಿ ಶ್ರೇಷ್ಠಽತಮಾಯ [ಯಜು. ೧–೧]

ಅಗ್ನಿಷ್ವಾತ್ತಾಃ — ಅಗ್ನಿಽಸ್ವಾತ್ತಾಃ [ಅಥರ್ವ. ೧೮–೩–೪೪]

ಅಗ್ನಿತೇಜಾಃ — ಅಗ್ನಿಽತೇಜಾಃ [ಅಥರ್ವ. ೧೦–೫–೨೫]

ಅಘಶಂಸಃ — ಅಘಶಂಸಃ ಇತ್ಯಘಽಶಂಸಃ [ಮೈತ್ರಾ. ಸಂ. ೧–೧–೧]

ತೈತ್ತಿರೀಯ ಪದಪಾಠದಲ್ಲಿ ಇತಿ ಪ್ರಯೋಗವಿರುವುದಲ್ಲದೆ ಅವಗ್ರಹ ಚಿಹ್ನೆಯ ಬದಲಿಗೆ — ಚಿಹ್ನೆಯನ್ನೂ ಹಾಕುತ್ತಾರೆ. ಮೈತ್ರಾಯಣೀಯ ಪಾಠದಲ್ಲಿ ಕೆಲವರು ತೈತ್ತಿರೀಯ ಪದಪಾಠದ ಕ್ರಮವನ್ನೂ, ಕೆಲವರು ಋಗ್ವೇದದ ಪದಪಾಠಕ್ರಮವನ್ನೂ ಅನುಸರಿಸುತ್ತಾರೆ. ಕಾಣ್ವ ಸಂಹಿತೆಯಲ್ಲಿ ಪದಪಾಠದ ಸ್ವರಾಂಕನ ಪ್ರಕಾರವು ಈ ರೀತಿಯಲ್ಲಿಯೂ ಕಂಡುಬರುತ್ತದೆ —

u s u s u

ಪ್ರಜಾವತೀರಿತಿ ಪ್ರಜಾಽವತೀಃ

n n nn

ಶುಕ್ಲಯಜುರ್ವೇದದಲ್ಲಿ ಇದರ ಸ್ವರಾಂಕನವು ಈ ರೀತಿಯಲ್ಲಿದೆ—

ಪ್ರಜಾವತೀಃ [೧–೧] — ಪ್ರಜಾವತೀರಿತಿ ಪ್ರಜಾಽವತೀಃ

ಋಗ್ವೇದ ಮತ್ತು ಅಥರ್ವವೇದಗಳ ಪದಪಾಠಗಳಲ್ಲಿ ಪ್ರಗೃಹ್ಯ ಪದಕ್ಕೆ ಇತಿ ಕರಣವಿದೆ —

ವಾಯೋ ಇತಿ [ಋಗ್. ೧–೨–೧] [ಅಥರ್ವ. ೬–೬೮–೧]

ಯಜುರ್ವೇದದಲ್ಲಿ ಪ್ರಗೃಹ್ಯ ಪದಕ್ಕೂ ಅವಗ್ರಹ ಯೋಗ್ಯ ಪದಗಳಿಗೂ ಇತಿ ಕರಣವಿದೆ—

ವಿಷ್ಣೋ ಇತಿ [ಯಜು. ೧–೨]

ಶ್ರೇಷ್ಠತಮಾಯೇತಿ ಶ್ರೇಷ್ಠತಮಾಯ [ಯಜು. ೧–೧]

ಇದೇ ರೀತಿ ಅಕಃ ಮುಂತಾದ ಪದಗಳಿಗೂ ಇತಿಕರಣವಿದೆ—

ಅಕರಿತ್ಯಕಃ [ಋಗ್. ೧–೩೩–೧೫; ಯಜು. ೧೧–೨೨]

ಮೈತ್ರಾಯಣೀಯ ಮತ್ತು ತೈತ್ತಿರೀಯ ಪದಪಾಠಗಳಲ್ಲಿ ಪ್ರಗೃಹ್ಯ, ಇಂಗ್ಯ ಮತ್ತು ಉಪಸರ್ಗಗಳಿಗೂ ಇತಿಕರಣವಿದೆ —

ಪ್ರಗೃಹ್ಯ — ವಿಷ್ಣೋ ಇತಿ [ಮೈತ್ರಾ. ೧–೧–೩; ತೈತ್ತಿ. ೧–೧–೩–೪]

ಇಂಗ್ಯ — ಶ್ರೇಷ್ಠತಮಾಯೇತಿ ಶ್ರೇಷ್ಠಽತಮಾಯ [ಮೈತ್ರಾ ೧–೧–೧; ತೈತ್ತಿ. ೧–೧–೧]

ಉಪಸರ್ಗ — ಪ್ರೇತಿ [ಮೈತ್ರಾ. ೧–೧–೧; ತೈತ್ತಿ. ೧–೧–೧]

ಮೈತ್ರಾಯಣೀಯ ಪದಪಾಠದಲ್ಲಿ ಕೆಲವರು ಉಪಸರ್ಗಕ್ಕೆ ಇತಿಕರಣ ಮಾಡುವುದಿಲ್ಲ. ತೈತ್ತಿರೀಯ ಪದಪಾಠದಲ್ಲಿಯೂ ಸಹ ಎರಡು ಉಪಸರ್ಗಗಳು ಒಂದೇ ಸ್ಥಳದಲ್ಲಿ ಬಂದರೆ ಮೊದಲನೆಯ ಉಪಸರ್ಗಕ್ಕೆ ಇತಿಕರಣವಿರುವುದಿಲ್ಲ—

ಸಂಪ್ರಯಚ್ಛತಿ — ಸಂ । ಪ್ರೇತಿ । ಯಚ್ಛತಿ [ತೈತ್ತಿ. ೬–೩–೨]

ಸಾಮವೇದದಲ್ಲಿಯೂ ಪ್ರಗೃಹ್ಯಕ್ಕೆ ಇತಿಕರಣವಿರುವುದನ್ನು ನೋಡಬಹುದು—

1 2
ತ್ವೇ ಇತಿ [ಸಾಮ. ಪೂ. ೧–೪–೪]

ಕೆಲವು ಸಾರಿ ಒಂದೇ ಶಬ್ದಕ್ಕೆ ಬೇರೆ ಬೇರೆ ಸಂಹಿತೆಗಳಲ್ಲಿ ಬೇರೆ ಬೇರೆ ಪದಪಾಠಗಳೂ ಇರುವುದನ್ನು ಕಾಣಬಹುದು —

ಯಜತ್ರಾಃ ಶಬ್ದವು ಮೈತ್ರಾಯಣೀ ಸಂಹಿತೆ [೪–೧೪–೨]ಯಲ್ಲಿ ಆದ್ಯುದಾತ್ತ ಪದವಾಗಿದೆ. ಆದರೆ, ಋಗ್ವೇದ [೧–೮೬–೮] ಮತ್ತು ಯಜುರ್ವೇದ [೨೫–೨೧]ದಲ್ಲಿ ಈ ಪದವು ನಿಘಾತ ಸ್ವರಯುಕ್ತವಾಗಿದೆ.

ವಿಷ್ಟಾರಾಯಃ ಪದದ ಪಾಠದಲ್ಲಿಯೂ ಭಿನ್ನತೆ ಇದೆ. ಮಷ್ಟಾ ಪದವು ತೈತ್ತಿರೀಯ ಸಂಹಿತೆ [೧–೨–೨೧]ಯಲ್ಲಿ ಒಂದೇ ಪದವಾಗಿದೆ. ಆದರೆ ಮಾಧ್ಯಂದಿನ ಪದಪಾಠದಲ್ಲಿ ಇದು 'ಆಽಇಷ್ಟಾಃ' ಎಂದು ಅವಗ್ರಹಯುಕ್ತವಾಗಿದೆ. 'ಅಧಿವಾಸಂ' ಎಂಬ ಪದಕ್ಕೆ ಶಾಕಲ್ಯರು ಅವಗ್ರಹವನ್ನು ಉಪಯೋಗಿಸುವುದಿಲ್ಲ. ಆದರೆ ಆತ್ರೇಯರು 'ಅಧಿಽವಾಸಂ' ಎಂದು ಅವಗ್ರಹ ಸಹಿತವಾಗಿ ಓದುತ್ತಾರೆ. ಇದೇ ರೀತಿ ಅದಿತ್ಯ, ಆಜ್ಯಂ, ಅಶಿತಂ, ಅಕ್ಷಣ್ವಾನ್ ಮೊದಲಾದ ಪದಗಳ ಕುರಿತಾಗಿಯೂ ಕೆಲವರು ಅವಗ್ರಹ ಬೇಕೆಂದೂ, ಇನ್ನು ಕೆಲವರು ಅದು ಅನಾವಶ್ಯಕವೆಂದೂ ಹೇಳುತ್ತಾರೆ.

ಈ ರೀತಿ ಪದಪಾಠಗಳಲ್ಲಿ ಅಲ್ಲಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಪತಂಜಲಿ ಮುನಿಗಳು, ಪದಪಾಠಕಾರರೇ ವ್ಯಾಕರಣದ ನಿಯಮಕ್ಕನುಸಾರವಾಗಿ ಹೋಗಬೇಕೆಂದೂ, ವ್ಯಾಕರಣ ಶಾಸ್ತ್ರವು ಪದಪಾಠವನ್ನನುಸರಿಸಿ ಹೋಗಬಾರದೆಂದೂ ಹೇಳಿದ್ದಾರೆ.[೨೯] ಅಂದರೆ ಪದಪಾಠದ ಪ್ರಾಮಾಣಿಕತೆಯು ಶಬ್ದಲಕ್ಷಣ ಶಾಸ್ತ್ರವನ್ನು ಆಧರಿಸಿದೆ ಎಂದು ಅರಿವಾಗುತ್ತದೆ.

## ಬ್ರಾಹ್ಮಣ ಗ್ರಂಥಗಳು

ಚತುರ್ವೇದಗಳನ್ನು ಬಲ್ಲ ಮಹರ್ಷಿಗಳು ಮಾಡಿದಂತಹ ವೇದಮಂತ್ರಗಳ ವ್ಯಾಖ್ಯಾನಗಳನ್ನು ಬ್ರಾಹ್ಮಣ*ಗಳೆಂದು ಕರೆಯುತ್ತಾರೆ.[೧] ಸಾಯಣಾಚಾರ್ಯರು ತಮ್ಮ ಋಗ್ವೇದ ಭಾಷ್ಯದ ಭೂಮಿಕೆಯಲ್ಲಿ—

**"ಮಂತ್ರಸ್ಯ ಅವಿವಕ್ಷಿತಾರ್ಥತ್ವೇ ತು ವಿನಿಯೋಗ ಭೋಧನಾಯ ಬ್ರಾಹ್ಮಣ ವಾಕ್ಯಮುಪಯುಕ್ತಂ"** ಅರ್ಥಾತ್ ವೇದಮಂತ್ರಗಳ ಅರ್ಥವನ್ನು ಸ್ಪಷ್ಟ ಮಾಡುವ ಮತ್ತು ಮಂತ್ರಗಳ ವಿನಿಯೋಗವನ್ನು ವಿವರಿಸುವ ಪ್ರಾಚೀನ ಆರ್ಷವಾಕ್ಯಗಳೇ ಬ್ರಾಹ್ಮಣ ವಾಕ್ಯಗಳು, ಎಂದು ಹೇಳಿದ್ದಾರೆ. ಬ್ರಹ್ಮ ಅಂದರೆ ವೇದ.[೨] ವೇದವಾಕ್ಯಗಳ ವ್ಯಾಖ್ಯಾನಗಳು ಬ್ರಾಹ್ಮಣಗಳು—

**'ಬ್ರಹ್ಮಣಾಂ ವೇದಾನಾಮಿಮಾನಿ ವ್ಯಾಖ್ಯಾನಿನಾನಿ ಬಾಹ್ಮಣಾನಿ ।'** ಎಂಬ ಬ್ರಾಹ್ಮಣ ಶಬ್ದದ ಪರಿಭಾಷೆಯು ಪ್ರಸಿದ್ಧವಾಗಿದೆ.

ಆಪಸ್ತಂಬ ಪರಿಭಾಷಾ ಸೂತ್ರ ಟೀಕೆಯಲ್ಲಿ ಕಪರ್ದಿಸ್ವಾಮಿಯೂ **"ಮಂತ್ರೋ ಮನನಾತ್ । ಬ್ರಾಹ್ಮಣಮಭಿದಾನಾತ್"** ಎಂದು ಹೇಳಿದ್ದಾರೆ. ಅಂದರೆ, ಮಂತ್ರಗಳ ವ್ಯಾಖ್ಯಾನವನ್ನೇ ಬ್ರಾಹ್ಮಣ ಎಂದು ಕರೆಯುತ್ತಾರೆ, ಎಂದು ಇವರ ಅಭಿಪ್ರಾಯ. ಸ್ಕಂದಸ್ವಾಮಿಯೂ ಕೂಡ **"ತಥಾ ಅಮೀಮದಂತ ಪಿತರೋ ಯಥಾ ಭಾಗಮಾವೃಷಾಯಿಷತ್ । ಇತ್ಯಸ್ಯ ಯಥಾ ಭಾಗಮಾಶಿಷುರಿತ್ಯೈವೈತದಾಹೇತಿ ಶತಪಥ ಬ್ರಾಹ್ಮಣೇ ವಿವರಣಾತ್ ।"** ಎಂದು ಹೇಳಿ ಶತಪಥಾದಿ ಬ್ರಾಹ್ಮಣ ಗ್ರಂಥಗಳಲ್ಲಿ ವೇದ ಮಂತ್ರಗಳ ವಿವರಣೆಗಳಿವೆ ಎಂದು ಸ್ವೀಕರಿಸಿದ್ದಾರೆ. ಅಲ್ಲದೆ, **"ಶತಪಥೇ ಯದ್ವೇತು ಶ್ರೇಷ್ಠಸ್ತೇನ ವಸಿಷ್ಠಃ ಇತಿ ವಸಿಷ್ಠ ಶಬ್ದಸ್ಯ ಶ್ರೇಷ್ಠಶಬ್ದೇನಾರ್ಥವಿವರಣ**

---

[೨೯] ನ ಲಕ್ಷಣೇನ ಪದಕಾರಾ ಅನುವರ್ತ್ಯಾಃ ಪದಕಾರೈರ್ನಾಮ ಲಕ್ಷಣಮನುವರ್ತ್ಯಂ ಯಥಾ ಲಕ್ಷಣಂ ಪದಂ ಕರ್ತವ್ಯಂ । ಸರ್ವವೇದಪಾರಿಷದಂ ಹೀದಂ ಶಾಸ್ತ್ರಂ......... ॥ ವ್ಯಾಕರಣ ಮಹಾಭಾಷ್ಯ ॥

* "ಬ್ರಹ್ಮೇತಿ ವೇದಃ । ಬ್ರಹ್ಮಣ ಇದಂ ಬ್ರಾಹ್ಮಣಂ । ನ ತು ಬ್ರಾಹ್ಮಣಾನಾಂ ಕೃತತ್ವಾತ್ ।" —"ಬ್ರಹ್ಮವೆಂದರೆ ವೇದ. ಬ್ರಹ್ಮಪರಕವಾದ ಕಾರಣ 'ಬ್ರಾಹ್ಮಣ'—ಎಂದು ಆ ವ್ಯಾಖ್ಯಾ ಗ್ರಂಥಕ್ಕೆ 'ಬ್ರಾಹ್ಮಣ'ವೆಂದು ಹೆಸರು; ಬ್ರಾಹ್ಮಣರಿಂದ ರಚಿತವಾದ ಕಾರಣದಿಂದಲ್ಲ."

[೧] ಚತುರ್ವೇದ ವಿದ್ವದ್ಭಿರ್ಬ್ರಹ್ಮಭಿಬ್ರಾಹ್ಮಣೈರ್ಮಹರ್ಷಿಭಿಃ ಪ್ರೋಕ್ತಾನಿ ಯಾನಿ ವೇದ ವ್ಯಾಖ್ಯಾನಿ ತಾನಿ ಬ್ರಾಹ್ಮಣಾನಿ ॥ [ಸ್ವಾಮಿ ದಯಾನಂದ ಸರಸ್ವತೀ, ಋಗ್ವೇದಾದಿ ಭಾಷ್ಯಭೂಮಿಕೆಯಲ್ಲಿ, ವೇದಸಂಜ್ಞಾ ವಿಷಯ ಪ್ರಕರಣದಲ್ಲಿ.]

[೨] ಬ್ರಹ್ಮ ವೈ ಮಂತ್ರಃ ॥ ಶತಪಥ ಬ್ರಾಹ್ಮಣ ೭—೧—೧—೫ ॥
ವೇದೋಬ್ರಹ್ಮ ॥ ಜೈಮಿನೀಯ ಉಪನಿಷತ್ ೪—೨೫—೩ ॥

ದರ್ಶನಾತ್" ಎಂದು ಹೇಳಿ ಶತಪಥ ಬ್ರಾಹ್ಮಣದಲ್ಲಿ ಯಾವ ರೀತಿ ವಸಿಷ್ಠ ಶಬ್ದದ ಅರ್ಥವನ್ನು ವಿವರಿಸಲಾಗಿದೆ ಎಂದು ಉದಾಹರಣೆ ಕೊಟ್ಟಿದ್ದಾರೆ. ಆದುದರಿಂದ ಬ್ರಾಹ್ಮಣ ಗ್ರಂಥಗಳು ವೇದಗಳಲ್ಲ, ವೇದಮಂತ್ರಗಳ ವ್ಯಾಖ್ಯಾನ ಗ್ರಂಥಗಳೆಂದು ಪ್ರಾಚೀನ ವೇದಾಚಾರ್ಯರ ಅಭಿಪ್ರಾಯವಾಗಿತ್ತೆಂಬುದಕ್ಕೆ ಸಂಶಯವಿಲ್ಲ.

ಐತರೇಯ ಬ್ರಾಹ್ಮಣ [೪-೧೫-೬]ವಲ್ಲಿ 'ದೂರೋಹಣ' ಎಂಬ ವೈದಿಕ ಶಬ್ದದ ವ್ಯಾಖ್ಯಾನ ಈ ಪ್ರಕಾರವಾಗಿದೆ —

**ದೂರೋಹಣಂ ರೋಹತಿ ಸ್ವರ್ಗೋ ವೈ ಲೋಕೋ ದೂರೋಹಣಂ ಸ್ವರ್ಗ ಮೇವ ತಂ ಲೋಕಂ ರೋಹತಿಯ ಏವಂ ವೇದ ಯದೇವ ದೂರೋಹಣಂ ಅಸೌ ವೈ ದೂರೋಹೋ ಯೋಽಸೌ ತಪತಿ ಕಶ್ಚಿದ್ವಾ ಅತ್ರ ಗಚ್ಛತೀಸ ಯದ್ದೂ ರೋಹಣಂ ರೋಹತ್ಯೇತಮೇವ ತದ್ರೋಹತಿ ಹಂಸವತ್ಯಾರೋಹತಿ ಹಂಸಃ ಶುಚಿಷದಿತ್ಯೇಷ ವೈ ಹಂಸಃ ಶುಚಿಷತ್.........ಇತ್ಯಾದಿ.**

ಇದೇ ರೀತಿ 'ಗೌರಿವೀತಂ' ಶಬ್ದದ ವ್ಯಾಖ್ಯೆ ನೋಡಿರಿ -

**ಗೌರಿವೀತಂ ಷೋಡಶಿ ಸಾಮ ಕುರ್ವೀತ ತೇಜಸಾಮೋ ಬ್ರಹ್ಮವರ್ಚ ಸ್ಕಾಮಸ್ತೇಜೋ ವೈ ಬ್ರಹ್ಮವರ್ಚಸಂ ಗೌರಿವೀತಂ ತೇಜಸ್ವೀ ಬ್ರಹ್ಮವರ್ಚಸ್ವೀ ಭವತಿ ಯ ಏವಂ ವಿದ್ವಾನ್ ಗೌರಿವೀತಂ ಷೋಡಶಿ ಸಾಮಕುರುತೇ । ನಾನ ದಂ ಷೋಡಶಿ ಸಾಮ ಕೃತ್ಯರ್ವ್ಯ ಮಿತ್ಯಾ ಹುಃ ॥** [ಐ. ಬ್ರಾ. ೪-೧೬-೨]

ಶ್ರೌತಸೂತ್ರ, ಗೃಹ್ಯಸೂತ್ರ, ಶುಲ್ಬ ಸೂತ್ರ, ಧರ್ಮಸೂತ್ರಾದಿ ಸೂತ್ರ ಗ್ರಂಥ ಗಳಲ್ಲಿಯೂ, ನಿರುಕ್ತ ಮತ್ತು ನಿದಾನ ಗ್ರಂಥಗಳಲ್ಲಿಯೂ ಬ್ರಾಹ್ಮಣ ಗ್ರಂಥಗಳ ವಚನ ಗಳನ್ನು ಪ್ರಮಾಣ ವಾಕ್ಯಗಳನ್ನಾಗಿ ತೋರಿಸುವಾಗ 'ಇತಿ ವಿಜ್ಞಾಯತೇ' 'ಇತಿ ಹ ವಿಜ್ಞಾಯತೇ' ಎಂದು ಹೇಳಿದ್ದಾರೆ. ಬೇರೆ ಶಾಖೆಗಳಲ್ಲಿ ಈ ರೀತಿಯಾಗಿ ಹೇಳಿದೆ, ತಮ್ಮ ಶಾಖೆಯಲ್ಲಿ ಹೀಗೆ ಇಲ್ಲ, ಎಂದು ಇದರ ತಾತ್ಪರ್ಯ. ಉದಾಹರಣೆಗಾಗಿ—

'ಆತ್ಮಾ ವೈ ಸ ಯಜ್ಞಸ್ಯೇತಿ ವಿಜ್ಞಾಯತೇ'. ಎಂದು ಗೋಪಥ ಬ್ರಾಹ್ಮಣದ [೨-೨-೬] ರಲ್ಲಿ ಬರುತ್ತದೆ. ಅದು ಯಜ್ಞದ ಆತ್ಮವಾಗಿದೆ ಎಂದು ಬೇರೆ ಬ್ರಾಹ್ಮಣದಿಂದ ಗೊತ್ತಾಗುತ್ತದೆ, ಎಂದು ಈ ವಾಕ್ಯದ ತಾತ್ಪರ್ಯ. ದುರ್ಗಾ ಚಾರ್ಯರು ನಿರುಕ್ತ ಟೀಕೆಯಲ್ಲಿ 'ಇತಿ ವಿಜ್ಞಾಯತೇ' ಅಂದರೆ, 'ಏವಂ ಬ್ರಾಹ್ಮ ಣೇಽಪಿ ವಿಜ್ಞಾಯತೇ ವಿಚಾರ್ಯಮಾಣೇ ಜ್ಞಾಯತೇ' ಎಂದು ವಿವರಿಸಿದ್ದಾರೆ.

ಇಷ್ಟಲ್ಲದೆ, ಗ್ರಂಥವಾಚೀ ಬ್ರಾಹ್ಮಣ ಶಬ್ದಕ್ಕೆ ಪ್ರವಚನ ಶಬ್ದವೂ ಪರ್ಯಾಯ ವಾಚೀ ಶಬ್ದವಾಗಿರುವುದನ್ನು ಕಾಣಬಹುದು. ಪುಷ್ಪಸೂತ್ರದಲ್ಲಿ 'ಪ್ರವಚನ ಶಬ್ದೇನ ಬ್ರಾಹ್ಮಣಮುಚ್ಯತೇ' ಅರ್ಥಾತ್, ಪ್ರವಚನ ಶಬ್ದವು ಬ್ರಾಹ್ಮಣ ಗ್ರಂಥವಾಚಿ ಶಬ್ದವಾಗಿದೆ, ಎಂದು ಹೇಳಿದೆ [ಪುಷ್ಪಸೂತ್ರ ೮-೮].

ಈ ಎಲ್ಲಾ ಪ್ರಮಾಣಗಳಿಂದ ಬ್ರಾಹ್ಮಣ ಗ್ರಂಥಗಳು ವೇದಮಂತ್ರಗಳ ಅರ್ಥ ಮತ್ತು ವಿನಿಯೋಗವನ್ನು ವಿವರಿಸುವ ಗ್ರಂಥಗಳೆಂದು ಸಿದ್ಧವಾಗುತ್ತದೆ. ಆದುದರಿಂದ ಈ ಗ್ರಂಥಗಳು ಋಷಿಗ್ರಂಥಗಳು, ವೇದಗಳಂತೆ ಅಪೌರುಷೇಯ ಅಥವಾ ಶ್ರುತಿಗಳಲ್ಲ, ಎಂಬುದು ನಿಶ್ಚಿತ. ಆದರೆ, ಕಾಲಕ್ರಮೇಣ, ವೇದವಿದ್ಯೆಗಳ ಪ್ರಚಾರವು ಅಧಿಕಾಧಿಕ

ವಾದಂತೆ, ವೇದ ಶಬ್ದವು ವಿದ್ಯೆಯ ಪರ್ಯಾಯವಾಚಿಯಾಗಿ, ಅಥವಾ ವೇದಮೂಲ ಅನ್ಯ ವಿದ್ಯೆಗಳಿಗೂ ಪ್ರಯುಕ್ತವಾದಂತೆ ತೋರುತ್ತದೆ. ಉದಾಹರಣೆಗಾಗಿ, ಗೋಪಥ ಬ್ರಾಹ್ಮಣದಲ್ಲಿಯೇ ಸರ್ಪವೇದ, ಪಿಶಾಚವೇದ, ಅಸುರವೇದ, ಇತಿಹಾಸವೇದ ಮತ್ತು ಪುರಾಣವೇದಗಳೆಂದು ಪಂಚವೇದಗಳ ಉಲ್ಲೇಖವಿದೆ.[೩] ಭರತನಾಟ್ಯ ಶಾಸ್ತ್ರದಲ್ಲಿ ನಾಟ್ಯವೇದದ ಸಂಜ್ಞೆಯೂ ಪ್ರಯುಕ್ತವಾಗಿದೆ. ವೇದ ಮೂಲ, ಉಪವೇದಗಳಿಗೂ ವೇದಸಂಜ್ಞೆಯು ಪ್ರಸಿದ್ಧವಾಗಿದೆ. ಹೇಗೆಂದರೆ—ಅರ್ಥವೇದ, ಆಯುರ್ವೇದ, ಗಾಂಧರ್ವವೇದ ಮತ್ತು ಧನುರ್ವೇದ. ಹೀಗೆ ವೇದ ಶಬ್ದವು ನಾಲ್ಕು ಸಂಹಿತೆಗಳಿಗೆ ಮಾತ್ರವಲ್ಲದೆ ವೇದ ಮೂಲ ಅನ್ಯ ವಿದ್ಯೆಗಳಿಗೂ, ವೇದ ವ್ಯಾಖ್ಯಾನಗಳಿಗೂ ವೇದ ಶಬ್ದವು ಬಳಕೆಯಲ್ಲಿ ಬಂದಿರುವುದನ್ನು ನಾವು ಕಾಣುತ್ತೇವೆ. ಆದುದರಿಂದಲೇ ಕಾತ್ಯಾಯನರ ಹೆಸರಲ್ಲಿ 'ಮಂತ್ರಬ್ರಾಹ್ಮಣಯೋರ್ವೇದನಾಮಧೇಯಂ'[೪] ಎಂಬ ವಾಕ್ಯವು ಪ್ರಸಿದ್ಧವಾಗಿದೆ. ಅಂದರೆ, ಒಂದು ಸಮಯದಲ್ಲಿ ಮೂಲ ಸಂಹಿತೆಗಳನ್ನೂ, ಸಂಹಿತೆಗಳ ವ್ಯಾಖ್ಯಾನ ಭಾಗಗಳನ್ನೂ ಒಟ್ಟಿಗೆ ವೇದಗಳೆಂದು ಕರೆಯುವ ವಾಡಿಕೆ ಬಂದಿತ್ತು. ಆದರೆ, ಬ್ರಾಹ್ಮಣ ಗ್ರಂಥಗಳಿಗೆ ವೇದತ್ವವನ್ನು ಆರೋಪಿಸಿದರೆ, ಅನೇಕ ಅನರ್ಥಗಳಾಗಬಹುದು. ಅಲ್ಲದೆ, ಇದು ಆರ್ಷ ಸಿದ್ಧಾಂತಕ್ಕೆ ವಿರುದ್ಧವಾದ ಮಾತು.

**ಬ್ರಾಹ್ಮಣಗಳಲ್ಲಿ ಎರಡು ಭೇದಗಳು:**—ತೈತ್ತಿರೀಯ ಸಂಹಿತಾ ಭಾಷ್ಯಭೂಮಿಕೆಯಲ್ಲಿ, ಭಟ್ಟ ಭಾಸ್ಕರನು "ದ್ವಿವಿಧಂ ಬ್ರಾಹ್ಮಣಂ। ಕರ್ಮಬ್ರಾಹ್ಮಣಂ ಕಲ್ಪಬ್ರಾಹ್ಮಣಂ ಚೇತಿ" ಎಂದು ಹೇಳಿದ್ದಾನೆ. ಕರ್ಮಬ್ರಾಹ್ಮಣಗಳಲ್ಲಿ ಕರ್ಮಗಳ ವಿಧಾನವನ್ನೂ ಮತ್ತು ಮಂತ್ರಗಳ ವಿನಿಯೋಗವನ್ನೂ ಹೇಳಿರುತ್ತಾರೆ. ಕಲ್ಪಬ್ರಾಹ್ಮಣದಲ್ಲಿ ಕೇವಲ ಮಂತ್ರಸಾರವಿದ್ದು ವಿನಿಯೋಗದ ವಿಷಯ ಇಲ್ಲ.

**ಬ್ರಾಹ್ಮಣಗಳಲ್ಲಿ ಎಂಟು ಭೇದಗಳು:**—ತೈತ್ತಿರೀಯ ಆರಣ್ಯಕದ ವ್ಯಾಖ್ಯಾನದಲ್ಲಿ, ಬೃಹದಾರಣ್ಯಕ ಉಪನಿಷತ್ತಿನ ಆಧಾರದಿಂದ ಬ್ರಾಹ್ಮಣಗಳು ಎಂಟು ವಿಧವಾಗಿವೆಯೆಂದು ಸಾಯಣಾಚಾರ್ಯರು ಹೇಳಿದ್ದಾರೆ. ಬೃಹದಾರಣ್ಯಕ ಭಾಷ್ಯದಲ್ಲಿ ಶಂಕರಾಚಾರ್ಯರೂ ಈ ಮಾತನ್ನು ಸ್ವೀಕರಿಸಿದ್ದಾರೆ. ಈ ಎಂಟು ಭೇದಗಳು ಹೀಗಿವೆ—ಇತಿಹಾಸ, ಪುರಾಣ, ವಿದ್ಯಾ, ಉಪನಿಷತ್, ಶ್ಲೋಕ, ಸೂತ್ರ, ವ್ಯಾಖ್ಯಾನ ಮತ್ತು ಅನುವ್ಯಾಖ್ಯಾನ.[೫]

---

[೩] ತಾಭ್ಯಃ ಪಂಚವೇದಾನ್ನಿರಮಿಮತ । ಸರ್ಪವೇದಂ ಪಿಶಾಚವೇದ ಮಸುರವೇದಮಿತಿಹಾಸ ವೇದಂ ಪುರಾಣವೇದಮಿತಿ ॥ ಗೋಪಥಬ್ರಾಹ್ಮಣ ೧-೧೦ ॥

[೪] "ಮಂತ್ರ ಬ್ರಾಹ್ಮಣಯೋರ್ವೇದನಾಮಧೇಯಂ" ಎಂಬ ಸೂತ್ರವು ಕೇವಲ ಕೃಷ್ಣ ಯಜುರ್ವೇದದ ಶಾಖೆಯ ಆಪಸ್ತಂಭ, ಸತ್ಯಾಷಾಢ ಬೌಧಾಯನಾದಿ ಶ್ರೌತಸೂತ್ರಗಳಲ್ಲಿ ಮಾತ್ರ ಕಂಡುಬರುತ್ತದೆ. ಇದು ಕಾತ್ಯಾಯನೀಯ ಶ್ರೌತಸೂತ್ರದಲ್ಲಿ ಕಂಡುಬರುವುದಿಲ್ಲ. ಆದರೆ ಕಾತ್ಯಾಯನನ ಹೆಸರಲ್ಲಿ ನಡೆದಿರುವ ಪ್ರತಿಜ್ಞಾ-ಪರಿಶಿಷ್ಟದಲ್ಲಿ ಮಾತ್ರ ಕಂಡುಬರುತ್ತದೆ. ಈ ಪರಿಶಿಷ್ಟವು ಅರ್ವಾಚೀನ ಗ್ರಂಥವೆಂದೂ, ಕಾತ್ಯಾಯನ ಮುನಿ ಪ್ರಣೀತವಲ್ಲವೆಂದೂ ಕೆಲವು ವಿದ್ವಾಂಸರ ಅಭಿಪ್ರಾಯ.

[೫] ಬ್ರಾಹ್ಮಣಂ ಚಾಷ್ಟಧಾಭಿಧಾನಂ । ತದ್ಭೇದಾಸ್ತು ವಾಜಸನೇಯಿಭಿ ರಾಮ್ನಾಯತೇ ಇತಿಹಾಸ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಿ ವ್ಯಾಖ್ಯಾನಾ ಇತಿ ॥ ತೈ. ಆ. ೮-೨ ॥

**ಅನುಬ್ರಾಹ್ಮಣ:**—ಬ್ರಾಹ್ಮಣ ಗ್ರಂಥಗಳಿಗೆ ಸದೃಶವಾಗಿರುವ ಕೆಲವು ಗ್ರಂಥಗಳನ್ನು ಅನುಬ್ರಾಹ್ಮಣಗಳೆಂದು ಕರೆಯುತ್ತಾರೆ.[೬] ಇವು ಮೂಲ ಬ್ರಾಹ್ಮಣ ಗ್ರಂಥಗಳಲ್ಲ. ಪಂ॥ ಸತ್ಯವ್ರತ ಸಾಮಶ್ರಮಿಯವರು ತಾಂಡ್ಯಬ್ರಾಹ್ಮಣವನ್ನು ಬಿಟ್ಟು, ಸಾಮವೇದದ ಇತರ ಏಳು ಬ್ರಾಹ್ಮಣಗಳನ್ನು ಅನುಬ್ರಾಹ್ಮಣಗಳೆಂದು ಗಣಿಸಿದ್ದಾರೆ,

**ಬ್ರಾಹ್ಮಣಾಂತರ್ಗತ ವಿಷಯಗಳು:**—ಬ್ರಾಹ್ಮಣ ಗ್ರಂಥಗಳು ಮೇಲೆ ಹೇಳಿದಂತೆ ಮುಖ್ಯವಾಗಿ ವೇದಮಂತ್ರಗಳ ವ್ಯಾಖ್ಯಾನಗಳು. ಮಂತ್ರಗಳ ವಿನಿಯೋಗವನ್ನೂ ಇವು ತಿಳಿಸುತ್ತವೆ. ಇಷ್ಟು ಮಾತ್ರವಲ್ಲದೆ ಬ್ರಾಹ್ಮಣ ಗ್ರಂಥಗಳನ್ನು ಇತಿಹಾಸ, ಪುರಾಣ, ಕಲ್ಪ, ಗಾಥಾ ಮತ್ತು ನಾರಾಶಂಸೀಗಳೆಂದೂ ಕರೆಯುತ್ತಾರೆ.[೭]

"ದೇವತೆಗಳು ಮತ್ತು ಅಸುರರು ಅಂದರೆ, ವಿದ್ವಾಂಸರು ಮತ್ತು ಮೂರ್ಖರು ಯುದ್ಧ ಮಾಡಲಿಕ್ಕೆ ತತ್ಪರರಾಗಿದ್ದರು........." ಇತ್ಯಾದಿ ರೀತಿಯ ಕತೆಗಳನ್ನು ಇತಿಹಾಸವೆನ್ನುತ್ತಾರೆ.[೮] ವೇದಮಂತ್ರಗಳ ದಾರ್ಶನಿಕ, ಸಾಂಸ್ಕೃತಿಕ ಮೊದಲಾದ ತತ್ವಗಳ ದೃಷ್ಟಿಯಿಂದ ಈ ಇತಿಹಾಸಗಳು ದೃಷ್ಟಾಂತಗಳ ರೂಪದಲ್ಲಿದ್ದು ಮಹತ್ವಪೂರ್ಣವಾಗಿವೆ. ಆದುದರಿಂದಲೇ ಅವುಗಳನ್ನು ಸುರಕ್ಷಿತವಾಗಿಟ್ಟಿದ್ದಾರೆ.

"ಪ್ರಾರಂಭದಲ್ಲಿ ಕೇವಲ ಅಪ್‌ತತ್ತ್ವ ಮಾತ್ರ ಇತ್ತು. ಅದರಲ್ಲಿ ಎಲ್ಲವೂ ಲೀನವಾಗಿತ್ತು........."[೯] ಈ ರೀತಿ ಸೃಷ್ಟಿ ಉತ್ಪತ್ತಿ ಮೊದಲಾದ ವರ್ಣನೆಗಳಿರುವ ಬ್ರಾಹ್ಮಣ ಭಾಗಗಳನ್ನು ಪುರಾಣಗಳೆನ್ನುತ್ತಾರೆ. ಅಂದರೆ ಜಗತ್ತಿನ ಪೂರ್ವಾವಸ್ಥೆಯ ವರ್ಣನೆಯೇ ಪುರಾಣ. ಶ್ರೀಮದ್ ಭಾಗವತಾದಿ ಗ್ರಂಥಗಳು ನಿಜವಾಗಿ ಪುರಾಣಗಳಲ್ಲ. ಯಾಕೆಂದರೆ ಇವುಗಳಲ್ಲಿ ಪರಸ್ಪರ ವಿರೋಧ, ಜಗಳ, ಅಸಂಭವ, ಮಿಥ್ಯಾ ಮತ್ತು ಸಾಂಪ್ರದಾಯಿಕ ಮಾತುಗಳು ತುಂಬಿವೆ.

ವೇದಮಂತ್ರಗಳ ಅರ್ಥ, ಅಂದರೆ, ದ್ರವ್ಯಗಳ ಸಾಮರ್ಥ್ಯ ಕಥನ ಭಾಗವು 'ಕಲ್ಪ'ವೆನಿಸುತ್ತದೆ.[೧೦] ಶತಪಥ ಬ್ರಾಹ್ಮಣದಂತೆ ಯಾಜ್ಞವಲ್ಕ್ಯ, ಜನಕ, ಗಾರ್ಗೀ, ಮೈತ್ರೇಯೀ ಮೊದಲಾದವರ ಕತೆಗಳನ್ನು ಗಾಥಾಗಳೆಂದು ಕರೆಯುತ್ತಾರೆ. ನರ ಅಂದರೆ ಮನುಷ್ಯರು. ಪರಮಾತ್ಮ, ಧರ್ಮ ತಥಾ ವಿಭಿನ್ನ ಪದಾರ್ಥಗಳ ಜ್ಞಾನ, ಹಾಗೂ ಮನುಷ್ಯರ ಪ್ರಶಂಸೆ ಮಾಡಿರುವ ಬ್ರಾಹ್ಮಣ ಭಾಗವನ್ನು ನಾರಾಶಂಸೀ ಎಂದು ಹೇಳುತ್ತಾರೆ. ಬ್ರಾಹ್ಮಣಗಳನ್ನೇ ಇತಿಹಾಸ, ಪುರಾಣ, ಕಲ್ಪ, ಗಾಥಾ ಮತ್ತು ನಾರಾಶಂಸೀಗಳೆಂದು ಕರೆಯುತ್ತಾರೆ ಎಂದು ಇದರ ತಾತ್ಪರ್ಯ.

---

[೬] ಬ್ರಾಹ್ಮಣ ಸದೃಶೋಽಯಂ ಗ್ರಂಥೋ ಅನುಬ್ರಾಹ್ಮಣಂ ॥ ಕಾಶಿಕಾ ವೃತ್ತಿ, ಅಷ್ಟಾಧ್ಯಾಯೀ ಸೂತ್ರ 'ಅನುಬ್ರಾಹ್ಮಣಾದಿನಿಃ' ೪-೨-೬೨ ॥

[೭] ತೈತ್ತಿರೀಯ ಆರಣ್ಯಕ ಪ್ರಪಾ. ೨, ಅನು. ೯ ॥ ಆಶ್ವಲಾಯನ ಗೃಹ್ಯಸೂತ್ರ ಅ. ೩, ಕಂ. ೩, ಮಂತ್ರ ೧ ॥

[೮] ದೇವಾಸುರಾಃ ಸಂಯತ್ತಾ ಆಸನ್ ॥ ತೈತ್ತಿರೀಯ ಸಂಹಿತಾ ೧-೫-೧-೧ ॥

[೯] ಆಪೋ ಹ ವಾ ಇದಮಗ್ರೇ ಸಲಿಲಮೇವಾಸ ॥ ಶತಪಥ ಬ್ರಾಹ್ಮಣಕಾಂಡ ೧೧, ಅ. ೧, ಬ್ರಾ. ೬, ಕಂ. ೧ ॥

[೧೦] ಕಲ್ಪಾ ಮಂತ್ರಾರ್ಥ ಸಾಮರ್ಥ್ಯ ಪ್ರಕಾಶಕಾಃ, ತದ್ಯಥಾ—"ಇಷೇ ತ್ವೋರ್ಜೇ ತ್ವೇತಿ ವೃಷ್ಟ್ಯೈ ತದಾಹ......। "ಸವಿತಾ ವೈ ದೇವಾನಾಂ ಪ್ರಸವಿತಾ ಸವಿತೃಪ್ರಸೂತಾಃ ॥" [ಶತಪಥಬ್ರಾಹ್ಮಣ ೧-೭-೧-೨, ೪ ನೋಡಿರಿ, ಸ್ವಾಮಿ ದಯಾನಂದ ಸರಸ್ವತೀ ಕೃತ ಋಗ್ವೇದಾದಿ ಭಾಷ್ಯ ಭೂಮಿಕೆಯಲ್ಲಿ ವೇದ ಸಂಜ್ಞಾವಿಚಾರ.

**ಋಗ್ವೇದದ ಬ್ರಾಹ್ಮಣಗಳು:**—ಋಗ್ವೇದೀಯ ಬ್ರಾಹ್ಮಣಗಳಲ್ಲಿ ಐತರೇಯ, ಕೌಷೀತಕೀ, ಮತ್ತು ಶಾಂಖಾಯನ ಬ್ರಾಹ್ಮಣಗಳು ಉಪಲಬ್ಧವಾಗಿವೆ. ಇದೇ ವೇದಕ್ಕೆ ಸೇರಿದ ಪೈಂಗೀಪೈಂಗ್ಯ ಅಥವಾ ಪೈಂಗಾಯನಿ, ತಲವಕಾರ, ಬಹ್ವೃಚ, ಆಶ್ವಲಾಯನ ಮತ್ತು ಗಾಲವ ಬ್ರಾಹ್ಮಣಗಳ ಕೇವಲ ಉಲ್ಲೇಖ ಮಾತ್ರ ಪ್ರಾಚೀನ ಗ್ರಂಥಗಳಲ್ಲಿ ಕಂಡುಬರುತ್ತದೆ.

ಐತರೇಯ ಬ್ರಾಹ್ಮಣವು ಶಾಕಲ ಶಾಖೆಗೂ, ಕೌಷೀತಕೀ ಬ್ರಾಹ್ಮಣವು ಬಾಷ್ಕಲ ಶಾಖೆಗೂ ಸೇರಿದೆ. ಮೊದಲು ಕೌಷೀತಕೀ ಮತ್ತು ಶಾಂಖಾಯನ ಬ್ರಾಹ್ಮಣವು ಒಂದೇ ಎಂದು ತಿಳಿದುಕೊಳ್ಳಲಾಗುತ್ತಿತ್ತು. ಆದರೆ, ಈಗ ಶಾಂಖಾಯನ ಬ್ರಾಹ್ಮಣವು ಪ್ರತ್ಯೇಕ ವಾಗಿ ಮುದ್ರಿಸಲಾಗಿದೆ, ಈ ಎರಡು ಬ್ರಾಹ್ಮಣಗಳಲ್ಲಿ ಅತ್ಯಲ್ಪ ವ್ಯತ್ಯಾಸವಿದೆ. ಐತರೇಯ ಬ್ರಾಹ್ಮಣದಲ್ಲಿ ನಲ್ವತ್ತು ಅಧ್ಯಾಯಗಳಿವೆ. ಮಹೀದಾಸ ಐತರೇಯನು ಇದರ ಪ್ರವಕ್ತಾರನೆಂದು ಸಾಯಣಾಚಾರ್ಯರು ಹೇಳುತ್ತಾರೆ. ಆದರೆ, ಐತರೇಯ ಬ್ರಾಹ್ಮಣದ ಟೀಕಾಕಾರನಾದ ಷಡ್ಗುರು ಶಿಷ್ಯರು, ಈ ಬ್ರಾಹ್ಮಣವು ಯಾಜ್ಞವಲ್ಕ್ಯರ ಇತರಾ–ಕಾತ್ಯಾಯನೀ ಎಂಬ ಹೆಸರಿನ ಪತ್ನಿಯಿಂದ ಉತ್ಪನ್ನವಾಯಿತೆಂದು ಹೇಳಿದ್ದಾರೆ.[೧೧] ಪುನಃ ಇವರೇ ಅನ್ಯ ಸ್ಥಾನದಲ್ಲಿ, '**ಮಹೀದಾಸೈತರೇಯರ್ಷಿ ಸಂದೃಷ್ಟಂ ಬ್ರಾಹ್ಮಣಂ ತು ಯತ್**" ಎಂದು ಹೇಳಿ ತಮ್ಮ ಮಾತನ್ನೇ ಖಂಡಿಸಿದ್ದಾರೆ.

ಐತರೇಯ ಬ್ರಾಹ್ಮಣದಲ್ಲಿ ನಲ್ವತ್ತು ಅಧ್ಯಾಯಗಳಿವೆ. ಹದಿನಾಲ್ಕು ಅಧ್ಯಾಯಗಳಲ್ಲಿ ಅಗ್ನಿಷ್ಟೋಮಯಾಗ, ಹದಿನೈದು ಮತ್ತು ಹದಿನೇಳನೆಯ ಅಧ್ಯಾಯಗಳಲ್ಲಿ ಉಕ್ಥ್ಯ, ಷೋಡಶ, ಅತಿರಾತ್ರ ಮೊದಲಾದ ಯಾಗಗಳು, ತಥಾ ಇತರ ಅಧ್ಯಾಯಗಳಲ್ಲಿ ಹೋತೃ, ಯಜಮಾನ, ಗ್ರಾವಸ್ತುತ್, ಸುಬ್ರಹ್ಮಣ್ಯ ಮತ್ತು ಆರು ಜನ ಋತ್ವಿಜರು, ಇವರ ಕರ್ತವ್ಯ ಮತ್ತು ಕಡೆಯ ಹತ್ತು ಅಧ್ಯಾಯಗಳಲ್ಲಿ ಕ್ಷತ್ರಿಯರು ಮಾಡಬಹುದಾದ ಯಾಗಗಳು, ಬ್ರಾಹ್ಮಣ ಮತ್ತು ಕ್ಷತ್ರಿಯರಿಗಿರುವ ಪರಸ್ಪರ ಬಾಂಧವ್ಯ ಇತ್ಯಾದಿ ವಿಷಯಗಳ ವಿವರಣೆ ಇದೆ. ಈ ಬ್ರಾಹ್ಮಣವು ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶದಲ್ಲಿ ಪ್ರಚಾರದಲ್ಲಿದೆ. ಕೌಷೀತಕೀ ಬ್ರಾಹ್ಮಣದಲ್ಲಿ ಮೂವತ್ತು ಅಧ್ಯಾಯಗಳಿವೆ. ಮೊದಲಿನ ಆರು ಅಧ್ಯಾಯಗಳಲ್ಲಿ ದರ್ಶಪೂರ್ಣಮಾಸಾದಿ ಯಾಗ ವಿಧಾನ, ಮತ್ತು ಶೇಷ ಅಧ್ಯಾಯಗಳಲ್ಲಿ ಸೋಮಯಾಗ ವಿಧಾನದ ವಿವರಣೆ ಇದೆ.

ಇಷ್ಟಲ್ಲದೆ, ಈ ಬ್ರಾಹ್ಮಣಗಳಲ್ಲಿ ಪದಗಳ ರೂಪನಿಷ್ಪತ್ತಿ, ಯಜ್ಞಾಂಗ ಕರ್ಮಗಳು ಸೂಕ್ಷ್ಮರಹಸ್ಯ ಇತ್ಯಾದಿಗಳ ವಿವರಣೆಯೂ ಇದೆ. ಇವೆಲ್ಲಾ ಗದ್ಯರೂಪದಲ್ಲಿವೆ. ಸಂಸ್ಕೃತ ಗದ್ಯದ ಪ್ರಾರಂಭಾವಸ್ಥೆ ಇದೇ—ಎಂದು ತಿಳಿಯುತ್ತದೆ.

ಉದ್ದಾಲಕರಿಂದ ಕಹೋಲ ಕೌಷೀತಕ, ಕಹೋಲ ಕೌಷೀತಕಿಯಿಂದ ಗುಣಾಖ್ಯ ಶಾಂಖಾಯನರು ಈ ವಿದ್ಯೆಯನ್ನು ಕಲಿತರು. ಈ ಆಚಾರ್ಯರಿಂದಾಗಿಯೇ ಈ

[೧೧] ಆಸೀದ್ ವಿಪ್ರೋ ಯಾಜ್ಞವಲ್ಕ್ಯೋ ದ್ವಿಭಾರ್ಯಸ್ತಸ್ಯ ದ್ವಿತೀಯಾಮಿತ ರೇತಿ ಚಾಹುಃ । ಸ ಜ್ಯೇಷ್ಠಾಯಾಕೃಷ್ಟಚಿತ್ತಃ ಪ್ರಿಯಾಂ ತಾಮುಕ್ತ್ವಾ ದ್ವಿತೀಯಾಮಿತರೇತಿ ಹೋಚೇ ॥ ಐತರೇಯ ಬ್ರಾಹ್ಮಣ, ಪ್ರಥಮ ಅಧ್ಯಾಯ, ಪುಟ ೪. ತ್ರಿವೇಂದ್ರಂ ಪ್ರಕಾಶನ, ೧೯೪೨.

ಬ್ರಾಹ್ಮಣಕ್ಕೆ ಹೆಸರು ಬಂತು[೧೨] ಉತ್ತರ ಗುರ್ಜರ ದೇಶದಲ್ಲಿ ಋಗ್ವೇದೀಯ ಶಾಂಖಾಯನ ಶಾಖೆಯ ಬ್ರಾಹ್ಮಣರಲ್ಲಿ ಈ ಬ್ರಾಹ್ಮಣದ ಪಾಠವು ಪ್ರಚಾರದಲ್ಲಿದೆ.

ಯಜುರ್ವೇದೀಯ ಬ್ರಾಹ್ಮಣಗಳು:—ಯಜುರ್ವೇದಕ್ಕೆ ಸೇರಿದ ಬ್ರಾಹ್ಮಣಗಳಲ್ಲಿ ಶತಪಥ, ತೈತ್ತಿರೀಯ, ಚರಕ, ಕಾಠಕ, ಶ್ವೇತಾಶ್ವತರ, ಮೈತ್ರಾಯಣೀ, ಜಾಬಾಲ, ಖಾಂಡಿಕೇಯ, ಔಖೇಯ, ಹಾರಿದ್ರುವಿಕ, ಆಹ್ವರಕ, ಕಂಕತೀ ಮತ್ತು ಗಾಲವ ಬ್ರಾಹ್ಮಣಗಳು ಒಂದು ಕಾಲದಲ್ಲಿ ಪ್ರಸಿದ್ಧವಾಗಿದ್ದುವು. ಇವುಗಳಲ್ಲಿ ಶತಪಥ ಬ್ರಾಹ್ಮಣವು ಶುಕ್ಲಯಜುರ್ವೇದಕ್ಕೆ ಸೇರಿದೆ. ಇದರಲ್ಲಿಯೂ ಕಾಣ್ವ ಮತ್ತು ಮಾಧ್ಯಂದಿನಗಳೆಂಬ ಎರಡು ಶಾಖೆಗಳಿವೆ. ಈ ಬ್ರಾಹ್ಮಣದಲ್ಲಿ ೧೪ ಕಾಂಡಗಳೂ, ೧೦೦ ಅಧ್ಯಾಯಗಳೂ ಇವೆ. ನೂರು ಅಧ್ಯಾಯಗಳಿಂದಾಗಿ ಇದಕ್ಕೆ ಶತಪಥವೆಂದು ಹೆಸರು ಬಂತು. ಇದರ ಅಂತಿಮ ಭಾಗವು ಬೃಹದಾರಣ್ಯಕೋಪನಿಷತ್ತಾಗಿದೆ.

ತೈತ್ತಿರೀಯ ಬ್ರಾಹ್ಮಣವು ಕೃಷ್ಣಯಜುರ್ವೇದಕ್ಕೆ ಸೇರಿದೆ. ಈ ಬ್ರಾಹ್ಮಣದಲ್ಲಿ ಸಂಹಿತೆಯಲ್ಲಿ ಹೇಳದಿರುವ ಅನೇಕ ವಿಷಯಗಳ ಚರ್ಚೆ ಇದೆ. ಆದುದರಿಂದ ಇದನ್ನು ತೈತ್ತಿರೀಯ ಸಂಹಿತೆಯ ಪರಿಶಿಷ್ಟ ಭಾಗವೆಂದು ಗಣಿಸಲಾಗುತ್ತದೆ. ಈ ಬ್ರಾಹ್ಮಣದಲ್ಲಿ ಮೂರು ಕಾಂಡಗಳು, ಇಪ್ಪತ್ತೆಂಟು ಅಧ್ಯಾಯಗಳು ಮತ್ತು ಮುನ್ನೂರ ಐವತ್ತಮೂರು ಅನುವಾಕಗಳಿವೆ. ಇಲ್ಲಿ ಕಾಂಡಗಳನ್ನು ಅಷ್ಟಕಗಳೆಂದೂ, ಅಧ್ಯಾಯಗಳನ್ನು ಪ್ರಪಾಠಕಗಳೆಂದೂ ಕರೆಯುತ್ತಾರೆ.

ಶತಪಥ ಬ್ರಾಹ್ಮಣದ ಪ್ರವಚನ ಮಾಡಿದವನು ಯಾಜ್ಞವಲ್ಕ್ಯನೆಂದು ಪ್ರಸಿದ್ಧಿ ಇದೆ.[೧೩] ಆದರೆ, ಇದರ ಕೆಲವು ಭಾಗಗಳನ್ನು ಶಾಂಡಿಲ್ಯರು ಪ್ರವಚನ ಮಾಡಿರಬೇಕೆಂದು ಕೆಲವರು ಹೇಳುತ್ತಾರೆ. ಯಾಜ್ಞಿಕ ಕ್ರಿಯೆಗಳ ಜ್ಞಾನಕ್ಕೆ ಇದು ಸರ್ವಶ್ರೇಷ್ಠ ಗ್ರಂಥವಾಗಿದೆ.

ವಾಜಸನೇಯ ಮಾಧ್ಯಂದಿನ ಶತಪಥ ಬ್ರಾಹ್ಮಣವು ಅಂಗ, ಬಂಗಾಳ, ಒರಿಸ್ಸ, ಕಾನೀನ, ಗುಜರಾಥ, ಪಂಜಾಬ ಮತ್ತು ಉತ್ತರ ಪ್ರದೇಶಗಳಲ್ಲಿ ಪ್ರಚಾರದಲ್ಲಿದೆ. ಉಜ್ಜಯಿನಿಯ ಪ್ರಸಿದ್ಧ ಯಜುರ್ವೇದದ ವಿದ್ವಾಂಸರಾದ ಹರಿಸ್ವಾಮಿ, ಉವ್ವಟ ಮೊದಲಾದವರು ಈ ಶಾಖೆಗೆ ಸೇರಿದವರು.

ಕಾಣ್ವ ಶತಪಥ ಬ್ರಾಹ್ಮಣದಲ್ಲಿ ೧೭ ಕಾಂಡಗಳಿವೆ. ಮಾಧ್ಯಂದಿನ ಶಾಖೆಗೂ, ಇದಕ್ಕೂ, ಸ್ವಲ್ಪ ಕಾಂಡವಿಭಾಗ ಮತ್ತು ವಾಕ್ಯರಚನೆಯನ್ನು ಬಿಟ್ಟರೆ ಬೇರೆ ಏನೂ ಭೇದವಿಲ್ಲ.

ಕೃಷ್ಣಯಜುರ್ವೇದೀಯ ತೈತ್ತಿರೀಯ ಬ್ರಾಹ್ಮಣವು ಆಂಧ್ರ ಮೊದಲಾದ ದಕ್ಷಿಣ

---

[೧೨] ಅಥ ವಂಶಃ ॥ ನಮೋ ಬ್ರಹ್ಮಣೇ ನಮ ಆಚಾರ್ಯೇಭ್ಯೋ ಗುಣಾಖ್ಯಾಚ್ಛಾಂಖಾಯನಾದ ಸ್ಮಾಭಿರಧೀತಂ ಗುಣಾಖ್ಯಃ ಶಾಂಖಾಯನಃ ಕಹೋಲಾತ್ ಕೌಷೀತಕೇಃ ಕಹೋಲಃ ಕೌಷೀತಕಿರುದ್ದಾಲಕಾದಾರುಣೇ......... ॥ ಶಾಂಖಾಯನಾರಣ್ಯಕ ೧೫–೧ ॥

[೧೩] ತತಃ ಶತಪಥಂ ಕೃತ್ಸ್ನಂ ಸರಹಸ್ಯಂ ಸಸಂಗ್ರಹಂ ।
ಚಕ್ರೇ ಸಪರಿಶೇಷಂ ಚ ಹರ್ಷೇಣ ಪರಮೇಣ ಹ ॥ ೧೭ ॥
ಸೂರ್ಯಸ್ಯ ಚಾನುಭಾವೇನ ಪ್ರವೃತ್ತೋಽಹಂ ನರಾಧಿಪ ।
ಕರ್ತುಂ ಶತಪಥಂ ಚೇದಮಪೂರ್ವಂ ಚ ಕೃತಂ ಮಯಾ ॥ ೨೨ ॥
[ಮಹಾಭಾರತ, ಶಾಂತಿಪರ್ವ, ಅಧ್ಯಾಯ ೩೧೮]

ಭಾರತದ ರಾಜ್ಯಗಳಲ್ಲಿ, ಪ್ರಚಲಿತವಾಗಿದೆ.[೧೪] ಶೇಷ ಚರಕಾದಿ ಬ್ರಾಹ್ಮಣಗಳು ಈಗ ಉಪಲಬ್ಧವಾಗಿಲ್ಲ.

**ಸಾಮವೇದೀಯ ಬ್ರಾಹ್ಮಣಗಳು:**—ಸಾಮವೇದಕ್ಕೆ ತಾಂಡ್ಯ, ಷಡ್ವಿಂಶ, ಜೈಮಿನೀಯ ಅಥವಾ ತಲವಕಾರ ಬ್ರಾಹ್ಮಣಗಳೆಂಬ ಮೂರು ಮುಖ್ಯವಾದ ಬ್ರಾಹ್ಮಣ ಗ್ರಂಥಗಳಿವೆ. ಇವಲ್ಲದೆ, ಮಂತ್ರಬ್ರಾಹ್ಮಣ ಅಥವಾ ಛಾಂದೋಗ್ಯ ಬ್ರಾಹ್ಮಣ, ದೈವತ, ಅಥವಾ ದೇವತಾಧ್ಯಾಯ ಬ್ರಾಹ್ಮಣ, ಆರ್ಷೇಯ ಬ್ರಾಹ್ಮಣ, ಸಾಮವಿಧಾನ ಬ್ರಾಹ್ಮಣ, ಸಂಹಿತೋಪನಿಷತ್ ಬ್ರಾಹ್ಮಣ, ವಂಶ ಬ್ರಾಹ್ಮಣ, ಜೈಮಿನೀಯ ಆರ್ಷೇಯ ಬ್ರಾಹ್ಮಣ, ಮತ್ತು ಜೈಮಿನೀಯೋಪನಿಷದ್ ಬ್ರಾಹ್ಮಣಗಳೂ ಈ ವೇದಕ್ಕೆ ಸೇರಿವೆ. ಇನ್ನು, ಸಾಮವೇದಕ್ಕೆ ಸೇರಿದ ಕೆಲವು ಬ್ರಾಹ್ಮಣಗಳ ಉಲ್ಲೇಖ ಮಾತ್ರ ಸಿಗುತ್ತದೆ. ಗ್ರಂಥಗಳು ಸಿಗುವುದಿಲ್ಲ. ಯಥಾ—ಭಾಲ್ಲವೀ, ಕಾಲಬವೀ, ರೌರುಕೀ, ಶಾಟ್ಯಾಯನ ಇತ್ಯಾದಿ.

ತಾಂಡ್ಯ ಬ್ರಾಹ್ಮಣದಲ್ಲಿ ಇಪ್ಪತ್ತೈದು ಭಾಗಗಳಿರುವುದರಿಂದ ಇದನ್ನು ಪಂಚವಿಂಶ ಬ್ರಾಹ್ಮಣವೆಂದೂ ಕರೆಯುತ್ತಾರೆ. ಈ ಭಾಗಗಳನ್ನು ಇಲ್ಲಿ ಪ್ರಪಾಠಕಗಳೆಂದೂ, ವಿಭಾಗಗಳನ್ನು ಖಂಡಗಳೆಂದೂ ಕರೆಯುತ್ತಾರೆ. ಇದರಲ್ಲಿ ೩೪೭ ಖಂಡಗಳಿವೆ. ಸಾಯಣಾಚಾರ್ಯರು ಇಲ್ಲಿ ಪ್ರಪಾಠಕಗಳನ್ನು ಅಧ್ಯಾಯಗಳೆಂದೂ ಕರೆದಿದ್ದಾರೆ. ಕೆಲವು ಕಡೆಗಳಲ್ಲಿ ಇದನ್ನು ಪ್ರೌಢ ಅಥವಾ ಮಹಾ ಬ್ರಾಹ್ಮಣವೆಂದೂ ಕರೆದಿದ್ದಾರೆ. ಈ ಬ್ರಾಹ್ಮಣದಲ್ಲಿ ಸೋಮಯಾಗದ ವರ್ಣನೆ ಇದೆ, ತಥಾ ಈ ಯಾಗಕ್ಕೆ ಸಂಬಂಧಪಟ್ಟ ವೇದಮಂತ್ರಗಳ ಉಲ್ಲೇಖವೂ ಇದೆ. ಇಷ್ಟಲ್ಲದೆ ಇದರಲ್ಲಿ ಅನೇಕ ಮಂತ್ರದ್ರಷ್ಟಾ ಅಥವಾ ಯಜ್ಞಕ್ರಿಯಾ–ದ್ರಷ್ಟಾ ಋಷಿಗಳ ಹೆಸರುಗಳೂ ಇವೆ. ತಾಂಡ್ಯವೆಂಬ ವೇದಾಚಾರ್ಯರ ಪ್ರವಚನವೇ ಈ ಬ್ರಾಹ್ಮಣವಾಗಿರುವುದರಿಂದ ಇದಕ್ಕೆ ತಾಂಡ್ಯ ಬ್ರಾಹ್ಮಣವೆಂದು ಹೆಸರು.[೧೫] ಇದು ಗುಜರಾತ ದೇಶದ ಕೌಥುಮ ಶಾಖೆಯ ಬ್ರಾಹ್ಮಣರಲ್ಲಿ ಪ್ರಚಲಿತವಾಗಿದೆ.

ಷಡ್ವಿಂಶ ಬ್ರಾಹ್ಮಣದಲ್ಲಿ ಐದು ಪ್ರಪಾಠಕಗಳಿವೆ. ಸಾಯಣಾಚಾರ್ಯರು ಇಲ್ಲಿಯೂ ಅಧ್ಯಾಯ ಸಂಜ್ಞೆಯನ್ನೇ ಪ್ರಯೋಗಿಸಿದ್ದಾರೆ. ಅಲ್ಲದೆ, ಮೂರನೇ ಪ್ರಪಾಠಕವನ್ನು ಇವರು ಎರಡು ಅಧ್ಯಾಯಗಳನ್ನಾಗಿ ಮಾಡಿದ್ದಾರೆ. ಹೀಗೆ ಇದರಲ್ಲಿ ಆರು ಅಧ್ಯಾಯಗಳಿವೆ. ಈ ಬ್ರಾಹ್ಮಣದ ಐದನೇ ಪ್ರಪಾಠಕವನ್ನು ಅದ್ಭುತ ಬ್ರಾಹ್ಮಣ ವೆಂದೂ ಕರೆಯುತ್ತಾರೆ. ಪ್ರಪಾಠಕಗಳನ್ನು ಖಂಡಗಳನ್ನಾಗಿ ವಿಂಗಡಿಸಿದ್ದಾರೆ. ಈ ಬ್ರಾಹ್ಮಣವು ತಾಂಡ್ಯ ಅಂದರೆ ಪಂಚವಿಂಶ ಬ್ರಾಹ್ಮಣದ ಅಧಿಕ ಭಾಗವಾದುದರಿಂದಲೇ ಇದನ್ನು ಷಡ್ವಿಂಶ ಬ್ರಾಹ್ಮಣವೆನ್ನುತ್ತಾರೆ. ಬೇರೆ ಬೇರೆ ಯಜ್ಞಗಳಲ್ಲಿ ಋತ್ವಿಜರು ಯಾವ ಯಾವ ವೇಷಭೂಷದಲ್ಲಿರಬೇಕೆಂಬುದರ ವರ್ಣನೆ ಈ ಬ್ರಾಹ್ಮಣದಲ್ಲಿದೆ.

---

[೧೪] ಆಂಧ್ರಾದಿ ದಕ್ಷಿಣಾಗ್ನೇಯೀ ಗೋದಾ ಸಾಗರ ಆವಧಿ ।
ಯಜುರ್ವೇದಸ್ತು ತೈತ್ತಿರ್ಯ ಆಪಸ್ತಂಬೀ ಪ್ರತಿಷ್ಠಿತಾ ॥
[ಚರಣವ್ಯೂಹ ಸೂತ್ರಟೀಕಾಕಾರೋದ್ಧೃತ ಮಹಾರ್ಣವ ಶ್ಲೋಕ]

[೧೫] ಅಥ ಹ ಸ್ಮಾಹ ತಾಂಡ್ಯಃ ॥ ಶತಪಥ ಬ್ರಾಹ್ಮಣ ೬–೧–೨–೨೫ ॥
ಮತ್ತು ಸಾಮವಿಧಾನ ಬ್ರಾಹ್ಮಣ ೨–೯೩ ॥

ಶತಪಥ ಬ್ರಾಹ್ಮಣ [೩-೩-೪-೧೭, ೧೯]ದಲ್ಲಿ ಬರುವ ಸುಬ್ರಹ್ಮಣ್ಯಾ ಋಕ್ಕಿನ ವ್ಯಾಖ್ಯೆಯು ಈ ಷಡ್ವಿಂಶ ಬ್ರಾಹ್ಮಣದಲ್ಲಿ [೧-೧-೧೦ರಿಂದ ೧-೨ರ ಅಂತ್ಯ ತನಕ] ಇದೆ. ಪ್ರಾತಃ ಮತ್ತು ಸಾಯಂಕಾಲದ ಸಂಧ್ಯಾವಂದನೆಯ ವರ್ಣನೆಯೂ ಇದರಲ್ಲಿದೆ.[೧೭] ಅಂತಿಮ ಪ್ರಪಾಠಕ, ಅದ್ಭುತ ಬ್ರಾಹ್ಮಣದಲ್ಲಿ ರೋಗಾದಿ ದುಃಖಗಳ ಶಾಂತಿಯ ಉಪಾಯಗಳ ಚರ್ಚೆ ಇದೆ. ಷಡ್ವಿಂಶ ಬ್ರಾಹ್ಮಣದ ಪ್ರವಚನಕಾರರು ತಾಂಡಿ ಋಷಿಗಳ ಶಿಷ್ಯರೇ ಆಗಿರಬೇಕೆಂದು ವಿದ್ವಾಂಸರ ಅಭಿಪ್ರಾಯ.

ಮಂತ್ರ ಬ್ರಾಹ್ಮಣ ಅಥವಾ ಛಾಂದೋಗ್ಯ ಬ್ರಾಹ್ಮಣದಲ್ಲಿ ಎರಡು ಪ್ರಪಾಠಕಗಳಿವೆ. ಪ್ರತಿಯೊಂದು ಪ್ರಪಾಠಕದಲ್ಲಿ ಎಂಟೆಂಟು ಖಂಡಗಳಿವೆ. ಇದರಲ್ಲಿ ಭಿನ್ನ ಭಿನ್ನ ವೇದಗಳ ಕೆಲವು ಮಂತ್ರಗಳ ಸಂಗ್ರಹ, ಹಾಗೂ ಕೆಲವು ಅನ್ಯ ಬ್ರಾಹ್ಮಣ ವಾಕ್ಯಗಳ ಉಲ್ಲೇಖವೂ ಇದೆ.

ದೈವತ ಅಥವಾ ದೇವತಾಧ್ಯಾಯ ಬ್ರಾಹ್ಮಣದಲ್ಲಿ ಮೂರು ಖಂಡಗಳಿವೆ. ಇದು ಬಹಳ ಸಣ್ಣ ಬ್ರಾಹ್ಮಣವಾಗಿದೆ. ಇದರಲ್ಲಿ ವಿಶೇಷವಾಗಿ ವಿಭಿನ್ನ ಛಂದಸ್ಸುಗಳ ವರ್ಣನೆ ಇದೆ. ಸಾಮವೇದದ ಕೌಥುಮ ಶಾಖೆಯವರಲ್ಲಿ ಒಂದು ಆರ್ಷೇಯ ಬ್ರಾಹ್ಮಣವೂ ಇದೆ. ಇದರಲ್ಲಿ ಮುಖ್ಯವಾಗಿ ಸಾಮಗಾನದ ವರ್ಣನೆ ಇದೆ. ಇದರಲ್ಲಿ ಮೂರು ಪ್ರಪಾಠಕಗಳಿವೆ. ಮತ್ತು ಒಟ್ಟಿಗೆ ೮೨ ಖಂಡಗಳಿವೆ. ಇದು ಒಂದು ಕಾಲದಲ್ಲಿ ದೈವತಾಧ್ಯಾಯ ಬ್ರಾಹ್ಮಣದ ಭಾಗವಾಗಿತ್ತೆಂದು ವಿದ್ವಾಂಸರು ಹೇಳುತ್ತಾರೆ.[೧೮] ಸಾಮವಿಧಾನ ಬ್ರಾಹ್ಮಣದಲ್ಲಿ ಮೂರು ಪ್ರಪಾಠಕಗಳಿವೆ, ಮತ್ತು ಒಟ್ಟಿಗೆ ೨೫ ಖಂಡಗಳಿವೆ. ಇದರಲ್ಲಿ ಅಭಿಚಾರಾದಿ ಕರ್ಮಗಳ ವಿವರಣೆ ಇದೆ. ಸಂಹಿತೋಪನಿಷದ್ ಬ್ರಾಹ್ಮಣದಲ್ಲಿ ಒಂದು ಪ್ರಪಾಠಕ ಮತ್ತು ಐದು ಖಂಡಗಳಿವೆ. ಇದರಲ್ಲಿ ಸಾಮವೇದದ ಅರಣ್ಯಗಾನ ಮತ್ತು ಗ್ರಾಮಗೇಯ ಗಾನಗಳ ಉಲ್ಲೇಖ, ಕೆಲವು ಪ್ರಾಚೀನ ಬ್ರಾಹ್ಮಣವಾಕ್ಯ, ಶ್ಲೋಕಾದಿಗಳು, ನಿರುಕ್ತ ೨-೪ ಮತ್ತು ಮನುಸ್ಮೃತಿಯಲ್ಲಿ ಬರುವ "ವಿದ್ಯಾ ಹ ವೈ ಬ್ರಾಹ್ಮಣಮಾ ಜಗಾಮ........." ಎಂಬ ಕತೆ ಇತ್ಯಾದಿಗಳ ಉಲ್ಲೇಖವೂ ಇರುವುದನ್ನು ನೋಡಬಹುದು. ಅಲ್ಲದೆ, ಸಾಮವೇದದ ಪ್ರಾತಿಶಾಖ್ಯರೂಪ ಸೂತ್ರ, ಸಾಮತಂತ್ರ ಹಾಗೂ ಫುಲ್ಲಸೂತ್ರಾದಿಗಳಿವೆ. ಸಾಮವೇದದ ಆಚಾರ್ಯರ ವಂಶಪರಂಪರೆಯ ವಿವರಣೆಯು ವಂಶ ಬ್ರಾಹ್ಮಣದ ಮುಖ್ಯ ವಿಷಯವಾಗಿದೆ. ವಂಶಬ್ರಾಹ್ಮಣದಲ್ಲಿ ಕೇವಲ ಮೂರು ಖಂಡಗಳಿದ್ದು ಇದು ಬಹಳ ಸಣ್ಣ ಬ್ರಾಹ್ಮಣವಾಗಿದೆ.

ಜೈಮಿನೀಯ ಬ್ರಾಹ್ಮಣದಲ್ಲಿ ಮುಖ್ಯವಾಗಿ, ಮೂರು ಭಾಗಗಳು ಮತ್ತು ಒಟ್ಟಿಗೆ ೧೧೮೨ ಖಂಡಗಳಿವೆ. ಇದನ್ನೇ ತಲವಕಾರ ಬ್ರಾಹ್ಮಣವೆಂದೂ ಕರೆಯುತ್ತಾರೆ. ಇದರ ಆರಂಭದಲ್ಲಿ ಅಗ್ನಿಹೋತ್ರದ ವಿಸ್ತೃತ ವಿವರಣೆ ಇದೆ. ಇದರ ವಾಕ್ಯಗಳು ತಾಂಡ್ಯ, ಷಡ್ವಿಂಶ, ಶತಪಥ, ತೈತ್ತಿರೀಯಾ ಸಂಹಿತಾದಿಗಳ ವಾಕ್ಯಗಳನ್ನು ಹೋಲುತ್ತವೆ.

---

[೧೭] ತಸ್ಮಾದ್ ಬ್ರಾಹ್ಮಣೋಽಹೋರಾತ್ರಸ್ಯ ಸಂಯೋಗೇ ಸಂಧ್ಯಾಮುಪಾಸ್ತೇ ॥ ತಾಂಡ್ಯ ಬ್ರಾಹ್ಮಣ ೫-೫-೪ ॥

[೧೮] ಅತ ಏವ ದೇವತಾ ದೇವಮುಷಿಭ್ಯಶ್ಚ ಇತಿ ॥ ದೇವಾ ಋಷಯಶ್ಚ ಏ ಆರ್ಷೇಯ ದೇವತಾಧ್ಯಾಯಾಭ್ಯಾಂ ಪ್ರತಿಪಾದಿತಸ್ತತ್ಸಂಖ್ಯಾತ್ಯ ಸ್ವಸ್ತಿ ಭವತಿ ॥ ದೇವತಾಧ್ಯಾಯ ಬ್ರಾಹ್ಮಣದಲ್ಲಿ ಸಾಯಣ ಭಾಷ್ಯ ॥

ಅಲ್ಲದೆ, ಈ ಬ್ರಾಹ್ಮಣದಲ್ಲಿ ಪ್ರಥಮ ಬಾರಿ ಅನೇಕ ಹೊಸ ಮಂತ್ರಗಳು ಕಂಡುಬರುತ್ತವೆ. ಇದರಲ್ಲಿ ಚರ್ಚಿಸಿರುವ ಕೆಲವು ವಿಷಯಗಳು ತಾಂಡ್ಯಾದಿ ಬ್ರಾಹ್ಮಣಗಳಲ್ಲಿ ಕಾಣುವುದಿಲ್ಲ. ಈ ಬ್ರಾಹ್ಮಣದ ಸಂಕಲನೆ ಮಾಡಿದವರು, ಕೃಷ್ಣದ್ವೈಪಾಯನ ವೇದವ್ಯಾಸರ ಶಿಷ್ಯರಾದ ಸಾಮವೇದಾಚಾರ್ಯ ಜೈಮಿನಿ ಋಷಿಗಳು ಮತ್ತು ಅವರ ಶಿಷ್ಯರಾದ ತಲವಕಾರರು. ಜೈಮಿನೀಯ ಬ್ರಾಹ್ಮಣವು ಕರ್ಣಾಟಕ ರಾಜ್ಯದಲ್ಲಿ ಪ್ರಚಲಿತವಾಗಿದೆ.

ಜೈಮಿನೀಯ ಆರ್ಷೇಯ ಬ್ರಾಹ್ಮಣದಲ್ಲಿ ೮೪ ಖಂಡಗಳಿವೆ. ಇದರಲ್ಲಿ ಆಗ್ನೇಯ ಆದಿ ಸಾಮಪರ್ವ, ಗ್ರಾಮಗೇಯ ಗಾನ ಮತ್ತು ಅರಣ್ಯಗಾನದ ಋಷಿ ಇತ್ಯಾದಿಗಳ ವಿವರಣೆ ಇದೆ. ಇದು ತಲವಕಾರ ಶಾಖೆಯ ಋಷ್ಯನುಕ್ರಮಣಿಕೆಯಂತೆ ಕಾಣುತ್ತದೆ. ಇನ್ನು, ಜೈಮಿನೀಯೋಪನಿಷದ್ ಬ್ರಾಹ್ಮಣದಲ್ಲಿ ನಾಲ್ಕು ಅಧ್ಯಾಯಗಳಿವೆ. ಅಧ್ಯಾಯಗಳನ್ನು ಅನುವಾಕಗಳಾಗಿಯೂ, ಅನುವಾಕಗಳನ್ನು ಖಂಡಗಳನ್ನಾಗಿಯೂ ವಿಭಾಗಿಸಿದ್ದಾರೆ. ಈ ಬ್ರಾಹ್ಮಣದಲ್ಲಿ ಅಭಿಚಾರ ಕರ್ಮ, ಮತ್ತು ತಂತ್ರ ಪ್ರಕ್ರಿಯೆಗಳ ವಿಶೇಷ ವರ್ಣನೆ ಇದೆ. ಪ್ರಣವ ಮಂತ್ರ ಓಂ ಮತ್ತು ಗಾಯತ್ರೀಮಂತ್ರದ ವಿಶ್ಲೇಷಣೆಯನ್ನೂ ಈ ಬ್ರಾಹ್ಮಣದಲ್ಲಿ ಕಾಣಬಹುದು.

ಅಥರ್ವವೇದೀಯ ಬ್ರಾಹ್ಮಣ:—ಅಥರ್ವವೇದೀಯ ಬ್ರಾಹ್ಮಣಗಳಲ್ಲಿ ಕೇವಲ ಗೋಪಥಬ್ರಾಹ್ಮಣವು ಮಾತ್ರ ಪ್ರಸಿದ್ಧವಾಗಿದೆ. ಇದರಲ್ಲಿ ಪೂರ್ವ ಮತ್ತು ಉತ್ತರಗಳೆಂಬ ಎರಡು ಭಾಗಗಳಿವೆ. ಪೂರ್ವ ಭಾಗದಲ್ಲಿ ೫ ಮತ್ತು ಉತ್ತರ ಭಾಗದಲ್ಲಿ ೬ ಪ್ರಪಾಠಕಗಳಿವೆ. ಒಂದು ಕಾಲದಲ್ಲಿ ಗೋಪಥ ಬ್ರಾಹ್ಮಣವು ಬೃಹದಾಕಾರದ ಗ್ರಂಥವಾಗಿದ್ದು ಅದರಲ್ಲಿ ೧೦೦ ಪ್ರಪಾಠಕಗಳಿದ್ದುವು.[೧೪]

ಗೋಪಥ ಬ್ರಾಹ್ಮಣದ ಪೂರ್ವಭಾಗ ೫–೭ರಲ್ಲಿ ಅನೇಕ ಪ್ರಕಾರದ ಯಜ್ಞಗಳ ಹೆಸರುಗಳಿವೆ. ಪೂರ್ವಭಾಗದ ಅಂತ್ಯದಲ್ಲಿ ಅನೇಕ ಶ್ಲೋಕಗಳಿವೆ. ಮಂತ್ರ, ಕಲ್ಪ ಮತ್ತು ಬ್ರಾಹ್ಮಣಗಳ ಒಂದೇ ಸ್ಥಾನದಲ್ಲಿ ಉಲ್ಲೇಖವಿದೆ. ಪೂರ್ವಭಾಗದಲ್ಲಿಯೇ [೧–೩೨–೩೩] ಗಾಯತ್ರೀ ಮಂತ್ರದ ಅನೇಕ ಪ್ರಕಾರದ ವ್ಯಾಖ್ಯೆಗಳಿವೆ; ಅಥರ್ವಣ ಛಂದಸ್ಸು ಮತ್ತು ದೇವತೆಗಳ ವಿವರಣೆಯೂ ಇದರಲ್ಲಿ [೧–೨೯] ಕಂಡುಬರುತ್ತದೆ; ಓಂಕಾರದ ಮೂರು ಮಾತ್ರೆಗಳ ವಿಶ್ಲೇಷಣೆಯನ್ನೂ ಇಲ್ಲಿ ನೋಡಬಹುದು.[೧೫] ವ್ಯಾಕರಣ ಮಹಾಭಾಷ್ಯದಲ್ಲಿ ಉದ್ಧೃತ ಈ ಪ್ರಸಿದ್ಧ ಶ್ಲೋಕವೂ ಗೋಪಥ ಬ್ರಾಹ್ಮಣದ ಪೂರ್ವಭಾಗದಲ್ಲಿಯೇ ಇದೆ—

ಸದೃಶಂ ತ್ರಿಷು ಲಿಂಗೇಷು ಸರ್ವಾಸು ಚ ವಿಭಕ್ತಿಷು ।
ವಚನೇಷು ಚ ಸರ್ವೇಷು ಯನ್ನ ವ್ಯೇತಿ ತದವ್ಯಯಂ ॥ [೧–೨೬

[೧೪] ಅಥ ಗೋಪಥಾಃ ಶತಪ್ರಪಾಠಕಂ ಬ್ರಾಹ್ಮಣಮಾಸೀತ್ ।
ತಸ್ಯಾವಶಿಷ್ಟೇ ದ್ವೇ ಪೂರ್ವಮುತ್ತರಂ ಚೇತಿ ॥
[ಅಥರ್ವಣ ಪರಿಶಿಷ್ಟ ೪೯ ಉಪನಾಮ ಅಥರ್ವಣ ಚರಣವ್ಯೂಹ]

[೧೫] ಯಾ ಸಾ ಪ್ರಥಮಾ ಮಾತ್ರಾ ಬ್ರಹ್ಮದೇವತ್ಯಾ ರಕ್ತಾವರ್ಣೇನ ಯಾ ಸಾ ದ್ವಿತೀಯಾ ಮಾತ್ರಾ ವಿಷ್ಣುದೇವತ್ಯಾ ಕೃಷ್ಣಾ ವರ್ಣೇನ ಯಾಸಾ ತೃತೀಯಾ ಮಾತ್ರಶಾನ ದೇವತ್ಯಾ ಕಪಿಲಾ ವರ್ಣೇನ ॥

ಗೋಪಥ ಬ್ರಾಹ್ಮಣವು ಆಥರ್ವಣ ಶೌನಕ ಶಾಖೆಯ ಬ್ರಾಹ್ಮಣರಲ್ಲಿ ಪ್ರಚಾರ ದಲ್ಲಿದೆ ಇವರು ಗುಜರಾತ ದೇಶದಲ್ಲಿ ಕಂಡುಬರುತ್ತಾರೆ

ಈ ಎಲ್ಲಾ ಬ್ರಾಹ್ಮಣ ಗ್ರಂಥಗಳನ್ನೂ ಪರಿಶೀಲಿಸಿ ನೋಡಿದರೆ, ವೇದವಿದ್ಯೆಯು ತುಂಬಾ ಉನ್ನತಿಯನ್ನು ಹೊಂದಿತ್ತೆಂದು ಗೊತ್ತಾಗುತ್ತದೆ ಋಷಿಗಳು ತಮ್ಮ ಸಾಧನೆ ತಪಸ್ಸುಗಳಿಂದ ವೇದಜ್ಞಾನದ ತುಂಬಾ ಪ್ರಚಾರ ಮಾಡಿದರು

ವೇದಮಂತ್ರಗಳ ರಹಸ್ಯಗಳನ್ನು ಸವಿಸ್ತಾರವಾಗಿ ಬಿಡಿಸಿ ತೋರಿಸಿದರು ಇದ ರಿಂದ ಮಾನವ ಜಾತಿಯ ಕಲ್ಯಾಣಕ್ಕಾಗಿ ಮಾಡಬೇಕಾದ ಶ್ರೇಷ್ಠ ಕರ್ಮಗಳ ಉಪದೇಶ ವನ್ನೂ ಕೊಟ್ಟರು ಆ ಕರ್ಮಗಳ ವೈಜ್ಞಾನಿಕ ಮಹತ್ವವನ್ನೂ ತಿಳಿಸಿದರು ಆದರೆ, ಕಾಲಚಕ್ರದ ಗತಿಯಲ್ಲಿ ಅನೇಕ ಬ್ರಾಹ್ಮಣ ಗ್ರಂಥಗಳು ಲುಪ್ತವಾಗಿ ಹೋದಂತೆ ಕಾಣು ತ್ತದೆ ಈ ಗ್ರಂಥಗಳ ಹೆಸರು ಮಾತ್ರ ಇಂದು ಉಳಿದಿವೆ ಅನೇಕ ಬ್ರಾಹ್ಮಣ ಗ್ರಂಥಗಳ ಹೆಸರುಗಳು ಕೂಡ ನಷ್ಟವಾಗಿ ಹೋಗಿರಬೇಕು ಯಾಕೆಂದರೆ ಶಾಖಾಪರಂಪರೆಗನು ಸಾರವಾಗಿ ಪ್ರತಿಯೊಂದು ಶಾಖೆಗೂ ಒಂದು ಬ್ರಾಹ್ಮಣವಿರಬೇಕಿತ್ತು ಆದರೆ ಹೀಗೆ ಇದ್ದಂತೆ ತೋರುವುದಿಲ್ಲ ಇಷ್ಟು ಮಾತ್ರವಲ್ಲದೆ ಕೆಲವು ಬ್ರಾಹ್ಮಣಗಳು ಯಾವ ಶಾಖೆಗೆ ಸೇರಿವೆಯೆಂಬ ಮಾತೂ ಸಂದಿಗ್ಧವಾಗಿದೆ ಯಥಾ—ಆರುಣೇಯ ಬ್ರಾಹ್ಮಣ ಸೌಲಭ ಬ್ರಾಹ್ಮಣ ಶೈಲಾಲಿ ಬ್ರಾಹ್ಮಣ ಪರಾಶರ ಬ್ರಾಹ್ಮಣ ಮಾಷಶರಾವಿ ಬ್ರಾಹ್ಮಣ ಕಾಪೇಯ ಬ್ರಾಹ್ಮಣ ರಹಸ್ಯಾಮ್ನಾಯ ಬ್ರಾಹ್ಮಣ ನಿರುಕ್ತ ಬ್ರಾಹ್ಮಣ ಅನ್ವಾಖ್ಯಾನ ಬ್ರಾಹ್ಮಣ ಇತ್ಯಾದಿ ಈ ಎಲ್ಲ ಬ್ರಾಹ್ಮಣಗಳು ವೇದಾರ್ಥವನ್ನು ವಿವರಿಸುತ್ತವೆ ಇವು ಋಷಿ ಪ್ರೋಕ್ತ ಗ್ರಂಥಗಳಾಗಿರುವುದರಿಂದ ವೈದಿಕ ಶಬ್ದಗಳ ಅರ್ಥಗಳಿಗೆ ಇವೇ ಪ್ರಮಾಣಗಳಾಗಿವೆ ನಿರ್ಮಲ ಚಿತ್ತರಾದ ಋಷಿಗಳು ಸಮಾಧಿಸ್ಥ ರಾಗಿ ಪರಮಾತ್ಮನ ಕೃಪೆಯಿಂದ ವೇದಶಬ್ದಾರ್ಥಗಳನ್ನು ಕಂಡುಹಿಡಿದರು ಸೂಕ್ಷ್ಮ ರಹಸ್ಯಗಳನ್ನು ಗ್ರಹಿಸಿಕೊಂಡರು ಇವುಗಳನ್ನು ಮುಂದಿನ ಜನಾಂಗದ ಲಾಭಕ್ಕಾಗಿ ಬ್ರಾಹ್ಮಣ ಗ್ರಂಥಗಳ ಮೂಲಕ ಸುರಕ್ಷಿತವಾಗಿಟ್ಟರು ಆದುದರಿಂದ ಬ್ರಾಹ್ಮಣ ಗ್ರಂಥಗಳ ಅಧ್ಯಯನ ಮಾಡದೆ ವೇದಾರ್ಥವು ಸುಗ್ರಾಹ್ಯವಾಗುವುದಿಲ್ಲ ನಿರುಕ್ತ ಮತ್ತು ನಿಘಂಟು ಬ್ರಾಹ್ಮಣ ಗ್ರಂಥಗಳನ್ನೇ ಆಧರಿಸಿಕೊಂಡಿವೆ

## ಆರಣ್ಯಕ ಗ್ರಂಥಗಳು

ವೇದಮಂತ್ರಗಳ ಗೂಢ ರಹಸ್ಯವನ್ನು ವಿವರಿಸುವ ಗ್ರಂಥಗಳೇ ಆರಣ್ಯಕಗಳು ಈ ಗೂಢ ರಹಸ್ಯಗಳ ಚರ್ಚೆ ಅರಣ್ಯಗಳಲ್ಲಿಯೇ ನಡೆಯುತ್ತಿದ್ದುದರಿಂದ ಇವುಗಳನ್ನು ಆರಣ್ಯಕಗಳೆಂದು ಕರೆಯುತ್ತಾರೆ [೨೦] ಅಪಾತ್ರರ ಕೈಗೆ ಈ ವಿದ್ಯೆಯು ಹೋಗಬಾರದೆಂದೇ ಇದರ ಉದ್ದೇಶವಾಗಿತ್ತು ಮೊಸರಿನಿಂದ ಬೆಣ್ಣೆಯನ್ನು ಮಲಯ ಪರ್ವತಗಳಿಂದ ಚಂದನವನ್ನು ಔಷಧಿಗಳಿಂದ ಅಮೃತವನ್ನು ತೆಗೆಯುವಂತೆ ವೇದಗಳಿಂದ ಋಷಿಗಳು ಆರಣ್ಯಕಗಳನ್ನು ತೆಗೆದಿದ್ದಾರೆ ಎಂದು ಮಹಾಭಾರತದ ಒಂದು ಶ್ಲೋಕವು ಹೇಳುತ್ತದೆ [೨೧]

---

[೨೦] ಅರಣ್ಯಾಧ್ಯಯನಾದೇತದಾರಣ್ಯಕಮಿತೀರ್ಯತೇ । ಅರಣ್ಯೇ ತದಧೀಯೇತ್ಯೇವಂ ವಾಕ್ಯಂ ಪ್ರಚಕ್ಷತೇ ॥ ತೈತ್ತಿರೀಯಾರಣ್ಯಕ ॥

[೨೧] ನವನೀತಂ ಯಥಾ ದಧ್ನೋ ಮಲಯಾಚ್ಚಂದನಂ ಯಥಾ ।
ಆರಣ್ಯಕಂ ಚ ವೇದೇಭ್ಯ ಔಷಧಿಭ್ಯೋಽಮೃತಂ ಯಥಾ ॥ ಶಾಂತಿಪರ್ವ ೩೩೧–೩ ॥

ಐತರೇಯಾರಣ್ಯಕದ ಭಾಷ್ಯೆಯ ಪ್ರಾಕ್ಕಥನದಲ್ಲಿ ಐತರೇಯ ಬ್ರಾಹ್ಮಣದಲ್ಲಿಯೇ ಆರಣ್ಯಕಕಾಂಡವಿದೆಯೆಂದೂ ಅದು ಅರಣ್ಯದಲ್ಲಿಯೇ ಪಠನೆಗೆ ಯೋಗ್ಯವಾದುದರಿಂದ ಅದನ್ನು ಆರಣ್ಯವೆಂದು ಹೇಳುತ್ತಾರೆ ಎಂದೂ ಸಾಯಣಾಚಾರ್ಯರು ಬರೆದಿದ್ದಾರೆ[೨೨] ಅನೇಕ ಆರಣ್ಯಕಗಳು ಬ್ರಾಹ್ಮಣ ಗ್ರಂಥಗಳ ಭಾಗಗಳಾಗಿವೆ ಬೃಹದಾರಣ್ಯಕವು ಶತಪಥ ಬ್ರಾಹ್ಮಣದ ಭಾಗವಾಗಿದೆ ಜೈಮಿನಿಯ ಆರಣ್ಯಕವು ಜೈಮಿನೀಯ ಬ್ರಾಹ್ಮಣದ ಭಾಗವಾಗಿದೆ ಇತ್ಯಾದಿ ಆರಣ್ಯಕ ಗ್ರಂಥಗಳನ್ನು ಅನೇಕ ಕಡೆಗಳಲ್ಲಿ ರಹಸ್ಯಗಳೆಂದೂ ಕರೆದಿದ್ದಾರೆ ಮನುಸ್ಮೃತಿ ವಾಸಿಷ್ಠ ಧರ್ಮಸೂತ್ರ ಇತ್ಯಾದಿ ಪ್ರಾಚೀನ ಗ್ರಂಥಗಳಲ್ಲಿ ಈ ಸಂಜ್ಞೆಯು ದೊರೆಯುತ್ತದೆ[೨೩]

ಯಾವ ರೀತಿಯಲ್ಲಿ ಬ್ರಾಹ್ಮಣ ಗ್ರಂಥಗಳು ವೇದಾರ್ಥವನ್ನು ತಿಳಿದುಕೊಳ್ಳಲು ಸಹಾಯಕವಾಗಿವೆಯೋ ಆರಣ್ಯಕಗಳೂ ಅದೇ ರೀತಿ ಸಹಾಯಕಗಳಾಗಿವೆ ಉದಾಹರಣೆಗಾಗಿ ಋಗ್ವೇದದ ಒಂದು ಮಂತ್ರವು ಹೀಗಿದೆ—

ಪತಂಗಮಕ್ತಮಸುರಸ್ಯ ಮಾಯಯಾ ಹೃದಾ ಪಶ್ಯಂತಿ ಮನಸಾ ವಿಪಶ್ಚಿತಃ । [ಋಗ್ವೇದ ಮಂಡಲ ೧೦, ಸೂಕ್ತ ೧೭೭ ಮಂತ್ರ ೧]

ಇದರಲ್ಲಿ ಬರುವ ಶಬ್ದಗಳ ಅರ್ಥವನ್ನು ಜೈಮಿನೀಯ ಆರಣ್ಯಕವು ಈ ರೀತಿ ವಿವರಿಸುತ್ತದೆ—

ಪತಂಗಮಕ್ತಮಿತಿ । ಪ್ರಾಣೋ ವೈ ಪತಂಗಃ । ಪತನ್ನಿವ ಹ್ಯೇಷ್ವಂಗೇಷು ರಥ ಮುದೀಕ್ಷತೇ । ಪತಂಗ ಇತ್ಯಾಚಕ್ಷತೇ ॥ ಅಸುರಸ್ಯ ಮಾಯಯೇತಿ । ಮನೋ ವಾ ಅಸುರಂ । ತದ್ಧ್ಯಸುಷು ರಮತೆ । ತಸ್ಯೈವ ಮಾಯಯೋಕ್ತಃ ॥ ಹೃದಾ ಪಶ್ಯಂತಿ ಮನಸಾ ವಿಪಶ್ಚಿತ ಇತಿ । ಹೃದೈವ ಹ್ಯೇತೇ ಪಶ್ಯಂತಿ ಯನ್ಮನಸಾ ವಿಪಶ್ಚಿತಃ ॥ ಇತ್ಯಾದಿ

ಅಂದರೆ ಪ್ರಾಣವೇ ಪತಂಗ ಮನವೆ ಅಸುರ ಅವನ ಮಾಯೆಯಿಂದ ಇದು ಯುಕ್ತವಾಗಿದೆ ವಿದ್ವಾಂಸರು ಹೃದಯ ಅಥವಾ ಮನಸ್ಸಿನ ಮೂಲಕವೆ ನೋಡುತ್ತಾರೆ ಇತ್ಯಾದಿ ಮುಂದೆ,

ಪತಂಗೋ ವಾಚಮ್ಮನಸಾ ಬಿಬರ್ತಿ ತಾಂ ಗಂಧರ್ವೋಽವದದ್ಗರ್ಭೇ ಅಂತಃ । [ಋಗ್ವೇದ ೧೦-೧೭೭-೨]

ಈ ಮಂತ್ರದ ವ್ಯಾಖ್ಯೆ ಮಾಡುತ್ತಾ ಗಂಧರ್ವ ಅಂದರೆ ಪ್ರಾಣ, ಗರ್ಭ ಅಂದರೆ ಪುರುಷ ಎಂದಿತ್ಯಾದಿ ರೀತಿಯಲ್ಲಿ ಮಂತ್ರಗಳಲ್ಲಿ ಬರುವ ಬಿಬಿನ್ನ ಶಬ್ದಗಳ ಅರ್ಥವನ್ನು ಇದರಲ್ಲಿ ವಿವರಿಸಲಾಗಿದೆ ಇದೇ ರೀತಿ ಅನ್ಯ ಆರಣ್ಯಕಗಳಲ್ಲಿಯೂ ವೇದಮಂತ್ರಗಳ ರಹಸ್ಯವನ್ನು ವಿವರಿಸಲಾಗಿದೆ ಆದರೆ ಇದು ಬಹಳ ಸಂಕ್ಷೇಪದಲ್ಲಿದೆ

---

[೨೨] ಐತರೇಯ ಬ್ರಾಹ್ಮಣೇಽಸ್ತಿ ಕಾಂಡಮಾರಣ್ಯಕಾಭಿಧಂ ।
ಅರಣ್ಯ ಏವ ಪಾಠ್ಯತ್ವಾದಾರಣ್ಯಕಮಿತೀರ್ಯತೇ ॥

[೨೩] ಉಪನೀಯ ತು ಯಃ ಶಿಷ್ಯಂ ವೇದಮಧ್ಯಾಪಯೇದ್ ದ್ವಿಜಃ ।
ಸಕಲ್ಪಂ ಸರಹಸ್ಯಂ ಚ ತಮಾಚಾರ್ಯಂ ಪ್ರಚಕ್ಷತೇ ॥ ಮನುಸ್ಮೃತಿ ೨-೧೪೦ ॥
ತಸ್ಯಾ ಭರ್ತುರಭಿಚಾರ ಉಕ್ತಂ ಪ್ರಾಯಶ್ಚಿತ್ತಂ ರಹಸ್ಯೇಷು ॥ ವಾಸಿಷ್ಠಧರ್ಮಸೂತ್ರ ೪-೪ ॥

ಋಗ್ವೇದಕ್ಕೆ ಸಂಬಂಧಪಟ್ಟ ಮೂರು ಆರಣ್ಯಕಗಳು ಈಗ ಸಿಗುತ್ತವೆ. ಐತರೇಯ ಆರಣ್ಯಕ, ಕೌಷೀತಕಿ ಆರಣ್ಯಕ ಮತ್ತು ಶಾಂಖಾಯನ ಆರಣ್ಯಕ ಎಂಬಿವೇ ಅವು. ಯಜುರ್ವೇದೀಯ ಆರಣ್ಯಕಗಳಲ್ಲಿ, ಬೃಹದಾರಣ್ಯಕ [ಮಾಧ್ಯಂದಿನ] ಬೃಹದಾರಣ್ಯಕ [ಕಾಣ್ವ], ತೈತ್ತಿರೀಯ ಆರಣ್ಯಕ, ಮತ್ತು ಮೈತ್ರೇಯಣೀಯ ಆರಣ್ಯಕಗಳು ಉಪಲಬ್ಧವಾಗಿವೆ. ಸಾಮವೇದಕ್ಕೆ ಸಂಬಂಧಪಟ್ಟ ಒಂದೇ ಆರಣ್ಯಕವು ಸಿಗುತ್ತದೆ. ಇದನ್ನು ತಲವಕಾರ ಆರಣ್ಯಕ ಅಥವಾ ಜೈಮಿನೀಯ ಉಪನಿಷದ್ ಬ್ರಾಹ್ಮಣ ಎಂದೂ ಕರೆಯುತ್ತಾರೆ.

## ಉಪನಿಷತ್ತುಗಳು

ವೇದಗಳ ಪ್ರತಿಯೊಂದು ಶಾಖೆಗೂ ಒಂದೊಂದು ಉಪನಿಷತ್ತು ದೊರೆಯುತ್ತದೆ. ಋಗ್ವೇದಕ್ಕೆ ಐತರೇಯೋಪನಿಷತ್ತು ಮತ್ತು ಕೌಷೀತಕಿ ಉಪನಿಷತ್ತುಗಳಿವೆ. ಬೃಹದಾರಣ್ಯಕ ಮತ್ತು ಈಶೋಪನಿಷತ್ತುಗಳು ಶುಕ್ಲಯಜುರ್ವೇದಕ್ಕೆ, ತೈತ್ತಿರೀಯ, ಕಠ ಮತ್ತು ಶ್ವೇತಾಶ್ವತರೋಪನಿಷತ್ತುಗಳು ಕೃಷ್ಣಯಜುರ್ವೇದಕ್ಕೆ, ಛಾಂದೋಗ್ಯೋಪನಿಷತ್ತು ಸಾಮವೇದಕ್ಕೆ, ಮುಂಡಕ, ಮಾಂಡೂಕ್ಯ ಮತ್ತು ಪ್ರಶ್ನೋಪನಿಷತ್ತುಗಳು ಅಥರ್ವವೇದಕ್ಕೆ ಸೇರಿವೆ. ಇವೇ ಪ್ರಧಾನ ಉಪನಿಷತ್ತುಗಳು. ಸಣ್ಣಪುಟ್ಟ ಉಪನಿಷತ್ತುಗಳು ಇನ್ನೂ ಅನೇಕವಿವೆ. ಒಟ್ಟಿಗೆ ೧೦೮ ಉಪನಿಷತ್ತುಗಳಿವೆಯೆಂದು ಹೇಳುತ್ತಾರೆ. ಆದರೆ ಈಗ ಇನ್ನೂರಕ್ಕಿಂತಧಿಕ ಉಪನಿಷತ್ತುಗಳು ದೊರೆಯುತ್ತಿವೆ. ಇವುಗಳಲ್ಲಿ ಈಚಿನ ಕೃತಿಗಳು ತುಂಬಾ ಇವೆ. ಅಲ್ಲದೆ, ಇವುಗಳು ಆರ್ಷ ಕೃತಿಗಳಲ್ಲ. ಆದುದರಿಂದ ಮಹತ್ವಪೂರ್ಣವಲ್ಲ. ಸಾಕಷ್ಟು ಪ್ರಾಚೀನವೆಂದು ತಿಳಿಯಲ್ಪಟ್ಟ ಶ್ವೇತಾಶ್ವರೋಪನಿಷತ್ತಿನ ಭಾಷಾಶೈಲಿಯೂ ಬಹು ನವೀನವೇ ಆಗಿದೆ.

ಆರಣ್ಯಕಗಳ ಕೊನೆಯ ಭಾಗವೇ ಉಪನಿಷತ್ತುಗಳೆಂದು ಕೆಲವರು ಹೇಳುತ್ತಾರೆ. ಉಪನಿಷತ್ ಎಂದರೆ ಪೂರ್ಣ ವೇದಜ್ಞನಾದ ಗುರುವಿನ ಸಮೀಪದಲ್ಲಿ ಕುಳಿತು ಸಂಪಾದನೆ ಮಾಡತಕ್ಕಂತಹ ರಹಸ್ಯಮಯ ವಿದ್ಯೆ. ವೇದಗಳಲ್ಲಿ ಮುಖ್ಯವಾಗಿ ಎರಡು ಪ್ರಕಾರದ ವಿದ್ಯೆಗಳಿವೆ. ಅಪರಾ ಮತ್ತು ಪರಾವಿದ್ಯೆ ಎಂದು. ಅಣು, ಪರಮಾಣು, ಪೃಥ್ವಿ ಮೊದಲಾದುವುಗಳಿಂದ ಹಿಡಿದು ಪ್ರಕೃತಿ ಪರ್ಯಂತ, ಅಥವಾ ಸಂಪೂರ್ಣ ಭೌತಿಕ ಸಂಸಾರದಲ್ಲಿರುವ ಪದಾರ್ಥಗಳ ಗುಣಜ್ಞಾನ, ಅವುಗಳಿಂದ ಉಚಿತ ರೀತಿಯಲ್ಲಿ ಕಾರ್ಯಸಿದ್ಧಿ ಮಾಡಿಕೊಳ್ಳುವುದು ಅಪರಾವಿದ್ಯೆಯ ವಿಷಯವಾಗಿದೆ. ಸರ್ವಶಕ್ತಿಶಾಲಿಯಾದ ಪರಮಾತ್ಮನ ಯಥಾರ್ಥ ಜ್ಞಾನ ಮತ್ತು ಅವನ ಪ್ರಾಪ್ತಿಯ ಉಪಾಯವು ಪರಾವಿದ್ಯೆಯ ವಿಷಯವಾಗಿದೆ. ಪರಾವಿದ್ಯೆಯು ಅಪರಾವಿದ್ಯೆಗಿಂತ ಅತ್ಯಂತ ಉತ್ತಮವಾಗಿದೆ. ಇದೇ ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟ ಪ್ರಧಾನ ವಿಷಯವಾಗಿದೆ. ಈ ಜ್ಞಾನದಿಂದಲೇ ಮನುಷ್ಯರು ಮೋಕ್ಷವನ್ನು ಪಡೆಯುತ್ತಾರೆ, ಅಂದರೆ ಭವಸಾಗರದಿಂದ ಪಾರಾಗುತ್ತಾರೆ. ಮೋಕ್ಷ ಪ್ರಾಪ್ತಿಗಾಗಿ ಮಾಡುವ ಕರ್ಮಗಳೇ ನಿಷ್ಕಾಮ ಕರ್ಮಗಳು. ಯಾಕೆಂದರೆ ಇವುಗಳಲ್ಲಿ ಸಾಂಸಾರಿಕ ಭೋಗಗಳ ಕಾಮನೆಯು ಇರುವುದಿಲ್ಲ. ಇದರ ಫಲವು ಶಾಶ್ವತವಾಗಿದೆ. ಸಾಸಾಂರಿಕ ಭೋಗಗಳ ಇಚ್ಛೆಯಿಂದ ಮಾಡುವಂತಹ ಧರ್ಮಯುಕ್ತ ಕಾರ್ಯಗಳು ಸಕಾಮ ಕರ್ಮಗಳೆನಿಸಿಕೊಂಡಿವೆ. ಇವುಗಳ ಫಲವು ಶಾಶ್ವತ

ವಲ್ಲ ಇವುಗಳಿಂದ ಮೋಕ್ಷವೂ ದೊರೆಯುವುದಿಲ್ಲ ಆದುದರಿಂದ ಪರಬ್ರಹ್ಮ ಪರಮಾತ್ಮನ ಪ್ರಾಪ್ತಿಯ ಪರಾವಿದ್ಯೆಯನ್ನು ಉಪದೇಶಿಸುವ ವೇದಮಂತ್ರಗಳ ವಿಶೇಷ ವ್ಯಾಖ್ಯಾನವು ಉಪನಿಷತ್ತುಗಳ ರೂಪದಲ್ಲಿದೆ ಈ ಪರಾವಿದ್ಯೆಯೆ ವೇದಗಳ ಹೃದಯವಾಗಿರುವುದರಿಂದ ಅಥವಾ ಅಂತಿಮ ಲಕ್ಷ್ಯವಾಗಿರುವುದರಿಂದ ಇದನ್ನು ವೇದಾಂತವೆಂದೂ ಕರೆಯುತ್ತಾರೆ ವೇದಾಂತ ದರ್ಶನವು ಉಪನಿಷತ್ತುಗಳನ್ನೇ ಆಧರಿಸಿದೆ

ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯ ಜನಕಾದಿ ಸಂವಾದ ಕಠೋಪನಿಷತ್ತಿನಲ್ಲಿ ನಚಿಕೇತ ಮತ್ತು ಯಮನ ಸಂವಾದ ಕೌಷೀತಕಿ ಉಪನಿಷತ್ತಿನಲ್ಲಿ ಪ್ರತರ್ದನ ಮತ್ತು ಇಂದ್ರನ ಸಂವಾದ ಇದೇ ರೀತಿ ಅನ್ಯ ಉಪನಿಷತ್ತುಗಳಲ್ಲಿಯೂ ರೋಚಕವಾದ ಸಂವಾದಗಳ ರೂಪದಲ್ಲಿ ಬ್ರಹ್ಮವಿದ್ಯೆಯ ವರ್ಣನೆ ಇದೆ ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿ ಮೃತ್ಯುಪಶ್ಚಾತ್ ಜೀವಾತ್ಮನ ವಿಭಿನ್ನ ಗತಿಗಳ ವರ್ಣನೆಯೂ ಇದೆ

ಈ ರೀತಿ ವೇದಗಳ ಶಾಖೆಗಳು ಬ್ರಾಹ್ಮಣ ಆರಣ್ಯಕ ಮತ್ತು ಉಪನಿಷತ್ತುಗಳು ಮೂಲ ಸಂಹಿತೆಗಳ ವ್ಯಾಖ್ಯಾನಗಳೆಂದು ಸಿದ್ಧವಾಗುತ್ತದೆ ಋಷಿಗಳು ತಾವೇ ಸ್ವತಃ ವೇದಮಂತ್ರಗಳ ಅರ್ಥ ದರ್ಶನ ಮಾಡಿ ಇತರರಿಗೆ ಬೋಧಿಸಿದರು ಪ್ರಾರಂಭದಲ್ಲಿ ಋಷಿಗಳಿಗೆ ವೇದಮಂತ್ರಗಳ ಅರ್ಥವು ಪ್ರತಿಭೆಯಿಂದಂತೆ ಅನಾಯಾಸವಾಗಿಯೇ ಗೋಚರಿಸುತ್ತಿತ್ತು ಆದುದರಿಂದ ಕೇವಲ ಮೂಲಸಂಹಿತೆಗಳನ್ನೇ ಶಿಷ್ಯರಿಗೆ ಉಪದೇಶಿಸುತ್ತಿದ್ದರು ಕಾಲಕ್ರಮೇಣ ಜನರ ಮೇಧಾಶಕ್ತಿಯೂ ಹ್ರಾಸವಾದಂತೆ ಕಾಣುತ್ತದೆ ಮನಸ್ಸಿನ ಸೂಕ್ಷ್ಮತೆಯೂ ಶುದ್ಧತೆಯೂ ಕೂಡ ಕಡಿಮೆಯಾಗುತ್ತಾ ಬಂದಿರಬೇಕು ಆದುದರಿಂದ ಪ್ರಾರಂಭದಲ್ಲಿ ಶಾಖಾ ಪ್ರವಚನ ಪದಪಾಠಾದಿಗಳಿಂದಲೇ ತೃಪ್ತರಾದರೂ ಸಮಯ ಕಳೆದಂತೆ ವೇದಗಳ ವಿದ್ಯಾರ್ಥಿಗಳಿಗೆ ಪದಗಳ ಅರ್ಥ ಮಂತ್ರಗಳ ರಹಸ್ಯ ಅವುಗಳ ವಿನಿಯೋಗ ಇತ್ಯಾದಿಗಳ ವ್ಯಾಖ್ಯೆಯೂ ಬೇಕಾಯಿತು ಹೀಗೆ ಬ್ರಾಹ್ಮಣ ಆರಣ್ಯಕ ಮತ್ತು ಉಪನಿಷತ್ತುಗಳ ಪ್ರಯೋಜನವು ಸಿದ್ಧವಾಯಿತು ಇಷ್ಟು ಮಾತ್ರವಲ್ಲದೆ ವೇದಪ್ರತಿಪಾದಿತ ವಿಜ್ಞಾನಾದಿ ಕಾಂಡಗಳ ಉತ್ತರೋತ್ತರ ವೃದ್ಧಿಯೂ ಆದಂತೆ ತೋರುತ್ತದೆ ಮಾನುಷೀ ವಾಣಿಯು ದೈವೀವಾಣಿಯಿಂದ ಎರಎರುತ್ತಾ ದೂರ ಸರಿದಂತೆ ವೇದಗಳ ವ್ಯಾಖ್ಯಾನ ಗ್ರಂಥಗಳ ಆವಶ್ಯಕತೆಯ ಅನುಭವವೂ ಜನರಿಗೆ ಅಧಿಕಾಧಿಕವಾಗುತ್ತಾ ಬಂತೆಂಬುದರಲ್ಲಿ ಸಂಶಯವಿಲ್ಲ

## ವೇದಾಂಗಗಳು

ಪದಪಾಠದಿಂದ ಹಿಡಿದು ಉಪನಿಷತ್ತುಗಳ ತನಕ ಋಷಿಕೃತ ವೇದವ್ಯಾಖ್ಯಾನ ಗ್ರಂಥಗಳ ಪರಿಚಯ ಮೇಲೆ ಮಾಡಿಕೊಂಡಾಯಿತು ಈ ವ್ಯಾಖ್ಯಾನ ಗ್ರಂಥಗಳು ತುಂಬಾ ವಿಸ್ತಾರವಾಗಿದ್ದುವು ಕಾರಣಾಂತರಗಳಿಂದ ಅವುಗಳಿಗೆ ತುಂಬಾ ಕ್ಷತಿಯಾಯಿತು ಈಗ ಅವುಗಳ ಒಂದು ಅಂಶ ಮಾತ್ರ ನಮಗೆ ಸಿಕ್ಕುತ್ತದೆ ಎಂದು ಸಪ್ರಮಾಣವಾಗಿ ಹೇಳಬಹುದು ಈಗ ಇಷ್ಟೊಂದು ವಿಶಾಲವಾದ ಸಾಹಿತ್ಯ ಭಂಡಾರದ ಅಧ್ಯಯನ ಮಾಡುವುದೂ ಕಷ್ಟ ಅದರ ರಕ್ಷಣೆ ಮಾಡುವುದೂ ಕಷ್ಟ ಯಾಕೆಂದರೆ

ಜನರ ಮೇಧಾಶಕ್ತಿ ಹಾಗೂ ಆಯುಷ್ಯವು ತಪಸ್ಸಿನ ಅಭಾವ ಅನ್ನಪಾನಾದಿ ದೋಷಗ ದೆಸೆಯಿಂದ ಹ್ರಾಸವಾಗುತ್ತಾ ಬಂದಿದೆ ಮಂತ್ರದ್ರಷ್ಟಾ ಋಷಿಗಳ ಯುಗವೂ ಹೆಚ ಕಡಿಮೆ ಇಂದು ಸಮಾಪ್ತಪ್ರಾಯವಾಗಿದೆ ಇಂತಹ ಸಮಯವು ಬರುವುದೆಂದ ಋಷಿಗಳು ಬಹಳ ಹಿಂದೆಯೇ ಗ್ರಹಿಸಿದ್ದರು ಪರಮ ಕಲ್ಯಾಣಿ ವೇದವಾಣಿಯಿಂ ದೂರ ಸರಿದಂತೆ ಮಾನವ ಜಾತಿಯ ಪತನವಾಗುವುದು ನಿಶ್ಚಯವೆಂದೂ ಅವರಿ ಗೊತ್ತಿತ್ತು ಆದುದರಿಂದ ಕರುಣಾಳುಗಳಾದ ಋಷಿಗಳು ಮುಂದಿನ ಪೀಳಿಗೆಯವರ ಸುಲಭವಾಗಿ ವೇದಗಳ ರಕ್ಷಣೆ ಮತ್ತು ಸ್ವಾಧ್ಯಾಯ ಮಾಡಲೆಂದು ವೇದಾಂಗಗಳನ ರಚಿಸಿದರು

**ಸಾಕ್ಷಾತ್ ಕೃತಧರ್ಮಾಣ ಋಷಯೋ ಬಭೂವುಃ ತೇಽವರೇಭ್ಯೋ ಸಾಕ್ಷಾತ್ ಕೃತಧರ್ಮಭ್ಯ ಉಪದೇಶೇನ ಮಂತ್ರಾನ್ ಸಂಪ್ರಾದುಃ । ಉಪ ದೇಶಾಯ ಗ್ಲಾಯಂತೋಽವರೇ ಬಿಲ್ಮಗ್ರಹಣಾಯೇಮಂ ಗ್ರಂಥಂ ಸಮಾ ಮ್ನಾಸಿಷುರ್ವೇದಂ ಚ ವೇದಾಂಗಾನಿ ಚ ॥'** ಎಂದು ಯಾಸ್ಕಾಚಾರ್ಯರು ನಿರುಕ ದಲ್ಲಿ ಹೇಳಿದ್ದಾರೆ ಇದರ ಅರ್ಥವೇನೆಂದರೆ ಮೇಲೆ ಹೇಳಿದಂತೆ ಪ್ರಾಚೀನ ಕಾಲದಲ್ಲಿ ಋಷಿಗಳಿಗೆ ವೇದಮಂತ್ರಗಳ ಅರ್ಥವು ಕರತಲಾಮಲಕವಾಗಿ ಭಾಸವಾಗುತ್ತಿತ್ತು ಯಾರಿ ಈ ರೀತಿ ವೇದಮಂತ್ರಾರ್ಥವನ್ನು ಸಾಕ್ಷಾತ್ ಸ್ವಯಮೇವ ಅನುಭವ ಮಾಡಿಕೊಳ್ಳುವ ಯೋಗ್ಯತೆಯು ಇಲ್ಲವಾಗಿತ್ತೋ ಅವರಿಗೆ ಋಷಿಗಳು ವೇದಮಂತ್ರಾರ್ಥಗಳನ್ನು ಕಲಿಸ ತ್ತಿದ್ದರು ಈ ರೀತಿ ಬಹಳ ಕಾಲದ ತನಕ ವೇದಗಳ ಅಧ್ಯಯನ ಮತ್ತು ಅಧ್ಯಾಪನ ಕಾರ್ಯವು ಗುರು–ಶಿಷ್ಯ ಪರಂಪರೆಯ ಮೂಲಕ ಮೌಖಿಕವಾಗಿಯೇ ನಡೆಯುತ್ತಿತ್ತು ಆದರೆ ಆ ಮೇಲೆ ವೇದಗಳನ್ನು ಲಿಪಿಬದ್ಧವಾಗಿ ಮಾಡಿ ಅವುಗಳನ್ನು ಅರ್ಥಮಾಡಿ ಕೊಳ್ಳಲಿಕ್ಕಾಗಿ ನಿಘಂಟು–ನಿರುಕ್ತ ಮೊದಲಾದ ವೇದಾಂಗಗಳನ್ನು ರಚಿಸಿದರೆ, ಭವಿಷ್ಯ ದಲ್ಲಿ ಜನರಿಗೆ ವೇದಾರ್ಥ ಜ್ಞಾನವು ಸುಗಮವಾಗಿ ಆಗಬಹುದೆಂದು ಭಾವಿಸಲಾಯಿತು ಹೀಗಾಗಿ ವೇದಾಂಗಗಳ ರಚನೆಯಾಯಿತು ಒಟ್ಟಿಗೆ ಆರು ವೇದಾಂಗಗಳಿವೆ ಯಾವ ವೆಂದರೆ—ವರ್ಣೋಚ್ಚಾರಣಶಿಕ್ಷಾ ವ್ಯಾಕರಣ, ನಿರುಕ್ತ, ಛಂದಸಶ್ಶಾಸ್ತ್ರ ಜ್ಯೋತಿಷ ಮತ್ತು ಕಲ್ಪ ಶಿಕ್ಷಾಶಾಸ್ತ್ರಗಳು ಅನೇಕವಿದ್ದರೂ ಪಾಣಿನೀಯ ಶಿಕ್ಷಾಸೂತ್ರಗಳೇ ಅಧಿಕ ಪ್ರಸಿದ್ಧವಾಗಿಯೂ ಪ್ರಾಮಾಣಿಕವೆಂದೆಣಿಸಿಕೊಂಡೂ ಇವೆ ವ್ಯಾಕರಣಶಾಸ್ತ್ರ ದಲ್ಲಿ ಪಾಣಿನಿ ಮುನಿ ಕೃತ ಅಷ್ಟಾಧ್ಯಾಯೀ, ಧಾತುಪಾಠ ಉಣಾದಿಕೋಶ ಲಿಂಗಾನು ಶಾಸನ ಮತ್ತು ಮಹಾಭಾಷ್ಯ ಇವೆಲ್ಲಾ ಬರುತ್ತವೆ ನಿರುಕ್ತವು ಯಾಸ್ಕ ಮುನಿ ಕೃತ ಗ್ರಂಥವಾಗಿದೆ ಛಂದಶ್ಶಾಸ್ತ್ರಗಳಲ್ಲಿ ಪಿಂಗಳಾಚಾರ್ಯ ಕೃತ ಸೂತ್ರಭಾಷ್ಯವು ಪ್ರಸಿದ್ಧವಾಗಿದೆ ವಸಿಷ್ಠಾದಿ ಋಷಿಗಳ ಕೃತಿಗಳಾದ ರೇಖಾಗಣಿತ ಬೀಜಗಣಿತಾದಿ ಗಳಿಂದ ಯುಕ್ತವಾದ ಜ್ಯೋತಿಷ್‌ಶಾಸ್ತ್ರವನ್ನು ರಚಿಸಲಾಗಿದೆ ಕಲ್ಪಶಾಸ್ತ್ರದಲ್ಲಿ ಮಾನವ ಕಲ್ಪಸೂತ್ರಾದಿಗಳು ಪ್ರಸಿದ್ಧವಾಗಿವೆ

**ಶಿಕ್ಷಾ**—ಶಿಕ್ಷಾ ಅಂದರೆ ವಾಚ ಉಚ್ಚಾರಣ–ವಿಧಿಃ ಎಂದರೆ ವರ್ಣಗಳ ಶುದ್ಧ ಉಚ್ಚಾರಣಾ ನಿಯಮಗಳನ್ನು ಕಲಿಸುವ ಶಾಸ್ತ್ರ [೨೪] ವೇದಮಂತ್ರಗಳನ್ನು ಶುದ್ಧ

[೨೪] ವರ್ಣಸ್ವರಾದ್ಯುಚ್ಚಾರಣ ಪ್ರಕಾರೋ ಯತ್ರ ಉಪದಿಶ್ಯತೇ ಸಾ ಶಿಕ್ಷಾ ॥ ಋಗ್ವೇದ ಭಾಷ್ಯದ ಭೂಮಿಕೆಯಲ್ಲಿ ಸಾಯಣಾಚಾರ್ಯರು ॥

ರೀತಿಯಲ್ಲಿ ಉಚ್ಚಾರಣೆ ಮಾಡಲು ಬೇಕಾದ ನಿಯಮಗಳನ್ನು ವಿವರಿಸಿ ಹೇಳಲು ವೇದಗಳ ಪ್ರತಿಯೊಂದು ಶಾಖೆಗೂ ಒಂದೊಂದು ಶಿಕ್ಷಾಶಾಸ್ತ್ರಗಳನ್ನು ಹಿಂದೆ ಋಷಿಗಳು ರಚಿಸಿದರು. ಆದುದರಿಂದಲೇ ಇವುಗಳನ್ನು ಪ್ರಾತಿಶಾಖ್ಯಗಳೆಂದು ಕರೆಯುತ್ತಿದ್ದರು.[೨೫] ಆದರೆ ಎಲ್ಲಾ ಪ್ರಾತಿಶಾಖ್ಯಗಳು ಈಗ ಸಿಗುವುದಿಲ್ಲ. ಶಿಕ್ಷಾಗ್ರಂಥಗಳನ್ನು ರಚಿಸಿದವರಲ್ಲಿ ಭಾರದ್ವಾಜ, ವ್ಯಾಸ, ಯಾಜ್ಞವಲ್ಕ್ಯ, ನಾರದ, ಪಾಣಿನಿ, ವಸಿಷ್ಠ, ಶೌನಕ, ಶಂಭು, ವರರುಚಿ ಮೊದಲಾದವರ ಹೆಸರುಗಳನ್ನು ನೋಡುತ್ತೇವೆ. ಆದರೆ ವೇದಾಂಗ ಶಿಕ್ಷಾ ಎಂದು ಈಗ ಪ್ರಸಿದ್ಧವಾಗಿರುವುದು ಪಾಣಿನಿ ಮುನಿ ಕೃತ ಶಿಕ್ಷಾಸೂತ್ರಗಳು.

ಆರು ವೇದಾಂಗಗಳಲ್ಲಿ ಶಿಕ್ಷಾಸೂತ್ರಗಳೇ ಪ್ರಥಮ ವೇದಾಂಗ. ಬಾಲಕರ ಶಿಕ್ಷಣವು ಇದರಿಂದಲೇ ಪ್ರಾರಂಭವಾಗುತ್ತದೆ. ವರ್ಣೋಚ್ಚಾರ ದೋಷದಿಂದ ಭಾಷಾ ದೋಷವೂ ಉತ್ಪನ್ನವಾಗುತ್ತದೆ. ಅಪಭ್ರಂಶ ಭಾಷೆಗಳು ಉಚ್ಚಾರಣ ದೋಷದಿಂದಲೇ ಉತ್ಪನ್ನವಾಗಿವೆ. ವೇದವಾಣಿಯ ಶುದ್ಧತೆಯು ಶಿಕ್ಷಾಶಾಸ್ತ್ರದಿಂದಾಗಿ ಸುರಕ್ಷಿತವಾಗಿದೆ. ವರ್ಣಗಳ ಸರಿಯಾದ ಉಚ್ಚಾರಣೆಯ ತರಬೇತಿಯನ್ನು ಬಾಲ್ಯಕಾಲದಲ್ಲಿಯೆ ಕೊಡಬೇಕು. ಇದನ್ನು ಉಪೇಕ್ಷೆ ಮಾಡಿದರೆ ಮಹಾ ಪಂಡಿತರಾದ ಮೇಲೂ ಉಚ್ಚಾರಣ ದೋಷಗಳು ಹೋಗುವುದಿಲ್ಲ. ಆದುದರಿಂದಲೇ ಸ್ವಜನ - [ನಮ್ಮ ಜನ] ಶಬ್ದದ ಬದಲಿಗೆ ಶ್ವಜನ [ನಾಯಿಗಳ ಸಂಬಂಧಿಕರು] ಶಬ್ದವನ್ನೂ, ಸಕಲ [=ಸಂಪೂರ್ಣ] ಶಬ್ದದ ಬದಲಿಗೆ ಶಕಲ [ತುಂಡು] ಶಬ್ದವನ್ನೂ ಮತ್ತು ಸಕೃತ್ -[ಒಂದು ಸಾರಿ] ಶಬ್ದದ ಬದಲಿಗೆ ಶಕೃತ್ [ಮಲ] ಶಬ್ದವನ್ನೂ ಕೆಲವರು ಉಪಯೋಗಿಸುವುದುಂಟು.[೨೬] ಈ ರೀತಿ ಅರ್ಥಕ್ಕೆ ಅನರ್ಥವಾಗುವುದನ್ನು ನೋಡಬಹುದು. ಇದು ವರ್ಣದೋಷದ ಉದಾಹರಣೆ. ವೇದಭಾಷೆಯಲ್ಲಿ ಉದಾತ್ತಾದಿ ಸ್ವರಗಳ ದೋಷದಿಂದಲೂ ಅನರ್ಥವಾಗುತ್ತದೆ. ಉದಾಹರಣೆಗಾಗಿ 'ಇಂದ್ರಶತ್ರು' ಶಬ್ದವನ್ನು ನೋಡಿರಿ. ಇದು ಸಮಾಸ ಪದವಾಗಿದೆ. ಇದನ್ನು ಅಂತೋದಾತ್ತವಾಗಿ ಪಾಠಮಾಡಿದರೆ ಅದು ತತ್ಪುರುಷ ಸಮಾಸವಾಗುತ್ತದೆ ಮತ್ತು ಇದರ ಅರ್ಥ ಇಂದ್ರನ ಶತ್ರು ಎಂದಾಗುತ್ತದೆ. ಆದರೆ ಇದೇ ಪದವನ್ನು ಆದ್ಯುದಾತ್ತವಾಗಿ ಉಚ್ಚರಿಸಿದರೆ ಅದು ಬಹುವ್ರೀಹಿ ಸಮಾಸವಾಗುತ್ತದೆ ಮತ್ತು ಇಂದ್ರನು ಶತ್ರು [ಯಾರ ಶತ್ರುವು ಇಂದ್ರನೋ ಅವನು] ಎಂದು ಅರ್ಥವಾಗುತ್ತದೆ. ಇಲ್ಲಿ ಶತ್ರು ಶಬ್ದದ ಅರ್ಥ ಸಂಹಾರಕನೆಂದಾಗುತ್ತದೆ [ಶಾತಯಿತಾ ಶತ್ರು]. ಹೀಗೆ ಇಂದ್ರನ ಸಂಹಾರಕನ ಬದಲಿಗೆ ಇಂದ್ರನೇ ಸಂಹಾರಕನಾಗುತ್ತಾನೆ.[೨೭] ಹಿಂದೆ ತ್ವಷ್ಟಾನೆಂಬ ಅಸುರನು ಇಂದ್ರನ ಸಂಹಾರಕನಾದ ಮಗನೊಬ್ಬನು ತನಗೆ ಹುಟ್ಟಬೇಕೆಂಬ ಬಯಕೆಯಿಂದ ಅಭಿಚಾರಿಕ

---

[೨೫] ಋಗ್ವೇದಕ್ಕೆ ಋಕ್‌ಪ್ರಾತಿಶಾಖ್ಯ ಇದೆ. ಇದನ್ನು ರಚಿಸಿದವರು ಶೌನಕರು. ಶುಕ್ಲಯಜುರ್ವೇದಕ್ಕೆ ಕಾತ್ಯಾಯನರ ವಾಜಸನೇಯ ಪ್ರಾತಿಶಾಖ್ಯ, ಕೃಷ್ಣಯಜುರ್ವೇದಕ್ಕೆ ತೈತ್ತಿರೀಯ ಪ್ರಾತಿಶಾಖ್ಯ, ಸಾಮವೇದಕ್ಕೆ ಸಾಮವೇದ ಪ್ರಾತಿಶಾಖ್ಯ, ಪುಷ್ಪಸೂತ್ರ ಮತ್ತು ಪಂಚವಿಧ ಸೂತ್ರಗಳು ತಥಾ ಅಥರ್ವವೇದಕ್ಕೆ ಅಥರ್ವವೇದ ಪ್ರಾತಿಶಾಖ್ಯ ಪ್ರಸಿದ್ಧವಾಗಿದ್ದವು. ಅಥರ್ವವೇದ ಪ್ರಾತಿಶಾಖ್ಯಕರ್ತರಲ್ಲಿ ಶೌನಕರ ಹೆಸರೂ ಬರುತ್ತದೆ. ಇವೇ ಪ್ರಾಚೀನ ಶಿಕ್ಷಾಶಾಸ್ತ್ರಗಳು.

[೨೬] ಸ್ವಜನಃ ಶ್ವಜನೋ ಮಾಭೂತ್ ಸಕಲಂ ಶಕಲಂ ಸಕೃತ್ ಶಕೃತ್ ॥

[೨೭] ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾ ಪ್ರಯುಕ್ತೋ ನ ತಮರ್ಥಮಾಹ ।
ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥

ಎಂಬ ವಿಶೇಷ ಯಜ್ಞ ಒಂದನ್ನು ಮಾಡಿದನಂತೆ. ಯಜ್ಞದಲ್ಲಿ 'ಇಂದ್ರಶತ್ರುರ್ವರ್ಧಸ್ವ' ಎಂದು ಮಂತ್ರದ ಊಹೆ ಮಾಡಬೇಕಿತ್ತು. ಆದರೆ ಪುರೋಹಿತನು ಅಂತೋದಾತ್ತದ ಬದಲಿಗೆ ಆದ್ಯುದಾತ್ತವನ್ನು ಪ್ರಯೋಗಿಸಿದುದರಿಂದ, ಇಂದ್ರನ ಸಂಹಾರಕನ ಬದಲಿಗೆ ಇಂದ್ರನೇ ಅವನ ಮಗನ ಸಂಹಾರಕನಾದನೆಂದು ಕತೆ ಇದೆ. ಸ್ವರ ಮತ್ತು ವರ್ಣಗಳ ಉಚ್ಚಾರಣೆಯ ದೋಷದಿಂದ ಅರ್ಥಕ್ಕೆ ಮಹಾ ಅನರ್ಥವಾಗುತ್ತದೆ ಎಂದೇ ಇದರ ತಾತ್ಪರ್ಯ. ಆದುದರಿಂದ ವೇದಾಂಗ ಶಿಕ್ಷಾಶಾಸ್ತ್ರವು ವೇದಗಳನ್ನು ಕಲಿಯುವವರಿಗೆ ಬಹಳ ಮುಖ್ಯವಾದ ವಿಷಯವಾಗಿದೆ.

ಪಾಣಿನೀಯ ಶಿಕ್ಷಾ ಶಾಸ್ತ್ರವು ಎರಡು ರೀತಿಯಲ್ಲಿ ಸಿಗುತ್ತವೆ, ಒಂದು ಸೂತ್ರಾತ್ಮಕ ಮತ್ತು ಇನ್ನೊಂದು ಶ್ಲೋಕಾತ್ಮಕ ಪಾಠದಲ್ಲಿದೆ. ಇವು ಕೂಡ, ಲಘು ಪಾಠ ಮತ್ತು ವೃದ್ಧಪಾಠವೆಂದು ಎರಡು ರೂಪಗಳಲ್ಲಿ ಸಿಗುತ್ತವೆ. ಈಗ ಹೆಚ್ಚಾಗಿ 'ಶ್ಲೋಕಾತ್ಮಕ ಪಾಣಿನೀಯ ಶಿಕ್ಷಾಶಾಸ್ತ್ರವೇ ಬಳಕೆಯಲ್ಲಿದೆ. ಲಘುಪಾಠದಲ್ಲಿ ೩೫ ಶ್ಲೋಕಗಳೂ ವೃದ್ಧಪಾಠದಲ್ಲಿ ೬೦ ಶ್ಲೋಕಗಳೂ ಇವೆ. ಲಘುಪಾಠವನ್ನು ಯಾಜುಷ ಪಾಠವೆಂದೂ, ವೃದ್ಧಪಾಠವನ್ನು ಋಕ್‌ಪಾಠವೆಂದೂ ಹೇಳುತ್ತಾರೆ. ಸೂತ್ರಾತ್ಮಕ ಲಘು ಶಿಕ್ಷಾಪಾಠವನ್ನು ಸ್ವಾಮಿ ದಯಾನಂದ ಸರಸ್ವತೀಯವರು ಪ್ರಾಚೀನ ಹಸ್ತಲಿಪಿಯ ಆಧಾರದಿಂದ ಸಂಪಾದಿಸಿದ್ದಾರೆ. ಅದರಲ್ಲಿ ೮೬ ಸೂತ್ರಗಳಿವೆ. ವೃದ್ಧಪಾಠವನ್ನು ಪಂ|| ಯುಧಿಷ್ಠಿರ ಮೀಮಾಂಸಕರು ಸಂಪಾದಿಸಿದ್ದಾರೆ. ಇದರಲ್ಲಿ ೧೨೦ ಸೂತ್ರಗಳಿವೆ. ಆಪಿಶಲಿ ಮತ್ತು ಚಂದ್ರಗೋಮಿ ವಿರಚಿತ ಶಿಕ್ಷಾಸೂತ್ರಗಳ ಸಂಪಾದಕರಾಗಿದ್ದಾರೆ.

ಶಿಕ್ಷಾಶಾಸ್ತ್ರದಲ್ಲಿ ಸ್ವರ ಮತ್ತು ವರ್ಣಗಳ ಉಚ್ಚಾರಣೆಯ ಸ್ಥಾನ, ಕರಣ, ಅಂತಃಪ್ರಯತ್ನ, ಬಾಹ್ಯಪ್ರಯತ್ನ ಇತ್ಯಾದಿ ವಿಷಯಗಳ ಚರ್ಚೆ ಇದೆ.

**ವ್ಯಾಕರಣ:**—ವ್ಯಾಕರಣವು ಶಬ್ದನಿರ್ವಚನ ಶಾಸ್ತ್ರವಾಗಿದೆ. ಧಾತು, ಪ್ರಕೃತಿ, ಪ್ರತ್ಯಯಗಳು ಯಾವ ರೀತಿಯಲ್ಲಿ ಶಬ್ದರಚನೆಯ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತವೆ ಎಂಬುದರ ಜ್ಞಾನವು ಈ ವೇದಾಂಗ ವ್ಯಾಕರಣದಿಂದ ದೊರೆಯುತ್ತದೆ; ಸಂಧಿವಿಜ್ಞಾನ, ಕಾಲ, ಲಿಂಗ, ವಚನಭೇದಗಳ ಪರಿಚಯವೂ ಇದರಿಂದ ಸಿಗುತ್ತದೆ. ಈ ರೀತಿ ಶಬ್ದ ವಿಜ್ಞಾನದ ಸಹಾಯತೆಯಿಂದ ವೇದಭಾಷೆಯ ಪೂರ್ಣ ಜ್ಞಾನವಾಗುತ್ತದೆ. ವೇದಶಬ್ದ ಗಳ ಜ್ಞಾನಸಂಪಾದನೆಗೆ ವ್ಯಾಕರಣವೇ ಸುಲಭ ಉಪಾಯವಾಗಿದೆ. ಆದುದರಿಂದ ಇದು ಎರಡನೆಯ ವೇದಾಂಗವೆಂದೆನಿಸಿಕೊಂಡಿದೆ.

ಇಂದ್ರ ಮತ್ತು ಮಹೇಶ್ವರರು ಅತಿ ಪ್ರಾಚೀನ ವ್ಯಾಕರಣ ಶಾಸ್ತ್ರದ ಆಚಾರ್ಯ ರೆಂದು ತಿಳಿದುಬರುತ್ತದೆ. ವ್ಯಾಕರಣದಲ್ಲಿ ಇಂದ್ರಶಾಖೆ ಮತ್ತು ಮಾಹೇಶ್ವರಶಾಖೆ ಗಳೆಂದು ಎರಡು ಶಾಖೆಗಳು ಬಹಳ ಪ್ರಸಿದ್ಧವಾಗಿದ್ದುವು. ಸರ್ವ ಪ್ರಥಮ ಪದಗಳನ್ನು ಪ್ರಕೃತಿ ಮತ್ತು ಪ್ರತ್ಯಯಗಳೆಂದು ಬೇರ್ಪಡಿಸಿದವನು ಇಂದ್ರನೆಂದು ಹೇಳುತ್ತಾರೆ [ತೈತ್ತಿರೀಯ ಸಂಹಿತೆ ೬-೪-೫-೩]. ಪ್ರತ್ಯಾಹಾರ ಸೂತ್ರಗಳು ಮಾಹೇಶ್ವರನ ಹೆಸರಲ್ಲಿಯೇ ಪ್ರಸಿದ್ಧವಾಗಿವೆ. ಪಾಣಿನಿಯು ಮಾಹೇಶ್ವರ ಶಾಖೆಗೆ ಸೇರಿದವನು. ಈಗ ಪ್ರಚಲಿತ ವಾಗಿರುವುದು ಪಾಣಿನಿಯ ವ್ಯಾಕರಣವೇ. ಇದರಲ್ಲಿ ಅಷ್ಟಾಧ್ಯಾಯೀ ಸೂತ್ರಪಾಠ, ಗಣ ಪಾಠ, ಉಣಾದಿ ಸೂತ್ರಗಳು, ಧಾತುಪಾಠ, ಮತ್ತು ಲಿಂಗಾನುಶಾಸನಗಳು ಬರುತ್ತವೆ. ವ್ಯಾಕರಣಶಾಸ್ತ್ರದ ಪೂರ್ಣ ಗ್ರಂಥವು ಪಾಣಿನಿಯ ಹೆಸರಿನಲ್ಲಿಯೇ ಉಪಲಬ್ಧವಾಗಿದೆ. ಕಾತ್ಯಾಯನರು ಪಾಣಿನಿಯ ಸೂತ್ರಗಳಿಗೆ ವಾರ್ತಿಕಗಳನ್ನು ಸೇರಿಸಿದ್ದಾರೆ. ಪತಂಜಲಿ

ಮುನಿಗಳು, ಇವೆರಡಕ್ಕೂ ಭಾಷ್ಯ ಬರೆದಿದ್ದಾರೆ. ಇದು ವ್ಯಾಕರಣ ಮಹಾಭಾಷ್ಯ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ವೇದಾಂಗ ವ್ಯಾಕರಣದಲ್ಲಿ ಇದೇ ಅಂತಿಮ ಪ್ರಮಾಣ ಗ್ರಂಥವಾಗಿದೆ.

ಪಾಣಿನಿಗಿಂತ ಮೊದಲು ಅನೇಕ ಮಂದಿ ವ್ಯಾಕರಣಾಚಾರ್ಯರು ಹೆಸರುವಾಸಿಯಾಗಿ ಹೋಗಿದ್ದರು. ಅಷ್ಟಾಧ್ಯಾಯಿಯಲ್ಲಿಯೇ ಹತ್ತು ಮಂದಿ ಪೂರ್ವಾಚಾರ್ಯರ ಹೆಸರುಗಳನ್ನು ಪಾಣಿನಿ ಮುನಿಗಳು ಉಲ್ಲೇಖಿಸಿದ್ದಾರೆ. ಇವರಲ್ಲಿ ಶಾಕಟಾಯನ, ಗಾರ್ಗ್ಯ, ಶಾಕಲ್ಯ, ಮೊದಲಾದವರು ಪ್ರಮುಖರಾಗಿದ್ದರು. ಇವರ ಗ್ರಂಥಗಳು ಈಗ ಸಿಗುವುದಿಲ್ಲ.

ಯುರೋಪಿನ ಭಾಷಾವಿಜ್ಞಾನವು ಇನ್ನೂ ಶೈಶವಾವಸ್ಥೆಯಲ್ಲಿದೆ. ಕಳೆದ ಶತಮಾನದಲ್ಲಿ ಪಶ್ಚಿಮದ ರಾಷ್ಟ್ರಗಳಲ್ಲಿ ವೈಜ್ಞಾನಿಕ ದೃಷ್ಟಿಯಿಂದ ಮನುಷ್ಯರ ಭಾಷೆಯನ್ನು ಅಧ್ಯಯನ ಮಾಡಲಿಕ್ಕೆ ತೊಡಗಿದ್ದರು. ಆದರೆ ಭಾರತದಲ್ಲಿ ಸಾವಿರಾರು ವರ್ಷಗಳ ಹಿಂದೆಯೇ ಭಾಷಾವಿಜ್ಞಾನವು ತುಂಬಾ ಉನ್ನತಿಯನ್ನು ಹೊಂದಿತ್ತು. ಪಾಣಿನಿ ಮುನಿಗಳು ತಮ್ಮ ಗ್ರಂಥದಲ್ಲಿ ಸಂಸ್ಕೃತ ಭಾಷೆಯ ಸರಿಯಾದ ಪೂರ್ಣ ವಿವರಣೆಯನ್ನು ಕೊಟ್ಟಿದ್ದಾರೆ. ಈ ಗ್ರಂಥದಲ್ಲಿ ಎಂಟು ಅಧ್ಯಾಯಗಳಿರುವುದರಿಂದ ಇದನ್ನು ಅಷ್ಟಾಧ್ಯಾಯೀ ಎಂದೇ ಕರೆಯುತ್ತಾರೆ. ವ್ಯಾಕರಣದ ನಿಯಮಗಳನ್ನು ಅತ್ಯಂತ ಸಂಕ್ಷಿಪ್ತವಾದ ಸೂತ್ರಗಳ ಮೂಲಕ ವಿವರಿಸಿದ್ದಾರೆ. ಕೆಲವು ಸೂತ್ರಗಳು ಕೇವಲ ಒಂದೇ ಮಾತ್ರೆಯ ಶಬ್ದಗಳಾಗಿವೆ. ಯಥಾ 'ಶೇ' [ಪ್ರಥಮ ಅಧ್ಯಾಯ, ಪ್ರಥಮ ಪಾದ, ಸೂತ್ರ ೧೩]. ಕೆಲವು ಸೂತ್ರಗಳಲ್ಲಿ ಕೇವಲ ಎರಡೇ ವರ್ಣಗಳಿವೆ. ಯಥಾ "ಅ ಅ" [ಅಧ್ಯಾಯ ೬, ಪಾದ ೪, ಸೂತ್ರ ೬೭]. ಇಂತಹ ಸೂತ್ರಗಳ ಒಟ್ಟು ಸಂಖ್ಯೆ ೩೯೬೩. ಹ್ಯೂ ಎನ್ ತ್ಸಾಂಗ್ ಎಂಬ ಚೈನಾ ಯಾತ್ರಿಕನ ವಿವರಣೆಗನುಸಾರವಾಗಿ ಪಾಣಿನಿಯ ಅಷ್ಟಾಧ್ಯಾಯೀ ಸೂತ್ರಪಾಠವು ಶ್ಲೋಕಬದ್ಧವಾಗಿತ್ತು. ಇದರಲ್ಲಿ ೩೨ ಮಾತ್ರೆಗಳ ೧೦೦೦ ಶ್ಲೋಕಗಳಿದ್ದುವು. ಮಹರ್ಷಿ ಪಾಣಿನಿಯು ಇಷ್ಟು ಸಂಕ್ಷೇಪದಲ್ಲಿ, ಸಂಪೂರ್ಣ ವೈದಿಕ ಹಾಗೂ ಲೌಕಿಕ ಸಂಸ್ಕೃತ ಭಾಷೆಯನ್ನು ವಿವರಿಸಿದ್ದಾರೆ. ಪ್ರೊಫೆಸರ್ ಶೆರ್ವಾಟ್‌ಸ್ಕಿ, ಸರ್ ವಿಲಿಯಂ ಹಂಟರ್, ಪ್ರೊಫೆಸರ್ ಮೋನಿಯರ್ ವಿಲಿಯಮ್ಸ್ ಮೊದಲಾದವರು ಪಾಣಿನೀಯ ಅಷ್ಟಾಧ್ಯಾಯಿಯನ್ನು ವಿಶ್ವದಲ್ಲಿಯೇ ಮಾನವ ಮಸ್ತಿಷ್ಕದ ಅತ್ಯಂತ ಅದ್ಭುತ ರಚನೆ ಎಂದು ಹೊಗಳಿದ್ದಾರೆ. ಇಂದಿನಿಂದ ಐದು ಸಾವಿರ ವರ್ಷಗಳ ಹಿಂದೆ ಮಹರ್ಷಿ ಪಾಣಿನಿಯವರ ಜನ್ಮ ಪಶ್ಚಿಮ ಪಂಜಾಬಿನಲ್ಲಿ ಆಗಿತ್ತೆಂದು ಹೇಳುತ್ತಾರೆ.

ವೇದಭಾಷೆಯ ಜ್ಞಾನಸಂಪಾದನೆಗೆ ವೇದಾಂಗ ವ್ಯಾಕರಣವಿಲ್ಲದೆ ಸಾಧ್ಯವೇ ಇಲ್ಲ. ವ್ಯಾಕರಣದ ಅಧ್ಯಯನದಿಂದ ವೇದಗಳ ರಕ್ಷಣೆ, ಮಂತ್ರಗಳ ಪರಿಣಾಮ ಮಾಡುವ ಸಾಮರ್ಥ್ಯ, ಸುಲಭದಲ್ಲಿ ಶಬ್ದಗಳ ಜ್ಞಾನ, ಸಂದೇಹ ನಿವೃತ್ತಿ, ಅಪಶಬ್ದ ಅಥವಾ ಮ್ಲೇಚ್ಛ ಶಬ್ದಗಳ ಉಚ್ಚಾರಣೆಯಾಗದಂತೆ ಜಾಗ್ರತೆ, ಇತ್ಯಾದಿ ಅನೇಕ ಪ್ರಯೋಜನಗಳಿವೆ. ಪತಿಯಲ್ಲಿ ಪ್ರಸನ್ನಳಾದ ಸಾಲಂಕೃತೆಯಾದ ಸ್ತ್ರೀಯು ಅವನಿಗೆ ತನ್ನ ದೇಹವನ್ನು ಮನಪೂರ್ವಕವಾಗಿ ಸಮರ್ಪಿಸುವಂತೆ, ಭಾಷಾಪಂಡಿತನಿಗೆ ಅರ್ಥವು ಸುಲಭವಾಗಿ ವಶವರ್ತಿಯಾಗುತ್ತದೆ ಎಂದು ವೇದವೇ ಹೇಳುತ್ತದೆ.[೨೮] ಆದುದರಿಂದ ವೇದಾರ್ಥ

---

[೨೮] ಉತ ತ್ವಃ ಪಶ್ಯನ್ನ ದದರ್ಶ ವಾಚಮುತ ತ್ವಃ ಶೃಣ್ವನ್ನ ಶೃಣೋತ್ಯೇನಾಂ । ಉತ ತ್ವಸ್ಮೈ ತನ್ವಂ ವಿ ಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ ॥ ಋಗ್ವೇದ ೧೦–೭೧–೪ ॥

ಜ್ಞಾನಕ್ಕೆ ವ್ಯಾಕರಣ ಶಾಸ್ತ್ರದ ಅಧ್ಯಯನವು ಅತ್ಯಂತ ಆವಶ್ಯಕವಾಗಿದೆ.

**ಛಂದಶ್ಶಾಸ್ತ್ರ**:—ವೇದಮಂತ್ರಗಳಲ್ಲಿ ಅರ್ಥಕ್ಕನುಸಾರವಾಗಿ ಪಾದವ್ಯವಸ್ಥೆಯು ಕಂಡುಬರುತ್ತದೆ ಎಂದು ಜೈಮಿನಿ ಮುನಿಗಳು ಹೇಳಿದ್ದಾರೆ.[೨೯] ಲೌಕಿಕ ಶ್ಲೋಕಗಳಲ್ಲಿ ಛಂದಸ್ಸಿಗೂ ಅರ್ಥಕ್ಕೂ ಈ ರೀತಿ ಸಂಬಂಧವಿರುವುದು ಎಲ್ಲಿಯೂ ಕಾಣುವುದಿಲ್ಲ. ಆದುದರಿಂದ ವೇದಮಂತ್ರಗಳ ಅರ್ಥವನ್ನು ತಿಳಿದುಕೊಳ್ಳಲು ಛಂದೋಜ್ಞಾನವು ಅತ್ಯಾವಶ್ಯಕವಾಗಿದೆ. ವೇದವು ಪರಮಾತ್ಮನ ಕಾವ್ಯವಾಗಿದೆ.

'**ಅಗ್ನಿಃ ಪೂರ್ವೇಭಿರ್ಋಷಿಭಿಃ**' [ಋಗ್ವೇದ ೧-೧-೨] ಈ ವಾಕ್ಯದಲ್ಲಿ ಕ್ರಿಯಾ ಪದವು ಈಡ್ಯಃ, ಇದು ಮುಂದಿನ ಪಾದದಲ್ಲಿದೆ. ಇದನ್ನು ಜೋಡಿಸಿದಾಗಲೇ ವಾಕ್ಯವು ಪೂರ್ಣವಾಗುತ್ತದೆ. ಕೆಲವು ಬಾರಿ ಕ್ರಿಯಾಪದಗಳು ಮೂರನೇ ಅಥವಾ ನಾಲ್ಕನೇ ಪಾದದಲ್ಲಿರುವುದನ್ನೂ ಕಾಣಬಹುದು. ಪಾಣಿನಿಯ ಸೂತ್ರ '**ಅನುದಾತ್ತಂ ಸರ್ವಮಪದಾದೌ**' [ಅಷ್ಟಾಧ್ಯಾಯೀ ೮-೧-೧೮], ಇದರಲ್ಲಿ ಶಬ್ದವು ಪಾದದ ಆದಿಯಲ್ಲಿ ಬರದಿದ್ದರೆ, ಅದು ಅನುದಾತ್ತವಾಗುತ್ತದೆ. ಉದಾತ್ತ ಸ್ವರವಿರುವ ಭಾಗವೇ ಮುಖ್ಯಾರ್ಥದ್ಯೋತಕವೆಂದು ಸ್ವರನಿಯಮವು ಹೇಳುತ್ತದೆ. ಆದುದರಿಂದ ಈಡ್ಯಃ ಪದವು ಪಾದದ ಆದಿಯಲ್ಲಿ ಬರದೆ ಇದ್ದರೆ ಅದರ ಅರ್ಥವು ಗೌಣವಾಗುತ್ತದೆ.

ವೈದಿಕ ಛಂದಸ್ಸು ಅಕ್ಷರ ಗಣನೆಯ ಆಧಾರದಲ್ಲಿದೆ.[೩೦] ಲೌಕಿಕ ಛುದಸ್ಸು ಮಾತ್ರೆಗಳ ಆಧಾರದಲ್ಲಿದೆ. ಮಾತ್ರೆಗಳಲ್ಲಿ ಲಘು ಮತ್ತು ಗುರು ಎಂಬ ಭೇದಗಳಿವೆ. ಅಕ್ಷರಛಂದಗಳು ಕೇವಲ ವೇದಗಳಲ್ಲಿ ಮಾತ್ರ ಇವೆ. ಇವುಗಳಲ್ಲಿ ಮುಖ್ಯವಾಗಿ ಏಳು ಭೇದಗಳಿವೆ. ಗಾಯತ್ರಿ, ಉಷ್ಣಿಕ್, ಅನುಷ್ಟುಕ್ ಬೃಹತೀ ಪಂಕ್ತಿ, ತ್ರಿಷ್ಟುಪ್ ಮತ್ತು ಜಗತೀ ಎಂಟು ಅಕ್ಷರಗಳ ಮೂರು ಪಾದಗಳಿಂದ ಗಾಯತ್ರೀ ಅಂದರೆ ಇಪ್ಪತ್ತನಾಲ್ಕು ಅಕ್ಷರಗಳಿಂದ ಈ ಛಂದಸ್ಸಿನ ನಿರ್ಮಾಣವಾಗುತ್ತದೆ. ಮುಂದೆ ನಾಲ್ಕು ನಾಲ್ಕು ಅಕ್ಷರಗಳನ್ನು ಅಧಿಕಾಧಿಕವಾಗಿ ಸೇರಿಸಿಕೊಂಡು ಹೋದಂತೆ, ಕ್ರಮವತ್ತಾಗಿ, ಉಷ್ಣಿಕ್ [೨೮ ಅಕ್ಷರ], ಅನುಷ್ಟುಪ್ [೩೨ ಅಕ್ಷರ], ಬೃಹತೀ [೩೬ ಅಕ್ಷರ], ಪಂಕ್ತಿ [೪೦ ಅಕ್ಷರ], ತ್ರಿಷ್ಟುಪ್ [೪೪ ಅಕ್ಷರ], ಮತ್ತು ಜಗತೀ [೪೮ ಅಕ್ಷರ] ಛಂದಸ್ಸುಗಳಾಗುತ್ತವೆ.

---

[೨೯] ತೇಷಾಂ ಯತ್ರಾರ್ಥವಶೇನ ಪಾದ್ಯವಸ್ಥಾ ಸಾ ಋಕ್ ॥ ಮೀಮಾಂಸಾ ದರ್ಶನ ೨-೧-೩೫ ॥
ಪ್ರತಿಪಾದಮೃಚಾಮರ್ಥಃ ಸಂತಿ ಕೇಚಿದವಾಂತರಾಃ ।
ಋಗರ್ಥಃ ಸಮುದಾಯಃ ಸ್ಯಾತ್ ತೇಷಾಂ ಬುದ್ಧ್ಯಾ ಪ್ರಕಲ್ಪಿತಃ ।
ಛಂದೋಽನುಕ್ರಮಣೇ ತಸ್ಮಾದ್ ಗ್ರಾಹ್ಯಾ ಸೂಕ್ಷ್ಮೇಕ್ಷಿಕಾ ಪರೈಃ ॥ ವೆಂಕಟಮಾಧವ ॥
ಮನುಷ್ಯೈರ್ವೇದಾರ್ಥ ವಿಜ್ಞಾನಾಯ ವ್ಯಾಕರಣಾಧ್ಯಾಯೀ ಮಹಾಭಾಷ್ಯಾಧ್ಯಯನಂ ತತೋ ನಿಘಂಟು ನಿರುಕ್ತ ಕಲ್ಪಛಂದೋಜ್ಯೋತಿಷಾಂ ವೇದಾಂಗನಾಂ ॥ ಸ್ವಾಮಿ ದಯಾನಂದ ಸರಸ್ವತೀ ॥

[೩೦] [ಎ] ಅಕ್ಷರೇಣೈವ ಸಪ್ತವಾಣೀ ವಾಗಧಿಷ್ಠಿತಾನಿ ಸಪ್ತ ಛಂದಾಸಿ ಮಿಮಿತೇ......... ॥ ಸಾಯಣಾಚಾರ್ಯರು "ಅಕ್ಷರೇಣ ಮಿಮಿತೇ ಸಪ್ತವಾಣೀ........." [ಋಗ್ವೇದ ೧-೧೬೪-೨೪]ಯ ಭಾಷ್ಯದಲ್ಲಿ.

[ಬಿ] ಯದಕ್ಷರಪರಿಮಾಣಂ ತಚ್ಛಂದಃ ॥ [ಋಕ್‌ಸರ್ವಾನುಕ್ರಮಣಿಯಲ್ಲಿ ಕಾತ್ಯಾಯನರು ೨-೬]

[ಸಿ] ಛಂದೋಽಕ್ಷರಸಂಖ್ಯಾವಚ್ಛೇದಕ ಮುಚ್ಯತೇ ॥ [ಅಥರ್ವವೇದೀಯ ಬೃಹತ್ಸರ್ವಾನುಕ್ರಮಣೀ].

ಉಕ್ತ ಏಳು ಛಂದಸ್ಸುಗಳಲ್ಲಿ ಅಕ್ಷರಗಳ ನ್ಯೂನಾಧಿಕತೆ ಮತ್ತು ಪಾದಗಳ ವ್ಯವಸ್ಥೆಯ ಆಧಾರದಿಂದ ಅನೇಕ ಉಪಭೇದಗಳಾಗುತ್ತವೆ ಹೀಗೆ ಗಾಯತ್ರೀ ೨೭ ಭೇದ ಉಷ್ಣಿಕ್ ೮ ಭೇದ ಅನುಷ್ಟುಪ್ ಹತ್ತು ಭೇದ ಬೃಹತಿ ಒಂಬತ್ತು ಭೇದ ಪಂಕ್ತಿ ಹದಿನೈದು ಭೇದ ತ್ರಿಷ್ಟುಪ್ ಇಪ್ಪತ್ತಮೂರು ಭೇದ ಮತ್ತು ಜಗತಿ ಹದಿನಾರು ಭೇದಗಳಿಂದ ಕೂಡಿದೆ

ಛಂದಸ್ಸುಗೂ ಮಂತ್ರಗಳ ದೇವತೆಗಳಿಗೂ ಘನಿಷ್ಠ ಸಂಬಂಧವಿದೆ ಯಥಾ— ಗಾಯತ್ರೀ ಅಗ್ನಿಗೆ ಉಷ್ಣಿಕ್ ಸವಿತನಿಗೆ ಅನುಷ್ಟುಪ್ ಸೋಮನಿಗೆ ಬೃಹತಿ ಬೃಹಸ್ಪತಿಗೆ ವಿರಾಟ್ ಮಿತ್ರಾವರುಣರಿಗೆ ತ್ರಿಷ್ಟುಪ್ ಇಂದ್ರನಿಗೆ ತಥಾ ಜಗತಿ ವಿಶ್ವೇದೇವತೆಗಳಿಗೆ ಸಂಬಂಧಪಟ್ಟಿವೆ [ಋ ೧೦–೧೩೦] ಮಂತ್ರಗಳ ದೇವತೆಗಳೆಂದರೆ ಮಂತ್ರಗಳಲ್ಲಿ ಪ್ರತಿಪಾದ್ಯ ವಿಷಯಗಳೆಂದು ಹಿಂದೆಯೇ ಹೇಳಿದ್ದೇವೆ ಆದುದರಿಂದ ವೇದಮಂತ್ರಗಳ ಛಂದಸ್ಸಿಗೂ ಅರ್ಥಕ್ಕೂ ಇರುವ ಸಂಬಂಧಕ್ಕೆ ಇಲ್ಲಿ ಪ್ರಬಲವಾದ ಸಮರ್ಥನೆಯು ಸಿಗುತ್ತದೆ

ಛಂದಶ್ಶಾಸ್ತ್ರದಲ್ಲಿ ಪಿಂಗಳಾಚಾರ್ಯರ ಪುಸ್ತಕವೇ ಅಧಿಕ ಪ್ರಸಿದ್ಧವಾಗಿದೆ ಇವರು ಕ್ರಿ ಪೂರ್ವ ೨೫೦ ಇಸವಿ ಅಂದರೆ ಕ್ರಿ ಪೂ ಮೂವತ್ತನೆಯ ಶತಮಾನಕ್ಕೆ ಸೇರಿರುವರು ಇವರು ತಮಗಿಂತ ಪೂರ್ವದಲ್ಲಿ ಪ್ರಸಿದ್ಧರಾದ ಅನೇಕ ಆಚಾರ್ಯರ ಹೆಸರುಗಳನ್ನು ಉಲ್ಲೇಖಿಸಿದ್ದಾರೆ ಯಥಾ—ತಂಡಿ ಕ್ರೌಷ್ಟುಕಿ ಯಾಸ್ಕ ಸೈತವ ಕಾಶ್ಯಪ ರಾತ ಮಾಂಡವ್ಯ ಇತ್ಯಾದಿ ಮಹರ್ಷಿ ಪತಂಜಲಿ ನಿದಾನ ಸೂತ್ರಗಳನ್ನು ಬರೆದಿದ್ದಾರೆ

ಛಂದೋಮಂಜರಿ ವೃತ್ತರತ್ನಾಕರಾದಿ ಗ್ರಂಥಗಳು ಕೇವಲ ಲೌಕಿಕ ಛಂದಸ್ಸುಗಳನ್ನು ವಿವರಿಸುತ್ತವೆ ನಿದಾನಸೂತ್ರ, ಉಪನಿದಾನ ಸೂತ್ರಾದಿಗಳು ಕೇವಲ ವೈದಿಕ ಛಂದಸ್ಸಿಗೆ ಸಂಬಂಧಪಟ್ಟಿವೆ ಪಿಂಗಳಾಚಾರ್ಯರ ಛಂದಶ್ಶಾಸ್ತ್ರ ಮತ್ತು ಜಯದೇವರ ಛಂದೋವಿಚಿತಿ ವೈದಿಕ ಮತ್ತು ಲೌಕಿಕ ಈ ಎರಡೂ ಪ್ರಕಾರದ ಛಂದಸ್ಸುಗಳನ್ನು ವಿವರಿಸುತ್ತವೆ

ನಿರುಕ್ತ —ನಿರುಕ್ತವು ಅರ್ಥನಿರ್ವಚನ ಶಾಸ್ತ್ರವಾಗಿದೆ ಕೇವಲ ವ್ಯಾಕರಣದ ಜ್ಞಾನವು ಪದಾರ್ಥಗಳನ್ನು ತಿಳಿದುಕೊಳ್ಳಲು ಸಾಕಾಗುವುದಿಲ್ಲ ಯಾಕೆಂದರೆ ವೈದಿಕ ಶಬ್ದಗಳು ಲೌಕಿಕ ಶಬ್ದಗಳಂತೆ ರೂಢಾರ್ಥಯುಕ್ತವಾಗಿಲ್ಲ ಇವುಗಳು ಯೌಗಿಕ ಅರ್ಥಾತ್ ಧಾತ್ವರ್ಥ ಧಾತ್ವರ್ಥಗಳು ವರ್ಣಾರ್ಥಗಳನ್ನು ಹೊಂದಿಕೊಂಡಿವೆ ಒಂದು ಧಾತುವಿಗೆ ಅನೇಕಾರ್ಥಗಳಿರುವುದು 'ಬಹ್ವರ್ಥಾ ಅಪಿ ಧಾತವೋ ಭವಂತಿ ಎಂದು ಪತಂಜಲಿ ಮುನಿಗಳು ಹೇಳಿದ್ದಾರೆ[೩೧] ಅಲ್ಲದೆ ಒಂದೇ ಶಬ್ದದ ಉತ್ಪತ್ತಿಯನ್ನು ಬೇರೆ ಬೇರೆ ಧಾತುಗಳಿಂದ ವಿವರಿಸುವುದು ಹೇಗೆಂದರೆ— ಗೌ' ಶಬ್ದವನ್ನು ಗಿರತಿ ಗರ್ಜತಿ ಗಮು ಗನ್ತಿ ಮತ್ತು ಗದು ಧಾತುಗಳಿಂದ ವಿವರಿಸುವುದು ಎಂದು ವಾಕ್ಯಪದೀಯದಲ್ಲಿ ಭರ್ತೃಹರಿಯು ಹೇಳಿದ್ದಾನೆ ಹೀಗಿರುವಾಗ ಮಂತ್ರಗಳ ಅರ್ಥವನ್ನು

---

[೩೧] [ಅ] ಮಹಾಭಾಷ್ಯ ೧–೩–೧ ॥

[ಆ] ಧಾತೂನಾಮನೇಕಾರ್ಥತ್ವಾದ್ ರಿಚಿರತ್ರ ಪರಿಹಾರಾರ್ಥೇ ವರ್ತತೇ ॥ ಸಾಯಣಭಾಷ್ಯ ಋಗ್ವೇದ ೧೦–೧೩–೪ ॥

ಪ್ರಕರಣಾನುಸಾರವಾಗಿ ತಿಳಿದುಕೊಳ್ಳಬೇಕಾಗಿದೆ. ಮಂತ್ರಗಳನ್ನು ಆಧ್ಯಾತ್ಮಿಕ, ಆಧಿದೈವಿಕ, ಆಧಿಯಾಜ್ಞಿಕ ಇತ್ಯಾದಿ ರೀತಿಯ ಪ್ರಕ್ರಿಯೆಗಳಲ್ಲಿ ವಿವರಿಸುವ ಪರಂಪರೆ ಪ್ರಾಚೀನ ಕಾಲದಿಂದಲೂ ನಡೆದುಬಂದಿದೆ. ವೇದಗಳಲ್ಲಿ ಬರುವ ಇಂದ್ರ, ಕಣ್ವ, ಅಂಗಿರಾ, ಗಂಗಾ, ಯಮುನಾ, ಸರಸ್ವತೀ, ಅಯೋಧ್ಯಾ ಮೊದಲಾದ ಹೆಸರುಗಳು ನಿಜವಾಗಿ ವಿಶೇಷಣವಾಚಿಗಳಾಗಿವೆ. '**ನಾಮಾನಿ ಸರ್ವಾಣ್ಯಾಖ್ಯಾತಜಾನಿ**' ಎಂದು ನಿರುಕ್ತಾಚಾರ್ಯರು ಹೇಳಿದ್ದಾರೆ. '**ನಾಮ ಚ ಧಾತುಜಮಾಹ ನಿರುಕ್ತೇ ವ್ಯಾಕರಣೇ ಶಕಟಸ್ಯ ಚ ತೋಕಂ**' ಎಂದು ಮಹಾಭಾಷ್ಯಕಾರರು ಮೇಲಿನ ಸಿದ್ಧಾಂತವನ್ನು ಸಮರ್ಥಿಸಿದ್ದಾರೆ. ಅಂದರೆ, ನಿರುಕ್ತಾಚಾರ್ಯರು ಮತ್ತು ವೈಯಾಕರಣಿಗಳಲ್ಲಿ ಶಾಕಟಾಯನ ಮೊದಲಾದವರು ಶಬ್ದಗಳು ಧಾತುಗಳಿಂದ ಉತ್ಪನ್ನವಾಗುತ್ತವೆ ಎಂದೇ ಹೇಳುತ್ತಾರೆ. ಆದುದರಿಂದ ಮಂತ್ರಗಳ ಅರ್ಥಜ್ಞಾನಕ್ಕೆ ನಿರುಕ್ತದ ಅಧ್ಯಯನವು ಅತ್ಯಂತ ಆವಶ್ಯಕವಾಗಿದೆ.

ಋಗ್ವೇದದ ಪ್ರಥಮ ಮಂತ್ರದಲ್ಲಿ, '**ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ । ಹೋತಾರಂ ರತ್ನಧಾತಮಂ**' ಎಂದಿದೆ. ಇಲ್ಲಿ, ಪುರೋಹಿತಾದಿ ಶಬ್ದಗಳೆಲ್ಲಾ ಅಗ್ನಿಯ ವಿಶೇಷಣಗಳು. '**ಪುರೋ ದಧಾತಿ ಇತಿ ಪುರೋಹಿತಃ**' ಎಲ್ಲರ ಹಿತವನ್ನು ಮುಂದಿಟ್ಟುಕೊಂಡು ನಡೆಯುವವನೇ ಪುರೋಹಿತ* ಅಗ್ನಿ ಅರ್ಥಾತ್ ಪರಮೇಶ್ವರ, ಸೂರ್ಯ, ವಿದ್ಯುತ್, ಭೌತಿಕ ಅಗ್ನಿ, ಅಥವಾ ವಿದ್ವಾಂಸನು ಎಲ್ಲರ ಹಿತಕಾರಿ. ಆದುದರಿಂದ ಪುರೋಹಿತ. ಆದರೆ, ಪುರೋಹಿತಾದಿ ಶಬ್ದಗಳನ್ನು ರೂಢಾರ್ಥದಲ್ಲಿ ತೆಗೆದುಕೊಂಡರೆ, ಇವು ಅಗ್ನಿಯ ವಿಶೇಷಣಗಳಾಗುವುದಿಲ್ಲ. ಪ್ರಾಚೀನ ಎಲ್ಲಾ ಭಾಷ್ಯಕಾರರೂ ಇವುಗಳನ್ನು ವಿಶೇಷಣಗಳೆಂದೇ ತೋರಿಸಿದ್ದಾರೆ. ಇವುಗಳು ವಿಶೇಷಣಗಳಾಗಬೇಕಾದರೆ, ಧಾತ್ವರ್ಥಯುಕ್ತವಾಗಿರಲೇಬೇಕು. ಆದುದರಿಂದ ನಿರುಕ್ತ ಶಾಸ್ತ್ರವಿಲ್ಲದೆ ಮಂತ್ರಗಳ ಅರ್ಥ ಮಾಡಿಕೊಳ್ಳಲಿಕ್ಕೆ ಸಾಧ್ಯವಿಲ್ಲ. ನಿರುಕ್ತ ಶಾಸ್ತ್ರವು ವ್ಯಾಕರಣ ಶಾಸ್ತ್ರದ ಪೂರಕವಾಗಿದೆ.[೩೨] ಅಂದರೆ, ಕೇವಲ ವ್ಯಾಕರಣಶಾಸ್ತ್ರವೊಂದೇ ವೇದಾರ್ಥ ಪ್ರಕ್ರಿಯೆಗೆ ಪರ್ಯಾಪ್ತವಲ್ಲವೆಂದು ಸ್ಪಷ್ಟವಾಗುತ್ತದೆ. 'ವ್ಯತ್ಯಯೋ ಬಹುಲಂ' [ಅಷ್ಟಾಧ್ಯಾಯೀ ೩-೧-೮೫] ಎಂಬಿತ್ಯಾದಿ ಸೂತ್ರಗಳ ಮೂಲಕ ಪಾಣಿನಿ ಮುನಿಗಳು ವೇದಾರ್ಥ ಪ್ರಕ್ರಿಯೆಯಲ್ಲಿ ವ್ಯಾಕರಣಶಾಸ್ತ್ರವು ಪರ್ಯಾಪ್ತವಲ್ಲವೆಂಬ ಮಾತನ್ನೇ ಸ್ವೀಕರಿಸಿದ್ದಾರೆ. ನಿರುಕ್ತವು ಅರ್ಥಪ್ರಧಾನವಾದುದರಿಂದ ಮಂತ್ರಾರ್ಥ ನಿರ್ಣಯಕ್ಕೇ ಇದೇ ಹೆಚ್ಚಿನ ಆಧಾರ.[೩೩]

ಇಂದು ಪ್ರಸಿದ್ಧಿಯಲ್ಲಿರುವ ವೇದಾಂಗ ನಿರುಕ್ತವೆಂದರೆ, ಯಾಸ್ಕಾಚಾರ್ಯರ ಗ್ರಂಥ. ಇದು ನಿಘಂಟಿನ ವ್ಯಾಖ್ಯಾನವಾಗಿದೆ. ನಿಘಂಟಿನಲ್ಲಿ ವೇದಗಳಲ್ಲಿ ಬರುವ ಕೆಲವು ಅಸಾಧಾರಣ ಪದಗಳ ಕೋಶವಿದೆ. ಇದನ್ನು ಸಮಾಮ್ನಾಯವೆಂದೂ ಕರೆಯು

---

* ವಿಕಲ್ಪತಃ [Optionally] "ಪುರೋದಧಾತೀಮಂ ಯಜ್ಞ ಕರ್ತೇತಿ ಪುರೋಹಿತ."—"ಇವನನ್ನು ಯಜ್ಞಕರ್ತನು ಅಗ್ರಸ್ಥಾನದಲ್ಲಿರುವುದರಿಂದ ಇವನು ಪುರೋಹಿತನೆನಿಸುತ್ತಾನೆ."

[೩೨] ಇದಮಂತರೇಣ ಮಂತ್ರೇಷ್ವರ್ಥಪ್ರತ್ಯಯೋ ನ ವಿದ್ಯತೇ......... ತದಿದಂ ವಿದ್ಯಾಸ್ಥಾನಂ ವ್ಯಾಕರಣಸ್ಯ ಕಾರ್ತ್ಸ್ನ್ಯಂ ಸ್ವಾರ್ಥಸಾಧಕಂ ಚ ॥ ನಿರುಕ್ತ ॥

[೩೩] ಅಥಪ್ರಧಾನತ್ವಾಚ್ಚ ನಿರುಕ್ತಸ್ಯ ಸರ್ವತ್ರೈವಾರ್ಥ ಪ್ರಧಾನಸ್ಯ ಪರ್ಯನುಯೋಗೇ ನಿರ್ವಚನಂ ಚ, ಅಗ್ನಿಃ ಕಸ್ಮಾತ್‌ಜಾತ ವೇದಃ ಕಸ್ಮಾತ್ ॥ ಸ್ಕಂದಸ್ವಾಮಿ, ನಿರುಕ್ತ ೭-೧೪ರ ಟೀಕೆಯಲ್ಲಿ.

ತ್ತಾರೆ ನಿಘಂಟಿನಲ್ಲಿ ಮೂರು ಭಾಗಗಳಿವೆ ಮೊದಲನೆಯ ಭಾಗದಲ್ಲಿ ಮೂರು ಅಧ್ಯಾಯಗಳಿವೆ ಉಳಿದ ಎರಡು ಭಾಗಗಳಲ್ಲಿ ಒಂದೊಂದೇ ಅಧ್ಯಾಯವಿದೆ ಮೊದಲನೆಯ ಭಾಗಕ್ಕೆ ನೈಘಂಟುಕ ಕಾಂಡವೆನ್ನುತ್ತಾರೆ ಎರಡನೆಯ ಭಾಗವನ್ನು ನೈಗಮ ಕಾಂಡವೆಂದೂ ಮತ್ತು ಮೂರನೆಯ ಭಾಗವನ್ನು ದೈವತಕಾಂಡವೆಂದೂ ಕರೆಯುತ್ತಾರೆ ಒಂದನೆಯ ಅಧ್ಯಾಯದಲ್ಲಿ ಪದಾರ್ಥಗಳ ಹೆಸರುಗಳು ಮತ್ತು ನಾನಾರ್ಥ ಪದಗಳು ಎರಡನೆಯ ಅಧ್ಯಾಯದಲ್ಲಿ ಪ್ರಾಣಿಗಳು ಮತ್ತು ಅವುಗಳ ಅಂಗಗಳು ಮೂರನೆಯ ಅಧ್ಯಾಯದಲ್ಲಿ ಹಿಂದಿನ ಅಧ್ಯಾಯಗಳಲ್ಲಿ ಬಂದಿರುವ ಪದಾರ್ಥಗಳ ಮತ್ತು ಪ್ರಾಣಿಗಳ ಗುಣಗಳನ್ನು ಹೇಳಿದ್ದಾರೆ ಎರಡನೆಯ ಭಾಗದಲ್ಲಿ ಈಗ ಬಳಕೆಯಲ್ಲಿಲ್ಲದ ವೇದದಲ್ಲಿ ಮಾತ್ರ ಬರುವ ಪದಗಳೂ ಸಮಾನರೂಪ ಆದರೆ ಭಿನ್ನಾರ್ಥವುಳ್ಳ ಪದಗಳೂ ಇವೆ ಇದನ್ನು ಐಕಪದಿಕ ಕಾಂಡವೆಂದೂ ಹೇಳುತ್ತಾರೆ ದೈವತಕಾಂಡದಲ್ಲಿ ದೇವತೆಗಳ ಹೆಸರುಗಳಿವೆ

ಮೇಲೆ ಹೇಳಿದಂತೆ ನಿರುಕ್ತವು ನಿಘಂಟಿನ ವ್ಯಾಖ್ಯಾನ ಗ್ರಂಥ ಇದರಲ್ಲಿ ಯಾಸ್ಕರು ಅರ್ಥನಿರ್ವಚನೆ ಮಾಡುವಾಗ ಬ್ರಾಹ್ಮಣ, ಆರಣ್ಯಕಾದಿ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡಿದ್ದಾರೆ ನಿರುಕ್ತದಲ್ಲಿ ೧೨ ಅಧ್ಯಾಯಗಳಿವೆ ಇದರ ಅಂತ್ಯದಲ್ಲಿ ಎರಡು ಪರಿಶಿಷ್ಟ ಅಧ್ಯಾಯಗಳೂ ಇವೆ

ಯಾಸ್ಕರು ಅತಿ ಪ್ರಾಚೀನ ಕಾಲದವರು ಪಾಣಿನಿ ಮುನಿಗಳು ತಮ್ಮ ಸೂತ್ರದಲ್ಲಿ ಯಾಸ್ಕರ ಹೆಸರನ್ನು ಹೇಳಿದ್ದಾರೆ[೩೪] ಆದುದರಿಂದ ಇವರು ಪಾಣಿನಿ ಮುನಿಗಳ ಪೂರ್ವವರ್ತಿಯಾಗಿರಬೇಕೆಂದು ವಿದ್ವಾಂಸರ ಅನುಮಾನ

**ಜ್ಯೋತಿಶ್ಶಾಸ್ತ್ರ** —ಜ್ಯೋತಿಶ್ಶಾಸ್ತ್ರವು ಯಜ್ಞಯಾಗಾದಿಗಳನ್ನು ಮಾಡಬೇಕಾದ ಕಾಲ, ಮುಹೂರ್ತ, ಗ್ರಹಗತಿ ಋತು, ಅಯನ, ಮಾಸ ಇತ್ಯಾದಿಗಳನ್ನು ವಿವರಿಸುತ್ತದೆ ಬ್ರಾಹ್ಮಣ ಆರಣ್ಯಕ ಮೊದಲಾದ ಗ್ರಂಥಗಳಲ್ಲಿ ಈ ವಿಷಯದ ಚರ್ಚೆ ಇದೆ ಪ್ರತ್ಯೇಕ ವಾಗಿ ಸ್ವತಂತ್ರ ವೇದಾಂಗ ಜ್ಯೋತಿಷವನ್ನು ಬರೆದವರಲ್ಲಿ ಲಗಧಮುನಿಗಳ ಹೆಸರು ಪ್ರಸಿದ್ಧವಾಗಿದೆ ಇವರು ಬಹಳ ಪ್ರಾಚೀನ ಕಾಲದವರು ವೇದಾಂಗ ಜ್ಯೋತಿಷದ ವಿಷಯದಲ್ಲಿ ಇನ್ನೊಂದು ಪ್ರಸಿದ್ಧವಾದ ಹೆಸರೆಂದರೆ ಮಹರ್ಷಿ ವಸಿಷ್ಠರು ಇವರ ನಂತರ ಆರ್ಯಭಟೀಯ ಮತ್ತು ಸೂರ್ಯಸಿದ್ಧಾಂತಗಳು ಪ್ರಸಿದ್ಧವಾದುವು

ವೇದಾಂಗ ಜ್ಯೋತಿಷಕ್ಕೂ ಫಲಿತ ಜ್ಯೋತಿಷಕ್ಕೂ ಏನೂ ಸಂಬಂಧವಿರುವ ಹಾಗೆ ಕಾಣುವುದಿಲ್ಲ ಯಾಕೆಂದರೆ ವೇದಾಂಗ ಜ್ಯೋತಿಷವು ಒಂದು ಉನ್ನತ ವಿಜ್ಞಾನವಾಗಿದೆ ಇದರಲ್ಲಿ ರೇಖಾಗಣಿತ ಬೀಜಗಣಿತ ಅಂಕಗಣಿತ ಮೊದಲಾದ ಬಹಳ ಉಪಯುಕ್ತ ವಾದ ವಿಷಯಗಳೂ ಇವೆ ಫಲಿತ ಜ್ಯೋತಿಷವು ವಿಜ್ಞಾನದ ವಿಷಯವಲ್ಲ

ವೇದಾಂಗ ಜ್ಯೋತಿಷವು ಮಂತ್ರಾರ್ಥಕ್ಕೆ ಸಹಾಯಕ ಮಾತ್ರವಾಗಿರುವುದಲ್ಲದೆ, ಕರ್ಮಕಾಂಡಕ್ಕೆ ಕೂಡ ಇದು ಸಂಬಂಧಿಸಿದೆ ಆದುದರಿಂದ ಇತರ ವೇದಾಂಗಗಳಂತೆ, ಇದು ಕೂಡ ಮಹತ್ವಪೂರ್ಣವಾಗಿದೆ

**ಕಲ್ಪಸೂತ್ರಗಳು** —ಕಲ್ಪವೆಂದರೆ, ವೇದವಿಹಿತ ಕರ್ಮಗಳ ಆನುಪೂರ್ವೀ ಕಲ್ಪನಾ

[೩೪] ಯಾಸ್ಕಾದಿಭ್ಯೋ ಗೋತ್ರೇ ॥ ಅಷ್ಟಾಧ್ಯಾಯೀ ೨-೪-೬೩ ॥

ಶಾಸ್ತ್ರ[೩೫] ಮಂತ್ರಗಳ ಯಜ್ಞಾದಿ ಕರ್ಮಗಳಲ್ಲಿ ವಿನಿಯೋಗ, ವಿಭಿನ್ನ ಪ್ರಕಾರದ ಯಜ್ಞಗಳ ನಿಯಮಗಳು, ವಿಧಿನಿಷೇಧಗಳು, ವರ್ಣಾಶ್ರಮ ಧರ್ಮ, ಆಚಾರ, ಅನಾಚಾರ, ಸಂಸ್ಕಾರ, ಯಜ್ಞಶಾಲೆ, ವೇದಿ ಮುಂತಾದುವುಗಳ ರಚನೆ ಇತ್ಯಾದಿಗಳ ವಿವರಣೆಗಳನ್ನು ಕಲ್ಪಶಾಸ್ತ್ರದಲ್ಲಿ ಕಾಣಬಹುದು. ಕಲ್ಪಶಾಸ್ತ್ರಗಳಲ್ಲಿ ನಾಲ್ಕು ವರ್ಗಗಳಿವೆ.—ಶ್ರೌತ ಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ ಮತ್ತು ಶುಲ್ವಸೂತ್ರಗಳು.

ಶ್ರೌತಸೂತ್ರಗಳಲ್ಲಿ ಯಜ್ಞಾದಿಗಳನ್ನು ಮಾಡುವ ಕ್ರಮ, ವಿನಿಯೋಗಿಸಬೇಕಾದ ಮಂತ್ರ ಇತ್ಯಾದಿಗಳ ವಿವರಣೆ ಇದೆ. ಬ್ರಾಹ್ಮಣಾದಿ ದ್ವಿಜರು ಮಾಡಬೇಕಾದಂತಹ ಜಾತಕರ್ಮಾದಿ ಷೋಡಶ ಸಂಸ್ಕಾರಗಳ ವಿಧಿನಿಯಮಗಳು ಗೃಹ್ಯಸೂತ್ರಗಳಲ್ಲಿವೆ. ವರ್ಣಾಶ್ರಮ ಧರ್ಮದ ವರ್ಣನೆ ಧರ್ಮಸೂತ್ರಗಳಲ್ಲಿದೆ. ಯಜ್ಞದಲ್ಲಿ ಅಗ್ನಿಕುಂಡ, ಯಜ್ಞವೇದಿ, ಯಜ್ಞಸಾಮಗ್ರಿ ಇತ್ಯಾದಿಗಳ ವಿವರಣೆಯು ಶುಲ್ವಸೂತ್ರಗಳ ವಿಷಯವಾಗಿದೆ. ಪ್ರತಿಯೊಂದು ವೇದಕ್ಕೂ ಶಾಖೆಗಳಿಗನುಸಾರವಾಗಿ ಈ ನಾಲ್ಕೂ ವರ್ಗದ ಸೂತ್ರಗಳಿದ್ದಂತೆ ಕಾಣುತ್ತದೆ. ಆದರೆ, ಈಗ ದೊರೆಯುವುದು ಕೆಲವು ಮಾತ್ರ.

ಕಲ್ಪಸೂತ್ರಗಳು ಬ್ರಾಹ್ಮಣ ಗ್ರಂಥಗಳನ್ನನುಸರಿಸಿಕೊಂಡಿವೆ. ವೇದಾರ್ಥಜ್ಞಾನವು ಕರ್ಮವಿಲ್ಲದೆ ಅಪೂರ್ಣ. ಕಲ್ಪಸೂತ್ರಗಳು ವೇದಮಂತ್ರಗಳ ವಿನಿಯೋಗದ ಮೂಲಕ ನಿಜವಾದ ವಿಶೇಷತೆಯನ್ನು ಹೇಳುತ್ತವೆ. ಆದುದರಿಂದ ವೇದಾರ್ಥ ಪ್ರಕ್ರಿಯೆಯಲ್ಲಿ ಕಲ್ಪಶಾಸ್ತ್ರಕ್ಕೂ ತನ್ನದೇ ಆದ ವಿಶಿಷ್ಟ ಸ್ಥಾನವಿದೆ.

**೧. ಶ್ರೌತಸೂತ್ರಗಳು:**—ಶ್ರೌತಸೂತ್ರಗಳು ಮುಖ್ಯವಾಗಿ ಯಜ್ಞ ಮಾಡುವ ವಿಧಾನವನ್ನು ವಿವರಿಸುವ ಗ್ರಂಥಗಳೆಂದು ಮೇಲೆ ಹೇಳಿದ್ದೇವೆ. ಯಜ್ಞಕರ್ತನನ್ನು ಯಜಮಾನನೆಂದು ಹೇಳುತ್ತಾರೆ. ಮಂತ್ರಗಳ ಪಠನೆ, ಹಾಗೂ ಯಜ್ಞವನ್ನು ಜರಗಿಸಲು ಇತರ ವಿಧಿವಿಧಾನಗಳಲ್ಲಿ ಯಜಮಾನನಿಗೆ ನೆರವಾಗುವ ಪುರೋಹಿತರಿಗೆ ಋತ್ವಿಜರೆಂದು ಹೆಸರು. ಋತ್ವಿಜರಲ್ಲಿ ಮುಖ್ಯವಾಗಿ ನಾಲ್ಕು ಭೇದಗಳಿವೆ. ಋಗ್ವೇದದ ಋಚಗಳನ್ನು ಪಠಿಸುವ ಹೋತೃ, ಯಜುರ್ವೇದದ ಮಂತ್ರಪಾಠ ಮಾಡುವ ಅಧ್ವರ್ಯು, ಸಾಮಗಾನ ಮಾಡುವ ಉದ್ಗಾತೃ ಹಾಗೂ ಪೂರ್ವೋಕ್ತ ಮೂರು ವೇದಗಳೊಂದಿಗೆ ಅಥರ್ವವೇದವನ್ನೂ ಬಲ್ಲ ಪಂಡಿತನು 'ಬ್ರಹ್ಮಾ' ಎನಿಸುತ್ತಾನೆ. ಬ್ರಹ್ಮನೇ ಎಲ್ಲಾ ಋತ್ವಿಜರಲ್ಲಿ ಮುಖ್ಯನು. ಅವನೇ ಸಂಪೂರ್ಣ ಯಜ್ಞಕರ್ಮದ ಅಧ್ಯಕ್ಷನು. ಋತ್ವಿಜರ ಸಂಖ್ಯೆ ಹದಿನಾರರ ತನಕ ಏರಿದೆ.

ಯಜ್ಞಾಗ್ನಿ ಮೂರು ವಿಧವಾಗಿದೆ. ಅತಿಥಿಗಳು ತರುವ ಅಗ್ನಿ ಆಹವನೀಯ, ನಿತ್ಯಗೃಹಸ್ಥನ ಮನೆಯಲ್ಲಿರುವ ಅಗ್ನಿಯನ್ನು ಗಾರ್ಹಪತ್ಯ ಮತ್ತು ಪಾಕಯಜ್ಞದಲ್ಲಿ ಉಪಯೋಗಿಸುವ ಅಗ್ನಿಯನ್ನು ದಕ್ಷಿಣಾಗ್ನಿ ಎನ್ನುತ್ತಾರೆ.[೩೬] ನೂರ ಒಂದು ಯಜ್ಞಗಳ

---

[೩೫] ಕಲ್ಪೋ ವೇದವಿಹಿತಾನಾಂ ಕರ್ಮಣಾಮಾನುಪೂರ್ವೇಣ ಕಲ್ಪನಾಶಾಸ್ತ್ರಂ ॥ [ಋಕ್‌ಪ್ರಾತಿಶಾಖ್ಯೆಯ ವರ್ಗದ್ವಯ ವೃತ್ತಿಯಲ್ಲಿ ವಿಷ್ಣುಮಿತ್ರ].

[೩೬] ಯೋಽತಿಥೀನಾಂ ಸ ಆಹವನೀಯೋ ಯೋ ವೇಶ್ಮನಿ ಸ ।
ಗಾರ್ಹಪತ್ಯೋ ಯಸ್ಮಿನ್ ಪಚಂತಿ ಸ ದಕ್ಷಿಣಾಗ್ನಿಃ ॥ ಅಥರ್ವವೇದ ೯–೬–೧೩ ॥
ಮಹರ್ಷಿ ಮನುಗಳ ವಿವರಣೆಯೂ ನೋಡತಕ್ಕದ್ದಾಗಿದೆ—
ಪಿತಾವೈಗಾರ್ಹಪತ್ಯೋಽಗ್ನಿರ್ಮಾತಾಗ್ನಿರ್ದಕ್ಷಿಣಃ ಸ್ಮೃತ ।
ಗುರುರಾಹವನೀಯಸ್ತು ಸಾಗ್ನಿತ್ರೇತಾಗರೀಯಸೀ ॥ ಮನುಸ್ಮೃತಿ ೨–೨೩೧ ॥

ಉಲ್ಲೇಖವು ವೇದದಲ್ಲಿ ಬರುತ್ತದೆ[೩೭] ಅಗ್ನಿಹೋತ್ರ ದರ್ಶಪೂರ್ಣ ಮಾಸ ಸೋಮ ಚಾತುರ್ಮಾಸ್ಯ ಅಗ್ನಿಷ್ಟೋಮ ಇತ್ಯಾದಿ ಸಾಮಾನ್ಯ ಯಜ್ಞಗಳಾಗಿವೆ ದರ್ಶಪೂರ್ಣ ಮಾಸವೆಂದರೆ ಅಮಾವಾಸ್ಯಾ ಮತ್ತು ಪೌರ್ಣಮಾಸ್ಯಗಳಲ್ಲಿ ಮಾಡಬೇಕಾದ ಯಜ್ಞ ವಿಶೇಷ ಬೇಸಿಗೆ ಮಳೆ ಹಾಗೂ ಚಳಿಗಾಲಗಳ ಪ್ರಾರಂಭದಲ್ಲಿ ಮಾಡಲ್ಪಡುವ ಯಜ್ಞಗಳನ್ನು ಚಾತುರ್ಮಾಸ್ಯವೆಂದು ಹೇಳುತ್ತಾರೆ ಈ ಎಲ್ಲಾ ಯಜ್ಞಗಳಲ್ಲಿ ಅನೇಕ ಪ್ರಭೇದಗಳಿವೆ ಸೋಮಯಾಗವು ೧೨ ದಿನಗಳ ತನಕ ಜರಗುತ್ತದೆ ಸತ್ರಯಾಗವು ಒಂದು ವರ್ಷದ ತನಕ ನಡೆಯುತ್ತದೆ ಈ ಯಾಗಗಳಿಗೆ ಸಂಬಂಧಪಟ್ಟ ದೀಕ್ಷಾವಿಧಿ ಅಗ್ನಿಚಯನ ಮೊದಲಾದ ಕರ್ಮಗಳ ವಿಸ್ತಾರಪೂರ್ವಕ ಚರ್ಚೆಯು ಶ್ರೌತಸೂತ್ರಗಳಲ್ಲಿದೆ

ಋಗ್ವೇದಕ್ಕೆ ಸೇರಿದ ಶ್ರೌತಸೂತ್ರಗಳಲ್ಲಿ ಆಶ್ವಲಾಯನ ಮತ್ತು ಸಾಂಖ್ಯಾಯನ ಶ್ರೌತಸೂತ್ರಗಳು ಪ್ರಸಿದ್ಧವಾಗಿವೆ ಗುಜರಾತ್ ಮತ್ತು ಇತರ ಉತ್ತರ ಭಾರತದ ರಾಜ್ಯಗಳಲ್ಲಿ ಸಾಂಖ್ಯಾಯನ ಶ್ರೌತಸೂತ್ರವೂ ಗೋದಾವರೀ ನದಿಯ ದಕ್ಷಿಣಕ್ಕಿರುವ ರಾಜ್ಯಗಳಲ್ಲಿ ಆಶ್ವಲಾಯನ ಶ್ರೌತಸೂತ್ರವೂ ಪ್ರಚಲಿತವಾಗಿದೆ ಈ ಎರಡು ಶ್ರೌತಸೂತ್ರಗಳಲ್ಲಿ ವಿಶೇಷ ವ್ಯತ್ಯಾಸವಿಲ್ಲ ಸಾಂಖ್ಯಾಯನ ಶ್ರೌತಸೂತ್ರದಲ್ಲಿ ಅಶ್ವಮೇಧ, ರಾಜಸೂಯ ಮೊದಲಾದ ದೊಡ್ಡ ದೊಡ್ಡ ಯಾಗಗಳ ವಿಸ್ತಾರಪೂರ್ವಕ ವರ್ಣನೆ ಇದೆ ಇದು ಸಾಂಖ್ಯಾಯನ ಬ್ರಾಹ್ಮಣವನ್ನನುಸರಿಸಿಕೊಂಡಿದೆ ಇದರಲ್ಲಿ ೧೮ ಭಾಗಗಳಿವೆ ಆಶ್ವಲಾಯನ ಶ್ರೌತಸೂತ್ರವು ಐತರೇಯ ಬ್ರಾಹ್ಮಣಕ್ಕನುಸಾರವಾಗಿದೆ ಇದರಲ್ಲಿ ಹನ್ನೆರಡು ಭಾಗಗಳಿವೆ

ಶುಕ್ಲಯಜುರ್ವೇದಕ್ಕೆ ಕಾತ್ಯಾಯನ ಶ್ರೌತಸೂತ್ರವೂ ಕೃಷ್ಣಯಜುರ್ವೇದಕ್ಕೆ ಬೋಧಾಯನ ಭಾರದ್ವಾಜ ಆಪಸ್ತಂಬ ಹಿರಣ್ಯಕೇಶಿ ಮಾನವ ಶ್ರೌತಸೂತ್ರ ತಥಾ ವೈಖಾನಸಶ್ರೌತಸೂತ್ರಗಳಿವೆ ಸಾಮವೇದಕ್ಕೆ ಆರ್ಷೇಯ ಕಲ್ಪ ಅಥವಾ ಮಶಕಸೂತ್ರ, ಲಾಟ್ಯಾಯನ ಶ್ರೌತಸೂತ್ರ ದ್ರಾಹ್ಯಾಯನ ಶ್ರೌತಸೂತ್ರ ಜೈಮಿನೀಯ ಶ್ರೌತಸೂತ್ರ, ಹಾಗೂ ಸಾಮವಿಧಾನ ಬ್ರಾಹ್ಮಣಗಳೆಂಬ ಶ್ರೌತಸೂತ್ರಗಳಿವೆ ಅಥರ್ವವೇದಕ್ಕೆ ಕೇವಲ ವೈತಾನ ಶ್ರೌತಸೂತ್ರ ಮಾತ್ರವಿದೆ ಇವೆಲ್ಲಾ ಶ್ರುತಿ ಅಂದರೆ ವೇದಗಳಿಗೆ ಸಂಬಂಧಪಟ್ಟಿರುವುದರಿಂದ ಶ್ರೌತಸೂತ್ರಗಳೆನಿಸಿಕೊಂಡಿವೆ

೨ ಗೃಹ್ಯಸೂತ್ರಗಳು –ಗೃಹ್ಯಸೂತ್ರಗಳನ್ನು ಸ್ಮಾರ್ತಸೂತ್ರಗಳೆಂದೂ ಕರೆಯುತ್ತಾರೆ ಯಾಕೆಂದರೆ ಇವುಗಳು ಸ್ಮೃತಿಗಳಿಗೆ ಸಂಬಂಧಪಟ್ಟಿವೆ ಗೃಹಸ್ಥಾಶ್ರಮಕ್ಕೆ ಸಂಬಂಧಪಟ್ಟ ನಿಯಮ ವ್ಯವಹಾರ ಇತ್ಯಾದಿಗಳ ವರ್ಣನೆಯಿಂದ ಕೂಡಿರುವುದರಿಂದಲೇ ಗೃಹ್ಯಸೂತ್ರಗಳೆಂದೂ ಕರೆಯುತ್ತಾರೆ ಆಶ್ವಲಾಯನ ಸಾಂಖ್ಯಾಯನ ತಥಾ ಶಾಂಬವ್ಯ ಗೃಹ್ಯಸೂತ್ರಗಳು ಋಗ್ವೇದಕ್ಕೂ ಪಾರಸ್ಕರ ಅಥವಾ ಕಾಠ್ಯಯ ಅಥವಾ ವಾಜಸನೇಯ ಗೃಹ್ಯಸೂತ್ರವು ಶುಕ್ಲ ಯಜುರ್ವೇದಕ್ಕೂ ಆಪಸ್ತಂಬ ಬೋಧಾಯನ ಹಿರಣ್ಯಕೇಶಿಗಳ ಕಲ್ಪಸೂತ್ರ, ಭಾರದ್ವಾಜ ಮಾನವ ಕಾಠಕ ಮತ್ತು ವೈಖಾನಸ ಗೃಹ್ಯಸೂತ್ರಗಳು ಕೃಷ್ಣಯಜುರ್ವೇದಕ್ಕೂ ಗೋಭಿಲ ಮತ್ತು ಖಾದಿರ ಗೃಹ್ಯಸೂತ್ರಗಳು ಸಾಮವೇದಕ್ಕೂ, ತಥಾ ಕೌಶಿಕಗೃಹ್ಯಸೂತ್ರವು ಅಥರ್ವವೇದಕ್ಕೂ ಸೇರಿವೆ

---

[೩೭] ಯೋ ಯಜ್ಞಃ ವಿಶ್ವತಸ್ತಂತುಭಿಸ್ತ ಏಕಶತಂ ದೇವಕರ್ಮೇಭಿರಾಯತಃ ॥
ಋಗ್ವೇದ ೧೦-೧೩೦-೧ ॥

ಗರ್ಭಾಧಾನ, ಪುಂಸವನ–ಶೀಮಂತ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಉಪನಯನ, ವೇದಾರಂಭ, ವಿವಾಹ, ವಾನಪ್ರಸ್ಥ, ಸಂನ್ಯಾಸ ಅಂತ್ಯೇಷ್ಟಿ ಇತ್ಯಾದಿ ಹದಿನಾರು ಸಂಸ್ಕಾರಗಳು ಮತ್ತು ಪಂಚಮಹಾಯಜ್ಞ ಅಂದರೆ, ಬ್ರಹ್ಮಯಜ್ಞ [ವೇದಗಳ ಸ್ವಾಧ್ಯಾಯ ಮತ್ತು ಈಶ್ವರೋಪಾಸನೆ ಅಥವಾ ಸಂಧ್ಯಾವಂದನೆ], ದೇವ ಯಜ್ಞ [ಅಗ್ನಿಹೋತ್ರಾದಿ], ಪಿತೃಯಜ್ಞ [ಜೀವಿತ ಮಾತಾಪಿತರ ಸೇವೆ], ನೃಯಜ್ಞ ಅಥವಾ ಅತಿಥಿಯಜ್ಞ; ಹಾಗೂ ಭೂತಯಜ್ಞ ಅಂದರೆ, ಪಶುಪಕ್ಷಿಗಳಿಗೆ ಅನ್ನಾದಿಗಳನ್ನು ತಿನ್ನಿಸಿ ಅವುಗಳ ರಕ್ಷಣೆ–ಪೋಷಣೆ ಮಾಡುವುದು, ಎಂಬ ಐದು ರೀತಿಯ ನಿತ್ಯಯಜ್ಞ ಗಳು ಗೃಹ್ಯಸೂತ್ರಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ.

**೩. ಧರ್ಮಸೂತ್ರಗಳು**:—ಮಾನವ ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಚತುರ್ವರ್ಣಗಳಲ್ಲಿ, ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸನ್ಯಾಸಗಳೆಂಬ ನಾಲ್ಕು ಆಶ್ರಮಗಳಲ್ಲಿ ಜನರು ನಿತ್ಯವೂ ಯಾವ ರೀತಿಯಲ್ಲಿ ನಡೆದುಕೊಂಡು ಬರಬೇಕೆಂಬುದನ್ನು ಧರ್ಮಸೂತ್ರಗಳು ಬೋಧಿಸುತ್ತವೆ. ಆಪಸ್ತಂಬ, ಹಿರಣ್ಯಕೇಶೀಯ, ಬೋಧಾಯನ, ಗೌತಮ, ವಾಸಿಷ್ಠ, ಮಾನವಸೂತ್ರ, ಮತ್ತು ವೈಖಾನಸ ಧರ್ಮಸೂತ್ರಗಳು ಮಾತ್ರ ಈಗ ದೊರೆಯುತ್ತವೆಯಾದರೂ, ಪ್ರತಿ ಯೊಂದು ವೈದಿಕ ಶಾಖೆಗೆ ಒಂದೊಂದು ಧರ್ಮಸೂತ್ರವಿದ್ದಂತೆ ತೋರುತ್ತದೆ. ಅವೆಲ್ಲಾ ಲುಪ್ತವಾಗಿರಬೇಕು. ಉಕ್ತ ಧರ್ಮಸೂತ್ರಗಳಲ್ಲಿ ಆಪಸ್ತಂಬ, ಬೋಧಾಯನ ಮತ್ತು ಮಾನವ ಧರ್ಮಸೂತ್ರಗಳು ಮುಖ್ಯವಾಗಿವೆ. ಅನ್ಯ ಸೂತ್ರಗಳು ಪ್ರಾಚೀನ ರಚನೆಗಳೆಂದು ತೋರುವುದಿಲ್ಲ.

**೪. ಶುಲ್ಬಸೂತ್ರಗಳು**:–ಶುಲ್ಬಸೂತ್ರಗಳಲ್ಲಿ ಯಜ್ಞವೇದಿಕೆ ಮೊದಲಾದುವು ಗಳ ರಚನಾಕ್ರಮವನ್ನು ವಿವರಿಸಲಾಗಿದೆ. ಈಗ ಆಪಸ್ತಂಬ ಶುಲ್ಬಸೂತ್ರ, ಬೋಧಾಯನ ಶುಲ್ಬಸೂತ್ರ ಮತ್ತು ಕಾತ್ಯಾಯನ ಶುಲ್ಬಸೂತ್ರಗಳು ಮಾತ್ರ ಸಿಗುತ್ತವೆ. ಇವು ಯಜುರ್ವೇದಕ್ಕೆ ಸಂಬಂಧಪಟ್ಟಿವೆ. ಆಪಸ್ತಂಬ ಶುಲ್ಬಸೂತ್ರಕ್ಕೆ ಕಪರ್ದಿಭಾಷ್ಯ, ಸುಂದರರಾಜೀಯ ವ್ಯಾಖ್ಯಾ, ಮತ್ತು ಕರವಿಂದೀಯವ್ಯಾಖ್ಯಾ, ಎಂದು ಮೂರು ಭಾಷ್ಯ ಗಳು ಸಿಗುತ್ತವೆ. ಇವುಗಳಲ್ಲಿ ಕಪರ್ದಿಭಾಷ್ಯೆಯೇ ಪ್ರಾಚೀನವಾದುದು. ಬೋಧಾಯನ ಶುಲ್ಬಸೂತ್ರಕ್ಕೆ ದ್ವಾರಕನಾಥಯಜ್ವರ ವ್ಯಾಖ್ಯೆಯೂ, ಕಾತ್ಯಾಯನ ಶುಲ್ಬಸೂತ್ರಕ್ಕೆ ಸೋಮಸುದ್ರಾಮಚಂದರ ಶುಲ್ಬಸೂತ್ರ ವೃತ್ತಿಯೆಂಬ ವ್ಯಾಖ್ಯೆಯೂ ಇವೆ. ಶುಲ್ಬ ಸೂತ್ರಗಳಿಂದಲೇ ಶಿಲ್ಪಶಾಸ್ತ್ರವು ಬೆಳೆಯಿತೆಂದು ಹೇಳುತ್ತಾರೆ.

## ಪರಿಶಿಷ್ಟಗಳು

ವೇದಾಂಗಗಳಲ್ಲಿ ಬಿಟ್ಟುಹೋಗಿರುವ, ಅಥವಾ ವಿಶೇಷ ವಿವರಣೆಗಳ ಅಗತ್ಯ ವಿರುವ, ಯಜ್ಞಯಾಗಾದಿ ಕರ್ಮಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಪರಿಶಿಷ್ಟಗಳಲ್ಲಿ ವಿವರಿಸಲಾಗಿದೆ. ಪರಿಶಿಷ್ಟ ಗ್ರಂಥಗಳಲ್ಲಿ ಆಶ್ವಲಾಯನ ಗೃಹ್ಯಪರಿಶಿಷ್ಟ, ಗೋಭಿಲ ಸಂಗ್ರಹ ಪರಿಶಿಷ್ಟ ಇತ್ಯಾದಿ ಪ್ರಚಾರದಲ್ಲಿವೆ. ಇವುಗಳ ಭಾಷಾಶೈಲಿಯಿಂದ ಇವು ಪ್ರಾಚೀನ ಗ್ರಂಥಗಳಲ್ಲವೆಂದು ಗೊತ್ತಾಗುತ್ತದೆ.

## ಅನುಕ್ರಮಣಿಕೆಗಳು

ಅನುಕ್ರಮಣಿಕೆಗಳೆಂದರೆ ಮಂತ್ರ ಪದ ಋಷಿ ದೇವತೆ ಛಂದಸ್ಸು ಇತ್ಯಾದಿಗಳ ಅಕಾರಾದಿ ಕ್ರಮದಲ್ಲಿ ಸೂಚಿಸುವ ಪಟ್ಟಿ ಋಗ್ವೇದಕ್ಕೆ ಏಳು ಅನುಕ್ರಮಣಿಕೆಗಳಿವೆ ಋಗ್ವೇದಾನುಕ್ರಮಣಿಕೆಯಲ್ಲಿ ಸೂಕ್ತ ಋಷಿ ಛಂದಸ್ಸು ದೇವತೆ ಇತ್ಯಾದಿಗಳ ವಿವರಣೆಯನ್ನು ಸಂಹಿತೆಯಲ್ಲಿರುವ ಕ್ರಮದಂತೆ ಕೊಟ್ಟಿದ್ದಾರೆ ಇದು ಶೌನಕರ ಕೃತಿಯೆಂದು ಹೇಳುತ್ತಾರೆ ಕಾತ್ಯಾಯನರು ಋಗ್ವೇದದ ಸರ್ವಾನುಕ್ರಮಣಿಕೆಯನ್ನು ಬರೆದಿದ್ದಾರೆ ಋಗ್ವೇದದ ಆರ್ಷಾನುಕ್ರಮಣಿಕೆಯಲ್ಲಿ ಋಷಿಗಳ ಹೆಸರೂ ಛಂದೋನುಕ್ರಮಣಿಯಲ್ಲಿ ಛಂದಸ್ಸುಗಳ ಹೆಸರೂ ಅವುಗಳ ವಿವರಣೆಯೂ ಇದೆ ಅನುವಾಕಾನುಕ್ರಮಣಿಯಲ್ಲಿ ಅನುವಾಕಗಳ ವಿವರಣೆಯೂ ಪದಾನುಕ್ರಮಣಿಯಲ್ಲಿ ವೇದದಲ್ಲಿರುವ ಪದಗಳ ವಿವರಣೆಯೂ ಇದೆ ಸೂಕ್ತಾನುಕ್ರಮಣಿಯಲ್ಲಿ ಸೂಕ್ತಗಳ ವಿವರಗಳನ್ನೂ ದೇವತಾನುಕ್ರಮಣಿಯಲ್ಲಿ ದೇವತೆಗಳ ವಿವರಗಳನ್ನೂ ಕೊಟ್ಟಿದ್ದಾರೆ ಬೃಹದ್ದೇವತಾ ಮತ್ತು ಋಗ್ವಿಧಾನಗಳೆಂಬ ಗ್ರಂಥಗಳು ಶೌನಕರ ಹೆಸರಲ್ಲಿ ಪ್ರಸಿದ್ಧವಾಗಿವೆ ಋಗ್ವೇದದ ಪ್ರತಿಯೊಂದು ಸೂಕ್ತದ ದೇವತೆಗಳ ವಿವರಣೆಯು ಬೃಹದ್ದೇವತಾದಲ್ಲಿದೆ ಋಗ್ವಿಧಾನವು ಋಗ್ವೇದದ ಮಂತ್ರಗಳ ಪ್ರಯೋಗ ವಿಧಾನಾದಿಗಳನ್ನು ತಿಳಿಸುತ್ತದೆ ಇವೆರಡೂ ಗ್ರಂಥಗಳು ಅತಿ ಪ್ರಾಚೀನವಾಗಿವೆ

ಶುಕ್ಲಯಜುರ್ವೇದಕ್ಕೆ ಕಾತ್ಯಾಯನರ ಅನುಕ್ರಮಣಿ ಇದೆ ಕೃಷ್ಣಯಜುರ್ವೇದಕ್ಕೆ ಆತ್ರೇಯಾನುಕ್ರಮಣಿ ಮತ್ತು ಚಾರಾಯಣೀಯಾನುಕ್ರಮಣಿಯೆಂದು ಎರಡು ಅನುಕ್ರಮಣಿಗಳಿವೆ ಆರ್ಷ ಮತ್ತು ದೈವತ ಅನುಕ್ರಮಣಿಗಳು ಸಾಮವೇದಕ್ಕೂ ಚರಣವ್ಯೂಹವು ಅಥರ್ವವೇದಕ್ಕೂ ಸೇರಿವೆ

## ಉಪವೇದಾಂಗಗಳು

ಮೀಮಾಂಸಾ ವೈಶೇಷಿಕ ನ್ಯಾಯ ಯೋಗ ಸಾಂಖ್ಯ ಮತ್ತು ವೇದಾಂತಗಳೆಂಬ ಆರು ದರ್ಶನಶಾಸ್ತ್ರಗಳನ್ನು ವೇದಗಳ ಉಪಾಂಗಗಳೆಂದೂ ಕರೆಯುತ್ತಾರೆ ಇವು ಕ್ರಮವಾಗಿ ಜೈಮಿನಿ ಕಣಾದ ಗೋತಮ ಪತಂಜಲಿ ಕಪಿಲ ಮತ್ತು ವ್ಯಾಸರ ಕೃತಿಗಳಾಗಿವೆ ಮೀಮಾಂಸಾ ಶಾಸ್ತ್ರವನ್ನು ಪೂರ್ವ ಮೀಮಾಂಸಾ—ಎಂದೂ ವೇದಾಂತವನ್ನು ಉತ್ತರ ಮೀಮಾಂಸಾ ಎಂದೂ ಹೇಳುವುದುಂಟು ಪೂರ್ವಮೀಮಾಂಸಾದಲ್ಲಿ ಕರ್ಮಕಾಂಡದ ವಿಧಾನ ಧರ್ಮ ಮತ್ತು ಧರ್ಮಿಯ ವಿವರಣೆಗಳು ಇವೆ ಇದಕ್ಕೆ ವ್ಯಾಸಮುನಿ ಕೃತ ಭಾಷ್ಯ ಇದೆ ಪೂರ್ವಮೀಮಾಂಸವು ಇತರ ಉಪಾಂಗಗಳಿಗಿಂತ ದೊಡ್ಡದಾಗಿದೆ ಇದರಲ್ಲಿ ಹನ್ನೆರಡು ಅಧ್ಯಾಯಗಳಿವೆ ಸೂತ್ರಗಳ ಸಂಖ್ಯೆ ಒಟ್ಟು ೨೭೪೪

ವೈಶೇಷಿಕ ದರ್ಶನದಲ್ಲಿ ಹತ್ತು ಅಧ್ಯಾಯಗಳು ಮತ್ತು ೩೭೦ ಸೂತ್ರಗಳಿವೆ ಈ ಗ್ರಂಥದಲ್ಲಿ, ದ್ರವ್ಯ ಗುಣ ಕರ್ಮಲಕ್ಷಣ ಪರಮಾಣುವಾದ ಇತ್ಯಾದಿಗಳ ವಿವರಣೆ ಇದೆ ನ್ಯಾಯವೆಂದರೆ ವಿಭಿನ್ನ ಪ್ರಮಾಣಗಳಿಂದ ವಸ್ತುತತ್ವದ ಪರೀಕ್ಷೆ ನ್ಯಾಯಶಾಸ್ತ್ರದಲ್ಲಿ ಐದು ಅಧ್ಯಾಯಗಳಿವೆ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ, ಸಿದ್ಧಾಂತ ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡಾ,

ಹೇತ್ವಾಭಾಸ, ಛಲ, ಜಾತಿ, ಮತ್ತು ನಿಗ್ರಹಸ್ಥಾನಗಳ ತತ್ವಜ್ಞಾನದಿಂದ ಮೋಕ್ಷ ಸಿಗುತ್ತದೆ ಎಂದು ಈ ಶಾಸ್ತ್ರವು ಹೇಳುತ್ತದೆ.

ನ್ಯಾಯಶಾಸ್ತ್ರದ ರಚಯಿತೃಗಳು ಅಕ್ಷಪಾದ ಋಷಿಗಳು. ಆದರೆ, ಗೋತ್ರನಾಮ ಗೋತಮವಾದುದರಿಂದ ಗೋತಮ ಅಥವಾ ಗೌತಮವೆಂದೂ ಇವರನ್ನು ಕರೆಯುತ್ತಾರೆ.

ಯೋಗವೆಂದರೆ ಸ್ಥೂಲತೆಯ ಕಡೆಯಿಂದ ಸೂಕ್ಷ್ಮತೆಯ ಕಡೆಗೆ ಹೋಗುವುದೆಂದು ತಾತ್ಪರ್ಯ. ಯೋಗದಲ್ಲಿ ಮೂರು ವಿಧಗಳಿವೆ. ಜ್ಞಾನಯೋಗ, ಉಪಾಸನಾಯೋಗ, ಮತ್ತು ಕರ್ಮಯೋಗ—ಎಂದು. ಯೋಗದ ಆದಿ ಆಚಾರ್ಯರು ಹಿರಣ್ಯಗರ್ಭರೆಂದು ಹೇಳುತ್ತಾರೆ. ಹಿರಣ್ಯಗರ್ಭ ಸೂತ್ರಗಳ ಆಧಾರದಲ್ಲಿ ಪತಂಜಲಿ ಮುನಿಗಳು ಯೋಗದರ್ಶನ ಬರೆದಿರುವರು. ಯೋಗದರ್ಶನದಲ್ಲಿ ಸಮಾಧಿಪಾದ, ಸಾಧನಪಾದ, ವಿಭೂತಿಪಾದ ಮತ್ತು ಕೈವಲ್ಯಪಾದಗಳೆಂದು ನಾಲ್ಕು ಪಾದಗಳಿವೆ. ಇದರಲ್ಲಿ ಒಟ್ಟು ಸೂತ್ರಗಳ ಸಂಖ್ಯೆ ೧೯೫.

ಇಪ್ಪತ್ತೈದು ತತ್ತ್ವಗಳ ಗಣನೆ ಇರುವುದರಿಂದ ಈ ಇನ್ನೊಂದು ಉಪಾಂಗವನ್ನು ಸಾಂಖ್ಯ ಅಥವಾ ಸಾಂಖ್ಯದರ್ಶನವೆನ್ನುತ್ತಾರೆ. ಗೀತೆಯಲ್ಲಿ ಇದನ್ನು ಜ್ಞಾನಯೋಗ ಅಥವಾ ಸನ್ಯಾಸಯೋಗವೆಂದೂ ಕರೆಯುತ್ತಾರೆ. ಸಾಂಖ್ಯದರ್ಶನದಲ್ಲಿ ಆರು ಅಧ್ಯಾಯಗಳಿವೆ. ಇದರಲ್ಲಿ ಒಟ್ಟಿಗೆ ೫೨೭ ಸೂತ್ರಗಳಿವೆ. ಪ್ರಥಮ ಅಧ್ಯಾಯದಲ್ಲಿ ವಿಷಯ ಪ್ರತಿಪಾದನೆ, ಎರಡನೆ ಅಧ್ಯಾಯದಲ್ಲಿ ಪ್ರಧಾನದ ಕಾರ್ಯನಿರೂಪಣೆ, ಸರ್ಗದ ಪ್ರಯೋಜನ, ಇತ್ಯಾದಿ; ಮೂರನೆಯ ಅಧ್ಯಾಯದಲ್ಲಿ ಐದು ಸ್ಥೂಲಭೂತಗಳ ಉತ್ಪತ್ತಿ, ಎರಡು ಪ್ರಕಾರದ ಶರೀರ, ವೈರಾಗ್ಯ, ವಿವಿಧ ಯೋನಿಗಳಲ್ಲಿ ಆತ್ಮನ ಗತಿ ಇತ್ಯಾದಿ; ನಾಲ್ಕನೆಯ ಅಧ್ಯಾಯದಲ್ಲಿ ಸಾಂಖ್ಯ ತತ್ವಗಳು ಸುಲಭ ರೀತಿಯಲ್ಲಿ ಅರಿವಾಗುವಂತೆ ರೋಚಕ ಕತೆಗಳು, ದೃಷ್ಟಾಂತ ಇತ್ಯಾದಿ, ಐದನೆಯ ಅಧ್ಯಾಯದಲ್ಲಿ ವಿರೋಧಿಪಕ್ಷಗಳ ಪರೀಕ್ಷೆ ಮತ್ತು ಖಂಡನೆ; ತಥಾ ಆರನೇ ಅಧ್ಯಾಯದಲ್ಲಿ ಭೂತಾದಿಗಳು ಅಲ್ಲದೆ ಆತ್ಮದ ಅಸ್ತಿತ್ವ ತಥಾ ಸ್ವಸಿದ್ಧಾಂತಗಳ ಸಂಕ್ಷಿಪ್ತ ವರ್ಣನೆ ಇದೆ. ಪರಮಾತ್ಮನು ಸೃಷ್ಟಿಯ ಉಪಾದಾನ ಕಾರಣವಲ್ಲ, ಅರ್ಥಾತ್ ಆತನು ಕೇವಲ ಅಧಿಷ್ಠಾತಾ, ಎಂದು ಸಾಂಖ್ಯ ಸಿದ್ಧಾಂತ. ಆದುದರಿಂದ ಇಲ್ಲಿ ಈಶ್ವರನ ವಿಷಯ ಇಲ್ಲ. ಇದನ್ನು ನೋಡಿ, ಕೆಲವರಿಗೆ, ಇದು ನಾಸ್ತಿಕವಾದಿ ಗ್ರಂಥವೆಂಬ ಭ್ರಮೆಯಾಗುತ್ತದೆ. ಇದು ಸರಿಯಲ್ಲ.

ವೇದಾಂತ ದರ್ಶನವನ್ನು ಉತ್ತರ ಮೀಮಾಂಸ ಎಂದೂ ಹೇಳುತ್ತಾರೆಂದು ಸೂಚಿಸಿದ್ದೇವೆ. ಇದರಲ್ಲಿ, ನಾಲ್ಕು ಅಧ್ಯಾಯಗಳು ಮತ್ತು ಪ್ರತಿಯೊಂದು ಅಧ್ಯಾಯದಲ್ಲಿ ನಾಲ್ಕು ಪಾದಗಳಿವೆ. ಪ್ರಥಮ ಅಧ್ಯಾಯವನ್ನು ಸಮನ್ವಯ ಅಧ್ಯಾಯವೆಂದು ಕರೆಯುತ್ತಾರೆ. ಇದರಲ್ಲಿ ಸಂಪೂರ್ಣ ವೇದಾಂತ ದರ್ಶನದ ವಿಷಯ ಬ್ರಹ್ಮ ಅಂದರೆ ಪರಮಾತ್ಮನೆಂದು ತೋರಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಬ್ರಹ್ಮನ ಕುರಿತು ಶ್ರುತಿಗಳ ವಿಚಾರವು ಅವಿರೋಧವಾಗಿದೆ ಎಂಬ ಮಾತಿನ ಸ್ಪಷ್ಟೀಕರಣವಿದೆ. ಆದುದರಿಂದ ಇದನ್ನು ಅವಿರೋಧ ಅಧ್ಯಾಯವೆನ್ನುತ್ತಾರೆ. ಮೂರನೆಯ ಅಧ್ಯಾಯದಲ್ಲಿ ವಿದ್ಯೆಯ ಸಾಧನಗಳ ನಿರ್ಣಯವಿರುವುದರಿಂದ ಅದನ್ನು ಸಾಧನ ಅಧ್ಯಾಯವೆನ್ನುತ್ತಾರೆ. ನಾಲ್ಕನೆಯ ಫಲಾಧ್ಯಾಯದಲ್ಲಿ ವಿದ್ಯೆಯ ಫಲ ನಿರ್ಣಯದ ವಿವರಣೆ ಇದೆ.

ಈ ರೀತಿ ವೇದಗಳಲ್ಲಿ ಪ್ರತಿಪಾದಿತವಾಗಿರುವ ವಿದ್ಯೆಗಳನ್ನು ವರ್ಗೀಕರಿಸಿ ಅವುಗಳ ಪ್ರತ್ಯೇಕಪ್ರತ್ಯೇಕವಾಗಿ ಸೂತ್ರರೂಪದಲ್ಲಿ ವ್ಯಾಖ್ಯೆ ಮಾಡಲಾಗಿದೆ. **ದೃಶ್ಯತೇ ಅನೇನ ಇತಿ ದರ್ಶನಂ** ಅಂದರೆ ಯಾವುದರ ಮೂಲಕ ವಸ್ತುಗಳ ತಾತ್ತ್ವಿಕ ಸ್ವರೂಪವನ್ನು ನೋಡುವುದು ಅರ್ಥಾತ್ ತಿಳಿದುಕೊಳ್ಳಲಾಗುತ್ತದೆಯೋ ಅದನ್ನೇ ದರ್ಶನ ಎಂದು ಹೇಳುತ್ತಾರೆ. ಉಕ್ತ ಎಲ್ಲಾ ದರ್ಶನಗಳಲ್ಲಿ ಮುಖ್ಯವಾಗಿ ನಾಲ್ಕು ವಿಷಯಗಳಿವೆ. ಯಾವುವೆಂದರೆ—ದುಃಖದ ವಾಸ್ತವಿಕ ಸ್ವರೂಪ ಹೇಯ ಅಂದರೆ ತ್ಯಾಜ್ಯ. ದುಃಖದ ಉತ್ಪತ್ತಿ ಎಲ್ಲಿಂದ ಆಗುತ್ತದೆ? ಅದಕ್ಕೆ ನಿಜವಾದ ಕಾರಣವೇನು? ಇದು ಹೇಯ ಹೇತು. ದುಃಖದ ನಿತಾಂತ ಅಭಾವ ಹಾನ. ಮತ್ತು ನಿತಾಂತ ದುಃಖ ನಿವೃತ್ತಿಯ ಸಾಧನ ಹಾನೋಪಾಯ. ಈ ರೀತಿ ದರ್ಶನಗ್ರಂಥಗಳು ಒಂದಕ್ಕೊಂದು ಪೂರಕವಾಗಿವೆ. ಇವುಗಳ ಸಮನ್ವಯ ಜ್ಞಾನವು ವೇದಾರ್ಥ ಜ್ಞಾನಕ್ಕೆ ಸಹಾಯಕವಾಗಿವೆ. ಆದುದರಿಂದ ಇವುಗಳನ್ನು ವೇದಗಳ ಉಪಾಂಗಗಳೆನ್ನುತ್ತಾರೆ.

ಹೀಗೆ ಉಪರ್ಯುಕ್ತ ಆರು ವೇದಾಂಗಗಳು ಮತ್ತು ಆರು ದರ್ಶನಗಳು ಅಥವಾ ವೇದಗಳ ಉಪಾಂಗಗಳನ್ನು ಚೆನ್ನಾಗಿ ಕಲಿತ ಮೇಲೆಯೇ ವೇದಭಾಷೆಯ ಪೂರ್ಣ ಜ್ಞಾನವು ದೊರೆತು ವೇದಗಳಲ್ಲಿರುವ ವಿಭಿನ್ನ ಪ್ರಕಾರದ ವಿದ್ಯೆಗಳು ಬುದ್ಧಿಗೋಚರವಾಗುತ್ತವೆ. ವೇದವಿದ್ಯೆಗಳು ಅನಂತವಾಗಿದ್ದರೂ ಮುಖ್ಯವಾಗಿ ನಾಲ್ಕು ವೇದಗಳಿಗೆ ನಾಲ್ಕು ಉಪವೇದಗಳಿವೆ—ಋಗ್ವೇದಕ್ಕೆ ಆಯುರ್ವೇದ, ಯಜುರ್ವೇದಕ್ಕೆ ಧನುರ್ವೇದ, ಸಾಮವೇದಕ್ಕೆ ಗಾಂಧರ್ವವೇದ ಮತ್ತು ಅಥರ್ವವೇದಕ್ಕೆ ಅರ್ಥವೇದ—ಎಂದು. ಆಯುರ್ವೇದದಲ್ಲಿ ಚರಕ, ಸುಶ್ರುತ ಮತ್ತು ಧನ್ವಂತರಿ ಕೃತ ನಿಘಂಟು ಎಂಬ ವೈದ್ಯಕ ಶಾಸ್ತ್ರದ ಗ್ರಂಥಗಳಿವೆ. ಧನುರ್ವೇದದಲ್ಲಿ ಶಸ್ತ್ರಾಸ್ತ್ರ ವಿದ್ಯೆ, ರಾಜವಿದ್ಯೆ ಇತ್ಯಾದಿಗಳಿವೆ. ಈ ವಿದ್ಯೆಯ ಪ್ರಾಚೀನ ಆಚಾರ್ಯರಲ್ಲಿ ಅಂಗಿರಾ, ಭರದ್ವಾಜಾದಿ ಋಷಿಗಳು ಪ್ರಸಿದ್ಧರಾಗಿದ್ದಾರೆ. ಗಾಂಧರ್ವವೇದವೆಂದರೆ ಗಾನವಿದ್ಯೆ. ಸಾಮಗಾನ, ನಾರದ ಸಂಹಿತೆ ಮೊದಲಾದ ಗ್ರಂಥಗಳು ಈ ವಿದ್ಯೆಗೆ ಸಂಬಂಧಪಟ್ಟ ಪ್ರಸಿದ್ಧ ಪ್ರಾಚೀನ ರಚನೆಗಳಾಗಿವೆ. ಅಥರ್ವವೇದವೆಂದರೆ ಶಿಲ್ಪಶಾಸ್ತ್ರಕ್ಕೆ ಸಂಬಂಧಪಟ್ಟ ವಿದ್ಯೆ. ವಿಶ್ವಕರ್ಮ, ತ್ವಷ್ಟಾ, ದೇವಜ್ಞ ಮತ್ತು ಮಯಕೃತ ಗ್ರಂಥಗಳಲ್ಲಿ ಈ ವಿಷಯದ ವಿವರಣೆ ಇದೆ. ಜ್ಞಾನದ ಉನ್ನತಿಯನ್ನು ಬಯಸುವವರು ಈ ಜ್ಞಾನವನ್ನು ಇನ್ನೂ ವಿಸ್ತರಿಸಬಹುದು. ಇನ್ನೂ ಆಳವಾಗಿ ಅಧ್ಯಯನ ಮಾಡಬಹುದು ಮತ್ತು ಉಕ್ತ ವಿದ್ಯೆಗಳನ್ನು ಇನ್ನೂ ಮುಂದಕ್ಕೆ ಬೆಳೆಯಿಸಲೂ ಬಹುದು. ಇದಕ್ಕೆ ಮಿತಿ ಎಂಬುದು ಇಲ್ಲ. ಇದರಲ್ಲಿ ಯಾವ ವಿಷಯವೂ ಇಲ್ಲವೆಂದಲ್ಲ. ಯಾವುದಕ್ಕೂ ಕಡಿಮೆ ಎಂದೂ ಇಲ್ಲ. ಆದುದರಿಂದಲೇ ತನ್ನ ಆಯುಷ್ಯದ ಮೂರು ಭಾಗವನ್ನು ವೇದಾಧ್ಯಯನದಲ್ಲಿಯೇ ಕಳೆದ ಭರದ್ವಾಜರು ತನ್ನ ಜೀವನದ ಉಳಿದ ಭಾಗದಲ್ಲಿಯೂ ವೇದವನ್ನೇ ಓದುವೆನೆಂದು ಇಂದ್ರನಲ್ಲಿ ಹೇಳುತ್ತಾರೆ. ಮಿತಿ ಇರುವುದು ಮನುಷ್ಯರ ಆಯುಷ್ಯಕ್ಕೆ, ಮೇಧಾಶಕ್ತಿಗೆ ಅಥವಾ ಪುರುಷಾರ್ಥಕ್ಕೆ. ಜನಸಾಮಾನ್ಯರಿಗೆ ಇದುವರೆಗೂ ವೇದಗಳಲ್ಲಿ ಏನೆಲ್ಲಾ ವಿದ್ಯೆಗಳಿವೆ ಎಂಬ ಅರಿವೇ ಇಲ್ಲ. ಆದುದರಿಂದಲೇ ವೇದಶಾಸ್ತ್ರಗಳನ್ನು ಬಿಟ್ಟು ಸಾಮಾನ್ಯ ಮನುಷ್ಯರ ಕೃತಿಗಳನ್ನು ಓದುವುದರಲ್ಲಿ ಸಮಯವನ್ನು ಕಳೆಯುತ್ತಾರೆ, ವಿದೇಶಗಳಿಗೆ ವಿಶೇಷ ಜ್ಞಾನಸಂಪಾದನೆಗೆಂದು ಹೋಗುತ್ತಾರೆ. ಆದರೂ ಮೂರ್ಖರಾಗಿಯೇ ಇರುತ್ತಾರೆ.

# ವೇದಗಳ ಭಾಷ್ಯಕಾರರು

ಪೂರ್ವೋಕ್ತ ರೀತಿಯಲ್ಲಿ ಮಹರ್ಷಿ ಬ್ರಹ್ಮ ಇವರು ಆದ್ಯ ವೇದಾಚಾರ್ಯ ರಾಗಿದ್ದರು ಅಗ್ನಿ, ವಾಯು ಸೂರ್ಯ ಮತ್ತು ಅಥರ್ವ ಋಷಿಗಳಿಂದ ಇವರು ನಾಲ್ಕೂ ಸಂಹಿತೆಗಳನ್ನು ಪಡೆದು ಜಗತ್ತಿನ ಕಲ್ಯಾಣಕ್ಕಾಗಿ ಇತರ ಋಷಿಗಳಿಗೆ ಕಲಿಸಿದರು ಇವರ ಬಳಿ ಭೃಗು ಮರೀಚಿ ಅಂಗೀರಾ ಅತ್ರಿ ಪುಲಸ್ತ್ಯ ಪುಲಹ ಕ್ರತು ಅಪಾಂತರ ತಮಾ ವಸಿಷ್ಠ ಮನು ಮೊದಲಾದವರು ವೇದವಿದ್ಯೆಯ ಪರಂಪರೆಯನ್ನು ಮುಂದೆ ಸಾಗಿಸಿದರು ಇಲ್ಲಿಯ ತನಕ ಹೆಚ್ಚು ಕಡಿಮೆ ಕೇವಲ ಮಂತ್ರಗಳ ಉಪದೇಶವೇ ನಡೆಯುತ್ತಿತ್ತೆಂದು ಕಾಣುತ್ತದೆ ಯಾವ ರೀತಿಯಲ್ಲಿ ಮಕ್ಕಳಿಗೆ ಮಾತೃಭಾಷೆಯ ಅರಿವಾಗುತ್ತದೆಯೋ ಅದೇ ರೀತಿಯಲ್ಲಿ ಉಕ್ತ ಋಷಿಗಳಿಗೆ ವೇದಭಾಷೆಯ ಅರಿವಾಗುತ್ತಿತ್ತು ಶಿಶುಗಳು ಮಾತೆಯ ಸ್ತನಗಳಿಂದ ಹಾಲನ್ನು ಕುಡಿದು ಬೆಳೆಯುವಂತೆ ಮಾನವ ಸಭ್ಯತೆಯ ಆ ಶೈಶವಾವಸ್ಥೆಯಲ್ಲಿ ಆದಿ ಮಾನವರು ವೇದರೂಪಿ ಮಾತೆಯ ಮಂತ್ರರೂಪೀ ಸ್ತನಗಳಿಂದ ಜ್ಞಾನರೂಪೀ ಹಾಲನ್ನು ಕುಡಿದು ಪ್ರೌಢಿಮೆಯನ್ನು ಹೊಂದಿದರು ಲೋಕಕಲ್ಯಾಣದ ದೃಷ್ಟಿಯಿಂದ ನಾನಾ ಪ್ರಕಾರದ ಶಾಸ್ತ್ರಗ್ರಂಥಗಳನ್ನು ರಚಿಸಿದರು ಈ ಶಾಸ್ತ್ರಗ್ರಂಥಗಳು ಎರಡು ವಿಧವಾಗಿವೆ ಒಂದನೆಯದು ವೇದ ವಿದ್ಯೆಯ ವಿಕಾಸವನ್ನು ಸೂಚಿಸುತ್ತದೆ ಯಥಾ—ಆಯುರ್ವೇದ ಶಿಲ್ಪವೇದ ಧನುರ್ವೇದ ಇತ್ಯಾದಿ ಉಪವೇದಗಳು ತಥಾ ವಿಜ್ಞಾನ ಕರ್ಮ ಉಪಾಸನೆಗಳಿಗೆ ಸಂಬಂಧಪಟ್ಟ ಅನ್ಯ ಗ್ರಂಥಗಳು ಎರಡನೆಯದಾಗಿ ಸಂಹಿತೆಗಳನ್ನು ಕಲಿಯುವುದಕ್ಕೆ ಮತ್ತು ರಕ್ಷಣೆಗೆ ಸಹಾಯಕವಾಗುವಂತೆ ಮಾರ್ಗದರ್ಶನದ ರೀತಿಯಲ್ಲಿ ಶಿಕ್ಷಾ ವ್ಯಾಕರಣಾದಿ ಗ್ರಂಥಗಳು ಎರಡನೆಯ ಪ್ರಕಾರದ ಗ್ರಂಥಗಳ ಆವಶ್ಯಕತೆಯು ಜನರಿಗೆ ಸ್ವಲ್ಪ ಹೆಚ್ಚಾಗಿಯೇ ಅನುಭವವಾಯಿತು ಯಾಕೆಂದರೆ ಮೂಲ ವೇದವಾಣಿಯಿಂದ ಮಾನುಷೀ ವಾಣಿಯು ಎರಬರುತ್ತಾ ದೂರ ಸರಿಯುತ್ತಾ ಹೋಗಿವೆ ಇಂದು ನಮ್ಮ ಸ್ಥಿತಿ ಏನೆಂದರೆ ವೇದಭಾಷೆಯು ನಮಗೆ ವಿದೇಶಿ ಭಾಷೆಯ ಹಾಗಲ್ಲ ಅನ್ಯಲೋಕದ ಭಾಷೆಯಂತೆ ಭಾಸವಾಗುತ್ತದೆ ಆದುದರಿಂದ ಪ್ರಾಚೀನ ಋಷಿಗಳು ಮಾಡಿದ ಮಂತ್ರಗಳ ವ್ಯಾಖ್ಯಾನ ಗ್ರಂಥಗಳೂ ನಮಗೆ ಸಾಕಾಗುವುದಿಲ್ಲ ಭಾಷ್ಯ ಗ್ರಂಥಗಳು ಬೇಕೆನಿಸುತ್ತವೆ ಸಂಸ್ಕೃತ ಭಾಷೆಯ ಶಿಕ್ಷಣವು ಲುಪ್ತವಾಗುತ್ತಾ ಹೋದಂತೆ ಶಿಕ್ಷಣದ ಮಾಧ್ಯಮವು ಪ್ರಾಕೃತ ಅಥವಾ ಅಪಭ್ರಂಶ ಭಾಷೆಯಾಯಿತು ಆದುದರಿಂದ ಈಗ ಇಂಗ್ಲಿಷ್ ಹಿಂದಿ ಕನ್ನಡ ಎಂದು ಈ ಮೊದಲಾದ ಆಧುನಿಕ ಭಾಷೆಗಳಲ್ಲಿ ವೇದಭಾಷ್ಯದ ಆವಶ್ಯಕತೆ ಬಿದ್ದಿದೆ ಮುಂದಕ್ಕೂ ಈ ಭಾಷ್ಯದ ಪರಂಪರೆಯು ನಡೆಯುತ್ತಾ ಹೋಗುವುದೆಂಬುದಕ್ಕೆ ಸಂಶಯವಿಲ್ಲ ಈ ರೀತಿ ವೇದಭಾಷ್ಯಕ್ಕೆ ಪೂರ್ಣ ವಿರಾಮವೆಂದಿಲ್ಲ ವೇದ ವಿದ್ಯೆಯು ಅನಂತವಾಗಿರುವುದರಿಂದಲೂ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಮೇಧಾವಿ ವಿದ್ವಾಂಸರು ಮಂತ್ರಾರ್ಥಗಳ ಮೇಲೆ ಹೊಸ ಹೊಸ ರೀತಿಯಲ್ಲಿ ಪ್ರಕಾಶವನ್ನು ಹಾಕುತ್ತಾ ಇಷ್ಟರ ತನಕ ಬಂದಿದ್ದಾರೆ ಮುಂದೆಯೂ ಇಂತಹ ಕಾರ್ಯಗಳು ನಡೆಯುವುವು

ವಿಚಾರ ಮಾಡಿದರೆ ಒಂದು ದೃಷ್ಟಿಯಿಂದ ಆಧುನಿಕರು, ಪೂರ್ವಜರಿಗಿಂತ ಹೆಚ್ಚು ಭಾಗ್ಯವಂತರಾಗಿದ್ದಾರೆ ಮುದ್ರಣದ ಅನುಕೂಲತೆ ಪ್ರಾಚೀನ ಗ್ರಂಥಗಳ

ಉಪಲಬ್ಧಿ, ಗ್ರಂಥಾಲಯಗಳು ಇವೆಲ್ಲಾ ಆಧುನಿಕರಿಗೆ ಒದಗುತ್ತವೆ ಜ್ಞಾನವಿಜ್ಞಾನದ ಉನ್ನತಿಯಾದಂತೆ ಇನ್ನೂ ಸುಧಾರಣೆಗಳಾಗುವುದು ಈ ಎಲ್ಲಾ ಸೌಕರ್ಯಗಳು ಪೂರ್ವಜರಿಗೆ ಇರಲಿಲ್ಲ ಆದುದರಿಂದ ಈಗ ಸ್ವಲ್ಪ ಪ್ರಯಾಸದಿಂದಲೇ ಅಧಿಕ ಜ್ಞಾನ ವನ್ನು ಪಡೆಯಬಹುದು ಆತ್ಮಕಲ್ಯಾಣವನ್ನೂ ಮಾಡಿಕೊಳ್ಳಬಹುದು ಜಗತ್ತಿನ ಕಲ್ಯಾಣವನ್ನೂ ಮಾಡಬಹುದು ಆದರೆ ಇಚ್ಛೆ ಅಥವಾ ಜಿಜ್ಞಾಸೆ ಪ್ರಾಮಾಣಿಕತೆ ಮತ್ತು ಪ್ರಯಾಸ ಆಗತ್ಯ ಬೇಕು

ವೇದವಿದ್ಯೆಯ ಪರಂಪರೆಯು ಸೃಷ್ಟಿಯ ಆದಿಯಿಂದ ಇಂದಿನ ತನಕ ಅವ್ಯಾಹತ ವಾಗಿ ನಡೆದುಬಂದಿದೆ ಈ ಪರಂಪರೆಯ ರಕ್ಷಣೆಗಾಗಿ ಅನೇಕ ಮಂದಿ ಋಷಿಮುನಿಗಳೂ ವಿದ್ವಾಂಸರೂ ತಮ್ಮ ತಪಸ್ಸು ಮತ್ತು ಜೀವನದ ಆಹುತಿಯನ್ನು ಕೊಟ್ಟಿದ್ದಾರೆ ಅವರಿಗೆಲ್ಲಾ ನಾವು ಋಣಿಗಳಾಗಿದ್ದೇವೆ ನಡುನಡುವೆ ಅನೇಕ ಆಸುರೀ ತತ್ತ್ವಗಳು ವೇದವಿದ್ಯೆಯನ್ನು ದೂಷಿಸಲಿಕ್ಕೂ ನಷ್ಟ ಮಾಡಲಿಕ್ಕೂ ಪ್ರಯತ್ನ ಮಾಡಿದುವು ಈಗಲೂ ಇಂತಹ ತತ್ತ್ವಗಳು ಇವೆ ಆದುದರಿಂದ ವೇದಗಳ ವಿದ್ಯಾರ್ಥಿಗಳಿಗೆ ವೇದ ಭಾಷ್ಯದ ಅಥವಾ ವೇದಾರ್ಥ ಪ್ರಕ್ರಿಯೆಯ ಇತಿಹಾಸದ ಜ್ಞಾನವು ವಿಶೇಷ ಲಾಭ ದಾಯಕವಾಗಿದೆ ರಾಜಮಾರ್ಗ ಯಾವುದು? ಅಪಾಯಕರವಾದ ರಸ್ತೆ ಯಾವುದು? ಇತ್ಯಾದಿ ವಿಷಯಗಳ ಜ್ಞಾನವು ಇತಿಹಾಸದಿಂದ ದೊರೆಯುತ್ತದೆ ಇಷ್ಟಲ್ಲದೆ, ಪೂರ್ವಜರು ಎಷ್ಟರ ತನಕ ಕಾರ್ಯಗಳನ್ನು ಸಾಗಿಸಿದ್ದಾರೆ ಎಂಬುದನ್ನು ತಿಳಿದುಕೊಂಡು ಅವರ ಅನುಭವ ಮತ್ತು ಜ್ಞಾನದ ಆಧಾರದಿಂದ ನಾವು ಆ ಕಾರ್ಯಗಳನ್ನು ಮುಂದು ವರಿಸಬಹುದು ಈ ದೃಷ್ಟಿಯಿಂದ ವೇದಭಾಷ್ಯಗಳನ್ನು ಬರೆದ ಪ್ರಾಚೀನ ಮತ್ತು ಅರ್ವಾಚೀನ ವಿದ್ವಾಂಸರ ಇತಿಹಾಸವು ಬಹಳ ಮಹತ್ತ್ವಪೂರ್ಣವಾಗಿದೆ

**ಮೂರು ಪ್ರಕಾರದ ವೇದಾರ್ಥ ಪ್ರಕ್ರಿಯೆಗಳು** —ಪ್ರಾಚೀನ ಕಾಲದಲ್ಲಿ ಮೂರು ಪ್ರಕಾರದ ವೇದಾರ್ಥ ಪ್ರಕ್ರಿಯೆಗಳು ಪ್ರಸಿದ್ಧವಾಗಿದ್ದುವು ಅವುಗಳನ್ನು ಆಧ್ಯಾತ್ಮಿಕ ಆಧಿದೈವಿಕ ಮತ್ತು ಆದಿಯಾಜ್ಞಿಕ ಪ್ರಕ್ರಿಯೆಗಳೆನ್ನುತ್ತಾರೆ ಆಧ್ಯಾತ್ಮ ಪ್ರಕ್ರಿಯೆಗನುಸಾರವಾಗಿ ಆತ್ಮಕ್ಕೆ ಸಂಬಂಧಪಟ್ಟ ಅಂದರೆ ಆತ್ಮವಿಜ್ಞಾನದ ದೃಷ್ಟಿಯಿಂದ ವೇದ ಮಂತ್ರಗಳ ವ್ಯಾಖ್ಯೆ ಮಾಡಲಾಗುತ್ತದೆ ಇದರಲ್ಲಿ ಜೀವಾತ್ಮ ಪರಮಾತ್ಮ ಮತ್ತು ಇವರ ಸಂಬಂಧ ಗುಣ ಧರ್ಮ ಸ್ವಭಾವ, ಜೀವಗಳ ವಿಭಿನ್ನಗತಿ ಉಪಾಸನೆ ಇತ್ಯಾದಿ ವಿಷಯಗಳು ಬರುತ್ತವೆ ಇದು ಬ್ರಹ್ಮವಿದ್ಯೆಗೆ ಸಂಬಂಧಪಟ್ಟ ವಿಷಯ ಆಧಿದೈವಿಕ ಅಂದರೆ ದೇವತೆ ಅರ್ಥಾತ್ ಅಗ್ನಿ ಪೃಥ್ವಿ ಜಲ ವಾಯು ಆಕಾಶ ಅಂತರಿಕ್ಷ ಸೂರ್ಯ ಮತ್ತು ಚಂದ್ರ ಎಂಬ ಎಂಟು ವಸುಗಳು ಆದಿತ್ಯರೆಂದುಕೊಂಡಿರುವ ಹನ್ನೆರಡು ಮಾಸಗಳು ರುದ್ರರೆಂದುಕೊಂಡಿರುವ ಹತ್ತು ಪ್ರಾಣಗಳು ಮತ್ತು ಜೀವ ಇಂದ್ರನೆಂದು ಪ್ರಸಿದ್ಧವಾಗಿರುವ ವಿದ್ಯುತ್, ಮತ್ತು ಯಜ್ಞ ಇವುಗಳಿಗೆ ಸಂಬಂಧಪಟ್ಟ ವಿಷಯ ಯಾವ ರೀತಿಯಲ್ಲಿ ಬ್ರಹ್ಮಾಂಡದಲ್ಲಿ ಈ ದೇವತೆಗಳಿದ್ದಾರೆಯೋ ಅದೇ ರೀತಿ ಪಿಂಡ ಅಥವಾ ಪುರುಷ ಶರೀರದಲ್ಲಿಯೂ ಇವರು ಇದ್ದಾರೆ ಈ ಪ್ರಕರಣವನ್ನು ಮುಂದಿಟ್ಟುಕೊಂಡು ಮಾಡುವ ಮಂತ್ರ ವ್ಯಾಖ್ಯಾನದ ರೀತಿಯನ್ನು ಆಧಿದೈವಿಕ ಪ್ರಕ್ರಿಯೆ ಎನ್ನುತ್ತಾರೆ ಇದರಲ್ಲಿ ಸೃಷ್ಟಿಯಲ್ಲಿರುವ ಎಲ್ಲಾ ಪದಾರ್ಥಗಳ ಹೆಸರು ಗುಣ, ಧರ್ಮಗಳ ವರ್ಣನೆ, ಉತ್ಪತ್ತಿ ಮತ್ತು ಪ್ರಲಯಾದಿಗಳ ವಿವರಣೆ ಇತ್ಯಾದಿಗಳು ಬರುತ್ತವೆ ಈ ಎಲ್ಲಾ ಪದಾರ್ಥಗಳನ್ನು ಜೀವನಕ್ಕೆ ಲಾಭದಾಯಕವಾಗುವಂತೆ

ಧರ್ಮ, ಅರ್ಥ, ಕಾಮಗಳ ಸಿದ್ಧಿಯಾಗುವಂತೆ ಉಪಯೋಗಿಸುವ ವಿಧಿವಿಧಾನಗಳು ಅಧಿಯಜ್ಞ ಅಂದರೆ ಯಜ್ಞಕ್ಕೆ ಸಂಬಂಧಪಟ್ಟ ವಿಷಯ. ಈ ದೃಷ್ಟಿಯಿಂದ ಮಾಡ ಲಾಗುವ ವೇದಮಂತ್ರಗಳ ವ್ಯಾಖ್ಯೆಯ ಶೈಲಿಯನ್ನು ಆಧಿಯಾಜ್ಞಿಕ ಪ್ರಕ್ರಿಯೆ ಎನ್ನು ತ್ತಾರೆ. ಇದು ಕರ್ಮಕಾಂಡದ ವಿಷಯವಾಗಿದೆ.

ಸ್ಕಂದಸ್ವಾಮಿ, ವೆಂಕಟ ಮಾಧವ, ಸಾಯಣ ಪ್ರಭೃತಿ ವೇದಭಾಷ್ಯಕಾರರು ಮುಖ್ಯವಾಗಿ ಯಾಜ್ಞಿಕ ಪ್ರಕ್ರಿಯೆಗನುಸಾರವಾಗಿ ಭಾಷ್ಯಗಳನ್ನು ಬರೆದಿದ್ದಾರೆ. ಆದರೂ, ಇವರ ಭಾಷ್ಯಗಳಲ್ಲಿ ಅಲ್ಲಲ್ಲಿ ಅಧಿದೈವ ಮತ್ತು ಅಧ್ಯಾತ್ಮ ವ್ಯಾಖ್ಯೆಗಳು ಕೂಡ ಕಂಡು ಬರುತ್ತವೆ. ಬಹುಶಃ ವೇದಮಂತ್ರಗಳು ಮುಖ್ಯವಾಗಿ ಅಧಿಯಜ್ಞ ಪರಕವಾಗಿವೆ, ಅಧ್ಯಾತ್ಮ ಮತ್ತು ಅಧಿದೈವ ವಿಷಯಗಳು ಇಲ್ಲಿ ಗೌಣವಾಗಿವೆ ಎಂದು ಇವರ ಅಭಿಪ್ರಾಯವಿದ್ದಿರಬೇಕು. '**ವೇದಾಃ ಯಜ್ಞಾರ್ಥ ಪ್ರವೃತಾಃ**' ಎಂದು ಕೆಲವರಂತೂ ಸ್ಪಷ್ಟವಾಗಿ ಹೇಳಿದ್ದಾರೆ. ಅಗ್ನಿಹೋತ್ರ, ದರ್ಶ ಪೌರ್ಣಮಾಸ, ಅಗ್ನಿಷ್ಟೋಮ, ಅಶ್ವಮೇಧ ಮೊದಲಾದ ಯಜ್ಞಗಳ ನಿಮಿತ್ತವೇ ವೇದಗಳು ಪ್ರಕಟಿತವಾಗಿವೆಯೆಂದು ಇವರ ವಿಚಾರ. ಈ ದೃಷ್ಟಿಕೋಣದಿಂದ ವೇದಭಾಷ್ಯೆ ಬರೆದವರಲ್ಲಿ ಸಾಯಣಾ ಚಾರ್ಯರು ಮುಖ್ಯರು. ಆಧ್ಯಾತ್ಮ ಮತ್ತು ಅಧಿದೈವ ವಿಷಯಗಳು ಸಂಹಿತೆಗಳಿಗೆ ಹೊರಗಿನ ವಿಷಯಗಳೆಂದು ಇವರು ಹೇಳಿದ್ದಾರೆ.

ಯಾಸ್ಕ ಮುನಿ ಕೃತ ನಿರುಕ್ತಶಾಸ್ತ್ರವು ಆಧಿದೈವಿಕ ಪ್ರಕ್ರಿಯೆಗನುಸಾರವಾಗಿದೆ. ಉವ್ವಟರು ಯಜುರ್ವೇದ, ಅಧ್ಯಾಯ ಮೂವತ್ತೊಂದರಲ್ಲಿ ಶೌನಕಾಚಾರ್ಯ ಕೃತ ಆಧ್ಯಾತ್ಮಿಕ ವ್ಯಾಖ್ಯಾನವನ್ನು ಸ್ವೀಕರಿಸಿದ್ದಾರೆ. ಈ ರೀತಿ, ವೇದಾಚಾರ್ಯರಲ್ಲಿ ಕೆಲವರು ವೇದಮಂತ್ರಗಳಲ್ಲಿ ಕೇವಲ ಯಜ್ಞಗಳ ವಿಚಾರ ಇದೆ ಎಂದೂ, ಇನ್ನು ಕೆಲವರು ಕೇವಲ ದೇವತೆಗಳ ವರ್ಣನೆ ಇದೆ ಎಂದೂ, ಮತ್ತು ಕೆಲವರು ಕೇವಲ ಅಧ್ಯಾತ್ಮವಿದ್ಯೆ ಮಾತ್ರ ಇದೆ ಎಂದು ನಂಬಿದಂತೆ ಕಂಡರೂ, ಇದು ಸಂಕೀರ್ಣ ದೃಷ್ಟಿಕೋಣವೆಂಬುದಕ್ಕೆ ಸಂದೇಹವಿಲ್ಲ.

ದುರ್ಗಾಚಾರ್ಯರು, ವೇದಮಂತ್ರಗಳಿಗೆ ಅಧ್ಯಾತ್ಮ, ಅಧಿದೈವ ಮತ್ತು ಅಧಿ ಯಜ್ಞಾರ್ಥಗಳಿವೆ ಎಂದು ಹೇಳಿದ್ದಾರೆ.[೧] ಶತಪಥ ಬ್ರಾಹ್ಮಣ ಭಾಷ್ಯದ ಪ್ರಥಮ ಕಾಂಡದ ಆರಂಭದಲ್ಲಿ, "**ಮಂತ್ರಾ ಆಧಿಯಾಜ್ಞಿಕಾ, ಇಷೇತ್ವಾದಯಃ, ತ ಏವ ದೇವತಾ ಪದತ್ವೇನಾಧಿದೈವಿಕಾಃ ತ ಏವಾತ್ಮಾನಮಧಿಕೃತಾ ಆಧ್ಯಾತ್ಮಿಕಃ। ಈಶಾ ವಾಸ್ಯಾದ ಯಸ್ತ್ವಾಧ್ಯಾತ್ಮಿಕ ಏವ** ।" ಎಂದು ಹರಿಸ್ವಾಮಿಯವರು ಬರೆದಿ ದ್ದಾರೆ. ಅಂದರೆ, 'ಇಷೇ ತ್ವಾ...... [ಯಜುರ್ವೇದ ೧–೧]' ಇತ್ಯಾದಿ ಮಂತ್ರಗಳಿಗೆ, ಪ್ರತಿಯೊಂದಕ್ಕೂ ಉಕ್ತ ಮೂರು ಪ್ರಕಾರದ ಅರ್ಥಗಳಿವೆ ಎಂದೂ, ಆದರೆ, 'ಈಶಾ ವಾಸ್ಯಮಿದಂ......... [ಯಜು. ೪೦–೧]' ಇತ್ಯಾದಿ ರೀತಿಯ ಮಂತ್ರಗಳಿಗೆ ಕೇವಲ ಆಧ್ಯಾತ್ಮಿಕ ಅರ್ಥವೇ ಯುಕ್ತವಾಗಿದೆ ಎಂದೂ, ಇವರ ವಿಚಾರ. ಸ್ಕಂದ ಸ್ವಾಮಿಯು ಕೂಡ "**ಸರ್ವದರ್ಶನೇಷು ಚ** ಸರ್ವ **ಮಂತ್ರಾ ಯೋಜನೀಯಾಃ**" ಎಂದು ಬೇರೆ ಕಡೆ[೨]

[೧] ಅಧ್ಯಾತ್ಮಾದಿದೈವತಾಧಿಯಜಾಭಿಧಾಯಿನಾಂ ಮಂತ್ರಣಾಮರ್ಥಾವಿಜ್ಞಾಯಂತೇ ॥ ನಿರುಕ್ತ ಟೀಕೆ ೧–೧೫ ॥

[೨] ನ ಛಂದಃ । ಅನುಪಯುಜ್ಯಮಾನವಚನತ್ವಾದಿತಿ ॥

ಒಪ್ಪಿದ್ದಾರೆ ಅಂದರೆ ಲೋಕದಲ್ಲಿ ಪ್ರಸಿದ್ಧವಾಗಿರುವ ಎಲ್ಲಾ ರೀತಿಯ ಪ್ರಕ್ರಿಯೆಗಳಲ್ಲೂ ವೇದಮಂತ್ರಗಳ ಅರ್ಥ ಯೋಜನೆಯಾಗಬೇಕು ಎಂದು ಸ್ಪಷ್ಟವಾಗುತ್ತದೆ ಈ ಎಲ್ಲಾ ಪ್ರಮಾಣಗಳಿಂದ ಪ್ರಾಚೀನ ಕಾಲದಲ್ಲಿ ವಿಭಿನ್ನ ಪ್ರಕಾರದ ವೇದಾರ್ಥ ಪ್ರಕ್ರಿಯೆಗಳು ಪ್ರಸಿದ್ಧವಾಗಿದ್ದುವೆಂದು ಸಿದ್ಧವಾಗುತ್ತದೆ ಆದರೆ ಈ ಎಲ್ಲಾ ಪ್ರಕ್ರಿಯೆಗಳು ಈಗ ಸಿಗುವುದಿಲ್ಲ ಇದು ಶೋಚನೀಯ ಸಂಗತಿ

**ಋಗ್ವೇದದ ಭಾಷ್ಯಕಾರರು** —ಈಗ ಸಿಗುವ ಋಗ್ವೇದ ಭಾಷ್ಯಗಳಲ್ಲಿ ಸ್ಕಂದಸ್ವಾಮಿ ಭಾಷ್ಯವೇ ಎಲ್ಲರಿಗಿಂತಲೂ ಮುಂಚಿನದು ಸ್ಕಂದಸ್ವಾಮಿ ಭಾಷ್ಯವು ಯಾಜ್ಞಿಕ ಪ್ರಕ್ರಿಯೆಗನುಸಾರವಾಗಿದೆ ಇವರು ತಮ್ಮ ಭಾಷ್ಯಕ್ಕೆ ನಿರುಕ್ತ ಬೃಹದ್ದೇವತಾ ಬ್ರಾಹ್ಮಣಾದಿ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡಿದ್ದರು ಇವರ ವೃತ್ತಿಯಲ್ಲಿ ವೇದಾರ್ಥಕ್ಕೂ ಛಂದೋವ್ಯಾಖ್ಯಾನಕ್ಕೂ ಏನೂ ಸಂಬಂಧವಿಲ್ಲ[೩] ನಾರಾಯಣ ಮತ್ತು ಉದ್ಗೀಥರು ವೇದಭಾಷ್ಯದ ಕಾರ್ಯದಲ್ಲಿ ಸ್ಕಂದಸ್ವಾಮಿಗಳ ಸಹಯೋಗಿಗಳಾಗಿದ್ದರೆಂದು ವೆಂಕಟ ಮಾಧವರು ಹೇಳಿದ್ದಾರೆ ಉದ್ಗೀಥರು ಸ್ವತಂತ್ರವಾಗಿಯೂ ಋಗ್ಭಾಷ್ಯವನ್ನು ಬರೆದಿದ್ದಾರೆ ಇದು ಅಪೂರ್ಣ ರೂಪದಲ್ಲಿ ಸಿಗುತ್ತದೆ ಸ್ಕಂದಸ್ವಾಮಿಗಳು ಗುಜರಾಥಿನ ವಲ್ಲಭೀ ಪ್ರದೇಶದ ನಿವಾಸಿಗಳಾಗಿದ್ದರು ಇವರು ಕ್ರಿ ಶ ೬೩೦ರ ಸುಮಾರಿಗೆ ಇದ್ದಂತೆ ತೋರುತ್ತದೆ ಸ್ಕಂದಸ್ವಾಮಿಗಿಂತಲೂ ಹಿಂದೆ ವೇದಭಾಷ್ಯಕಾರರು ಇದ್ದಿರಬಹುದೆಂದು ಹೇಳಬಹುದು ಯಾಕೆಂದರೆ ಇವರು ಇತರ ಭಾಷ್ಯಕಾರರ ವಿಚಾರಗಳನ್ನೂ ಅಲ್ಲಲ್ಲಿ ತೋರಿಸಿದ್ದಾರೆ[೪] ಆದರೆ, ಆ ಭಾಷ್ಯಗಳು ಸಿಗುವುದಿಲ್ಲ

ಸ್ಕಂದಸ್ವಾಮಿಯ ಬಳಿಕ ಹೆಸರುವಾಸಿಯಾದ ಇನ್ನೊಬ್ಬ ಋಗ್ವೇದ ಭಾಷ್ಯಕಾರರೆಂದರೆ ವೆಂಕಟ ಮಾಧವರು ಇವರ ಭಾಷ್ಯವೂ ಯಾಜ್ಞಿಕ ಪ್ರಕ್ರಿಯೆಗನುಸಾರವಾಗಿದೆ ಇದು ಬಹಳ ಸಂಕ್ಷಿಪ್ತ ಭಾಷ್ಯ ಬ್ರಾಹ್ಮಣ ಗ್ರಂಥಗಳನ್ನು ಅಧ್ಯಯನ ಮಾಡದವರಿಗೆ ವೇದಾರ್ಥವು ಗಮ್ಯವಾಗುವುದಿಲ್ಲವೆಂದು ಇವರ ನಂಬಿಕೆಯಾಗಿತ್ತು ಇವರು ಐತರೇಯ, ಕೌಷೀತಕಿ, ಶತಪಥ, ತೈತ್ತಿರೀಯ, ಕಠ, ತಾಂಡ್ಯ, ಶಾಟ್ಯಾಯನ ಮತ್ತು ಪೈಪ್ಪಲಾದ ಬ್ರಾಹ್ಮಣಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದರು ಇವರು ಕಾತ್ಯಾಯ ಕೃತ ಸರ್ವಾನುಕ್ರಮಣೀ ಜೈಮಿನಿ ಕೃತ ನಿದಾನಸೂತ್ರ ನಿಘಂಟು, ನಿರುಕ್ತ, ಬೃಹದ್ದೇವತಾದಿ ಗ್ರಂಥಗಳ ಉದಾಹರಣೆಗಳನ್ನು ಹೇರಳವಾಗಿ ಕೊಟ್ಟಿದ್ದಾರೆ ವೆಂಕಟ ಮಾಧವರು ಚೋಳರಾಜ ಏಕವೀರನ ಕಾಲದಲ್ಲಿ, ಕ್ರಿ ಶ ೧೧೦೦–೧೨೦೦ರ ಸುಮಾರಿಗೆ, ಕಾವೇರಿ ನದಿಯ ದಕ್ಷಿಣಕ್ಕೆ ಗೋಮಾನ್ ಗ್ರಾಮದ ನಿವಾಸಿಗಳಾಗಿದ್ದರು

ಕ್ರಿ ಶ ೧೩೧೦ರ ಸುಮಾರಿಗೆ ಭಟ್ಟ ಗೋವಿಂದರೆಂಬ ಇನ್ನೊಬ್ಬ ಋಗ್ಭಾಷ್ಯಕಾರರು ಪ್ರಸಿದ್ಧಿಗೆ ಬಂದಿದ್ದರು ಇವರು ಋಗ್ವೇದದ ಅಷ್ಟಮ ಅಷ್ಟಕದ ಮೇಲೆ ಶ್ರುತಿ ವಿಕಾಸವೆಂಬ ಭಾಷ್ಯವನ್ನು ಬರೆದಿದ್ದಾರೆ ಇವರು ಸಂಪೂರ್ಣ ಋಗ್ವೇದದ

---

[೩] ಕೇಚಿತ್ತು—ವಿಶ್ವಸ್ಮಿತ ಶಬ್ದಃ ಸ್ಥಾವರವಚನಃ ಜಗದಿತ್ಯೇತೇನ ಸಹ ಸಮುಚ್ಚೀಯತೇ ಸ್ಥಾವರಂ ಜಂಗಮಂ ಚ ಬುಧ್ಯತಾಮಿತಿ–ಏವಂ ವ್ಯಾಚಕ್ಷತೇ ॥ [ಋಗ್ವೇದ ಅಷ್ಟಕ ೪ ಅಧ್ಯಾಯ ೭, ವರ್ಗ ೩೫ ಮಂತ್ರ ೪]

[೪] ಅಧಿಯಜ್ಞ ವಿಷಯಂ ಸ್ಕಂದಾದಿ ಭಾಷ್ಯಂ । ನಿರುಕ್ತಮಧಿದೈವತವಿಷಯಂ । ಇದಂ ತ್ವ ಭಾಷ್ಯಮಧ್ಯಾತ್ಮ ವಿಷಯಮಿತಿ । ನ ಚ ಭಿನ್ನವಿಷಯಾಣಾಂ ವಿರೋಧಃ । ಅಸ್ಯ ಭಾಷ್ಯಸ್ಯ ಮೂಲಂ ವಿಷ್ಣುಧರ್ಮೋತ್ತರಂ ॥ [ಆತ್ಮಾನಂದರು ಭಾಷ್ಯಾರಂಭದಲ್ಲಿ]

ಭಾಷ್ಯವನ್ನು ಬರೆದಿದ್ದಾರೆ ಎಂದು ಕೆಲವರು ಹೇಳುತ್ತಾರೆ. ಆದರೆ ಇಷ್ಟರ ತನಕ ಈ ಭಾಷ್ಯವು ಕಂಡುಬರಲಿಲ್ಲ. ಭಟ್ಟ ಗೋವಿಂದರು ಕೂಡ ಆಧಿಯಜ್ಞ ಅರ್ಥವನ್ನು ಮುಂದಿಟ್ಟುಕೊಂಡು ಭಾಷ್ಯ ಬರೆದಿದ್ದಾರೆ.

ಭಟ್ಟ ಗೋವಿಂದರಂತೆ ಭಿಕ್ಷ್ಮಣ, ಧಾನುಷ್ಕಯಜ್ವಾ, ಆನಂದತೀರ್ಥ, ಜಯ ತೀರ್ಥ, ರಾಘವೇಂದ್ರ ಯತಿ, ಆತ್ಮಾನಂದ, ಸಾಯಣ, ಮುದ್ಗಲ, ಚತುರ್ವೇದಸ್ವಾಮಿ, ಭರತಸ್ವಾಮಿ, ವರದರಾಜ, ದೇವಸ್ವಾಮಿ, ಭಟ್ಟಭಾಸ್ಕರ, ಉವ್ವಟ, ಹರದತ್ತಾಚಾರ್ಯ, ಸುದರ್ಶನಸೂರಿ ಮೊದಲಾದ ಅನೇಕ ಮಂದಿ ವೇದಭಾಷ್ಯಕಾರರ ಹೆಸರನ್ನು ಕೇಳು ತ್ತೇವೆ. ಇವರಲ್ಲಿ ಕೆಲವು ಭಾಷ್ಯಕಾರರು ಮಾತ್ರ ವಿಶೇಷ ಗಮನಾರ್ಹರಾಗಿದ್ದಾರೆ. ಇತರರ ಭಾಷ್ಯಗಳಲ್ಲಿ ಮಹತ್ವಪೂರ್ಣವಾದ ಮಾತುಗಳೇನೂ ಇಲ್ಲ.

ಆನಂದತೀರ್ಥರು ಋಗ್ವೇದದ ಪ್ರಥಮ ನಲ್ವತ್ತು ಸೂಕ್ತಗಳಿಗೆ ಭಾಷ್ಯವನ್ನು ಬರೆದಿದ್ದಾರೆ. ಇವರ ಭಾಷ್ಯವು ಶ್ಲೋಕಬದ್ಧವಾಗಿದೆ. ಆನಂದತೀರ್ಥರು ವೈಷ್ಣವ ಸಂಪ್ರದಾಯಕ್ಕೆ ಸೇರಿದವರಾಗಿದ್ದರಲ್ಲದೆ ದ್ವೈತವಾದಿಗಳಾಗಿದ್ದರು. ನಾರಾಯಣನೇ ವೇದಗಳ ಮುಖ್ಯ ಪ್ರತಿಪಾದ್ಯ ವಿಷಯವೆಂದು ಇವರ ನಂಬಿಗೆಯಾಗಿತ್ತು. ಜಯ ತೀರ್ಥರು ಈ ಭಾಷ್ಯಕ್ಕೆ ಟೀಕೆಯನ್ನು ಬರೆದಿದ್ದಾರೆ. ಮಧ್ವ ಸಂಪ್ರದಾಯದ ರಾಘ ವೇಂದ್ರ ಯತಿಗಳು ಆನಂದತೀರ್ಥರ ವೇದಭಾಷ್ಯದ ಮೇಲೆ ಸ್ವತಂತ್ರ ವ್ಯಾಖ್ಯಾನವನ್ನು ಬರೆದಿದ್ದಾರೆ. ಆನಂದತೀರ್ಥರನ್ನು ಪೂರ್ಣಪ್ರಜ್ಞ, ಮಧ್ವ, ಆನಂದತೀರ್ಥ ಭಗವ ತ್ಪಾದಾಚಾರ್ಯ ಇತ್ಯಾದಿ ಹೆಸರುಗಳಿಂದಲೂ ಕರೆಯುತ್ತಿದ್ದರು. ಕ್ರಿ.ಶ. ೧೧೯೭ರಿಂದ ೧೨೭೭ರ ತನಕ ಇವರ ಜೀವನಕಾಲವಾಗಿತ್ತು. ಇವರ ಭಾಷ್ಯವು ಅಧ್ಯಾತ್ಮಪರವಾಗಿದೆ. ಆದರೆ, ಮೇಲೆ ಹೇಳಿದಂತೆ, ಇಲ್ಲಿ ಸಾಂಪ್ರದಾಯಿಕತೆಯ ಪ್ರಭಾವವು ಸ್ಪಷ್ಟವಾಗಿರುವುದ ರಿಂದ ಇದು ಆರ್ಷ ಪರಂಪರೆಯಿಂದ ದೂರ ಸರಿದಿದೆ ಎಂದು ಸ್ಪಷ್ಟವಾಗುತ್ತದೆ.

ಆತ್ಮಾನಂದ [ಕ್ರಿ.ಶ. ಸುಮಾರು ೧೨೦೦–೧೩೦೦]ರು ಋಗ್ವೇದದ ಅಸ್ಯವಾಮೀಯ ಸೂಕ್ತದ ಭಾಷ್ಯವನ್ನು ಬರೆದಿದ್ದಾರೆ. ಇದೂ ಅಧ್ಯಾತ್ಮಪರ ವ್ಯಾಖ್ಯೆಯಾಗಿದೆ. ಆತ್ಮಾ ನಂದರು ಸ್ಕಂದ, ಭಾಸ್ಕರ ಮೊದಲಾದ ವೇದಾಚಾರ್ಯರ ಉದಾಹರಣೆಗಳನ್ನು ಕೊಟ್ಟಿ ದ್ದಾರೆ. ತಮ್ಮ ಭಾಷ್ಯದ ಆಧಾರವು ವಿಷ್ಣುಧರ್ಮೋತ್ತರವೆಂದು ಇವರು ತಾವೇ ಹೇಳಿದ್ದಾರೆ.[೫] ಆನಂದತೀರ್ಥರಂತೆ ಆತ್ಮಾನಂದರೂ ಸಾಂಪ್ರದಾಯವಾದಿಗಳಾಗಿದ್ದರು. ಇವರು ಶಂಕರಾಚಾರ್ಯರು ಸ್ಥಾಪಿಸಿದ ಅದ್ವೈತಮತಕ್ಕೆ ಸೇರಿದವರಾಗಿದ್ದರು.

ಅರ್ವಾಚೀನ ವೇದಭಾಷ್ಯಕಾರರಲ್ಲಿ ಸಾಯಣಾಚಾರ್ಯರು [ಕ್ರಿ.ಶ. ೧೩೧೫– ೧೩೮೭] ವಿಶೇಷ ಉಲ್ಲೇಖನೀಯರಾಗಿದ್ದಾರೆ. ಇವರು ವಿಜಯ ನಗರದ ರಾಜರಾದ ಹರಿಹರ ಮತ್ತು ಬುಕ್ಕರ ಮಂತ್ರಿಗಳಾಗಿದ್ದರು. ಮಂತ್ರಿಪದದಲ್ಲಿದ್ದುಕೊಂಡು ಇಷ್ಟೊಂದು ವಿಪುಲ ಗ್ರಂಥರಾಶಿಯ ಸೃಜನೆ ಮಾಡಬೇಕಾದರೆ ಇವರು ಅಸಾಮಾನ್ಯ

---

[೫] ಅತ್ರ ಚತ್ವಾರೋ ವೇದವಿಷಯಾಃ ಸಂತಿ ವಿಜ್ಞಾನಕರ್ಮೋಪಾಸನಾ ಜ್ಞಾನಕಾಂಡಭೇದಾತ್ । ತತ್ರಾದಿಮೋ ವಿಜ್ಞಾನವಿಷಯೋಹಿ ಸರ್ವೇಭ್ಯೋ ಮುಖ್ಯೋಽಸ್ತಿ । ತಸ್ಯ ಪರಮೇಶ್ವರಾ ದಾರಭ್ಯ ತೃಣ ಪರ್ಯಂತ ಪದಾರ್ಥೇಷು ಸಾಕ್ಷಾದ್ ಬೋಧಾನ್ವಯತ್ವಾತ್ । ತತ್ರಾಪೀಶ್ವ ರಾನುಭವೋ ಮುಖ್ಯೋಽಸ್ತಿ । ಕುತಃ? ಅತ್ರೈವ ಸರ್ವೇಷಾಂ ವೇದಾನಾಂ ತಾತ್ಪರ್ಯ ಮಸ್ತೀಶ್ವರಸ್ಯ ಖಲು ಸರ್ವೇಭ್ಯಃ ಪದಾರ್ಥೇಭ್ಯಃ ಪ್ರದಾನತ್ವಾತ್ । [ಋಗ್ವೇದಾದಿ ಭಾಷ್ಯಭೂಮಿಕಾ, ವೇದವಿಷಯ ವಿಚಾರಃ].

ಪಂಡಿತರೇ ಆಗಿದ್ದಿರಬೇಕು ಲೇಖನಕಾರ್ಯದಲ್ಲಿ ಸಹಾಯಕ್ಕಾಗಿ ಇವರು ತಮ್ಮ ಕೈಕೆಳಗೆ ಪಂಡಿತರನ್ನು ನೇಮಕಮಾಡಿರುವುದು ಸಾಯಣಾಚಾರ್ಯರ ಭಾಷ್ಯವು ಆಧಿಯಾಜ್ಞಿಕ ಪ್ರಕ್ರಿಯೆಗನುಸಾರವಾಗಿದೆ ಸ್ಕಂದಸ್ವಾಮಿ ನಾರಾಯಣ ಉದ್ಗೀಥ ಮೊದಲಾದ ಪೂರ್ವ ವೇದಾಚಾರ್ಯರ ಭಾಷ್ಯಗಳಿಂದ ಇವರು ತುಂಬಾ ಸಹಾಯತೆಯನ್ನು ಪಡೆದಿದ್ದಾರೆ ಸಾಯಣಾಚಾರ್ಯರು ಕೃಷ್ಣಯಜುರ್ವೇದದ ಬೋಧಾಯನ ಶಾಖೆಗೆ ಸೇರಿದವರು

ಸಾಯಣಾಚಾರ್ಯರು ಋಗ್ವೇದ ಸಂಹಿತೆ ಶುಕ್ಲಯಜುರ್ವೇದದ ಕಾಣ್ವಸಂಹಿತೆ, ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಯ ಸಂಹಿತೆ ಸಾಮವೇದದ ಸಂಹಿತೆ ಮತ್ತು ಅಥರ್ವವೇದದ ಸಂಹಿತೆಗಳ ಭಾಷ್ಯಗಳನ್ನು ಬರೆದಿದ್ದಾರೆ ಈ ರೀತಿ ನಾಲ್ಕೂ ವೇದಗಳಿಗೆ ಭಾಷ್ಯ ಬರೆದಿರುವುದರಿಂದ ಇವರಿಗೆ ತುಂಬಾ ಖ್ಯಾತಿಯು ಒದಗಿತು ಇಷ್ಟು ಮಾತ್ರವಲ್ಲದೆ ಸಾಯಣಾಚಾರ್ಯರು ತೈತ್ತಿರೀಯ ಬ್ರಾಹ್ಮಣ ಆರಣ್ಯಕ ಮತ್ತು ಉಪನಿಷತ್ತು ಐತರೇಯ ಬ್ರಾಹ್ಮಣ ಮತ್ತು ಆರಣ್ಯಕ ಶತಪಥ ಬ್ರಾಹ್ಮಣ ತಾಂಡ್ಯ ಷಡ್ವಿಂಶ ಸಾಮವಿಧಾನ ಆರ್ಷೇಯ ದೇವತಾಧ್ಯಾಯ ವಂಶ ಮೊದಲಾದ ಬ್ರಾಹ್ಮಣ ಇತ್ಯಾದಿ ಗ್ರಂಥಗಳಿಗೂ ವ್ಯಾಖ್ಯೆಗಳನ್ನು ಬರೆದಿದ್ದಾರೆ

ಸಾಯಣಾಚಾರ್ಯರು ಪ್ರತಿಯೊಂದು ವೇದಭಾಷ್ಯಕ್ಕೂ ಭೂಮಿಕೆಯನ್ನು ಬರೆದಿದ್ದಾರೆ ಇವುಗಳಲ್ಲಿ ಋಗ್ವೇದ ಭಾಷ್ಯಭೂಮಿಕೆಯು ಅತ್ಯಂತ ಮಹತ್ವಪೂರ್ಣವಾಗಿದೆ ಇದರಲ್ಲಿ ವೈದಿಕ ಜ್ಞಾನಕ್ಕೆ ಸಂಬಂಧಪಟ್ಟ ಅನೇಕ ಮುಖ್ಯ ಪ್ರಶ್ನೆಗಳನ್ನು ಚರ್ಚೆ ಮಾಡಿ ಸಮರ್ಪಕವಾದ ಉತ್ತರಗಳನ್ನು ಕೊಡಲು ಪ್ರಯತ್ನಮಾಡಿದ್ದಾರೆ ವೇದಗಳ ಲಕ್ಷಣ ವೇದಗಳು ಯಾವ ರೀತಿಯಲ್ಲಿ ಸ್ವತಃ ಪ್ರಮಾಣವಾಗಿವೆ ವೇದಗಳು ಹೇಗೆ ಅಪೌರುಷೇಯಗಳು ವೇದಾಂಗಗಳ ಉಪಯೋಗಿತೆ ಇತ್ಯಾದಿ ವಿಷಯಗಳನ್ನು ವಿಸ್ತಾರವಾಗಿ ಚರ್ಚೆ ಮಾಡಿದ್ದಾರೆ ಅಧಿಕಾಂಶ ಪಾಶ್ಚಾತ್ಯ ವಿದ್ವಾಂಸರು ಸಾಯಣ ಭಾಷ್ಯವನ್ನು ಅನುಸರಿಸಿ ಭಾಷ್ಯಗಳನ್ನು ಬರೆದಿದ್ದಾರೆ

ಸಾಯಣಾಚಾರ್ಯರ ಬಳಿಕ ಬಂದ ಮುದ್ಗಲ ಚತುರ್ವೇದಸ್ವಾಮಿ, ಭಟ್ಟ ಭಾಸ್ಕರ ಉವ್ವಟ ಹರದತ್ತಾದಿ ಋಗ್ವೇದ ಭಾಷ್ಯಕಾರರಲ್ಲಿ ತಮ್ಮದೇ ಆದ ವಿಶೇಷತೆ ಏನೂ ಇಲ್ಲ ಆದುದರಿಂದ ಅವರ ವಿಷಯದಲ್ಲಿ ಚರ್ಚೆ ಅನಾವಶ್ಯಕ ಆದರೆ ಕ್ರಿ ಶ ೧೮೨೪–೧೮೮೩ರ ಸಮಯದಲ್ಲಿ ಪ್ರಸಿದ್ಧಿಗೆ ಬಂದ ಸ್ವಾಮಿ ದಯಾನಂದ ಸರಸ್ವತಿಯವರು ವಿಶೇಷ ಉಲ್ಲೇಖನೀಯರಾಗಿದ್ದಾರೆ

ಸ್ವಾಮಿ ದಯಾನಂದರು, ಗುಜರಾಥ ರಾಜ್ಯದ ಮೋರವೀ ಜಿಲ್ಲೆಯ ಟಂಕಾರ ಗ್ರಾಮದಲ್ಲಿ ಒಂದು ಸಂಪನ್ನ ಔದೀಚ್ಯ ಬ್ರಾಹ್ಮಣಕುಲದಲ್ಲಿ ಜನಿಸಿದರು ಇವರ ಬಾಲ್ಯಕಾಲದ ಹೆಸರು ಮೂಲಶಂಕರನೆಂದಾಗಿತ್ತು ಇವರು ಸಾಮವೇದಿಗಳಾಗಿದ್ದರೂ, ರುದ್ರಾಧ್ಯಾಯ ಪಾಠವನ್ನು ಕಲಿತು ಯಜುರ್ವೇದವನ್ನು ಅಧ್ಯಯನ ಮಾಡಿದರು ಮಥುರೆಯಲ್ಲಿ ನೇತ್ರಹೀನರಾದರೂ ಪ್ರಜ್ಞಾಚಕ್ಷು ಎಂದು ಖ್ಯಾತಿ ಪಡೆದ, ಸ್ವಾಮಿ ವಿರಜಾನಂದರ ಆಶ್ರಮದಲ್ಲಿ ಋಷಿಪ್ರಣಾಲಿಗನುಸಾರವಾಗಿ ವ್ಯಾಕರಣಾದಿಗಳನ್ನು ಕಲಿತು ವೇದಗಳ ಗಂಭೀರ ಅಧ್ಯಯನ ಮಾಡಿದರು ಸೃಷ್ಟಿಯ ಪ್ರಾರಂಭದಿಂದ ಪಾಂಡವರ ಕಾಲದ ತನಕ ಸಂಪೂರ್ಣ ಭೂಮಂಡಲದ ಮೇಲೆ ಭಾರತೀಯ ಆರ್ಯ ರಾಜರ ಸಾರ್ವಭೌಮ ಚಕ್ರವರ್ತಿ ರಾಜ್ಯವಿತ್ತು ಭಾರತವನ್ನು ಕೆಲವರು ಚಿನ್ನದ ಗಣಿ ಎಂದೂ,

ಇನ್ನು ಕೆಲವರು ಸ್ಪರ್ಶಮಣಿ ಎಂದೂ ಕರೆಯುತ್ತಿದ್ದರು. ಇದಕ್ಕೆ ಇಲ್ಲಿಯ ಐಶ್ವರ್ಯವೇ ಕಾರಣವಾಗಿತ್ತು. ವಿದ್ಯೆಯ ದೃಷ್ಟಿಯಲ್ಲಿ ಭಾರತವು ಜಗದ್ಗುರುವೆಂದು ಪ್ರಸಿದ್ಧವಾಗಿತ್ತು. ಪ್ರಪಂಚದ ಬೇರೆ ಬೇರೆ ದೇಶಗಳಿಂದ ಜನರು ಇಲ್ಲಿಗೆ ಬಂದು ವಿದ್ಯೆ, ಸಂಸ್ಕೃತಿ ಸಭ್ಯತೆ ಇತ್ಯಾದಿಗಳನ್ನು ಕಲಿತುಕೊಂಡು ಹೋಗುತ್ತಿದ್ದರು. ಆದರೆ, ಸ್ವಾಮಿ ದಯಾನಂದರ ಕಾಲದಲ್ಲಿ ಭಾರತದಲ್ಲಿ ಆಂಗ್ಲ ಶಾಸನವಿತ್ತು. ಭಾರತೀಯರು ದಾಸರಾಗಿದ್ದರು. ದೇಶದಲ್ಲಿ ದಾರಿದ್ರ್ಯವು ತಲೆದೋರಿತ್ತು. ಅಜ್ಞಾನ, ಅಂಧವಿಶ್ವಾಸ, ಸಾಂಪ್ರದಾಯಿಕ ಕಲಹ, ಜಾತಿಭೇದಗಳ ಜಗಳ, ಪಲಾಯನವಾದ, ವಾಮಮಾರ್ಗ, ನಾಸ್ತಿಕತೆ, ಸ್ತ್ರೀ ಶೂದ್ರರ ದೈನ್ಯತೆ, ಅಧರ್ಮ ಮತ್ತು ವಿದೇಶೀ ಮತಗಳ ಪ್ರಚಾರ, ಇತ್ಯಾದಿಗಳಿಂದ ಭಾರತೀಯ ಜನತೆಯು ದುರ್ಗತಿಗೆ ಈಡಾಗಿತ್ತು. ಇದಕ್ಕೆ ಇತರರ ದೃಷ್ಟಿಯಲ್ಲಿ ಬೇರೆ ಬೇರೆ ಕಾರಣಗಳಿದ್ದರೂ, ದಯಾನಂದರ ದೃಷ್ಟಿಯಲ್ಲಿ ಒಂದೇ ಒಂದು ಮುಖ್ಯ ಕಾರಣವಾಗಿತ್ತು. ಅದೇನೆಂದರೆ, ವೇದಗಳಲ್ಲಿ ಅಪ್ರವೃತ್ತಿ.

ಮಹಾಭಾರತದ ಕಾಲದಿಂದಲೇ ಜನರಲ್ಲಿ ವೇದಗಳ ಕಡೆಗೆ ಉಪೇಕ್ಷಾ ಭಾವನೆಯು ಉದಯವಾಗಿತ್ತು. ಜಾತಿಭೇದ, ಉಚ್ಚನೀಚ ಭಾವನೆ, ಸ್ವಾರ್ಥ, ಅರ್ಥ ಪ್ರಧಾನ ರಾಜನೀತಿ, ಪಕ್ಷಪಾತ, ಪ್ರಮಾದ, ಅಭಿಮಾನ, ಅನ್ಯಾಯ ಇತ್ಯಾದಿಗಳು ಹರಡಿದ್ದುವು. ವೇದಗಳ ವಿದ್ವಾಂಸರು ಕಡಿಮೆಯಾಗುತ್ತಾ ಬಂದರು. ಋಷಿ ಪ್ರಣಾಲಿಯ ಶಿಕ್ಷಣದ ಪ್ರಚಾರವೂ ಕಡಿಮೆಯಾಗುತ್ತಾ ಬಂತು. ಅನಾರ್ಷ ಪುರಾಣಗಳು ಉತ್ಪನ್ನವಾದುವು. ಸ್ತ್ರೀಶೂದ್ರರು ವೇದಗಳನ್ನು ಓದಬಾರದೆಂದಾಯಿತು. ವೇದಗಳಲ್ಲಿ ಹಿಂಸೆ, ಇತಿಹಾಸ, ಜಾತಿಭೇದ, ಅಶ್ಲೀಲತೆ, ಮೂರ್ತಿಪೂಜೆ ಇತ್ಯಾದಿ ವಿಚಾರಗಳ ಆರೋಪಣೆಯಾಯಿತು. ಅನೇಕೇಶ್ವರವಾದ, ಮಾಯಾವಾದ, ಇತ್ಯಾದಿ ಅವೈದಿಕ ವಾದಗಳ ಪ್ರಚಾರವಾಯಿತು. ಯಜ್ಞದ ಬಹಳ ಸಂಕೀರ್ಣ ಅರ್ಥವು ಬಳಕೆಯಲ್ಲಿ ಬಂತು. ಗೌತಮ ಬುದ್ಧನು ಬ್ರಾಹ್ಮಣರಲ್ಲಿ ವಿಚಾರಿಸಿದನಂತೆ: ಯಜ್ಞದಲ್ಲಿ ಪಶುಗಳನ್ನು ಬಲಿ ಕೊಡಬೇಕೆಂದು ಯಾರು ಹೇಳುತ್ತಾರೆ? ವೇದಗಳು ಹೇಳುತ್ತವೆ ಎಂದು ಬ್ರಾಹ್ಮಣರು ಉತ್ತರವಿತ್ತರು. ವೇದಗಳಲ್ಲಿ, ನಿರ್ದೋಷ ಪಶುಗಳನ್ನು ಬಲಿ ಕೊಡಬೇಕೆಂದು ಬರೆದಿದೆಯಾದರೆ, ಆ ವೇದಗಳು ನಮಗೆ ಬೇಡ, ಅವು ನಮಗೆ ಮಾನ್ಯವಲ್ಲ, ಎಂದು ವೇದಗಳ ಜ್ಞಾನವಿಲ್ಲದ ಗೌತಮ ಬುದ್ಧನು ಘೋಷಣೆ ಮಾಡಿದನು. ವೇದಗಳು ಪರಮಾತ್ಮನ ವಾಣಿ ಎಂದು ಬ್ರಾಹ್ಮಣರು ಹೇಳಿದರು. ಬಡ ಪಶುಗಳ ವಧೆ ಮಾಡಬೇಕೆಂದು ಹೇಳುವ ನಿರ್ದಯ ಪರಮಾತ್ಮನೂ ನಮಗೆ ಮಾನ್ಯನಲ್ಲ ಎಂದು ಬುದ್ಧನು ಸಾರಿದನು. ಹೀಗೆ, ಬ್ರಾಹ್ಮಣರ ಅಜ್ಞಾನದಿಂದಾಗಿ ಗೌತಮ ಬುದ್ಧನು ವೇದವಿರೋಧಿಯಾದನು, ನಾಸ್ತಿಕನಾದನು. ಬೌದ್ಧಧರ್ಮದ ಪ್ರಚಾರವಾದಂತೆ ವೇದ ವಿದ್ಯೆಯೂ ಲೋಪವಾಗುತ್ತಾ ಬಂತು. ಸ್ವಾಮೀ ದಯಾನಂದರ ಕಾಲದಲ್ಲಿ, ಜನರು ವೇದಗಳನ್ನು ಯಾರೋ ರಾಕ್ಷಸರು ಪಾತಾಳಕ್ಕೆ ಕೊಂಡುಹೋಗಿ ಅಡಗಿಸಿಟ್ಟಿದ್ದಾರೆ ಎಂದು ಹೇಳುತ್ತಿದ್ದರು. ನಾಲ್ಕೂ ವೇದಗಳೂ ಕಂಠಸ್ಥವಾಗಿದ್ದವರೂ, ಕಸ್ತೂರಿಯ ಹೊರೆಯನ್ನು ಒಯ್ಯುವ ಕತ್ತೆಗಳಂತೆ, ವೇದಗಳ ಮರ್ಮವನ್ನು ತಿಳಿಯಲು ಅಸಮರ್ಥರಾಗಿದ್ದರು. ಇಂತಹ ಪರಿಸ್ಥಿತಿಯಲ್ಲಿ, ಸ್ವಾಮೀ ದಯಾನಂದರು ಹುಟ್ಟಿದರು. ಋಷಿ ಗ್ರಂಥಗಳ ಅಧ್ಯಯನ, ಸ್ವಾಮೀ ವಿರಜಾನಂದರ ಮಾರ್ಗದರ್ಶನ, ಪರಮಾತ್ಮನ ಮೇಲೆ ಅಗಾಧ ಶ್ರದ್ಧೆ, ಪವಿತ್ರ ಜೀವನ, ಅಖಂಡ ಬ್ರಹ್ಮಚರ್ಯ, ಯೋಗಸಾಧನೆ, ಸೂಕ್ಷ್ಮ

ಬುದ್ಧಿ ಮತ್ತು ಜಗತ್ತಿನ ಕಲ್ಯಾಣದ ಭಾವನೆ ಇವುಗಳಿಂದಾಗಿ ದಯಾನಂದರಿಗೆ ವೇದ ಮಂತ್ರಗಳು ಸುಗ್ರಾಹ್ಯವಾಗಿಯೂ ಅತ್ಯಂತ ರೋಚಕವಾಗಿಯೂ ಕಂಡುಬಂದುವು ಈಶ್ವರೀಯ ವಾಣಿ ವೇದಗಳಿಂದಲೇ ಪ್ರಪಂಚದ ಕಲ್ಯಾಣವಾಗಬಹುದಲ್ಲದೆ ಇದಕ್ಕೆ ಬೇರೆ ಉಪಾಯವೇ ಇಲ್ಲವೆಂದು ಅವರಿಗೆ ಮನಗಂಡಿತು ಆದುದರಿಂದ ಒಂದು ಕಡೆಯಲ್ಲಿ ಸುಪ್ತ ಭಾರತೀಯ ಆತ್ಮವನ್ನು ಎಚ್ಚರಿಸುವ ಕಾರ್ಯ ಇನ್ನೊಂದು ಕಡೆಯಲ್ಲಿ ಅಂಧವಿಶ್ವಾಸ, ಕಾಳುರೂಢಿ ಅವಿದ್ಯೆ ಮತ್ತು ಅಜ್ಞಾನದಿಂದ ಜನತೆಯನ್ನು ಬಿಡುಗಡೆ ಮಾಡುವ ಕಾರ್ಯ, ಮತ್ತೊಂದು ಕಡೆಯಲ್ಲಿ ಭಾರತವನ್ನು ವಿದೇಶಿ ಶಾಸನದಿಂದ ಮುಕ್ತ ಮಾಡಲು ಪ್ರಯಾಸ ಮತ್ತು ಮಗುದೊಂದು ಕಡೆಯಲ್ಲಿ ವಿರೋಧಿಗಳನ್ನು ಎದುರಿಸುವ ಕೆಲಸ, ಇತ್ಯಾದಿಗಳ ನಡುವೆ ಸ್ವಾಮಿ ದಯಾನಂದರು ವೇದಭಾಷ್ಯದ ಭೂಮಿಕೆ ವೇದಾಂಗಗಳ ಸಂಪಾದನೆ ಸತ್ಯಾರ್ಥ ನಿರ್ಣಯಕ್ಕೆ ಸತ್ಯಾರ್ಥಪ್ರಕಾಶದ ರಚನೆ, ವೇದಗಳ ಭಾಷ್ಯಗಳನ್ನೂ ಬರೆದರು

ಸ್ವಾಮಿ ದಯಾನಂದರು ತಮ್ಮ ಭಾಷ್ಯದಲ್ಲಿ ತ್ರಿವಿಧ ಪ್ರಕ್ರಿಯೆಗಳನ್ನು ಸ್ವೀಕರಿಸಿದ್ದಾರೆ ಆದರೂ ಆಧ್ಯಾತ್ಮಿಕ ಪ್ರಕ್ರಿಯೆಗೆ ವಿಶೇಷ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ[೬]

ಇವರ ಇನ್ನೊಂದು ಅತ್ಯಂತ ಮಹತ್ವಪೂರ್ಣವಾದ ಕಾರ್ಯವೇನೆಂದರೆ ಇವರು ಉಕ್ತ ಮೂರು ಪ್ರಕಾರದ ಪ್ರಕ್ರಿಯೆಗಳಲ್ಲದೆ, ಒಂದು ನಾಲ್ಕನೆಯ ಪ್ರಕ್ರಿಯೆಯನ್ನೂ ಪ್ರಾರಂಭ ಮಾಡಿದರು ಅದೇನೆಂದರೆ ಲೌಕಿಕ ಪ್ರಕ್ರಿಯೆ ಮಾನವ ಜೀವನದಲ್ಲಿ ವೇದಜ್ಞಾನವು ಯಾವ ರೀತಿಯಲ್ಲಿ ಉಪಯುಕ್ತವಾಗಿದೆ ಎಂಬುದನ್ನು ಈ ಪ್ರಕ್ರಿಯೆಯಿಂದ ತಿಳಿದುಕೊಳ್ಳಬಹುದು ಯಾವ ರೀತಿಯಲ್ಲಿ ಪರಮಾತ್ಮನು ಜಲ ವಾಯು

---

ವಾಚಕರು ಗಮನಿಸಬೇಕಾದ ವಿಷಯ —

ಪುಟ ೧೨೪ರಲ್ಲಿ ಟಿಪ್ಪಣಿ [೨]ಕ್ಕೆ ನಿರುಕ್ತ ಅಧ್ಯಾಯ ೭ ಕಾಂಡ ೫ ಎಂದು ತಿಳಿಯಬೇಕು

ಅದೇ ಪುಟ ೧೨೪ರಲ್ಲಿ –[೨] ನ ಛಂದಃ। ಅನುಪಯುಜ್ಯಮಾನವವಚನತ್ವಾದಿತಿ॥ –ಇದನ್ನು ಪುಟ ೧೨೫ರಲ್ಲಿ ಬರುವ ವೇದಾರ್ಥಕ್ಕೂ ಛಂದೋಜ್ಞಾನಕ್ಕೂ ಏನೂ ಸಂಬಂಧವಿಲ್ಲ —ಎಂಬುದರ ಟಿಪ್ಪಣಿ [೩]ಕ್ಕೆ ಸಂಬಂಧಿಸಿಕೊಂಡು ಓದಬೇಕು

ಪುಟ ೧೨೬ರಲ್ಲಿ ವಿಚಾರಗಳನ್ನೂ ಅಲ್ಲಲ್ಲಿ ತೋರಿಸಿದ್ದಾರೆ ಎಂಬಲ್ಲಿಗೆ [೩]ನೇ ಟಿಪ್ಪಣಿ ಕೇಚಿತ್ತು " ಎಂಬುದನ್ನು ಸಂಬಂಧಿಸಿ ಓದಬೇಕು

ಪುಟ ೧೨೭ರಲ್ಲಿ ಬರುವ ತಮ್ಮ ಭಾಷ್ಯದ ಆಧಾರವು ವಿಷ್ಣುಧರ್ಮೋತ್ತರವೆಂದು ಇವರು ತಾವೇ ಹೇಳಿದ್ದಾರೆ —[೫] ಎಂಬಲ್ಲಿಗೆ ಪುಟ ೧೨೪ರಲ್ಲಿ ಬರುವ [೪]ನೇ ಟಿಪ್ಪಣಿ— ಅಧಿಯಜ್ಞ ವಿಷಯಂ ಸ್ಕಂದಾದಿ ಭಾಷ್ಯಂ ಎಂಬುದನ್ನು ಸಂಬಂಧಿಸಿ ಓದಬೇಕು

ಪುಟ ೧೨೭ರಲ್ಲಿ ತಪ್ಪಾಗಿ ಮುದ್ರಿತವಾದ ಟಿಪ್ಪಣಿ [೫] ಅತ್ರಚತ್ವಾರೋ "ಎಂಬುದು ಟಿಪ್ಪಣಿ [೬]ಕ್ಕೆ ಸಂಬಂಧಿಸಿದುದಾಗಿದೆ

[೬] ಅತ್ರ ಚತ್ವಾರೋ ವೇದವಿಷಯಾಃ ಸಂತಿ ವಿಜ್ಞಾನಕರ್ಮೋಪಾಸನಾ ಜ್ಞಾನಕಾಂಡಭೇದಾತ್। ತತ್ರಾದಿಮೋ ವಿಜ್ಞಾನವಿಷಯೋ ಹಿ ಸರ್ವೇಭ್ಯೋ ಮುಖ್ಯೋಽಸ್ತಿ। ತಸ್ಯ ಪರಮೇಶ್ವರಾದಾರಭ್ಯ ತೃಣ ಪರ್ಯಂತ ಪದಾರ್ಥೇಷು ಸಾಕ್ಷಾದ್ ಬೋಧಾನ್ವಯತ್ವಾತ್। ತತ್ರಾಪೀಶ್ವರಾನುಭವೋ ಮುಖ್ಯೋಽಸ್ತಿ। ಕುತಃ? ಅತ್ರೈವ ಸರ್ವೇಷಾಂ ವೇದಾನಾಂ ತಾತ್ಪರ್ಯಮಸ್ತೀಶ್ವರಸ್ಯ ಖಲು ಸರ್ವೇಭ್ಯಃ ಪದಾರ್ಥೇಭ್ಯಃ ಪ್ರಧಾನತ್ವಾತ್।

[ಋಗ್ವೇದಾದಿ ಭಾಷ್ಯಭೂಮಿಕಾ ವೇದ ವಿಷಯ ವಿಚಾರಃ]

ಪ್ರಕಾಶಾದಿಗಳನ್ನು ಸರ್ವ ಪ್ರಾಣಿಗಳಿಗೂ ಉಪಯೋಗವಾಗುವಂತೆ ಕೊಟ್ಟಿದ್ದಾನೋ ಅದೇ ರೀತಿಯಲ್ಲಿ ವೇದಜ್ಞಾನವನ್ನೂ ಸರ್ವಮನುಷ್ಯರಿಗೂ ಉಪಯೋಗವಾಗುವಂತೆ ದಾನಮಾಡಿದ್ದಾನೆ ಒಂದು ವೇಳೆ ವೇದಜ್ಞಾನವು ಕೇವಲ ಕೆಲವು ಮಂದಿ ಜನರ ಅಥವಾ ವಿಶೇಷ ವ್ಯಕ್ತಿಗಳ ಸಂಪತ್ತು ಎಂದಾದರೆ ಅದರಿಂದ ಎಲ್ಲರ ಕಲ್ಯಾಣವಾಗುವು ದೆಂತು? ಜನರು ಈ ರಹಸ್ಯವನ್ನು ತಿಳಿಯದೆಯೇ ವೇದಪ್ರಚಾರವು ಕ್ಷೀಣವಾಯಿತು ಪ್ರಪಂಚದಲ್ಲಿ ಇಂದು ಹರಡಿರುವ ದುಃಖಕ್ಕೆ ಇದೇ ಕಾರಣ ಸ್ವಾಮಿ ದಯಾನಂದರ ಈ ಲೌಕಿಕ ಪ್ರಕ್ರಿಯೆಯು ಪೂರ್ವ ಪ್ರಸಿದ್ಧ ಪ್ರಕ್ರಿಯೆಗಳಿಗೆ ವಿಪರೀತವಾಗಿಲ್ಲ ಇದು ಅವುಗಳಿಗೆ ಪೂರಕವಾಗಿದೆ ಉದಾಹರಣೆಗಾಗಿ 'ದಸ್ರಾ ಯುವಾಕವಃ ಸುತಾ [ಋಗ್ವೇದ ೧–೩–೩] ಈ ಮಂತ್ರದ ಭಾವಾರ್ಥವನ್ನು ವಿವರಿಸುತ್ತಾ ಪರಮಾತ್ಮನು ಮನುಷ್ಯರಿಗೆ ಉಪದೇಶ ಕೊಡುತ್ತಾನೆ ಏನೆಂದರೆ ಎಲೆ ಮನುಷ್ಯರೇ, ನೀವು ಎಲ್ಲಾ ದುಃಖಗಳನ್ನು ದೂರ ಮಾಡಿ ಸುಖಗಳ ಸಿದ್ಧಿಗೆ ಅಗ್ನಿ ಮತ್ತು ಜಲವನ್ನು ಶಿಲ್ಪವಿದ್ಯೆಯಲ್ಲಿ ಪ್ರಯೋಗಿಸಿ ಅವುಗಳ ಯಥಾಯೋಗ್ಯ ಉಪಯೋಗವನ್ನು ಮಾಡಿಕೊಳ್ಳಬೇಕು ಎಂದು ಬರೆದಿದ್ದಾರೆ ಉತ ಬ್ರುವಂತು ನೋ [ಋಗ್ವೇದ ೧–೪–೫] ಇಲ್ಲಿ ಎಲ್ಲಾ ಮನುಷ್ಯರೂ ಆಪ್ತರೂ ಧಾರ್ಮಿಕರೂ ಆದ ವಿದ್ವಾಂಸರ ಸಂಗವನ್ನು ಮಾಡಿ, ಮೂರ್ಖರ ಸಂಗವನ್ನು ಬಿಟ್ಟು ಸರ್ವತ್ರ ವಿದ್ಯೆಯ ವೃದ್ಧಿ ಅವಿದ್ಯೆಯ ನಾಶ ಮಾನ್ಯ ಶ್ರೇಷ್ಠ ಪುರುಷರ ಸತ್ಕಾರ, ದುಷ್ಟರ ನಾಶ, ಪರಮಾತ್ಮನ ಉಪಾಸನೆ ಮೊದಲಾದ ಶುಭಕರ್ಮಗಳ ವೃದ್ಧಿ ಮತ್ತು ಅಶುಭಕರ್ಮಗಳ ನಾಶ ನಿತ್ಯ ಮಾಡುತ್ತಿರಬೇಕು ಎಂದು ಬರೆದಿದ್ದಾರೆ ಆ ತ್ವೇತಾ ನಿಷೀದತೇಂದಮಭಿ [ಋಗ್ ೧–೫–೧] ಇಲ್ಲಿ "ಎಲ್ಲಿ ತನಕ ಜನರು ಹಠ ಮೋಸ ಮತ್ತು ಅಭಿಮಾನವನ್ನು ಬಿಟ್ಟು ಸತ್ಯ ಮತ್ತು ಪ್ರೀತಿಯಿಂದ ಪರಸ್ಪರ ಮಿತ್ರರಾಗಿ ತನುಮನಧನಗಳಿಂದ ಪರೋಪಕಾರ ಮಾಡಲಿಕ್ಕೆ ಪ್ರಯತ್ನ ಮಾಡುವುದಿಲ್ಲವೋ ಅಲ್ಲಿ ತನಕ ಅವರಿಗೆ ಸುಖ ವಿದ್ಯಾದಿ ಉತ್ತಮ ಗುಣಗಳ ಉನ್ನತಿ ಒದಗಲಿಕ್ಕೆ ಸಾಧ್ಯವೇ ಇಲ್ಲ ಎಂದು ಭಾವಾರ್ಥದಲ್ಲಿ ಬರೆದಿದ್ದಾರೆ ಇಂತಹ ಪ್ರತಿಯೊಬ್ಬ ಮನುಷ್ಯನಿಗೂ ನಿತ್ಯವೂ ಸ್ಮರಣೆಯಲ್ಲಿಟ್ಟುಕೊಳ್ಳಬೇಕಾದ ಉಪದೇಶಗಳನ್ನು ಮಂತ್ರಗಳ ಮೂಲಕ ಸ್ವಾಮೀ ದಯಾನಂದರು ತೋರಿಸಿದ್ದಾರೆ

ಸ್ವಾಮಿ ದಯಾನಂದರು ಮಹಾ ಶಿವಭಕ್ತರೂ ಯೋಗಿಯೂ ಸಾಕ್ಷಾತ್ ಕೃತಧರ್ಮಾ ತಪಸ್ವೀ ನಿಷ್ಪಕ್ಷಪಾತಿ ಪರಮಾತ್ಮನನ್ನು ಸಚ್ಚಿದಾನಂದ ಸರ್ವಜ್ಞ, ಸೃಷ್ಟಿಕರ್ತನೆಂದು ನಂಬಿದ ಮಹರ್ಷಿ ಬ್ರಹ್ಮನಿಂದ ಹಿಡಿದು ಜೈಮಿನಿ ಋಷಿಗಳ ತನಕ ಪ್ರತಿಪಾದಿತ ಸತ್ಯ ಸಿದ್ಧಾಂತಗಳನ್ನು ಸ್ವೀಕರಿಸಿ ಮಹಾ ವಿದ್ವಾಂಸರೂ ಆಗಿದ್ದರು ಸ್ವಾಮಿ ದಯಾನಂದರ ಭಾಷ್ಯದಿಂದ ವಿಕಾಸವಾದದ ಖಂಡನೆಯಾಗುತ್ತದೆ, ವೇದವು ಅಪೌರುಷೇಯವೆಂದು ಸಿದ್ಧವಾಗುತ್ತದೆ ವೈದಿಕ ಶಬ್ದಗಳು ಲೌಕಿಕ ಶಬ್ದಗಳಿಂದ ಭಿನ್ನವಾಗಿವೆ ಎಂದೂ ಗೊತ್ತಾಗುತ್ತದೆ, ವೇದಗಳಲ್ಲಿ ಅನಿತ್ಯ ಇತಿಹಾಸವಿಲ್ಲವೆಂದೂ ತಿಳಿದು ಬರುತ್ತದೆ ವೈದಿಕ ವಿಚಾರಗಳು ಸರ್ವತಂತ್ರ, ಸಾರ್ವಕಾಲಿಕ ಮತ್ತು ಸಾರ್ವದೇಶಿಕ ಸಿದ್ಧಾಂತಗಳ ಪ್ರತಿಪಾದನೆ ಮಾಡುತ್ತವೆ ಹಾಗೂ ವೈದಿಕ ಸಿದ್ಧಾಂತಗಳು ತರ್ಕಕ್ಕೆ ಅನುಕೂಲವಾಗಿ ಇದ್ದು, ವೈಜ್ಞಾನಿಕ ಪರೀಕ್ಷಣೆಗಳಿಂದ ಇವು ಸತ್ಯವೆಂದು ಸಿದ್ಧವಾಗುತ್ತವೆ ಸ್ವಾಮಿ ದಯಾನಂದರ ಭಾಷ್ಯವು ನಿರುಕ್ತದ ಶೈಲಿಯಲ್ಲಿದೆ ಪುರುಷ ವ್ಯತ್ಯಯ

ಕಾಲ ವ್ಯತ್ಯಯ ಇತ್ಯಾದಿ ವೈದಿಕ ಭಾಷೆಯ ವಿಶೇಷತೆಯ ಅರಿವು ದಯಾನಂದರ ಭಾಷ್ಯ ದಿಂದಲೇ ಆಗುತ್ತದೆ ಷಡ್ಜಾದಿ ಸ್ವರಗಳ ಮಹತ್ವವನ್ನು ತೋರಿಸಿದ ಆಧುನಿಕ ವೇದಾಚಾರ್ಯರಲ್ಲಿ ದಯಾನಂದರೇ ಮೊದಲಿನವರು ಯಜ್ಞ ಶಬ್ದದ ವಿಶಾಲ ಅರ್ಥವನ್ನು ದಯಾನಂದರಂತೆ ತೋರಿಸಿದವರು ಬೇರೆ ಇಲ್ಲ ವೇದಭಾಷ್ಯದಲ್ಲಿ ಶ್ಲೇಷಾಲಂಕಾರ ವಾಚಕ ಲುಪ್ತೋಪಮಾಲಂಕಾರಾದಿಗಳ ಸಹಾಯತೆಯನ್ನು ಯಾವ ರೀತಿಯಲ್ಲಿ ಪಡೆಯಬೇಕೆಂದು ಹೇಳಿಕೊಟ್ಟವರು ದಯಾನಂದರು ಇವರು ಪೂರ್ವ ಭಾಷ್ಯಕಾರರಾದ ಸಾಯಣಾದಿ ವಿದ್ವಾಂಸರ ಗುಣಗಳನ್ನು ಸ್ವೀಕರಿಸಿದ್ದಾರೆ ಆದರೆ ದೋಷಗಳನ್ನು ನಿಃಸಂಕೋಚವಾಗಿ ಸಪ್ರಮಾಣವಾಗಿ ಖಂಡಿಸಿದ್ದಾರೆ ಸಾಯಣ ಮಹೀಧರ, ಉವ್ವಟ, ಮಾಧವ ಮೊದಲಾದ ಬಾರತೀಯ ವಿಲ್ಸನ್ ಮೇಕ್ಸ್‌ಮುಲ್ಲರ್ ಮೊದಲಾದ ಪಾಶ್ಚಾತ್ಯ ಪಂಡಿತರ ವೇದಭಾಷ್ಯಗಳಲ್ಲಿ ಕಂಡುಬರುವ ವೇದವಿರುದ್ಧ ವಿಚಾರಗಳನ್ನು ಎತ್ತಿ ತೋರಿಸಿದ್ದಾರೆ

ಸ್ವಾಮಿ ದಯಾನಂದರ ಭಾಷ್ಯವೂ ಸಂಕ್ಷಿಪ್ತವಾಗಿಯೇ ಇದೆ ಇವರ ಭಾಷ್ಯ ದಲ್ಲಿ ಆರ್ಷ ವಿಚಾರದ ಮಾರ್ಗದರ್ಶನ ಮಾತ್ರ ಸಿಗುತ್ತದೆ ಕರ್ಮಕಾಂಡ, ಉಪಾ ಸನಾಕಾಂಡಾದಿಗಳ ವಿಸ್ತೃತ ವ್ಯಾಖ್ಯೆ ಬೇಕೆನ್ನುವವರು ಬ್ರಾಹ್ಮಣಾದಿ ಗ್ರಂಥಗಳನ್ನು ನೋಡಬೇಕೆಂದು ಇವರು ಹೇಳಿದ್ದಾರೆ [೭]

ಸ್ವಾಮೀ ದಯಾನಂದರ ಬಳಿಕ ಪಂ॥ ಶಿವಶಂಕರ ಕಾವ್ಯತೀರ್ಥ ಕ್ಷೇಮಕರಣ ದಾಸ ಚತುರ್ವೇದಿ, ಆರ್ಯಮುನಿ, ಶಿವನಾಥರಾಯ ಅಗ್ನಿಹೋತ್ರೀ ಈ ಮೊದಲಾದ ವಿದ್ವಾಂಸರೂ ಋಗ್ವೇದ ಭಾಷ್ಯವನ್ನು ಬರೆದಿದ್ದಾರೆ ಈ ಭಾಷ್ಯಗಳಲ್ಲಿ ಉಲ್ಲೇಖ ನೀಯ ವಿಶೇಷತೆ ಏನೂ ಇಲ್ಲ ಶ್ರೀ ಅರವಿಂದ ಘೋಷರೂ ಕೆಲವು ಋಚೆಗಳ ವ್ಯಾಖ್ಯೆ ಮಾಡಿದ್ದಾರೆ ಇದು ಆಂಗ್ಲ ಭಾಷೆಯಲ್ಲಿದೆ ಮುಖ್ಯತಃ ಮಹಾಮನಸ್ಸಿನ ಸ್ವರೂಪ ಪ್ರದರ್ಶನ, ಯೋಗದ ವೈಜ್ಞಾನಿಕ ಪರೀಕ್ಷಣ ಮಾನವೋತ್ತರ ಮಹಾ ಮಾನವನ ವ್ಯಕ್ತಿತ್ವ ಸಮಾರ್ಜನಾದಿಗಳ ಅತ್ಯಂತ ಕ್ಲಿಷ್ಟ ಹಾಗೂ ವಿಶ್ಲೇಷಣ ಯುಕ್ತ ನಿರೂಪಣ ಇವರ ಅಸಾಮಾನ್ಯ ವೈಶಿಷ್ಟ್ಯಗಳು ಮನನೀಯ ಇವರ ಶೈಲಿಯೂ ಅತಿ ಕಷ್ಟ ದಿಂದಲೇ ಗ್ರಾಹ್ಯವಾದೀತು ಸುಲಭ ಗ್ರಾಹ್ಯವಾದ ಅಂಶವೆಂದರೆ—"ವೇದಕೋಶದ ಅಂತಿಮ ತತ್ತ್ವ ನಿರ್ಣಯ ಏನೇ ಆಗಿರಲಿ, ವೇದಜ್ಞಾನ ಭಂಡಾರದ ಬಾಗಿಲಿನ ಬೀಗ ತೆರೆಯುವ ಬೀಗದ ಕೈಯನ್ನು ಕೊಟ್ಟವರು ಮಹರ್ಷಿ ದಯಾನಂದರೇ"—ಎಂಬ ಬೃಹದುಚ್ಚ ಘೋಷಣ

---

[೭] ಅತ್ರ ವೇದಭಾಷ್ಯೇ ಕರ್ಮಕಾಂಡಸ್ಯ ವರ್ಣನಂ ಶಬ್ದಾರ್ಥತಃ ಕರಿಷ್ಯತೇ । ಪರಂತ್ವೇ ತೈರ್ವೇದ ಮಂತ್ರೈಃ ಕರ್ಮಕಾಂಡ ವಿನಿಯೋಜಿತೈರ್ಯತ್ರ ಯತ್ರಾಽಗ್ನಿಹೋತ್ರಾದ್ಯಶ್ವಮೇಧಾಂತೇ ಯದ್ಯತ್ ಕರ್ತವ್ಯಂ ತತ್ತದತ್ರ ವಿಸ್ತರತೋ ನ ವರ್ಣಯಿಷ್ಯತೇ । ಕುತಃ? ಕರ್ಮಕಾಂಡಾನು ಷ್ಠಾನಸ್ಯೈತರೇಯ ಶತಪಥ ಬ್ರಾಹ್ಮಣ ಪೂರ್ವಮೀಮಾಂಸಾ ಶ್ರೌತಸೂತ್ರಾದಿಷು ಯಥಾ ರ್ಥಂ ವಿನಿಯೋಜಿತತ್ವಾತ್ । ಪುನಸ್ತತ್ಕಥನೇನಾನೃಷಿಕೃತಗ್ರಂಥವತ್ ಪುನರುಕ್ತ ಪಿಷ್ಟ ಪೇಷಣ ದೋಷಾಪತ್ತೇಶ್ಚೇತಿ । ತಥೈವೋಪಾಸನಾಕಾಂಡಸ್ಯಾಪಿ ಪ್ರಕರಣ ಶಬ್ದಾನುಸಾರತೋ ಹಿ ಪ್ರಕಾಶಃ ಕರಿಷ್ಯತೇ । ಕುತೋಽಸ್ಯೈತ್ರ ವಿಶೇಷಸ್ತು ಪಾತಂಜಲ ಯೋಗಶಾಸ್ತ್ರಾದಿಭಿರ್ವಿಜ್ಞೇಯೋಽಸ್ತೀತ್ಯತಃ । ಏವಮೇವ ಜ್ಞಾನಕಾಂಡಸ್ಯಾಪಿ । ಕುತಃ ಅಸ್ಯ ವಿಶೇಷಸ್ತು ಸಾಂಖ್ಯವೇದಾಂತೋಪನಿಷದಾದಿ ಶಾಸ್ತ್ರಾನುಗತೋ ದ್ರಷ್ಟವ್ಯಃ । ॥

[ಋಗ್ವೇದಾದಿ ಭಾಷ್ಯಭೂಮಿಕಾ ಪ್ರತಿಜ್ಞಾವಿಷಯಃ]

**ಯಜುರ್ವೇದದ ಭಾಷ್ಯಕಾರರು** —ಯಜುರ್ವೇದದ ಮಾಧ್ಯಂದಿನ ಶಾಖೆಯ ಭಾಷ್ಯಕಾರರಲ್ಲಿ ಶೌನಕರು ಅತಿ ಪ್ರಾಚೀನರು ಇವರು ಯಜುರ್ವೇದದ ಮೂವತ್ತೊಂದನೆ ಅಧ್ಯಾಯದ ಪುರುಷಸೂಕ್ತದ ಭಾಷ್ಯ ಬರೆದಿದ್ದಾರೆ ಎಂದು ಉವ್ವಟರು ಹೇಳಿದ್ದಾರೆ ಮುಂದೆ ಹರಿಸ್ವಾಮಿ ಉವ್ವಟ ಗೌರಧರ ರಾವಣ ಮಹೀದರ ಮತ್ತು ದಯಾನಂದರು ಭಾಷ್ಯ ಬರೆದಿದ್ದಾರೆ ಸಾಯಣ ಆನಂದಬೋಧ ಅನಂತಾಚಾರ್ಯ ಕಾಲನಾಥ ಮುರಾರಿ ಮಿಶ್ರ ಹಲಾಯುಧ ಅದಿತ್ಯದರ್ಶನ ದೇವಪಾಲ ಮತ್ತು ಸೋಮಾನಂದ ಪುತ್ರ ಮೊದಲಾದವರು ಕಾಣ್ವಸಂಹಿತೆಗೂ ಕುಂಡಿನ ಭವಸ್ವಾಮಿ ಗುಹದೇವ ಕೌಶಿಕ ಭಟ್ಟಭಾಸ್ಕರ ಕ್ಷುರ ವೆಂಕಟೇಶ ಬಾಲಕೃಷ್ಣ ಹರದತ್ತ ಶತ್ರುಘ್ನ ಮೊದಲಾದವರು ತೈತ್ತಿರೀಯ ಸಂಹಿತೆಗೂ ಭಾಷ್ಯವನ್ನು ಬರೆದಿದ್ದಾರೆ ಸಾಯಣಾಚಾರ್ಯರೂ ಇವಕ್ಕೆ ಭಾಷ್ಯ ಬರೆದಿದ್ದಾರೆ ಮಹೀಧರ ವೆಂಕಟೇಶ, ಅಹೋಬಲ ಹರಿದತ್ತ ಮೊದಲಾದವರ ರುದ್ರಾಧ್ಯಾಯದ ಭಾಷ್ಯವು ಸಿಗುತ್ತದೆ

ಮೇಲೆ ಹೇಳಿದ ಭಾಷ್ಯಕಾರರಲ್ಲಿ ಉವ್ವಟರು ಶುಕ್ಲಯಾಜುಷ ಶಾಖೆಗೆ ಸೇರಿದವರು ಇವರು ರಾಜಾಭೋಜನ ಕಾಲದಲ್ಲಿ [ಕ್ರಿ ಶ ಸುಮಾರು ೧೦೪೨] ಇದ್ದವರೆಂದೂ, ಆನಂದಪುರದ ನಿವಾಸಿಗಳಾಗಿದ್ದರೆಂದೂ ಗೊತ್ತಾಗುತ್ತದೆ ಇವರ ಭಾಷ್ಯವು ಮುಖ್ಯವಾಗಿ ಅಧಿಯಜ್ಞ ಪರವಾಗಿದೆ ಆದರೆ ಕೆಲವು ಕಡೆಗಳಲ್ಲಿ ಅಧ್ಯಾತ್ಮ ವ್ಯಾಖ್ಯೆಯನ್ನೂ ಕೊಟ್ಟಿದ್ದಾರೆ

ಮಹೀಧರರು ಕ್ರಿ ಶ ಸುಮಾರು ೧೬೦೦ಕ್ಕೆ ಸೇರಿದವರು ಇವರು ತಾಂತ್ರಿಕರಾಗಿದ್ದರು ಕಾಶಿಯು ಇವರ ನಿವಾಸಸ್ಥಾನವಾಗಿತ್ತು ಮಹೀದರರು ತಮ್ಮ ಯಜುರ್ವೇದದ ಭಾಷ್ಯಕ್ಕೆ ವೇದದೀಪ ಎಂದು ಹೆಸರಿಟ್ಟಿದ್ದಾರೆ ಇವರ ಭಾಷ್ಯವು ಅಧಿಕಾಂಶ ಉವ್ವಟರ ಭಾಷ್ಯವನ್ನು ಹೋಲುತ್ತದೆ

ಸ್ವಾಮಿ ದಯಾನಂದರ ಯಜುರ್ವೇದ ಭಾಷ್ಯದಲ್ಲಿಯೂ ಅವರ ಋಗ್ವೇದ ಭಾಷ್ಯದ ಎಲ್ಲಾ ವಿಶೇಷತೆಗಳೂ ಇವೆ ಉಳಿದ ಭಾಷ್ಯಕಾರರಲ್ಲಿ ಉಲ್ಲೇಖನೀಯ ವಿಶೇಷತೆಗಳೇನೂ ಇಲ್ಲ ಕಾಣ್ವಸಂಹಿತೆಯ ಭಾಷ್ಯಕಾರರಲ್ಲಿ ಸಾಯಣಭಾಷ್ಯವೇ ಮುಖ್ಯವಾದುದು ಇವರ ಋಗ್ವೇದ ಭಾಷ್ಯದ ವಿಶೇಷತೆಗಳೂ ಇಲ್ಲಿಯೂ ಕಂಡು ಬರುತ್ತವೆ ಇದೇ ಮಾತು ಇವರ ತೈತ್ತಿರೀಯ ಸಂಹಿತೆಯ ಭಾಷ್ಯಕ್ಕೂ ಅನ್ವಯಿಸುತ್ತದೆ ತೈತ್ತಿರೀಯ ಸಂಹಿತೆಯ ಭಾಷ್ಯಕಾರರಲ್ಲಿ ಕುಂಡಿನಾಚಾರ್ಯರೇ ಅತಿ ಪ್ರಾಚೀನರು ಇವರು ಮಹಾಭಾರತ ಕಾಲದ ಒಂದೆರಡು ಶತಮಾನಗಳ ಬಳಿಕದವರೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ

ರುದ್ರಾಧ್ಯಾಯವು ವಾಜಸನೇಯ ಸಂಹಿತೆಯ ಹದಿನೇಳನೇ ಅಧ್ಯಾಯವಾಗಿದೆ ಇದರ ಭಾಷ್ಯ ಬರೆದವರಲ್ಲಿ ಮಹೀಧರರೇ ಅಧಿಕ ಹೆಸರುವಾಸಿಯಾಗಿದ್ದಾರೆ

**ಸಾಮವೇದದ ಭಾಷ್ಯಕಾರರು** —ಸಾಮವೇದದ ಭಾಷ್ಯಕಾರರಲ್ಲಿ ವಿಶೇಷ ಪ್ರಸಿದ್ಧರಾದವರು ಮಾಧವಾಚಾರ್ಯರು ಇವರು ಕ್ರಿ ಶ ಏಳನೆಯ ಶತಮಾನಕ್ಕೆ ಸೇರಿದವರು ಇವರು ತಮ್ಮ ಸಾಮವೇದ ಭಾಷ್ಯವನ್ನು ವಿವರಣ ಎಂದು ಕರೆದಿದ್ದಾರೆ ಇವರ ಬಳಿಕ ಸಾಮವೇದದ ಭಾಷ್ಯ ಬರೆದವರಲ್ಲಿ ಸಾಯಣಾಚಾರ್ಯರೇ ಮುಖ್ಯ ವ್ಯಕ್ತಿಯಾಗಿದ್ದಾರೆ ಶೇಷ ಭಾಷ್ಯಕಾರರಲ್ಲಿ ಬರತ ಸ್ವಾಮಿ ಸೂರ್ಯದೇವಜ್ಞ ಮಹಾಸ್ವಾಮಿ, ಶೋಭಾಕರ, ಗುಣವಿಷ್ಣು ಮೊದಲಾದವರಿದ್ದಾರೆ ಭರತಸ್ವಾಮಿಯುನ್ನು

ಬಿಟ್ಟು ಇತರರ ಭಾಷ್ಯದಲ್ಲಿ ಉಲ್ಲೇಖನೀಯ ವಿಶೇಷತೆ ಏನೂ ಇಲ್ಲ ಭರತ ಸ್ವಾಮಿಯ ಭಾಷ್ಯವು ಸಾಯಣ ಭಾಷ್ಯಕ್ಕಿಂತ ಉತ್ತಮವಾಗಿದೆ ಈ ಭಾಷ್ಯವು ಯಾಜ್ಞಿಕ ಪ್ರಕ್ರಿಯೆಯನ್ನನುಸರಿಸಿಕೊಂಡಿದೆ ಸಾಯಣ ಮತ್ತು ವರತಸ್ವಾಮಿ ಇವರಿಬ್ಬರೂ ತಮ್ಮ ಭಾಷ್ಯದಲ್ಲಿ ವೇದಗಳಲ್ಲಿ ಇತಿಹಾಸವಿದೆಯೆಂಬ ಭ್ರಾಂತಿಯನ್ನು ಪ್ರಕಟಿಸಿದ್ದಾರೆ

ಕೆಲವು ವಿದ್ವಾಂಸರು ಈಗ ಸಿಗುವ ಸಾಮವೇದದ ಸಾಯಣ ಭಾಷ್ಯವು ನಿಜವಾಗಿ ಸಾಯಣಭಾಷ್ಯವಲ್ಲವೆಂದು ಹೇಳುತ್ತಾರೆ ಯಾಕೆಂದರೆ ಈ ಭಾಷ್ಯದಲ್ಲ ಕೆಲವು ಮಂತ್ರಗಳ ಋಗ್ವೇದೀಯ ಪಾಠವಿದೆ ಯಾರೋ ಪಂಡಿತರು ಸಾಯಣರ ಋಗ್ವೇದೀಯ ಭಾಷ್ಯದಿಂದ ವ್ಯಾಖ್ಯಾನಗಳನ್ನು ತೆಗೆದು ಕೆಲವು ಸಾಮವೇದದ ಮಂತ್ರಗಳಿಗೆ ತಮ್ಮದೇ ವ್ಯಾಖ್ಯಾನವನ್ನು ಸೇರಿಸಿ ಸಾಯಣರ ಹೆಸರಲ್ಲಿ ಪ್ರಸಿದ್ಧಿ ಮಾಡಿರಬೇಕೆಂದು ಹೇಳುತ್ತಾರೆ ಇದು ಅಸಂಭವವಲ

ಇತ್ತೀಚೆಗಿನ ಸಾಮವೇದದ ಭಾಷ್ಯಕಾರರಲ್ಲಿ ಮೇರಠ ನಿವಾಸಿ ಸ್ವರ್ಗೀಯ ಪಂ|| ತುಲಸೀ ರಾಮಸ್ವಾಮಿಯವರು ಸ್ವಾಮಿ ದಯಾನಂದ ಪ್ರಕ್ರಿಯೆಯನ್ನನುಸರಿಸಿ ಭಾಷ್ಯ ಬರೆದಿದ್ದಾರೆ ಸಾಯಣಾದಿ ಭಾಷ್ಯಕಾರರ ದೋಷಗಳನ್ನೂ ಇವರು ತೋರಿಸಿದ್ದಾರೆ ಆದರೆ ಇದನ್ನು ದಯಾನಂದರ ಭಾಷ್ಯದ ವರ್ಗಕ್ಕೆ ಸೇರಿಸಲಾಗುವುದಿಲ್ಲ

**ಅಥರ್ವವೇದದ ಭಾಷ್ಯಕಾರರು** —ಎಲ್ಲಾ ವೇದಗಳಿಗೂ ಅನೇಕ ಭಾಷ್ಯಗಳಿವೆ ಆದರೆ ಅಥರ್ವವೇದಕ್ಕೆ ಸಾಯಣ ಭಾಷ್ಯ ಮಾತ್ರ ಸಿಗುತ್ತದೆ ಇದು ಕೂಡ ತ್ರುಟಿ ಪೂರ್ಣವಾಗಿದೆ

ಅಥರ್ವವೇದದ ಭಾಷ್ಯವನ್ನು ಸಾಯಣಾಚಾರ್ಯರು ಇತರ ವೇದಗಳ ಭಾಷ್ಯಗಳನ್ನು ಮುಗಿಸಿದ ಬಳಿಕ ಪ್ರಾರಂಭ ಮಾಡಿದಂತೆ ತೋರುತ್ತದೆ ಇವರು ತಮ್ಮ ಭಾಷ್ಯಕ್ಕೆ ಕೌಶಿಕ ಮತ್ತು ವೈತಾನ ಸೂತ್ರಗಳನ್ನು ಆಧಾರವಾಗಿಟ್ಟುಕೊಂಡಿದ್ದರು ಹೋಮಾದಿಗಳ ಮೂಲಕ ಅಥರ್ವಣ ಮಂತ್ರಗಳನ್ನು ಹೇಳಿ ರೋಗಗಳ ನಿವಾರಣೆ ಮಾಡಬಹುದೆಂದು ಸಾಯಣಾಚಾರ್ಯರಿಗೆ ವಿಶ್ವಾಸವಿತ್ತು

**ಪಾಶ್ಚಾತ್ಯ ವೇದಭಾಷ್ಯಕಾರರು** —ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಬ್ರಿಟಿಷ್ ಸಾಮ್ರಾಜ್ಯವಾದಿಗಳು, ತಮ್ಮ ವಿಶ್ವವಿದ್ಯಾಲಯಗಳಲ್ಲಿ ಭಾರತದಲ್ಲಿ ತಮ್ಮ ಶಾಸನದ ಕಾರ್ಯಭಾರವನ್ನು ವಹಿಸಲಿಕ್ಕಾಗಿ ಯುವಕರನ್ನು ತಯಾರಿಸುತ್ತಿದ್ದರು ಆ ಯುವಕರು, ಭಾರತದಲ್ಲಿ ಸಫಲ ಶಾಸಕರಾಗಬೇಕಾದರೆ, ಭಾರತೀಯರ ಧಾರ್ಮಿಕ ಸಾಂಸ್ಕೃತಿಕ ಹಾಗೂ ಐತಿಹಾಸಿಕ ಹಿನ್ನೆಲೆಯನ್ನು ಚೆನ್ನಾಗಿ ಅರಿತುಕೊಳ್ಳುವುದು ಅಗತ್ಯವಾಗಿತ್ತು ಭಾರತೀಯರ ಮನಸ್ಸನ್ನು ಗೆಲ್ಲಬೇಕಾದರೂ ಇಂತಹ ಶಿಕ್ಷಣವು ಅವರಿಗೆ ಬೇಕಿತ್ತು ಆದುದರಿಂದ ಪ್ರಾರಂಭದಲ್ಲಿ ಕೇವಲ ರಾಜನೈತಿಕ ಅಥವಾ ಶಾಸಕೀಯ ಕಾರಣಗಳಿಂದ ಪ್ರೇರಿತರಾಗಿ ಭಾರತೀಯರ ಪ್ರಾಚೀನ ಸಾಹಿತ್ಯಗಳ ಅಧ್ಯಯನ ಮಾಡಲಿಕ್ಕೆ ಯುರೋಪಿನಲ್ಲಿ ಅನೇಕ ಮಂದಿ ಯುವಕರು ಮುಂದೆ ಬಂದರು ಇದೇ ರೀತಿ ಮುಂದುವರಿದು ವೈದಿಕ ಸಾಹಿತ್ಯದ ಪ್ರಚಾರವೂ ಆ ದೇಶದಲ್ಲಿ ಆಗುತ್ತಾ ಬಂತು ಆ ವಿದ್ಯಾರ್ಥಿಗಳಿಗಾಗಿಯೇ ವೇದಾದಿ ಗ್ರಂಥಗಳ ಅನುವಾದ, ಟೀಕೆ ಇತ್ಯಾದಿಗಳ ರಚನೆಯೂ ಆಯಿತು ಭಾಷ್ಯಗ್ರಂಥಗಳೂ ಉತ್ಪನ್ನವಾದುವು ಈಗಲೂ ಈ ಕಾರ್ಯವು

ಜಾರಿ ಇದೆ ಆದರೆ ದೃಷ್ಟಿಕೋಣದಲ್ಲಿ ಮಾತ್ರ ಅಂದಿಗೂ ಇಂದಿಗೂ ವ್ಯತ್ಯಾಸವಿದೆ ಅಂದು ರಾಜನೈತಿಕ ಕಾರಣಗಳಿಂದ ಪ್ರೇರಿತರಾಗಿ ಯುರೋಪಿನಲ್ಲಿ ಭಾಷ್ಯಗ್ರಂಥಗಳ ರಚನೆಯಾಯಿತು ಆದರೆ ಈಗ ಕೆಲವರು ನಿಜವಾದ ಜಿಜ್ಞಾಸೆಯಿಂದಲೂ ಭಾರತೀಯರ ಪ್ರಾಚೀನ ಸಾಹಿತ್ಯಗಳನ್ನು ಅಧ್ಯಯನ ಮಾಡುತ್ತಿದ್ದಾರೆ

ವೇದಗಳ ಪಾಶ್ಚಾತ್ಯ ಭಾಷ್ಯಕಾರರಲ್ಲಿ ಮೇಕ್ಸ್‌ಮುಲ್ಲರ್ ವಿಲ್ಸನ್ ಡಾ॥ ಗ್ರಾಸ್ಮನ್ ಡಾ॥ ಲುಡ್ವಿಗ್ ಡಾ॥ ಗ್ರಿಫಿತ್ ಇವರ ಋಗ್ವೇದ ಭಾಷ್ಯಗಳು ಪ್ರಸಿದ್ಧವಾಗಿವೆ ಡಾ॥ ಗ್ರಾಸ್ಮನ್ ಇವರು ಛಂದೋ ಬದ್ಧವಾಗಿ ಜರ್ಮನ್ ಭಾಷೆಯಲ್ಲಿ ವೇದಭಾಷ್ಯವನ್ನು ಬರೆದಿದ್ದಾರೆ ಡಾ॥ ಗ್ರಿಫಿತ್ ನಾಲ್ಕೂ ವೇದಗಳ ಅನುವಾದವನ್ನು ಮಾಡಿದ ಶ್ರೇಯಕ್ಕೆ ಪಾತ್ರರಾಗಿದ್ದಾರೆ

ಡಾ॥ ವೆಬರ್ ಮತ್ತು ಡಾ॥ ಕೀಥ್ ಇವರು ಯಜುರ್ವೇದದ ತೈತ್ತಿರೀಯ ಸಂಹಿತೆಯ ಭಾಷ್ಯವನ್ನು ಬರೆದಿದ್ದಾರೆ ಡಾ॥ ರಾಥ್, ಡಾ॥ ವ್ಹಿಟ್ನೀ ಮತ್ತು ಡಾ॥ ಲೆನ್ಮನ್ ಅಥರ್ವವೇದದ ಸಂಪಾದನೆ ಮತ್ತು ಅನುವಾದ ಕಾರ್ಯವನ್ನು ಮಾಡಿದ್ದಾರೆ ಈ ಪಾಶ್ಚಾತ್ಯ ವಿದ್ವಾಂಸರಿಗೆಲ್ಲಾ ಸಾಯಣಭಾಷ್ಯವೇ ಆಧಾರಗ್ರಂಥವಾಗಿತ್ತು ಡಾ॥ ಬೆನ್ ಫ್ರೀ ಇವರು ಸಾಮವೇದದ ಸಾಯಣಬಾಷ್ಯಯನ್ನು ಅನುವಾದಿಸಿದರು ಇನ್ನು ಕೆಲವರಿಗೆ ಮಹೀಧರ ಭಾಷ್ಯವೂ ಕೈಗೆ ಸಿಕ್ಕಿತು ಇವರಿಗೆಲ್ಲಾ ಭಾರತೀಯರಂತಹ ಉನ್ನತ ಸಂಸ್ಕೃತಿ ಅವರ ಸಾಹಿತ್ಯಗಳ ಪ್ರೌಢಿಮೆ ಇತ್ಯಾದಿಗಳ ಕಲ್ಪನೆಯೂ ಇದ್ದಿಲ್ಲ ವೈದಿಕ ಸಾಹಿತ್ಯಗಳ ಅಧ್ಯಯನಕ್ಕೆ ಬೇಕಾದ ಪಾತ್ರತೆಗಳೂ ಇವರಲ್ಲಿಲ್ಲ ಈ ಎಲ್ಲಾ ಕಾರಣಗಳಿಂದ ಯುರೋಪಿಯನರ ವೇದಭಾಷ್ಯಗಳಲ್ಲಿ ದೋಷವಿರುವುದು ಸ್ವಾಭಾವಿಕವೇ ಆಗಿತ್ತು ಇವರ ಭಾಷ್ಯಗಳಲ್ಲಿ ಆಧ್ಯಾತ್ಮಿಕ ಮತ್ತು ಆಧಿದೈವಿಕ ಪ್ರಕ್ರಿಯೆಗಳ ಅಭಾವವು ಇರುವುದಲ್ಲದೆ ಸಾಯಣ ಮತ್ತು ಮಹೀಧರರ ಅನಾರ್ಷ ಮತ್ತು ವೇದವಿರುದ್ಧ ಮಾತುಗಳೂ ಇವೆ ಇಷ್ಟಲ್ಲದೆ ಕೆಲವು ಮಂದಿ ಭಾಷ್ಯಕಾರರ ಉದ್ದೇಶವೇ ಅಪವಿತ್ರವಾಗಿತ್ತು

ದಿ ರಿಲೀಜಿಯಸ್ ಎಂಡ್ ಫಿಲಾಸಫಿಕಲ್ ಸಿಸ್ಟಮ್ ಆಫ್ ದಿ ಹಿಂದೂಸ್ [ಹಿಂದೂಗಳ ಧಾರ್ಮಿಕ ಮತ್ತು ದಾರ್ಶನಿಕ ವಿಚಾರ ಪದ್ಧತಿಗಳು] ಎಂಬ ಗ್ರಂಥದಲ್ಲಿ ಎಚ್ ಎಚ್ ವಿಲ್ಸನ್ ಇವರು ಹಿಂದುಗಳ ಧಾರ್ಮಿಕ ವಿಶ್ವಾಸಗಳನ್ನು ಖಂಡಿಸುವ ಉದ್ದೇಶದಿಂದಲೇ ಈ ಗ್ರಂಥವನ್ನು ಬರೆದಿದ್ದಾರೆ ಎಂಬ ಮಾತು ಈಗ ಬೆಳಕಿಗೆ ಬಂದಿದೆ[೮] ಜೋನ್ ಮುಯಿರ್ ಇವರು ದಿ ಓರಿಯಂಟಲ್ ಸ್ಟಡಿ ಸ್ [ಪ್ರಾಚ್ಯ ಸಾಹಿತ್ಯಗಳ ಅಧ್ಯಯನ] ಎಂಬ ಗ್ರಂಥವನ್ನು ಬರೆದಿದ್ದಾರೆ ಕ್ರಿಶ್ಚನ್ ಮಿಶನರಿಗಳಿಗೆ ಭಾರತದಲ್ಲಿ ತಮ್ಮ ಮತಪ್ರಚಾರಕ್ಕೆ ಈ ಗ್ರಂಥವು ಉಪಯುಕ್ತವಾದುದೆಂದು ಇದರ ಪ್ರಕಾಶಕರು ತಾವೇ ಸ್ವೀಕರಿಸಿದ್ದಾರೆ ಮಿಸ್ಟರ್ ಮೋನಿಯರ್ ವಿಲಿಯಮ್ಸ್ ಇವರು

---

[೮] These lectures were written to help candidates for a prize of £200 given by John Muir, a well known old Haileybury man and great Sanskrit scholar—for the best refutation of the Hindu Religious systems (Eminent Orientalists, Madras, page 72)

ಭಾರತೀಯ ಸಂಸ್ಕೃತಿಯನ್ನು ಧ್ವಂಸ ಮಾಡಲಿಕ್ಕೆ ಕಟಿಬದ್ಧರಾಗಿದ್ದರು ಇವರು ಕೂಡ ಕ್ರೈಸ್ತ ಮತಪ್ರಚಾರಕರ ಸಹಾಯತೆಗಾಗಿಯೇ ಪುಸ್ತಕಗಳನ್ನು ಬರೆದಿದ್ದಾರೆ[೯]

ಪ್ರೊ|| ಮೇಕ್ಸ್‌ಮುಲ್ಲರ್ ಕ್ರೈಸ್ತಮತದಲ್ಲಿ ತುಂಬಾ ಅಂಧಶ್ರದ್ಧೆಯುಳ್ಳವರಾಗಿದ್ದರು ಕ್ರೈಸ್ತ ಮತವನ್ನು ಬಿಟ್ಟು ಬೇರೆ ಯಾವ ಮತವೂ ಇವರಿಗೆ ಒಳ್ಳೆಯದೆಂದು ಕಂಡು ಬರಲಿಲ್ಲ ಪಾರಸಿಗಳ ಮತವನ್ನೂ ಇವರು ನಿಂದಿಸಿದ್ದಾರೆ ವೈದಿಕ ಸಾಹಿತ್ಯಗಳ ಅಧ್ಯಯನಕ್ಕೆ ಬೇಕಾದ ಯಾವ ಯೋಗ್ಯತೆಗಳೂ ಇವರಲ್ಲಿ ಇದ್ದಿಲ್ಲ ಆದರೂ ಇವರು ವೇದಗಳು ಬಹಳ ಕೀಳು ಮಟ್ಟದ ಸಾಹಿತ್ಯಗಳೆಂದು ಹೇಳುವ ಸಾಹಸವನ್ನು ತೋರಿಸಿದ್ದಾರೆ[೧೦] ಇಂತಹ ಕೀಳು ಮಟ್ಟದ ಸಾಹಿತ್ಯಗಳನ್ನು ಅಧ್ಯಯನ ಮಾಡಿ ಅವುಗಳ ಕುರಿತು ಲೇಖನ ಪ್ರವಚನಾದಿಗಳನ್ನು ತಯಾರಿಸುವುದರಲ್ಲಿ ಇವರು ತಮ್ಮ ಬಹು ಮೌಲ್ಯ ಸಮಯವನ್ನು ಯಾಕೆ ಹಾಳು ಮಾಡಿದರು? ಎಂದು ಪ್ರಶ್ನೆ ಹುಟ್ಟುವುದು ಸ್ವಾಭಾವಿಕ ಅದಕ್ಕೆ ಉತ್ತರವೂ ಸಿಕ್ಕಿದೆ ಪ್ರೊ|| ಮೇಕ್ಸ್‌ಮುಲ್ಲರ್ ಇವರು ಲಾರ್ಡ್ ಮೆಕೋಲೆಯವರ ಯೋಜನೆಗಳನ್ನು ಕಾರ್ಯಾನ್ವಿತವನ್ನಾಗಿ ಮಾಡಲು ಕೇವಲ ಒಂದು ಸಾಧನವಾಗಿದ್ದರು ಭಾರತದಲ್ಲಿ ಇಂಗ್ಲಿಷ್ ಶಿಕ್ಷಣದ ಪ್ರಚಾರದ ಮೂಲಕ ಇಲ್ಲಿಯ ಜನರನ್ನು ಪಾಶ್ಚಾತ್ಯ ಸಭ್ಯತೆಯ ಮಾನಸಿಕ ದಾಸತೆಗೆ ತಳ್ಳಬೇಕೆಂದು ಅವರ ಉದ್ದೇಶವಾಗಿತ್ತು ಯಾವುದಾದರೂ ಒಂದು ದೇಶವನ್ನು ಜಯಿಸಬೇಕಾದರೆ ಆ ದೇಶದ ಇತಿಹಾಸ ಮತ್ತು ಸಂಸ್ಕೃತಿಯನ್ನು ಮೊದಲು ಧ್ವಂಸಮಾಡಬೇಕೆಂಬ ಪಾಠ ಇತಿಹಾಸದಲ್ಲಿ ಸಿಗುತ್ತದೆ ಇತಿಹಾಸ ಮತ್ತು ಸಂಸ್ಕೃತಿಯ ಭಂಡಾರ ಸಾಹಿತ್ಯಗಳೇ ಆಗಿವೆ ಎಷ್ಟರ ತನಕ ಭಾರತೀಯರು ವೇದಾದಿ ಶಾಸ್ತ್ರಗಳನ್ನೂ, ತಮ್ಮ ಇತಿಹಾಸ ಮತ್ತು ಪರಂಪರೆಯನ್ನು ಮರೆಯುವುದಿಲ್ಲವೋ, ಅಷ್ಟರ ತನಕ ಬ್ರಿಟಿಷ್ ಸಾಮ್ರಾಜ್ಯಕ್ಕೆ ಅಪಾಯವಿದೆ ಎಂಬುದನ್ನು ಮೆಕೋಲೆಯವರು ಮನಗಂಡಿದ್ದರು ಅವುಗಳನ್ನು ಜನರು ಮರೆಯುವಂತೆ ಮಾಡಬೇಕಾದರೆ ಉತ್ತಮ ಉಪಾಯ ಅವುಗಳು ಕೀಳು

---

[೯] "when the walls of the mighty fortress of Brahminism are encircled, undermined and finally stormed by the soldiers of the Cross the victory of Christianity must be signal and complete " Monier williams (Modern India and the Indians 1879 page 261)

[೧೦] ' The historical importance of the Veda can hardly be exaggerated, but its intrinsic merit, and particularly the beauty or elevation of its sentiments, have by many been rated far too high Large numbers of the Vedic hymns are childish in the extreme, tidious, low common place The gods are constantly invoked to protect their worshippers to grant them good, large flocks, large families, and a long life, for all which benefits they are to be rewarded by the praises and sacrifices offered day after day, or at certain seaons of the year " Prof, F Max Muller (Chips from a German workshop, Longmans, Green And Co 1867 Vol I page 27)

ಮಟ್ಟದ ಸಾಹಿತ್ಯಗಳು ಅವುಗಳನ್ನು ಓದಿ ತಿಳಿದು ಏನೂ ಲಾಭವಿಲ್ಲ ಇಂಗ್ಲಿಷ್ ಶಿಕ್ಷಣದಿಂದಲೇ ತಮ್ಮ ಭಾಗ್ಯದ ಬಾಗಿಲು ತೆರೆಯುತ್ತದೆ ಎಂಬ ಭಾವನೆಯು ಅವರ ಹೃದಯದಲ್ಲಿ ಬೇರೂರಬೇಕು ಇದೇ ದೃಷ್ಟಿಯಿಂದ ಮೆಕಾಲೆಯವರು ಮೋಕ್ಸ್ ಮುಲ್ಲರರನ್ನು ಈ ಕಾರ್ಯಕ್ಕೆ ನಿಯುಕ್ತಿ ಮಾಡಿದ್ದರು ಇದರೊಟ್ಟಿಗೆ ಯುರೋಪಿನಲ್ಲಿಯ ಈ ಮೋಕ್ಸ್‌ಮುಲ್ಲರರ ರೂಪದಲ್ಲಿ ಒಬ್ಬ ಋಷಿಗಳು ಹುಟ್ಟಿದ್ದಾರೆ ಎಂದು ಕ್ರೈಸ್ತ ಮಿಶನರಿಗಳು ಭಾರತದಲ್ಲಿ ಪ್ರಚಾರ ಮಾಡಿದರು ಮರಗಳೇ ಇಲ್ಲದ ಊರಿನಲ್ಲಿ ತುಂಬೆಯ ಗಿಡವನು ಮರವೆಂದು ಜನರು ಕರೆಯುವುದು ಇದೇ ರೀತಿ ವಿದ್ವಾಂಸರೇ ಇಲ್ಲದ ಯುರೋಪಿನಲ್ಲಿ ಮೋಕ್ಸ್‌ಮುಲ್ಲರರು ದೊಡ್ಡ ವಿದ್ವಾಂಸರೆಂದೆಣಿಸಿಕೊಂಡರು ಬೈಬಲಿನ ಪರಮ ಭಕ್ತರಾದ[೧೧] ಮೋಕ್ಸ್‌ಮುಲ್ಲರರು ತಮ್ಮ ವೇದಭಾಷ್ಯದ ಉದ್ದೇಶವನ್ನು ತಾವೇ ಪ್ರಕಟಿಸಿದ್ದಾರೆ ವೇದವು ಭಾರತೀಯರ ವಿಶಾಲವಾದ ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಮೂಲ ಆಧಾರವಾಗಿದೆ ವಿಶಾಲವಾಗಿ ಬೆಳೆದಂತಹ ಒಂದು ಅಶ್ವತ್ಥ ಮರ ಇದೆ ಎಂದುಕೊಳ್ಳೋಣ ಅದನ್ನು ಕಿತ್ತೊಗೆಯಲಿಕ್ಕೆ ಹಿಂದುಗಳ ಧಾರ್ಮಿಕ ಭಾವನೆಯು ಅಡ್ಡಿಯಾಗುತ್ತದೆ ಆದುದರಿಂದ ಆ ಮರವನ್ನು ಬೇರೆಯವರು ಕಿತ್ತೊಗೆಯುವ ವಿಚಾರವನ್ನು ಬಿಟ್ಟು ಅದರ ಬುಡಕ್ಕೆ ಎಷ್ಟು ಹುಳ ಹಿಡಿದಿದೆ ಎಂದು ತೋರಿಸಿದರೆ ಸಾಕು ಆ ಮರವು ಯಾವ ಕ್ಷಣದಲ್ಲಿಯೂ ಮುರಿದು ಬೀಳಬಹುದೆಂಬ ಭೀತಿಯಿಂದ ಶ್ರದ್ಧಾಳುಗಳು ತಾವಾಗಿಯೇ ಆ ಮರವನ್ನು ತ್ಯಜಿಸುವರು ಇದೇ ರೀತಿ ವೇದಗಳಲ್ಲಿ ಎಷ್ಟು ಕೊಳಕು ವಿಚಾರಗಳಿವೆ ಎಂದು ಹಿಂದುಗಳಿಗೆ ತೋರಿಸಿದರೆ ಸಾಕು ತಾವಾಗಿಯೇ ಅವರು ವೇದಶಾಸ್ತ್ರಗಳನ್ನು ಓದುವುದನ್ನು ಬಿಟ್ಟು ಇಂಗ್ಲಿಷ್ ಶಿಕ್ಷಣ ಮತ್ತು ರೋಮನ್ ಸಭ್ಯತೆಗೆ ಶರಣುಹೋಗುವರು ಎಂದು ಮೋಕ್ಸ್‌ಮುಲ್ಲರರಿಗೆ ಗೊತ್ತಿತ್ತು[೧೨] ಇದೇ ಉದ್ದೇಶದಿಂದ ಅವರು ವೇದಗಳ ಭಾಷ್ಯಗಳನ್ನು ಬರೆದಿದ್ದಾರೆ

ಮಿಸ್ಟರ್ ರೋಥ್ ಇವರು ವೈದಿಕ ಸಾಹಿತ್ಯ ಮತ್ತು ವೇದಗಳ ಇತಿಹಾಸ [Sur literature and Gesikte des Ved] ಎಂಬ ಗ್ರಂಥವನ್ನು ಬರೆದಿದ್ದಾರೆ ನಿರುಕ್ತವನ್ನು ಕೂಡ ಇವರು ಪ್ರಕಾಶಿಸಿದ್ದಾರೆ ತಮ್ಮ ಜ್ಞಾನದ ಮೇಲೆ ಇವರಿಗೆ ತುಂಬಾ ಹೆಮ್ಮೆ ಇತ್ತು ವೇದಮಂತ್ರಗಳ ಅರ್ಥವನ್ನು ತಿಳಿದುಕೊಳ್ಳ

---

[೧೧] "Would you say that any one sacred book is superior to all others in the world? I say, the New Testament After that, I should place the Koran, which in its moral teachings is hardly more than latter edition of the New Testament

(Life and Letters of Frederich Max Muller)

[೧೨] This edition of mine the translation of the Veda will hore after tell to a great extent on the fate of India It is the root of their religion and to show them what the root is, I feel sure is the only way of uprooting all that has sprung from it during the last three thousand years '

(Life and Letters of Frederich Max Muller)

ವೇಕಾದರೆ ನಿರುಕ್ತಕ್ಕಿಂತ ಜರ್ಮನ್ ವಿದ್ವಾಂಸರ ಮಗುವಾದ ಭಾಷಾವಿಜ್ಞಾನವೇ ಅಧಿಕ ಉಪಯುಕ್ತವೆಂದು ಇವರು ಹೇಳಿದ್ದಾರೆ ವ್ಹಿಟ್ನೀಯವರೂ ಇದೇ ಅಭಿಪ್ರಾಯವನ್ನಿಟ್ಟುಕೊಂಡಿದ್ದರು [೧೪]

ಮಿಸ್ಟರ್ ವೇಬರ್ ಮತ್ತು ಬಾಹ್ಟ್‌ಲಿಂಕ್ ಕುಹಾನರ ಸಹಾಯತೆಯಿಂದ ಒಂದು ಸಂಸ್ಕೃತ ಶಬ್ದಕೋಶವನ್ನು ತಯಾರಿಸಿದರು ಭಾಷಾವಿಜ್ಞಾನದ ಹೆಸರಲ್ಲಿ ತಮ್ಮ ಅಜ್ಞಾನದಿಂದಾಗಿ ಇವರು ಈ ಶಬ್ದಕೋಶದಲ್ಲಿ ತುಂಬಾ ತಪ್ಪುಗಳನ್ನು ಮಾಡಿದ್ದಾರೆ ಮಿಸ್ಟರ್ ಗೋಲ್ಡ್‌ಸ್ಟುಕರ್ ಎಂಬ ಯೆಹೂದಿ ವಿದ್ವಾಂಸರು ಇದನ್ನು ಟೀಕಿಸಿದರು ಇದಕ್ಕೆ ಉತ್ತರವಾಗಿ ಈ ಶಬ್ದಕೋಶದ ರಚನೆಯ ಹಿಂದೆ ಒಂದು ರಹಸ್ಯವಿದೆಯೆಂದೂ ಗೋಲ್ಡ್‌ಸ್ಟುಕರರ ತಲೆ ಸರಿ ಇಲ್ಲವೆಂದೂ ಶಬ್ದಕೋಶದ ರಚಯಿತರು ಹೇಳಿದರು ಇದಕ್ಕೆ ಪ್ರತ್ಯುತ್ತರವನ್ನು ಕೊಡುತ್ತಾ ಪಾಣಿನಿ ಮತ್ತು ಸಂಸ್ಕೃತ ಸಾಹಿತ್ಯದಲ್ಲಿ ಅವನ ಸ್ಥಾನ' ಎಂಬ ಪುಸ್ತಕದಲ್ಲಿ ವೇಬರ್ ಮತ್ತು ಕುಹಾನರು ಹೇಳಿದ ರಹಸ್ಯವೇನೆಂದರೆ ಭಾರತೀಯ ಸಂಸ್ಕೃತಿ ಮತ್ತು ಸಾಹಿತ್ಯಗಳನ್ನು ಹೀನೈಸುವುದು ಎಂದು ಗೋಲ್ಡ್‌ಸ್ಟುಕರರು ಸ್ಪಷ್ಟಮಾಡಿದ್ದಾರೆ ಕ್ರಿ ಶ ೧೮೬೮ ಡಿಸೆಂಬರ್ ೧೬ನೇ ತಾರೀಖಿಗೆ ಮಿಸ್ಟರ್ ಮೇಕ್ಸ್‌ಮುಲ್ಲರರು ಭಾರತದ ತತ್ಕಾಲೀನ ವೈಸರೋಯರಾದ ಡ್ಯೂಕ್ ಆಫ್ ಓರ್ಗೈಲ್ ಇವರಿಗೆ ಬರೆದ ಒಂದು ಪತ್ರದಲ್ಲಿ ಭಾರತದ ಪ್ರಾಚೀನ ಧರ್ಮವು ಅಸ್ತವ್ಯಸ್ತವಾಗುತ್ತಿದೆ ಎಂದೂ ಕ್ರೈಸ್ತ ಧರ್ಮವು ಅದರ ಸ್ಥಾನವನ್ನು ತುಂಬಿಸಬೇಕೆಂದೂ ಹೇಳಿದ್ದಾರೆ

ಈ ಎಲ್ಲಾ ಮಾತುಗಳನ್ನು ನೋಡಿದರೆ ಹತ್ತೊಂಬತ್ತನೆಯ ಶತಮಾನದಲ್ಲಿ ವಿದೇಶೀಯರು ಮುಖ್ಯವಾಗಿ ಯುರೋಪಿನ ವಿದ್ವಾಂಸರು ಮಾಡಿದ ವೇದಭಾಷ್ಯಗಳು ಜ್ಞಾನಸಂಪಾದನೆ ಅಥವಾ ಅದರ ಪ್ರಚಾರ ಮಾಡಬೇಕೆಂಬ ಸದುದ್ದೇಶದಿಂದ ವೇದಭಾಷ್ಯಗಳನ್ನು ಬರೆದಿಲ್ಲ ಅವರ ಉದ್ದೇಶವು ಬೇರೆಯೇ ಆಗಿತ್ತು ಎಂದು ಸ್ಪಷ್ಟವಾಗುತ್ತದೆ ಆದುದರಿಂದ ಅವರ ಭಾಷ್ಯಗಳನ್ನು ವೇದಗಳ ವಿದ್ಯಾರ್ಥಿಗಳು ಬಹಳ ಎಚ್ಚರಿಕೆಯಿಂದ ಓದಬೇಕು, ಎಂದು ಬೇರೆ ಹೇಳಬೇಕಾಗಿಲ್ಲ

## ವೇದಗಳ ಬಗ್ಗೆ ಕೆಲವು ಭ್ರಾಂತಿಯುಕ್ತವಾದ ವಿಚಾರಗಳು

ವೇದಗಳ ಅಪೌರುಷೇಯತ್ವ —ಮಾನವ ಸೃಷ್ಟಿಯ ಪ್ರಾರಂಭದಲ್ಲಿ ಅಮೈಥುನೀ ಸೃಷ್ಟಿಯಲ್ಲಿ ಜನಿಸಿದ ಅತ್ಯಂತ ಪವಿತ್ರರೂ ಶ್ರೇಷ್ಠರೂ ಆದ ಋಷಿಗಳು ಸಮಾಧಿಸ್ಥರಾಗಿ ಕುಳಿತಾಗ ಆಕಾಶದಲ್ಲಿ ನಿತ್ಯವೂ ಕಾರಣರೂಪವೂ ಆಗಿದ್ದ ದೈವೀ ವಾಕ್ ಅಥವಾ ವಿಜ್ಞಾನಮಯ ಧ್ವನಿರೂಪ ಶಬ್ದವು, ಅವರ ಹೃದಯದ ಕಡೆಗೆ ಪ್ರವಹಿತವಾಗುತ್ತದೆ ಈ ಧ್ವನಿರೂಪ ಅವ್ಯಕ್ತವಾಣಿಗೆ ಋಷಿಗಳು ವರ್ಣಯುಕ್ತವಾದ ಕಾರ್ಯರೂಪ ಶಬ್ದ ಅಥವಾ ವ್ಯಕ್ತವಾಣಿಯ ರೂಪವನ್ನು ಕೊಡುತ್ತಾರೆ ಈ

---

[೧೪] The principlos of the German school are the only ones which can ever guide us to a true understanding of the Veda
—Whitney A M

ವಿಜ್ಞಾನವತೀ ವಾಣಿಯನ್ನು ಇತರರಿಗೂ ಕೇಳಿಸುತ್ತಾರೆ ಹೀಗೆ ಇದು ಶ್ರುತಿ ಎನಿಸಿಕೊಂಡಿದೆ ಈ ವೇದೋತ್ಪತ್ತಿಯ ರಹಸ್ಯವನ್ನು ಈ ಮೊದಲು ವಿಶದಪಡಿಸಿದ್ದೇವೆ ವೇದಗಳ ಉತ್ಪತ್ತಿ ಎಂದರೆ ಇತರ ಮಾನುಷ ಕೃತಿಗಳಂತೆ ನವ್ಯ ಸೃಜನೆಗಳಲ್ಲ ನಿಜವಾಗಿ ಇವು ನಿತ್ಯವೂ ಛಂದೋಬದ್ಧವಾಗಿಯೂ ಪರಮ ವ್ಯೋಮದಲ್ಲಿ ಧ್ವನಿ ರೂಪದಲ್ಲಿ ಪ್ರವಾಹಿತವಾಗುತ್ತಲೂ ಇರುತ್ತವೆ ಪ್ರತಿಯೊಂದು ಸೃಷ್ಟಿಯ ಆದಿಯಲ್ಲಿ ಇವು ಋಷಿಗಳ ಮೂಲಕ ವ್ಯಕ್ತಶಬ್ದಗಳ ರೂಪದಲ್ಲಿ ಪ್ರಕಟವಾಗುತ್ತವೆ ಅಷ್ಟೇ ಈ ರೀತಿ ಸೃಷ್ಟಿಯ ಪ್ರಾರಂಭದಲ್ಲಿ ಅಮೈಥುನೀ ಅಥವಾ ಅಯೋನಿಜ ಸೃಷ್ಟಿ* ಆದರಲ್ಲಿಯೂ ಮನುಷ್ಯರಲ್ಲಿ ಋಷಿಗಳು ಹುಟ್ಟುತ್ತಾರೆ ಅವರು ದೈವಿ ವಾಣಿಯನ್ನು ಪಡೆದು ಇತರರಿಗೆ ಕೊಡುತ್ತಾರೆ ಮಾನುಷೀವಾಣಿ ಮೂಲವೂ ಇದೆ ದೈವಿ ವಾಕ್ ಈ ಸಿದ್ಧಾಂತದ ರಹಸ್ಯವನ್ನರಿಯದೆ ವಿಜ್ಞಾನದ ಹೆಸರಲ್ಲಿ ಡಾರ್ವಿನನ ಕಾಲ್ಪನಿಕ ಹಾಗೂ ಅಸತ್ಯ ವಿಕಾಸವಾದದ ಭ್ರಾಂತಿಯಲ್ಲಿ ಸಿಕ್ಕಿಬಿದ್ದ ಕೆಲವು ಆಧುನಿಕ ತಥಾಕಥಿತ ವಿಚಾರವಂತರು ಇದನ್ನು ಗ್ರಹಣ ಮಾಡಲಿಕ್ಕೆ ಸಮರ್ಥರಾಗುವುದಿಲ್ಲ ಆದರೆ ವಿಜ್ಞಾನವು ಪ್ರಗತಿ ಹೊಂದಿದಂತೆ ಯಾವ ರೀತಿಯಲ್ಲಿ ಇತರ ವೈದಿಕ ಸಿದ್ಧಾಂತಗಳು ಸತ್ಯವೆಂದು ಸಿದ್ಧವಾಗುತ್ತಾ ಬಂದಿವೆಯೋ ಅದೆ ರೀತಿ ವೇದಪ್ರಕಾಶದ ಸಿದ್ಧಾಂತವೂ ಸತ್ಯವೆಂದು ಸಿದ್ಧವಾಗುವುದರಲ್ಲಿ ಸಂದೇಹವಿಲ್ಲ

ಇತ್ತೀಚಿಗೆ ಕೆಲವು ವಿದ್ವಾಂಸರು, ವೇದಗಳ ಅಪೌರುಷೇಯತ್ವವನ್ನು ಬಹಳ ವಿಚಿತ್ರ ರೀತಿಯಲ್ಲಿ ವಿವರಿಸಿದ್ದಾರೆ ವೇದಗಳು ಅತ್ಯಂತ ಪ್ರಾಚೀನವಾಗಿರುವುದರಿಂದಲೂ ಮಂತ್ರಗಳನ್ನು ರಚಿಸಿದವರ ಹೆಸರುಗಳನ್ನು ಜನರು ಮರೆತಿರುವುದರಿಂದಲೂ ಅವುಗಳನ್ನು ಅಪೌರುಷೇಯ ಅರ್ಥಾತ್ ಅಜ್ಞಾತ ಪುರುಷರ ಕೃತಿಗಳೆಂದು ಹೇಳುತ್ತಾರೆ ಎಂದು ಇವರು ತಮ್ಮ ಊಹನೆಯನ್ನು ದೃಷ್ಟಿಕೋಣವನ್ನು ಮಂಡಿಸುತ್ತಾರೆ ಇಂತಹ ವಿದ್ವಾಂಸರೆ ವೇದಮಂತ್ರಗಳ ಮೇಲೆ ಕಾಣಿಸಲಾಗುವ ವಿಶ್ವಾಮಿತ್ರ ವಸಿಷ್ಠಾದಿ ಋಷಿಗಳೇ ಆಯಾಯ ಮಂತ್ರಗಳ ರಚಯಿತರೆಂದೂ ಹೇಳುತ್ತಾರೆ ಇವು ಗಳು ವೈದಿಕ ಪರಂಪರೆಗೆ ವಿರುದ್ಧ ಹಾಗೂ ನಿರಾಧಾರವಾದ ಮಾತುಗಳು ನಾಲ್ಕೂ ವೇದಗಳು ಯಾರ್ಯಾರಿಗೆ ಪ್ರಕಟವಾಗಿವೆ ಯಾವ ರೀತಿಯಲ್ಲಿ ಮಹರ್ಷಿ ಬ್ರಹ್ಮನು ಅಗ್ನಿ ಮೊದಲಾದ ಋಷಿಗಳಿಂದ ನಾಲ್ಕೂ ವೇದಗಳನ್ನು ಪಡೆದು ವೇದವಿದ್ಯೆಯ ಪ್ರಚಾರ ಮಾಡಿದನು ಇತ್ಯಾದಿ ಘಟನೆಗಳ ಇತಿಹಾಸವು ಸೃಷ್ಟಿಯ ಪ್ರಾರಂಭದಿಂದ ಇಂದಿನ ತನಕ ವೇದಾಚಾರ್ಯರ ಮೂಲಕ ಸುರಕ್ಷಿತವಾಗಿಡಲ್ಪಟ್ಟಿದೆ ಇವುಗಳನ್ನು ಅಸತ್ಯವೆಂದು ಹೇಳುವವರು ಸತ್ಯವೇನೆಂದೂ ಹೇಳಬೇಕಲ್ಲವೆ?

ವೇದಗಳು ಪರಮಾತ್ಮನ ಅಮರಕಾವ್ಯವೆಂದು ಮೇಲೆ ಹೇಳಿದ್ದೇವೆ ಕಾಗದ ಲೇಖನ ಮಸಿ ಪಾತ್ರೆ ಇತ್ಯಾದಿಗಳಿಲ್ಲದೆ ಪರಮಾತ್ಮನು ಹೇಗೆ ಕಾವ್ಯರಚನೆ ಮಾಡಿದನು? ಎಂಬ ಪ್ರಶ್ನೆಯನ್ನೂ ಕೆಲವರು ಕೇಳುತ್ತಾರೆ ಇಂತಹವರು ಕಾವ್ಯದ ಹೆಸರೆತ್ತುವಾಗ ಮಾನವ ಕವಿಗಳನ್ನು ನೆನಸುತ್ತಾರೆ ಬಾಹ್ಯಸಾಧನೆಗಳಿಲ್ಲದೆ ಕವಿಗಳು ಕೃತಿಗಳನು ಮಾಡಲಾರರು ಆದರೆ ಪರಮಾತ್ಮನಿಗೆ ಈ ನಿಯಮಗಳು ಅನ್ವಯಿಸುವುದಿಲ್ಲ

* ಈ ಪ್ರಕರಣದ ಪಕ್ಷ–ಪ್ರತಿಪಕ್ಷಗಳ ವಿಶೇಷ ವಿಶ್ಲೇಷಣೆ ಹಿಂದೆಯೇ ಆಗಿದೆ ಪುನರುಕ್ತಿಯೆಂದು ಕಂಡರೂ ಬಂದೆ ಕೊಡದ ಹಲವು ಪ್ರಮಾಣಗಳನ್ನು ಕೊಟ್ಟಿರುವ ಕಾರಣ ಇದನ್ನು ಪುನರುಕ್ತವೆನ್ನುವುದ ಅಂಶತಃ ಸರಿ

ಬಾಹ್ಯ ಸಾಧನೆಗಳಿಲ್ಲದೆ, ಪರಮಾತ್ಮನು ಸೃಷ್ಟಿರಚನೆ ಮಾಡುವುದಿಲ್ಲವೆ? ಇನ್ನು ವೇದಗಳನ್ನು ಕಾವ್ಯವೆಂದು ಯಾಕೆ ಕರೆಯುತ್ತಾರೆ, ಎಂಬ ಪ್ರಶ್ನೆ ಇವುಗಳನ್ನು ಕಾವ್ಯವೆಂದು ಕರೆಯಲಿಕ್ಕೆ ಕಾರಣವೇನೆಂದರೆ, ಇವು ವಿಜ್ಞಾನಯುಕ್ತವಾಗಿಯೂ ಛಂದೋಬದ್ಧವಾಗಿಯೂ ಇವೆ ಅಲ್ಲದೆ, ಇವು ಪ್ರವಾಹಮಯವಾಗಿವೆ ಎಂಬುದನ್ನೂ ನೋಡಬಹುದು ಇದನ್ನು ಛಾಂದಸೀ ಮುದ್ರೆ ಎಂದು ಈ ಮೊದಲು ಹೇಳಿದ್ದೇವೆ ಈ ಛಾಂದಸೀ ಮುದ್ರೆಯಿಂದಾಗಿಯೇ ಇಷ್ಟರ ತನಕ ಮನುಷ್ಯರು ಮಂತ್ರಗಳನ್ನು ರಚಿಸಿ ಸಂಹಿತೆಗಳಿಗೆ ಸೇರಿಸುವ ಕಾರ್ಯದಲ್ಲಿ ಸಫಲರಾಗಲಿಲ್ಲ ವೇದಪಾಠಿಗಳು ಇಂತಹ ಮಿಶ್ರಣಕಾರ್ಯವನ್ನು ತತ್ಕ್ಷಣದಲ್ಲಿಯೇ ಹೇಳಬಲ್ಲರು

ಕೆಲವು ಪಾಶ್ಚಾತ್ಯ ವಿದ್ವಾಂಸರು ಭಾರತದ ಮೂಲನಿವಾಸಿಗಳು ದ್ರವಿಡರೆಂದೂ ಅವರು ಅಸಭ್ಯರು ಮತ್ತು ಕುರೂಪಿಗಳಾಗಿದ್ದರೆಂದೂ, ಮಧ್ಯ ಏಶಿಯಾ ಅಥವಾ ಇನ್ನು ಯಾವುದೋ ಬೇರೆ ಭೂಭಾಗದಿಂದ ಆರ್ಯರು ಪಶುಗಳನ್ನು ಮೇಯಿಸುತ್ತಾ ಗಂಗಾನದಿಯ ಬಯಲಿನ ಕಡೆಗೆ ಹೋದರೆಂದೂ, ಅಲ್ಲಿ ದ್ರವಿಡರನ್ನು ಹೊಡೆದೋಡಿಸಿ ತಾವು ನೆಲೆಸಿದರೆಂದೂ ಇದೇ ಸಮಯದಲ್ಲಿ ಪ್ರಾಕೃತಿಕ ಸೌಂದರ್ಯಕ್ಕೆ ಬೆರಗಾಗಿ ಇಂದ್ರ ಅಗ್ನಿ ವಾಯು ಉಷಸ ಇತ್ಯಾದಿ ಪ್ರಾಕೃತಿಕ ಶಕ್ತಿಗಳನ್ನು ಸ್ತುತಿಪೂರ್ವಕ ವರ್ಣಿಸಿದರೆಂದೂ ಏನೇನೋ ಊಹಾಪೋಹಾದಿಗಳಿಂದ ಮಿಶ್ರಿತ ಸಿದ್ಧಾಂತಗಳನ್ನು ಮಂಡಿಸುತ್ತಾರೆ ಎಂದರೆ ಗಂಗಾನದಿಯ ಬಯಲಿನಲ್ಲಿ ಬಂದು ನೆಲೆಸಿದ ಸರಳ ಅಥವಾ ಅಲ್ಪಬುದ್ಧಿಯ ಪಶುಪಾಲನೆಯಲ್ಲಿ ನಿರತರಾದ, ಪ್ರಾಕೃತಿಕ ಶಕ್ತಿ ಅಥವಾ ಜಡದೇವತೆಗಳನ್ನೇ ದೇವರೆಂದು ನಂಬುತ್ತಿದ್ದ ಆರ್ಯ ಜಾತಿಯ ಋಷಿಗಳೆಂಬ ಬ್ರಾಹ್ಮಣ ಅಥವಾ ಪುರೋಹಿತ ವರ್ಗದ ಕವಿಗಳು ಬೇರೆ ಬೇರೆ ಸಮಯದಲ್ಲಿ ಮಂತ್ರಗಳನ್ನು ರಚಿಸಿ, ಕಾಲಕ್ರಮೇಣ ಯಾರೋ, ಅವುಗಳನ್ನೆಲ್ಲಾ ಒಟ್ಟುಗೂಡಿಸಿ, ನಾಲ್ಕು ಸಂಹಿತೆಗಳನ್ನಾಗಿ ಮಾಡಿದರೆಂದು ಇವರ ಅಭಿಪ್ರಾಯ ಈ ವಿಚಾರಗಳು ನಿರಾಧಾರವಾಗಿವೆಯೆಂದೂ ವೈದಿಕ ಋಷಿಗಳ ಪರಂಪರೆಗೆ ವಿರುದ್ಧವಾಗಿವೆಯೆಂದೂ ಹೇಳುವುದಕ್ಕೆ ಅಡ್ಡಿಯಿಲ್ಲ ವೇದಮಂತ್ರಗಳು ಪ್ರಾಚೀನಕಾಲದ ಕವಿಗಳ ರಚನೆ ಅಂತಃಪ್ರೇರಣೆ ಅಥವಾ ಕಲ್ಪನೆಯ ಪರಿಣಾಮವೆಂದು ಒಪ್ಪಿದರೆ ಇಂತಹ ಪ್ರತಿಯೊಂದು ಕಾಲ್ಪನಿಕ ಕವಿಕೃತಿಗಳನ್ನೂ ವೇದಗಳೆಂದು ಸ್ವೀಕರಿಸಬೇಕಾಗುವುದು ರಾಮಾಯಣ ಮಹಾಭಾರತ ಮೊದಲಾದ ಮಹಾಕಾವ್ಯಗಳೂ, ಸಂತ ತುಕಾರಾಮರ ಅಭಂಗಗಳು ಸರ್ವಜ್ಞ ವಚನಗಳು ಪುರಂದರ ದಾಸರ ಕೀರ್ತನೆಗಳು, ಇವೆಲ್ಲವೂ ವೇದಗಳೆಂದೇ ಹೇಳಬೇಕು ಕೆಲವು ಪಂಡಿತರು ವೈದಿಕ ಛಂದಸ್ಸಿನ ಶೈಲಿಯಲ್ಲಿ ಕವಿತೆಗಳನ್ನು ರಚಿಸಿದ್ದಾರೆ ಶ್ಲೋಕಗಳ ಮೇಲೆ ಋಷಿ, ಮತ್ತು ದೇವತೆಗಳ ಹೆಸರುಗಳನ್ನೂ ಸೂಚಿಸಿದ್ದಾರೆ ಉದಾತ್ತಾದಿ ಸ್ವರಗಳ ಉಪಯೋಗವನ್ನೂ ಮಾಡಿದ್ದಾರೆ ಇಂತಹ ಒಂದು ಪುಸ್ತಕವು, ಛಂದೋದರ್ಶನ*ವೆಂಬ ಶೀರ್ಷಕದಲ್ಲಿ, ಭಾರತೀಯ ವಿದ್ಯಾಭವನದವ

---

* ಈ ಛಂದೋದರ್ಶನ"ದ ಕರ್ತೃ ಶ್ರೀ ಗಣಪತಿ ಶರ್ಮಾ ನಮ್ಮ ಘನಿಷ್ಠ ಸಂಪರ್ಕದಲ್ಲಿದ್ದವರು ತಿರುವಣ್ಣಾಮಲೈನ ರಮಣಾಶ್ರಮದಲ್ಲಿ ಅಡಿಗೆ ಮಾಡುವ ದರ್ವೀಕರರಾಗಿದ್ದರು ಯಾವ ಶಾಸ್ತ್ರವನ್ನೂ ಓದುವ ಅಭ್ಯಾಸ ಅವರಿಗೆ ಇರಲಿಲ್ಲ "ಛಂದೋದರ್ಶನ ಇವರಿಗೆ ಅಗ್ನಿ ವಾಯು ರವಿ ಅಂಗಿರಾಗಳಿಗೆ ಆದಂತೆಯೇ ಆಗಿದ್ದಿತಂತೆ! ೩೨ ಅಥವಾ ೩೪ ವರ್ಷಗಳ ಕಾಲದಲ್ಲಿ ಕಾಲಕಾಲಕ್ಕೆ ರಸೂಲಿಲ್ಲಾಸಲ್ಲಿಲ್ಲಾ ಅಲೈಹೇವಸಲ್ಲಮ್" ಪೈಗಂಬರ್ ಮುಹ

ರಿಂದ ಪ್ರಕಾಶಿತವಾಗಿದೆ. ಗೋಕರ್ಣದಲ್ಲಿ ಈ ಮಂತ್ರಗಳ ದರ್ಶನ ಮಾಡಿದ ಋಷಿಗಳು ಇದ್ದರಂತೆ. ಇದಕ್ಕೆ ಮುನ್ನುಡಿಯನ್ನು ಬರೆಯುತ್ತಾ ಶ್ರೀ ಆರ್. ಆರ್. ದಿವಾಕರರು ಹೊಸ ಹೊಸ ವೇದಸೂಕ್ತಗಳು ಈಗಲೂ ಋಷಿಗಳಿಗೆ ಪ್ರಕಾಶಿತವಾಗುತ್ತಿವೆ ಎಂದು ಹೇಳಿದ್ದಾರೆ. ಅದನ್ನು ನಾವು ಅವಲೋಕಿಸಿ ನೋಡಿರುವೆವು. ಇದನ್ನು ರಚಿಸಿದವರು ಪಂಡಿತರು ಎಂಬುದಕ್ಕೆ ಸಂಶಯವಿಲ್ಲ. ಭಾಷೆಯು ಸರಳವಾಗಿಯೂ, ಸ್ವರಾನ್ವಿತ ವಾಗಿಯೂ ವೈದಿಕ ಛಂದಸ್ಸಿನಲ್ಲಿದೆ. ಇದನ್ನು ವೇದವೆಂದು ಸ್ವೀಕರಿಸಬೇಕಾದರೆ, ಈ ನವೀನ ಸೂಕ್ತಗಳಲ್ಲಿ ಯಾವ ಹೊಸ ಜ್ಞಾನವು ಅಡಕವಾಗಿದೆ? ಪುನಃ ಋಷಿಗಳ ಸೂಚಿ ಯಾಕೆ? ಇದರ ಶಾಖೆ ಯಾವುದು? ಇದು ವೇದಪಾಠ ಕ್ರಮಕ್ಕನುಸಾರ ವಾಗಿದೆಯೆ? ಯಾವ ಯಜ್ಞಗಳಲ್ಲಿ ಈ ಸೂಕ್ತಗಳ ಪ್ರಯೋಗವಾಗುತ್ತದೆ? ನಾಲ್ಕೂ ಸಂಹಿತೆಗಳಿಲ್ಲದ ಯಾವ ವಿಷಯವು ಇದರಲ್ಲಿದೆ? ಋಗ್ಯಜುಸ್ಸಾಮ ಮತ್ತು ಅಥರ್ವವೆಂಬ ನಾಲ್ಕು ಪ್ರಕಾರದ ಮಂತ್ರಗಳಲ್ಲಿ ಇದು ಯಾವ ವರ್ಗಕ್ಕೆ ಸೇರಿದೆ? ಇದರ ಆವಶ್ಯಕತೆ ಅಥವಾ ಪ್ರಯೋಜನವಾದರೂ ಏನು? ಎಂಬಿತ್ಯಾದಿ ಅನೇಕ ಪ್ರಶ್ನೆಗಳು ಹುಟ್ಟುತ್ತವೆ. ಇವುಗಳಿಗೆ ಯಾರೂ ಸಮರ್ಪಕವಾದ ಉತ್ತರಗಳನ್ನು ಕೊಡ ಲಾರರು. ಅಲ್ಲದೆ, ಇದು ವೈದಿಕ ಪರಂಪರೆಗೆ ವಿರುದ್ಧವಾದ ಮಾತು.

ಪರಮಾತ್ಮನ ಕಾವ್ಯಕ್ಕೂ, ಮಾನವ ಕವಿಗಳ ರಚನೆಗೂ, ಇರುವ ಮುಖ್ಯ ಭೇದ ಗಳೇನೆಂದರೆ, ಮಾನವ ಕವಿಗಳ ಕೃತಿಗಳಲ್ಲಿ ಅವರವರಕಲ್ಪನೆ, ಪುನರುಕ್ತಿ, ಇತಿಹಾಸ, ಲೌಕಿಕ ಭಾಷೆ ಮತ್ತು ರೂಢಾರ್ಥಗಳ ಪ್ರಯೋಗ, ಶಬ್ದಾನುಪೂರ್ವೀ ಇದರ ಅಭಾವ, ಯಜ್ಞದಲ್ಲಿ ಅನರ್ಹತೆ, ಅಜ್ಞಾನ, ಪಕ್ಷಪಾತ ಇತ್ಯಾದಿ ಅನೇಕ ದೋಷಗಳು ಇದರಲ್ಲಿವೆ. ಛಂದಸ್ಸಿಗೂ ಶ್ಲೋಕಗಳ ಅರ್ಥಕ್ಕೂ ಸಂಬಂಧವೂ ಇರುವುದಿಲ್ಲ. ಪರಮಾತ್ಮನ ಕಾವ್ಯ ದಲ್ಲಿ ಇಂತಹ ದೋಷಗಳು ಇಲ್ಲ. ಇದರಲ್ಲಿ ಕಲ್ಪನೆಯೂ ಇಲ್ಲ. ಇದು ಎಲ್ಲಾ ಸತ್ಯವಿದ್ಯೆ ಗಳ ಭಂಡಾರ. ಆದಿ ಸೃಷ್ಟಿಯ ಅಗ್ನಿ ಆದಿ ನಾಲ್ಕು ಋಷಿಗಳು ವೇದಪ್ರಕಾಶಕ್ಕೆ ಮಾಧ್ಯಮರು ಮಾತ್ರರಾಗಿದ್ದರು. ಅವರ ಕಲ್ಪನೆಗಳು ಇದರಲ್ಲಿ ಪ್ರಕಟವಾಗಲಿಲ್ಲ. ಆದುದರಿಂದ ವೇದಗಳನ್ನು ಅಪೌರುಷೇಯ, ಅಂದರೆ ಮಾನವನಿರ್ಮಿತವಲ್ಲ, ಎಂದು ಹೇಳು ತ್ತಾರೆ.

ಇನ್ನು ವೇದಗಳಲ್ಲಿ ಬರುವ ಮಂತ್ರಕೃತ್, ಬ್ರಹ್ಮಕೃತ್ ಇತ್ಯಾದಿ ಶಬ್ದಗಳನ್ನು ನೋಡಿ, ಕೆಲವರಿಗೆ ವೇದಮಂತ್ರಗಳ ರಚನೆ ಮಾಡುವ ಋಷಿಗಳ ಭ್ರಾಂತಿಯಾಗುತ್ತದೆ. ಆದರೆ, ಇಲ್ಲಿ ಕರೋತಿ ಶಬ್ದದ ಅರ್ಥವು ಮಂತ್ರಾರ್ಥ ದರ್ಶನವನ್ನು ಸೂಚಿಸುತ್ತದೆ. ಎಂದು ಮೇಲೆ ಸ್ಪಷ್ಟಪಡಿಸಿದ್ದೇವೆ. ಆದುದರಿಂದ ಇಲ್ಲಿಯೂ, ವೇದಮಂತ್ರಗಳ ಅಪೌರುಷೇಯತ್ವದ ಸಿದ್ಧಾಂತವು ಅಬಾಧಿತವಾಗಿಯೇ ನಿಲ್ಲುತ್ತದೆ.

---

ಮ್ಮದ್‌ರವರಿಗೆ ಆದಂತೆ, ಇವರಿಗೂ ಆಗಾಗ "ಛಂದೋದರ್ಶನ"—ಆಗುತ್ತಾ ಹೋಯಿತಂತೆ, "ಋಷಯೋಮಂತ್ರ ದ್ರಷ್ಟಾರಃ"—ಎಂಬ ಆದೇಶವೇ ಇರುವಾಗ, ಇವರು "ಮಹರ್ಷಿ ದೈವರಾತ"ರಾಗಲೇಬೇಕಿತ್ತಲ್ಲ! "ಆ ಗ್ರಂಥದಲ್ಲಿ ಏನಿದೆ?'—ಎಂದು ಕೇಳದಿದ್ದರೇ ಒಳ್ಳಿತು. "ಸರ್ವಂ ವ್ಯರ್ಥಂ, ತಥಾ ಕದರ್ಥಂ । ಕೋಽಪಿ ನವಾರ್ಥಂ ಸಾಧ್ನೋತ್ಯರ್ಥಂ ॥"—"ಎಲ್ಲವೂ ವ್ಯರ್ಥ, ಅಂತೆಯೇ ಸಿಕ್ಕುವುದು ಕದರ್ಥ. ಯಾವನೂ ನವೀನಾರ್ಥವನ್ನಾಗಲಿ, ಆರ್ಥಿಕ ಸಂಪತ್ತನ್ನಾಗಲಿ ಇದರಿಂದ [ಛಂದೋದರ್ಶನ] ಗಳಿಸಲಾರನು," ಎನ್ನುವುದು ಸ್ವಲ್ಪವೇನು, ಬಹಳವಾಗಿಯೇ ಆದರೂ ಕಷ್ಟ"—ಎನಿಸುತ್ತದೆ.

## ವೇದಾಧಿಕಾರ

ಯಥೇಮಾಂ ವಾಚಂ ಕಲ್ಯಾಣೀಮಾವದಾನಿ ಜನೇಭ್ಯಃ ।
ಬ್ರಹ್ಮರಾಜನ್ಯಾಭ್ಯಾಂ ಶೂದ್ರಾಯ ಚಾರ್ಯಾಯ ಚ ಸ್ವಾಯ ಚಾರಣಾಯ ಚ ॥ [ಯಜುರ್ವೇದ ೨೬-೨]

ಈ ಮಂತ್ರದಲ್ಲಿ ಸ್ವಯಂ ಪರಮಾತ್ಮನೇ ಹೇಳುತ್ತಿದ್ದಾನೆ ಎಲೈ ಮನುಷ್ಯರೇ! ಯಾವ ರೀತಿಯಲ್ಲಿ ನಾನು ಈ ಕಲ್ಯಾಣಕಾರೀ ವೇದವಾಣಿಯನ್ನು ಎಲ್ಲಾ ಜನರಿಗೂ ಅರ್ಥಾತ್ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮತ್ತು ಶೂದ್ರರಿಗೂ ಕೊಡುತ್ತಿದ್ದೇನೆಯೋ ಅದೇ ರೀತಿಯಲ್ಲಿ ನೀವು ಕೂಡ ಎಲ್ಲರಿಗೂ ವೇದೋಪದೇಶವನ್ನು ಮಾಡುತ್ತಿರಬೇಕು ಎಂದು ಎಲ್ಲರಿಗೂ ವೇದೋಪದೇಶ ಮಾಡಬೇಕೆಂದರೆ ಯಾರಿಗೆಲ್ಲಾ ಅರ್ಹತೆ ಮತ್ತು ಜಿಜ್ಞಾಸೆ ಇದೆಯೋ ಅವರಿಗೆಲ್ಲಾ ವೇದೋಪದೇಶವು ಸಿಗಬೇಕು ವೇದೋಪದೇಶದ ಕಾರ್ಯದಲ್ಲಿ ಪಕ್ಷಪಾತ ಮಾಡಬಾರದು ಎಂದು ಇದರ ತಾತ್ಪರ್ಯ ಸಂಕ್ಷಿಪ್ತವಾಗಿ ಹೇಳುವುದೇನೆಂದರೆ ನಾಲ್ಕೂ ವರ್ಣದವರಿಗೂ ವೇದಾಧಿಕಾರವಿದೆ ಈ ವಿಷಯದಲ್ಲಿ ಮುನ್ನವೂ ವಿಶಾಲ ಪ್ರಕಾಶ ಬೀರಿದ್ದೇವೆ

ಮನುಸ್ಮೃತಿಯ ಒಂದು ಶ್ಲೋಕವು ಹೀಗೆಂದು ಹೇಳುತ್ತದೆ—

ಯೋಽನಧೀತ್ಯ ದ್ವಿಜೋ ವೇದಮನ್ಯತ್ರ ಕುರುತೇ ಶ್ರಮಮ್ ।
ಸ ಜೀವನ್ನೇವ ಶೂದ್ರತ್ವಮಾಶುಗಚ್ಛತಿ ಸಾನ್ವಯಃ ॥ [ಮನು ೨-೧೬೮]

ಎಂದರೆ ಪ್ರತಿಯೊಬ್ಬ ದ್ವಿಜನಾದವನಿಗೆ, ನಿತ್ಯ ವೇದಪಾಠವು ಅನಿವಾರ್ಯವಾಗಿದೆ ಒಂದು ವೇಳೆ, ದ್ವಿಜನಾದವನು ವೇದಪಾಠವನ್ನು ಬಿಟ್ಟು ಬೇರೆ ಕಾರ್ಯದಲ್ಲಿ ಎಷ್ಟು ಶ್ರಮ ಪಟ್ಟರೂ ಅವನು ಪರಿವಾರ ಸಮೇತನಾಗಿ ಶೂದ್ರನಾಗುತ್ತಾನೆ ಅವನ ಮಕ್ಕಳು ಮೊಮ್ಮಕ್ಕಳು ಎಲ್ಲರೂ ಪತಿತರಾಗುತ್ತಾರೆ ಇನ್ನೊಂದು ಕಡೆಯಲ್ಲಿ—

ಶನಕೈಸ್ತು ಕ್ರಿಯಾಲೋಪಾದಿಮಾಃ ಕ್ಷತ್ರಿಯಜಾತಯಃ ।
ವೃಷಲತ್ವಂ ಗತಾ ಲೋಕೇ ಬ್ರಾಹ್ಮಣಾದರ್ಶನೇನ ಚ ॥
ಪೌಂಡ್ರಕಾಶ್ಚೌಡ್ರದ್ರವಿಡಾಃ ಕಾಂಬೋಜಯವನಾಃ ಶಕಾಃ ।
ಪಾರದಾಪಲ್ಲವಾಶ್ಚೀನಾಃ ಕಿರಾತ ದರದಾಃ ಖಶಾಃ ॥ [ಮನುಸ್ಮೃತಿ ೧೦-೪೩, ೪೪]

ಎಂದೂ ಹೇಳಿದ್ದಾರೆ ಇದರಿಂದ ಪೌಂಡ್ರರು ಔಡ್ರರು ದ್ರವಿಡರು ಕಾಂಬೋಜರು ಯವನರು ಶಕರು, ಪಾರದರು ಪಲ್ಲವರು ಚೀನರು ಕಿರಾತರು ದರದರು ತಥಾ ಖಶ [ಈಗಿನ ಅರಬದೇಶದ ಶೇಖ]ರು ಇವರೆಲ್ಲಾ ಆರ್ಯ ಕ್ಷತ್ರಿಯರಾಗಿದ್ದರು ಆದರೆ ಬ್ರಾಹ್ಮಣರ ಅಂದರೆ ವೇದೋಪದೇಶಕರ ಅಭಾವದಿಂದ ಮತ್ತು ವೇದೋಕ್ತ ಕರ್ಮಗಳನ್ನು ಬಿಟ್ಟುದರಿಂದ, ಪತಿತರಾಗಿ, ಶೂದ್ರರೆನಿಸಿಕೊಂಡರು ಶೂದ್ರರ ಸಂಖ್ಯೆಯಲ್ಲಿ ವೃದ್ಧಿಯಾದರೆ ರಾಷ್ಟ್ರಕ್ಕೆದೊಡ್ಡ ಅಪಾಯವಿದೆ ಎಂದೂ ಮಹರ್ಷಿ ಮನು ಹೇಳಿದ್ದಾರೆ—

ಯದ್ರಾಷ್ಟ್ರಂ ಶೂದ್ರಭೂಯಿಷ್ಠಂ ನಾಸ್ತಿಕಾಕ್ರಾಂತಮದ್ವಿಜಂ ।
ವಿನಶ್ಯತ್ಯಾಶು ತತ್ಕೃತ್ಸ್ನಂ ದುರ್ಭಿಕ್ಷವ್ಯಾಧಿ ಪೀಡಿತಂ ॥ [ಮನು ೮-೨೨]

ಎಂದರೆ ಯಾವ ರಾಷ್ಟ್ರದಲ್ಲಿ ಶೂದ್ರರೂ ನಾಸ್ತಿಕರೂ ಸಂಸ್ಕಾರಹೀನರೂ ಅಧಿಕ ಸಂಖ್ಯೆಯಲ್ಲಿ ಬೆಳೆಯುತ್ತಾರೋ ಆ ರಾಷ್ಟ್ರವು ದುರ್ಭಿಕ್ಷೆ, ವ್ಯಾಧಿ ಇತ್ಯಾದಿಗಳಿಂದ ಶೀಘ್ರ ನಷ್ಟವಾಗುವುದು

ಈ ಎಲ್ಲಾ ಪ್ರಮಾಣಗಳಿಂದ ವೇದವಾಣಿಯನ್ನು ಕಲಿಯುವ ಅಧಿಕಾರ ಎಲ್ಲರಿಗೂ ಇದೆ ಪ್ರತಿಯೊಬ್ಬ ದ್ವಿಜನಿಗೂ ನಿತ್ಯವೇದಗಳ ಸ್ವಾಧ್ಯಾಯ ಮಾಡುವುದು ಅನಿವಾರ್ಯ ವೇದಗಳ ಸ್ವಾಧ್ಯಾಯನ್ನು ಬಿಡುವುದರಿಂದ ಶೂದ್ರತ್ವವು ಒದಗುತ್ತದೆ ಮತ್ತು ಶೂದ್ರತ್ವದ ವೃದ್ಧಿಯು ರಾಷ್ಟ್ರಕ್ಕೆ ಅಶುಭ ಚಿಹ್ನೆ ಆದುದರಿಂದ ಜನರು ಪತಿತರಾಗದಂತೆ ವೇದಪ್ರಚಾರವು ಜೋರಾಗಿ ನಡೆಯುತ್ತಿರಬೇಕು, ಎಂದು ಸ್ಪಷ್ಟವಾಗುತ್ತದೆ **ಪಿತೃದೇವ-ಮನುಷ್ಯಾಣಾಂ ವೇದಶ್ಚಕ್ಷುಃ ಸನಾತನಂ** [ಮನುಸ್ಮೃತಿ ೧೨-೯೪] ಎಂದರೆ ವೇದಗಳು ವೈಜ್ಞಾನಿಕರಿಗೂ ವಿದ್ವಾಂಸರಿಗೂ ಮತ್ತು ಸಾಮಾನ್ಯ ಜನರಿಗೂ ಸನಾತನ ಕಣ್ಣುಗಳಂತೆ ನಿತ್ಯ ಮಾರ್ಗದರ್ಶಕವಾಗಿವೆ ಇದರ ತಾತ್ಪರ್ಯ ವೇನೆಂದರೆ ವೇದಗಳಿಲ್ಲದೆ ಜನರೆಲ್ಲಾ ಕುರುಡರಂತೆಯೇ ದಿಕ್ಕೆಟ್ಟು ಬೀಳುವರು ಆದುದರಿಂದ ಪ್ರತಿಯೊಬ್ಬರಿಗೂ ವೇದರೂಪೀ ಜ್ಞಾನದೃಷ್ಟಿಯು ಬೇಕೇಬೇಕು

ಈ ರೀತಿ ವೇದಾದಿ ಶಾಸ್ತ್ರಗಳು ಸ್ಪಷ್ಟವಾಗಿ ವೇದಾಧಿಕಾರವು ಎಲ್ಲರಿಗೂ ಇದೆ ಎಂದು ಹೇಳಿದ್ದರೂ ಕೆಲವು ಅರ್ವಾಚೀನ ಪಂಡಿತರು ಸ್ತ್ರೀಶೂದ್ರರಿಗೆ ವೇದಾಧಿಕಾರವಿಲ್ಲ ವೆಂದು ಹೇಳಿದ್ದಾರೆ ಉದಾಹರಣೆಗೆ,

**ಸ್ತ್ರೀ ಶೂದ್ರೌ ನಾಧೀಯತಾಮಿತಿ ಶ್ರುತೇಃ ॥** [ಪುರಾಣತಂತ್ರ]

ಎಂದರೆ ಸ್ತ್ರೀ ಮತ್ತು ಶೂದ್ರರು ವೇದಗಳನ್ನು ಓದಬಾರದೆಂದು ಶ್ರುತಿಗಳ ಹೆಸರಲ್ಲಿ ಶ್ರುತಿಗಳಿಗೆ ವಿರುದ್ಧವಾದ ಮಾತನ್ನು ಹೇಳಿದ್ದಾರೆ ಇನ್ನೊಂದು ಕಡೆಯಲ್ಲಿ '**ಸ್ತ್ರೀ ಶೂದ್ರಾಶ್ಚ ಸಧರ್ಮಾಣಃ ಇತಿ ವಾಕ್ಯಂ** [ವ್ಯವಹಾರ ಮಯೂಖ] ಎಂದು ಹೇಳಿದ್ದಾರೆ ಎಂದರೆ ಸ್ತ್ರೀ ಮತ್ತು ಶೂದ್ರರು ಸಮಾನ ಧರ್ಮಿಗಳು ಇಲ್ಲಿಯೂ ಕೂಡ ಈ ವಿಚಾರದ ಆದಾರ ಶ್ರುತಿಗಳೆಂದು ತೋರಿಸಲಿಕ್ಕೆ ಪ್ರಯತ್ನ ಮಾಡಿದ್ದಾರೆ ಶಂಕರಾಚಾರ್ಯರು ಬ್ರಹ್ಮಸೂತ್ರದ ಭಾಷ್ಯ [ಬ್ರಹ್ಮಸೂತ್ರ ೧-೩-೩೮][೧]ಯಲ್ಲಿ **ಏತಚ್ಛ್ಮಶಾನಂ ಯಃಚ್ಛೂದ್ರಸ್ತಸ್ಮಾ ಚ್ಛೂದ್ರಸ್ಯ ಸಮೀಪೇ ನಾಧ್ಯೇತವ್ಯಂ**' ಎಂದು ಬರೆದಿದ್ದಾರೆ ಶೂದ್ರರು ಸ್ಮಶಾನದಂತೆ ಅಪವಿತ್ರರು ಆದುದರಿಂದ ಅವರ ಸಮೀಪ ವೇದಗಳನ್ನು ಓದಬಾರದೆಂದು ಹೇಳಿ ಶಂಕರಾಚಾರ್ಯರು ತಮ್ಮ ಕಾಲದಲ್ಲಿ ಪ್ರಚಾರದಲ್ಲಿದ್ದ ಶೂದ್ರ ವಿರೋದೀಭಾವನೆಯನ್ನು ಸ್ವೀಕರಿಸಿದ್ದಾರೆ ಇಷ್ಟರಲ್ಲಿಯೇ ತೃಪ್ತರಾಗದೆ ಮುಂದೆ "**ಅಥಾಸ್ಯ ವೇದಮುಪಶೃಣ್ವತಸ್ತ್ರಪು ಜತುಭ್ಯಾಂ ಶ್ರೋತ್ರ ಪರಿಪೂರ್ಣಂ ಭವತಿ ಚ ವೇದೋಚ್ಚಾರಣೇ ಜಿಹ್ವಾಚ್ಛೇದೋ ಧಾರಣೇ ಶರೀರಭೇದ ಇತಿ**" ಅಂದರೆ, ವೇದಪಾಠವನ್ನು ಶೂದ್ರರು ಕೇಳದರೆ, ಅವರ ಎರಡೂ ಕಿವಿಗಳಿಗೂ ಸೀಸೆ ಅಥವಾ ಅರಗನ್ನು ಬಿಸಿಮಾಡಿ ತುಂಬಸಬೇಕು, ಓದಿದರೆ ನಾಲಿಗೆಯನ್ನು ಸೀಳಿಹಾಕಬೇಕು ಧಾರಣೆಮಾಡಿದರೆ ಶರೀರವನ್ನೇ ಕಡಿದುಹಾಕಬೇಕೆಂಬ ವಿಚಾರವನ್ನು ಶಂಕರಾಚಾರ್ಯರು ಸಮರ್ಥಿಸಿದ್ದಾರೆ ಇಂತಹ ಮಾನವವಿರೋಧಿ ದುಷ್ಟ ವಿಚಾರಗಳ ಮೂಲವನ್ನು ಹುಡುಕಿದರೆ, ಸ್ಮೃತಿಗ್ರಂಥಗಳಲ್ಲಿ ಇದು ಕಂಡುಬರುತ್ತದೆ "**ವೇದಾಕ್ಷರವಿಚಾರೇಣ ಶೂದ್ರಃ ಪತತಿ**

[೧] ಶ್ರವಣಾಧ್ಯಯನಾರ್ಥ ಪ್ರತಿಷೇಧಾತ್ ಸ್ಮೃತೇಶ್ಚ ॥ ವೇದಾಂತ ದರ್ಶನ ೧-೩-೩೮ ॥

ತತ್ಕ್ಷಣಾತ್ ಎಂದು ಪರಾಶರ ಸ್ಮೃತಿ [೧–೫೩]ಯಲ್ಲಿ ಬರೆದಿದೆ ಅಂದರೆ ವೇದಗಳನ್ನು ಓದಿದರೆ ಶೂದ್ರರು ಆ ಕ್ಷಣವೇ ಪತಿತರಾಗುತ್ತಾರೆ! ಸ್ವಲ್ಪ ವಿಚಾರಿಸಿದರೆ ಈ ವಾಕ್ಯವು ಎಷ್ಟು ಅವಿವೇಕಪೂರ್ಣವಾಗಿದೆ ಎಂದು ಸ್ಪಷ್ಟವಾಗುತ್ತದೆ ದ್ವಿಜರು ಪತಿತರಾಗಿ ಶೂದ್ರರಾಗುತ್ತಾರೆ ಎಂದು ಮನುಸ್ಮೃತಿಯಲ್ಲಿ ಹೇಳಿದೆ ಅಂದರೆ ಪತಿತರನ್ನೇ ಶೂದ್ರರೆನ್ನುತ್ತಾರೆ ಇನ್ನು ಶೂದ್ರರೂ ವೇದ ಓದಿದರೆ ಪತಿತರಾಗುತ್ತಾರೆ ಎಂದು ಹೇಳುವವರು ವೇದಗಳನ್ನು ಓದದೆ ಇದ್ದ ಶೂದ್ರರು ಪವಿತ್ರರು ಎಂದು ಒಪ್ಪಬೇಕು ತಾನೆ?

ಮನುಸ್ಮೃತಿ ೪–೮೦ರಲ್ಲಿಯೂ 'ನ ಶೂದ್ರಾಯ ಮತಿಂ ದದ್ಯಾತ್ ಎಂದು ಹೇಳಿದ್ದಾರೆ ಅಂದರೆ ಶೂದ್ರರಿಗೆ ವಿದ್ಯೆ, ಯಜ್ಞಶೇಷ ಅಥವಾ ಪ್ರಸಾದ ಧರ್ಮೋಪದೇಶ, ವ್ರತಾನುಷ್ಠಾನವ್ಯಾನ ಇತ್ಯಾದಿಗಳನ್ನು ಕೊಡಬಾರದು ಯಾರು ಶೂದ್ರರಿಗೆ ಧರ್ಮೋಪದೇಶ ಮತ್ತು ವ್ರತೋಪದೇಶಗಳನ್ನು ಮಾಡುತ್ತಾರೋ ಅವರು ಅಸಂವೃತವೆಂಬ ಘೋರ ನರಕಕ್ಕೆ ಹೋಗುತ್ತಾರೆ ಎಂದು ಇದೇ ಪ್ರಕರಣದಲ್ಲಿ ಬರೆದಿದೆ[೨] ಮನುಸ್ಮೃತಿಯಲ್ಲಿ ಅಧ್ಯಾಯ ೪ ಶ್ಲೋಕ ೮೮ ಮತ್ತು ೮೯ರಲ್ಲಿ ಬೇರೆ ಬೇರೆ ರೀತಿಯ ನರಕಗಳ ವರ್ಣನೆ ಇದೆ ಆದರೆ ಇಲ್ಲಿ ಅಸಂವೃತವೆಂಬ ಹೆಸರಿನ ಯಾವ ನರಕವೂ ಇಲ್ಲ ಇದರಿಂದ ಈ ಅಸಂವೃತ ನರಕದ ಶ್ಲೋಕವು ಶೂದ್ರದ್ವೇಷಿ ಪಂಡಿತರಿಂದ ಮನುಸ್ಮೃತಿಯಲ್ಲಿ ಸೇರಿಸಲಾಗಿದೆ ಎಂಬುದಕ್ಕೆ ಸಂದೇಹವಿಲ್ಲ ಮೇಲೆ ಹೇಳಿದ ಪರಾಶರ ಸ್ಮೃತಿಯ ವಾಕ್ಯವೂ ಋಷಿವಾಕ್ಯವಲ್ಲ ಅಲ್ಪಜ್ಞರೂ ಸ್ವಾರ್ಥಿಗಳೂ ಆದ ಯಾರೋ ಪಂಡಿತಮಾನಿಗಳ ವಾಕ್ಯವೆಂದು ತಿಳಿದ ಕೊಳ್ಳಬೇಕು ಯಾಕೆಂದರೆ ಈ ವಿಚಾರಗಳು ವೇದವಿರುದ್ಧವಾಗಿವೆಯಲ್ಲದೆ ಋಷಿಗಳ ಮನಸ್ಸಿನಲ್ಲಿ ಇಂತಹ ಧೂರ್ತಭಾವನೆಗಳು ಹುಟ್ಟುವುದಿಲ್ಲ ಋಷಿಗಳು ಕರುಣಾಳುಗಳು ಸರ್ವಕಲ್ಯಾಣ ಮನೋಕಾಮನೆಯುಳ್ಳವರು

**ಶೂದ್ರೋ ಬ್ರಾಹ್ಮಣತಾಮೇತಿ ಬ್ರಾಹ್ಮಣಶ್ಚೈತಿ ಶೂದ್ರತಾಂ ।**
**ಕ್ಷತ್ರಿಯಾಜ್ಜಾತಮೇವಂತು ವಿದ್ಯಾದ್ವೈಶ್ಯಾತ್ತಥೈವ ಚ ॥** [ಮನುಸ್ಮೃತಿ ೧೦–೬೫]

ಅರ್ಥಾತ್ ಶೂದ್ರಕುಲದಲ್ಲಿ ಹುಟ್ಟಿದವರು ಬ್ರಾಹ್ಮಣರಾಗುತ್ತಾರೆ ಬ್ರಾಹ್ಮಣಕುಲದಲ್ಲಿ ಹುಟ್ಟಿದವರೂ ಶೂದ್ರರಾಗುತ್ತಾರೆ ಇದೇ ರೀತಿ ಕ್ಷತ್ರಿಯರೂ ವೈಶ್ಯರೂ ಗುಣ ಕರ್ಮ ಸ್ವಭಾವಗಳಿಗನುಸಾರವಾಗಿ ಉತ್ತಮ ಅಥವಾ ಅಧಮ ವರ್ಣಕ್ಕೆ ಸೇರುತ್ತಾರೆ ಅಂದರೆ ಮನುಷ್ಯರ ವರ್ಣವು ಜನ್ಮದ ಆಧಾರದಿಂದಲ್ಲ ಗುಣಕರ್ಮ ಸ್ವಭಾವಗಳ ಆಧಾರದಿಂದ ನಿರ್ಧಾರಿಸಲ್ಪಡುತ್ತದೆ ಇದೇ ವೇದಗಳಿಗೆ ಅನುಕೂಲವಾದ ಸ್ಮೃತಿಗಳ ವಿಚಾರ

**ತಪೋಬೀಜ ಪ್ರಭಾವೈಸ್ತು ತೇ ಗಚ್ಛಂತಿ ಯುಗೇ ಯುಗೇ ।**
**ಉತ್ಕರ್ಷಂ ಚಾಪಕರ್ಷಂ ಚ ಮನುಷ್ಯೇಷ್ವಿಹ ಜನ್ಮತಃ ॥** [ಮನುಸ್ಮೃತಿ ೧೦–೪೨]

ಎಂದರೆ ಮನುಷ್ಯರು ಹುಟ್ಟಿದ ಬಳಿಕ ಅವರ ಬೀಜ ಮತ್ತು ತಪಸ್ಸನ್ನನುಸರಿಸಿ ಉನ್ನತಿ ಅಥವಾ ಅವನತಿಯನ್ನು ಹೊಂದುತ್ತಾರೆ ಇಲ್ಲಿ ಬೀಜವೆಂದರೆ, ತಂದೆಯ

[೨] ಯೋಹ್ಯಸ್ಯ ಧರ್ಮಮಾಚಷ್ಟೇ ಯಶ್ಚೈವಾದಿಶತಿ ವ್ರತಂ । ಸೋಽಸಂವೃತಂ ನಾಮ ತಮಃ ಸಹತೇನೈವ ಮಜ್ಜತಿ ॥ ಮನು ೪–೮೧ ॥

ವಿ ರ್ಯ ಉತ್ತಮ ವ್ರಿಜದಿಂದಲ್ಲೆ ಉತ್ತಮ ಬೆಳೆಯಾಗುವುದು ತಾನೆ? ಎಂದು ವೇಳೆ ವಿ ಜವು ಉತ್ತಮವಿದ್ದರೂ ಕೆಲವು ವೇಳೆ ಬೂಮಿಯು ಫಲವತ್ತಾಗಿರುವುದಿಲ್ಲ ಜಲ ವಾಯು ಅನುಕೂಲವಾಗಿರುವುದಿಲ್ಲ ಕ್ರಿಮಿಕೀಟಾದಿಗಳ ಉಪದ್ರವವೂ ಇರುತ್ತದೆ ಆಗ ಉತ್ತಮ ಬೆಳೆಯು ಸಿಗುವುದಿಲ್ಲ ಇದೆ ರಿ ತಿ ವೀಜವು ಅಷ್ಟೊಂದು ಉತ್ತಮ ವಿಲ್ಲದಿದ್ದರೂ ಕೆಲವು ವಾರಿ ಭೂಮಿ ಫಲವತ್ತಾಗಿದ್ದು ಜಲ ವಾಯು ಇತ್ಯಾದಿಗಳು ಅನುಕೂಲವಾಗಿದ್ದರೆ ಉತ್ತಮ ಬೆಳೆಯು ಎರಲು ಸಾಧ್ಯವಿದೆ ಮನುಷ್ಯರಲ್ಲಿ ಸಂಸ್ಕಾರ ವಿದ್ಯೆ ಮತ್ತು ತಪಸ್ಸಿನಿಂದ ವಿ ಜದೋ ಷವು ನಷ್ಟವಾಗುತ್ತದೆ ಆದುದರಿಂದ ತಂದೆತಾಯಿಗಳು ಉತ್ತಮರಲ್ಲದಿದ್ದರೂ ಮಕ್ಕಳು ಉತ್ತಮರಾಗಲಿಕ್ಕೆ ಸಾದ್ಯವಿದೆ ಇದೇ ರೀತಿ ಶ್ರೇಷ್ಠ ತಂದೆತಾಯಿಗಳ ಮಕ್ಕಳು ಕುಸಂಸ್ಕಾರ ಅವಿದ್ಯೆ ತಪಸ್ಸಿನ ಅಭಾವ ಇತ್ಯಾದಿಗಳಿಂದ ಪತಿತರಾಗುವುದೂ ಸ್ವಾಭಾವಿಕ

**'ಧರ್ಮಚರ್ಯಯಾ ಜಘನ್ಯೋ ವರ್ಣಃ ಪೂರ್ವಂ ಪೂರ್ವಂ ವರ್ಣಮಾಪದ್ಯತೇ ಜಾತಿಪರಿವೃತ್ತೌ ॥ ಅಧರ್ಮ ಚರ್ಯಯಾ ಪೂರ್ವೋ ವರ್ಣೋ ಜಘನ್ಯಂ ಜಘನ್ಯಂ ವರ್ಣಮಾಪದ್ಯತೇ ಜಾತಿಪರಿವೃತ್ತೌ ॥**

ಎಂದು ಆಪಸ್ತಂಬ ಧರ್ಮಸೂತ್ರವು ಹೇಳುತ್ತದೆ[೧] ಅಂದರೆ ವೇದೋಕ್ತಧರ್ಮಗಳ ಪಾಲನೆಯಿಂದ ನಿ ಚ ವರ್ಣವು ಉತ್ತಮ ವರ್ಣವಾಗಿ ಪರಿವರ್ತನೆಯಾಗುತ್ತದೆ ಮತ್ತು ಅದರ್ಮಾ ಚರಣೆಯಿಂದ ಬ್ರಾಹ್ಮಣಾದಿ ಉತ್ತಮ ವರ್ಣಗಳೂ ನೀಚವರ್ಣಗಳಾಗು ತ್ತವೆ ಈ ರೀತಿ ವರ್ಣಗಳು ಪರಿವರ್ತನಿಯವಾಗಿವೆ ಮತ್ತು ಇದು ಮನುಷ್ಯರ ಕೈಯಲ್ಲಿದೆ[೨]

ಸ್ವಾಧ್ಯಾಯ ವ್ರತ ಹೋಮ, ತ್ರೈವಿದ್ಯೆ ಯಾಗ ಸಂತತಿ, ಮಹಾಯಜ್ಞ, ಯಜ್ಞ ಇತ್ಯಾದಿಗಳಿಂದ ಮನುಷ್ಯರ ತನುವು ಬ್ರಾಹ್ಮಣತ್ವವನ್ನು ಹೊಂದುತ್ತದೆ ಎಂದು ಮಹರ್ಷಿ ಮನು ಹೇಳಿದ್ದಾರೆ[೩] ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಮಾತ್ರಕ್ಕೆ ಯಾರಿಗೂ ಬ್ರಾಹ್ಮಣ ವರ್ಣವಾಗಲೀ ಬ್ರಹ್ಮತೇಜಸ್ಸಾಗಲೀ ಒದಗುವುದಿಲ್ಲವೆಂದೂ ಋಷಿಗಳು ಸ್ಪಷ್ಟಪಡಿಸಿದ್ದಾರೆ[೪]

ಶೂದ್ರರೆಂದರೆ ಅಜ್ಞಾನವಶಾತ್ ದೂರಕ್ಕೆ ದುಃಖಭರಿತರಾಗಿ ಓಡುವವರು [ಶುಚಾ ದ್ರವತಿ] ಮೂರ್ಖರು [ಶೂನ್ಯಃ ದೃಷ್ಟ್ಯಾ] ಅಥವಾ ಅಪವಿತ್ರರು—ಎಂದು ಅರ್ಥವಾಗುತ್ತದೆ ಶೂರರೂ ಕೆಲವು ವಾರಿ ಧೃತಿಗೆಟ್ಟು ಹೇಡಿಗಳಂತೆ ವರ್ತಿಸುತ್ತಾರೆ ಮಹಾಭಾರತದಲ್ಲಿ ಅರ್ಜುನನು ಹೇಡಿಗಳಂತೆ ರಣರಂಗದಿಂದ ಹಿಮ್ಮೆಟ್ಟಲು ಯತ್ನಿಸ ಲಿಲ್ಲವೇ? ಇದೇ ರೀತಿ ಹೇಡಿಗಳೆನಿಸಿಕೊಂಡವರೂ ಯೊ ಗ್ಯ ತರಬೇತಿ ಶಿಕ್ಷಣ

---

[೧] ಆಪಸ್ತಂಬ ಧರ್ಮಸೂತ್ರ ॥ ಪ್ರಶ್ನ ೨ ಪಟಲ ೫ ಖಂಡ ೧೧ ಸೂತ್ರ ೧೦ ೧೧ ॥

[೨] ನೋಡಿರಿ ಶುಕ್ರನೀತಿಃ ॥ ನ ಜಾತ್ಯಾ ಬ್ರಾಹ್ಮಣಶ್ಚಾತ್ರ ಕ್ಷತ್ರಿಯೋ ವೈಶ್ಯ ಏವ ಚ । ನ ಶೂದ್ರೋ ನ ಚ ವೈ ಮ್ಲೇಚ್ಛೋ ಭೇದಿತಾ ಗುಣಕರ್ಮಭಿಃ ॥ ಅಧ್ಯಾಯ ೧ ಶ್ಲೋಕ ೩೮]

[೩] ಸ್ವಾಧ್ಯಾಯೇನ ವ್ರತೈರ್ಹೋಮೈಸ್ತ್ರೈವಿದ್ಯೇನೇಜ್ಯಯಾ ಸುತೈಃ ।
ಮಹಾಯಜ್ಞೈಶ್ಚ ಯಜ್ಞೈಶ್ಚ ಬ್ರಾಹ್ಮೀಯಂ ಕ್ರಿಯತೇ ತನುಃ ॥ ಮನುಸ್ಮೃತಿ ೨–೨೮ ॥

[೪] ಬ್ರಾಹ್ಮಣಸ್ತು ಸಮುತ್ಪನ್ನಾಃ ಸರ್ವೇ ತೇ ಕಿಂ ನು ಬ್ರಾಹ್ಮಣಾಃ ।
ನ ವರ್ಣತೋ ನ ಜನಕಾದ್ ಬ್ರಾಹ್ಮಂ ತೇಜಃ ಪ್ರಪದ್ಯತೇ ॥ ಶುಕ್ರನೀತಿ ೧–೩೯ ॥

ಉತ್ಸಾಹ, ಬಲ ಇತ್ಯಾದಿಗಳಿಂದ ವೀರರಾಗಬಲ್ಲರು ಅಂತೆಯೇ ಮೂರ್ಖರು ವಿದ್ವಾಂಸರಾಗುತ್ತಾರೆ, ಅಜ್ಞಾನಿಗಳು ಜ್ಞಾನಿಗಳಾಗುತ್ತಾರೆ ಅಪವಿತ್ರರು ಪವಿತ್ರರಾಗುತ್ತಾರೆ ಆದುದರಿಂದ ಶೂದ್ರರು ಬ್ರಾಹ್ಮಣರಾಗುವುದರಲ್ಲಿ ಆಶ್ಚರ್ಯವೇನು? ವೇದಗಳಲ್ಲಿ ವಿಹರಿಸುವವರು ಬ್ರಾಹ್ಮಣರೆನಿಸಿಕೊಳ್ಳುತ್ತಾರಲ್ಲದೆ ಪುರಾಣ ಪಾಠ ಮೂರ್ತಿಪೂಜಾದಿ ಪಾಷಂಡ ಕರ್ಮಗಳಲ್ಲಿ ನಿರತರಾದವರು ಬ್ರಾಹ್ಮಣರಲ್ಲ ಆದುದರಿಂದಲೇ ವೇದಾಧ್ಯಯನವನ್ನು ಬಿಟ್ಟ ದ್ವಿಜರೂ ಶೂದ್ರರಾಗುತ್ತಾರೆ ಎಂದು ಋಷಿಗಳು ಹೇಳಿದ್ದಾರೆ ವೇದಗಳು ಅಗ್ನಿಯಂತೆಯೂ, ಮನುಷ್ಯರ ಮತಿಯು ಕಬ್ಬಿಣದಂತೆಯೂ ಇವೆ ಎನ್ನಬಹುದು ಯಾವ ರೀತಿಯಲ್ಲಿ, ಅಗ್ನಿಯ ಸಂಪರ್ಕದಲ್ಲಿರುವ ತನಕ ಕಬ್ಬಿಣವು ಪ್ರಜ್ವಲಿಸುತ್ತಿದ್ದು, ಅಗ್ನಿಯಿಂದ ದೂರ ಸರಿದಂತೆ ಅದು ಕಪ್ಪಾಗಿ, ತುಕ್ಕು ಹಿಡಿಯುತ್ತದೆಯೋ, ಅದೇ ರೀತಿಯಲ್ಲಿ ವೇದಗಳ ಅಧ್ಯಯನ ಮಾಡುತ್ತಿರುವ ತನಕ ಮನುಷ್ಯರ ಬುದ್ಧಿಯು ಉತ್ತರೋತ್ತರ ಬೆಳಗುತ್ತಿರುವುದು, ಮತ್ತು ವೇದಾಧ್ಯಯನ ಬಿಡುತ್ತಾ ನಡೆದಂತೆ ಅವರಲ್ಲಿ ತಮೋಗುಣವು ತುಂಬುವುದು ಇಂತಹ ತಮೋಗುಣಿಗಳು, ಅಥವಾ ಶೂದ್ರರು ಯಾವ ರಾಷ್ಟ್ರದಲ್ಲಿ ಹೆಚ್ಚಾಗುತ್ತಾರೋ ಆ ರಾಷ್ಟ್ರವು ದುರ್ಭಿಕ್ಷ, ವ್ಯಾಧಿ ಇತ್ಯಾದಿಗಳಿಂದ ನಾಶವಾಗುತ್ತದೆ ಎಂದು ಋಷಿಗಳು ಹೇಳಿದ್ದಾರೆ ಆದುದರಿಂದಲೇ—

ಧರ್ಮೇಪ್ಸವಸ್ತು ಧರ್ಮಜ್ಞಾಃ ಸತಾಂವೃತ್ತ ಮನುಷ್ಠಿತಾಃ ।
ಮಂತ್ರವರ್ಜಂ ನ ದುಷ್ಯಂತಿ ಪ್ರಶಂಸಾಂ ಪ್ರಾಪ್ನುವಂತಿ ಚ ॥
[ಮನುಸ್ಮೃತಿ ೧೦–೧೨೭]

ಎಂದು ಮನುಮಹರ್ಷಿಗಳು ಹೇಳಿದ್ದಾರೆ ಅಂದರೆ, ಧರ್ಮ ಜಿಜ್ಞಾಸುಗಳು, ಧರ್ಮವನ್ನು ತಿಳಿದವರು, ಸತ್ಪುರುಷರ ಮಾರ್ಗದಲ್ಲಿ ನಡೆಯುತ್ತಿರುವವರು, ಶೂದ್ರರಾದರೂ, ಪ್ರಶಂಸೆಗೆ ಪಾತ್ರರಾಗಿದ್ದಾರೆ[೭] ಅವರು ಹೋಮಾದಿಗಳನ್ನು ಮಾಡಬಹುದು ಆದರೆ, ಸಂಸ್ಕಾರವಾಗುವ ತನಕ ಮಂತ್ರಪಾಠ ಮಾಡಬಾರದೆಂದೂ ಹೇಳುತ್ತಾರೆ ಈ ಉಪನಯನ, ವೇದಾರಂಭಾದಿ ಸಂಸ್ಕಾರಗಳು ಮನೋವಿಜ್ಞಾನದ ಆಧಾರದಲ್ಲಿ ನಿರ್ಧರಿಸಲ್ಪಟ್ಟಿವೆ ಆದುದರಿಂದ ಅವುಗಳನ್ನು ಉಪೇಕ್ಷೆ ಮಾಡಬಾರದು ಪಾತ್ರತೆಯ ಪರೀಕ್ಷೆ ಮಾಡಿ ಶೂದ್ರಕುಲೋತ್ಪನ್ನರಿಗೂ ಸಂಸ್ಕಾರವನ್ನು ಮಾಡಲೇಬೇಕು ಇದರಿಂದಲೇ ಮಾನವ ಸಮಾಜ, ಹಾಗೂ ರಾಷ್ಟ್ರದ ಉನ್ನತಿಯಾಗುವುದು ಇದನ್ನು ಬಿಟ್ಟು ಶೂದ್ರರು ವೇದಗಳನ್ನು ಓದಬಾರದು ಎಂಬಿತ್ಯಾದಿ ವಿಚಾರಗಳನ್ನು ಪ್ರಚಾರ ಮಾಡುವುದು, ರಾಷ್ಟ್ರವಿರೋಧಿ ಕಾರ್ಯ ಯಾವಾಗ ಇಂತಹ ಕುವಿಚಾರಗಳ ಪ್ರಚಾರವು

---

[೭] ವಿದುರ, ಧರ್ಮವ್ಯಾಧ ಮೊದಲಾದವರು ಶೂದ್ರಕುಲೋತ್ಪನ್ನರಾದರೂ ಧರ್ಮವೇತ್ತರಾಗಿದ್ದರು 'ವಿದುರಾದೀನಾಂತು ಕಶ್ಚಿದ್ವಿಶೇಷಃ —ಎಂದು ಶ್ರೀಮನ್ಮಧ್ವರು ಈ ತಥ್ಯವನ್ನು ಅಂಗೀಕರಿಸಿದ್ದಾರೆ ಐಲೂಷನು ಶೂದ್ರನಾಗಿದ್ದರೂ ಮಂತ್ರದ್ರಷ್ಟಾ ಋಷಿಯಾದನು ಮಾತಂಗ ಋಷಿಯು ಚಾಂಡಾಲಕುಲಜನಾಗಿದ್ದನು ಜಾಬಾಲ ಋಷಿಯ ಕುಲವು ಅಜ್ಞಾತವಾಗಿತ್ತು, ಕ್ಷತ್ರಿಯನಾದ ಕೌಶಿಕನು ವಿಶ್ವಾಮಿತ್ರನೆಂಬ ಬ್ರಾಹ್ಮಣ ಋಷಿಯಾದನು ಈ ರೀತಿ ನೀಚ ಕುಲದವರು ಉತ್ತಮ ವರ್ಣವನ್ನು ಸೇರಿ ಪೂಜ್ಯರಾಗಿದ್ದಾರೆ ಇಂದ್ರನು ಬ್ರಾಹ್ಮಣನಾಗಿದ್ದನು ಆದರೆ ಕರ್ಮದಿಂದ ಕ್ಷತ್ರಿಯನೆನಿಸಿಕೊಂಡನು ಪರಶುರಾಮನೂ ಬ್ರಾಹ್ಮಣನ

ಈ ದೇಶದಲ್ಲಾಯಿತೋ, ಅಂದಿನಿಂದ ಭಾರತದಲ್ಲಿ ಶೂದ್ರರ ಸಂಖ್ಯೆ ಹೆಚ್ಚಾಗಿ ದಿನೇ ದಿನೇ ದೇಶದ ಪತನವಾಯಿತು

ಇನ್ನು ಸ್ತ್ರೀಯರ ವಿಷಯವನ್ನೂ ನೋಡಿರಿ ಮಂತ್ರದೃಷ್ಟಾ ಋಷಿಗಳಲ್ಲಿ ಅನೇಕ ಮಂದಿ ಸ್ತ್ರೀಯರಿದ್ದಾರೆ ಉದಾಹರಣೆಗೆ—ಸರಸ್ವತೀ ಘೋಷಾ ಗೋಧಾ ವಿಶ್ವವಾರಾ ಅಪಾಲಾ ಉರ್ವಶೀ ಇಂದ್ರಾಣೀ ಇತ್ಯಾದಿ ಶಾಂಡಿಲ್ಯ ಋಷಿಯ ಮಗಳು ಧೃತವತೀ ಇಡೀ ಜೀವನದಲ್ಲಿ ವೇದಗಳನ್ನು ಅಧ್ಯಯನ ಮಾಡುತ್ತಲೇ ಇದ್ದಳು ಭಾರದ್ವಾಜ ಋಷಿಯ ರೂಪವತಿ ಕನ್ಯೆ ಶ್ರುತಿವತಿಯೂ ಜೀವನವಿಡೀ ವೇದಗಳನ್ನು ಓದುತ್ತಿದ್ದಳು ಗಾರ್ಗೀ ಮೈತ್ರೇಯೀ ಲೋಪಾಮುದ್ರಾದಿ ಸ್ತ್ರೀಯರು ಮಹಾ ವಿದುಷಿಗಳೆಂದು ಪ್ರಸಿದ್ಧರಾಗಿದ್ದಾರೆ ಕೌಸಲ್ಯಾದೇವಿಯು ಸಂಧ್ಯಾ ಮತ್ತು ಹವನ ಮಾಡುತ್ತಿದ್ದ ವರ್ಣನೆಯನ್ನೂ ನಾವು ರಾಮಾಯಣದಲ್ಲಿ ಓದುತ್ತಿದ್ದೇವೆ ಪತಿವ್ರತಾ ಶಿರೋಮಣಿ ಸೀತಾದೇವಿ ಸಾಯಂ ಸಂಧ್ಯಾರ್ಥ ನದೀತಟಕ್ಕೆ ಬಂದೇ ಇರುವಳೆಂದು ಹನೂಮಾನ್ ಆಕೆಗಾಗಿ ಕಾದಿದ್ದ ಘಟನೆಯೂ ರಾಮಾಯಣದಲ್ಲಿದೆ ಶ್ರೌತಸೂತ್ರಾದಿ ಗಳಲ್ಲಿ **ಇಮಂ ಮಂತ್ರಂ ಪತ್ನೀ ಪಠೇತ್** ಎಂದು ವಿಧಿಯಿದೆ ಹೀಗಿರುವಾಗ ಸ್ತ್ರೀಯರು ವೇದಗಳನ್ನು ಓದಬಾರದೆಂದು ಯಾರೋ ಮೂರ್ಖನು ತನ್ನ ಪಾಂಡಿತ್ಯದ ಗುಟ್ಟು ರಟ್ಟಾಗುತ್ತದೆ ಎಂದು ಹೇಳಿರಬೇಕು ಯಾವ ಸಮಾಜದಲ್ಲಿ ಸ್ತ್ರೀಯರು ವಿದ್ಯಾವತಿಯರಾಗುವುದಿಲ್ಲವೋ ಆ ಸಮಾಜದ ಏಳಿಗೆ ಆಗಲಿಕ್ಕೆ ಸಾಧ್ಯವೇ ಇಲ್ಲ

ಆದುದರಿಂದ ಶಂಕರಾಚಾರ್ಯ ಮೊದಲಾದವರ ವಿಚಾರಗಳು ವೇದವಿರುದ್ಧ ವಾಗಿರುವುದರಿಂದಲೂ ರಾಷ್ಟ್ರದ ಅವನತಿಗೆ ಕಾರಣವಾಗಿರುವುದರಿಂದಲೂ ತ್ಯಾಜ್ಯ ವಾಗಿವೆ ಇಂತಹ ವಿಚಾರಗಳನ್ನು ಪ್ರಚಾರ ಮಾಡುವವರು ಮೂರ್ಖರೂ, ಧೂರ್ತ ಸ್ವಾರ್ಥಿಗಳೂ ಎಂಬುದಕ್ಕೆ ಸಂದೇಹವಿಲ್ಲ ಇಲ್ಲಿ ನೋಡಿರಿ! ಇವರು-ಶೂದ್ರರೂ, ಸ್ತ್ರೀಯರೂ ಒಂದೇ ಎಂದು ಹೇಳುತ್ತಾರೆ ಶೂದ್ರರು ಸ್ಮಶಾನದಂತೆ ಅಪವಿತ್ರರೆಂದೂ ಹೇಳುತ್ತಾರೆ ಇವರ ತಾಯಿ ಮಡದಿ ಅಕ್ಕತಂಗಿಯರು ಇವರೆಲ್ಲಾ ಎಲ್ಲಿರುತ್ತಾರೆ?

**ವೇದಗಳಲ್ಲಿ ಅನೇಕೇಶ್ವರ ವಾದ**—ವೇದಗಳು ಸರ್ವಮಾನವರಿಗೂ ಅಧ್ಯ ಯನ ಮಾಡಬೇಕಾದಂತಹ ಗ್ರಂಥಗಳಾದರೂ ವೇದವ್ಯಾಖ್ಯಾನ ಮಾಡುವವರಿಗೆ ವಿಶೇಷ ಯೋಗ್ಯತೆ ಬೇಕೆಂದು ಈ ಮೊದಲೇ ಹೇಳಿದ್ದೇವೆ ಅಲ್ಪ ಶ್ರುತರಿಂದ ವೇದಮಾತೆಯು ಹೆದರುತ್ತಾಳೆ ವೇದಮಾತೆಯು ಒಂದು ಸಾರಿ ಬ್ರಾಹ್ಮಣನ ಬಳಿಗೆ ಹೋಗಿ ನಾನು ನಿನ್ನ

---

ಮಗನಾಗಿದ್ದನು ಆದರೆ ತಾನು ಕ್ಷತ್ರಿಯ ಕರ್ಮದಲ್ಲಿ ತೊಡಗಿದನು ತ್ರಿಶಂಕುವು ಕ್ಷತ್ರಿಯ ನಾಗಿದ್ದನು ಆದರೆ ಅವನಿಗೆ ಚಾಂಡಾಲತ್ವವು ಪ್ರಾಪ್ತವಾಯಿತು ವಿಶ್ವಾಮಿತ್ರನ ಅನೇಕ ಮಂದಿ ಮಕ್ಕಳೂ ಅನಾರ್ಯ ದಸ್ಯುಗಳಾದರು ಇವೆಲ್ಲಾ ಪ್ರಮಾಣಗಳಿಂದ ಜನ್ಮವು ವರ್ಣ ವನ್ನು ನಿರ್ಧರಿಸುವುದಿಲ್ಲವೆಂದು ಸ್ಪಷ್ಟವಾಗುತ್ತದೆ ವೇದಗಳ ಅಧ್ಯಯನ ವೇದೋಕ್ತ ಕರ್ಮಗಳ ಅನುಷ್ಠಾನ ಇತ್ಯಾದಿಗಳಿಂದ ಶೂದ್ರರೂ ಉತ್ತಮ ವರ್ಣವನ್ನು ಹೊಂದುತ್ತಾರೆ ಎಂದಿರುವಾಗ ಶೂದ್ರರು ವೇದಗಳನ್ನು ಓದಬಾರದೆನ್ನುವುದು ತಿಳಿದವರ ಕೆಲಸವಲ್ಲ

ಶೂದ್ರ ಅಥವಾ ಅನಾರ್ಯರನ್ನು ಸಂಸ್ಕಾರ ಮಾಡಿ ದ್ವಿಜರನ್ನಾಗಿ ಮಾಡಲು ಹೊರ ಟಾಗ ಕಪ್ಪು ನಾಯಿಯನ್ನು ಬಿಳಿ ಮಾಡಲು ಹೊರಟಿರಾ? ಎಂದು ಕೆಲವು ಸಾಂಪ್ರದಾಯಿಕರು ನಮ್ಮನ್ನು ವಿಚಾರಿಸುತ್ತಾರೆ ನಾಯಿಯ ಕಪ್ಪುತನ ಅಥವಾ ಬಿಳುಪುತನ ಅದರ ಜನ್ಮದೊಂದಿಗೆ ಬರುತ್ತದೆ ಆದರೆ ದ್ವಿಜತ್ವವು ಯಾರಿಗೂ ಜನ್ಮದೊಂದಿಗೆ ಒದಗುವುದಿಲ್ಲ ಅದು ಸಂಸ್ಕಾರ ದಿಂದಲೇ ಒದಗುತ್ತದೆ, ಎಂಬುದನ್ನು ಇಂತಹ ಜನರು ನೆನಪಿಟ್ಟುಕೊಳ್ಳಬೇಕು

ನಿಧಿ, ನನ್ನನ್ನು ರಕ್ಷಿಸು ಎಂದು ಪ್ರಾರ್ಥಿಸಿದಳಂತೆ ತನ್ನನ್ನು ಅಸೂಯೆ ಕುಟಿಲತೆ ಭೋಗಪರಸ್ತತೆ ಇತ್ಯಾದಿಗಳಿಂದ ದೂಷಿತ ಮನೋವೃತ್ತಿಯ ಅಯೋಗ್ಯ ವ್ಯಕ್ತಿಗಳಿಗೆ ಕೊಡಬಾರದು, ಕೇವಲ ಜಿಜ್ಞಾಸುಗಳೂ ತಪಸ್ವಿಗಳೂ ಪವಿತ್ರರೂ ಆದ ಮೇಧಾವಿಗಳಿಗೆ ಮಾತ್ರ ಕೊಡಬೇಕು ಎಂದು ಬೇಡಿಕೊಂಡಳಂತೆ ಅಪವಿತ್ರರು ಪ್ರಮಾದಿಗಳು ಅಲ್ಪಮತಿಗಳು, ಬ್ರಹ್ಮಚರ್ಯದ ಪಾಲನೆ ಮಾಡದವರು ವಿದ್ಯಾದ್ರೋಹಿಗಳು ಮತ್ತು ಕೇವಲ ದೋಷಗಳನ್ನು ಕಂಡುಹಿಡಿಯಲಿಕ್ಕೆ ಓದುವ ದುರಭಿಮಾನಿಗಳು ಇವರೆಲ್ಲಾ ವೇದಾಧ್ಯಯನಕ್ಕೆ ಅಪಾತ್ರರೆಂದು ಋಷಿಗಳು ಸ್ಪಷ್ಟವಾಗಿ ಹೇಳಿದ್ದಾರೆ[೧] ಆದರೂ ಇಂತಹ ಅಸೂಯಕರೂ, ಪ್ರಮಾದಿಗಳೂ, ವಿದ್ಯಾದ್ರೋಹಿಗಳೂ ಮಂತ್ರಗಳ ವ್ಯಾಖ್ಯಾನ ಮಾಡಲು ಆಗಾಗ ಪ್ರಯತ್ನ ಮಾಡಿದ್ದಾರೆ ಇದರ ಪರಿಣಾಮವಾಗಿ ವೇದವಿದ್ಯೆಯನ್ನು ಅಪಮಾನ ಅಪಪ್ರಚಾರ ಇತ್ಯಾದಿಗಳು ತುಂಬಾ ನಡೆದುವು

ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಪಂಚದಲ್ಲಿ ಯುರೋಪಿನ ಆಧಿಪತ್ಯವು ಸ್ಥಾಪಿತವಾಗಿತ್ತು ಆಗ ತಾನೇ ನಾಗರಿಕತೆಯ ಬೆಳಕನ್ನು ಯೂರೋಪಿನ ಜನರು ಕಂಡಿದ್ದರು ಭಾರತದ ದರ್ಶನ ಶಾಸ್ತ್ರ ಇತಿಹಾಸಾದಿಗಳ ಪರಿಚಯವು ಈ ಮೊದಲು ಅವರಿಗಿದ್ದಿಲ್ಲ ಹೀಗಾಗಿ ಯೂರೋಪಿನ ವಿದ್ವಾಂಸರು ಸ್ವೋತ್ಕೃಷ್ಟಭಾವನೆ [Superiority Complex]ಯಿಂದ ತುಂಬಾ ಪೀಡಿತರಾಗಿದ್ದರು ಬೈಬಲಿಗಿಂತ ಉತ್ತಮ ಧಾರ್ಮಿಕ ಗ್ರಂಥಗಳು ಬೇರೆ ಇರಬಹುದೆಂಬ ಕಲ್ಪನೆಯೂ ಅವರಿಗಿದ್ದಿಲ್ಲ 'ಅಶ್ರುತಶ್ಚ ಸಮುನ್ನದ್ಧ ಎಂಬಂತೆ ಆ ಅಲ್ಪಮತಿಗಳು ತಮ್ಮನ್ನು ತಾವೇ ಬಹಳ ಬುದ್ಧಿವಂತರೆಂದು ತಿಳಿದುಕೊಂಡಿದ್ದರು ಇದರೊಟ್ಟಿಗೆ ಅಪಾರ ಸಂಪತ್ತಿನ ಹೆಮ್ಮೆ ಬೇರೆ ಇಂತಹ ಪರಿಸ್ಥಿತಿಯಲ್ಲಿ ಯೂರೋಪಿನ ಕೆಲವು ವಿದ್ವಾಂಸರಿಗೆ ರಾಜನೈತಿಕ ಮತ್ತು ಕ್ರೈಸ್ತಮತ ಪ್ರಚಾರ—ಈ ಎರಡು ಸ್ವಾರ್ಥಪೂರ್ತಿಗಾಗಿ ಪ್ರಾಚೀನ ಭಾರತೀಯ ಸಾಹಿತ್ಯಗಳನ್ನು ಓದುವ ಸಂದರ್ಭ ಸಿಕ್ಕಿತ್ತು ಸ್ವಲ್ಪ ಸಂಸ್ಕೃತ ಭಾಷೆಯ ಜ್ಞಾನವನ್ನೂ ಇವರು ಸಂಪಾದಿಸಿದರು ಆರ್ಷ ಪದ್ಧತಿಯಲ್ಲಿ ಇವರಲ್ಲಿ ಯಾರೂ ವೇದ ಶಾಸ್ತ್ರಗಳನ್ನು ಅಧ್ಯಯನ ಮಾಡಲಿಲ್ಲ ಕೆಲವರು, ಸಾಯಣ ಮಹೀಧರಾದಿ ಅರ್ವಾ

---

೧ಎ ನಿತ್ಯಂ ಹ್ಯವಿಜ್ಞಾತುರ್ವಿಜ್ಞಾನೇಽಸೂಯೋಪಸನ್ನಾಯ ತು ನಿಬ್ರೂಯಾದ್ಯೋಽಲಂ ವಿಜ್ಞಾತುಂ ಸ್ಯಾನ್ಮೇಧಾವಿನೇ ತಪಸ್ವಿನೇ ವಾ ॥ ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾ ಶೇವಧಿಷ್ಟೇಽಹಮಸ್ಮಿ । ಅಸೂಯಕಾಯಾನೃಜವೇಽಯತಾಯ ನ ಮಾ ಬ್ರೂಯಾ ವೀರ್ಯವತೀ ತಥಾ ಸ್ಯಾಮ್ ॥ ಯ ಆತೃಣತ್ತ್ಯವಿತಥೇನ ಕರ್ಣಾವದುಃಖಂ ಕುರ್ವನ್ನಮೃತಂ ಸಂಪ್ರಯಚ್ಛನ್ । ತಂ ಮನ್ಯೇತ ಪಿತರಂ ಮಾತರಂ ಚ ತಸ್ಮೈ ನ ದ್ರುಹ್ಯೇತ್ಕತಮಚ್ಚನಾಹ ॥ ಅಧ್ಯಾಪಿತಾ ಯೇ ಗುರುಂ ನಾದ್ರಿಯಂತೇ ವಿಪ್ರಾ ವಾಚಾ ಮನಸಾ ಕರ್ಮಣಾ ವಾ । ಯಥೈವ ತೇ ನ ಗುರೋರ್ಭೋಜನೀಯಾಸ್ತಥೈವ ತಾನ್ನ ಭುನಕ್ತಿ ಶ್ರುತಂ ತತ್ । ಯಮೇವ ವಿದ್ಯಾಃ ಶುಚಿಮಪ್ರಮತ್ತಂ ಮೇಧಾವಿನಂ ಬ್ರಹ್ಮಚರ್ಯೋಪಪನ್ನಂ । ಯಸ್ತೇ ನ ದ್ರುಹ್ಯೇತ್ಕತಮಚ್ಚನಾಹ ತಸ್ಮೈ ಮಾ ಬ್ರೂಯಾ ನಿಧಿಪಾಯ ಬ್ರಹ್ಮನ್ ॥ ಇತಿ ನಿಧಿಃ ಶೇವಧಿರಿತಿ ॥ [ನಿರುಕ್ತ ೨-೩ ೪]

[ಬಿ] ಮತ್ತು ನೋಡಿರಿ ಮನುಸ್ಮೃತಿ ೨–೧೧೪ ೧೧೫ ॥

ಚೀನ ಪಂಡಿತರ ವೇದಭಾಷ್ಯಗಳನ್ನು ಓದಿದರು. ಯೂರೋಪಿನಲ್ಲಿಯೂ ಅಂಧಶ್ರದ್ಧೆ ಅಂದವಿಶ್ವಾಸಗಳು ಆ ಸಮಯದಲ್ಲಿ ತುಂಬಾ ಪ್ರಚಾರದಲ್ಲಿದ್ದುವು. ಜೈನ ಮತ್ತು ಬೌದ್ಧಧರ್ಮದ ಪ್ರಚಾರದೊಟ್ಟಿಗೆ ಭಾರತದಲ್ಲಿ ಮೂರ್ತಿಪೂಜೆಯೂ ಪ್ರಚಾರಕ್ಕೆ ಬಂದಿತ್ತು.* ವಿಭಿನ್ನ ಸಂಪ್ರದಾಯಗಳೂ ಇದನ್ನು ಅಂಗೀಕರಿಸಿದ್ದುವು. ಹೀಗಾಗಿ ಸಾವಿರಾರು ಮಾನವಕಪೋಲಕಲ್ಪಿತ ದೇವಿದೇವತೆಗಳು ಹುಟ್ಟಿ ಬೆಳೆದರು. ಧರ್ಮ ಮತ್ತು ವಿಜ್ಞಾನಕ್ಕೆ ಏನೂ ಸಂಬಂಧವಿಲ್ಲವೆಂಬ ಧಾರಣೆ ಆ ಕಾಲದಲ್ಲಿ ಯೂರೋಪಿನ ಜನರಲ್ಲಿತ್ತು. ಧರ್ಮದ ವಿಷಯದಲ್ಲಿ ತರ್ಕ ಮಾಡಬಾರದೆಂದೇ ಸಾಮಾನ್ಯವಾಗಿ ಜನರ ಅಭಿಪ್ರಾಯವಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಯೂರೋಪಿನಲ್ಲಿ ವೇದ ಶಾಸ್ತ್ರಗಳ ಅಧ್ಯಯನ ಮಾಡಿದವರಲ್ಲಿ ಮಿ|| ಫ್ರೆಡರಿಕ್ ಮೇಕ್ಸ್‌ಮುಲ್ಲರರು ಒಬ್ಬರು. ವೇದಗಳ ಅಧ್ಯಯನಕ್ಕೆ ಬೇಕಾದ ಹಿನ್ನೆಲೆಯು ಇವರಿಗಿದ್ದಿಲ್ಲವಾದರೂ ತಮ್ಮ ಯೌವನವನ್ನೆಲ್ಲಾ ಇವರು ಹಿಂದೂಧರ್ಮವೆಂಬ ಬಹು ವಿಶಾಲ ಹಾಗೂ ಪ್ರಾಚೀನ ವಟವೃಕ್ಷದ ಬೇರು ಎಷ್ಟು ಕೊಳೆತಿದೆ ಎಂಬುದನ್ನು ತೋರಿಸುವ ಪ್ರಯತ್ನದಲ್ಲಿ ಕಳೆದರು. ಈ ರೀತಿ ಪ್ರಯತ್ನ ಮಾಡುತ್ತಿದ್ದಾಗ ತಾನು ತನ್ನ ಅಲ್ಪಜ್ಞತೆ ಹಾಗೂ ಕೊಳಕು ವಿಚಾರಗಳನ್ನೇ ಬಹಿರಂಗಪಡಿಸುತ್ತಿದ್ದೇನೆ ಎಂಬ ಮಾತು ಮೇಕ್ಸ್‌ಮುಲ್ಲರರಿಗೆ ಹೊಳೆಯಲಿಲ್ಲ.

ವೈದಿಕ ದೇವತೆಗಳ ಕುರಿತು ಚರ್ಚೆ ಮಾಡುತ್ತಾ ಮಿ|| ಮೇಕ್ಸ್‌ಮುಲ್ಲರರು ವೈದಿಕ ಧರ್ಮವು ಅನೇಕೇಶ್ವರವಾದಿ ಎಂದು ಹೇಳಿದ್ದಾರೆ. ಸರ್ವಸಾಮಾನ್ಯವಾಗಿ ಅನೇಕೇಶ್ವರವಾದವೆಂದರೆ ಅನೇಕ ದೇವರನ್ನು ನಂಬುವುದು ಎಂದರ್ಥವಾಗುತ್ತದೆ. ಪ್ರಾಚೀನ ಗ್ರೀಕರು ಮತ್ತು ರೋಮನ್ ಪ್ರಜೆಗಳು ಒಬ್ಬ ಸರ್ವಶ್ರೇಷ್ಠ ದೇವರ ಕೆಳಗೆ ಅನೇಕ ಮಂದಿ ಇತರ ದೇವತೆಗಳಿದ್ದಾರೆ ಎಂದು ನಂಬುತ್ತಿದ್ದರು. ಅಂದರೆ ಹಿಂದಿನ ಕಾಲದಲ್ಲಿ ಯಾವ ರೀತಿಯಲ್ಲಿ ಒಬ್ಬ ಚಕ್ರವರ್ತಿ ರಾಜನ ಕೈಕೆಳಗೆ ಅನೇಕ ಮಂದಿ ಮಾಂಡಲಿಕ ಅಥವಾ ಸಾಮಂತ ರಾಜರು ಇರುತ್ತಿದ್ದರೋ, ಅದೇ ರೀತಿ ಜೂಸ್ ಅಥವಾ ಜ್ಯುಪಿಟರನ ಕೈಕೆಳಗೆ ಅನೇಕ ಮಂದಿ ದೇವತೆಗಳು ಇದ್ದಾರೆಂದು ಅವರ ವಿಶ್ವಾಸವಾಗಿತ್ತು. ಇದಕ್ಕಿಂತ ಪೂರ್ವದಲ್ಲಿ ಗ್ರೀಕರು ಬಹುಮಂದಿ ಹಿರಿಯ ದೇವರುಗಳನ್ನೂ ಕಲ್ಪಿಸಿದ್ದರು. ಅದನ್ನೇ ಅನೇಕೇಶ್ವರವಾದವೆನ್ನುತ್ತಾರೆ. ಆದರೆ, ಮೇಕ್ಸ್‌ಮುಲ್ಲರರ ದೃಷ್ಟಿಯಲ್ಲಿ ವೈದಿಕ ಅನೇಕೇಶ್ವರವಾದವು ಇದಕ್ಕಿಂತ ಸ್ವಲ್ಪ ವಿಚಿತ್ರವಾಗಿದೆ. ವೇದಗಳಲ್ಲಿ ಯಾವುದೇ ಒಂದು ದೇವತೆಯು ಸರ್ವಶ್ರೇಷ್ಠವೆಂದಿಲ್ಲ. ಇಲ್ಲಿ ಯಾವ ಕನಿಷ್ಠ ದೇವತೆಯೂ ಇಲ್ಲ. ಆರಾಧಕನು ತನ್ನ ಮನೋರಥದ ಪೂರ್ತಿಕೆಗಾಗಿ ಯಾವ ದೇವತೆಯನ್ನು ಸಮುಚಿತ ದೇವತೆಯೆಂದುಕೊಂಡು ಆರಾಧಿಸುತ್ತಾನೋ ಆ ಕ್ಷಣದಲ್ಲಿ ಆ ದೇವತೆಯೇ ಸರ್ವಶ್ರೇಷ್ಠದೇವತೆಯು. ಈ ರೀತಿ ಪ್ರತಿಯೊಂದು ದೇವತೆಯೂ ಸಂದರ್ಭಕ್ಕನುಸಾರವಾಗಿ ಪ್ರಾಧಾನ್ಯತೆಯನ್ನು ಹೊಂದುತ್ತದೆ ಮತ್ತು ಆ ಕ್ಷಣದಲ್ಲಿ ಇತರ ದೇವತೆಗಳು ಗೌಣವಾಗುತ್ತಾರೆ. ಏಕೇಶ್ವರವಾದಿಗಳು ಸರ್ವಕಾಲ

---

* ಇದಕ್ಕೆ ಮುನ್ನವೂ ಮೂರ್ತಿಪೂಜೆಯಿತ್ತೆಂದು ಹಲವರು ವಾದಿಸುವುದುಂಟು. ಆದರೆ ಈ ರೀತಿ ಇರಬಹುದಾದ ಮೂರ್ತಿಗಳ ಸಾಕಾರ ವ್ಯಕ್ತಿಗಳ ಪ್ರತಿಕೃತಿಗಳು ಅಥವಾ ಕಲ್ಪನಾ ಚಿತ್ರಗಳಿದ್ದಾವು. ನಿರಾಕಾರ ಅವ್ಯಕ್ತ ಪರಮಾತ್ಮನದಂತೂ ಆಗಲಾರದು.

ವಸ್ತುಗಳು, ದಾನಿಗಳು, ಜ್ಞಾನೋಪದೇಶಕರು, ಎಂದು ಅನೇಕ ಅರ್ಥಗಳಾಗುತ್ತವೆ. ಪ್ರಕರಣಾನುಸಾರವಾಗಿ, ಯುಕ್ತಿಸಂಗತವಾದ ರೀತಿಯಲ್ಲಿ ಮಂತ್ರಗಳ ಅರ್ಥ ಮಾಡಿ ಕೊಳ್ಳಬೇಕೆಂದು ದೇವತಾ ಪ್ರಕರಣದಲ್ಲಿ ಸ್ಪಷ್ಟೀಕರಿಸಿದ್ದೇವೆ. ಪರಮಾತ್ಮನನ್ನು ಅಗ್ನಿ ಎನ್ನುತ್ತಾರೆ. ಏಕೆಂದರೆ, ಅವನು ಅಗ್ರಣೀ. ಅವನನ್ನು ಇಂದ್ರನೆಂತಲೂ ಕರೆಯುತ್ತಾರೆ. ಕಾರಣವೇನೆಂದರೆ ಅವನು ಸಕಲೈಶ್ವರ್ಯಗಳ ಸ್ವಾಮಿ. ಇದೇ ರೀತಿ ವರುಣ, ಮಿತ್ರಾದಿ ಸಂಜ್ಞೆಗಳೂ ಪರಮಾತ್ಮನ ಬೇರೆ ಬೇರೆ ಗುಣಗಳನ್ನು ಪ್ರಕಟಿಸುತ್ತವೆ. ಆದರೆ ಈ ಶಬ್ದಗಳಿಗೆ ಇತರ ಅರ್ಥಗಳೂ ಇವೆ. ಯಥಾ—ಅಗ್ನಿ ಎಂದರೆ ಯಜ್ಞ, ಜೀವಾತ್ಮ, ವಿದ್ವಾಂಸ, ಬೆಂಕಿ ಇತ್ಯಾದಿ. ಇಂದ್ರ ಎಂದರೆ, ಸೂರ್ಯ, ಜೀವಾತ್ಮ, ಯಜ್ಞ ರಾಜಾ, ಇತ್ಯಾದಿ. ಆದುದರಿಂದ ಪ್ರಕರಣಾನುಸಾರವಾಗಿ ಮಂತ್ರಾರ್ಥ ವ್ಯಾಖ್ಯೆ ಮಾಡಿಕೊಳ್ಳ ಬೇಕೆಂದು ಬಹಳ ಹಿಂದೆಯೇ ಋಷಿಗಳು ಹೇಳಿದ್ದಾರೆ. ಅದನ್ನು ಕಡೆಗಣಿಸಿಕೊಂಡು, ತಮ್ಮದೇ ಆದ ತರ್ಕಹೀನ ಸಿದ್ಧಾಂತಗಳನ್ನು ಮಂಡಿಸುವ ಅಧಿಕಾರ ಯಾರಿಗೂ ಇಲ್ಲ.

ಯಜುರ್ವೇದ, ಅಧ್ಯಾಯ ೪, ಮಂತ್ರ ೪—ಇಲ್ಲಿ ಮಂತ್ರದ ದೇವತೆಯು ಪರಮಾತ್ಮ. ಆದರೆ, ಅಥರ್ವವೇದ ಕಾಂಡ ೬, ಸೂಕ್ತ ೭೬—ಇಲ್ಲಿ ದೇವತೆಯು ವೈದ್ಯ: ಸೂಕ್ತ ೧೪೦—ಇಲ್ಲಿ ದೇವತೆ ಹಲ್ಲುಗಳು; ಇದೇ ರೀತಿ ಕೆಲವು ಕಡೆಗಳಲ್ಲಿ ಮನುಷ್ಯರು. ಇನ್ನು ಕೆಲವು ಕಡೆಗಳಲ್ಲಿ ದಂಪತಿಗಳು, ಮತ್ತು ಕೆಲವು ಕಡೆಗಳಲ್ಲಿ ಸರ್ಪ, ಮಗುದೊಂದು ಕಡೆಯಲ್ಲಿ ಬೇರೆ ಬೇರೆ ರೋಗಗಳು ದೇವತೆಗಳಾಗಿವೆ. ಇವುಗಳ ನ್ನೆಲ್ಲಾ ಮಿಸ್ಟರ್ ಮೇಕ್ಸ್‌ಮುಲ್ಲರರ ದೇವತಾ ಕಲ್ಪನೆಗನುಸಾರವಾಗಿ ತಿಳಿದುಕೊಂಡರೆ, ಏನೆಲ್ಲಾ ಅನರ್ಥಗಳಾಗಬಹುದೆಂದು ಹೇಳಲು ಬರುವುದಿಲ್ಲ. ಈ ಎಲ್ಲಾ ದೇವತೆಗಳು ಈಶ್ವರರಲ್ಲ, ಮಂತ್ರಗಳಲ್ಲಿ ವರ್ಣಿಸಿದ ವಿಷಯಗಳು. ಜ್ಞಾನ, ಕರ್ಮ ಮತ್ತು ಉಪಾಸನಾಕಾಂಡ, ಅಧ್ಯಾತ್ಮ, ಅಧಿದೈವ, ಅಧಿಯಜ್ಞಾದಿ ಪ್ರಕರಣಗಳಿಗನುಸಾರವಾಗಿ ಈ ದೇವತೆಗಳನ್ನು ತಿಳಿದುಕೊಂಡರೆ, ವೇದಗಳಲ್ಲಿ ಅನೇಕೇಶ್ವರವಾದದ ಗಂಧವೂ ಸಿಗುವುದಿಲ್ಲ. ವೇದಗಳಲ್ಲಿ ಒಬ್ಬನೇ ಪರಮಾತ್ಮ, ಅವನೇ ಉಪಾಸ್ಯದೇವತೆ. ಸೃಷ್ಟಿ, ಸ್ಥಿತಿ ಮತ್ತು ಪ್ರಲಯಗಳಿಗೆ ಅವನೇ ಕಾರಣ, ಇತರ ಎಲ್ಲಾ ದೇವತೆಗಳೂ ಅವನ ಕಾರ್ಯ ಸೃಷ್ಟಿಯೊಳಗಿನ ವಸ್ತುಗಳು ಎಂದು ಸ್ಪಷ್ಟವಾಗಿ ಹೇಳಿದೆ.

---

for a time a supreme position, and I proposed for it the name of Kathenotheism, that is a worship of one god after another, or of Henotheism, the worship of single gods. [India, what can it Teach us? Longmans, Green And Co. London. 1899. page 146-147]

(b) The Consciousness that all the deities are but different names of one and the same godhead breaks forth indeed here and there in the Veda. But it is far from being general.
(Chips from a German workshop. Vol. I. Longmans Green And Co. 1867. page 29.)

**ವೇದಗಳಲ್ಲಿ ಅಶ್ಲೀಲ ವಿಚಾರಗಳು**:—ವೇದಗಳಲ್ಲಿ ಕೆಲವರಿಗೆ ಅಶ್ಲೀಲ ವಿಚಾರಗಳು ಕಾಣುತ್ತವೆ. ಪವಿತ್ರ ಗ್ರಂಥಗಳಲ್ಲಿ ಇಂತಹ ವಿಚಾರಗಳು ಅನುಚಿತವೆಂದು ಇವರ ಅಭಿಪ್ರಾಯ. ಅಶ್ಲೀಲ ಶಬ್ದವು ಸಾಪೇಕ್ಷ ಸಂಜ್ಞೆಯಾಗಿದೆ. ಯಾವುದು ಒಂದು ಕಡೆಯಲ್ಲಿ ಅಶ್ಲೀಲವೆನಿಸುತ್ತದೆಯೋ, ಅದೇ ಇನ್ನೊಂದು ಕಡೆಯಲ್ಲಿ ಯೋಗ್ಯವೆಂದು ಕಂಡುಬರಬಹುದು. ಮಾರ್ಗದ ಬದಿಯಲ್ಲಿ, ಸಂತೆಕಟ್ಟೆಗಳಲ್ಲಿ, ಅಥವಾ ಇತರ ಸಾರ್ವಜನಿಕ ಸ್ಥಾನಗಳಲ್ಲಿ ಯಾರಾದರೂ ಸ್ತ್ರೀಪುರುಷರು ದಿಗಂಬರರಾಗಿ ನಿಂತರೆ, ಅಥವಾ ಬೆತ್ತಲೆ ಸ್ತ್ರೀಪುರುಷರ ಚಿತ್ರಗಳನ್ನು ಕಂಡರೆ, ಅದು ಅಶ್ಲೀಲವೆಂದು ಕಾಣಬಹುದು. ಆದರೆ, ಡಾಕ್ಟರುಗಳ ಮುಂದೆ ಚಿಕಿತ್ಸೆಗಾಗಿ ಈ ರೀತಿ ಯಾರಾದರೂ ನಿಂತರೆ, ಅದು ಅಶ್ಲೀಲವೆನಿಸುವುದಿಲ್ಲ. ಯುವಕರನ್ನು ನಗ್ನಾವಸ್ಥೆಯಲ್ಲಿ ಕಾಣುವುದು ಅಶ್ಲೀಲತೆಯಾಗಿರಬಹುದು. ಆದರೆ, ಚಿಕ್ಕ ಮಕ್ಕಳನ್ನು ಈ ರೀತಿ ಕಂಡರೆ, ಆಗ ಅಶ್ಲೀಲತೆಯ ಭಾವನೆಯು ಹುಟ್ಟುವುದಿಲ್ಲ. ಪ್ರತಿಯೊಬ್ಬರಿಗೂ ತಮ್ಮ ತಮ್ಮ ರತಿಕ್ರೀಡೆಗಳು, ಸರಸಸಲ್ಲಾಪಗಳು ಪ್ರೇಮದ ಮಧುರ ಅಭಿವ್ಯಕ್ತಿ ಎಂದು ಕಾಣುತ್ತವೆ. ಆದರೆ, ಇನ್ನೊಬ್ಬರು ಮಾಡುವ ಇಂತಹ ಕ್ರಿಯೆಗಳು ಅಶ್ಲೀಲವಾಗಿ ಕಾಣುತ್ತವೆ. ಸರಸ್ವತೀ ಶ್ವೇತಾ ಎಂದು ಹೇಳುತ್ತಾರೆ. ಅಂದರೆ, ಸರ್ವ ವಿದ್ಯೆಗಳೂ ತಮ್ಮ ಸ್ಥಾನದಲ್ಲಿ ಪರಿಶುದ್ಧವಾಗಿಯೇ ಇರುತ್ತವೆ. ಆದರೆ, ವಿದ್ಯೆಯ ಪ್ರಯೋಗ ಮಾಡುವವರು ಅದನ್ನು ಕುಲಗೆಡಿಸುವ ಸಂಭವವೂ ಇರುತ್ತದೆ. ಆದುದರಿಂದ ಅಶ್ಲೀಲತೆಯು ಸಂದರ್ಭವನ್ನು ಹೊಂದಿಕೊಂಡಿದೆ, ವ್ಯಕ್ತಿಗಳನ್ನು ಹೊಂದಿಕೊಂಡಿದೆ.

ವೇದಗಳಲ್ಲಿ ಸಹೋದರ ಸಹೋದರಿಯರ, ತಂದೆ ಮತ್ತು ಮಗಳ ಪ್ರೇಮದ ಸಂವಾದ, ಹಾಗೂ ರತಿಯ ಉಲ್ಲೇಖಗಳು ಕಂಡುಬರುತ್ತವೆ; ಸ್ತ್ರೀಪುರುಷರ ಜನನೇಂದ್ರಿಯ, ಮೈಥುನಾದಿಗಳ ವರ್ಣನೆಯೂ ಬರುತ್ತದೆ. ಇದು ಕೆಲವರಿಗೆ ಜೀರ್ಣವಾಗುವುದಿಲ್ಲ. ಉದಾಹರಣೆಗಾಗಿ ಋಗ್ವೇದದ ಯಮ–ಯಮೀ ಸೂಕ್ತದಲ್ಲಿ,[೧] ಯಮೀಯು ತನ್ನ ಸಹೋದರನಾದ ಯಮನಲ್ಲಿ ತನ್ನನ್ನು ವಿವಾಹ ಮಾಡಿಕೊಳ್ಳಬೇಕೆಂದು ಯಾಚಿಸುತ್ತಾಳೆ. ಅಣ್ಣತಂಗಿಯರ ವೈವಾಹಿಕ ಸಂಬಂಧವನ್ನು ಕುತ್ಸಿತ ಪ್ರೇಮವೆಂದು ಪ್ರಪಂಚದಲ್ಲಿ ಹೇಳುತ್ತಾರೆ. ಹೀಗಿರುವಾಗ ವೇದಗಳಲ್ಲಿ ಇಂತಹ ವಿಚಾರವು ಹೇಗೆ ಬಂತು? ಎಂಬ ಪ್ರಶ್ನೆ. ಆದರೆ, ಈ ಪ್ರಸಂಗದಲ್ಲಿ ಯಮನು ಹೇಳುತ್ತಾನೆ, "**ಪಾಪಮಾಹುರ್ಯಃ ಸ್ವಸಾರಂ ನಿಗಚ್ಛಾತ್ ನ ಯತ್ ಪುರಾ ಚಕೃಮ ಕದ್ಧ ನೂನಮ್... ಅನ್ಯಮಿಚ್ಛಸ್ವ ಸುಭಗೇ ಪತಿಂ ಮತ್**" ಎಂದು ಹೇಳುತ್ತಾನೆ. ಅಂದರೆ, ಸಹೋದರ ಸಹೋದರಿಯರ ವೈವಾಹಿಕ ಸಂಬಂಧವನ್ನು ಪಾಪವೆಂದು ಹೇಳುತ್ತಾರೆ. ಪೂರ್ವಕಾಲದಲ್ಲಿ ಯಾರೂ ಹೀಗೆ ಮಾಡಲಿಲ್ಲ, ಮುಂದೆಯೂ ಹೀಗಾಗಬಾರದು. ಆದುದರಿಂದ ಹೆಣ್ಣಾದವಳು ತನ್ನ ಸಹೋದರನನ್ನು ಬಯಸಬಾರದು, ಬೇರೆ ಯುವಕನನ್ನು ಪತಿಗಾಗಿ ಬಯಸಬೇಕೆಂದು ಯಮನು ಯಮಿಗೆ ಉಪದೇಶಿಸುತ್ತಾನೆ.

ಈ ಸೂಕ್ತದಲ್ಲಿ ಸ್ಪಷ್ಟವಾಗಿ ಸಹೋದರ–ಸಹೋದರಿಯರ ಮೈಥುನ ಸಂಬಂಧವನ್ನು ಪಾಪವೆಂದು ಹೇಳಲಾಗಿದೆ. ಈ ರೀತಿ, ವೇದದಲ್ಲಿ ಇಂತಹ ಸಂಬಂಧವನ್ನು ನಿಷೇಧಿಸಲಾಗಿದೆ. ವೈದ್ಯಕೀಯ ಶಾಸ್ತ್ರದಲ್ಲಿ, ಮನೋವಿಜ್ಞಾನದಲ್ಲಿ, ಸಮಾಜಶಾಸ್ತ್ರ

[೧] ಋಗ್ವೇದ ೧೦–೧೦ ಮತ್ತು ಅಥರ್ವವೇದ ೧೮–೧.

ದಲ್ಲಿ, ಇಂತಹ ಸಂಬಂಧವು ಹಾನಿಕಾರಕವೆಂದು ಹೇಳಿದ್ದಾರೆ. ವೇದಗಳು ಶಿಕ್ಷಣದ ಗ್ರಂಥಗಳು. ಅವುಗಳಲ್ಲಿ ಉಚಿತ ಮತ್ತು ಅನುಚಿತ ಕರ್ಮಗಳ ಜ್ಞಾನವು ಬೇಡವೆ?[೨] ಯೌವನದಲ್ಲಿ ಕೆಲವು ಬಾರಿ ವಿಚಾರಶಕ್ತಿಯು ಕುಂಠಿತವಾಗುವುದುಂಟು. ಇಂದ್ರಿಯ ಗಣಗಳು ಸ್ತ್ರೀಪುರುಷರನ್ನು ವಿಚಲಿತರನ್ನಾಗಿ ಮಾಡುವುದುಂಟು. ಯಮ–ಯಮೀ ಸೂಕ್ತದಲ್ಲಿ ಯಮೀ ಯಮನಿಗೆ ತಾರುಣ್ಯದ ಪ್ರಲೋಭನೆಗಳನ್ನು ತೋರಿಸುತ್ತಾಳೆ. ಇಂತಹ ಸಂದರ್ಭಗಳು ಮನುಷ್ಯರ ಜೀವನದಲ್ಲಿ ಬರುತ್ತವೆ. ಆಗ ಮನುಷ್ಯರು ಕಾಲುಜಾರಿ ಬೀಳಬಾರದೆಂದೇ ಈ ಉಪದೇಶ. ಇಲ್ಲಿ ಅನುಚಿತವಾದುದು ಏನಿದೆ? ಇನ್ನೊಂದು ಮಾತು. ಯಮ ಅಂದರೆ ದಿನ, ಯಮೀ ಅಂದರೆ ರಾತ್ರಿ. ಇವೆರಡೂ ಸಹೋದರ ಸಹೋದರಿಯರಂತೆ ಇವೆ. ಇವೆಂದೂ ಒಂದಾಗುವುದಿಲ್ಲ. ಈ ರೀತಿ ಜಡವಸ್ತುಗಳ ದೃಷ್ಟಾಂತವನ್ನು ಕೊಟ್ಟು, ವೇದದಲ್ಲಿ ಧರ್ಮೋಪದೇಶ ಮಾಡಲಾಗಿದೆ. ಅಂದರೆ, ಇದು ಹೇಯ ಕರ್ಮವಾದುದರಿಂದ ಮನುಷ್ಯರ ದೃಷ್ಟಾಂತವನ್ನು ಕೊಡಲಿಲ್ಲ. ಇದೇ ವೇದದ ಹಿರಿಮೆ. ಇದರಲ್ಲಿ ಅಶ್ಲೀಲತೆ ಏನಿದೆ?

ವೇದಗಳಲ್ಲಿ ಅಶ್ಲೀಲತೆಯ ಪ್ರತಿಪಾದನೆ ಮಾಡುವವರು, **'ಪಿತಾ ದುಹಿತುರ್ಗರ್ಭಮಾಧಾತ್'** ಮತ್ತು **'ಪಿತಾ ಯತ್ರ ದುಹಿತುಃ ಸೇಕಮೃಂಜನ್'** ಎಂಬ ವಾಕ್ಯಗಳನ್ನು ತೋರಿಸುತ್ತಾರೆ. ಇವು ಕ್ರಮವಾಗಿ ಋಗ್ವೇದ ೧–೧೬೪–೩೩ ಮತ್ತು ೩–೩೧–೧ರಲ್ಲಿ ಬರುತ್ತವೆ. ತಂದೆಯು ಮಗಳಿಗೆ ಗರ್ಭಧಾರಣೆ ಮಾಡಿಸುತ್ತಾನೆ, ಎಂದು ಇದರ ಅರ್ಥ. ಈ ಮಂತ್ರದ ವಿವರಣೆ ಐತರೇಯ ಬ್ರಾಹ್ಮಣ, ಶತಪಥ ಬ್ರಾಹ್ಮಣ, ನಿರುಕ್ತಾದಿ ಗ್ರಂಥಗಳಲ್ಲಿದೆ. ಉಷೆಯು ಸೂರ್ಯನ ಮಗಳು. ಸೂರ್ಯನು

---

[೨] ಅಥರ್ವವೇದ ಕಾಂಡ ೨೦, ಸೂಕ್ತ ೯೬. ಮಂತ್ರ ೧೫ರಲ್ಲಿ ಯಾವಾತನು ತನ್ನ ಸಹೋದರಿಯ ಬಳಿಗೆ ಪತಿಯಾಗಿ ಹೋಗುತ್ತಾನೋ ಅವನನ್ನು ನಾಶಮಾಡಬೇಕೆಂದು ಹೇಳಿದೆ. ಸೋದರ ಸೋದರಿಯರ ಅಥವಾ ತಂದೆ–ಪುತ್ರಿಯರ ಲೈಂಗಿಕ–ಯೌನ ಸಂಬಂಧ ಸರ್ವಥಾ ನಿಷಿದ್ಧವೆಂಬುದನ್ನು ವೇದಗಳು ತಮ್ಮವೇ ಆದ ಶೈಲಿಯಲ್ಲಿ ಆಲಂಕಾರಿಕ ಭಾಷೆಯಲ್ಲಿ, ಹೃದಯಾಂತಃಸ್ಥಳವನ್ನು ನೇರವಾಗಿ ಮುಟ್ಟುವಂತೆ ವರ್ಣಿಸಿವೆ. ಆಧಿದೈವಿಕ–ಆಧಿಭೌತಿಕಾರ್ಥಗಳಲ್ಲಿ ಅಶ್ಲೀಲತೆಯ ಪ್ರಶ್ನೆಯೇ ಇಲ್ಲ.

"ಪಾತೀತಿ ಪಾತಾ ಪಾಲಯಿತಾ ಪಿತಾ ಭವತಿ. ಪತಿರಪಿ ತಸ್ಮಾದೇವ. ಭರತಿ, ಭರತೇವಾ, ಬಿಭರ್ತಿ, ಬಿಭೃತೇ ವೇತಿ ಭ್ರಾತಾ ಭವತಿ, ಭರಣ–ಪೋಷಣ ಕರ್ತೇತಿ." "ಪಾಲಿಸುವವನು, ರಕ್ಷಿಸುವವನು ಪಿತೃವೆನಿಸುತ್ತಾನೆ. ಈ ಪಾಲನ–ಪೋಷಣ ಕರ್ತೃತ್ವದಿಂದಲೇ ಗಂಡನೂ ಕೂಡ 'ಪತಿ' ಎನಿಸುತ್ತಾನೆ. ಭರಣ–ಪೋಷಣ ಮಾಡುವವನಾದ ಕಾರಣದಿಂದಲೇ, ಜನಕನ ಅಥವಾ ಪತಿಯ ಅಭಾವದ ಹೇತುವಿನಿಂದಲೇ, ಸಹಾಯಕನಾಗಿ ಬರುವ ಸಜ್ಜನನೂ ಕೂಡ 'ಭ್ರಾತೃ'ವೆನಿಸುತ್ತಾನೆ"—ಎಂಬೀ ತಥ್ಯ ಹೃದ್ಗತವಾದಾಗ ಯಮ–ಯಮೀ ಸೂಕ್ತದಂತಹ, ಮೇಲು ನೋಟಕ್ಕೆ ಸುಲಭವೇ ಎಂದು ತೋರಿದರೂ ವಸ್ತುತಃ ದುರೂಹವಾದ ಸೂಕ್ತಗಳು ಸ್ಫುಟವಾದ ಅರ್ಥದೊಂದಿಗೆ ಅರಿವಿನ ಹಿಡಿತಕ್ಕೆ ಸಿಕ್ಕುತ್ತವೆ. 'ಯಮನೆಂದರೆ ಅಣ್ಣ; ಯಮೀ—ಎಂದರೆ ತಂಗಿ'—ಎಂದೇ ಆಗ್ರಹ ಮಾಡುವುದಕ್ಕೆ ಬಲಿಷ್ಠವಾದ ಕಾರಣವೇನೂ ತೋರುವುದಿಲ್ಲ! ಸೋದರ–ಸೋದರಿಯರ ಅನಿಷ್ಟ ದೇಹಸಂಗ ಪಾಪವೆಂದೇ ಈ ಸೂಕ್ತ ಹೇಳುತ್ತದೆ. ಹಾಗೆಯೇ ತಂದೆ–ಹೆಮ್ಮಕ್ಕಳ, ಇವರ ಅನುಚಿತ ಲೈಂಗಿಕ–ಯೌನ ಸಂಬಂಧವನ್ನೂ ಕೂಡ ನಿಷೇಧಿಸುತ್ತಿದೆ ಈ ಸೂಕ್ತ. ವೇದವಿಹಿತವಿವಾಹ ಸಂಸ್ಕಾರಾನಂತರ ನಡೆಯುವ ದಂಪತಿ ಸಂಭೋಗ ಹೇಯವಲ್ಲ. ಆದರೆ, ಮಿತಿಮೀರಿದರೆ, ಅಮೃತವೂ ವಿಷವಾದೀತು.

ತನ್ನ ಕಿರಣಗಳ ಮೂಲಕ ಉಷೆಯಲ್ಲಿ ಗರ್ಭಸ್ಥಾಪನೆ ಮಾಡುತ್ತಾನೆ. ಅದರ ಪರಿಣಾಮವಾಗಿ ದಿನವು ಹುಟ್ಟುತ್ತದೆ. ಅಥವಾ ಜಲರೂಪೀ ತಂದೆಯು, ಪೃಥ್ವೀ ರೂಪದಲ್ಲಿದ್ದ ಮಗಳಲ್ಲಿ ಮೇಘಗಳ ಮೂಲಕ ಗರ್ಭಸ್ಥಾಪನೆ ಮಾಡುತ್ತಾನೆ. ಆಗ ವನಸ್ಪತಿಗಳು ಉತ್ಪನ್ನವಾಗುತ್ತವೆ. ಈ ವಿವರಣೆಯಿಂದ, ಇದು ಮನುಷ್ಯರ ವರ್ಣನೆಯಲ್ಲವೆಂದು ಸ್ಪಷ್ಟವಾಗುತ್ತದೆ. ಆದರೂ, ಇಲ್ಲಿ ತಂದೆ ಮತ್ತು ಮಗಳ ಸಂಬಂಧವನ್ನು ಯಾಕೆ ಕಲ್ಪಿಸಲಾಗಿದೆ ಎಂದು ಕೆಲವರಿಗೆ ಸಂದೇಹ ಬರಬಹುದು. ವೇದಗಳಲ್ಲಿ ಇಂತಹ ವಿಚಾರಗಳಿದ್ದರೆ, ಮನುಷ್ಯರಲ್ಲಿ ಇಂತಹ ಆಚರಣೆಗಳು ನಡೆಯಬಹುದೆಂದೇ ವೇದಗಳ ದೃಷ್ಟಿಕೋಣವಿರಬಹುದು, ಎಂದು ತಾತ್ಪರ್ಯವಾಗುವುದಿಲ್ಲವೆ? ಎಂದು ಇವರ ಪ್ರಶ್ನೆ.

ಇಲ್ಲಿ ಗಮನ ಕೊಡಬೇಕಾದ ಮಾತುಗಳೇನೆಂದರೆ, ಉಕ್ತ ವರ್ಣನೆಯಲ್ಲಿ, ಒಂದನೆಯದಾಗಿ. ಜಡಪ್ರಕೃತಿಯ ವರ್ಣನೆ ಇದೆ, ಮನುಷ್ಯರ ವರ್ಣನೆ ಇಲ್ಲ. ಜಡ ಪದಾರ್ಥಗಳಲ್ಲಿ ಅಶ್ಲೀಲತೆಯ ಕಲ್ಪನೆಯನ್ನು ಮಾಡಲಾಗುವುದಿಲ್ಲ. ಚೇತನ ಪ್ರಾಣಿಗಳಲ್ಲೂ ಕೂಡ, ಮನುಷ್ಯರನ್ನು ಬಿಟ್ಟರೆ, ಇತರ ಪ್ರಾಣಿಗಳಲ್ಲಿ ಅಶ್ಲೀಲತೆಯನ್ನು ಆರೋಪಿಸಲಾಗುವುದಿಲ್ಲ. ಎರಡನೆಯದಾಗಿ, ಪಿತಾ–ಪುತ್ರಿ ಸಂಬಂಧದ ಕಲ್ಪನೆ ಎಲ್ಲರಿಗೂ ಇದೆ.[3] ಆದರೆ, ಮಾನವ ಸಮಾಜದಲ್ಲಿ ಪಿತಾ–ಪುತ್ರಿಯರ ವೈವಾಹಿಕ ಸಂಬಂಧವನ್ನು ವೇದಗಳು ನಿಷೇಧಿಸುತ್ತವೆ. ನೋಡಿರಿ:—

**ಯಸ್ತ್ವಾ ಸ್ವಪ್ನೇ ನಿಪದ್ಯತೇ ಭ್ರಾತಾ ಭೂತ್ವಾ ಪಿತೇವ ಚ ।**
**ಬಜಸ್ತಾನ್ ತ್ಸಹತಾಮಿತಃ ಕ್ಲೀಬರೂಪಾಂಸ್ತಿರೀಟಿನಃ ॥**

[ಅಥರ್ವವೇದ ೮–೬–೭]

ಅರ್ಥಾತ್, ಯಾವಾತನು ತನ್ನ ಸಹೋದರಿ ಅಥವಾ ಮಗಳೊಂದಿಗೆ ಪತಿ–ಪತ್ನಿಯ ಸಂಬಂಧವನ್ನು ಸ್ಥಾಪಿಸುತ್ತಾನೋ, ಅವನ ಗುಪ್ತೇಂದ್ರಿಯವನ್ನು ನಷ್ಟ ಮಾಡಿ ಅವನನ್ನು ಕೊಂದುಹಾಕಬೇಕೆಂದು ವೇದಾಜ್ಞೆ. ಹೀಗಿರುವಾಗ, ವೇದಗಳಲ್ಲಿ ತಂದೆ–ಮಗಳ ಕುತ್ಸಿತ ಪ್ರೇಮಕ್ಕೆ ಸಮ್ಮತಿ ಇದೆ ಎಂದು ಯಾರೂ ಭಾವಿಸುವುದು ಬೇಡ.

ಇನ್ನು ವೇದಮಂತ್ರಗಳಲ್ಲಿ ಸ್ತ್ರೀಪುರುಷರ ಗುಪ್ತೇಂದ್ರಿಯ, ಮೈಥುನ ಇತ್ಯಾದಿಗಳ ವರ್ಣನೆಯೂ ಇದೆ ಎಂಬುದು ಸತ್ಯ. ಆದರೆ, ವೇದಗಳನ್ನು ಜ್ಞಾನದ ಗ್ರಂಥಗಳೆಂದು ಹೇಳಿದ ಮೇಲೆ, ಎಲ್ಲಾ ವಿಷಯಗಳ ಜ್ಞಾನವೂ ಅವುಗಳಲ್ಲಿ ಇರದಿದ್ದರೆ, ಅದು ಅಪೂರ್ಣತೆಯ ದೋಷಕ್ಕೊಳಗಾಗುವುದಿಲ್ಲವೆ?

ಆದುದರಿಂದ ವೇದಗಳಲ್ಲಿ ಅಶ್ಲೀಲತೆ ಇದೆ ಎಂಬ ಆರೋಪವು ನಿರಾಧಾರವಾಗಿದೆ ಎಂದು ತಿಳಿದುಕೊಳ್ಳಬೇಕು.

---

(3) And Lot went up out of Zoar and dwelt in the mountain. and his daughters with him.......And the first born said unto the younger, our father is old, and there is not a man in the earth to came unto us after the manner of all the earth.

Come let us make our father drink wine and we will lie with him, we may preserve seed of our father.

(Holy Bible, King James Version, American Bible Society, New York. Old Testament, Genesis, Chapter 19.)

**ವೇದಗಳಲ್ಲಿ ಪಶುಹಿಂಸೆಯ ಉಪದೇಶ:**—ಗೌತಮ ಬುದ್ಧನ ಕಾಲದಲ್ಲಿ ಯಜ್ಞಗಳಲ್ಲಿ ಪಶುಬಲಿ ಇತ್ಯಾದಿ ಹಿಂಸಾಕರ್ಮಗಳ ಪ್ರಚಾರವಾಗಿತ್ತೆಂದು ಇತಿಹಾಸದಿಂದ ತಿಳಿದುಬರುತ್ತದೆ. ಯಜ್ಞದಲ್ಲಿ ಮಾಡಿದ ಹಿಂಸೆಯು ಹಿಂಸೆಯಲ್ಲವೆಂದು ಹೇಳುತ್ತಿದ್ದರು. ಇದಕ್ಕೆ ವೇದವನ್ನು ಆಧಾರವೆಂದು ತೋರಿಸುತ್ತಿದ್ದರು. ಇದರಿಂದಾಗಿ ಗೌತಮ ಬುದ್ಧನು ಯಜ್ಞ ಮತ್ತು ವೇದ. ಎರಡನ್ನೂ ವಿರೋಧಿಸಿದನು. ನಿಜವಾಗಿ ವೇದಗಳ ಹೆಸರಲ್ಲಿ ಹಿಂಸೆ ಮಾಡುತ್ತಿದ್ದ ಬ್ರಾಹ್ಮಣರಿಗೂ, ವೇದಗಳ ಮರ್ಮ ತಿಳಿದಿದ್ದಿಲ್ಲ. ಗೌತಮ ಬುದ್ಧನಿಗೂ ವೇದಗಳ ಜ್ಞಾನವಿದ್ದಿಲ್ಲ. ವೇದಗಳ ಆಸುರೀ ಅಥವಾ ಅನಾರ್ಯ ಶಾಖೆಗಳ ಮೂಲಕವೇ ಹಿಂಸಾದಿ ಕುಕರ್ಮಗಳ ಪ್ರಚಾರವಾಗಿತ್ತು. ಮೂಲ ಸಂಹಿತೆಗಳಿಂದ ಇಂತಹ ಕುಕೃತ್ಯಗಳಿಗೆ ಸಮರ್ಥನೆಯು ದೊರೆಯುವುದಿಲ್ಲ.

ವೇದಗಳಲ್ಲಿ ಯಜ್ಞಕ್ಕೆ ಎಷ್ಟೆಲ್ಲಾ ಶಬ್ದಗಳು ಪ್ರಯುಕ್ತವಾಗಿವೆಯೋ. ಅವುಗಳಿಂದ ಹಿಂಸೆಯ ಸೂಚನೆಯು ಸಿಗುವುದಿಲ್ಲ. ಯಜ್ಞವನ್ನು ಋಷಿಗಳು ಶ್ರೇಷ್ಠತಮ ಕರ್ಮವೆಂದು ಹೇಳಿದ್ದಾರೆ. ಯಜ್ಞವನ್ನು ಅಧ್ವರ ಎಂದೂ ಕರೆಯುತ್ತಾರೆ. ಧ್ವರ ಎಂದರೆ ಹಿಂಸೆ. ಹಿಂಸಾರಹಿತ ಕರ್ಮವೇ ಅಧ್ವರವು. ಅಹಿಂಸೆಯ ಪಾಲನೆಗಾಗಿ ಯಜ್ಞದಲ್ಲಿ ಅಧ್ವರ್ಯುವನ್ನು ನೇಮಕಮಾಡುತ್ತಾರೆ. ಹಿಂಸೆಯು ಮನ, ವಚನ ಮತ್ತು ಕಾಯಗಳೆಂಬ ಮೂರು ಸಾಧನಗಳ ಮೂಲಕ ನಡೆಯುತ್ತದೆ. ಈ ಮೂರೂ ವಿಧದ ಹಿಂಸೆಯೂ ಯಜ್ಞದಲ್ಲಿ ನಿಷಿದ್ಧವಾಗಿದೆ. ಇರುವೆ, ಕ್ರಿಮಿಕೀಟಾದಿಗಳೂ ಯಜ್ಞದಲ್ಲಿ ಸಾಯಬಾರದೆಂಬ ನಿಯಮವಿದೆ. ಇದಕ್ಕಾಗಿಯೇ ಯಜ್ಞವೇದಿಯ ಸುತ್ತಲೂ ಪರಿಧಿಯನ್ನು ನಿರ್ಮಿಸುತ್ತಾರೆ, ಮತ್ತು ಅದರಲ್ಲಿ ನೀರನ್ನು ಬಿಡುತ್ತಾರೆ.

**ಕ್ರವ್ಯಾದಮಗ್ನಿಂ ಪ್ರಹಿಣೋಮಿ ದೂರಂ** ...... [ಋಗ್ವೇದ ೧೦–೧೬–೯]
**ಯೋ ಅಗ್ನಿಃ ಕ್ರವ್ಯಾತ್ ಪ್ರವಿವೇಶ ನೋ ಗೃಹಮಿಮಂ** ............
**ತಂ ಹರಾಮಿ ಪಿತೃಯಜ್ಞಾಯ ದೂರಂ** ...... [ಋಕ್. ೧೦–೧೬–೧೦]

ಇತ್ಯಾದಿ ವೇದಮಂತ್ರಗಳಲ್ಲಿ ಸ್ಪಷ್ಟವಾಗಿ ಮಾಂಸವನ್ನು ಸುಡುವ ಅಗ್ನಿಯನ್ನು ಅಪವಿತ್ರವೆಂದೂ, ಅದನ್ನು ದೂರವಿಡಬೇಕೆಂದೂ ಹೇಳಿದೆ. ಹೀಗಿರುವಲ್ಲಿ ಪವಿತ್ರ ಯಜ್ಞದಲ್ಲಿ ಪಶುಬಲಿಗೆಲ್ಲಿ ಆಸ್ಪದವಿದೆ?

ಯಜುರ್ವೇದದ ನಿಮ್ನ ಮಂತ್ರದಲ್ಲಿ ಪಶುಗಳೆಂದರೇನೆಂದು ವಿವರಿಸಲಾಗಿದೆ—

**ಅಗ್ನಿಃ ಪಶುರಾಸೀತ್ತೇನಾಯಜಂತ ವಾಯುಃ**
**ಪಶುರಾಸೀತ್ತೇನಾಯಜಂತ ಸೂರ್ಯಃ ಪಶುರಾಸೀತ್ತೇನಾಯಜಂತ ॥**
[ಯಜು. ೨೩–೧೭]

ಅರ್ಥಾತ್, ಅಗ್ನಿ, ವಾಯು, ಸೂರ್ಯ ಇತ್ಯಾದಿ ಪಶುಗಳೆನಿಸಿಕೊಂಡಿವೆ. ದೈವೀ ಯಜ್ಞದಲ್ಲಿ ಇವೆಲ್ಲಾ ಉಪಯೋಗಕ್ಕೆ ಬೀಳುತ್ತವೆ. '**ಯಜ್ಞೇನ ಯಜ್ಞಮಯಜಂತ ದೇವಾಃ**' ಈ ವೇದವಾಕ್ಯವನ್ನು '**ಅಗ್ನಿನಾ ಅಗ್ನಿಮಯಜಂತ ದೇವಾಃ**' ಅಂದರೆ, ದೇವತೆಗಳು ಅಗ್ನಿಯಿಂದ ಅಗ್ನಿಯ ಯಜ್ಞ ಮಾಡಿದರು. ಎಂದು ಯಾಸ್ಕರು ವಿವರಿಸಿದ್ದಾರೆ. ಶತಪಥ ಬ್ರಾಹ್ಮಣದಲ್ಲಿ '**ಕತಮಃ ಪ್ರಜಾಪತಿರಿತಿ,**' ಅಂದರೆ ಪ್ರಜೆಗಳ ಪಾಲನೆ ಮಾಡುವವರು ಯಾರು? ಎಂದು ಕೇಳಿ. ಅದಕ್ಕೆ ಉತ್ತರವಾಗಿ '**ಪಶುರಿತಿ**'

ಎಂದು ಹೇಳಿದ್ದಾರೆ. ಪ್ರಜೆಗಳ ಪಾಲನೆ ಮಾಡುವವರೆಲ್ಲಾ ಪಶುಗಳೆಂದು ಇದರ ತಾತ್ಪರ್ಯ. ಅಗ್ನಿಯು ಕಣ್ಣು ಮತ್ತು ರೂಪಗಳ ಮೂಲಕ, ವಾಯು ಪ್ರಾಣ ಮತ್ತು ಬಲಗಳ ಮೂಲಕ, ಮತ್ತು ಸೂರ್ಯನು ಚೈತನ್ಯ ಪ್ರಕಾಶಾದಿಗಳನ್ನು ಕೊಟ್ಟು, ಪ್ರಜೆಗಳ ಪಾಲನೆ ಮಾಡುತ್ತಾರೆ.

ವೇದಗಳಲ್ಲಿ ಅಶ್ವ, ಗೌ, ಅಜಾದಿ ಶಬ್ದಗಳಿಗೆ ಅನೇಕಾರ್ಥಗಳಿವೆ. ಅಶ್ವವೆಂದರೆ ಸೂರ್ಯನ ಕಿರಣಗಳು, ರಾಷ್ಟ್ರ, ವಾಹನ, ಭತ್ತದ ಕಾಳು ಇತ್ಯಾದಿ ಅನೇಕ ಅರ್ಥಗಳಾಗುತ್ತವೆ. ಇದೇ ರೀತಿ, ಗೌ ಎಂದರೂ ಸೂರ್ಯ ಕಿರಣ, ವಾಕ್, ಪೃಥ್ವೀ, ಇತ್ಯಾದಿ; ಅಜ ಎಂದರೆ ಬೀಜ, ಔಷಧಿವಿಶೇಷ ಇತ್ಯಾದಿ ಅರ್ಥಗಳಾಗುತ್ತವೆ. ಹೀಗಿರುವಾಗ, ಅಶ್ವಮೇಧ ಯಜ್ಞವೆಂದರೆ, ರಾಷ್ಟ್ರಪಾಲನೆ, ಗೋಮೇಧ ಎಂದರೆ, ಕೃಷಿ, ಇತ್ಯಾದಿ ರೀತಿಯಲ್ಲಿ ತರ್ಕಸಂಗತ ಅರ್ಥ ಮಾಡುವುದೇ ವೇದಾನುಕೂಲ; ಇದನ್ನು ಬಿಟ್ಟು ಕುದುರೆ, ದನ, ಆಡು, ಕುರಿಗಳನ್ನು ಕಡಿದು ಅಗ್ನಿಗೆ ಆಹುತಿ ಕೊಡುವುದು ವೈದಿಕ ದೃಷ್ಟಿಯಲ್ಲಿ ಮಹಾ ಅನರ್ಥ. ಯಜ್ಞದಲ್ಲಿ ಆಹುತಿಯಾಗಿ ಕೊಟ್ಟ ಪಶುಗಳು ಸ್ವರ್ಗಕ್ಕೆ ಹೋಗುತ್ತವೆಂದು ಕೆಲವರು ಹೇಳುತ್ತಾರೆ. ಇದು ನಿಜವೆಂದು ಅವರಿಗೆ ವಿಶ್ವಾಸವಿದ್ದರೆ, ತಮ್ಮ ಮುದಿ ತಂದೆತಾಯಿಗಳನ್ನೂ ಅವರು ಇದೇ ರೀತಿ ಸ್ವರ್ಗಕ್ಕೆ ಕಳುಹಿಸಬಹುದಲ್ಲ? ಸ್ವರ್ಗಕ್ಕೆ ಹೋಗಲಿಕ್ಕೆ ಯಾರಿಗೆ ಮನಸ್ಸಿಲ್ಲ? ತಮ್ಮನ್ನು ತಾವೇ ಕೊಲ್ಲಿಸಿಕೊಂಡು ಯಜ್ಞದಲ್ಲಿ ಬಲಿಯಾಗಿ ಬಿದ್ದು ಸ್ವರ್ಗಕ್ಕೆ ಹೋಗುವ ಉಪಾಯ ಬಹಳ ಸುಲಭವಲ್ಲವೆ?

ಯಜ್ಞಗಳ ವೈಜ್ಞಾನಿಕ ವಿವರಣೆ ಬ್ರಾಹ್ಮಣಾದಿ ಗ್ರಂಥಗಳಲ್ಲಿದೆ. ಯಾವ ರೀತಿಯಲ್ಲಿ ವಿಭಿನ್ನ ವಿದ್ಯೆಗಳಲ್ಲಿ ಪಾರಿಭಾಷಿಕ ಶಬ್ದಗಳಿವೆಯೋ, ವೇದಗಳಲ್ಲಿಯೂ ಪಾರಿಭಾಷಿಕ ಶಬ್ದಗಳಿವೆ. ಋಷಿಗಳ ವ್ಯಾಖ್ಯಾನಗಳಿಂದ ಅವುಗಳನ್ನು ಅರಿತುಕೊಂಡು, ತರ್ಕಸಮ್ಮತವಾದ ಅರ್ಥಗಳನ್ನೇ ಗ್ರಹಿಸಿಕೊಳ್ಳಬೇಕಲ್ಲದೆ, ವಿಪರೀತ ಮಾತುಗಳನ್ನಾಡಬಾರದು. ಶತಪಥ ಬ್ರಾಹ್ಮಣದಲ್ಲಿ ಯಜ್ಞಪಶುವಿನ ವರ್ಣನೆ ನೋಡಿರಿ—

**"ಯದಾ ಪಿಷ್ಟಾನ್ಯಥ ಲೋಮಾನಿ ಭವಂತಿ । ಯದಾಪ ಆನಯತಿ ಅಥ ತ್ವಗ್ಭವತಿ । ಯಥಾ ಸ ಯೌತ್ಯಥ ಮಾಂಸಂ ಭವತಿ ।"** ಅಂದರೆ, ಹಿಟ್ಟು ರೋಮವೆನಿಸುತ್ತದೆ; ಅದನ್ನು ನೀರಿನಲ್ಲಿ ಕಲಸಿದಾಗ ಅದು ಚರ್ಮವಾಗುತ್ತದೆ, ಅದನ್ನು ಅಂಟು ಮಾಡಿದಾಗ ಅದು ಮಾಂಸವಾಗುತ್ತದೆ—...ಇತ್ಯಾದಿ. ಐತರೇಯ ಬ್ರಾಹ್ಮಣದಲ್ಲಿಯೂ ಇಂತಹ ವಿವರಣೆ ಇದೆ—

**"ಸ ವಾ ಏಷ ಪಶುರೇವಾಲಭ್ಯತೇ ಯತ್ಪುರೋಡಾಶಸ್ತಸ್ಯ ಯಾನಿ ಕಿಂಶಾರೂಪಾಣಿ ತಾನಿ ರೋಮಾಣಿ ಯೇ ತುಷಾಃ ಸಾತ್ವಗ್ಯೇ ಫಲೀಕರಣಾಸ್ತದಸೃಗ್ಯತ್ಪಿಷ್ಟಂ ತನ್ಮಾಂಸಂ । ಏಷ ಪಶೂನಾಂ ಮೇಧೇನ ಯಜತೇ ।"** [೨—೬—೯]. "ಪುರಾಡಾಶದಲ್ಲಿರುವ ಧಾನ್ಯದ ಕಾಳುಗಳು ರೋಮಗಳು, ಧಾನ್ಯದ ಸಿಪ್ಪೆಗಳು ಚರ್ಮ, ಬೇಳೆಗಳು ಕೊಂಬು, ಹಿಟ್ಟು ಮಾಂಸ, ಈ ರೀತಿ ಬೇಯಿಸಲಾದ ಅನ್ನದ ಹೆಸರೇ ಪಶು."

ಈ ರೀತಿ ಮಂತ್ರಾರ್ಥ ವ್ಯಾಖ್ಯೆಗಳ ಪೂರ್ವಾಪರ ಜ್ಞಾನವಿಲ್ಲದವರೇ ವೇದಗಳಲ್ಲಿ ಪಶುಹಿಂಸೆಯ ಕಲ್ಪನೆ ಮಾಡುತ್ತಾರೆ. ಆದರೆ, ಪಶುಹಿಂಸೆಯು ಯಜ್ಞದಲ್ಲೂ ನಿಷಿದ್ಧವೆಂಬುದು ಸ್ಪಷ್ಟ. ದನವನ್ನು ವೇದಗಳಲ್ಲಿ ಅಘ್ನ್ಯಾ ಅರ್ಥಾತ್ ಅಹನ್ಯಮಾನ ಪಶುವೆಂದು ಹೇಳಿರುವಾಗ, ಅವುಗಳನ್ನು ಕೊಲ್ಲುವ ಆಜ್ಞೆ ವೇದಗಳಲ್ಲಿ ಹೇಗೆ

ಬರಬೇಕು? ಮಾಂಸವು, ನಿಜವಾಗಿಯೂ ಪಿಶಾಚಿಗಳ ಭೋಜನ. ಮಾಂಸಾಹಾರೀ ಜನರನ್ನೇ ಹಿಂದೆ ಪಿಶಾಚಿಗಳೆಂದು ಹೇಳುತ್ತಿದ್ದರು. ಆರ್ಯರು ಮಾಂಸಗಳ ಆಹುತಿಯನ್ನು ಹೇಗೆ ಕೊಟ್ಟರು? ಇವೆಲ್ಲಾ ಅಲ್ಪ ಶ್ರುತರ ಕಲ್ಪನೆಗಳು. ಆದುದರಿಂದಲೇ ಅಲ್ಪಶ್ರುತರಿಗೆ ವೇದಮಾತೆಯು ಹೆದರುತ್ತಾಳೆ. ಅವರು ಆಕೆಯ ಮೇಲೆ ಪ್ರಹಾರ ಮಾಡುತ್ತಾರೆ, ಅವಳ ನಿಂದೆ ಮಾಡುತ್ತಾರೆ, ಎಂದು ವಿದ್ವಾಂಸರು ಹೇಳಿದ್ದಾರೆ.

ವೇದಭಾಷೆಯಂತೆ, ಇತರ ಕಡೆಗಳಲ್ಲೂ ಪಾರಿಭಾಷಿಕ ಶಬ್ದಗಳು ಯಾವ ರೀತಿಯಲ್ಲಿ ಅಲ್ಪಶ್ರುತರನ್ನು ಭ್ರಮೆಗೊಳಪಡಿಸಬಲ್ಲುವೆಂಬುದನ್ನು ಇಲ್ಲಿ ನೋಡಬಹುದು. "**ಹಠಯೋಗಪ್ರದೀಪಿಕೆಯಲ್ಲಿ**" ಈ ಶ್ಲೋಕವಿದೆ—

**ಗೋಮಾಂಸಂ ಭಕ್ಷಯೇನ್ನಿತ್ಯಂ ಪಿಬೇದಮರವಾರುಣೀಂ ।**
**ಕುಲೀನಂ ತಮಹಂ ಮನ್ಯೇ ಇತರೇ ಕುಲಘಾತಕಾಃ ॥**

ಅರ್ಥಾತ್, ಯಾವಾತನು ನಿತ್ಯವೂ ಗೋಮಾಂಸವನ್ನು ತಿನ್ನುತ್ತಾನೋ, ಮತ್ತು ಮದಿರಾಪಾನವನ್ನು ಮಾಡುತ್ತಾನೋ ಅವನೇ ಕುಲೀನ, ಅನ್ಯಜನರು ಕುಲಘಾತಕರು. ಮೇಲಿನಿಂದ ಇದು ಪಾಪವಿಚಾರವೆಂಬಂತೆ ಕಾಣುತ್ತದೆ. ಆದರೆ, ಮುಂದಿನ ಶ್ಲೋಕದಲ್ಲಿ ಇದರ ಅರ್ಥವನ್ನು ಸ್ಪಷ್ಟಪಡಿಸಿದ್ದಾರೆ—

**ಗೋಶಬ್ದೇನೋದಿತಾ ಜಿಹ್ವಾ ತತ್ಪ್ರವೇಶೋ ಹಿ ತಾಲುನಿ ।**
**ಗೋಮಾಂಸಭಕ್ಷಣಂ ತತ್ತು ಮಹಾಪಾತಕನಾಶನಂ ॥**"

ಎಂದರೆ—ಯೋಗಾಭ್ಯಾಸದಲ್ಲಿ ನಾಲಿಗೆಯನ್ನು ಹಿಂದೆ ಕಳಚಿ ತಾಲುಭಾಗದಲ್ಲಿ ಪ್ರವೇಶಿಸುವ ಕ್ರಿಯೆಯನ್ನು ಗೋಮಾಂಸಭಕ್ಷಣೆ ಎನ್ನುತ್ತಾರೆ. ಇಂತಹ ಸ್ಪಷ್ಟೀಕರಣಗಳನ್ನು ನೋಡದೆ ಅರ್ಥಕ್ಕೆ ಅನರ್ಥವನ್ನು ಕಲ್ಪಿಸುವುದು ವಿದ್ವಾಂಸರ ಲಕ್ಷಣವಲ್ಲ. ವೇದಗಳಲ್ಲೂ ಇಂತಹ ಸ್ಪಷ್ಟೀಕರಣಗಳನ್ನು ನೋಡಬಹುದು. ನೋಡಿರಿ:—

**ಧಾನಾ ಧೇನುರಭವದ್ವತ್ಸೋ ಅಸ್ಯಾಸ್ತಿಲೋಭವತ್ ॥**

[ಅಥರ್ವವೇದ ೧೮–೪–೩೨]

ಅರ್ಥಾತ್, ಧಾನ್ಯವೇ ಧೇನು, ಎಳ್ಳಿನ ಕಾಳೇ ಕರು.........ಇತ್ಯಾದಿ. ಇದೇ ರೀತಿ—

**ಏನೀರ್ಧಾನಾ ಹರಿಣೀ ಶ್ಯೇನೀ ರಸ್ಯಾ ಕೃಷ್ಣಾಧಾನಾ ರೋಹಿಣೀರ್ಧೇನವಸ್ತೇ ॥**

[ಅಥರ್ವವೇದ ೧೮–೪–೩೩]

ಎಂದರೆ—ಕೃಷ್ಣಮೃಗ, ಹರಿಣೀ, ಶ್ಯೇನೀ, ರಸ್ಯಾ, ಕೃಷ್ಣಾ, ರೋಹಿಣೀ ಆದಿ ಧಾನ್ಯಗಳೇ ಧೇನುಗಳು. ಹವನ ಪ್ರಕರಣದಲ್ಲಿ ಈ ಧಾನ್ಯಗಳನ್ನೇ ಹೋಮಮಾಡಬೇಕಲ್ಲದೆ, ಪ್ರಾಣಿಗಳನ್ನಲ್ಲ.

ಮಾಂಸಭಕ್ಷಣೆಯು ಅನಾರ್ಯರಲ್ಲಿ ಪ್ರಚಲಿತವಾಗಿತ್ತು. ಅನಾರ್ಯರ ಸಂಪರ್ಕದಲ್ಲಿ ಬಂದು ಆರ್ಯರೂ ಇಂತಹ ನಿಂದಿತ ಅನ್ನಪಾನಾದಿಗಳ ಸೇವನೆ ಮಾಡಲು ಪ್ರಾರಂಭಿಸಿದರು. ರಾವಣಾದಿ ರಾಕ್ಷಸೀ ಪ್ರವೃತ್ತಿಯ ಜನರೇ ಮೊದಲು ಯಜ್ಞಗಳಲ್ಲಿ ಮಾಂಸಗಳ ಆಹುತಿಯನ್ನು ಪ್ರಾರಂಭಿಸಿದರು. ಆಸುರೀ ಶಾಖೆಗಳಲ್ಲಿಯೇ ಇಂತಹ

ಅನರ್ಥಗಳ ಪ್ರಚಾರವು ಕಂಡುಬರುತ್ತದೆ. ಮೂಲಸಂಹಿತೆಗಳಲ್ಲಿ ಪಶುಹಿಂಸೆ, ಅಥವಾ ಮಾಂಸಭಕ್ಷಣದ ನಿಷೇಧವಿದೆ.

**ಸೋಮರಸ ಪಾನ:**—ಮಾಂಸ ಭಕ್ಷಣದಂತೆ, ಮಾದಕವಸ್ತುಗಳ ಸೇವನೆಯೂ ವೇದಗಳಲ್ಲಿ ನಿಷಿದ್ಧವಾಗಿದೆ. ಆದರೆ. ಇಂದ್ರಾದಿ ದೇವತೆಗಳೂ, ಋಷಿಗಳೂ ಸೋಮರಸ ವೆಂಬ ಮಾದಕ ದ್ರವ್ಯವನ್ನು ಸೇವನೆ ಮಾಡುತ್ತಿದ್ದರೆಂಬ ಮಾತನ್ನು ಧೂರ್ತರು ತುಂಬಾ ಪ್ರಚಾರ ಮಾಡಿದ್ದಾರೆ. ವೇದಮಂತ್ರಗಳಲ್ಲಿ ಬರುವ ಇಂದ್ರಾದಿ ದೇವತೆ ತಥಾ ಋಷಿಗಳ ಹೆಸರುಗಳು ಇತಿಹಾಸದಲ್ಲಿ ಪ್ರಸಿದ್ಧರಾದ ವ್ಯಕ್ತಿಗಳ ಹೆಸರುಗಳಲ್ಲ, ಇವೆಲ್ಲಾ ಯೌಗಿಕ ಅರ್ಥಗಳ ದ್ಯೋತಕವಾಗಿವೆ ಎಂಬುದನ್ನು ಮೇಲೆ ನೋಡಿದ್ದೇವೆ. ಹೀಗೆ ಇಂದ್ರ ಅಂದರೆ ಸೂರ್ಯ, ಜೀವಾತ್ಮ ಆದಿ ಅರ್ಥಗಳಾಗುತ್ತವೆ. ಇದೇ ರೀತಿ ಋಷಿ ಗಳೆಂದರೆ ಇಂದ್ರಿಯಗಳೆಂದೂ, ಮಂತ್ರಗಳೆಂದೂ ಪ್ರಸಿದ್ಧಿ ಇದೆ. ಸೋಮ ಎಂದರೆ, ಉತ್ತಮ ದ್ರವ್ಯ, ವೀರ್ಯ, ಜಲ, ಚಂದ್ರಮಾ, ಇತ್ಯಾದಿ ಅರ್ಥಗಳಿವೆ. ಹೀಗಿರುವಾಗ, ಇಂದ್ರನು ಸೋಮರಸವನ್ನು ಕುಡಿಯುತ್ತಾನೆ ಎಂದರೆ, ಸೂರ್ಯನು ಜಲವನ್ನು ಹೀರುತ್ತಾನೆ, ಋಷಿಗಳು ಸೋಮಪಾನ ಮಾಡುತ್ತಾರೆ ಎಂದರೆ, ಇಂದ್ರಿಯಗಳೂ, ಮನಸ್ಸೂ ವೀರ್ಯದಿಂದ ಬಲಪ್ರಾಪ್ತಿ ಮಾಡಿಕೊಳ್ಳುತ್ತವೆ, ಎಂಬಂತಹ ಸಪ್ರಮಾಣವೂ ಬುದ್ಧಿಪೂರ್ವಕವೂ ಆದ ವ್ಯಾಖ್ಯಾನ ಮಾಡಬೇಕೇ ಹೊರತು, ತಮ್ಮ ದುರ್ವ್ಯಸನಗಳಿಗೆ ವೇದಮಂತ್ರಗಳ ಸಮರ್ಥನೆ ಪಡೆಯಲು ಪ್ರಯತ್ನಮಾಡುವುದು ಧೂರ್ತತೆಯೇ ಸರಿ.

**ವೇದಗಳಲ್ಲಿ ಇತಿಹಾಸದ ಭ್ರಮೆ:**—ಮನು ಮಹರ್ಷಿಗಳು ಮೊದಲೇ ಹೇಳಿದ್ದಾರೆ, ಏನೆಂದರೆ—

**ಸರ್ವೇಷಾಂ ತು ಸ ನಾಮಾನಿ ಕರ್ಮಾಣಿ ಚ ಪೃಥಕ್ ಪೃಥಕ್ ।**
**ವೇದಶಬ್ದೇಭ್ಯ ಏವಾದೌ ಪೃಥಕ್‌ಸಂಸ್ಥಾಶ್ಚ ನಿರ್ಮಮೇ ॥** [೧–೨೧]

ಎಂದರೆ, "ಸೃಷ್ಟಿಯ ಆದಿಯಲ್ಲಿ, ಜನರು ವೈದಿಕ ಶಬ್ದಗಳನ್ನೇ ಆರಿಸಿ ತಮ್ಮ ತಮ್ಮ ಮಕ್ಕಳು, ನದಿ, ಪರ್ವತ, ನಗರ, ಕರ್ಮ ಇತ್ಯಾದಿಗಳಿಗೆ ಹೆಸರಿಡುತ್ತಿದ್ದರು. ಈ ರೀತಿ ಇಂದ್ರ, ವಿಷ್ಣು ಸೋಮ ಮೊದಲಾದ ವ್ಯಕ್ತಿಗಳ ಹೆಸರುಗಳೂ, ಗಂಗಾ, ಯಮುನೆ, ಸರಸ್ವತೀ ಮೊದಲಾದ ನದಿಗಳ ಹೆಸರುಗಳೂ, ಅಯೋಧ್ಯಾದಿ ನಗರಗಳ ಹೆಸರುಗಳೂ ಪ್ರಸಿದ್ಧವಾದುವು. ಇದೇ ರೀತಿ ಯಜ್ಞ, ಯುದ್ಧ ಮೊದಲಾದ ಕರ್ಮಗಳ ಹೆಸರುಗಳೂ ವ್ಯವಹಾರದಲ್ಲಿ ಪ್ರಚಲಿತವಾದುವು. ಲೋಕದಲ್ಲಿ ಈ ಸಂಜ್ಞೆಗಳು ರೂಢಾರ್ಥಕ ವಾಗಿ ಬಳಕೆಯಲ್ಲಿವೆ. ಅನೇಕ ಹೆಸರುಗಳು ಅಂಕಿತನಾಮಗಳಾಗಿವೆ. ಆದರೆ ವೇದ ಗಳಲ್ಲಿ ಈ ಸಂಜ್ಞೆಗಳು ರೂಢಾರ್ಥದಲ್ಲಿ ಬಳಕೆಯಲ್ಲಿಲ್ಲ. ಇಲ್ಲಿ ಇವುಗಳು ಯೌಗಿ ಕಾರ್ಥ ದ್ಯೋತಕವಾಗಿವೆ. ಈ ರಹಸ್ಯವನ್ನು ಅರಿಯದೆ, ಕೆಲವರು ವೇದಗಳಲ್ಲಿ ಲೋಕಪ್ರಸಿದ್ಧ ಸಂಜ್ಞೆಗಳನ್ನು ನೋಡಿ, ಅವುಗಳಲ್ಲಿ ಇತಿಹಾಸದ ವರ್ಣನೆಯನ್ನು ಹುಡುಕುತ್ತಾರೆ. ಇದು ಅನುಚಿತ.

ದುರ್ಗಾಚಾರ್ಯರು ನಿರುಕ್ತ ಭಾಷ್ಯವೃತ್ತಿಯಲ್ಲಿ ಇತಿಹಾಸವೆಂದರೆ, '**ಇತಿ ಹೈವ ಮಾಸೀದಿತಿ ಯಃ ಕಥ್ಯತೇ ಸ ಇತಿಹಾಸಃ**' ಎಂದು ಹೇಳಿದ್ದಾರೆ. ಎಂದರೆ, "ಇದು ಈ ರೀತಿಯಲ್ಲಿ ಆಗಿಹೋಗಿದೆ" ಎಂದು ನಿಶ್ಚಯಪೂರ್ವಕವಾಗಿ ಹೇಳುವುದೇ ಇತಿಹಾಸ. ಅಮರಕೋಶದಲ್ಲಿ '**ಇತಿಹಾಸಃ ಪುರಾವೃತ್ತಯಃ**' ಎಂದಿದೆ. ಇದನ್ನು ಸರ್ವಾ

ನಂದರು ಈ ರೀತಿ ವಿವರಿಸಿದ್ದಾರೆ–"**ಇತಿ ಶಬ್ದಃ ಪಾರಂಪರ್ಯೋಪದೇಶೇಽವ್ಯಯಂ । ಇತಿಹಾಸ್ತೇ ಅಸ್ಮಿನ್ನಿತಿಹಾಸಃ**" ಇತಿಹಾಸ ಶಬ್ದದ ಈ ಪರಿಭಾಷೆಗಳನ್ನು ಪರಿಶೀಲಿಸಿದರೆ ಈ ವಿಷಯಗಳು ಸ್ಪಷ್ಟವಾಗುತ್ತವೆ. [೧] ಇತಿಹಾಸವು ಆಗಿಹೋದ ಘಟನೆಗಳ ವರ್ಣನೆಯಾಗಿದೆ, [೨] ಘಟನೆಯು ನಡೆದುಹೋದ ಬಳಿಕ ಪರಂಪರಾನುಗತವಾಗಿ ಜನರು ಇದನ್ನು ಹೇಳುತ್ತಾ ಬರುತ್ತಾರೆ, [೩] ಇತಿಹಾಸದ ಘಟನೆಗಳನ್ನು ಪ್ರತ್ಯಕ್ಷವಾಗಿ ನೋಡಿದವರಿರುತ್ತಾರೆ, [೪] ಇತಿಹಾಸದ ಕಥನವು ನಿಶ್ಚಯಪೂರ್ವಕವಾಗಿರುವುದರಿಂದ ಕಾಲ್ಪನಿಕ ಮಾತುಗಳಿಗೆ ಇದರಲ್ಲಿ ಆಸ್ಪದವಿಲ್ಲ, ಮತ್ತು [೫] ಇತಿಹಾಸವು ಉತ್ತರೋತ್ತರ ವೃದ್ಧಿಯಾಗುತ್ತದೆ. ಉದಾಹರಣೆಗಾಗಿ, ಪಾಂಡವರ ಇತಿಹಾಸವನ್ನು ನೋಡುವ. ಪಾಂಡವರು ಯಾರ ಮಕ್ಕಳು, ಯಾವ ವಂಶದಲ್ಲಿ ಹುಟ್ಟಿದವರು, ಯಾವ ದೇಶದಲ್ಲಿ ಯಾವ ಕಾಲದಲ್ಲಿ ಇದ್ದವರು, ಅವರು ಏನೆಲ್ಲಾ ಮಹತ್ವಪೂರ್ಣ ಕಾರ್ಯಗಳನ್ನು ಮಾಡಿದ್ದರು, ಇತ್ಯಾದಿ ವಿಷಯಗಳು ಅವರ ಇತಿಹಾಸದಲ್ಲಿ ಬರುತ್ತವೆ. ಅವರ ಕಾಲದಲಿ, ಸಾಕ್ಷಿಯಾಗಿದ್ದವರು, ನಿಷ್ಪಕ್ಷಪಾತ ಬುದ್ಧಿಯಿಂದ ಇದನ್ನು ಇತರರಿಗೆ ಹೇಳಿರಬೇಕು. ಈ ಇತಿಹಾಸವು ಪರಂಪರೆಯಿಂದ ಇಂದಿನ ತನಕ ಹೇಳಿಕೊಂಡು ಬಂದಿರಬೇಕು. ಇಷ್ಟಲ್ಲದೆ, ಪಾಂಡವರ ನಂತರ ಯಾರು ಹುಟ್ಟಿದರು, ಯಾವ ರೀತಿಯಲ್ಲಿ ಅವರ ವಂಶದ ಇತಿಹಾಸವು ಮುಂದುವರಿಯಿತು ಎಂಬುದರ ವಿವರಣೆಯೂ ಸ್ಪಷ್ಟವಾಗಿ ಸಿಕ್ಕಬೇಕು. ಊಹಾಪೋಹಗಳಿಗೆ ಇತಿಹಾಸದಲ್ಲಿ ಆಸ್ಪದವಿಲ್ಲ. ಕಾಲ್ಪನಿಕ ಮಾತುಗಳಿಗೆ ಕತೆಕಾದಂಬರಿಗಳಲ್ಲಿ ಮಾತ್ರ ಸ್ಥಾನವಿರುವುದಲ್ಲದೆ, ಇತಿಹಾಸದಲ್ಲಿ ಇವುಗಳಿಗೆ ಮೂಲ್ಯವಿಲ್ಲ.

ವೇದಗಳಲ್ಲಿ ಗಂಗಾ, ಯಮುನೆ, ಸರಸ್ವತೀ ಮೊದಲಾದ ಹೆಸರುಗಳನ್ನು ನೋಡಿ, ಕೆಲವರು ಇವುಗಳನ್ನು ಉತ್ತರ ಭಾರತದ ನದಿಗಳೆಂದು ಹೇಳುತ್ತಾರೆ. ಆದರೆ, ವೇದಮಂತ್ರಗಳಲ್ಲಿಯೇ ಇವುಗಳನ್ನು ಖೇದಯಾಃ, ಕಿರಣಾಃ, ರಶ್ಮಯಃ ಎಂದೂ, ಸೂರ್ಯನ ಪೃಷ್ಠಭಾಗದಲ್ಲಿ ಹರಿಯುವ ಸಪ್ತಸಿಂಧುಗಳೆಂದೂ ಹೇಳಿದೆ. ಪೌರಾಣಿಕರೂ ಗಂಗೆಯನ್ನು ವಿಷ್ಣುಪದೀ ಎಂದೂ, ಯಮುನೆಯನ್ನು ಸೂರ್ಯತನಯಾ ಎಂದೂ ಕರೆಯುತ್ತಾರೆ. ವೇದಗಳಲ್ಲಿ ವಿಷ್ಣು ಎಂದರೆ ಸೂರ್ಯನೆಂದೂ ಅರ್ಥವಾಗುತ್ತದೆ. ಆದುದರಿಂದ ಈ ಗಂಗೆ ಮೊದಲಾದ ಸಂಜ್ಞೆಗಳು ಸೂರ್ಯನ ಕಿರಣಗಳ ಪ್ರಭಾವಜನಿತವೆಂಬಲ್ಲಿ ಸಂದೇಹವಿಲ್ಲ. ಋಷಿಗಳು ಈ ವೈದಿಕ ಸಂಜ್ಞೆಗಳನ್ನೇ ಆರಿಸಿ ಭಾರತದ ನದಿಗಳ ನಾಮಕರಣ ಮಾಡಿರುವರು. ಇದನ್ನು ಮರೆತು, ವೇದಗಳಲ್ಲಿ ಭಾರತದೇಶದ ಗಂಗೆ ಮೊದಲಾದ ನದಿಗಳ ಹೆಸರುಗಳಿವೆ ಎಂದು ಹೇಳುವುದು ಅನುಚಿತ. ಇದು ಸತ್ಯಕ್ಕೆ ಶೀರ್ಷಾಸನ ಹಾಕಿಸುವಂತಹದೇ ವ್ಯಾಪಾರ.

ವೇದಗಳಲ್ಲಿ ಆರ್ಯ ಅನಾರ್ಯರ ಯುದ್ಧಗಳ ಉಲ್ಲೇಖವೂ ಇಲ್ಲ. ಇಲ್ಲಿರುವ ಇಂದ್ರವೃತ್ರರ ಸಂಘರ್ಷವು, ಪ್ರಕೃತಿಯ ವರ್ಣನೆಗೆ ಸಂಬಂಧಪಟ್ಟಿದೆ. ಇಂದ್ರನೆಂದರೆ, ಸೂರ್ಯ, ವೃತ್ರನೆಂದರೆ ಕಾರ್ಮೋಡಗಳು. ಕಾರ್ಮೋಡಗಳು ನೀರನ್ನು ತಡೆಯುತ್ತವೆ. ಸೂರ್ಯನು ತನ್ನ ವಜ್ರಾಯುಧ, ಅರ್ಥಾತ್ ವಿದ್ಯುತ್ತಿನ ಪ್ರಹಾರದಿಂದ ಮೋಡಗಳನ್ನು ಧ್ವಸ್ತಮಾಡಿ ಮಳೆ ಸುರಿಸುತ್ತಾನೆ. ಗೌ ಅರ್ಥಾತ್, ತನ್ನ ಕಿರಣಗಳನ್ನು ಬಿಡುಗಡೆ ಮಾಡುತ್ತಾನೆ. ಇದರಲ್ಲಿ ಇತಿಹಾಸದ ಗಂಧಗಾಳಿಯೂ ಇಲ್ಲ. ಇತಿಹಾಸದಲ್ಲಿ ಪ್ರಸಿದ್ಧನಾದ ಇಂದ್ರನು ಅದಿತಿ ಮತ್ತು ಕಶ್ಯಪರ ಮಗನಾಗಿದ್ದನು. ಆತನು ಆದ್ಯ

ವ್ಯಾಕರಣಾಚಾರ್ಯನೂ, ವೇದಗಳ ವಿದ್ವಾಂಸನೂ ಆಗಿದ್ದನು. ತ್ರಿವಿಷ್ಟಪ, ಅಂದರೆ ಈಗಿನ ಟಿಬೇಟ್ ಅವನ ರಾಜಧಾನಿಯಾಗಿತ್ತು. ತಾತ್ಪರ್ಯವೇನೆಂದರೆ, ಈ ಇಂದ್ರನಿಗಿಂತಲೂ ಮೊದಲು ವೇದಗಳಿದ್ದುವು. ಆದುದರಿಂದ ಆರ್ಯರಾಜ ಇಂದ್ರನ ಇತಿಹಾಸವು ವೇದಗಳಲ್ಲಿದೆ ಎನ್ನುವುದು ಹಾಸ್ಯಾಸ್ಪದ ಮಾತಾಗಿದೆ.

ಕೆಲವರು, ವೇದಗಳಲ್ಲಿ ಬರುವ "**ಋತಂ ಚ ಸತ್ಯಂ ಚಾಭೀದ್ಧಾತ್ತಪಸೋಽಧ್ಯಜಾಯತ.........**" [ಋಗ್ವೇದ ೧೦–೧೯೦–೧] ಎಂಬಿತ್ಯಾದಿ ಮಂತ್ರಗಳಲ್ಲಿ ಸೃಷ್ಟಿಯ ಇತಿಹಾಸವಿರುವಾಗ, "ಭಾರತದ ನದಿಗಳ ಇತಿಹಾಸ, ಇಂದ್ರಾದಿ ಆರ್ಯ ರಾಜರ ಇತಿಹಾಸ, ಇತ್ಯಾದಿಗಳು ಏಕೆ ಇರಬಾರದು?" ಎಂದು ತರ್ಕಿಸುತ್ತಾರೆ. ಇದು ಸರಿಯಲ್ಲ. ಯಾಕೆಂದರೆ, ವೇದಗಳಲ್ಲಿ ಬರುವ ಸೃಷ್ಟಿಯ ಇತಿಹಾಸವು ಲೋಕದಲ್ಲಿ ಪ್ರಸಿದ್ಧವಾದ ಇತಿಹಾಸದ ಅರ್ಥದಲ್ಲಿ ಇಲ್ಲ. ಲೋಕದ ಇತಿಹಾಸವು ಅನಿತ್ಯವಾಗಿದೆ. ವೇದಗಳಲ್ಲಿ ಬರುವ ಇತಿಹಾಸವು, ನಿಜವಾಗಿ ಇತಿಹಾಸವಲ್ಲ. ಅದು ಪ್ರವಾಹದಿಂದ ಅನಾದಿಯಾಗಿರುವ, ಸೃಷ್ಟಿ ಮತ್ತು ಪ್ರಳಯಗಳ ಅನವರತ ಪ್ರಕ್ರಿಯೆಗಳ ವರ್ಣನೆಯಾಗಿದೆ. ಯಾವ ರೀತಿ ದಿನ ಮತ್ತು ರಾತ್ರಿಗಳ ವರ್ಣನೆಯು ಇತಿಹಾಸದ ವಿಷಯವಲ್ಲವೋ, ಅದೇ ರೀತಿ ಸೃಷ್ಟಿ ಮತ್ತು ಪ್ರಲಯಗಳ ಜ್ಞಾನವೂ ಇತಿಹಾಸವಲ್ಲ.

ಇಷ್ಟು ಮಾತ್ರವಲ್ಲದೆ. ವೇದಗಳಲ್ಲಿ ಇತಿಹಾಸದ ಕಲ್ಪನೆಯಿಂದ, ಇವುಗಳಲ್ಲಿ ಪಕ್ಷಪಾತಾದಿ ದೋಷಗಳು ಕಂಡುಬರಲಿಕ್ಕೆ ಸಾಧ್ಯವಿದೆ. "ವೇದಗಳಲ್ಲಿ ಕೇವಲ ಉತ್ತರ ಭಾರತದ ನದಿಗಳ ಹೆಸರೇ ಏಕಿರಬೇಕು? ಕೇವಲ ಭಾರತೀಯ ಆರ್ಯರಾಜರ ಇತಿಹಾಸವೇ ಏಕಿರಬೇಕು?"—ಎಂಬಂತಹ, ಸಾರ್ವಕಾಲಿಕ–ಸಾರ್ವಭೌಮ ಸತ್ಯಶಾಸ್ತ್ರದ ಸ್ವರೂಪವನ್ನೇ ಒರೆಸಿ ಹಾಕುವ, ಭಗವದ್ದ್ರೋಹ–ಧರ್ಮದ್ರೋಹ–ಮಾನವ ದ್ರೋಹಗಳೆಂಬ ಪಾಪಕ್ಕೆ ವೇದಿಕೆ ನಿರ್ಮಿಸುವ ಅತಿ ಹೇಯ ಕ್ರಿಯೆಯಾದೀತು. ಅದರಿಂದಾಗ ಬಹುದಾದ ವಿಪ್ಲವವನ್ನು ಪ್ರಾರಂಭಿಸುವುದು ಅವರ ಉದ್ದೇಶ್ಯವಲ್ಲದಿರಬಹುದು. ಆದರೂ—ಬೇವಿನ ಬೀಜ ಬಿತ್ತಿ ಮಾವಿನ ಹಣ್ಣನ್ನು ತಿನ್ನಲಾದೀತೇ? ಸೃಷ್ಟ್ಯಾದಿ–ವೇದಗಳ ಪ್ರಕಾಶನ, ವೇದೋದ್ಭಾಸನದ ಹಿಂದಣ, ಅಭಾವಮಾತ್ರವಾದ ಸಂಸ್ಕೃತಿಯ ವರ್ಣನೆ, ಅಪೌರುಷೇಯತ್ವ, ಸರ್ವವಿದ್ಯಾಮಯತ್ವ, ನಿತ್ಯತ್ವ—ಮೊದಲಾದ ವೇದಗಳ ವೈಶಿಷ್ಟ್ಯಕ್ಕೇ ಸೊನ್ನೆ ಸುತ್ತುವ ಪ್ರಯಾಸ ಮಾತ್ರವಿದು.

ಆದರೆ ಒಂದು ಮಾತು. ವೇದಗಳ ಉಪದೇಶಗಳು ರೋಚಕವಾಗುವಂತೆಯೂ, ಮನದಟ್ಟಾಗುವಂತೆಯೂ, ಆಖ್ಯಾನಗಳ ಮೂಲಕ ಅವುಗಳ ಪ್ರವಚನ ಮಾಡುವ ಪದ್ಧತಿ ಅತಿ ಪ್ರಾಚೀನ ಕಾಲದಿಂದಲೂ ನಡೆದುಬಂದಿದೆ. ಪಂಚತಂತ್ರದ ಕತೆಗಳನ್ನು ನೋಡಿರಿ. ಈ ಕತೆಗಳು ಕಾಲ್ಪನಿಕ ಕತೆಗಳೆಂಬುದರಲ್ಲಿ ಸಂದೇಹವಿಲ್ಲ. ಆದರೆ ಹಿಂದೆ ನಡೆದ ಕತೆಯಂತೆ ಅದನ್ನು ಹೇಳುತ್ತಾರೆ. ಅದರಲ್ಲಿ ಆಖ್ಯಾನ ಭಾಗವು ಗೌಣ ಮತ್ತು ಉಪದೇಶ ಭಾಗವು ಮುಖ್ಯವಾಗಿದೆ. ಇದೇ ರೀತಿ ಬ್ರಾಹ್ಮಣಾದಿ ಗ್ರಂಥಗಳಲ್ಲಿ ಆಖ್ಯಾನಗಳ ಮೂಲಕ ಮಂತ್ರಗಳ ರಹಸ್ಯವನ್ನು ತಿಳಿಸಲು ಪ್ರಯತ್ನ ಮಾಡಿದ್ದಾರೆ. '**ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್**' ಎಂದು ಮಹಾಭಾರತದಲ್ಲಿ ಹೇಳಿದ್ದಾರೆ. ಅಂದರೆ, ಇತಿಹಾಸ ಮತ್ತು ಪುರಾಣಗಳ ಕತೆಗಳ ಮೂಲಕ ವೇದಮಂತ್ರಗಳ ಮರ್ಮವನ್ನು ತಿಳಿಸಲಾಗುತ್ತದೆ, ಎಂದು ಕೆಲವರ ವಿಚಾರ. ಯಾಸ್ಕರು "**ಇತ್ಯೈತಿಹಾಸಿಕಾಃ**" ಎಂದು ನಿರುಕ್ತದಲ್ಲಿ ಅನೇಕ ಕಡೆಗಳಲ್ಲಿ ಹೇಳಿದ್ದಾರೆ. ಇಲ್ಲಿ

ಇವರು ಇದೇ ವಿಚಾರದ ಕಡೆಗೆ ಇಂಗಿತ ಮಾಡಿದ್ದಾರೆ ಮಾತ್ರ; ವೇದಗಳಲ್ಲಿ ಇತಿಹಾಸವಿದೆ ಎಂದು ಯಾವ ಪ್ರಾಚೀನ ವೇದಾಚಾರ್ಯರೂ ಹೇಳಿಲ್ಲ.

ಕೆಲವರಿಗೆ, ವೇದವಾಕ್ಯಗಳಲ್ಲಿ ಭೂತಕಾಲದ ಪ್ರಯೋಗವನ್ನು ನೋಡಿಯೂ, ಇತಿಹಾಸದ ಭ್ರಮೆಯಾಗುತ್ತದೆ. ಆದರೆ, ಪಾಣಿನಿ ಮುನಿಗಳ **"ಛಂದಸಿ ಲುಂಗ್‌ಲಂಗ್ ಲಿಟಃ"** ಸೂತ್ರದಲ್ಲಿ, ವೈದಿಕ ಭಾಷೆಯ ವಿಶೇಷತೆಯನ್ನು ತೋರಿಸಲಾಗಿದೆ. ವೇದಗಳಲ್ಲಿ ಪರೋಕ್ಷ ಭೂತಕಾಲ, ಅನದ್ಯತನ ಮತ್ತು ಸಾಮಾನ್ಯ ಭೂತಕಾಲಗಳ, ಪ್ರಯೋಗವು ಎಲ್ಲಾ ಕಾಲಗಳಲ್ಲಿಯೂ ವಿಕಲ್ಪವಾಗಿ ಬರುತ್ತದೆ. ಯಾಕೆಂದರೆ, ವೇದಜ್ಞಾನವು ನಿತ್ಯವಾಗಿದೆ. ಇದರಲ್ಲಿ ಅನಿತ್ಯ ಇತಿಹಾಸದ ಉಲ್ಲೇಖವಿಲ್ಲ. ಯಾವನಾದರೂ ಧೀರ, ಎದೆ ಸೆಟೆದು ನಿಂತು, "ವೇದಗಳಲ್ಲಿ ವಿಶಿಷ್ಟ ವ್ಯಕ್ತಿಗಳ, ವಿಶಿಷ್ಟ ಜನಾಂಗಗಳು ವಿಶಿಷ್ಟ ಕಾಲದ, ವಿಶಿಷ್ಟ ದೇಶಗಳ ಚರಿತ್ರೆ ಅಥವಾ ಇತಿಹಾಸವಿದ್ದೇ ಇದೆ" ಎಂದು ಗರ್ಜಿಸಬಲ್ಲನಾದರೆ, ಆ ಹತಭಾಗ್ಯ ಧೀರ 'ಈ ಬಗೆಯ ಇತಿಹಾಸ ದಿನದಿನಕ್ಕೆ, ವಾರ–ವಾರಕ್ಕೆ, ತಿಂಗಳು–ತಿಂಗಳಿಗೆ, ವರ್ಷ–ವರ್ಷಕ್ಕೆ, ಶತಮಾನ–ಶತಮಾನಕ್ಕೆ, ಸಹಸ್ರಮಾನ–ಸಹಸ್ರಮಾನಕ್ಕೆ, ಎಣಿಸುತ್ತಲೇ ಹೋಗಿರಿ, ನಿಮ್ಮ ಮನೋಗತಿಯ ದೂರವನ್ನು ಎಷ್ಟೆಷ್ಟು ಚಾಚುತ್ತೀರೋ, ಕನಿಷ್ಠಪಕ್ಷ ನಿಮ್ಮ ಕಲ್ಪನೆಯ ಕುದುರೆಯನ್ನು ಎಷ್ಟೆಷ್ಟು ಆಳವಾಗಿ ಭವಿಷ್ಯದ ಪಥದಲ್ಲಿ ಓಡಿಸುತ್ತಾ ಹೋಗುತ್ತೀರೋ, ಅಷ್ಟಷ್ಟು ದೂರಕ್ಕೂ ಬೆಳೆಯುತ್ತಲೇ ಹೋಗುತ್ತದೆ. ಅದಷ್ಟನ್ನೂ ನಡೆದುಹೋಗುವಂತೆಲ್ಲಾ ವೇದಗಳು ತಮ್ಮ ಗರ್ಭದಲ್ಲಿ ತುಂಬಿಸಿಕೊಳ್ಳುತ್ತಲೇ ಹೋಗಬೇಕಾದೀತು. ಹಾಗಾದರೆ, 'ವೇದಗಳ ಇಯತ್ತಾ ಇಷ್ಟೇ'—ಎಂಬ ಅಧಿಕಾರವನ್ನೇ ಕಳೆದುಕೊಂಡು, ಪರೋಕ್ಷವಾಗಿ 'ವೇದಗಳು ಅಪೂರ್ಣ' ಎಂದು ಒಪ್ಪಿಕೊಳ್ಳುವ ದುರ್ಭಾಗ್ಯದ ಕಪಿ–ಮುಷ್ಟಿಗೆ ಸಿಕ್ಕಿಕೊಳ್ಳುತ್ತೀರಿ. 'ವೇದಗಳು ತಮ್ಮ ಉದ್ಭಾಸನದ ಕಾಲದ ಮತ್ತು ಅದಕ್ಕಿಂತ ಸ್ವಲ್ಪ ಮುಂಚಿನ ಇತಿಹಾಸವನ್ನು ಮಾತ್ರ ಹೊಂದಿವೆ'—ಎನ್ನುವಿರಾದರೆ, ಅದರ ನಂತರದ ಇತಿಹಾಸದ ಜ್ಞಾನದ ಪ್ರಾಪ್ತಿಯ ಆವರಣಕ್ಕೆ ಮುಳ್ಳು ಬೇಲಿ ಹಾಕಿ, ತದನಂತರದ ನರ–ಸಂತತಿಗೆ ಅಷ್ಟು ಜ್ಞಾನ ದಕ್ಕದಂತೆ ಮಾಡಿ, ವೇದದಾತಾ ದೇವ–ದೇವನಿಗೆ 'ಪಕ್ಷಪಾತಿ' ಎಂಬ ಬಿರುದನ್ನು ಕೊಡುತ್ತೀರಿ. ಮಾತನಾಡಬೇಕು; ಆದರೆ, ತಿಳಿದು ಮಾತನಾಡಬೇಕು.

## ವೇದಗಳ ರಕ್ಷಣೆ

ವೇದಗಳು ಸರ್ವವಿದ್ಯೆಗಳ ಪುಸ್ತಕಗಳೆಂದು ಮೇಲೆ ಹೇಳಿರುವೆವು. ವೇದವಿದ್ಯೆಯಿಂದಲೇ ಪ್ರಪಂಚದ ಕಲ್ಯಾಣವಾಗುವುದೆಂಬುದಕ್ಕೆ ಸಂಶಯವಿಲ್ಲ. ಆದುದರಿಂದ ವೇದಗಳ ಪ್ರಚಾರ ಪ್ರಪಂಚದ ಮೂಲೆಮೂಲೆಗಳಲ್ಲೂ ಆಗಬೇಕು. ಪ್ರಪಂಚದ ಪ್ರತಿಯೊಂದು ಭಾಷೆಯಲ್ಲಿಯೂ ಋಷಿಪ್ರೋಕ್ತ ವೇದವ್ಯಾಖ್ಯಾನಗಳ ಅನುವಾದಗಳಾಗಬೇಕು. ಇಂದು ವಿಶ್ವದಲ್ಲಿರುವ ಅಜ್ಞಾನ, ಅನ್ಯಾಯ ಮತ್ತು ಅಭಾವಗಳಿಂದ ಮಾನವತೆಯನ್ನು ಬಿಡುಗಡೆ ಮಾಡಬೇಕಾದರೆ, ವಿಶುದ್ಧ, ಪಕ್ಷಪಾತರಹಿತ, ಬುದ್ಧಿಸಂಗತ, ಸರ್ವಕಾಲೀನ, ಸರ್ವದೇಶೀಯ ವೇದವಿಚಾರಗಳ ಪ್ರಚಾರ ಒಂದೇ ಉತ್ತಮ ಉಪಾಯ. ವೈಜ್ಞಾನಿಕ ಅನುಸಂಧಾನಗಳಿಂದ, ಹಾಗು ಪ್ರತ್ಯಕ್ಷಾದಿ ಪ್ರಮಾಣಗಳಿಂದ

ವೇದಜ್ಞಾನವು ಸತ್ಯ, ಹಾಗೂ ಕಲ್ಯಾಣಕಾರಿ ಎಂದು ಸಿದ್ಧವಾಗುತ್ತಿದೆ. ಆದುದರಿಂದ ವೇದಗಳ ಉಪೇಕ್ಷೆ ಮಾನವತೆಗೆ ಹಾನಿಯನ್ನುಂಟುಮಾಡುವುದೆಂಬುದರಲ್ಲಿ ಸಂಶಯ ವಿಲ್ಲ. ಈಗಲೂ ಪ್ರಪಂಚದಲ್ಲಿ ಹರಡಿರುವ ಅಶಾಂತಿಗೆ ಅಥವಾ ದುಃಖಕ್ಕೆ ವೇದಗಳ ಪ್ರಚಾರದ ಅಭಾವವೇ ಕಾರಣ.

ಪ್ರಾಚೀನ ಕಾಲದಲ್ಲಿ ಹನ್ನೆರಡು ವರ್ಷಗಳಲ್ಲಿ ವಿದ್ಯಾರ್ಥಿಗಳು ಪೂರ್ಣ ವಿದ್ವಾಂಸ ರಾಗುತ್ತಿದ್ದರು. ಆರು ವೇದಾಂಗಗಳು, ಆರು ಉಪಾಂಗಗಳು, ತಥಾ ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳೊಂದಿಗೆ, ಶಾಖಾಸಹಿತ ನಾಲ್ಕು ವೇದಗಳು ಪೂರ್ಣ ವೇದ ವಿದ್ಯೆಯ ಗ್ರಂಥಗಳೆನ್ನಿಸಿಕೊಂಡಿದ್ದುವು. ಇವುಗಳಲ್ಲಿ ಪ್ರವೀಣರಾಗಿ, ಮುಂದೆ ವಿದ್ಯಾರ್ಥಿ ಗಳು ವಿಶೇಷವಾಗಿ ಉಪವೇದಗಳನ್ನು ಕಲಿತು ಮೂರು ನಾಲ್ಕು ವರ್ಷಗಳಲ್ಲಿ ವಿಶೇಷಜ್ಞರಾಗುತ್ತಿದ್ದರು. ಆದರೆ, ಈಗಿನ ಶಿಕ್ಷಣ ಪದ್ಧತಿಯಲ್ಲಿ ಇಪ್ಪತ್ತೈದು ವರ್ಷಗಳ ತನಕ ಅತ್ಯಂತ ಪ್ರಯತ್ನಪಟ್ಟು ಕಲಿತರೂ. ಯಾವ ವಿದ್ಯೆಯೂ ಪೂರ್ಣವಾಗಿ ಬರುವುದಿಲ್ಲ. ಇಂದು ನಗರನಗರಗಳಲ್ಲಿ ಡಬಲ್ ಗ್ರೇಜುವೇಟ್ಸ್, ಪಿ.ಎಚ್‌ಡೀಸ್, ಇದರ ನಮೂನೆಗಳು ಎಷ್ಟೋ ಮಂದಿ ಸಿಗುತ್ತಾರೆ. ಅವರನ್ನೆಲ್ಲಾ ನೋಡಿದರೆ ಸಾಕು. ಅವರು ಕಲಿತ ವಿದ್ಯೆ ನಿರರ್ಥಕವೆಂದು ಹೇಳಲಿಕ್ಕೆ ಬೇರೆ ಪ್ರಮಾಣಗಳು ಬೇಡ. ೧೯೬೪ರನೇ ಇಸವಿಯಲ್ಲಿಯೇ ಭಾರತ ಸರಕಾರದ ಶಿಕ್ಷಾ ಆಯೋಗವು, ಇಂದು ದೇಶದಲ್ಲಿ ಪ್ರಚಾರದಲ್ಲಿರುವ ಶಿಕ್ಷಣ ಪದ್ಧತಿಯು ಬಹಳ ಅನುಪಯುಕ್ತವೆಂದು ತನ್ನ ವರದಿಯಲ್ಲಿ ಹೇಳಿದೆ. ಈ ಶಿಕ್ಷಾಪದ್ಧತಿಯನ್ನು ಸುಧಾರಿಸಲು, ಅಮೇರಿಕಾ, ಲಂಡನ್ ಅಥವಾ ರಷ್ಯಾದಿಂದ ನಾವೇನೂ ಕಲಿತುಕೊಳ್ಳಬೇಕಾಗಿಲ್ಲ. ಪ್ರಾಚೀನ ಆರ್ಷ ಪ್ರಣಾಲಿಯನ್ನೇ ದುರುಸ್ತಿ ಮಾಡಿ ಪ್ರಗತಿಯ ಮಾರ್ಗದಲ್ಲಿ ಮುಂದಿಟ್ಟರಾಯಿತು. ಇದಕ್ಕೆ ಧೈರ್ಯ ಬೇಕು, ಸಾಹಸ ಬೇಕು, ತಾಳ್ಮೆ ಬೇಕು. ಹಾಗಾದರೆ, ಮಹರ್ಷಿ ಮನುವಿನ ಈ ವಾಕ್ಯವು ಪುನಃ ಚರಿತಾರ್ಥವಾಗುವುದೆಂಬುದಕ್ಕೆ ಸಂಶಯವಿಲ್ಲ—

**ಏತದ್ದೇಶ ಪ್ರಸೂತಸ್ಯ ಸಕಾಶಾದಗ್ರಜನ್ಮನಃ ।**
**ಸ್ವಂ ಸ್ವಂ ಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾಃ ॥**

"ಈ ದೇಶದಲ್ಲಿ ಜನಿಸಿದ ಬ್ರಹ್ಮವಿದರಿಂದ, ಎಂದರೆ ವಿದ್ವಾಂಸರಿಂದ ಭೂಮಂಡಲದ ಮಾನವರೆಲ್ಲರೂ ತಮತಮಗೆ ಯೋಗ್ಯವಾದ ವಿದ್ಯಾಚಾರಿತ್ರ್ಯಗಳ ಶಿಕ್ಷಣವನ್ನು ಪಡೆಯಬೇಕು ಮತ್ತು ವಿದ್ಯಾಭ್ಯಾಸವನ್ನೂ ಮಾಡಿಕೊಳ್ಳಬೇಕು." ಎಂಬುದು ಫಲಿಸಬೇಕು.

ಈ ದೃಷ್ಟಿಯಿಂದ, ಈ '**ಋಗ್ವೇದ ದರ್ಶನ**'ವು ಕನ್ನಡ ಓದುಗರಿಗೆ ತುಂಬಾ ಪ್ರೇರಣಾದಾಯಕವಾಗಬಹುದೆಂದು ನಮ್ಮ ನಂಬಿಕೆ. ಆದರೆ ಓದುಗರ ಸಂಖ್ಯೆಯು ಇತರ ವಿಷಯಗಳಲ್ಲಿ ಬೆಳೆಯುತ್ತಾ ಬಂದರೂ, ಧಾರ್ಮಿಕವಾಗಿ ಅದರಲ್ಲಿಯೂ ವೇದ ಗಳ ಬಗ್ಗೆ ನಿರಾಸಕ್ತಿ ತಾಳುವುದು ಶೋಚನೀಯ. ಯಾರಿಗೆ ತಮ್ಮ ಸಂಕಷ್ಟಗಳು ಪರಿಹಾರವಾಗಬೇಕೆಂಬ ಇಚ್ಛೆಯಿದೆಯೋ, ಯಾರಿಗೆ ಕೇವಲ ಸುಖಮಾತ್ರವಲ್ಲ, ಆನಂದವೂ ಲಭಿಸಬೇಕೆಂಬ ಅಪೇಕ್ಷೆ ಇದೆಯೋ ಅವರೆಲ್ಲರೂ ವೇದಾಧ್ಯಯನ ಮಾಡಲೇ ಬೇಕು. ಸತ್ಯ ತಿಳಿಯಲೇ ಬೇಕು. ಆಗಲೇ ಪರಮಾತ್ಮನಿಗೆ ನಾವು ಹತ್ತಿರದವರಾಗುವೆವು.

## ಉಪಕಾರಸ್ಮರಣೆ

ಸತ್ಯವಾದುದು ಸತ್ಯವೇ, ಅಸತ್ಯವಾದುದು ಅಸತ್ಯವೇ. ಯಾರ ಭಾಷ್ಯವೇನೇ ಇರಲಿ, ಅವರು ಭಾರತೀಯರಿರಬಹುದು; ಪಾಶ್ಚಿಮಾತ್ಯರಿರಬಹುದು. ಬೇರೆ ಬೇರೆ ವಿದ್ವಾಂಸರು ವೇದಗಳ ಬಗ್ಗೆ ಇಷ್ಟೊಂದು ಸಾಹಸ ತೋರಬೇಕಾದರೆ, ಪರಿಶ್ರಮಪಡ ಬೇಕಾದರೆ, ಆ ವೇದಗಳ ಮಹತ್ವವೆಷ್ಟಿರಬೇಡ? ಕೇವಲ ಕುರುಬರ ಹಾಡಿಗೆ ಯಾವ ಪಾಶ್ಚಿಮಾತ್ಯ ವಿದ್ವಾಂಸನೂ ಇಷ್ಟೊಂದು ಪರಿಶ್ರಮ ಮಾಡಬೇಕಾಗಿರಲಿಲ್ಲ. ಅವರ ಉದ್ದೇಶವೇನೇ ಇರಲಿ, ವೇದಗಳ ಭಾಷ್ಯ ಬರೆಯಲು ಅದರ ಮಹತ್ವ ತಿಳಿದೇ ಅಷ್ಟು ಪರಿಶ್ರಮ ಪಟ್ಟಿದ್ದಾರೆಂದು ತಿಳಿದುಬರುತ್ತದೆ. ಅವರು ಮಹಾನ್ ವಿದ್ವಾಂಸರಲ್ಲ ವಾದರೂ ತಮ್ಮ ದೃಷ್ಟಿಪಥಕ್ಕೆ ತೋರಿದ, ತಮ್ಮ ಸೀಮಿತ ಜ್ಞಾನಕ್ಕೆ ಗೋಚರವಾದ ವಿಷಯಗಳನ್ನು ಸ್ಪಷ್ಟವಾಗಿ ಹೊರಗೆಡಹಿದ್ದಾರೆಂಬುದು ಸತ್ಯ. ಬೈಬಲ್ ಮತ್ತು ಕುರಾನ್ ಬಗ್ಗೆ ಯಾವ ಭಾರತೀಯನಾದರೂ ಅಷ್ಟೊಂದು ಪರಿಶ್ರಮ ಮಾಡಿರುವ ನೇನು? ಇಲ್ಲ. ಈ ಬಗ್ಗೆ ಪಾಶ್ಚಿಮಾತ್ಯ ವಿದ್ವಾಂಸರನ್ನು ಅಭಿನಂದಿಸಲೇ ಬೇಕು. ಅವರು ಅದೆಷ್ಟು ಶ್ರಮಪಟ್ಟಿದ್ದಾರೆಂಬುದನ್ನು ಭಾರತೀಯರಾದ ನಾವು ಸ್ಮರಿಸಬೇಕಾದ ವಿಷಯ. ಇನ್ನೂ ಅವರ ಶ್ರಮ, ಉತ್ಸಾಹ ಕುಂದಿಲ್ಲ. ಪ್ರಯತ್ನಿಸುತ್ತಲೇ ಇದ್ದಾರೆ. ಆಗಾಗ್ಗೆ ನಮ್ಮ ಸಂಸ್ಕೃತಿಯ ಬಗ್ಗೆ, ಧರ್ಮಗ್ರಂಥಗಳ ಬಗ್ಗೆ ಪರಿಚಯ ಮಾಡಿಕೊಡು ತ್ತಿದ್ದಾರೆ. ಅದಕ್ಕಾಗಿ ಅವರನ್ನು ಈ ಸಂದರ್ಭದಲ್ಲಿ ಉಪಕಾರ ಸ್ಮರಣೆ ಮಾಡುತ್ತೇವೆ. ಅದೇ ರೀತಿ ನಮ್ಮ ಅನೇಕ ಭಾರತೀಯ ವಿದ್ವಾಂಸರೂ ಸದಾ ಸ್ಮರಣೆಗೆ ಯೋಗ್ಯ ರಾಗಿಯೇ ಇದಾರೆ. ಬೇರೆ ಬೇರೆ ದೃಷ್ಟಿಕೋನದಿಂದ ವೇದಗಳ ಅಧ್ಯಯನ ಮಾಡಿದ್ದಾರೆ. ಅದರಿಂದಾಗಿಯೇ ಸಂಶೋಧನೆ ನಡೆಸಲು ಪ್ರಯತ್ನಗಳು ನಡೆದವು. ಅದಕ್ಕಾಗಿ ಪ್ರಯತ್ನಪಟ್ಟ ಭಾರತೀಯ ಆಚಾರ್ಯರಾದ ಎಲ್ಲಾ ವೇದ ಭಾಷ್ಯಕಾರರು ಚಿರಸ್ಮರಣೀಯರಾಗಿದ್ದಾರೆ. ಇನ್ನು ಮುಂದೆಯೂ ಹೆಚ್ಚು ಹೆಚ್ಚು ವಿದ್ವಾಂಸರು ವೇದ ಗಳ ಬಗ್ಗೆ ಶ್ರಮ ಪಡುವುದು ಅಗತ್ಯ. ಸಾಗರದ ಅಡಿಯಲ್ಲಿರುವ ರತ್ನಗಳ ಸಂಶೋಧ ನೆಗೆ ಪ್ರಯತ್ನಪಟ್ಟಂತೆ, ಆರ್ಯಭಟ, ಭಾಸ್ಕರ, ರೋಹಿಣಿ—ಮುಂತಾದ ಉಪಗ್ರಹ ಗಳ ಉಡ್ಡಯನಕ್ಕೆ ಪ್ರಯತ್ನ ಮಾಡಿದಂತೆ, ವೇದಗಳ ಜ್ಞಾನವನ್ನು ಆಳವಾಗಿ ಅಧ್ಯಯನ ಮಾಡಿ, ಅದರಿಂದ ಹೆಚ್ಚಿನ ಉಪಯೋಗ ಪಡೆದು. ಉಳಿದವರಿಗೂ ಅದರ ಸಂಶೋಧನೆಗೆ ಮಾರ್ಗದರ್ಶನ ಮಾಡಿದರೆ, ಮುಂದಿನ ಜನಾಂಗಕ್ಕೊಂದು ದಾರಿ ತೋರಿಸಿದಂತಾಗುತ್ತದೆ. ಮುಂದಿನ ಪೀಳಿಗೆ ಅದರ ಬಗ್ಗೆ ಪರಿಶ್ರಮ ಪಟ್ಟರೆ, ನಿತ್ಯ ವಾದ ವೇದಗಳ ನಿರ್ಮಲ ಜ್ಞಾನದ ಅರಿವು ಸರ್ವರಿಗೂ ದೊರಕುವಂತೆ ಮಾಡಿದರೆ, ಕೇವಲ ಭಾರತಕ್ಕೆ ಮಾತ್ರವಲ್ಲ, ಇಡೀ ಜಗತ್ತಿಗೇ ಉಪಕಾರ ಮಾಡಿದಂತಾಗುವುದು. ಈ ಭಾವನೆ, ಈ ಸತ್ಕರ್ಮ ಮಾಡುವ ಜ್ಞಾನದಾಹ ಮುಂದಿನ ಪೀಳಿಗೆಗೆ ಪರಮಾತ್ಮನು ಅನುಗ್ರಹಿಸಲಿ—ಎಂಬುದಾಗಿ ಪರಮಾತ್ಮನಲ್ಲಿ ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತಾ ಎಲ್ಲಾ ವೇದ ಭಾಷ್ಯಕಾರರನ್ನು ಇನ್ನೊಮ್ಮೆ ಸ್ಮರಿಸುತ್ತಾ ಈ ಭೂಮಿಕೆಯನ್ನು ಇತಿ ಗೊಳಿಸುವೆವು. ಓಂ ಶಮ್ ॥

**— ಪಂ॥ ಸುಧಾಕರ ಚತುರ್ವೇದೀ, ಬೆಂಗಳೂರು.**

**— ಪ್ರೊ॥ ಜ್ಯೇಷ್ಠವರ್ಮನ್, ಮುಂಬಯಿ.**

# ಭಾಷ್ಯಕಾರರ ನಾಲ್ಕು ಮಾತುಗಳು

ನಾನು ಹದಿನೈದು ವರ್ಷಗಳ ಮುನ್ನವೇ ನಾಲ್ಕು ವೇದಸಂಹಿತೆಗಳ ಮೇಲೆ ಕನ್ನಡ ಭಾಷೆಯಲ್ಲಿ ಪರಮ ವೈಜ್ಞಾನಿಕವೂ, ಪೂರ್ಣತಃ ಬುದ್ಧಿಪೂರ್ವಕವೂ, ಆರ್ಷ ಪರಂಪರಾನುಕೂಲವೂ ಆದ ಭಾಷ್ಯವನ್ನು ರಚಿಸಬೇಕೆಂದು ಸಂಕಲ್ಪ ಮಾಡಿದೆನು. ಆದರೆ—ಗೃಹಜೀವನದ ಹಲವಾರು ಕಹಿ ಘಟನೆಗಳ ಪರಿಣಾಮವಾಗಿಯೂ, ಆಟೋ ರಿಕ್ಷಾದ ದುರ್ಘಟನೆಗೆ ಸಿಕ್ಕಿ, ಎಡ ತೊಡೆಯ ಹಾಗೂ ಸೊಂಟದ ಮೂಳೆಗಳು ನುಚ್ಚುನೂರಾಗಿ ನಿರಂತರ ನಾಲ್ಕು ವರ್ಷ ಮಂಚದಲ್ಲಿಯೇ ಹಗಲಿರುಳೂ ಮಲಗಿರ ಬೇಕಾದ ದುರವಸ್ಥೆಯಿಂದಲೂ, ಸಾಲದೆಂದು ಕೇವಲ ದ್ರವಭೋಜನದ ಆಧಾರ ದಿಂದಲೇ ಉಸಿರಾಡಿಕೊಂಡಿರುವ ಪರಿಸ್ಥಿತಿಯನ್ನು ತಂದ ಉದರಶೂಲದ ಭೀಕರ ವೇದನೆಯಿಂದಲೂ ಈ ಸಂಕಲ್ಪಕ್ಕೆ ಕ್ರಿಯಾತ್ಮಕ ರೂಪ ಕೊಡಲು ಸಾಧ್ಯವೇ ಆಗಲಿಲ್ಲ. ಇಷ್ಟೆಲ್ಲಾ ಎಡರು–ತೊಡರುಗಳ ನಡುವೆಯೂ ಋಗ್ವೇದದ ಮುಕ್ಕಾಲು ಪಾಲಿನಷ್ಟರ ಭಾಷ್ಯ, ಮುದ್ರಣಾಲಯಕ್ಕೆ ಹೋಗಬೇಕಾದ ಆ ಸಾಹಿತ್ಯ ನೀರೊಲೆಗೆ ಹೊರಟು ಭಸ್ಮೀಭೂತವಾದ ಕಾರಣ, ಎಂತಹ ಧೀರನನ್ನಾದರೂ ಹತಾಶನನ್ನಾಗಿ ಮಾಡುವ ಸ್ಥಿತಿಯನ್ನು ಎದುರಿಸಬೇಕಾಯಿತು.

ಆದರೆ—ನನ್ನ ಜೀವನ ಅನಾದಿ ನಿಧನಾ ನಿತ್ಯಾ ವೇದವಾಣಿಯ ಪ್ರಸಾರಕ್ಕಾಗಿ ಗಿಯೇ ಮುಡುಪಾಗಿಟ್ಟುದು. ಪ್ರಾತಃಸ್ಮರಣೀಯ ಪೂಜ್ಯಪಾದ, ವೈದಿಕ ಧರ್ಮಾರ್ಥ ಸಮರ್ಪಿತಾತ್ಮಾ ಶ್ರೀ॥ ಸ್ವಾಮೀ ಶ್ರದ್ಧಾನಂದಜೀ, ೧೯೨೪ರಲ್ಲಿ ನನ್ನ ನೆತ್ತಿಯ ಮೇಲೆ ಕೈಯಿಟ್ಟು—"ಕರ್ನಾಟಕೀ ! ಬಿ.ಎ., ಎಂ.ಎ.—ಆದರಾಗು; ಬಿಟ್ಟರೆ ಬಿಡು; ಮಹಾತ್ಮಾ ಗಾಂಧೀಯವರ ನೇತೃತ್ವದಲ್ಲಿ ನಡೆಯುತ್ತಾ ಬಂದಿರುವ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾತ್ರ ವಹಿಸು; ಅಥವಾ ಬಿಡು. ಆದರೆ, ಚತುರ್ವೇದ ಪಾರಂಗತ ನಾಗಿ, ಆ ಆದಿ ಭಗವದ್ವಾಣಿಯ ಪ್ರಚಾರ ಮಾಡುವೆನೆಂದು ನನಗೆ ಈ ಕ್ಷಣವೇ ಮಾತು ಕೊಡು"—ಎಂದರು. "ಆದರಣೀಯ ಸ್ವಾಮೀಜಿ ! ಇದೋ ತಮ್ಮ ಪದರಜ ದಾಣೆ. ತಮ್ಮಾಜ್ಞೆಯನ್ನು ಪರಿಪಾಲಿಸಲು ಪ್ರಾಣವನ್ನಾಧರೂ ಪಣವಾಗಿ ಒಡ್ಡಿ ದುಡಿಯುವೆನು. ಯಥಾ ಶಕ್ತಿ ಕಾರ್ಯರಂಗಕ್ಕೆ ಧುಮುಕುವೆ. ಪರಮಪೂಜ್ಯ ಕ್ಷಣ–ಕ್ಷಣ ಸ್ಮರಣೀಯ ಮಹರ್ಷಿ ದಯಾನಂದರ—"**ಕಾರ್ಯಂ ವಾ ಸಾಧಯೇಯಂ; ಶರೀರಂ ವಾ ಪಾತಯೇಯಂ**"—"ಕಾರ್ಯವನ್ನಾದರೂ ಸಾಧಿಸುವೆ; ಅದಕ್ಕಾಗಿ ಶರೀರವನ್ನಾದರೂ ಈಡಾಡುವೆ"—ಎಂಬ ನುಡಿಯನ್ನು ಹೃದಯಾಂತರಾಳದಿಂದ ಪುನ ರುಚ್ಚರಿಸುತ್ತೇನೆ"—ಎನ್ನುತ್ತಾ ಆ ಮಹಾನ್ ಸಂನ್ಯಾಸಿಯ ಪದರಜವನ್ನು ನೆತ್ತಿಗೇರಿಸಿ ಕೊಂಡೆ. ಆ ಮಹಾನ್ ಆತ್ಮ ಗದ್ಗದ ಕಂಠನಾಗಿ "ಕರ್ನಾಟಕೀ ! ಏನಿದೀ ನಿನ್ನ ಕೃಶಕಾಯ? ಕುಮಾರಭರತ–ವೀರ ಅಭಿಮನ್ಯುಗಳಿಗೆ ಜನ್ಮವಿತ್ತ ಈ ಪುಣ್ಯಭೂಮಿ ಯಲ್ಲಿ ನಿನ್ನಂತಹ ಕೃಶಕಾಯರಿಗೆ ಸ್ಥಾನವೇ ಇಲ್ಲ. ದೌರ್ಬಲ್ಯ ಒಂದು ಮಹಾನ್ ಪಾಪವೆಂದರಿ"—ಎನ್ನುತ್ತಾ ನನ್ನ ಅಸ್ಥಿಪಂಜರ ಸದೃಶ ದೇಹವನ್ನು ನೋಡುತ್ತಾ ನುಡಿದರು.

ಹುಟ್ಟುವಾಗಲೇ ಬೆನ್ನುಹತ್ತಿ ಬಂದ ಪೀಡೆ—ಈ ಕೃಶಕಾಯತ್ವ ಮತ್ತು ರೋಗ ಪರಂಪರೆ. ಆ ಮಹಾನ್ ಆತ್ಮನಾಗಲಿ, ನಾನೇ ಆಗಲಿ—ಈ ನ್ಯೂನತೆಯನ್ನು ತುಂಬಿಸಲು ಸಾಧ್ಯವಿರಲಿಲ್ಲ. ಇಂದಿಗೂ ಸ್ಥಿತಿ ಅದೇ. ಆದರೂ ಸಂಕಲ್ಪ ಮಾಡಿದ್ದಾಗಿತ್ತು. ಎಲ್ಲ ಕುಂದುಕೊರತೆಗಳ ನಡುವೆಯೇ ಮಹಾನ್ ವೇದಜ್ಞ ವೇದಮೂರ್ತಿ ಬ್ರಹ್ಮಶ್ರೀ॥ ಪಂಡಿತ ಪ್ರವರ ನರದೇವಶಾಸ್ತ್ರಿ ವೇದವಾಚಸ್ಪತಿಗಳ ಚರಣ ಸನ್ನಿಧಿಯಲ್ಲಿ ನಿರಂತರ ಆರು ವರ್ಷ ಕುಳಿತು, ಸಾಧಾರಣ ಒಂದು ವೇದಕ್ಕೆಯೇ ಹನ್ನೆರಡು ವರ್ಷ ಬೇಕೆಂದು ಸ್ಮೃತಿಕಾರರ ಮತಕ್ಕೆ ಹೋಲಿಸಿದಾಗ, ಆರು ವರ್ಷಗಳಲ್ಲಿಯೇ ವೇದಜ್ಞನಾಗುವ ಭಾಗ್ಯಕ್ಕೆ ನನ್ನ ಪೂರ್ವಕೃತ ಸತ್ಕರ್ಮ ಹಾಗೂ ಭಗವದನುಗ್ರಹವೇ ಕಾರಣವೆನ್ನಬೇಕಷ್ಟೇ.

ಹೇಗೂ ಇರಲಿ. ಕಲಿತಷ್ಟೂ ಕಲಿಯಬೇಕಾದುದು ಅದರ ನೂರ್ಮಡಿ–ಸಾವಿರ ಮಡಿ ಉಳಿದೇ ಇರುತ್ತದೆಂಬ ಮಾತನ್ನು ಯಾವ ವಿದ್ವಾಂಸನೂ ಮರೆಯಲಾರ. ನನ್ನ ವಿದ್ವತ್ತ್ವದ ಬಗೆಗೆ ನಾನೇ ಪ್ರಮಾಣಪತ್ರ ಕೊಟ್ಟುಕೊಳ್ಳುವ ಉನ್ಮಾದ ನನಗಿಲ್ಲ. ಆದರೂ ಆಚಾರ್ಯ ಋಣಪರಿಹಾರ ಅನಿವಾರ್ಯ. ಆದಕಾರಣ—ಸಂಕಲ್ಪಕ್ಕೆ ಕ್ರಿಯಾರೂಪ ಕೊಡಲೇ ಬೇಕೆಂಬ ಹಠದಿಂದ, ಮರಳಿ ಯತ್ನಿಸಿ, ಋಗ್ವೇದದ ಪ್ರಥಮ ಮಂಡಲದ ಐದು ಸೂಕ್ತಗಳ ಭಾಷ್ಯವನ್ನೇನೋ ಪೂರೈಸಿದೆ. ಮತ್ತೆ, "ಇಗೋ ಬಂದೆ, ತೆರೆ ದ್ವಾರವನ್ನು" – ಎನ್ನುತ್ತಾ ಭೀಕರ ವ್ಯಾಧಿ ಅಡಸಿತು. ಕೈಗಳ ಬರಹದ ಬಲವೇ ಇಲ್ಲವಾಯಿತು. ಬಾರಿಬಾರಿ ಭರ್ತೃಹರಿಯ ಈ ಶ್ಲೋಕ ನಾಲಗೆಯ ಮೇಲೆ ಸುಳಿದಾಡಹತ್ತಿತು:—

**ಖಲ್ವಾಟೋ ದಿವಸೇಶ್ವರಸ್ಯ ಕಿರಣೈಃ ಸಂತಾಪಿತೋ ಮಸ್ತಕೇ**
**ವಾಂಛನ್ ದೇಶಮನಾತಪಂ ವಿಧಿವಶಾತ್ ತಾಲಸ್ಯ ಮೂಲಂ ಗತಃ ।**
**ತತ್ರಾಪ್ಯಸ್ಯ ಮಹಾಫಲೇನ ಪತತಾ ಭಗ್ನಂ ಸಶಬ್ದಂ ಶಿರಃ**
**ಪ್ರಾಯೋಗಚ್ಛತಿ ಯತ್ರ ಭಾಗ್ಯರಹಿತಸ್ತತ್ರೈವ ಯಾಂತ್ಯಾಪದಃ ॥**

"ಸೂರ್ಯನ ಉಗ್ರ ಕಿರಣಗಳಿಂದ ತಪ್ತವಾದ ತಲೆಯಿಂದ ನೊಂದ ಬೊಕ್ಕತಲೆಯವನೊಬ್ಬ, ಬಿಸಿಲಿಲ್ಲದ ಸ್ಥಾನವನ್ನು ಬಯಸುತ್ತಾ, ವಿಧಿವಶದಿಂದ ಒಂದು ತಾಡ ವೃಕ್ಷದಡಿಗೆ ಹೋದನು. ಅಲ್ಲಿಯೂ ಕೂಡ ಕೆಳಕ್ಕೆ ಬೀಳುತ್ತಿದ್ದ ದೊಡ್ಡ ಫಲದಿಂದ, ಅವನ ಬುರುಡೆ 'ಫಟ್' ಎಂದು ಶಬ್ದ ಮಾಡುತ್ತಾ ಒಡೆಯಲ್ಪಟ್ಟಿತು. ಪ್ರಾಯಶಃ ಭಾಗ್ಯರಹಿತನು ಎಲ್ಲಿ ಹೋಗುತ್ತಾನೋ, ಅಲ್ಲಿಗೇ ಆಪತ್ತುಗಳೂ ಹೋಗುತ್ತವೆ."

ನಾನು ನಿರ್ಭಾಗ್ಯನೇ? ನಿರ್ಭಾಗ್ಯನಾಗಿದ್ದಲ್ಲಿ, ದುರೂಹವೆಂದು ಭಾವಿಸಲ್ಪಡುವ ವೇದಗಳು ಇಷ್ಟು ಸುಲಭವಾಗಿ ಅರ್ಥವಾಗುತ್ತಿದ್ದವೇ? ಈ ಪ್ರಶ್ನೆಗೆ ಉತ್ತರ ನನ್ನ ಬಳಿಯಿಲ್ಲ. ಇಷ್ಟು ಮಾತ್ರ ಸತ್ಯ. ನಾನು ಒಂದು ವಿಷಯದಲ್ಲಿ ದುರ್ಯೋಧನನೇ ಆದರೂ, ಸುಯೋಧನನೇ. "**ಹತೇ ಭೀಷ್ಮೇ ಹತೇ ದ್ರೋಣೇ ಹತೇ ಕರ್ಣೇ ಮಹಾರಥೇ । ಆಶಾ ಬಲವತೀ ರಾಜನ್ ಶಲ್ಯೋ ಜೇಷ್ಯತಿ ಪಾಂಡವಾನ್ ॥**—"ಭೀಷ್ಮನು ಹತನಾದರೇನು? ದ್ರೋಣನು ಕೊನೆಯುಸಿರೆಳೆದರೇನು? ಮಹಾರಥನಾದ ಕರ್ಣ ಕಳೇವರ ಕಳಚಿ ಹಾಕಿದರೇನು? ಮಹಾರಾಜ! ನನ್ನ ಆಶೆ ಮಹಾ ಬಲಶಾಲಿನಿ. ಶಲ್ಯನು ಪಾಂಡವರನ್ನು ಜಯಿಸುವನು"—ಎಂದೇ

ಉದ್ಗರಿಸಿದ ದುರ್ಯೋಧನ ತನ್ನ ತಂದೆಯ ಮುಂದೆ. ನನ್ನ ಕತೆಯಾದರೂ ಅದೇ. ಇಂದಲ್ಲ; ನಾಳೆ. ಈ ಜನ್ಮದಲ್ಲಿ ಅಲ್ಲವಾದರೆ, ಮುಂದಿನ ಜನ್ಮದಲ್ಲಿ. ಎಂದಾದರೂ ಸರಿಯೇ, ಮಾಡಿಯೇ ತೀರೇನು. ತಮಗೆ ಬುದ್ಧಿ ಹೇಳ ಬಂದ ವೃದ್ಧ ಸಂನ್ಯಾಸಿಯೊಬ್ಬರ ಬಳಿ ಮಾತನಾಡುತ್ತಾ—"ಓ ಪರಿವ್ರಾಟ್! ನನಗೀಗ ಮೋಕ್ಷದ ಆಸೆಯೇ ಇಲ್ಲ. ವೇದಪ್ರಚಾರಕ್ಕಾಗಿ, ವೇದ ಭಾಷ್ಯಕ್ಕಾಗಿ, ಒಂದಲ್ಲ; ಹತ್ತಲ್ಲ; ನೂರು ಜನ್ಮಗಳನ್ನೆತ್ತಿಯಾದರೂ ಬಂದೇನು. ಈ ಪ್ರಭುಸಂತತಿಗೆ, ಮಾನವ ಸಮಾಜಕ್ಕೆ ವೇದಬೋಧನದಿಂದ ಮಾನವತ್ವ ತುಂಬಿಕೊಟ್ಟು, ಅವರದುಃಖ ನಿವಾರಿಸುತ್ತಾ—ನಿವಾರಿಸುತ್ತಾ, ನಾನು ಮುಕ್ತನಾಗಿಯೇ ಹೋಗುತ್ತೇನೆ"—ಎಂದ ದಯಾನಂದ ದಂಡೀಧರಾಧೀಶನ ಪವಿತ್ರ ನಾಮವನ್ನುಚ್ಚರಿಸುವ ನಾಲಗೆಯನ್ನುಳ್ಳ ನಾನು ಹತಾಶನಾಗುವ ಪ್ರಶ್ನೆಯೇ ಇಲ್ಲ.

ಈಗ ತತ್‍ಕ್ಷಣಕ್ಕೆ. ವೇದಗಳ ಬಗೆಗೆ ವಿಸ್ತೃತವಾದ ಭೂಮಿಕೆಗಳನ್ನು ರಚಿಸಿ, ನನ್ನ ಹೆಗಲಮೇಲಣ ಗುರುಭಾರವನ್ನಿಳಿಸಿದ ನನ್ನ ಪ್ರಿಯ ಧರ್ಮಬಂಧು ಶ್ರೀ ಜ್ಯೇಷ್ಠ ವರ್ಮನ್‌ರವರಿಗೂ, ಎಲ್ಲ ಕಷ್ಟ—ನಷ್ಟಗಳನ್ನೂ ನಗೆಮೊಗದಿಂದಲೇ ಸಹಿಸುತ್ತಾ, ನನ್ನ ಕೃತಿಗಳನ್ನೆಲ್ಲಾ ಬೆಳಕಿಗೆ ತರುತ್ತಿರುವ ಪ್ರಿಯ ಧರ್ಮಬಂಧು ಶ್ರೀ ಸಂಜೀವ ಕಾಮತ್ ರವರಿಗೂ, "ಪ್ರಕಾಶನ ಸಮಿತಿ"ಯ ಸಮಸ್ತ ಕಾರ್ಯಕರ್ತರಿಗೂ ನನ್ನ ಹೃದಯದ ಅಂತರತಮದ ಕೃತಜ್ಞತೆಯನ್ನು ಅಭಿವ್ಯಕ್ತಗೊಳಿಸಲು ಸಾಕಾದಷ್ಟು ಬಲಿಷ್ಟವಾದ ಶಬ್ದಸಂಪತ್ತೇ ನನ್ನ ಬಳಿಯಿಲ್ಲವಾದುದರಿಂದ, ಕೇವಲ ನತಮಸ್ತಕನಾಗಿ, ಸಮ್ಮಿಲಿತಕರನಾಗಿ "**ಉಪಕೃತೋಽಸ್ಮಿ ಭಗವಂತೋ ಭವತಾಂ ಕೃತಜ್ಞೋಽಸ್ಮಿ**"—ಎಂದು ವಿರಮಿಸುತ್ತೇನೆ.

ಬೆಂಗಳೂರು,
೨೦—೭—೮೦.

**—ಸುಧಾಕರ ಚತುರ್ವೇದೀ**

**ವಿಶೇಷ ಸೂಚನೆ**

ಅನೇಕ ಮತಸಾಂಪ್ರದಾಯಗಳ ಪಂಡಿತರು ಪುರಾಣಗಳ ಹಾಗೂ ಭಾರತ, ಭಾಗವತಗಳ ಶ್ಲೋಕಗಳನ್ನು ಉದಾಹರಿಸಿ ವೇದದಲ್ಲಿ ಹೀಗೆ ಹೇಳಲಾಗಿದೆ—ಎಂಬುದಾಗಿ ಜನತೆಯನ್ನು ವಂಚಿಸುತ್ತಿದ್ದಾರೆ. ಅದಕ್ಕಾಗಿಯೇ ಪ್ರತ್ಯೇಕವಾದ ಋಗ್ವೇದದ ಎಲ್ಲಾ ಮಂತ್ರಗಳ ವರ್ಣಾನುಕ್ರಮ ಸೂಚಿಯ ಮಂಡಲ—ಸೂಕ್ತ—ಮಂತ್ರ ಸಂಖ್ಯೆಗಳ ಪೂರ್ಣ ವಿವರಣೆಯ ಬಗ್ಗೆ ೩೦೦ ಪುಟಗಳಷ್ಟು ವಿಸ್ತೃತವಾದ ಪುಸ್ತಕವನ್ನು ಪ್ರತ್ಯೇಕವಾಗಿ ಮುದ್ರಿಸಲಾಗಿದೆ. ಇದರಲ್ಲಿ ಇಲ್ಲದ ಯಾವ ಮಂತ್ರವೂ ಋಗ್ವೇದ ಮಂತ್ರವೆಂದು ಸ್ವೀಕರಿಸಲಾಗದು. ಅದರ ಬೆಲೆ ೧೦—೦೦ ಟಪ್ಪಾಲು ಖರ್ಚು ಪ್ರತ್ಯೇಕ. 'ಋಗ್ವೇದ ದರ್ಶನ'ದ ಪ್ರಥಮ ಭಾಗವನ್ನು ಪಡಕೊಳ್ಳುವವರಿಗೆ ಪ್ರಚಾರದ ದೃಷ್ಟಿಯಲ್ಲಿ ಅದನ್ನೂ ಸಹ ಉಚಿತವಾಗಿಯೇ ಕೊಡಲಾಗುವುದು.

**—ಪ್ರಕಾಶಕರು.**

## ಋಗ್ವೇದದ ಗಾಯತ್ರ್ಯಾದಿ – ಛಂದಸ್ಸುಗಳ ಮಂತ್ರಸಂಖ್ಯಾ ಸೂಚಿ:–

| ಛಂದಸ್ಸುಗಳು | ಅಕ್ಷರ ಸಂಖ್ಯೆ | ಮಂತ್ರ ಸಂಖ್ಯೆ | ಆಯಾಯ ಛಂದಸ್ಸಿನ ಅಕ್ಷರಗಳು |
|---|---|---|---|
| ಗಾಯತ್ರೀ— | ೨೪ | ೨೪೪೯ | ೫೮,೭೭೦ |
| ಉಷ್ಣಿಕ್— | ೨೮ | ೩೯೮ | ೧೧,೧೪೪ |
| ಅನುಷ್ಟುಪ್— | ೩೨ | ೮೫೮ | ೨೭,೪೫೬ |
| ಬೃಹತೀ — | ೩೬ | ೩೭೧ | ೧೩,೩೦೬ |
| ಪಂಕ್ತಿ— | ೪೦ | ೪೯೮ | ೧೯,೯೨೦ |
| ತ್ರಿಷ್ಟುಪ್— | ೪೪ | ೪೨೫೧ | ೧,೮೭,೦೦೪ |
| ಜಗತೀ— | ೪೮ | ೧೩೪೬ | ೬೪,೬೦೮ |
| ಅತಿಜಗತೀ— | ೫೨ | ೧೭ | ೮೮೪ |
| ಶಕ್ವರೀ— | ೫೬ | ೧೯ | ೧,೦೬೪ |
| ಅತಿಶಕ್ವರೀ— | ೬೦ | ೧೦ | ೬೦೦ |
| ಅಷ್ಟಿ— | ೬೪ | ೭ | ೪೪೮ |
| ಅತ್ಯಷ್ಟಿ— | ೬೮ | ೮೨ | ೫,೫೭೬ |
| ಧೃತಿ— | ೭೨ | ೨ | ೧೪೪ |
| ಅತಿಧೃತಿ— | ೭೬ | ೧ | ೭೬ |
| ದ್ವಿಪದಾಗಾಯತ್ರೀ— | ೧೬ | ೩ | ೪೮ |
| ದ್ವಿಪದಾವಿರಾಟ್— | ೨೦ | ೧೩೯ | ೨,೭೮೦ |
| ದ್ವಿಪದಾತ್ರಿಷ್ಟುಪ್— | ೨೨ | ೧೪ | ೩೦೮ |
| ದ್ವಿಪದಾಜಗತೀ— | ೨೪ | ೧ | ೨೪ |
| ಏಕಪದಾವಿರಾಟ್— | ೧೦ | ೫ | ೫೦ |
| ಏಕಪದಾತ್ರಿಷ್ಟುಪ್— | ೧೧ | ೧ | ೧೧ |
| ೧೦೧೭ ಸೂಕ್ತಗಳು— | | ೧೦೪೭೨ | ೩,೯೪,೨೨೧ |

## ವಾಲಖಿಲ್ಯ ಸೂಕ್ತಗಳ ಛಂದಸ್ಸು ಮತ್ತು ಮಂತ್ರ ಸಂಖ್ಯೆ

| | | | |
|---|---|---|---|
| ಗಾಯತ್ರೀ— | ೨೪ | ೭ | ೧೬೮ |
| ಅನುಷ್ಟುಪ್— | ೩೨ | ೨ | ೬೪ |
| ಬೃಹತೀ— | ೩೬ | ೫೬ | ೨,೦೧೬ |
| ಪಂಕ್ತಿ— | ೪೦ | ೧ | ೪೦ |
| ತ್ರಿಷ್ಟುಪ್— | ೪೪ | ೭ | ೩೦೮ |
| ಜಗತೀ— | ೪೮ | ೭ | ೩೩೬ |
| ೧೧ ಸೂಕ್ತಗಳು— | | ೮೦ | ೩೦೪೪ |
| ೧೦೨೮ ಸೂಕ್ತಗಳು— | | ೧೦೫೫೨ | ೩,೯೭,೨೬೫ |

## ಋಗ್ವೇದದ ಅಷ್ಟಕ ಅಧ್ಯಾಯ ವರ್ಗಾನು ಕ್ರಮಸೂಚಿ

| ೧ನೇ ಅಷ್ಟಕ | | ೨ನೇ ಅಷ್ಟಕ | | ೩ನೇ ಅಷ್ಟಕ | | ೪ನೇ ಅಷ್ಟಕ | | ೫ನೇ ಅಷ್ಟಕ | | ೬ನೇ ಅಷ್ಟಕ | | ೭ನೇ ಅಷ್ಟಕ | | ೮ನೇ ಅಷ್ಟಕ | |
|---|---|---|---|---|---|---|---|---|---|---|---|---|---|---|---|
| ಅಧ್ಯಾಯ | ವರ್ಗ | ಅಧ್ಯಾಯ | ವರ್ಗ | ಅಧ್ಯಾಯ | ವರ್ಗ | ಅಧ್ಯಾಯ | ವರ್ಗ | ಅಧ್ಯಾಯ | ವರ್ಗ | ಅಧ್ಯಾಯ | ವರ್ಗ | ಅಧ್ಯಾಯ | ವರ್ಗ | ಅಧ್ಯಾಯ | ವರ್ಗ |
| ೧ | ೩೭ | ೧ | ೨೬ | ೧ | ೩೪ | ೧ | ೩೩ | ೧ | ೨೭ | ೧ | ೪೦ | ೧ | ೪೧ | ೧ | ೩೦ |
| ೨ | ೩೮ | ೨ | ೨೭ | ೨ | ೨೬ | ೨ | ೨೮ | ೨ | ೩೦ | ೨ | ೪೦ | ೨ | ೩೩ | ೨ | ೨೪ |
| ೩ | ೩೫ | ೩ | ೨೬ | ೩ | ೩೧ | ೩ | ೩೧ | ೩ | ೩೦ | ೩ | ೪೯ | ೩ | ೨೬ | ೩ | ೨೮ |
| ೪ | ೨೯ | ೪ | ೨೯ | ೪ | ೨೫ | ೪ | ೩೬ | ೪ | ೩೦ | ೪ | ೫೪ | ೪ | ೨೮ | ೪ | ೩೧ |
| ೫ | ೩೧ | ೫ | ೨೯ | ೫ | ೨೬ | ೫ | ೩೦ | ೫ | ೨೭ | ೫ | ೩೮ | ೫ | ೩೩ | ೫ | ೨೭ |
| ೬ | ೩೨ | ೬ | ೩೨ | ೬ | ೩೦ | ೬ | ೨೫ | ೬ | ೨೫ | ೮ | ೩೮ | ೬ | ೨೮ | ೬ | ೨೭ |
| ೭ | ೩೭ | ೭ | ೨೫ | ೭ | ೨೭ | ೭ | ೩೫ | ೭ | ೩೩ | ೭ | ೩೯ | ೭ | ೩೦ | ೭ | ೩೦ |
| ೮ | ೨೬ | ೮ | ೨೭ | ೮ | ೨೬ | ೮ | ೩೨ | ೮ | ೩೬ | ೮ | ೩೩ | ೮ | ೨೯ | ೮ | ೪೯ |
| | ೨೬೫ | | ೨೨೧ | | ೨೨೫ | | ೨೫೦ | | ೨೩೮ | | ೩೩೧ | | ೨೪೮ | | ೨೪೬ |

ಋಗ್ವೇದದಲ್ಲಿ ೮ ಅಷ್ಟಕಗಳೂ—[ಒಂದೊಂದು ಅಷ್ಟಕದಲ್ಲಿ ಎಂಟೆಂಟು ಅಧ್ಯಾಯಗಳೂ ಕೂಡಿ]—೬೪ ಅಧ್ಯಾಯಗಳೂ ೨೦೨೪ ವರ್ಗಗಳೂ ಇವೆ. ಇದರಲ್ಲಿ ವಾಲಖಿಲ್ಯದ ೧೧ ಸೂಕ್ತಗಳ ೧೮ ವರ್ಗಗಳೂ ಸೇರಿವೆ.

## ಋಗ್ವೇದ ಮಂಡಲ ಸೂಕ್ತಾನುಸಾರ ಮಂತ್ರಸಂಖ್ಯೆ ಮತ್ತು ಅನುವಾಕ್‌ಗಳು

| | | | |
|---|---|---|---|
| ಪ್ರಥಮ ಮಂಡಲ | ೧೯೧ | ೨೦೦೬ | ೨೪ |
| ದ್ವಿತೀಯ ಮಂಡಲ | ೪೩ | ೪೨೯ | ೪ |
| ತೃತೀಯ ಮಂಡಲ | ೬೨ | ೬೧೭ | ೫ |
| ಚತುರ್ಥ ಮಂಡಲ | ೫೮ | ೫೮೯ | ೫ |
| ಪಂಚಮ ಮಂಡಲ | ೮೭ | ೭೨೭ | ೬ |
| ಷಷ್ಠ ಮಂಡಲ | ೭೫ | ೭೬೫ | ೬ |
| ಸಪ್ತಮ ಮಂಡಲ | ೧೦೪ | ೮೪೧ | ೬ |
| ಅಷ್ಟಮ ಮಂಡಲ<br>ವಾಲಖಿಲ್ಯ | ೯೨<br>೧೧ | ೧೬೩೬<br>೮೦ | ೧೦ |
| ನವಮ ಮಂಡಲ | ೧೧೪ | ೧೧೦೮ | ೭ |
| ದಶಮ ಮಂಡಲ | ೧೯೧ | ೧೭೫೪ | ೧೨ |
| ಸರ್ವಯೋಗ— | ೧೦೨೮ | ೧೦,೫೫೨ | ೮೫ |

ಋಗ್ವೇದದ ೧೦೫೫೨ ಮಂತ್ರಗಳಿಗೆ ಮಂತ್ರದೃಷ್ಟಾರರಾದ ಋಷಿಗಳ, ಮತ್ತು ಋಷಿಕೆಯರ ಒಟ್ಟು ಸಂಖ್ಯೆ ೩೭೬ ಎಂಬುದಾಗಿ ಕಂಡುಬರುವುದು.

## ಪ್ರತಿಯೊಂದು ಅಷ್ಟಕದ ಸೂಕ್ತ—ವರ್ಗ—ಋಚೆಗಳು ಮತ್ತು ಅಕ್ಷರಗಳು ಇಂತಿವೆ.

| | | | | |
|---|---|---|---|---|
| ಪ್ರಥಮ ಅಷ್ಟಕ | ೧೨೧ | ೨೬೫ | ೧೩೭೦ | ೪೮,೯೩೧ |
| ದ್ವಿತೀಯ ,, | ೧೧೯ | ೨೨೧ | ೧೧೪೭ | ೫೧,೭೧೮ |
| ತೃತೀಯ ,, | ೧೨೨ | ೨೨೫ | ೧೨೦೯ | ೪೭,೬೩೬ |
| ಚತುರ್ಥ ,, | ೧೪೦ | ೨೫೦ | ೧೨೮೯ | ೪೭,೭೬೨ |
| ಪಂಚಮ ,, | ೧೨೯ | ೨೩೮ | ೧೨೬೩ | ೪೮,೦೨೨ |
| ಷಷ್ಠ ,, | ೧೨೪ | ೩೧೩ | ೧೬೫೦ | ೪೮,೪೧೨ |
| ವಾಲಖಿಲ್ಯ ,, | ೧೧ | ೧೮ | ೮೦ | ೩,೦೪೪ |
| ಸಪ್ತಮ ,, | ೧೧೬ | ೨೪೮ | ೧೨೬೩ | ೪೭,೫೬೨ |
| ಅಷ್ಟಮ ,, | ೧೪೬ | ೨೪೬ | ೧೨೮೧ | ೫೨,೧೭೮ |
| ಸರ್ವಯೋಗ | ೧೦೨೮ | ೨೦೨೪ | ೧೦೫೫೨ | ೩,೯೭,೨೬೫ |



# ಋಗ್ವೇದ ದರ್ಶನ

**ಭಾಷ್ಯಕಾರರು:**

**ಶ್ರೀ ಪಂ. ಸುಧಾಕರ ಚತುರ್ವೇದಿ, ಬೆಂಗಳೂರು.**

## ಪ್ರಥಮ ಮಂಡಲ - ಸೂಕ್ತ ೧.

ಪ್ರಥಮ ಸೂಕ್ತದಲ್ಲಿರುವ ಮಂತ್ರಗಳ ಸಂಖ್ಯೆ ೯

**ಸಂಹಿತಾ ಭಾಗ.**

(ಮಧುಚ್ಛಂದಾ ಋಷಿಃ । ಅಗ್ನಿರ್ದೇವತಾ । ಗಾಯತ್ರೀ ಛಂದಃ । ಷಡಜಃ ಸ್ವರಃ)

**ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ ।**

**ಹೋತಾರಂ ರತ್ನಧಾತಮಂ ॥೧॥**

**ಪದಪಾಠ:–** ಅಗ್ನಿಂ । ಈಳೇ । ಪುರಃ + ಹಿತಂ । ಯಜ್ಞಸ್ಯ । ದೇವಂ । ಋತ್ವಿಜಂ । ಹೋತಾರಂ । ರತ್ನ + ಧಾ + ತಮಂ ॥

ಅನ್ವಯ:– ಪುರೋಹಿತಂ ಯಜ್ಞಸ್ಯ ದೇವಂ ಋತ್ವಿಜಂ ಹೋತಾರಂ ರತ್ನ ಧಾತಮಂ ಅಗ್ನಿಂ ಈಳೇ ॥

ಶಬ್ದಾರ್ಥ:– [ಪುರಃ ಹಿತಂ] ಎಲ್ಲರ ಮುಂದೆ ಸ್ಥಿತನಾಗಿರುವ, ಅನಾದಿಕಾಲದಿಂದ ಸರ್ವರ ಹಿತೈಷಿಯಾಗಿರುವ, [ಯಜ್ಞಸ್ಯ] ಯಜ್ಞದ, ಸತ್ಕರ್ಮದ, ದೇವಪೂಜಾ, ಸಂಗತಿ ಕರಣ, ದಾನ– ಈ ಮೂರು ಕ್ರಿಯೆಗಳಿಂದ ಕೂಡಿದ ಸಕಲ ಉತ್ತಮ ಕರ್ಮಗಳ, [ದೇವಂ] ಪ್ರಕಾಶಕನಾಗಿರುವ, ದಾತೃವಾಗಿರುವ, [ಋತ್ವಿಜಂ] ಋತುಗಳನ್ನು ಸಂಗತಗೊಳಿಸುವ, ತಂದೆ ತಾಯಿಗಳಿಗೆ, ವಿದ್ವಜ್ಜನರಿಗೆ ಮತ್ತು ಸರ್ವಭೂತಗಳಿಗೆ ಪ್ರೇರಣೆ ನೀಡುವ, [ಹೋತಾರಂ] ದಾತೃವಾದ, ಸರ್ವಗ್ರಾಹಿಯಾದ, [ರತ್ನಧಾತಮಂ] ರಮಣೀಯವಾದುದನ್ನು ಧಾರಣ ಮಾಡಿಸುವವರಲ್ಲಿ ಶ್ರೇಷ್ಠನಾದ, [ಅಗ್ನಿಂ] ಅಗ್ರಣಿಯಾದ, ನಾಯಕನಾದ ಪರಮಾತ್ಮನನ್ನು, [ಈಳೇ] ಸ್ತುತಿಸುತ್ತೇನೆ; ಯಾಚಿಸುತ್ತೇನೆ.

**ತಾತ್ಪರ್ಯ:–** ಪರಮಾತ್ಮನು ಸರ್ವವ್ಯಾಪಕನಾದ ಕಾರಣ, ಯಾರು ಯಾವಕಡೆ ತಿರುಗಿದರೂ ಅವರ ಮುಂದೆ ವಿರಾಜಿಸುತ್ತಲೇ ಇರುತ್ತಾನೆ. ಅನಾದಿಕಾಲದಿಂದ ಜೀವ ಮಾತ್ರರ ಹಿತಕಾರಿಯಾಗಿದ್ದಾನೆ. ದಿವ್ಯವಾದ ಶಕ್ತಿಗಳನ್ನುಳ್ಳ ಜಡ - ಚೇತನ ವಸ್ತುಗಳ ಸದುಪಯೋಗ, ಬೇರೆಬೇರೆ ದ್ರವ್ಯಗಳ ಸಂಯೋಜನ ಮತ್ತು ಒಂದಾಗಿ ಮುಂದೆ ಸಾಗುವಿಕೆ, ತನ್ನಲ್ಲಿರುವುದನ್ನು ಸರ್ವಹಿತಕ್ಕಾಗಿ ವಿನಿಯೋಗಿಸುವುದು–ಈ ಮೂರು ಸತ್ಪ್ರವೃತ್ತಿಗಳಿಂದ ಕೂಡಿದ ಸಮಸ್ತ ಪುಣ್ಯಕರ್ಮಗಳನ್ನೂ ಅವನು ವೇದಗಳ ಮೂಲಕ ಪ್ರಕಾಶಪಡಿಸಿದ್ದಾನೆ. ಜಡಭೂತಗಳ ಮತ್ತು ಚೇತನ ಜೀವರ ಸಮಯೋಚಿತವಾದ ಸಂಯೋಜನದಿಂದ ಸೃಷ್ಟಿಯೆಂಬ ಯಜ್ಞವನ್ನು ಅವನೇ ಮಾಡುತ್ತಿದ್ದಾನೆ. ಅವನು ಜೀವರ ಉತ್ಕರ್ಷಕ್ಕಾಗಿ ಸಕಲವನ್ನೂ ಕೊಡುವವನೂ, ಪ್ರಳಯಕಾಲದಲ್ಲಿ ಸರ್ವವನ್ನೂ ತನ್ನೊಳಕ್ಕೇ ತೆಗೆದುಕೊಳ್ಳುವವನೂ ಆಗಿದ್ದಾನೆ. ರಮಣೀಯವಾದ ಸೂರ್ಯ - ಚಂದ್ರ - ನಕ್ಷತ್ರಾದಿ ದಿವ್ಯಪ್ರಕಾಶ ಪುಂಜಗಳ– ದಿವ್ಯಧನಗಳ – ಸರ್ವಶ್ರೇಷ್ಠ ಧಾರಕನು ಅವನೇ ಆಗಿದ್ದಾನೆ. ಅವನು ಸರ್ವಾಗ್ರಣಿ – ಎಂದರೆ ಎಲ್ಲದರ ನಾಯಕ – ಸಂಚಾಲಕನಾಗಿದ್ದಾನೆ. ಅವನನ್ನೇ ನಾನು ಸ್ತುತಿಸುತ್ತೇನೆ; ಅವನಲ್ಲೇ ಕೇಳಿಕೊಳ್ಳುತ್ತೇನೆ.

**ವ್ಯಾಖ್ಯಾನ:–** ಋಗ್ವೇದದ ಈ ಮೊದಲನೆಯ ಸೂಕ್ತದ 'ಋಷಿ' – ಎಂದರೆ ಅರ್ಥದರ್ಶನ ಮಾಡಿದವನು ಮಧುಚ್ಛಂದಾ - ಎಂಬ ತಪಸ್ವಿ; ಈ ಸೂಕ್ತದ ದೇವತೆ – ಎಂದರೆ ಪ್ರತಿಪಾದ್ಯ ವಿಷಯ 'ಅಗ್ನಿ' ಯಾಗಿರುತ್ತದೆ. ವೇದಗಳ ಸತ್ಯಾರ್ಥವನ್ನು ಗ್ರಹಿಸಲು ಕೇವಲ ಯೌಗಿಕ ಶೈಲಿಯೇ ಉಪಯುಕ್ತವಾದ ಕಾರಣ, 'ಅಗ್ನಿ' ಎಂದೊಡನೆ 'ಬೆಂಕಿ' ಎಂಬ ಪ್ರಚಲಿತಾರ್ಥವನ್ನು ಗ್ರಹಿಸಿ, ಜಡವಸ್ತುಗಳ ಸ್ತುತಿ - ಪ್ರಾರ್ಥನೋಪಾಸನೆಗಳನ್ನು ವರ್ಣಿಸಹೊರಡುವುದು ಸರ್ವಥಾ ಅನುಚಿತ. ಸಂಪೂರ್ಣ ಮಂತ್ರದಲ್ಲಿ ಉಕ್ತವಾಗಿರುವ ವಿಶೇಷಣಗಳನ್ನೆಲ್ಲಾ ಗಮನದಲ್ಲಿಟ್ಟುಕೊಂಡು, ಅವು 'ಅಗ್ನಿ'ಗೆ ಹೊಂದುತ್ತವೋ, ಇಲ್ಲವೋ- ಎಂಬುದನ್ನು ವಿವೇಚಿಸಿ, ಅನಂತರವೇ ಸೂಕ್ತವಾದ ಅರ್ಥವನ್ನು ಗ್ರಹಿಸಬೇಕು. ಜಡವಾದ ಬೆಂಕಿಗೆ ಪುರೋಹಿತ, ಯಜ್ಞದ - ಸಕಲ ಸತ್ಕರ್ಮಗಳ ಪ್ರಕಾಶಕ, ಋತುಗಳ ಪ್ರೇರಕ ಮತ್ತು ಪಿತೃಗಳ ಹಾಗೂ ದೇವಜನರ ಪ್ರೇರಕ (**ಋತವಃ ಪಿತರಃ; ಋತವೋವೈ ದೇವಾಃ**–ಶತಪಥ), (ಋತ್ವಿಕ್ - ಈರಣ: ನಿರುಕ್ತ) ಸರ್ವದಾತೃ ಮತ್ತು ಸರ್ವಗ್ರಾಹಿ (**ಹು–ದಾನಾದನಯೋಃ**) ರಮಣೀಯ ಗ್ರಹೋಪಗ್ರಹಗಳ ಸರ್ವೋತ್ತಮಧಾರಕ-ಎಂಬ ಈ ವಿಶೇಷಣಗಳು ಪೂರ್ಣರೂಪದಿಂದ ಹೊಂದಲಾರವು. ಆದಕಾರಣ, ಈ ಮಂತ್ರದ ಪ್ರತಿಪಾದ್ಯ ವಿಷಯವಾದ ಅಗ್ನಿ, ಯಾವುದೋ ಜಡದ್ರವ್ಯವಾಗಿರದೆ, ಒಂದು ಮಹಚ್ಚೇತನವೇ ಆಗಿರಬೇಕು .ಸ್ವತಃ ಋಗ್ವೇದವೇ - "**ಇಂದ್ರಂ ಮಿತ್ರಂವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್**॥" (ಋಗ್ವೇದ:- ೧. ೧೬೪. ೪೬) " ಆ ಮಹಾನ್ ಆತ್ಮನು - ವಿರಾಡಾತ್ಮನು ಪರಮಾತ್ಮನು ದಿವ್ಯನು; ಸುಪರ್ಣನು. ಅವನನ್ನೇ ಇಂದ್ರ, ಮಿತ್ರ, ವರುಣ, ಅಗ್ನಿ - ಎನ್ನುತ್ತಾರೆ" - ಎಂದು ಸಾರಿದೆ. ಎಂದಮೇಲೆ, ಅಗ್ನಿ-

ಎಂಬುದು 'ಗರುತ್ಮಾನ್' - ಎಂದರೆ ವಿರಾಡಾತ್ಮನ ಹೆಸರು — ಎಂಬುದು ವೇದಪ್ರಮಾಣ ದಿಂದಲೇ ಸ್ಪಷ್ಟವಾಗಿದೆ. ನಿರುಕ್ತಕಾರರು – **'ಮಹಾಂತಮಾತ್ಮಾನಂ ಗರುತ್ಮಂತಂ। ಗರುತ್ಮಾನ್ – ಗುರ್ವಾತ್ಮಾ, ಮಹಾತ್ಮೇತಿವಾ ॥** (ನಿರುಕ್ತ:- ೧.೪. ೧೮) ಎಂದರೆ- "ಗರುತ್ಮಾನನನ್ನು - ಎಂದರೆ ಮಹಾನ್ ಆತ್ಮನನ್ನು; ಗರುತ್ಮಾನ್ – ಎಂದರೆ ಗುರ್ವಾತ್ಮ ಅಥವಾ ಮಹಾತ್ಮ" - ಎಂದಿದ್ದಾರೆ.

ಈ ಮಂತ್ರದಲ್ಲಿನ **'ಯಜ್ಞಸ್ಯ ದೇವಂ'** – ಎಂಬ ವರ್ಣನೆಯೂ ಮಹತ್ವ ಪೂರ್ಣವಾದುದು. ಯಜ್ಞ – ಎಂಬ ಶಬ್ದ ಹುಟ್ಟುವುದು **'ಯಜ್ ದೇವಪೂಜಾ – ಸಂಗತಿ – ಕರಣ – ದಾನೇಷು'** – ಎಂದರೆ 'ದೇವಪೂಜೆ, ಸಂಗತಿಕರಣ, ದಾನ – ಎಂಬ ಅರ್ಥಗಳನ್ನುಳ್ಳ 'ಯಜ್' ಧಾತುವಿನಿಂದ. ಸ್ವತಃ ಶತಪಥ ಬ್ರಾಹ್ಮಣದಲ್ಲಿ – **"ಅಗ್ನಿಶ್ಚ ಪೃಥಿವೀಚ ವಾಯುಶ್ಚಾಂತರಿಕ್ಷಂಚಾದಿತ್ಯಶ್ಚ ದ್ಯೌಶ್ಚ ಚಂದ್ರಮಾಶ್ಚ ನಕ್ಷತ್ರಾಣಿ ಚ, ದಶೇಮೇ ಪ್ರಾಣಾ ಏಕಾದಶ ಆತ್ಮಾ, ದ್ವಾದಶಮಾಸಾ ಸಂವತ್ಸರಸ್ಯ, ಅಶನಿಃ ಪಶವ ಏತೇ ತ್ರಯಸ್ತ್ರಿಂಶತ್ತ್ವೇವ ದೇವಾಃ"** (೧೪ ೬. ೭. ೩.–೭)- "ಅಗ್ನಿ, ವಾಯು, ಪೃಥಿವೀ, ಅಂತರಿಕ್ಷ, ಸೂರ್ಯ, ದ್ಯುಲೋಕ, ಚಂದ್ರ, ನಕ್ಷತ್ರಗಳು, ಪ್ರಾಣಾದಿ ದಶಪ್ರಾಣಗಳು, ಜೀವಾತ್ಮ, ಹನ್ನೆರಡು ತಿಂಗಳುಗಳು, ವಿದ್ಯುತ್ತು, ಮಾನವೇತರ ಜೀವರು - ಇವರೇ ಮೂವತ್ತುಮೂರು ದೇವತೆಗಳು" ಎಂದು ಹೇಳಿದೆ. ಈ ಪಟ್ಟಿಯಲ್ಲಿ ಸಮಸ್ತ ಜಡಚೇತನಗಳ ಹೆಸರೂ ಕಂಡುಬರುವುದಲ್ಲದೆ, ಕಾಲದ ಚಿಹ್ನೆಯಾದ ಮಾಸಗಳು ಮತ್ತು ಶರೀರಗತವಾದ ಪ್ರಾಣಗಳು – ಇವನ್ನೂ ಕಾಣುತ್ತೇವೆ. ಪೂಜೆಯೆಂದರೆ - ಸತ್ಕಾರ ಮತ್ತು ಸದುಪಯೋಗ. ಹೀಗೆ ಪರಮಾತ್ಮನಿಂದ ಹಿಡಿದು ತೃಣಪರ್ಯಂತ ಸೃಷ್ಟಿಯ ಪ್ರತಿಯೊಂದು ವಸ್ತುವನ್ನೂ ಯುಕ್ತವಾಗಿ ವ್ಯವಹರಿಸುವುದೇ ದೇವಪೂಜೆ; ಸಂ+ಗತಿಕರಣ, ಒಟ್ಟುಸೇರಿ, ಸಾಮೂಹಿಕವಾಗಿ ಉತ್ಕರ್ಷ ಸಾಧಿಸುವುದು ಮತ್ತು ಭಿನ್ನಭಿನ್ನ ದ್ರವ್ಯಗಳ ಉಚಿತ ಹಾಗೂ ವೈಜ್ಞಾನಿಕ ಸಂಮಿಶ್ರಣದಿಂದ ನವನೂತನ ಆವಿಷ್ಕಾರಗಳನ್ನು ಮಾಡುವುದು- ಇದು ಎರಡನೆಯ ಅಂಗ. ದಾನ - ಪರಾರ್ಥದಲ್ಲಿ ಸ್ವಾರ್ಥವನ್ನು ಲೀನಗೊಳಿಸಿಬಿಡುವುದು, ತನ್ನಲ್ಲಿರುವುದನ್ನು ಅನ್ಯರೊಂದಿಗೆ ಸೇರಿ ಅನುಭವಿಸುವುದು - ಇದು ಮೂರನೆಯ ಅಂಗ. ಹೀಗೆ, ಎಷ್ಟುಬಗೆ ಸತ್ಪ್ರವೃತ್ತಿಗಳ ಕಲ್ಪನೆ ಮಾಡಿಕೊಳ್ಳಲು ಮಾನವನ ಮಸ್ತಿಷ್ಕಕ್ಕೆ ಸಾಧ್ಯ ವಿದೆಯೋ, ಅವಷ್ಟೂ ಯಜ್ಞ – ಎಂಬ ಒಂದು ಶಬ್ದದಲ್ಲಿ ಬಂದುಹೋಗುತ್ತದೆ. ಈ ಯಜ್ಞದ ಸಕಲಸತ್ಪ್ರವೃತ್ತಿಗಳ 'ದೇವ'ನು, ಪರಮಾತ್ಮನು. ನಿರುಕ್ತಕಾರರು - **"ದೇವೋ ದಾನಾದ್ವಾ ದೀಪನಾದ್ವಾ ದ್ಯೋತನಾದ್ವಾ ದ್ಯುಃಸ್ಥಾನೇ ಭವತೀತಿವಾ"** (೧. ೪. ೧೫.೨) – "ದಾನದಿಂದ, ಬೆಳಗುವುದರಿಂದ, ಪ್ರಕಾಶಪಡಿಸುವುದರಿಂದ ಅಥವಾ ಪ್ರಕಾಶಮಯ ಸ್ಥಿತಿಯಲ್ಲಿರುವುದರಿಂದ, ದೇವನು 'ದೇವ'ನೆನಿಸುತ್ತಾನೆ"– ಎಂದಿದ್ದಾರೆ. ಹೀಗೆ 'ದೇವ' ಎಂದರೆ - ಸ್ವತಃ ಪ್ರಕಾಶಮಯನಾಗಿದ್ದು ಅನ್ಯರಿಗೆ ಕೊಡುವವನು ಮತ್ತು ಪ್ರಕಾಶಪಡಿಸುವವನು' ಎಂದರ್ಥವಾಗುತ್ತದೆ. 'ಯಜ್ಞದ ದೇವ' ಎಂದರೆ 'ಯಜ್ಞದ ಪ್ರಕಾಶಕ' ಎಂಬುದು ತಾನಾಗಿಯೇ ವ್ಯಕ್ತವಾಗುತ್ತಿದೆ. ವೇದಗಳ ಮೂಲಕ ಸಕಲ

ವ್ಯಾಖ್ಯಾನ:- ಈ ಮಂತ್ರದಲ್ಲಿಯೂ ಅದೇ ಪರಮಾತ್ಮನ ವರ್ಣನೆ ಮುಂದೆ ಸಾಗುತ್ತಲಿದೆ. ಈ ಮಂತ್ರದಲ್ಲಿ ಗಮನಿಸಬೇಕಾದ ಮೊದಲನೆಯ ವಿಷಯ, ಉಪಾಸಕರಾದ ಋಷಿ'ಗಳಿಗೆ ವಿಶೇಷಣವಾಗಿ ಉಪಯೋಗಿಸಿರುವ 'ಪೂರ್ವ' ಮತ್ತು 'ನೂತನ' ಎಂಬ ಪದಗಳ ಪ್ರಯೋಗ. **"ಋಷಿರ್ದರ್ಶನಾತ್"** (ನಿರುಕ್ತ:- ೨.೧೧.) "ಸತ್ಯದರ್ಶನ ಮಾಡುವವನೇ ಋಷಿ"; **"ಋಷೀಣಾಂ ಮಂತ್ರ ದೃಷ್ಟಯೋ ಭವಂತಿ"** (ನಿರುಕ್ತ:-೭.೩.) "ಋಷಿಗಳಿಗೆ ಮಂತ್ರದ ಅರ್ಥದರ್ಶನ ಮಾಡುವ ಸಾಮರ್ಥ್ಯವಿರುತ್ತದೆ"; **"ಸಾಕ್ಷಾತ್ಕೃತ ಧರ್ಮಾಣ ಋಷಯೋ ಬಭೂವುಃ"** (ನಿರುಕ್ತ:-೧.೨೦.) "ಧರ್ಮಸಾಕ್ಷಾತ್ಕಾರ ಮಾಡಿಕೊಂಡವರು ಋಷಿಗಳು."; **"ಏತೇ ವೈ ವಿಪ್ರಾ ಯದೃಷಯಃ"** (ಶತಪಥ:- ೧.೪.೨.೭.) "ವಿಶೇಷ ಪ್ರಜ್ಞಾವಂತರಾದವರೇ ಋಷಿಗಳೆನಿಸುವರು."– ಈ ಹಲವಾರು ಶಾಸ್ತ್ರ ಪ್ರಮಾಣಗಳಿಂದ, ತತ್ತ್ವವನ್ನು ಯಥಾರ್ಥವಾಗಿ ಅರ್ಥಮಾಡಿಕೊಂಡ, ವಿದ್ವಾಂಸರಾದ, ಮಾನವೋತ್ತಮರೇ ಋಷಿಗಳು = ಎಂಬುದು ಸ್ಪಷ್ಟವಾಗುತ್ತದೆ. **"ಋಷೀ ಗತೌ"** ಎಂಬ ಧಾತ್ವರ್ಥ ಗ್ರಹಿಸಿದರೆ – ಪ್ರಗತಿಶೀಲನೂ ಋಷಿಯೇ ಎಂಬುದು ಗೊತ್ತಾಗುತ್ತದೆ. ಇಂತಹ ಪ್ರಗತಿಶೀಲರಾದ, ತತ್ತ್ವದರ್ಶಿಗಳಾದ ವಿದ್ವಾಂಸರನ್ನು, 'ಪೂರ್ವೇಭಿಃ, ನೂತನೈಃ' ಎಂಬೆರಡು ಶಬ್ದಗಳು ವಿಶೇಷಿಸುತ್ತಲಿವೆ. 'ಪೂರ್ವ' ಎಂಬುದಕ್ಕೆ 'ಹಿಂದಿನದು' ಎಂಬರ್ಥ ವಿರುವಂತೆಯೇ, **'ಪೂರ್ವ ಪೂರಣೇ'**–ಎಂಬ ಧಾತ್ವರ್ಥ ಗ್ರಹಿಸಿದರೆ, 'ಪೂರ್ಣವಾದುದು' ಎಂದೂ ಅರ್ಥವಾಗುತ್ತದೆ. ಹೀಗೆ, 'ಪೂರ್ವಋಷಿ' ಎಂದರೆ, 'ಪ್ರಾಚೀನಋಷಿ; ಪೂರ್ಣಋಷಿ' ಎಂಬ ಎರಡರ್ಥಗಳೂ ಆಗುತ್ತವೆ. 'ನೂತನ ಋಷಿ' ಎಂದರೆ 'ನವೀನಋಷಿ'-ಎಂದರ್ಥ. ತತ್ತ್ವದರ್ಶಿಗಳಲ್ಲಿ, ಅವರು ಪ್ರಾಚೀನರಾಗಿರಲಿ, ನವೀನರಾಗಿರಲಿ, – ಇರುವ ಭಕ್ತಿ ಆ ಸರ್ವ ಕಾಲಾತೀತನೂ, ಏಕರಸನೂ ಆದ ಪರಮಾತ್ಮನಿಗೇ ಮೀಸಲು. ಋಷಿಗಳು ಪೂರ್ಣತ್ವ ಪಡೆದ, ಪರಿಪಕ್ವರಾದ ಸಿದ್ಧರೇ ಆಗಿರಲಿ, ಸತ್ಯದರ್ಶನ ಮಾರ್ಗದಲ್ಲಿ ಮುಂದೆ ಮುಂದೆ ಸಾಗುತ್ತಿರುವ ಸಾಧಕರೇ ಆಗಿರಲಿ ಎಲ್ಲರಿಗೂ ಉಪಾಸನೀಯನಾದವನು ಅದೇ ಪರಮಾತ್ಮ. ಭಕ್ತರು ಪ್ರಾಚೀನರಿರಬಹುದು; ಅರ್ವಾಚೀನರಿರಬಹುದು. ಸನಾತನನಾದ ಭಗವಂತನಿಗೆ ನೂತನತ್ವವೂ ಇಲ್ಲ; ಪ್ರಾಚೀನತ್ವವೂ ಇಲ್ಲ.

ಋಷಿಶಬ್ದವನ್ನು ವಿವೇಚಿಸುವಾಗ, ಆ ಶಬ್ದದ ಇನ್ನೊಂದರ್ಥವನ್ನೂ ಗಮನದಲ್ಲಿಟ್ಟು ಕೊಳ್ಳಬೇಕು. **"ಏತಂ ತರ್ಕಮೃಷಿಂ ಪ್ರಾಯಚ್ಛನ್"** (ನಿರುಕ್ತ:- ೧೩.೧೨) "ತರ್ಕವೆಂಬ ಋಷಿಯನ್ನು ಸ್ಥಾಪಿಸಿದರು" ಎಂದು ನಿರುಕ್ತದಲ್ಲಿ ಹೇಳಿದೆ. "ತರ್ಕವೂ ಋಷಿಯೇ" ಎಂಬುದು ಇದರಿಂದ ಚೆನ್ನಾಗಿ ವ್ಯಕ್ತವಾಗುತ್ತದೆ. **"ಅವಿಜ್ಞಾತತತ್ತ್ವೇಽರ್ಥೇ ಕಾರಣೋಪಪತ್ತಿತಸ್ತತ್ತ್ವಜ್ಞಾನಾರ್ಥಮೂಹಸ್ತರ್ಕಃ।"** (ನ್ಯಾಯದರ್ಶನ:-೧.೧.೪೦.) "ಗೊತ್ತಿಲ್ಲದ ತತ್ತ್ವದ ವಿಷಯದಲ್ಲಿ ಕಾರಣವನ್ನು ಹುಡುಕಿ, ತತ್ತ್ವದ ಜ್ಞಾನಕ್ಕಾಗಿ ಮಾಡುವ ಊಹೆಯೇ ತರ್ಕ." ಎಂದು ಮಹರ್ಷಿ ಗೌತಮರು ಹೇಳಿದ್ದಾರೆ. ಈ ರೀತಿ ಸತ್ಯಾನ್ವೇಷಕ ಮನೋಭಾವದಿಂದ ಮಾಡುವ ಸಕಾರಣವಾದ ಆಲೋಚನೆಯನ್ನೇ ತರ್ಕವೆನ್ನ

ಬಹುದು. ಈ ರೀತಿಯ ತರ್ಕವೂ ನಮ್ಮನ್ನು ಸತ್ಯದ ಕಡೆಗೆ ನಡೆಸುವುದಾದ ಕಾರಣ ಅದನ್ನೂ 'ಋಷಿ' ಎಂದು ಕರೆದಿದ್ದಾರೆ. ಆ ತರ್ಕವು ಪ್ರಾಚೀನವಾದುದಾಗಿರಬಹುದು; ನವೀನವಾಗಿರಬಹುದು; ಹಿಂದಿನವರದಾಗಿರಬಹುದು; ಇಂದಿನವರದಾಗಿರಬಹುದು; ಯಾರದಾಗಿದ್ದರೂ ಸರಿಯೇ; ಎಲ್ಲಾ ಅನ್ವೇಷಣಗಳಿಂದಲೂ ಕೊನೆಗೆ 'ಸ್ತುತ್ಯ'ನೆಂದು ನಿರ್ಣಯಿಸಲ್ಪಡುವವನು ಅದೇ ಏಕರಸ- ಕಾಲದೇಶಪರಿಸ್ಥಿತಿಸೀಮಾರಹಿತ ಏಕಮಾತ್ರ ಜಗತ್ಸಂಚಾಲಕನಾದ ಪರಮಾತ್ಮನೇ!

ಇನ್ನು ಈ ಪರಮಾತ್ಮನ ಸ್ಫುಟವಾದ ಸ್ವರೂಪವನ್ನು ಎರಡನೆಯ ವಾಕ್ಯ ಬಣ್ಣಿಸುತ್ತದೆ. ಆ ಪರಮಾತ್ಮನೇ ಏಕೆ ಸ್ತುತ್ಯ ? ಯಾವನಿಂದ ಜಡಚೇತನ ಜಗತ್ತಿಗೆ ಆಧಾರ ಸಿಕ್ಕಬಲ್ಲದೋ, ಜೀವನ ಲಭಿಸಬಲ್ಲದೋ, ವಸ್ತುತಃ ಅವನೇ ಸ್ತುತಿಯೋಗ್ಯ. ಜಗತ್ತಿನಿಂದ ದೂರವಿದ್ದು, ಪುಣ್ಯಕ್ಕೂ ಇಲ್ಲದ, ಪುರುಷಾರ್ಥಕ್ಕೂ ಒದಗದ ಯಾವುದಾದರೂ ಕಲ್ಪಿತ ತತ್ತ್ವದ ಉಪಾಸನೆಯಿಂದ ಯಾರಿಗೇನು ಸಿದ್ಧಿಸೀತು? ಪರಮಾತ್ಮ ತ್ರಿಗುಣಾತೀತನಾದರೂ ಪೂರ್ಣನಿರ್ಗುಣನಲ್ಲ; ದೇಶಕಾಲಾತೀತನಾದರೂ ಸರ್ವ–ಸಂಬಂಧ ರಹಿತನಲ್ಲ. ಪರಮಾತ್ಮನಿಗೂ, ಅವನ ಕೃತಿಯಾದ ಈ ಜಗತ್ತಿಗೂ ಅತಿನಿಕಟವಾದ ಸಂಬಂಧವಿದೆ. ಯಜುರ್ವೇದ ಹೇಳುವಂತೆ-**"ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ| ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥ "** (೪೦. ೫.) "ಆ ಪರಮಾತ್ಮನು ಜಗತ್ತನ್ನೆಲ್ಲಾ ಸಂಚಾಲನ ಮಾಡುತ್ತಾನೆ; ಸ್ವತಃ ಚಲಿಸುವುದಿಲ್ಲ. ಅವನು ಅನಂತನಾದ ಕಾರಣ ನಮ್ಮ ಕಲ್ಪನೆ ಕಾಲದ ಹಾಗೂ ದೇಶದ ದೃಷ್ಟಿಯಿಂದ ಎಷ್ಟು ದೂರ ಓಡಬಲ್ಲದೋ, ಅಷ್ಟು ದೂರದಲ್ಲೂ ಇದ್ದಾನೆ; ಸರ್ವತ್ರವ್ಯಾಪಕನಾದ ಕಾರಣ ನಮ್ಮ ಆತ್ಮನಿಗೂ ಅಂತರಾತ್ಮನಾಗಿ, ನಮಗೆ ಅತಿ ಸಮೀಪದಲ್ಲಿಯೂ ಇದ್ದಾನೆ. ಅವನು ಈ ಎಲ್ಲಾ ವಿಶ್ವದ ಒಳಗೂ ಇದ್ದಾನೆ; ಈ ಎಲ್ಲದರ ಹೊರಗೂ ಇದ್ದಾನೆ." ಈ ರೀತಿ ಸರ್ವಾಂತರ್ಗಾಮಿಯಾಗಿ, ಸರ್ವಾಂತರ್ಯಾಮಿಯಾಗಿ, ಸರ್ವವ್ಯಾಪಕನಾಗಿ,–**ಸಃ ಇಹ ದೇವಾನ್ ಆ ವಕ್ಷತಿ."** "ಅವನು ಈ ವಿಶ್ವದಲ್ಲಿ ದೇವತೆಗಳನ್ನು ಎಲ್ಲ ರೀತಿಯಿಂದಲೂ ಎತ್ತಿಹಿಡಿದಿದ್ದಾನೆ." ಎಂದರೆ – ಸರ್ವಾಧಾರನಾಗಿದ್ದಾನೆ. ದೇವ ಎಂಬ ಶಬ್ದದ ಬಗ್ಗೆ ಪಾಠಕರು ಹಿಂದಿನ ಮಂತ್ರದ ವ್ಯಾಖ್ಯಾನದಲ್ಲಿ ವಿಸ್ತಾರವನ್ನು ಕಂಡಿದ್ದಾರೆ. ಮತ್ತೆ ಅದನ್ನು ವಿಸ್ತರಿಸಬೇಕಾಗಿಲ್ಲ. ಅಗ್ನಿ, ವಾಯು, ಪೃಥ್ವಿ, ಜಲ, ಸೂರ್ಯ, ಚಂದ್ರ, ನಕ್ಷತ್ರಗಳು, ಗ್ರಹೋಪಗ್ರಹಗಳು – ಈ ಎಲ್ಲವನ್ನೂ 'ದೇವ' ಎಂಬ ಶಬ್ದದಿಂದ ನಿರ್ದೇಶಿಸಲಾಗಿದೆ. ಇವೆಲ್ಲದರಲ್ಲಿಯೂ ವ್ಯಾಪಕನಾಗಿ, ಇವೆಲ್ಲಕ್ಕೂ ಆಧಾರಭೂತನಾಗಿ, ಇವೆಲ್ಲವನ್ನೂ ಎತ್ತಿಹಿಡಿದಿರುವವನು ಯಾರು ? ಚಂದ್ರ ಬೀಳದೆ ಹೇಗಿದೆ ಎಂದು ಕೇಳಿದರೆ, "ಭೂಮಿಯ ಆಕರ್ಷಣದಿಂದ" ಎನ್ನುತ್ತಾರೆ; "ಭೂಮಿ ಬೀಳದೆ ಹೇಗೆ ನಿಂತಿದೆ?" ಎಂದು ಕೇಳಿದರೆ, "ಸೂರ್ಯನ ಆಕರ್ಷಣದಿಂದ" ಎನ್ನುತ್ತಾರೆ. "ಸೂರ್ಯ ಬೀಳದೆ ಹೇಗೆ ನಿಂತಿದ್ದಾನೆ?"- ಎಂದು- ಕೇಳಿದರೆ ಗ್ರಹೋಪಗ್ರಹಗಳು ಒಂದನ್ನೊಂದು ಆಶ್ರಯಿಸಿ, ಗೋಡೆಯಲ್ಲಿನ ಇಟ್ಟಿಗೆಗಳಂತೆ ಒಂದರ ಬಲದಿಂದ ಒಂದು ದೃಢವಾಗಿ ನಿಂತಿರುವುದು ಸತ್ಯವಿರಬಹುದು. ಆದರೆ ಆ

ಗೋಡೆಯನ್ನೇ ಒಂದು ಪದಾರ್ಥವಾಗಿ ಭಾವಿಸಿದಾಗ, ಅದರ ನಿಲ್ಲಿಕೆಗೆ ತಳಪಾಯ ಬೇಕಲ್ಲವೆ? ಹಾಗೆಯೇ, ಗ್ರಹೋಪಗ್ರಹಗಳನ್ನೆಲ್ಲಾ ಸಾಮೂಹಿಕವಾಗಿ, ಸಮಷ್ಟಿರೂಪದಿಂದ ಗ್ರಹಿಸಿದಾಗ, ಅವಕ್ಕೆಲ್ಲಾ ಆಧಾರವಾವುದು? ಸ್ವತಃ ಚಲಿಸದ, ಸರ್ವವನ್ನೂ ಹೊರಬಲ್ಲ ಒಂದು ವ್ಯಾಪಕತತ್ತ್ವವೇ ಅವನ್ನೆಲ್ಲಾ ಎತ್ತಿಹಿಡಿದಿರಬೇಕು. ಒಂದು ಸಣ್ಣ ಕಲ್ಲೂ ಸಹ ನಿರಾಧಾರವಾಗಿ ಅಂತರಿಕ್ಷದಲ್ಲಿ ನಿಲ್ಲಲಾರದೆಂದ ಮೇಲೆ, ಅನಂತವೆಂದೇ ತೋರುವ ಅಸಂಖ್ಯ ಖಗೋಳಗಳು, ಪೃಥ್ವಿಗಿಂತ ಮೂರುಲಕ್ಷಪಾಲು ದೊಡ್ಡವನಾದ ಸೂರ್ಯ, ಅವನಿಗಿಂತ ಲಕ್ಷಾಂತರಪಾಲು ದೊಡ್ಡದಾಗಿರುವ ನಕ್ಷತ್ರ – ಮಂಡಲಗಳು - ಇವೆಲ್ಲಾ ನಿರಾಧಾರವಾಗಿ ನಿಂತಿವೆ- ಎಂಬುದು ಬುದ್ಧಿಗೊಪ್ಪದ ಮಾತು. ಈ ಅದ್ಭುತ ಬ್ರಹ್ಮಾಂಡವನ್ನು ಎತ್ತಿಹಿಡಿದಿರುವ ವ್ಯಾಪಕ ಶಕ್ತಿ ಆ ಪರಮಾತ್ಮನೇ. ಅವನು ವಸ್ತುತಃ ಸರ್ವಾಧಾರ. ಅವನು ವಿಶ್ವಕರ್ತ - ವಿಶ್ವ ಸಂಚಾಲಕ ಮಾತ್ರವಲ್ಲ; ವಿಶ್ವಾಧಾರನೂ ಅಹುದು ಎನ್ನುತ್ತಿದೆ ಈ ಮಂತ್ರ.

**ಸಂಹಿತಾಭಾಗ**

**ಅಗ್ನಿನಾ ರಯಿಮಶ್ನವತ್ಪೋಷಮೇವ ದಿವೇದಿವೇ ।**

**ಯಶಸಂ ವೀರವತ್ತಮಂ ॥೩॥**

ಪದಪಾಠ:– ಅಗ್ನಿನಾ, ರಯಿಂ, ಅಶ್ನವತ್, ಪೋಷಂ, ಏವ, ದಿವೇದಿವೇ, ಯಶಸಂ, ವೀರವತ್+ತಮಂ.

ಅನ್ವಯ:– ಅಗ್ನಿನಾ, ದಿವೇದಿವೇ ಪೋಷಂ ಯಶಸಂ ವೀರವತ್ತಮಂ ಏವ ರಯಿಂ ಅಶ್ನವತ್॥

ಶಬ್ದಾರ್ಥ:– [ಅಗ್ನಿನಾ] ಮೇಲೆ ಹೇಳಿದ ಗುಣಗಳಿಂದ ವಿಶಿಷ್ಟನಾದ ಪರಮಾತ್ಮನಿಂದ, (ಮಾನವನು), [ಏವ] ಕೇವಲ, [ದಿವೇದಿವೇ] ದಿನದಿನಕ್ಕೂ, [ಪೋಷಂ] ಹೆಚ್ಚುವಂತಹ ಮತ್ತು ಹೆಚ್ಚಿಸುವಂತಹ, [ಯಶಸಂ] ಯಶಸ್ಕರವಾದ, [ವೀರವತ್ತಮಂ] ಅತ್ಯಂತ ವೀರರಿಂದ ಕೂಡಿದ, ಪ್ರಾಣಶಕ್ತಿಯಿಂದ ಕೂಡಿರುವುದರಲ್ಲೆಲ್ಲಾ ಶ್ರೇಷ್ಠವಾದ, [ರಯಿಂ] ಐಶ್ವರ್ಯವನ್ನು, [ಅಶ್ನವತ್] ಹೊಂದುತ್ತಾನೆ.

ತಾತ್ಪರ್ಯ:— ಮಾನವನು ಪರಮಾತ್ಮನಿಂದ ಕೇವಲ ದಿನದಿನಕ್ಕೂ ಹೆಚ್ಚುವ ಮತ್ತು ಹೆಚ್ಚಿಸುವ, ಕೀರ್ತಿಕರವಾದ ಮತ್ತು ವೀರರಿಂದಲೂ, ಪ್ರಾಣಶಕ್ತಿಯಿಂದಲೂ ಯುಕ್ತವಾದುದರಲ್ಲೆಲ್ಲಾ ಶ್ರೇಷ್ಠವಾದ ಐಶ್ವರ್ಯವನ್ನು ಪಡೆಯುತ್ತಾನೆ.

**ವ್ಯಾಖ್ಯಾನ:** ಈ ಮಂತ್ರದಲ್ಲಿ ಬಂದಿರುವ 'ರಯಿ' ಎಂಬ ಶಬ್ದಕ್ಕೆ ಧನ, ಸಂಪತ್ತು, ಐಶ್ವರ್ಯ-ಎಂಬ ಅರ್ಥವಿದೆ. ಪರಮಾತ್ಮನಿಂದ ಮಾನವರಿಗೆ ಸಂಪತ್ತು ಸಿಕ್ಕುತ್ತದೆ ಎಂಬುದು ಈ ಮಂತ್ರದಲ್ಲಿನ ಮುಖ್ಯ ವಾಕ್ಯ. "ದುಡ್ಡು, ಕಾಸು ಸಂಪಾದಿಸುವುದಕ್ಕೆ ದೇವರೇಕೆ ಬೇಕು? ಲಂಚಗುಳಿತನ, ಕಾಳಸಂತೆ, ಲೂಟಿ, ದರೋಡೆ, ವಿಶ್ವಾಸಘಾತ – ಮೊದಲಾದುವುಗಳಿಂದ ಕೋಟಿ ಗಟ್ಟಲೆ ಸಂಪಾದಿಸಿದವರು, ಸಂಪಾದಿಸುತ್ತಿರುವವರು, ಇಲ್ಲವೇ?" - ಎಂದು ಸಹಜವಾದ ಸಂದೇಹ ಹೃದಯದಲ್ಲಿ ಹುಟ್ಟುತ್ತದೆ. ಆಸ್ತಿಕಭಾವನೆಯಿಂದ ಸಂಪಾದಿಸುವುದಕ್ಕಿಂತ ಹೆಚ್ಚು ಹಣವನ್ನು ಅನ್ಯಾಯ–ಅಸತ್ಯಗಳ ಮಾರ್ಗದಿಂದ ಸಂಪಾದಿಸಬಹುದೆಂಬುದು ಸತ್ಯ. ಆದರೆ ಆ ರೀತಿ ಸಂಪಾದಿಸಿದ ಸಂಪತ್ತು ವಿಪತ್ಕರವಾದೀತೇ ಹೊರತು, ಹಿತಕರವಾಗಲಾರದು. ಕೇವಲ ಧನಾರ್ಜನೆಯಲ್ಲ; ಆ ಧನಾರ್ಜನೆಯ ಮಾರ್ಗವೂ ಶುದ್ಧವಾಗಿದ್ದಲ್ಲಿ ಮಾನವಹಿತ ಸಿದ್ಧಿಸೀತೇ ಹೊರತು, ಸಾಧನ ಅಶುದ್ಧವಾಗಿದ್ದಲ್ಲಿ ಫಲ ಎಂದಿಗೂ ಮಧುರವಾಗಲಾರದು. ಋಗ್ವೇದ ಇದೇ ತತ್ತ್ವವನ್ನು ಈ ಮಂತ್ರದ ಮೂಲಕ ಸಾರುತ್ತಿದೆ. ಹಿಂಸೆಯಿಂದ ಹಿಂಸೆಯೇ ಹುಟ್ಟುವುದು, ಅನ್ಯಾಯದಿಂದ ಅನ್ಯಾಯವೇ ವರ್ಧಿಸುವುದು. ಅಸಾಧುಮಾರ್ಗಾಶ್ರಯ ದಿಂದ ಸಾಧು ಪರಿಣಾಮ ಲಭಿಸದು.

ಸಂಪತ್ತು, ಧನೈಶ್ವರ್ಯ ತ್ಯಾಜ್ಯವಲ್ಲ. ಪ್ರಾಣಶಕ್ತಿ ತನ್ನ ಕೆಲಸವನ್ನು ನಡೆಸುವ ಸ್ಥಿತಿಯಲ್ಲಿರಬೇಕಾದರೆ, 'ರಯಿ' ಬೇಕೇಬೇಕು. **''ರಯಿರ್ವಾ ಏತತ್ಸರ್ವಂ ಯನ್ಮೂರ್ತಂಚಾಮೂರ್ತಂಚ॥** [ಪ್ರಶ್ನ- ೧. ೫.] "ಮೂರ್ತ ರೂಪವಾದ ಪೃಥ್ವಿ, ಅಪ್, ತೇಜ ಈ ಮೂರು, ಅಮೂರ್ತವಾದ ವಾಯು ಹಾಗೂ ಆಕಾಶ ಇವೆರಡೂ, ಎಲ್ಲವೂ, ರಯಿಯೇ" ಎಂಬ ಉಪನಿಷದ್ವಾಕ್ಯ ನೆನಪಿನಲ್ಲಿದ್ದರೆ, ರಯಿಯ ಬೆಂಬಲವಿಲ್ಲದೆ, ಜೀವನು ಯಾವ ವ್ಯವ ಹಾರವನ್ನೂ ಸಾಧಿಸಲಾರನೆಂಬುದು ಗೊತ್ತಾಗುತ್ತದೆ. ವಸ್ತುತಃ ಭಗವಂತನ ರಚನೆಯಾದ ಮಣ್ಣು ನೀರು, ಗಾಳಿ, ಬೆಂಕಿ, ಆಕಾಶ ಎಲ್ಲದರಲ್ಲಿಯೂ ಅದ್ಭುತವಾದ ಐಶ್ವರ್ಯ ಅಡಕ ವಾಗಿದೆ. ದೇವರಿಲ್ಲವೆಂಬ ನಾಸ್ತಿಕರು ತಮ್ಮ ವೈಜ್ಞಾನಿಕ ಶಕ್ತಿಯನ್ನು ವಿನಿಯೋಗಿಸಿ ಯಾವ ಯಾವ ನವ-ನೂತನ ಆವಿಷ್ಕಾರಗಳನ್ನು ಮಾಡುತ್ತಾರೋ. ಅವೆಲ್ಲವೂ ಈಶ್ವರಕೃತವಾದ ಜಗತ್ತಿನ ಬೇರೆಬೇರೆ ದ್ರವ್ಯಗಳ ಉಪಯೋಗದಿಂದಲೇ ಆಗುತ್ತವೆ, ಯಾವ ರಷ್ಯನ್ ವೈಜ್ಞಾ ನಿಕರು ಚಂದ್ರನ ಮೇಲೆ ತಮ್ಮ ರಾಷ್ಟ್ರದಚಿಹ್ನೆಯನ್ನು ಸ್ಥಾಪಿಸಿದರೋ, ಅವರ ಮೆದುಳನ್ನು ಅವರೇ ರಚಿಸಿಕೊಳ್ಳಲಿಲ್ಲ; ಅವರು ಯಂತ್ರೋಪಕರಣ ಸಿದ್ಧಿಗಾಗಿ ಉಪಯೋಗಿಸಿದ ದ್ರವ್ಯ ಗಳನ್ನು ಅವರು ಸೃಷ್ಟಿಸಲಿಲ್ಲ. ಅವರಿಗೆ ಆ ಅನುಕೂಲ್ಯ ಕಲ್ಪಿಸಿಕೊಟ್ಟ ಜಗತ್ಕರ್ತೀ ಚೇತನ ಶಕ್ತಿ ಬೇರೊಂದಿದೆ. ಅದನ್ನು ಗುರುತಿಸಿದಾಗ, ವೈಜ್ಞಾನಿಕ ಅಹಂಕಾರ ಅಳಿಯುತ್ತದೆ. ಹೃದಯದಲ್ಲಿ ವಿನಯ ಉದ್ಭವಿಸುತ್ತದೆ. ಆಗವರು ವೈಜ್ಞಾನಿಕ ಪ್ರಗತಿಯಿಂದ ಸಂಪಾದಿ ಸುವ ಬಗೆಬಗೆಯ ಸಂಪತ್ತು 'ದಿವೇದಿವೇ ಪೋಷಂ' – ದಿನದಿನಕ್ಕೂ ಹೆಚ್ಚುವಂತಹುದೂ, ಬೆಳೆಯುವರನ್ನೂ ವೃದ್ಧಿಗೆ ತರುವಂತಹುದೂ ಆಗುತ್ತದೆ. 'ಯಶಸಂ' ಶಾಶ್ವತವಾದ ಕೀರ್ತಿ ಯನ್ನು ತರುವಂತಹುದಾಗುತ್ತದೆ. ['ವೀರವತ್ತಮಂ'] - ಅತ್ಯಂತ ವೀರಪುರುಷರಿಗೆ ಎಂದರೆ ಶಕ್ತಿಶಾಲಿಗಳೂ, ಮೇಧಾವಿಗಳೂ ಆದ ಮಾನವರಿಗೆ ಮತ್ತು 'ಪ್ರಾಣ'ಗಳಿಗೆ – ಜೀವವಶಕ್ತಿಗೆ

ಸರ್ವೋತ್ತಮವಾದ ಆಶ್ರಯವನ್ನು ಕೊಡುವಂತಹದಾಗುತ್ತದೆ. ಹಾಗಲ್ಲದೇ ದೇವರನ್ನು ಮರೆತು, "ದುಡ್ಡೇ ದೊಡ್ಡದು" ಎಂಬ ಹೆಡ್ಡತನಕ್ಕೆ ಸಿಕ್ಕಿ, ಐಶ್ವರ್ಯ ಸಂಪಾದಿಸ ಹತ್ತಿದರೆ, ನ್ಯಾಯ–ಅನ್ಯಾಯ, ಸತ್ಯ-ಅಸತ್ಯ, ಒಳಿತು-ಕೆಡಕು ಎಂಬ ವಿವೇಕವೇ ಮಣ್ಣುಗೂಡಿ, ಲೋಭದ ವಿಶಾಲಗರ್ಭದಲ್ಲಿ ಸದ್ಭಾವನೆಯೆಲ್ಲಾ ಅಡಗಿಹೋಗಿ, ಮಾನವನು ದಾನವನಾಗಿ ಹೋಗು ತ್ತಾನೆ. ಮತ್ತೆ ಅವನು ಸಂಪಾದಿಸುವ ಸಂಪತ್ತು 'ಪೋಷಕ'ವಾಗದೆ 'ಮಾರಕ'ವಾಗಿ, ಯಶಸ್ಕರವಾಗದೆ 'ಅಕೀರ್ತಿ'ಕರವಾಗಿ, 'ವೀರವತ್ತಮ'ವಾಗದೆ ಸರ್ವರ ಜೀವನಕ್ಕೂ ಮೃತ್ಯು ಪ್ರಾಯವಾಗಿ ಪರಿಣಮಿಸುವುದು.

ಅದೇ ಕಾರಣದಿಂದ, ಈ ಮಂತ್ರ, "ನೀನು ಪಡೆಯುವ ಸಂಪತ್ತು ಪುಷ್ಟಿದಾಯಕ ವಾಗಿಯೂ, ಯಶಸ್ಕರವಾಗಿಯೂ, ಜೀವಹಿತಸಾಧಕವಾಗಿಯೂ ಇದ್ದು, ವಿಪತ್ತಾಗದೆ ಸಂಪ ತ್ತಾಗಿಯೇ ಉಳಿಯಬೇಕೆಂಬ ಕಾಮನೆ ನಿನಗಿದ್ದಲ್ಲಿ, ನೀನು ಆ ಸಂಪತ್ತನ್ನು ಕೇವಲ ಜಡಾ ರಾಧನೆಯಿಂದಲ್ಲ; ತೇಜೋಮಯನೂ, ಸಕಲ ಕಲ್ಯಾಣ ಗುಣಗಳ ಆಗಾರನೂ ಆದ ಪರಮಾತ್ಮನನ್ನು ಗಮನದಲ್ಲಿಟ್ಟುಕೊಂಡು ಪಡೆದುಕೊ. ಆಸ್ತಿಕನ ಸಂಪತ್ತು ಅವನಿಗೂ ಸಂಪತ್ತೇ; ಇತರರಿಗೂ ಸಂಪತ್ತೇ; ನಾಸ್ತಿಕನ ಸಂಪತ್ತು ಅವನಿಗೂ ವಿಪತ್ತೇ; ಇತರರಿಗೂ ವಿಪತ್ತೇ" ಎಂದು ತನ್ನದೇ ಆದ ಶೈಲಿಯಲ್ಲಿ ಸಾರುತ್ತಲಿದೆ. ಆಸ್ತಿಕತ್ವ ಸದ್ಭಾವನೆಗಳ ಸಾಗರ; ನಾಸ್ತಿಕತ್ವ ದುರ್ಭಾವನೆಗಳ ಆಗರ. ಸದ್ಭಾವನೆಗಳಿಂದ ಗಳಿಸಿದ ಸಂಪತ್ತೇ ನಿಜವಾದ ಸಂಪತ್ತು; ದುರ್ಭಾವನೆಗಳಿಂದ ಗಳಿಸಿದ ಸಂಪತ್ತು ಎಂದಿದ್ದರೂ ವಿಪತ್ತೇ!

## ಸಂಹಿತಾ ಭಾಗ

**ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ।**

**ಸ ಇದ್ದೇವೇಷು ಗಚ್ಛತಿ ॥೪॥**

**ಪದಪಾಠ:–** ಅಗ್ನೇ, ಯಂ, ಯಜ್ಞಂ, ಅಧ್ವರಂ. ವಿಶ್ವತಃ, ಪರಿಭೂಃ, ಅಸಿ, ಸಃ ಇತ್. ದೇವೇಷು, ಗಚ್ಛತಿ.

**ಅನ್ವಯ:–** ಅಗ್ನೇ ಯಂ ಅಧ್ವರಂ ಯಜ್ಞಂ ವಿಶ್ವತಃ ಪರಿಭೂಃ ಅಸಿ, ಸಃ ಇತ್ ದೇವೇಷು ಗಚ್ಛತಿ.

**ಶಬ್ದಾರ್ಥ:–** [ಅಗ್ನೇ] ಬ್ರಹ್ಮಾಂಡಾಧಿನಾಯಕನೇ! (ನೀನು), [ಯಂ] ಯಾವ [ಅಧ್ವರಂ] ಹಿಂಸಾರಹಿತವಾದ, [ಯಜ್ಞಂ] ಶ್ರೇಷ್ಠತಮಕರ್ಮವನ್ನು, [ವಿಶ್ವತಃ] ಎಲ್ಲೆ ಯಿಂದಲೂ, [ಪರಿಭೂಃ] ಆವರಿಸುವವನಾಗಿ, [ಅಸಿ] ಇದ್ದೀಯೋ; [ಸಃ ಇತ್] ಅದೇ [ದೇವೇಷು] ಚೇತನ ಹಾಗೂ ಜಡತತ್ವಗಳಲ್ಲಿ, [ಗಚ್ಛತಿ] ಸೇರುತ್ತದೆ, ಮುಟ್ಟುತ್ತದೆ ಸಲ್ಲುತ್ತದ

**ತಾತ್ಪರ್ಯ:**– ಓ ಜ್ಯೋತಿರ್ಮಯನಾದ, ವಿಶ್ವನಾಯಕನಾದ ಪರಮಾತ್ಮ! ನೀನು ಹಿಂಸಾರಹಿತವಾದ, ಅಹಿಂಸಾಮಯವಾದ ಅತ್ಯಂತ ಶ್ರೇಷ್ಠಕರ್ಮವನ್ನು ಎಲ್ಲೆಡೆಯಿಂದಲೂ ಆವರಿಸುತ್ತೀಯೋ, ಆ ಶ್ರೇಷ್ಠತಮ ಕರ್ಮವೇ ಚೇತನರಾದ ಜೀವಾತ್ಮರಿಗೂ ಜಡವಾದ ಭೂತಗಳಿಗೂ ಸಲ್ಲುತ್ತದೆ.

**ವ್ಯಾಖ್ಯಾನ:**– ಈ ಮಂತ್ರದ ಶಬ್ದಾರ್ಥವೇನೋ ನೋಡಲು ಸರಳವಾಗಿಯೇ ಕಾಣುತ್ತದೆ. ಆದರೆ ಅದರ ಭಾವವನ್ನು ಗ್ರಹಿಸಲು ವಿಶೇಷ ವಿವೇಚನೆಯ ಆವಶ್ಯಕತೆಯಿದೆ. ಈ ಮಂತ್ರದ ಪ್ರಥಮ ವಾಕ್ಯಖಂಡದಲ್ಲಿ "ಅಗ್ನಿಯು ಅಧ್ವರವಾದ ಯಜ್ಞವನ್ನು ಎಲ್ಲೆಡೆಯಿಂದಲೂ ಆವರಿಸುತ್ತಾನೆ" ಎಂದು ಹೇಳಲ್ಪಟ್ಟಿದೆ. 'ಅಗ್ನಿ'ಯು ಪರಮಾತ್ಮನೇ-ಎಂಬುದನ್ನು ಮಾನ್ಯ ಪಾಠಕರು ಈಗಾಗಲೇ ಗ್ರಹಿಸಿದ್ದಾರೆ. ಈಗ ಅಧ್ವರ ಎಂಬ ಶಬ್ದವನ್ನು ನೋಡೋಣ. **"ಧ್ವರತಿ ಹಿಂಸಾಕರ್ಮಾ ತತ್ಪ್ರತಿಷೇಧ:"** [ನಿರುಕ್ತ:-೧.೭.] "ಧ್ವರ ಎಂದರೆ ಹಿಂಸೆ; ಅದರ ಪ್ರತಿಷೇಧಕವಾದುದೇ ಅಧ್ವರ" - ಎಂದು ಯಾಸ್ಕರೆಂದಿದ್ದಾರೆ. ಅಂದರೆ ಹಿಂಸಾರಹಿತವಾದುದು, ಪೂರ್ಣತಃ ಅಹಿಂಸಾತ್ಮಕವಾದುದು ಯಾವುದೋ ಅದೇ ಅಧ್ವರ. **"ಅಧ್ವರ-ಇತಿ ಯಜ್ಞನಾಮ"** "ಅಧ್ವರವೆಂದರೆ ಯಜ್ಞ" - ಎಂದೂ ಸಹ ಯಾಸ್ಕರು (೧.೭.) ಹೇಳಿದ್ದಾರೆ. ಆದರೆ, ಇಲ್ಲಿ "ಯಜ್ಞ" - ಎಂಬ ಶಬ್ದವು ಪ್ರತ್ಯೇಕವಾಗಿಯೇ ಬಂದಿರುವುದರಿಂದ, ಈ ಮಂತ್ರದಲ್ಲಿ 'ಅಧ್ವರ'ವನ್ನೂ ಯಜ್ಞ ಎಂದೇ ತಿಳಿದರೆ "ಯಜ್ಞವಾದ ಯಜ್ಞ" ಎಂಬ ಭ್ರಾಂತಿಜನಕ ನಿರ್ಣಯ ಹೊರಟು, ಭಾವ ತಿಳಿಯದಂತಾಗುವುದು. ಆದುದರಿಂದ, ಇಲ್ಲಿ "ಅಧ್ವರ" ಎಂಬುದನ್ನು ವಿಶೇಷಣವೆಂದು ಗ್ರಹಿಸಿ, ಇದಕ್ಕೆ 'ಅಹಿಂಸಾಮಯವಾದ' ಎಂಬ ಅರ್ಥವನ್ನೇ ಮಾಡಬೇಕು.

"ಯಜ್ಞ" ಎಂಬ ಶಬ್ದಕ್ಕೂ ಮೊದಲನೆಯ ಮಂತ್ರದಲ್ಲಿ ಸಾಕಷ್ಟು ವಿಸ್ತಾರ ಕಂಡಿದ್ದೇವೆ. ಈಗ "ಯಜ್ಞ ಶ್ರೇಷ್ಠತಮಂ ಕರ್ಮ" [ಶತಪಥಃ- ೧.೭.೪೫.] "ಅತ್ಯಂತ ಶ್ರೇಷ್ಠವಾದ ಕರ್ಮವೇ ಯಜ್ಞ" ಎಂಬ ಬ್ರಾಹ್ಮಣ ವಾಕ್ಯದ ಪ್ರಮಾಣದಿಂದ ಮಾನವನು ಎಷ್ಟು ಶ್ರೇಷ್ಠಕರ್ಮಗಳನ್ನು ಮಾಡಬಲ್ಲನೋ ಅವುಗಳಲ್ಲಿಯೂ ಉತ್ತಮವಾದುದೇ ಯಜ್ಞ ಎಂದು ಗ್ರಹಿಸಿದರೆ ಸಾಕು. ಕರ್ತೃವಾದ ಜೀವಾತ್ಮನೂ ಮಾಡಬಹುದಾದ ಶ್ರೇಷ್ಠಕರ್ಮಗಳನ್ನು ಇಷ್ಟೇ ಎಂದು ನಿರ್ಧಾರವಾಗಿ ಹೇಳಿಬಿಡಲು ಸಾಧ್ಯವಿಲ್ಲ. ತನಗೆ ಮತ್ತು ಪರರಿಗೆ ಕೇಡುಮಾಡುವ ದುಷ್ಕರ್ಮಗಳನ್ನುಳಿದರೆ, ಮಿಕ್ಕ ಜೀವನ ನಿರ್ಮಾಪಕವಾದ ಪ್ರತಿಯೊಂದು ಕರ್ಮವೂ ಶ್ರೇಷ್ಠಕರ್ಮವೇ ಆಗಿರುತ್ತದೆ. ದೀನದರಿದ್ರರ ಸೇವೆ, ರೋಗಿಗಳ ಉಪಚಾರ, ಅಜ್ಞಾನಿಗಳಿಗೆ ಜ್ಞಾನದಾನ, ಆಶ್ರಿತರ ಪಾಲನೆ-ಪೋಷಣೆ ಎಲ್ಲವೂ ಶ್ರೇಷ್ಠ ಕರ್ಮಗಳೇ. ಈ ಕರ್ಮಗಳೇ ಸ್ವಾರ್ಥವನ್ನು ಇಟ್ಟುಕೊಂಡು ಮಾಡಿದಾಗ 'ಶ್ರೇಷ್ಠ'ವೆಂದೂ, ' ಪರಾರ್ಥ,ಸ್ವಾರ್ಥ' ಎರಡನ್ನೂ ಗಮನದಲ್ಲಿಟ್ಟುಕೊಂಡು ಮಾಡಿದಾಗ 'ಶ್ರೇಷ್ಠತರ'ವೆಂದೂ, ಶುದ್ಧ ಪರಾರ್ಥ ಭಾವನೆಯಿಂದ ಮಾಡಿದಾಗ "ಶ್ರೇಷ್ಠತಮ"ವೆಂದೂ ಎನಿಸಿಕೊಳ್ಳುತ್ತದೆ. ಇಂತಹ ಶುದ್ಧ ಪರಾರ್ಥಭಾವದಿಂದ ಮಾಡಲ್ಪಡುವ ಶ್ರೇಷ್ಠಕರ್ಮಗಳೇ "ಯಜ್ಞ"ಗಳು, ಮುಂದುವರಿದು

"ವಿಶ್ವತಃ ಪರಿಭೂರಸಿ" ಎಂಬುದರಲ್ಲಿ "ವಿಶ್ವತಃ" ಎಂದರೆ, 'ಎಲ್ಲೆಡೆಯಿಂದಲೂ' - ಎಂದಾಗುತ್ತದೆ. "ಪರಿಭೂಃ" - ಎಂದರೆ ಮೇಲಿದ್ದು ಆವರಿಸುವವನು, "ಮೇಲಿದ್ದು ವ್ಯಾಪಿಸುವವನು" ಎಂದರ್ಥವಾಗುತ್ತದೆ. ಹೀಗೆ 'ವಿಶ್ವತಃ ಪರಿಭೂರಸಿ' ಎಂದರೆ, 'ಮೇಲಿದ್ದು ಎಲ್ಲೆಡೆಯಿಂದಲೂ ಆವರಿಸುವವನು' ಎಂದಾಯಿತು. ಶಬ್ದಾರ್ಥವೇನೋ ಸರಿಯೇ, ಭಾವನೆ ಏನು? ಇದು ಕಾವ್ಯಮಯವಾದ ಪ್ರಯೋಗ. ಲೌಕಿಕರೂ ಸಹ, ತಮಗೆ ಪ್ರಿಯರಾದ, ತಮ್ಮ ಮೇಲೆ ಪ್ರಭಾವ ಬೀರಿರುವ ಯಾರಾದರೂ ಮಹಾಪುರುಷರ ಬಗ್ಗೆ ಮಾತನಾಡುವಾಗ "ನಮ್ಮ ಪ್ರತಿಯೊಂದು ಕೃತಿಯಮೇಲೂ ಆ ಮಹಾಪುರುಷರು ವ್ಯಾಪಿಸಿದ್ದಾರೆ; ನಮ್ಮ ತನು-ಮನ-ವಚನಗಳನ್ನೆಲ್ಲಾ ಅವರು ಆವರಿಸಿದ್ದಾರೆ ಎಂದು ಹೇಳುವುದುಂಟು. 'ಆ ಮಹಾಪುರುಷರ ಪ್ರಭಾವ ತಮ್ಮ ಪ್ರತಿಯೊಂದು ಕಾರ್ಯದಲ್ಲಿಯೂ ವ್ಯಕ್ತವಾಗುತ್ತಿದೆ' - ಎಂಬುದೇ ಆ ಬಗೆಯ ವಾಕ್ಯಗಳ ಭಾವನೆ. ಅದೇ ರೀತಿ, 'ಪರಮಾತ್ಮನು ಅಹಿಂಸಾಮಯವಾದ ಸರ್ವೋತ್ಕೃಷ್ಟ ಕರ್ಮಗಳನ್ನು ಎಲ್ಲೆಡೆಯಿಂದಲೂ ಆವರಿಸಿದ್ದಾನೆ' - ಎಂದರೆ, 'ಅಂತಹ ಅಹಿಂಸಾತ್ಮಕ ಶುಭಕರ್ಮಗಳ ಮೇಲೆಲ್ಲಾ ಪರಮಾತ್ಮನ ಪ್ರಭಾವ ಬಿದ್ದಿದೆ; ಅಥವಾ ಅಂತಹ ಶುಭಕರ್ಮಗಳಲ್ಲಿ ಪರಮಾತ್ಮನ ಪ್ರಭಾವ ವ್ಯಕ್ತವಾಗುತ್ತದೆ' ಎಂಬುದೇ ಗ್ರಾಹ್ಯವಾದ ಭಾವನೆ. ವಸ್ತುತಃ ಜಗಜ್ಜನಕನ ಪ್ರಭಾವ ವ್ಯಕ್ತವಾಗುವುದು ಅಹಿಂಸಾತ್ಮಕ ಸತ್ಕರ್ಮಗಳಲ್ಲೇ ಹೊರತು, ಹಿಂಸಾತ್ಮಕವಾದ ದುಷ್ಕರ್ಮಗಳಲ್ಲಲ್ಲ.

ಮುಂದಿನ ಮಂತ್ರಭಾಗ, 'ಸ ಇದ್ದೇವೇಷು ಗಚ್ಛತಿ' - ಎಂಬ ವಾಕ್ಯ, ಇದೇ ಭಾವನೆಯನ್ನು ವಿಶದೀಕರಿಸುತ್ತದೆ. "ಇಂತಹ ಸತ್ಕರ್ಮವೇ ದೇವಜನರಿಗೆ ಸಲ್ಲುತ್ತದೆ." – "ಅಂತಹ ಸತ್ಕರ್ಮವೇ ಜಡಭೂತಗಳಲ್ಲಿ ನಡೆಯುತ್ತದೆ" - ಎಂಬೆರಡು ಅರ್ಥಗಳು ಆ ವಾಕ್ಯಕ್ಕಿವೆ; ಅಂತೆಯೇ "ದೇವ ಜನರು" – ಎಂದಾಗ "ವಿದ್ವಾಂಸೋಹಿ ದೇವಾಃ ಸತ್ಯಮಯಾ ಉದೇವಾಃ, ಜಾಗೃತಿ ವೈ ದೇವಾಃ" [ಶತಪಥ] "ವಿದ್ವಾಂಸರೇ ದೇವ ಜನರು; ಸತ್ಯವಂತರೇ ದೇವ ಜನರು; ಜಾಗೃತರೇ ದೇವ ಜನರು" – ಎಂಬ ಶಾಸ್ತ್ರಾಧಾರಗಳಿಂದ, ಜ್ಞಾನಿಗಳೂ, ಸದಾಚಾರಿಗಳೂ. ಆಲಸ್ಯರಹಿತರೂ ಆದ ಉತ್ತಮ ಮಾನವರನ್ನು ಗ್ರಹಿಸಬೇಕು. ಅಂತಹ ಸತ್ಪುರುಷರಿಗೆ, ಅಹಿಂಸಾತ್ಮಕವಾದ, ಕೇವಲ ಪರಾರ್ಥಬುದ್ಧಿಯಿಂದ ಮಾಡಿದ ಅಥವಾ ಮಾಡುವ ಶುಭಕರ್ಮ ಮಾತ್ರ ಸಲ್ಲುತ್ತದೆ ಅಂದರೆ ಒಪ್ಪುತ್ತದೆ. 'ದೇವ' ಎಂಬ ಶಬ್ದಕ್ಕೆ ಜಡತತ್ತ್ವಗಳು ಎಂಬರ್ಥ ಗ್ರಹಿಸಿದಾಗ ಪ್ರಕೃತಿಯ ಪ್ರತಿಯೊಂದು ಅಣುವೂ ಕೇವಲ ಪರಾರ್ಥಕ್ಕಾಗಿಯೇ ಪ್ರವರ್ತಿಸುತ್ತಿರುವುದು ಗಮನಕ್ಕೆ ಬರಬೇಕು. ಹೀಗೆ, **ಜಗದಂತರಾತ್ಮನ ನಿಜವಾದ ಪ್ರಭಾವ ವ್ಯಕ್ತವಾಗುವುದು ಅಹಿಂಸಾತ್ಮಕ ಶುದ್ಧ ಪರಾರ್ಥಯುಕ್ತ ಶ್ರೇಷ್ಠ ಕರ್ಮದಲ್ಲಿ; ಅದೇ ಸತ್ಪುರುಷರಿಗೆ ಪ್ರಿಯವಾದುದು. ಅದೇ ಪ್ರಕೃತಿಯಲ್ಲಿಯೂ ಕಂಡು ಬರುತ್ತಿದೆ**"-ಎಂಬ ಆದರ್ಶಮಯ ಭಾವನೆ ಈ ಮಂತ್ರದಲ್ಲಿ ವ್ಯಕ್ತವಾಗಿದೆ.

**ಈ ವೇದಭಾಷ್ಯದ ೧೨ ಪುಟಗಳ ಪೂರ್ಣವೆಚ್ಚ ಶ್ರೀಮತಿ ಕಿರಣ ಯಾನೆ ಸುಜಾತಾದೇವಿ ಕಾಮತ್ ಉಡುಪಿ ಇವರ ಸೇವೆ.**

### ಸಂಹಿತಾ ಭಾಗ

**ಅಗ್ನಿರ್ಹೋತಾ ಕವಿಕ್ರತುಃ ಸತ್ಯಶ್ಚಿತ್ರಶ್ರವಸ್ತಮಃ ।**

**ದೇವೋ ದೇವೇಭಿರಾಗಮತ್ ॥೫॥**

**ಪದಪಾಠ:–** ಅಗ್ನಿಃ, ಹೋತಾ, ಕವಿಕ್ರತುಃ, ಸತ್ಯಃ, ಚಿತ್ರಶ್ರವಸ್ತಮಃ, ದೇವಃ

ದೇವೇಭಿಃ, ಆ, ಗಮತ್ ॥

**ಅನ್ವಯ:–** [ಹೋತಾ ಕವಿಕ್ರತುಃ ಸತ್ಯಃ, ಚಿತ್ರಶ್ರವಸ್ತಮಃ ದೇವಃ ಅಗ್ನಿಃ ದೇವೇಭಿಃ ಆಗಮತ್ ॥

ಶಬ್ದಾರ್ಥ:– [ಹೋತಾ] ಸರ್ವದಾತೃವೂ, ಸರ್ವಗ್ರಹೀತೃವೂ, [ಕವಿಕ್ರತುಃ] ಸರ್ವಜ್ಞನಾದ ವಿಚಾರಶೀಲಕ್ರಿಯಾವಂತನೂ, [ಸತ್ಯಃ] ತ್ರಿಕಾಲಾಬಾಧಿತನಾದ, ಎಂದಿಗೂ, ಯಾವುದೇ ಕಾರಣದಿಂದಲೂ ಸ್ವರೂಪಪರಿವರ್ತನಮಾಡದ ಸತ್ಯಸ್ವರೂಪನೂ, [ಚಿತ್ರಶ್ರವಸ್ತಮಃ] ಅದ್ಭುತವಾದ ಯಶಸ್ಸನ್ನು ಹೊಂದಿರುವವರಲ್ಲಿಯೂ ಕೂಡ ಅತ್ಯಂತ ಉತ್ತಮನೂ, [ದೇವಃ] ಸರ್ವಪ್ರಕಾಶಕ ಜ್ಯೋತಿರ್ಮಯನೂ ಆದ. [ಅಗ್ನಿಃ] ಅಖಿಲ ಬ್ರಹ್ಮಾಂಡಾಧಿನಾಯಕನಾದ ಭಗವಂತನು, [ದೇವೇಭಿಃ] ದಿವ್ಯ ಶಕ್ತಿಗಳಿಂದಲೂ, ಸತ್ಯಾಚಾರವಿಚಾರ ಪ್ರಸರಣದಲ್ಲಿ ನಿರತರಾದ ವಿದ್ವಾಂಸರಿಂದಲೂ, [ಆ ಗಮತ್] ಅನುಭವಕ್ಕೆ ಬರುತ್ತಾನೆ.

**ವ್ಯಾಖ್ಯಾನ:–** ಪ್ರಥಮ ಮಂತ್ರದಲ್ಲಿ ವರ್ಣಿತನಾದ ಸರ್ವೇಶ್ವರನ ಮತ್ತೂ ಕೆಲವು ವಿಶಿಷ್ಟ ಗುಣಗಳನ್ನು ಈ ಮಂತ್ರ ಅಭಿವರ್ಣಿಸುತ್ತಿದೆ. ಒಂದೊಂದು ಶಬ್ದವೂ ಒಂದು ಬೃಹದ್ಗ್ರಂಥವೇ! ಬಿಚ್ಚಿನೋಡುವ ಧೀರನೊಬ್ಬ ಬೇಕಷ್ಟೇ. " ಹು ದಾನಾದನಯೋಃ ಆದಾನೇ ಚೇತ್ಯೇಕೇ." – ಎಂಬ ಧಾತು ಹೋತೃ ಶಬ್ದದ ಮೂಲ. "ದಾನಮಾಡುವವನು" ಹೋತೃ; ಭಕ್ಷಿಸುವವನು ಹೋತೃ; ತೆಗೆದುಕೊಳ್ಳುವವನೂ ಹೋತೃವೇ – ಎಂದು ಕೆಲವರ ಮತ" – ಇದು ಹು ಧಾತುವಿನ ವಿವರಣೆ. ತೆಗೆದುಕೊಳ್ಳದೆ ಭಕ್ಷಿಸುವುದು ಸಾಧ್ಯವಿಲ್ಲದ ಕಾರಣ, 'ಆದಾನ' ವು 'ಅದನ' ದಲ್ಲಿಯೇ ಅಡಕವಾಗಿದೆ – ಎಂದು ಭಾವಿಸಿ, ದಾನ ಹಾಗೂ ಅದನವನ್ನು, ಅಥವಾ ದಾನ ಹಾಗೂ ಆದಾನಗಳನ್ನೇ ಸ್ವೀಕರಿಸಿದರೆ, ಧಾತ್ವರ್ಥಕ್ಕೇನೂ ಚ್ಯುತಿಬಾರದು. ಪ್ರಾಯಶಃ ಇದೇ ದೃಷ್ಟಿಯಿಂದಿರಬಹುದು; ಋಗ್ವೇದ **"ಶುಚೀ ವೋ ಹವ್ಯಾ ಮರುತಃ ಶುಚೀನಾಂ ಶುಚಿಂ ಹಿನೋಮ್ಯಧ್ವರಂ ಶುಚಿಭ್ಯಃ"** [7.56.12.] – " [ಮರುತಃ] ಸಂಯತಮಾನಪರೇ ! ಮರಣಧರ್ಮಾ ಮರ್ತ್ಯರೇ!

[ಶುಚೀನಾಂ ವಃ] ಶುಚಿಗಳಾದ, ನಿಮ್ಮ ಸಲುವಾಗಿ. [ಶುಚೀಹವ್ಯಾ] ಶುಭ್ರವಾದ ಆದಾನ-ಪ್ರದಾನಗಳನ್ನೂ. [ಶುಚಿಂ ಅಧ್ವರಂ] ಶುಚಿಯೇ ಆದ ಹಿಂಸಾರಹಿತ ಯಜ್ಞವನ್ನೂ, [ಹಿನೋಮೀ] ವಿಧಿಸುತ್ತೇನೆ." ಎಂದು ಭಗವಂತನು ಹೇಳುತ್ತಿದ್ದಾನೆ. ತಾನು ಸ್ವತಃ ಶುಚಿಯಾದ ಆದಾನ – ಪ್ರದಾನಗಳನ್ನು ವ್ಯವಹರಿಸುವ ಪರಮಾತ್ಮ, ಮಾನವರಿಗೂ ಅದನ್ನೇ ಉಪದೇಶಿಸುವುದು ಸಹಜ. ನಾವು, ಜೀವರಾದ ನಾವು ಯಾಚಿಸದಿದ್ದರೂ ಕೂಡ, ಈ ಮಹಾಪ್ರಭು ಕರುಣಿಸಿರುವ ದಾನಗಳಿಗೆ ಇತಿ - ಮಿತಿಗಳೇನಾದರೂ ಇದೆಯೇ ? ಸ್ವತಃ ಋಗ್ವೇದ ಹೇಳುತ್ತಿದೆ:- **ಭೂರಿದಾ ಭೂರಿ ದೇಹಿ ನೋ ಮಾ ದಭ್ರಂ ಭೂರ್ಯಾ ಭರ ಭೂರಿ ಘೇದಿಂದ್ರ ದಿತ್ಸಸಿ ॥** [4.32.20] - " [ಇಂದ್ರ] ಓ ಇಂದುವಿಗಾಗಿ, ಜೀವರಿಗಾಗಿ ಕರಗುವ ದಯಾಮಯ ದೇವ! [ಭೂರಿದಾ] ನೀನು ಸ್ವಭಾವತಃ ಬಹಳ ಕೊಡುವವನಾಗಿರುವೆ. [ನಃ] ನಮಗೆ, [ಭೂರಿ ದೇಹಿ] ಹೆಚ್ಚಾಗಿಯೆ ಕೊಡು. [ದಭ್ರಂಮಾ] ಅಲ್ಪವಲ್ಲ; [ಭೂರಿ ಆ ಭರ] ಪುಷ್ಕಳವಾಗಿಯೇ ಕೊಡುತ್ತಾ ಹೋಗು. [ಘ] ಸತ್ಯವಾಗಿ, [ಭೂರಿ] ನೀನು ಅಧಿಕವಾಗಿಯೇ, [ದಿತ್ಸಸಿ] ಕೊಡಬಯಸುತ್ತೀಯೆ. ಇದು ಶಾಶ್ವತ ಸತ್ಯ. ಮಾನವ ಹಾಗು ಮಾನವೇತರ ಜೀವರು ಇಂದು ಏನೇನು ಅನುಭವಿಸುತ್ತಿದ್ದಾರೋ, ಅದೆಲ್ಲವೂ ಆ ದಯಾಮಯನ ದಾನವೇ! ಮಾನವ ಎಷ್ಟು ಕೃತಜ್ಞನಾಗಿದ್ದರೂ, ಆ ಭಗವಂತನ ದಾನಕ್ಕಾಗಿ ಸಾಕಷ್ಟು ವಂದನೆ ಸಲ್ಲಿಸಲಾರನು. ಈಗ ಹೋತೃವಿನ ಇನ್ನೊಂದು ರೂಪ ಆದಾತೃತ್ವ ತೆಗೆದು ಕೊಳ್ಳುತ್ತಾನೆ ಕೂಡ; ಭಕ್ಷಿಸುತ್ತಾನೆ ಕೂಡ ಆ ಭಗವಂತ. ಆ ಪ್ರಾಪ್ತಸರ್ವಸ್ವ ಹಾಗೂ ನಿತ್ಯತೃಪ್ತನಾದ ಆ ದೇವ ದೇವ ಭಕ್ಷಿಸಬೇಕಾದುದೇನಿದೆ ? ವೇದಾಂತ ದರ್ಶನದಲ್ಲಿ ಮಹರ್ಷಿ ವ್ಯಾಸರು - **"ಅತ್ತಾ ಚರಾಚರಗ್ರಹಣಾತ್ "** [1.2.9] - " ಪ್ರಳಯಕಾಲದಲ್ಲಿ ಚರಾಚರ ವಿಶ್ವವನ್ನು ತನ್ನಲ್ಲಿಯೇ ಅಡಗಿಸಿಕೊಳ್ಳುವುದರಿಂದ ಬ್ರಹ್ಮವನ್ನು 'ಅತ್ತೃ' ಎಂದರೆ 'ಭಕ್ಷಕ' ಎನ್ನುತ್ತಾರೆ." ಎಂಬುದೀ ಸೂತ್ರದರ್ಥ. ಯಜುರ್ವೇದದಲ್ಲಿ ನಾವು **"ತಸ್ಮಿನ್ನಿದಂ ಸಂಚ ವಿಚೈತಿ ಸರ್ವಂ "** [32.8]- "ಅವನಲ್ಲಿಯೇ ಈ ಎಲ್ಲವೂ ಒಟ್ಟಾಗುತ್ತದೆ; ಮತ್ತು ಚದುರಿಯೂ ಹೋಗುತ್ತದೆ." - ಎಂದು ಓದುತ್ತೇವೆ. ಪ್ರಳಯಕಾಲದಲ್ಲಿ ಈ ಸಮಸ್ತ ವಿಶ್ವವನ್ನೂ ಕಾರ್ಯರೂಪದಿಂದ ಕಾರಣರೂಪದಲ್ಲಿ ಪರಿವರ್ತಿಸುತ್ತಾನೆ. ಇದೇ ಪರಮಾತ್ಮನು ಮಾಡುವ 'ಅದನ' ಭಕ್ಷಣ. ಇದೇ ಕಾರಣದಿಂದ ಅವನು "ಅತ್ತಾ" - ಭಕ್ಷಕ.

ಪರಮಾತ್ಮನ ಹೋತೃತ್ವದ ವಿವರಣಾ ನಂತರ, ನಾವು ಗಮನಿಸಬೇಕಾಗಿರುವುದು 'ಕವಿಕ್ರತುಃ' ಎಂಬ ಶಬ್ದವನ್ನು. ಇದೊಂದು ಸಮಸ್ತ (ಸಮಾಸ ಬದ್ಧ) ಪದ. ಕವಿಯಾದ ಕ್ರತು ಪರಮಾತ್ಮ. ಕವಿಶಬ್ದದ ವಿಸ್ತಾರ ಬಹಳವಿದೆ. ಯಾಸ್ಕರು **"ಮೇಧಾವೀ ಕವಿಃ। ಕವಿಃ ಕ್ರಾಂತದರ್ಶನೋ ಭವತಿ. ಕವತೇರ್ವಾ."** – [ನಿರುಕ್ತ, ದೈವತ 6.2.13.2] "ಮೇಧಾವಿಯೇ ಕವಿ. ಆದುದನ್ನು, ಆಗುತ್ತಿರುವುದನ್ನು ಯಥಾವತ್ತಾಗಿ ತಿಳಿಯುವವನು ಕವಿ. ಅಥವಾ ಶಬ್ದಗಳ ಮೂಲಕ ಉಪದೇಶಿಸುವವನು ಕವಿ." –ಎಂದಿದ್ದಾರೆ. ಸರ್ವಜ್ಞನಾದ ಪರಮಾತ್ಮನೇ ನಿಜವಾದ ಕವಿ. ಯಾಸ್ಕರು ಹೇಳಿರುವ ಸರ್ವಲಕ್ಷಣಗಳೂ ಪೂರ್ಣತಃ

ಬಳಸುವ ಶಬ್ದಕ್ಕೂ, ಈ ಸತ್ಯಕ್ಕೂ ಸಂಬಂಧವಿಲ್ಲ. ಈ ಸತ್ಯಶಬ್ದ ಅಭಾವಕ್ಕೆ ವಿರುದ್ಧವಾದ 'ಭಾವ' ಎಂಬುದರ ಸೂಚಕ ಈ ಸತ್ಯಶಬ್ದ. ಅನಾದಿ-ಅನಂತವಾದ, ನಿತ್ಯ-ಶಾಶ್ವತವಾದ ಅಸ್ತಿತ್ವವನ್ನು ತೋರಿಸುವ ಈ ಶಬ್ದಕ್ಕೆ ಕಲ್ಪಿತಾರ್ಥ ಮಾಡಬಾರದು. **"ಸತ್ಯಮಿದ್ವಾ ಉ ತಂ ವಯಂ ಇಂದ್ರಂ ಸ್ತವಾಮ ನಾನೃತಂ॥"** [ಋಗ್ವೇದ:- 8.62.12.]- ಕೇವಲ ಸತ್ಯನೇ ಆದ ಆ ಸರ್ವಶಕ್ತಿಮಾನ್, ಸರ್ವೈಶ್ವರ್ಯ ಸಂಪನ್ನ ಭಗವಂತನನ್ನೇ ನಾವು ಸ್ತುತಿಸೋಣ; ಅನೃತನಾದವನನಲ್ಲ." ಎಂಬ ಋಗುಕ್ತಿ ಭಗವಂತನ ಸತ್ಯತ್ವವನ್ನು ವರ್ಣಿಸುತ್ತಿದೆ. ಭಗವಂತನು ಕಲ್ಪಿತನಾದ, ಕೇವಲ ಊಹಾಪೋಹದ ವಸ್ತುವಲ್ಲ; ಮನಸ್ಸಿನ ಮಂಡಿಗೆಯುಲ್ಲ. ಅವನ ಇರುವಿಕೆ ಅನ್ಯಸಾಪೇಕ್ಷವಲ್ಲ. ಯಾರು ಬೇಕಾದರೂ "ಅವನಿಲ್ಲ" –ಎಂದು ಎಷ್ಟು ಜೋರಾಗಿ ಬೇಕಾದರೂ ಕೂಗಲಿ; ಅವನ ಅಸ್ತಿತ್ವಕ್ಕೆ ಭಂಗಬಾರದು ಮತ್ತು ಯಾರೆಷ್ಟೇ ಒತ್ತಾಯ ಮಾಡಲಿ, ನಿರಾಕಾರ - ನಿರ್ವಿಕಾರನಾದ, ಸರ್ವವ್ಯಾಪಕ - ಸರ್ವಜ್ಞನಾದ ಅವನ ಸ್ವರೂಪದಲ್ಲಿ ಪರಿವರ್ತನೆಯುಂಟಾಗಿ ಅವನು ಸಾಕಾರ - ಸವಿಕಾರನಾಗನು; ಏಕದೇಶೀಯ ಅಲ್ಪಜ್ಞನೂ ಆಗಲಾರನು. ಅವತಾರವಾದ, ವಿಗ್ರಹಾರಾಧನೆ - ಇವಾವುದೂ ಅವನ ವಿಷಯಕ್ಕೆ ಮೂರುಕಾಲಕ್ಕೂ ಅನ್ವಯಿಸುವುದಿಲ್ಲ. ಯಾಸ್ಕರು ಸ್ಪಷ್ಟವಾಗಿಯೇ **"ಸತ್ಯಂಕಸ್ಮಾತ್? ಸತ್ಸುತಾಯತೇ ಸತ್ಪ್ರಭವಂ ಭವತೀತಿವಾ."** [ನಿರುಕ್ತ:- 3.13.] ಎಂದಿದ್ದಾರೆ, "ಸತ್ಯನೆಂಬುದೇಕೆ ? ಸದ್ರೂಪರೇ ಆದ ಜೀವರಲ್ಲಿ ಹಾಗೂ ಪ್ರಕೃತಿಯಲ್ಲಿ ವ್ಯಾಪಕನಾಗಿರುವುದರಿಂದ; ಅಥವಾ ಸತ್ಯರಾದ ಜೀವರಿಂದ ಅನುಭವಗಮ್ಯನಾಗಿ ವ್ಯಕ್ತನಾಗುವುದರಿಂದ ಸತ್ಯ – ಎನ್ನುತ್ತಾರೆ." ಎಂದಿದರ ಭಾವ. ಎಂದರೆ 'ಪ್ರತ್ಯಭಿಜ್ಞಾ' ಇಲ್ಲದೆ, ಯಾವುದೇ ವಸ್ತುವಿನ ಕಲ್ಪನೆ ಕಿಂಚಿತ್ತೂ ಇಲ್ಲದೆ, 'ಅದು ಇದೆ ಅಥವಾ ಇಲ್ಲ' ಎನ್ನಲಾಗುವುದಿಲ್ಲ. ಸತ್ಯರಾದ ಜೀವರು, ತಮ್ಮ ಸಾಮರ್ಥ್ಯದ ಪರಿಧಿಯಿಂದ ಹೊರಗಿರುವ, ಜ್ಞಾನ ಮತ್ತು ನಿಯಮ ಸಮನ್ವಿತವಾದ ಬ್ರಹ್ಮಾಂಡದ ಸೃಜನ, ಸಂಚಾಲನ, ಸಂಹಾರಗಳ ಸಂತತ ಸಂಪನನವನ್ನು ಕಂಡಾಗ, ಮೊದಲು ಊಹೆಯಿಂದ, ನಂತರ ಸಾಕ್ಷಾತ್ಕಾರದಿಂದ, "ಇದ್ದಾನೆ ಭಗವಂತ" ಎಂದು ನಿರ್ಧರಿಸುತ್ತಾರೆ. ಈ ನಿರ್ಧಾರ ತಮ್ಮಿಂದಲೂ, ಜಡಪ್ರಕೃತಿಯಿಂದಲೂ ಬೇರೆಯಾದ ಯಾವುದೋ ಜ್ಞಾನಮಯ ಚೇತನ ಶಕ್ತಿಯ ಅಸ್ತಿತ್ವಕ್ಕೆ ಸ್ವೀಕೃತಿಯ ಮುದ್ರೆಯನ್ನೊತ್ತುತ್ತದೆ. ಅದು ಕಲ್ಪನೆ ಮಾತ್ರವಾಗಿರದೆ, ವಾಸ್ತವಿಕ ತತ್ತ್ವವಾಗಿರುತ್ತದೆ. ಋಗ್ವೇದ ಸ್ಪಷ್ಟವಾಗಿ – **"ತ್ವಂ ಹಿ ಸತ್ಯೋ ಅದ್ಭುತೋ ದಾತಾ ವಾಜಸ್ಯ ಗೋಮತಃ"**- ದೇವ ದೇವ! [ತ್ವಂ ಹಿ] ನೀನೇ, [ಗೋಮತಃ] ಭೂಮಿಯುಕ್ತವಾದ, ವಾಣೀ ಸಮೇತವಾದ, ಇಂದ್ರಿಯಯುತವಾದ, [ವಾಜಸ್ಯ] ಅನ್ನದ, ಜ್ಞಾನದ, ಬಲದ, [ಸತ್ಯಃ] ಸತ್ಯನೂ, [ಅದ್ಭುತಃ] ಅದ್ಭುತನೂ ಆದ, [ದಾತಾ] ದಾತೃವಾಗಿದ್ದೀಯೇ " ಎನ್ನುತ್ತಿದೆ. ಅಸ್ತಿತ್ವವೇ ಇಲ್ಲದವನು ದಾತೃವಾದಾನಾದರೂ ಎಂತು ?

ಮುಂದಿನ ಶಬ್ದ ಅತಿ ಗಂಭೀರವಾದುದು. "ಚಿತ್ರಶ್ರವಸ್ತಮಃ" - ಎಂಬುದೇ ಆ ಶಬ್ದ. 'ಶ್ರವಸ್' – ಎಂಬುದೇ ಮುಖ್ಯ ಪದ. ಅದರರ್ಥ 'ಕೀರ್ತಿ' ಅಥವಾ 'ಯಶಸ್ಸು.' ಹಾಗೆ ನೋಡಿದರೆ ಶ್ರಾವ್ಯವಾದುದೆಲ್ಲಾ ಶ್ರವಸ್ಸೇ. ಆದರೆ, ಭಗವಂತನಿಗೆ ಅನ್ವಯಿಸಿದಂತೆ

ಹೇಳುವಾಗ, ಯಶಸ್ಸು ಅಥವಾ ಕೀರ್ತಿ – ಎಂಬುದೇ ನಿರ್ದಿಷ್ಟ ಗುಣಸೂಚಕವಾಗಿರುತ್ತದೆ. ಎಂತಹದು ಆ ಪರಮಾತ್ಮನ ಶ್ರವಸ್ಸು ? ಯಶಸ್ಸು ? ಹಿಂದೆಂದೋ ಯಶಸ್ವಿಯಾಗಿ ಮೆರೆದ ಅಲೆಕ್ಝಾಂಡರ್ ಮಹಾನ್, ನೆಪೋಲಿಯನ್ ಬೋನೋಪಾರ್ಟ್, ಪೀಟರ್ ಮಹಾನ್, ಅಕ್ಬರ್ ಮಹಾನ್ – ಎಲ್ಲರೂ ತಮ್ಮ ತಮ್ಮ ಯಶಸ್ಸಿನ ಕಣ್ಣು ಕೋರೆಯಿಸುವ ಪ್ರಭೆಯಿಂದ ದಿಗ್ಧ್ರಾಂತವನ್ನಾಗಿ ಮಾಡಿದರು ಜಗತ್ತನ್ನು ತಮ್ಮ ತಮ್ಮ ಕಾಲದಲ್ಲಿ. ಹಿಟ್ಲರ್ - ಸ್ಟಾಲಿನ್ ಮುಸ್ಸೋಲಿನಿ – ಟೋಜೋಗಳೂ ಕೆಲಕಾಲ. ಅದೊಂದು ಬಗೆಯ ಕೀರ್ತಿಯಿಂದ ರಾಷ್ಟ್ರಗಳೆಲ್ಲಾ ತತ್ತರಿಸುವಂತೆ ಮಾಡಿದರು ಒಂದೆರಡು ದಶಮಾನಗಳ ಕಾಲ. ಆಗ ಸದ್ಯಕ್ಕೆ ಅವರ ಆ ಯಶಸ್ಸು 'ಚಿತ್ರ'ವಾಗಿಯೇ, ಅದ್ಭುತವಾಗಿಯೇ ಕಂಡಿತು. ಆದರೆ, ಉಳಿಯಲಿಲ್ಲ. ಇತಿಹಾಸದ, ಮಾನವೇತಿಹಾಸದ ಅನಾದ್ಯನಂತ ಇತಿಹಾಸದ ಹಲವಾರು ಪುಟಗಳ ಮೇಲೆ ನೆತ್ತರಿನ ಕೆಂಪು ಮಸಿಯನ್ನು ಎರಚಿ, ಶೂನ್ಯವಿಲೀನವಾಯಿತು.

ಇದಾಯಿತು ದುರಾತ್ಮರ ಕತೆ. ಇನ್ನು ಮಹಾತ್ಮರ ಕತೆ ಏನು ? "ಶ್ರೀರಾಮ ಆಚಂದ್ರಾರ್ಕಸ್ಥಾಯೀ ಕೀರ್ತಿಗೆ ಪಾತ್ರನಾದ. ಶ್ರೀ ಕೃಷ್ಣ ನಿತ್ಯಯಶಸ್ವಿಯಾದ. ಮಹರ್ಷಿ ದಯಾನಂದರು, ಸ್ವಾಮೀ ಶ್ರದ್ಧಾನಂದರು, ಮಹಾತ್ಮಗಾಂಧೀಜೀ ಅಮರ ಯಶಸ್ವಿಗಳಾದರು." - ಎಂದು ಹೇಳುತ್ತೇವೆಯಲ್ಲವೇ ? ನಿಜ. ಆದರೆ, ಇಂತಹ ಅಮರಯಶಸ್ವಿಗಳಲ್ಲಿ 'ಚಿತ್ರಶ್ರವಾಹಃ' - ಎಂದರೆ, ವಿಚಿತ್ರವಾದ, ಅದ್ಭುತವಾದ, ವರ್ಣನಿಗಂದದ ಯಶಸ್ಸನ್ನು ಪಡೆದವರೂ ಇರುತ್ತಾರೆ. ಯಾರೇನೇ ಹೇಳಲಿ; ಯಾರೆಷ್ಟೇ ನಿಂದಿಸಲಿ; ಹಲಜನ ಚಿತ್ರಶ್ರವರಿರುತ್ತಾರೆ. ಯಾರೂ ಅವರ ಹೆಸರನ್ನು ಅಳಿಸಲು, ತೊಡೆದು ಹಾಕಲು ಸಮರ್ಥರಾಗುವುದಿಲ್ಲ. ಹತ್ತು ವರ್ಷಗಳಲ್ಲಿ, ಕೇವಲ ಹತ್ತೇ ವರ್ಷಗಳಲ್ಲಿ "ಉತ್ತರ ಭಾರತದ ಸಂಪೂರ್ಣ ಜೀವನ ಪ್ರವಾಹದ ದಿಕ್ಕನ್ನೇ ಬದಲಾಯಿಸಿದ ಪುರುಷ–ಸಿಂಹ" ಎಂದು ಫ್ರೆಂಚ್ ಮಹಾಸಾಹಿತಿ ರೋಮಾ ರೋಲಾರವರಿಂದ ವರ್ಣಿತರಾದ ಮಹರ್ಷಿ ದಯಾನಂದರ ವಿಚಿತ್ರ ಯಶಸ್ಸನ್ನು ತೊಡೆದು ಹಾಕಬಲ್ಲ ಧೀರನಾವನಿದ್ದಾನೆ? ಯಾರಾದರೂ ಮಹರ್ಷಿ ಪ್ರವರರ ಶುಭ್ರ ಯಶಃಪಟಕ್ಕೆ ಕಳಂಕ ತರಲು ಯತ್ನಿಸಿದರೋ, ಅವರೇ "ನಿಂದಿತಾರೋ ನಿಂದ್ಯಾಸೋ ಭವಂತು" – ಎಂಬ ವೇದೋಕ್ತಿಯಂತೆ [ನಿಂದಕರು ಸ್ವತಃ ನಿಂದಿತರಾಗಿ ಹೋಗುವರು] – ಎಂದಿದರ ಅರ್ಥ, ದಯಾನಂದರ ಕೀರ್ತಿಗೇನೂ ಕುಂದಕ ಬರಲಿಲ್ಲ. ಅವರು "ಚಿತ್ರಶ್ರವ"ರಾಗಿಯೇ ಉಳಿದರು; ಅಮರ ಯಶಸ್ವಿಗಳೇ ಆಗಿ ಉಳಿದರು.

ಆದರೆ, **"ನ ತಸ್ಯ ಪ್ರತಿಮಾ ಅಸ್ತಿ ಯಸ್ಯ ನಾಮ ಮಹದ್ಯಶಃ"** [ಯಜು:–32.3.] – "ಯಾವನ ನಾಮವೇ ಮಹದ್ಯಶಸ್ಸೋ, ಅವನ ಪ್ರತಿಮೆಯಿಲ್ಲ." – ಎಂದು ವೇದಗಳಲ್ಲಿ ವರ್ಣಿತನಾದ ಪರಮಾತ್ಮನ ವೈಭವವೇ ಬೇರೆ. ಸ್ವಿಜರ್‌ಲೆಂಡಿನ ಮಹಾನ್ ಜ್ಯೋತಿಃಶಾಸ್ತ್ರ ವಿಶಾರದನೊಬ್ಬ - "ನಾನು ಎಷ್ಟೆಷ್ಟು ನಕ್ಷತ್ರಗಳ ಸಮೂಹಗಳನ್ನು ತೆರೆದ ಕಂಗಳಿಂದ, ಬಿರಿದ ಹೃದಯದಿಂದ, ಒರೆಗೆ ಹಚ್ಚಿದ ಮೆದುಳಿನಿಂದ ಅವಲೋಕಿಸುತ್ತೇನೋ, ನಿರೀಕ್ಷಿಸುತ್ತಾ ಹೋಗುತ್ತೇನೋ, ಅಷ್ಟೇ–ಅಷ್ಟೇ ನನಗೆ ಆ ಅವ್ಯಕ್ತ

ವಾದರೂ ನಿಖರವಾದ, ಅದೃಶ್ಯವಾದರೂ ಮಾನಸನೇತ್ರದ ಮುಂದೆ ತಾನೇತಾನಾಗಿ ಬಂದು ನಿಲ್ಲುವ ಶಕ್ತಿಯ ಬಗೆಗೆ ಆಸಕ್ತಿ, ಆಸಕ್ತಿಗಿಂತ ಅಧಿಕ ಭಕ್ತಿ ಬೆಳೆಯುತ್ತಾ ಹೋಗುತ್ತದೆ." ಎಂದಿದ್ದಾನೆ. ಅವನ ಮಾತುಗಳಿಗೆ ಸಮ್ಮತಿಸದೇ, ಬೇರಾವ ಮಾರ್ಗವೂ ಇಲ್ಲ. ಹೀಗೆ, ಸಾಧಾರಣ ಸ್ತರದ ಸಜ್ಜನರು ಚಿತ್ರಶ್ರವರಾದರೆ, ದಯಾನಂದ-ಶ್ರದ್ಧಾನಂದರಂತಹವರು ಚಿತ್ರಶ್ರವಸ್ತರರಾದರೆ, ಪರಮಾತ್ಮ ಚಿತ್ರಶ್ರವಸ್ತಮನೇ ಸರಿ. ಅವನ ಸೃಷ್ಟಿಯ ಪ್ರತಿಯೊಂದು ಅಣುವೂ, ಪ್ರತಿಯೊಂದು ಕಣವೂ, ಮೌನವೇ ಆದರೂ ಸ್ಫುಟವಾದ ಭಾಷೆಯಲ್ಲಿ ಸಾರುತ್ತಲಿದೆ. "ಅಹೋ ! ಚಿತ್ರಶ್ರವಸ್ತಮ ನೀ ಪ್ರಭು !" ಎಂದೇ ಹಾಡುತ್ತದೆ. ವ್ಯಾಕರಣದ ಪ್ರಾರಂಭಿಕ ಶಿಕ್ಷಣ ಪಡೆದವರೂ ಕೂಡ ನೈಜ, ತರ, ತಮ - ಎಂಬ ಹೋಲಿಕೆಯ ನಿಯಮವನ್ನು ಬಲ್ಲರು.

ಇನ್ನುಳಿದುದು ಕೊನೆಯಂಶ – **"ದೇವೋ ದೇವೇಭಿರಾಗಮತ್"** ಶಬ್ದಾರ್ಥದಲ್ಲಿ ಏನೋ "ದಿವ್ಯಶಕ್ತಿಗಳಿಂದಲೂ, ಸತ್ಯಾಚಾರ ವಿಚಾರ ಪ್ರಸಾರಣದಲ್ಲಿ ನಿರತರಾದ ವಿದ್ವಾಂಸರಿಂದಲೂ ಅನುಭವಕ್ಕೆ ಬರುತ್ತಾನೆ" ಎಂದು ಹೇಳಿದ್ದೇವೆ. ಕೇಳಲು ಶಬ್ದಗಳೇನೋ ಸರಳವೇ; ಆದರೆ ಭಾವನಾ - ಗ್ರಹಣ ಅಷ್ಟು ಸುಗಮವಲ್ಲ. ಭಗವಂತ ಸೂಕ್ಷ್ಮತಮತತ್ತ್ವ, ಸರ್ವಥಾ ನಿರಾಕಾರ, ನಿರ್ವಿಕಾರ, ಅವ್ಯಕ್ತ ಹಾಗೂ ಅತೀಂದ್ರಿಯವಸ್ತು - ಎಂದ ಮೇಲೆ; ಭಗವತ್ಸಾಕ್ಷಾತ್ಕಾರ ಜನರೂಹಿಸುವಷ್ಟು ಸುಲಭವಲ್ಲ - ಎಂಬುದು ಸ್ಪಷ್ಟವೇ ಆಗಿದೆ. ತಿರುಪತಿಗೋ, ಕಾಶಿಗೋ, ಧರ್ಮಸ್ಥಳಕ್ಕೋ, ಪಳನಿಗೋ ಹೋಗಿ ಬಂದು - "ನಾನು ಧನ್ಯ! ತಿಮ್ಮಪ್ಪನ. ವಿಶ್ವನಾಥನ, ಮಂಜುನಾಥನ, ಮುರುಗನ ದರ್ಶನ ಮಾಡಿಬಂದೆ" - ಎಂಬಷ್ಟು ಸುಲಭವಲ್ಲ ಭಗವದ್ದರ್ಶನ. ಶಿಲಾ ಖಂಡಗಳ, ಕಟ್ಟಿಗೆಯ ತುಂಡುಗಳಲ್ಲ ಭಗವಂತ. ಆ ಭಗವದ್ದರ್ಶನದ ಮಾರ್ಗವೇ ಬೇರೆಯಿದೆ.

ಸಾಕ್ಷಾತ್ಕಾರವಾಗಬೇಕೇ ? ಬೇಕು - ಎನ್ನುವಿರಾದರೆ, **"ಕ್ಷುರಸ್ಯಧಾರಾ ನಿಶಿತಾದುರತ್ಯಯಾ."** – "ಕೂರಲಗಿನ ಕತ್ತಿಯ ಧಾರೆಯ ಮೇಲೆ ನಡೆಯುವಂತೆಯೇ ಕ್ಲಿಷ್ಟ, ಕಷ್ಟ ಈ ಮಾರ್ಗ." – ಎಂಬ ಉಪನಿಷದ್ವಾಕ್ಯ ನೆನಪಿರಲಿ. ದೇವತೆಗಳ ನೆರವಿನಿಂದ ಮಾತ್ರ ಸಾಧ್ಯ ಈಶ್ವರ ಸಾಕ್ಷಾತ್ಕಾರ. ಅಹುದು; ಯಾರು ಈ ದೇವತೆಗಳು? ಯಜುರ್ವೇದವೇನೋ—

**ಅಗ್ನಿರ್ದೇವತಾ ವಾತೋ ದೇವತಾ ಸೂರ್ಯೋ ದೇವತಾ ಚಂದ್ರಮಾ**
**ದೇವತಾ ವಸವೋ ದೇವತಾ ರುದ್ರೋ ದೇವತಾ ಽಽದಿತ್ಯಾ ದೇ**
**ವತಾ ಮರುತೋ ದೇವತಾ ವಿಶ್ವೇದೇವೋ ದೇವತಾ ಬೃಹ**
**ಸ್ಪತಿ ರ್ದೇವತೇಂದ್ರೋ ದೇವತಾ ವರುಣೋ ದೇವತಾ ॥**

[ಯಜು: 14. 20]

"ಅಗ್ನಿಯು ದೇವತೆ. ವಾತ ದೇವತೆ. ಸೂರ್ಯ ದೇವತೆ. ಚಂದ್ರ ದೇವತೆ. ವಸುಗಳು ದೇವತೆಗಳು. ರುದ್ರನು ದೇವತೆ. ಆದಿತ್ಯ ದೇವತೆ ಮರುತ್‌ಗಳು ದೇವತೆಗಳು. 'ವಿಶ್ವೇದೇವರು' ದೇವತೆಗಳು. ಬೃಹಸ್ಪತಿಯು ದೇವತೆ. ಇಂದ್ರನು ದೇವತೆ ವರುಣನು ದೇವತೆ." – ಎಂದು ಹೇಳಿದೆ. ಓದುಗರು ಈ ಮಂತ್ರದಲ್ಲಿ ಬಹ್ವಂಶ ಜಡ ದೇವತೆಗಳು. **"ಯೋ ದೇವೋ ಸಾ ದೇವತಾ"** - "ದೇವನೇ ದೇವತೆ" – ಎಂಬ ಶಾಸ್ತ್ರವಚನವನ್ನು ಸ್ಮರಿಸಿದರೆ, ಇಲ್ಲಿ ನಾವು ಜಡ ಹಾಗೂ ಚೇತನ - ಎರಡು ಬಗೆಯ ದೇವತೆಗಳನ್ನೂ - ದೇವರುಗಳನ್ನೂ ಏನ್ನೋಣವೋ ? ಭಗವಂತ - ಎಂಬ ಭ್ರಾಂತಿ ಹುಟ್ಟೀತು - ಕಾಣುತ್ತೇವೆ. ಋಗ್ವೇದ ಸ್ವತಃ ಹೇಳುತ್ತಿದೆ:—

**ಸುಕರ್ಮಾಣಃ ಸುರುಚೋ ದೇವಯಂತೋ ಽಯೋನ**

**ದೇವಾ ಜನಿಮಾ ಧಮಂತಃ ।**

**ಶುಚಂತೋ ಅಗ್ನಿಂ ವವೃಧಂತ ಇಂದ್ರಮೂರ್ವಂಗವ್ಯಂ**

**ಪರಿಷದಂತೋ ಅಗ್ಮನ್ ॥** [ಋಗ್ವೇದ: – 4.2.17.]

"[ಸುಕರ್ಮಾಣಃ] ಸತ್ಕರ್ಮ ನಿಷ್ಠರೂ, [ಸುರುಚಃ] ಉತ್ತಮ ಕಾಂತಿಯುಕ್ತರೂ ಅಭಿರುಚಿಯುಳ್ಳವರೂ, [ದೇವಯಂತಃ] ವಿಜಯಾಭಿಲಾಷೆಯನ್ನಿಟ್ಟುಕೊಂಡಿರುವವರೂ' [ಅಯಃನ] ಕಬ್ಬಿಣವನ್ನು ಕಾಯಿಸಿ - ಕಾಯಿಸಿ ಶುದ್ಧೀಕರಿಸುವಂತೆ, [ಜನಿಮ] ಜೀವನವನ್ನು, [ಆ ಧಮಂತಃ] ಎಲ್ಲಾ ಕಾಲಗಳಲ್ಲಿಯೂ, ಎಲ್ಲೆಡೆಯಿಂದಲೂ, ಬಾರಿಬಾರಿ ತಪಿಸಿ ತಪಿಸಿ, ನಿರ್ಮಲಗೊಳಿಸುತ್ತಾ, [ಅಗ್ನಿಂ ಶುಚಂತಃ] ತೇಜೋಮಯನಾದ ದೇವನನ್ನು, [ಶುಚಂತಃ] ಬೆಳಕಿಗೆ ತರುತ್ತಾ, [ಇಂದ್ರಂ] ಇಂದ್ರಿಯವಾನ್ ಜೀವನನ್ನು, [ವವೃಧಂತಃ] ವಿಕಾಸಪಡಿಸಿ ಕೊಳ್ಳುತ್ತಾ, [ಊರ್ವಂ] ಮಹತ್ತಾದ, ಬೃಹದ್ವೈಶಿಷ್ಟ್ಯವನ್ನುಳ್ಳ, [ಗವ್ಯಂ] ದಿವ್ಯವಾಣಿ ಯಾದ ವೇದಗಳ ಜ್ಞಾನವನ್ನು, [ಪರಿ ಸದಂತ] ಉನ್ನತಪ್ರಮಾಣವಾಗಿ ಅಂಗೀಕರಿಸಿ, [ದೇವಾಃ] ದೇವಜನರು [ಅಗ್ಮನ್] ಮುಂದುವರಿಯುತ್ತಾರೆ."

ಈ ಋಗ್ವೇದಮಂತ್ರ ದೇವಜನರ ಸ್ವರೂಪವನ್ನು ಸ್ಪಷ್ಟವಾಗಿ ವರ್ಣಿಸುತ್ತಿದೆ· **"ನ ಮೃಷಾ ಶ್ರಾಂತಂ ಯದವಂತಿ ದೇವಾಃ"** [ಋಗ್ವೇದ:–1.179.3.] **"ಯಥಾ ವಶಂತಿ ದೇವಾಸ್ತಥೇ ದಸತ್"** [ಋಗ್ವೇದ:–8.28.4.] "ದೇವಜನರು ಕಷ್ಟಪಟ್ಟು ದುಡಿಯುವವನನ್ನು ರಕ್ಷಿಸುತ್ತಾರೆ–ಎಂಬುದು ಸುಳ್ಳಲ್ಲ; "ದೇವಜನರು ಹೇಗೆ ಅಪೇಕ್ಷಿಸು ತ್ತಾರೋ, ಹಾಗೆಯೇ ಆಗುತ್ತದೆ; ಹಾಗೆಯೇ ಮಾಡಿಕೊಳ್ಳಲು ಸಮರ್ಥರಾಗಿರುತ್ತಾರೆ"·

ಈ ಮೊದಲಾದ ವೈದಿಕಪ್ರಮಾಣಗಳೊಂದಿಗೆ, **"ವಿದ್ವಾಂಸೋ ಹಿ ದೇವಾ:" "ಸತ ಮಯಾ ಉದೇವಾ:"; ''ಜಾಗ್ರತಿ ವೈ ದೇವಾಃ"; ದೇವಾ ವೈ ದಾನಾದುಪ ಜೀವಂತಿ.''** "ವಿದ್ವಾಂಸರೇ ದೇವತೆಗಳು"; "ಸತ್ಯವಂತರೇ ದೇವಜನರು"; "ಸದಾ ತಮ್ಮ ಉತ್ತರದಾಯಿತ್ವದ ಬಗೆಗೆ ಜಾಗರೂಕರಾಗಿರುವವರೇ ದೇವಜನರು"; "ದಾನಜೀವಿಗಳೇ ದೇವಜನರು" – ಈ ಮೊದಲಾದ ಬ್ರಾಹ್ಮಣವಚನಗಳನ್ನೂ ಸಮೀಕ್ಷಿಸಿದಾಗ, ಮೊದಲು ಹೇಳಿದ ಅಗ್ನಿ–ಮೊದಲಾದ ಜಡದೇವತೆಗಳೂ ಇವೆ; ವಿದ್ವಾಂಸರೇ ಮೊದಲಾದ ಚೇತನ ದೇವತೆಗಳೂ ಇದ್ದಾರೆ–ಎಂಬ ನಿರ್ಧಾರಕ್ಕೆ ಬರುತ್ತೇವೆ.

**ಯೇ ತ್ರಿಂಶತಿ ತ್ರಯಸ್ಪರೋ ದೇವಾಸೋ ಬರ್ಹಿರಾಸದನ್ ।**
**ವಿದನ್ನಹ ದ್ವಿತಾ ಸನನ್ ॥**

[ಋಗ್ವೇದ:–8.28.1.]

"[ತ್ರಿಂಶತಿ ತ್ರಯಃ ಪರಃ] ಮೂವತ್ತು ಮತ್ತು ಮೂರು. ಮೂವತ್ತಮೂರು ಜನ, [ಯೇ ದೇವಾಸಃ] ಯಾವ ದೇವತೆಗಳು ಇದ್ದಾರೋ ಅವರು, [ದ್ವಿತಾ ಸನನ್] ಜಡ ಹಾಗೂ ಚೇತನ – ಎರಡು ಬಗೆಯಿಂದಲೂ, [ವಿದನ್] ಪ್ರಾಪ್ತರಾಗುತ್ತಾ, [ಸನನ್] ಸಹಾಯ ಮಾಡುತ್ತಾ, [ಬರ್ಹಿಃ] ಈ ವಿಶಾಲ ಬ್ರಹ್ಮಾಂಡದಲ್ಲಿ, [ಆ ಸದನ್] ವಿರಾಜ ಮಾನರಾಗಿದ್ದಾರೆ." ಈ ಬಗೆಯ ಪ್ರಮಾಣಗಳು ಪುಷ್ಕಳವಾಗಿ ಸಿಕ್ಕುವಾಗ, ನಾವು ಬೇರೆ ಯಾವುದೋ ಸ್ವರ್ಗವೆಂಬ ಕಲ್ಪಿತ ಲೋಕದತ್ತ ಮುಖಮಾಡಿ ನೋಡಿ, ದೇವತೆಗಳನ್ನು ಅರಸಬೇಕಾಗಿಲ್ಲ. ನಿರುಕ್ತದಲ್ಲಿ – **''ದೇವೋ ದಾನಾದ್ವಾ ದೀಪನಾದ್ವಾ ದ್ಯೋತ ನಾದ್ವಾ ದ್ಯುಸ್ಥಾನೇ ಭವತೀತಿ ವಾ.''** [1.4.15.2.] — "ದಾನಮಾಡುವುದರಿಂದ ಅನ್ಯವಸ್ತುಗಳನ್ನು ಬೆಳಗಿಸುವುದರಿಂದ, ಸ್ವತಃ ಬೆಳಗುವುದರಿಂದ, ಪ್ರಕಾಶಮಯ ಸ್ಥಿತಿಯಲ್ಲಿ ರುವುದರಿಂದ ದೇವನನ್ನು ದೇವನೆನ್ನುತ್ತಾರೆ." – ಎಂದು ಯಾಸ್ಕರೇ ಹೇಳಿದ್ದಾರೆ. ಈ ಸ್ಥಾನದಲ್ಲಿ 'ದಿವು' ಧಾತುವಿನ ವಿವರಣೆ ಬೇಕಾಗಿಲ್ಲ. ಈವರೆಗೆ ಹೇಳಿರುವಷ್ಟರಿಂದಲೇ ದೇವತೆಗಳ ಅಥವಾ ದೇವರುಗಳ ಸ್ಪಷ್ಟಚಿತ್ರ ಪಾಠಕರ ಮುಂದೆ ಮೂಡಿರುವುದೆಂದು ನಂಬುತ್ತೇವೆ.

ಅವ್ಯಕ್ತನಾದ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುವುದೆಂತು ? ಪ್ರಚಲಿತವಾದ ವಿಗ್ರಹಾರಾಧನೆಯಿಂದಲಂತೂ ಅದು ಸಾಧ್ಯವಿಲ್ಲ. ವಿಗ್ರಹಾರಾಧನೆ, ಮೂರ್ತಿಪೂಜೆ, ಪ್ರತಿಮಾ ಪೂಜನ ವೇದಗಳಿಗೆ ಪೂರ್ಣತಃ ವಿರುದ್ಧವಾದುದೆಂಬ ಬಗೆಗೆ ವಿದ್ವಾಂಸರಿಗೆ ಎಳ್ಳಿನಷ್ಟು ಸಂಶಯವಿಲ್ಲ. ಜಡಾರಾಧನ ಚೇತನಸಾಕ್ಷಾತ್ಕಾರಕ್ಕೆ ವಿಗ್ರಹಾರಾಧನಾ ರೂಪ ದಲ್ಲಿ ಎಂದಿಗೂ ನೆರವಾಗದು.' **"ಪ್ರತುವಿದ್ಯುಮ್ನಸ್ಯ ಸ್ಥವಿರಸ್ಯ ಘೃಷ್ವೇರ್ದಿವೋ ರರಪ್ಶೇ ಮಹಿಮಾ ಪೃಥಿವ್ಯಾಃ । ನಾಸ್ಯ ಶತ್ರುರ್ನ ಪ್ರತಿಮಾನಮಸ್ತಿ ನ ಪ್ರತಿಷ್ಠಿ: ಪುರುಮಾಯಸ್ಯ ಸಹ್ಯೋ:** ॥ [ಋಗ್ವೇದ:–6.18.12.] "[ತುವಿದ್ಯು ಮ್ನಸ್ಯ] ಮಹಾಶಕ್ತಿಶಾಲಿಯೂ, [ಸ್ಥವಿರಸ್ಯ] ಅನಾದಿಯೂ, [ಘೃಷ್ವೇಃ] ಪರಮಾಣುಗಳಲ್ಲಿ

ಗತಿಯನ್ನುಂಟುಮಾಡುವ, ಸಂಯೋಜನ—ವಿಭಜನ ಮಾಡುವ, [ದಿವಃ] ಜ್ಯೋತಿರ್ಮಯ ದೇವನ, [ಮಹಿಮಾ] ಮಹಿಮೆಯು, [ದಿವಃ] ದ್ಯುಲೋಕವನ್ನು, [ಪೃಥಿವ್ಯಾಃ] ಮತ್ತು ಭೂಮಿಯ ಸೀಮೆಯನ್ನೂ, [ರರಪ್ಶೇ] ದಾಟಿ ಹೋಗಿದೆ, ಮೀರಿಸುತ್ತಿದೆ, ತುಂಬಿದೆ. [ಅಸ್ಯ ಪುರುಮಾಯಸ್ಯ] ಈ ಮಹಾಪ್ರಜ್ಞನೂ, [ಸಹ್ಯೋಃ] ಸಹನಶೀಲನೂ ಆದ ಪರಮಾತ್ಮನಿಗೆ, [ಶತ್ರುಃ ನ] ಶತ್ರುವಿಲ್ಲ. [ಪ್ರತಿಮಾನಂ] ಸಮತೂಗುವ ವಸ್ತುವೂ, [ನ] ಇಲ್ಲ. [ಪ್ರತಿಷ್ಠಿಃ] ಆಧಾರವೂ ಕೂಡ ಇಲ್ಲ." ಅವನು ವಸ್ತುತಃ ಅಪ್ರತಿಮನೂ, ಅನುಪಮನೂ, ಸ್ವತಃ ತಾನೇ ಎಲ್ಲದರ ಆಧಾರವೂ ಆಗಿದ್ದಾನೆ. ಎಂದಮೇಲೆ, ಧಾತುಗಳ, ಶಿಲೆಯ, ಇಲ್ಲವೇ ಕಾಷ್ಠದ ಪ್ರತಿಮೆಗಳನ್ನು ರಚಿಸಿ, 'ಇದು ಪರಮಾತ್ಮ' ಎನ್ನುವುದು, ಆಗಮಶಾಸ್ತ್ರೋಕ್ತ ಪ್ರತಿಷ್ಠೆಯಿಂದ ಜಡವು ದೇವತ್ವಹೊಂದಿ, ಚೇತನವಾಗಿ, ಅಭೀಷ್ಟಸಿದ್ಧಿಗೆ ನೆರವಾಗುತ್ತದೆ–ಎನ್ನುವುದು. ಮನಃಸ್ಥೈರ್ಯಕ್ಕೆ ಸಾಧಕವಾದ ಪ್ರತೀಕವಾಗುತ್ತದೆ–ಎನ್ನುವುದು ಪೂರ್ಣತಃ ಶಾಸ್ತ್ರವಿರುದ್ಧ; ಯುಕ್ತಿವಿರುದ್ಧ; ಪ್ರತ್ಯಕ್ಷಾದಿ ಪ್ರಮಾಣಗಳಿಗೂ ವಿರುದ್ಧ. ಆವಾಹನೆ, ಪ್ರಾಣಪ್ರತಿಷ್ಠೆ —ಮೊದಲಾದ ಕ್ರಿಯೆಗಳಿಂದ ಈವರೆಗೆ ಒಂದೇ ಒಂದು ಜಡ ವಿಗ್ರಹವೂ, ಚೇತನವಾದುದನ್ನು ಯಾವನೂ ಕಂಡಿಲ್ಲ; ಕಂದಾಚಾರದ ಕಟ್ಟುಕಥೆಗಳು ದಾರ್ಶನಿಕ ಕ್ಷೇತ್ರದಲ್ಲಿ ಕಾಲಿರಿಸಲಾರವು. ಆ ಮಹಾತ್ಮರು, ಭಕ್ತವರೇಣ್ಯರು ಮೂರ್ತಿಪೂಜೆಯಿಂದ ಸದ್ಗತಿ ಪಡೆದರೆಂಬ ಕಗ್ಗಗಳಿಗೂ ಈ ಕ್ಷೇತ್ರದಲ್ಲೆಡೆಯಿಲ್ಲ.

ಹಾಗಾದರೆ, **"ದೇವ: ದೇವೇಭಿ: ಆಗಮತ್"** - ಎಂಬ ಮಾತುಗಳಿಗೆ ಅರ್ಥವೇನು ? ನಾವು ಮೇಲೆ ದೇವತತ್ತ್ವಗಳ ವರ್ಣನೆ ಮಾಡಿದ್ದೇವೆ. ಭೂಮಿ – ಮೊದಲಾದ ಜಡದ್ರವ್ಯಗಳ ಹಾಗೂ ಅವುಗಳ ಅದ್ಭುತ ಉಪಯೋಗಿತ್ವದ ಕಡೆ ವಿಚಾರ – ಶೀಲನ ಚಿತ್ತ ಹರಿದಾಗ – "ಓಹೋ ! ಸ್ವತಃ ಜಡವಾದರೂ, ನಾನಾ ರೂಪದಲ್ಲಿ ನಮ್ಮ ಬಾಳಿನ ಬೆಳವಣಿಗೆಗೆ, ಆತ್ಮವಿಕಾಸಕ್ಕೆ ಎಷ್ಟು ಸಹಾಯಕವಾಗಿವೆ ? ತಾನೇ ಇಂತಹ ಉಪಯೋಗಕರವಾದ ರೂಪಗಳನ್ನು ಹೊಂದಲಾರದ ಜಡ – ಪರಮಾಣುಗಳಿಗೆ, ಪೃಥಿವಿಯ, ಅಪ್ತತ್ತ್ವದ, ತೇಜಸ್ಸಿನ, ವಾಯುವಿನ, ಆಕಾಶದ ರೂಪಕೊಡುವ ಮಹಾನ್ ಜ್ಞಾನಮಯ, ವ್ಯಾಪಕ, ಚೇತನಶಕ್ತಿ ಯಾವುದೋ ಅವ್ಯಕ್ತವಾಗಿ, ಅದೃಶ್ಯವಾಗಿ ಇದ್ದೇ ಇರಬೇಕು." - ಎಂದು ಒಳಗೊಳಗೇ ಗುದುಗುಟ್ಟುತ್ತಾ ಹೋಗುತ್ತದೆ. ಉತ್ತರ ಹುಡುಕುತ್ತಾ - ಹುಡುಕುತ್ತಾ, ಜಿಜ್ಞಾಸು ಚೇತನ ದೇವತೆಗಳ ಬಳಿ ತೆರಳುತ್ತಾನೆ; ಪ್ರಶ್ನಿಸುತ್ತಾನೆ; ವಿಚಾರ-ವಿನಿಮಯ ಮಾಡಿಕೊಳ್ಳುತ್ತಾನೆ. ಹಿಮಾಲಯದಂತಹ ಗಗನಚುಂಬೀ ಹಿಮವತ್ಪರ್ವತ ಶ್ರೇಣಿಗಳು, ಅನಂತಧಾರಿ ನಿಧಿಗಳಾದ ಅಗಾಧ ಸಾಗರಗಳು, ಉತ್ತಾಲತರಂಗಗಳನ್ನೆರಚುತ್ತಾ ಹರಿಯುವ ನದಿಗಳು, ನೀಲ ನಿರಭ್ರಗಗನ; ಹಿಂಜಿದ ಹತ್ತಿಯಂತೆ ಹಗುರವಾಗಿ ಆಗಸದಲ್ಲಿ ಸರಿದಾಡುವ ಮೋಡಗಳ ಸಮೂಹ, ಸಸ್ಯ ಶ್ಯಾಮಲಾ ಪ್ರಥಿವೀ, ತನ್ನ ತಿಳಿಯಾದ ಬೆಳದಿಂಗಳಿಂದ ನೆಲವನ್ನೆಲ್ಲಾ ತೊಳೆಯುತ್ತಾ ನಗುವ ಶರದೃತುವಿನ ಚಂದ್ರ, ಜೀವನಕ್ಕೆ ಕಾವನ್ನೂ, ಹುರುಪನ್ನೂ ತುಂಬುತ್ತಾ, ಗಗನದಂಚನ್ನೂ ಕೆಂಪು ಬಣ್ಣದಿಂದ ಸಿಂಗರಿಸುತ್ತಾ ಉದಿಸುವ, ಮರಳಿ ಅಸ್ತಂಗತನಾಗುವ ಸೂರ್ಯ - ಈ ಎಲ್ಲಾ ದೇವತೆಗಳೂ ನಮ್ಮ ಬಳಿ

ಬಂದಾಗ, ಅವುಗಳ ನಿರ್ಮಾಪಕನಾದ ಭಗವಂತ ನಮ್ಮ ಮನಸ್ಸಿನ ಮೋದಮಯ ಮಂದಿರಕ್ಕೆ ಬಂದಿಳಿಯನೇ ? ಹಾಗೆಯೇ, ಸಾಕ್ಷಾತ್ಕಾರ ಮಾಡಿಕೊಂಡ ಚೇತನ ದೇವತೆಗಳು, ಉದಾರಾಶಯರಾದ ಮಹಾ ವಿದ್ವಾಂಸರು ನಮ್ಮ ಸನಿಯ ಸುಳಿದಾಗ, ಆ ದೇವ - ದೇವನ ಸತ್ಯ ಸ್ವರೂಪದ ತಿಳಿಯಾದ, ಭ್ರಾಂತಿರಹಿತವಾದ ಅರಿವನ್ನು ಎಚ್ಚರಿಸದೇ ಹೋಗುವರೇ ? ಹೀಗೆ, ಮೂಕವಾಣಿಯಿಂದ ಜಡದೇವತೆಗಳು, ತೆರೆನುಡಿಗಳಿಂದ ಚೇತನ ದೇವತೆಗಳು ತಮ್ಮೆಲ್ಲರಿಗೂ ದೇವನಾದ ಭಗವಂತನನ್ನು ನಮ್ಮ ಬಳಿಗೆ ತರುತ್ತಾರೆ. ಇದೇ ದೇವತೆಗಳೊಂದಿಗೆ ದೇವನ ಆಗಮನ; ಬರುವಿಕೆ. ವೇದ ತೋರುವ ಈಶ್ವರ ಸಾಕ್ಷಾತ್ಕಾರದ ಪ್ರಶಸ್ತ ಪಥ, ವೈಜ್ಞಾನಿಕ ಮಾರ್ಗ. ಇಲ್ಲಿ ಒಬ್ಬರನ್ನೊಬ್ಬರು ಸಂಧಿಸುತ್ತಾರೆ - ವಿಜ್ಞಾನಿ ಮತ್ತು ಅಧ್ಯಾತ್ಮವಾದಿ. ವಿರೋಧಿಗಳಾಗಿಯಲ್ಲ; ಪರಸ್ಪರ ಪೂರಕರಾಗಿ, ಸಹಾಯಕರಾಗಿ.

## ಸಂಹಿತಾ ವಿಭಾಗ

**ಯದಂಗ ದಾಶುಷೇ ತ್ವಮಗ್ನೇ ಭದ್ರಂ ಕರಿಷ್ಯಸಿ ।**

**ತವೇತ್ತತ್ಸತ್ಯಮಂಗಿರ: ॥೬॥**

**ಪದಪಾಠಃ–** ಯತ್, ಅಂಗ, ದಾಶುಷೇ, ತ್ವಂ ಅಗ್ನೇ, ಭದ್ರಂ, ಕರಿಷ್ಯಸಿ. ತವ, ಇತ್, ತತ್. ಸತ್ಯಂ, ಅಂಗಿರಃ।

**ಅನ್ವಯಃ:–** ಅಂಗ ಅಂಗಿರಃ ಅಗ್ನೇ ! ತ್ವಂ ದಾಶುಷೇ ಯತ್ ಭದ್ರಂ ಕರಿಷ್ಯಸಿ, ತತ್, ತವ ಇತ್ ಸತ್ಯಂ.

**ಶಬ್ದಾರ್ಥ:–** [ಅಂಗ] ಪ್ರಿಯನೇ ! [ಅಂಗಿರಾಃ] ಪ್ರಾಣಸ್ವರೂಪನೇ ! [ಅಗ್ನೇ] ವೀರಾಗ್ರಣಿಯೇ ! [ತ್ವಂ] ನೀನು, [ದಾಶುಷೇ] ದಾನಶೀಲನಾದ ಮಾನವನಿಗೆ. [ಯತ್] ಯಾವ, [ಭದ್ರಂ] ಮಂಗಳವನ್ನು, [ಕರಿಷ್ಯಸಿ] ಮಾಡುವೆಯೋ, [ತತ್] ಅದು, [ತವ ಇತ್] ನಿನ್ನದೇ, [ಸತ್ಯಂ] ಸತ್ಯವಾಗಿರುತ್ತದೆ.

**ತಾತ್ಪರ್ಯ:–** ಪರಮಾತ್ಮನು ಎಲ್ಲರಿಗೂ ಪ್ರಿಯನು. ಎಲ್ಲರಿಗೂ ಪ್ರಾಣ ಸ್ವರೂಪನು, ಸರ್ವಾಗ್ರಣಿಯು. ದಾನಶೀಲನಾದ ಉದಾರಾತ್ಮನಿಗೆ, ಅಥವಾ ಆತ್ಮ ಸಮರ್ಪಣೆ ಮಾಡಿಕೊಳ್ಳುವ ಭಕ್ತನಿಗೆ ಅವನು ಕರುಣಿಸುವ ಮಂಗಳ ನಿಜವಾಗಿಯೂ ಸತ್ಯವಾದುದು.

**ಭಾಷ್ಯ:–** ಈ ಮಂತ್ರದಲ್ಲಿ ಭಗವಂತನನ್ನು ಮೂರು ಶಬ್ದಗಳಿಂದ ಸಂಬೋಧಿಸಲಾಗಿದೆ. ಒಂದೊಂದು ಶಬ್ದವೂ ಎಂತಹ ಹತಾಶನನ್ನೂ ಕೂಡ ಆಶಾಭರಿತನನ್ನಾಗಿ

ಮಾಡುವ ಸಾಮರ್ಥ್ಯದಿಂದ ಸಂಪನ್ನವಾಗಿದೆ. 'ಅಂಗ' - ಎಂಬುದು ಪ್ರಥಮ ಸಂಬೋಧನ. ಸಾಯಣರು ಇದಕ್ಕೆ 'ಅಭಿಮುಖನಾದ, ಎದುರಿಗಿರುವ' - ಎಂದು ಅರ್ಥ ಹೇಳುತ್ತಾರೆ. ಸರ್ವವ್ಯಾಪಕನಾದ ಪ್ರಭು ಎದುರಿಗೇನು, ಹಿಂದೇನು, ಪಕ್ಕಗಳಲ್ಲೇನು—ಎಲ್ಲೆಡೆಯೂ ಇದ್ದಾನೆ. ಆದರೂ, ಅನ್ಯವಿಷಯಗಳನ್ನೆಲ್ಲಾ ಬದಿಗಿರಿಸಿ, ಮನಸ್ಸಿನ ಮುಂಭಾಗದಲ್ಲಿಯೇ, ಎಲ್ಲಕ್ಕಿಂತ ಮುಖ್ಯವಾಗಿ ಪರಮಾತ್ಮನಿಗೆ ಸ್ಥಾನಕೊಡುತ್ತಾನೆ–ಎಂಬರ್ಥದಲ್ಲಿ ಸಾಯಣೋಕ್ತಿಯೂ ಸರಿಹೋದೀತು. ಮಹರ್ಷಿದಯಾನಂದರು ಇದೇ ಅಂಗಶಬ್ದಕ್ಕೆ 'ಸರ್ವಮಿತ್ರ' ಎಂದರ್ಥ ಮಾಡಿದ್ದಾರೆ. ವಸ್ತುತಃ, ಒಬ್ಬ ದೇಹಧಾರೀ ಜೀವನಿಗೆ ತನ್ನ ಅಂಗದಮೇಲೆ, ಅವಯವದ ಮೇಲೆ, ಅಬಾಧವೂ, ಅಗಾಧವೂ ಆದ ಪ್ರೇಮವಿರುತ್ತದೆ. ಹಾಗೇ, ಶರೀರದ ಅಂಗಗಳಂತೆಯೇ ಪ್ರಿಯನಾಗಿದ್ದಾನೆ ಆ ಜ್ಯೋತಿಃಸ್ವರೂಪನು ಎಲ್ಲರಿಗೂ—ಎಂಬರ್ಥದಲ್ಲಿ ಎಲ್ಲವೂ ಬಂದುಹೋಗುತ್ತದೆ. ಹೀಗೆ, ದೇವದೇವನನ್ನು ಉಪಾಸಕ - 'ಪ್ರಿಯನೇ !' ಎಂದು, ಕರೆಯುವುದು ಕೇವಲ ಮಾರ್ಮಿಕವಲ್ಲ; ಉಪಾಸಕನ ಭಕ್ತಿಯ ಆಳವೆಷ್ಟಿದೆ—ಎಂಬುದನ್ನೂ ತೋರಿಸುತ್ತದೆ. ಮುಂದಣಶಬ್ದ 'ಅಂಗಿರಃ' - ಎಂಬುದು ಇದೂ ಸಂಬೋಧನಾರೂಪವೇ. ಶತಪಥ ಬ್ರಾಹ್ಮಣದಲ್ಲಿ "ಪ್ರಾಣೋ ವಾ ಅಂಗಿರಾಃ" [6.3.7.3.] - ಎಂದರೆ - "ಪ್ರಾಣವೇ ಅಂಗಿರಾಃ" - ಎಂದು ಓದುತ್ತೇವೆ. ಯಾಸ್ಕರು – **"ದೇಹೇಽಂಗಾರೇಷ್ವಂಗಿರಾ ಅಂಗಾರಾ ಅಂಕನಾ ಅಂಜನಾ:''** "ದೇಹದೊಳಗಣ ಕಾವು, ಕೆಂಡಗಳು. ಕಿಡಿಗಳು, ಎದ್ದು ಕಾಣುವ ಬೆಂಕಿ" – ಎನ್ನುತ್ತಾರೆ. ಕೇವಲ ಈ ಭೌತಿಕಾರ್ಥದಿಂದ ಕರ್ಮಕಾಂಡ ಪ್ರಿಯರಾದ ಜನಕ್ಕೆ ತೃಪ್ತಿಯಾಗಬಹುದು. ಆದರೆ – ವೇದಗಳು ಗೂಢವಾದ ಆಧ್ಯಾತ್ಮಿಕ ತತ್ತ್ವಗಳ ಭಂಡಾರಗಳೆಂದು ಬಲ್ಲ ಭಾಗ್ಯಶಾಲಿಗಳು ಇದರಿಂದ ತೃಪ್ತರಾಗರು. ಬನ್ನಿರಿ, 'ಅಂಗಿರಾಃ' ಶಬ್ದದ ವಿಶ್ಲೇಷಣ ಮಾಡೋಣ. 'ಅಂಗ' ಶಬ್ದ ಕೇವಲ ಅವಯವ ಮಾತ್ರವಲ್ಲ: ಸಂಪೂರ್ಣ ದೇಹಕ್ಕೆ ಅನ್ವಯಿಸುತ್ತದೆ. ಇಂದೂ ರಾಜಸ್ಥಾನಿಯಲ್ಲಿ 'ಅಂಗ್' ಎಂದು ಸಮಗ್ರದೇಹಕ್ಕೆಯೇ ಹೇಳುತ್ತಾರೆ. ಅಂಗವೆಂದರೆ ಶರೀರ; ಶರೀರಧಾರೀ ಜೀವನನ್ನು 'ಅಂಗಿನ್' ಅಥವಾ 'ಅಂಗೀ' ಎನ್ನುತ್ತಾರೆ. 'ರಾ' ಧಾತು 'ಕೊಡು' ಎಂಬರ್ಥ ಹೊಂದಿದೆ. ಹೀಗೆ, 'ಅಂಗಿರಾಃ' ಎಂದಾಗ – "ಅಂಗಿನೇ ರಾತೀತಿ ವಾ, ಅಂಗಿನಿ ರಮತೇ ಇತಿ ವಾ" - "ದೇಹಧಾರಿ ಜೀವನಿಗೆ (ಬೇಕಾದುದನ್ನು) ಕೊಡುವವನು 'ಅಂಗಿರಾಃ'; ದೇಹಧಾರಿ ಜೀವನಲ್ಲಿ ರಮಿಸುವವನು 'ಅಂಗಿರಾಃ' - ಎಂಬ ಎರಡು ಅರ್ಥಗಳನ್ನು ಕಾಣುತ್ತೇವೆ. ದೇಹಧಾರಿ ಜೀವನಿಗೆ, ಅಥವಾ ಜೀವರಿಗೆ ದಾನಮಾಡುವ ಪರಮಾತ್ಮನೂ 'ಅಂಗಿರಾಃ'; ಅನ್ಯಜೀವರ ಹಿತಕ್ಕಾಗಿ ದಾನ ಮಾಡುವ ಜೀವಾತ್ಮನೂ ಅಂಗಿರಾಃ, ದೇಹಧಾರೀ ಜೀವಾತ್ಮರಲ್ಲಿ ಅಂತರ್ಯಾಮಿಯಾಗಿ ರಮಿಸುವ ಪರಮಾತ್ಮನೂ ಅಂಗಿರಾಃ; ತನ್ನ ಆತ್ಮನಲ್ಲಿಯೇ ರಮಿಸುವ ಆತ್ಮರಾಮನಾದ ಜೀವಾತ್ಮನೂ ಅಂಗಿರಾಃ. ಆದರೆ, ಪೂರ್ಣಸೂಕ್ತ ಪರಮಾತ್ಮನ ವಿಷಯವನ್ನೇ ಪ್ರಸ್ತಾಪಿಸುತ್ತಿರುವಾಗ, ನಡುವೆ ಜೀವಾತ್ಮನನ್ನು ತಂದು ಹಾಕಲು ಸಾಧ್ಯವಿಲ್ಲ. ಹೀಗೆ ಪರಿತ್ಯಜನ ಕ್ರಮದಿಂದ (Process of elimination) ವಿಮರ್ಶಿಸುತ್ತಾ ನಡೆದಾಗ, ಕೊನೆಗೆ ಉಳಿಯುವುದು ದೇಹವಾನ್ ಜೀವಾತ್ಮನಿಗೆ ಜೀವನದ ಆವಶ್ಯಕತೆಗಳನ್ನೆಲ್ಲಾ ಒದಗಿಸುವ ಮತ್ತು ಜೀವಾತ್ಮನಿಗೂ ಆತ್ಮನಾಗಿ, ಅಂತರಾತ್ಮನಾಗಿ ರಮಿಸುವ ಅಂತರ್ಯಾಮೀ ಈಶ್ವರನೇ

ಈ ಮಂತ್ರದಲ್ಲಿ ಪ್ರತಿಪಾದಿತನಾಗಿರುವ **'ಅಂಗಿರಾಃ'.** ಈ ಎಡೆಯಲ್ಲಿ ಸಂದೇಹಸರ್ಪ ತನ್ನ ಹೆಡೆಯೆತ್ತುವಂತಿಲ್ಲ.

ಮುನ್ನಡೆಯೋಣ. ಅಗ್ನಿ ಮುನ್ನವೇ ವಿವರಿಸಲ್ಪಟ್ಟ ಶಬ್ದ. ನಾವೀಗ ವಿವೇಚಿಸ ಬೇಕಾಗಿರುವುದು 'ದಾಶುಷೇ' ಎಂಬ ಶಬ್ದ. ಇದು 'ಕೊಡುವವನು' ಎಂಬರ್ಥದ 'ದಾಶ್ವಾನ್' ಶಬ್ದದ ಚತುರ್ಥೀ ವಿಭಕ್ತಿಯ ರೂಪ. ಸಾಧಾರಣಾರ್ಥ 'ಕೊಡುವವನಿಗೆ' - ಎಂದಿಷ್ಟೇ. ಆದರೆ, ಸೂಕ್ತದ ಗಾಂಭೀರ್ಯ ನಮ್ಮಿಂದ ಮತ್ತೂ ಆಳವಾದ ಭಾವನೆಯನ್ನು ನಿರೀಕ್ಷಿಸು ತ್ತದೆ. ಪಾತಂಜಲಯೋಗಸೂತ್ರಗಳನ್ನು ಓದಿರುವವರು, ಐದನೆಯ ನಿಯಮವಾದ **"ಈಶ್ವರ ಪ್ರಣಿಧಾನ"** - ಎಂಬ ತತ್ತ್ವವನ್ನು ಬಲ್ಲರು. ವಸ್ತುತಃ ಪ್ರಾಪ್ತಸರ್ವಸ್ವನೂ ಸರ್ವಸ್ವದ ಸ್ವಾಮಿಯೂ ಆದ, ಪೂರ್ಣತೃಪ್ತನಾದ ಪರಮಾತ್ಮ ನಮ್ಮಿಂದ ಏನನ್ನೂ ಅಪೇಕ್ಷಿಸನು. ಮತ್ತು ಅವನಿಗೆ ಸಮರ್ಪಿಸಲು, ನಮ್ಮದಾದ ಮತ್ತು ಅವನದಲ್ಲದ ವಸ್ತು ವಾದರೂ ಯಾವುದಿದೆ ? ಹರಕೆ ಹೊತ್ತು, ತಲೆಗೂದಲನ್ನೋ, ಹಣ್ಣು - ಕಾಯಿಗಳನ್ನೋ ಬೇರೆ ನೈವೇದ್ಯಗಳನ್ನೋ ಮಾನವ ಸೃಷ್ಟವೇ - ಆದ ಕಲ್ಪಿತ ದೇವಿ – ದೇವತೆಯವರಿಗೆ ಸಮರ್ಪಿಸಿ ಧನ್ಯರಾದೆವೆಂದು ಕೊಳ್ಳುವ ಮುಗ್ಧ ಜನತೆಗೆ ನಿಜವಾದ ಭಗವಂತನ ಕಲ್ಪನೆಯೇ ಇಲ್ಲ. ಮತ್ತು ಸ್ವತಃ ಮತಾಧೀಶರೂ, ಮಠಾಧೀಶರೂ ಜನತೆಯ ಈ ಅಜ್ಞಾನ ರೋಗ ವನ್ನು ದೂರೀಕರಿಸುವ ಬದಲು, ಹಿಂದಿನಿಂದ ಅಜ್ಞಾನದ ನೆಲೆವೀಡುಗಳಾಗಿ, ವೈದಿಕ ಧರ್ಮಕ್ಕೆ ಒಂದು ಶೂಲವಾಗಿ ಆಗಲೇ ಮೆರೆಯುತ್ತಿರುವ ದೇವಾಲಯಗಳು ಸಾಲದೆಂದು, ನವ – ನವ ಮಂದಿರಗಳ ನಿರ್ಮಾಣವನ್ನು ಬೇರೆ ಮಾಡುತ್ತಿದ್ದಾರೆ. ಈ ವಿಗ್ರಹಾರಾಧನೆ ವಸ್ತುತಃ ಮಾನವ ಜಾತಿಗೊಂದು ಭೀಕರ ಅಭಿಶಾಪ. ಇರಲಿ; ಪ್ರಕರಣದತ್ತ ಹೊರಡೋಣ. ಉಪಾಸಕ ಭಗವಂತನಿಗೆ ಅರ್ಪಿಸಬಹುದಾದ ಒಂದೇ ಒಂದು ವಸ್ತು ತನ್ನ ಆತ್ಮ ಮಾತ್ರ; ಮತ್ತು, ತನಗಿಂತ ದುಃಸ್ಥಿತಿಯಲ್ಲಿರುವ ದೀನ – ಜನರಿಗೆ ಕೈಲಾದಷ್ಟು ಅನ್ನ - ವಸ್ತ್ರಾದಿ ಗಳನ್ನೂ, ಜಿಜ್ಞಾಸುಗಳಿಗೆ ತನ್ನ ಸಾಮರ್ಥ್ಯವಿರುವಷ್ಟು ಜ್ಞಾನವನ್ನೂ ಕೊಡಬಹುದು. ಜನಸೇವೆ ಮಾಡುವಾಗಲೂ – "ಇದು ನನ್ನ ಹೃದಯ – ವೈಶಾಲ್ಯಕ್ಕೆ ಉಪಯುಕ್ತ ಸಾಧನ ವಾಗಿ, ನನ್ನನ್ನು ಈಶ್ವರಸಾಕ್ಷಾತ್ಕಾರಾರ್ಹನನ್ನಾಗಿ ಮಾಡಲಿ." ಎಂಬ ಭಾವನೆಯಿಂದಲೇ ಮಾಡಬೇಕಲ್ಲದೆ, ತನ್ನ ಸ್ವಾರ್ಥಸಾಧನೆಗಾಗಲಿ, ಹತ್ತುಜನ ಹೊಗಳಲಿ – ಎಂಬ ಹಂಬಲ ದಿಂದಾಗಲಿ ಎಂದಿಗೂ ಮಾಡಬಾರದು. ದೊಡ್ಡವರಿಗೆ ಅರ್ಪಿಸಬೇಕಾದ ವಸ್ತುಗಳು ಒಳ್ಳೆಯದೇ ಆಗಿರಬೇಕೆಂದು ಸಾಧಾರಣ ಬುದ್ಧಿಯವರೂ ಕೂಡ ಸಹಜವಾಗಿಯೇ ಗ್ರಹಿಸ ಬಲ್ಲರು. ಇನ್ನು 'ಈಶ್ವರಾರ್ಪಿತ' ಎಂಬ ಭಾವನೆ ಹೃದ್ಗತವಾದಾಗ, ಸಮರ್ಪಿಸಬೇಕಾದ ವಸ್ತು ಪೂರ್ಣತಃ ಪವಿತ್ರವೇ ಆಗಿರಬೇಕು. ಈ ಬಗೆಯ ವ್ಯಾವಹಾರಿಕ ಶೌಚ. ಆತ್ಮಶುದ್ಧಿಗೂ ಸಾಧಕವಾಗಿ ಈಶ್ವರಸಾಕ್ಷಾತಾರ ಅದೇ ಪ್ರಮಾಣದಲ್ಲಿ ಸುಲಭವೂ ಆದೀತು.

ಹೀಗೆ 'ದಾಶ್ವಾನ್' "ಕೊಡುವವನು" ತನ್ನ ಬಾಳನ್ನು ನೇರವಾಗಿ ಮಾಡಿ ಕೊಂಡಾಗ, ಕರುಣಾಮಯನಾದ ಪರಮಾತ್ಮ ಅಂತಹ ಆತ್ಮ – ಸಮರ್ಪಕನಿಗೆ ಯೋಗ್ಯವಾದ ಫಲವನ್ನೇ ದಯಪಾಲಿಸುತ್ತಾನೆ. ಆ ಫಲವನ್ನು ಈ ಮಂತ್ರ 'ಭದ್ರ' ಎಂಬ ಕೇವಲ

ಒಳ್ಳೆಯದೇ ಆಗಿರಬೇಕೆಂದು ಸಾಧಾರಣ ಬುದ್ಧಿಯವರೂ ಕೂಡ ಸಹಜವಾಗಿಯೇ ಗ್ರಹಿಸ ಬಲ್ಲರು. ಇನ್ನು 'ಈಶ್ವರಾರ್ಪಿತ' ಎಂಬ ಭಾವನೆ ಹೃದ್ಗತವಾದಾಗ, ಸಮರ್ಪಿಸಬೇಕಾದ ವಸ್ತು ಪೂರ್ಣತಃ ಪವಿತ್ರವೇ ಆಗಿರಬೇಕು. ಈ ಬಗೆಯ ವ್ಯಾವಹಾರಿಕ ಶೌಚ ಆತ್ಮಶುದ್ಧಿಗೂ ಸಾಧಕವಾಗಿ ಈಶ್ವರಸಾಕ್ಷಾತ್ಕಾರ ಅದೇ ಪ್ರಮಾಣದಲ್ಲಿ ಸುಲಭವೂ ಆದೀತು.

ಹೀಗೆ 'ದಾಶ್ವಾನ್' "ಕೊಡುವವನು" ತನ್ನ ಬಾಳನ್ನು ನೇರವಾಗಿ ಮಾಡಿ ಕೊಂಡಾಗ, ಕರುಣಾಮಯನಾದ ಪರಮಾತ್ಮ ಅಂತಹ ಆತ್ಮ – ಸಮರ್ಪಕನಿಗೆ ಯೋಗ್ಯವಾದ ಫಲವನ್ನೇ ದಯಪಾಲಿಸುತ್ತಾನೆ. ಆ ಫಲವನ್ನು ಈ ಮಂತ್ರ 'ಭದ್ರ' ಎಂಬ ಕೇವಲ ಎರಡೇ ಅಕ್ಷರಗಳ ಚಿಕ್ಕಪದದಿಂದ ವರ್ಣಿಸುತ್ತಿದೆ. ಏನು ಈ 'ಭದ್ರ' ? ಕನ್ನಡದ ಭದ್ರ ಅಲ್ಲವಿದು. ಈ ವೈದಿಕ ಶಬ್ದಕ್ಕೆ ಮಹದರ್ಥವಿದೆ. ಯಾಸ್ಕರು ತಮ್ಮ ನಿರುಕ್ತದಲ್ಲಿ – **"ಭದ್ರಂ ಭಜನೀಯಂ ಭೂತಾನಾಂ ಅಭಿದ್ರಮಣೀಯಂ ಭವದ್ರಮಯತೀತಿ ವಾ ಭಾಜನಾದ್ವಾ'** [4.2.10.2,] ಪ್ರಾಣಿಗಳಿಗೆ, ದೇಹಧಾರಿ ಜೀವರಿಗೆ ಸೇವನಾರ್ಹ ವಾದುದು; ಜೀವರಿಗೆ ಆರಾಮದಾಯಕವಾದುದು ಮತ್ತು ಗಳಿಸಲರ್ಹವಾದುದು ಭದ್ರ" – ಎಂಬುದಿದರ ಭಾವನೆ. ಆದರೆ ಸ್ಫುಟವಾಗಿ 'ಇದೇ ಭದ್ರ' ಎಂದು ಹೇಳಲು ಈ ಪರಿ ಭಾಷೆ ಸಾಲದು. ಅದೇ ಕಾರಣದಿಂದ ಯಾಸ್ಕರು ಶಾಟ್ಯಾಯನಿಗಳ ಮತವನ್ನು ಉದ್ಧರಿಸುತ್ತಾ – **"ಯಂದ್ವೈಪುರುಷಸ್ಯವಿತ್ತಂ, ತದ್ಭದ್ರಂ. ಗೃಹಾ ಭದ್ರಂ. ಪ್ರಜಾ ಭದ್ರಂ. ಪಶವೋ ಭದ್ರಂ."** ಎಂದು ಬೇರೆಯ ಕಡೆ ಹೇಳಿದ್ದಾರೆ. "ಮಾನವನ ಧನವು ಭದ್ರ; ಮನೆ ಭದ್ರ; ಸಂತತಿ ಭದ್ರ, ಪಶುಗಳು ಭದ್ರ." ಎಂದು ಇದರರ್ಥ. ಭದ್ರ – ಎಂಬ ಪದದ ಸಾಧಾರಣಾರ್ಥ 'ಮಂಗಳ' ಎಂದು. ಭೌತಿಕ ದೃಷ್ಟಿಯಿಂದ, ಮೇಲೆ ಎಣಿಸಿ ರುವುದೆಲ್ಲಾ ಭದ್ರವೇ; ಮಂಗಳವೇ; ಒಳಿತೇ ಸರಿ. ಸಾಯಣರೂ ಇದನ್ನೇ ಉದ್ಧರಿಸಿದ್ದಾರೆ. ಆದರೆ, ಆಧ್ಯಾತ್ಮಿಕ ಸಮುತ್ಕರ್ಷದ ಜ್ಞಾನಭಂಡಾರವಾದ ವೇದಗಳು, ಭೌತಿಕ ಸಂಪತ್ತಿನ ಬಗೆಗೆ ಅನ್ಯಶುಷ್ಕವೇದಾಂತಿಗಳಂತೆ, ತಿರಸ್ಕಾರ ತೋರುವಂತೆ, ವೇದಗಳು ತಿರಸ್ಕಾರ ತೋರವು. **" ವಯಂ ಸ್ಯಾಮ ಪತಯೋರಯೀಣಾಂ. "** [ಋ. 10.121.10.] **" ಇಂದ್ರ ಶ್ರೇಷ್ಠಾನಿದ್ರವಿಣಾನಿಧೇಹಿ. "** [ಋಗ್ವೇದ:- 2 21.6] – ಪ್ರಜಾಪತೇ! ನಾವು ಸಂಪತ್ತುಗಳ ಸ್ವಾಮಿಗಳಾಗೋಣ. " ; "ಸರ್ವೈಶ್ವರ್ಯವಾನ್ ದೇವ:– " "ನಮಗೆ ಶ್ರೇಷ್ಠವಾದ ಸಂಪತ್ತುಗಳನ್ನು ಕರುಣಿಸು " - ಎಂದು ಪ್ರಾರ್ಥಿಸುವುದನ್ನು ಕಲಿಸುತ್ತವೆ; ಆದರೆ, ಭೌತಿಕ ಧನವೇ ಸರ್ವಸ್ವ" ಎಂದು ವೇದಗಳು ಬೋಧಿಸವು. ಭೌತಿಕ ಸಂಪದ ಕ್ಕಿಂತಧಿಕ ಮಹತ್ತ್ವ ಆಧ್ಯಾತ್ಮಿಕ ಸಂಪದಕ್ಕಿದೆ ವೇದಗಳಲ್ಲಿ. ಆದಕಾರಣ ಆತ್ಮನಿಗೆ ಆರಾಮದಾಯಕವಾದ ಮಂಗಳವೇ ಭದ್ರ ಎನ್ನುತ್ತಾರೆ ಮಹರ್ಷಿಪ್ರವರರು. ಅದು ಯುಕ್ತವೇ ಆಗಿದೆ.

ಮುಂದಿನ ವಾಕ್ಯ ಆತ್ಮ – ಸಮರ್ಪಕನ ಅಂತರತಮದ ಭಾವನೆಯನ್ನು ಪ್ರತಿ ಬಿಂಬಿಸುತ್ತದೆ. ಲೋಕದಲ್ಲಿ ನ್ಯಾಯದಿಂದ ಹಣಗಳಿಸಿದವನಿಂದಲೂ ದಾನ ಪಡೆಯು

ಬಹುದು; ಅನ್ಯಾಯದಿಂದ ಅರ್ಜಿಸಿದವನಿಂದಲೂ ಪಡೆಯಬಹುದು. ಅನ್ಯಾಯದ ಗಳಿಕೆಯ ದಾನದಿಂದ ಸಾಂಸಾರಿಕ ಕ್ಲೇಶಗಳನ್ನೇನೋ ಒಂದು ಮಟ್ಟದವರೆಗೆ ನಿವಾರಿಸಿಕೊಳ್ಳ ಬಹುದು. ನ್ಯಾಯದ ಗಳಿಕೆಯ ದಾನದಿಂದಲೂ ಆತ್ಮನಿಗೆ ಅನ್ಯಾಯಾರ್ಜಿತ ವಿತ್ತದಿಂದಾ ಗುವಷ್ಟು ಆತ್ಮಗ್ಲಾನಿಯಾಗದಿದ್ದರೂ, ಬೇರೆಯವನಿಂದ ದಾನಪಡೆದ ಕರ್ಮದ ಫಲವಾಗಿ ಆತ್ಮಋಣಿಯಾಗುವುದು ತಪ್ಪದು. ಮನುವು **"ಪ್ರತಿಗ್ರಹಃ ಪ್ರತ್ಯವರಃ"** [10.109] "ಪ್ರತಿಗ್ರಹ ಅಷ್ಟು ಶ್ರೇಷ್ಟವಲ್ಲ." – ಎಂದಿರುವುದು ಇದೇ ದೃಷ್ಟಿಯಿಂದ.

ಹಾಗಾದರೆ, ಯಾರಿಂದ ಪಡೆಯಬೇಕು ದಾನ ? 'ಭದ್ರ' ಸಿಕ್ಕ ಬೇಕಾರಿಂದ ? ಈ ಮಂತ್ರ ಹೇಳುತ್ತದೆ. – "ತವ ಇತ್ ತತ್ ಸತ್ಯಂ" ನಿನ್ನದೇ ಆದ ಅದರಿಂದಲೇ ಆತ್ಮಾ ಭ್ಯುದಯವಾದೀತು. ಬಾಬಾಗಳು, ಪೀರರು, ಇತರ ವೇಷಧಾರೀ ಸಂತರು 'ಭದ್ರ'ವನ್ನು 'ಆತ್ಮಿಕಮಂಗಳ' ವನ್ನು ಕರುಣಿಸಲಾರರು. ದಿನಕ್ಕೊಂದು, ತಿಂಗಳಿಗೆ ಹತ್ತು 'ಬ್ರಹ್ಮಾ ಕುಮಾರೀ ಸಂಪ್ರದಾಯ 'ದಂತಹ ಆತ್ಮ ಘಾತಕ ಪ್ರವೃತ್ತಿಗಳು ಹೆಚ್ಚುತ್ತಿರುವ ಈ ಕಾಲ ದಲ್ಲಿ ಜನತೆ "ಭಗವಂತ ಕರುಣಿಸುವ ಭದ್ರಮಾತ್ರ ಆತ್ಮೋದ್ಧಾರಕ; ಉಳಿದೆಲ್ಲವೂ ಆತ್ಮಘಾತಕ." – ಎಂಬುದನ್ನೂ ಚೆನ್ನಾಗಿ ಗ್ರಹಿಸಬೇಕು.

"ಭಗವಂತ ಕರುಣಿಸುವ ಭದ್ರ ! ಅದೆಂತು ಲಭ್ಯ ? ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. ನಿರಾಕಾರನಾದ ಅವ್ಯಕ್ತ ಪರಮಾತ್ಮ ಕೈಯನ್ನೆತ್ತಿ ಏನನ್ನೂ ಕೊಡ ನೆಂಬುದು ಸತ್ಯ. ಇದರ ಕ್ರಮ ಹೀಗಿದೆ. ಮಾನವ ನಿಜವಾಗಿ ಪ್ರಾಮಾಣಿಕನಾಗಿ ಸಂಪದರ್ಜನೆ ಮಾಡುತ್ತಾನೆ. ಆದರೆ, 'ಯಾರಿಗಾದರೂ ಕೊಡಬೇಕು.' ಎಂಬ ಯೋಚನೆ ಅವನಿಗಿರುವುದಿಲ್ಲ. ಇದ್ದಕ್ಕಿದ್ದಂತೆ ಬಂದ ಸತ್ಪುರುಷನಿಗೆ, ನಿರುದ್ದೇಶ್ಯವಾಗಿ, ಯಾವದೇ ಒಂದು ಆಲೋಚನೆಯೂ ಇಲ್ಲದೆ ದಾನಮಾಡುತ್ತಾನೆ. ದಾತೃವಿಗೂ ಆ ಯೋಚನೆಯಿಲ್ಲ; ಗ್ರಹೀತೃವಿಗೂ ಆ ಯೋಚನೆಯಿಲ್ಲ. ಆದರೆ, ಪ್ರಭು – ಪ್ರೇರಣೆಯಿಂದ, ಯಾವದೊಂದು ನಿರೀಕ್ಷಣೆ ಅಥವಾ ಅಪೇಕ್ಷೆಯೂ ಇಲ್ಲದೆ ದಾನಿ ಕೊಟ್ಟುಬಿಡುತ್ತಾನೆ; ಸತ್ಪುರುಷ ಸ್ವೀಕರಿಸು ತ್ತಾನೆ. ಈ ರೀತಿ ಬಂದುದೇ ಈಶ್ವರೀಯ ಸತ್ಯ. ಅದೇ ನಿಜವಾದ ಭದ್ರಕಾರಿ. ಸಾಧಕನ ಸಾಧನೆ ಸತ್ಪಥದಲ್ಲಿ ಸಾಗಿ, ಸರ್ವವಿಧದಿಂದಲೂ ಸಮುತ್ಥಾನ ಸಿದ್ಧಿಸುವ ಸತ್ಪಥ ವಿದೆ. ಇಂತಹ ದಾನ ದಾಶ್ವಾನ್ - ಎಂದರೆ ಆತ್ಮಸಮರ್ಪಕನಿಗೆ ಮಾತ್ರ ಲಭ್ಯ. ದಾಶ್ವಾನ್‌ಪುರುಷ ಆತ್ಮೋದ್ಧಾರಕ್ಕಾಗಿ, ಕೂರಲಗಿನ ಕತ್ತಿಯ ಹರಿತವಾದ ಅಲಗಿನ ಮೇಲೆ ನಡೆಯುತ್ತಾನೆ. ಉಪವಾಸವಿದ್ದಾನು; ಸತ್ಯವಲ್ಲದ 'ಭದ್ರ'ಕ್ಕೆ ಆತ್ಮಸಮರ್ಪಕ ಕೈಚಾಚನು. "ಆತ್ಮಸಮರ್ಪಕನಿಗೆ ಭದ್ರವನ್ನುಂಟುಮಾಡುವುದು ನಿನ್ನದೇ ಆದ ಸತ್ಯ." – ಎಂಬುದು ನೆನಪಿದ್ದರೆ, ಮಾನವ ಎಂತಹ ದುರವಸ್ಥೆಯಲ್ಲಿಯೂ ಎದೆಗುಂದನು. ಏಕೆಂದರೆ ಅವನು ಬಲ್ಲನು:– **''ನಹಿ ಕಲ್ಯಾಣಕೃತ್ಕಶ್ಚಿತ್ ದುರ್ಗತಿಂ ತಾತಗಚ್ಛತಿ."** [ಗೀತಾ:– 6.40.] "ಪ್ರಿಯನೇ! ಕಲ್ಯಾಣ ಮಾಡುವವನಾವನೂ ದುರ್ಗತಿ ಹೊಂದನು." ಎಂಬ ದೃಢವಾದ ನಂಬಿಕೆಯಿರುತ್ತದೆ.

## ಸಂಹಿತಾ ವಿಭಾಗ

**ಉಪ ತ್ವಾಗ್ನೇ ದಿವೇದಿವೇ ದೋಷಾವಸ್ತರ್ಧಿಯಾ ವಯಂ ।**

**ನಮೋ ಭರಂತ ಏಮಸಿ ॥೭॥**

**ಪದಪಾಠ:–** ಉಪ, ತ್ವಾ, ಅಗ್ನೇ, ದಿವೇದಿವೇ, ದೋಷಾವಸ್ತಃ, ಧಿಯಾ. ವಯಂ, ನಮಃ, ಭರಂತಃ, ಆ, ಇಮಸಿ.

**ಅನ್ವಯ:–** ಅಗ್ನೇ ! ವಯಂ ದಿವೇದಿವೇ, ದೋಷಾವಸ್ತಃ ಧಿಯಾ ನಮಃ ಭರಂತಃ ತ್ವಾ ಉಪ ಆ ಇಮಸಿ.

**ಶಬ್ದಾರ್ಥ:–** [ಅಗ್ನೇ] ಜ್ಯೋತಿರ್ಮಯನೇ ! [ವಯಂ] ನಾವು, [ದಿವೇದಿವೇ] ಪ್ರತಿದಿನವೂ, [ದೋಷಾವಸ್ತಃ] ಹಗಲೂ–ಇರುಳೂ, [ಧಿಯಾ] ಬುದ್ಧಿಪೂರ್ವಕವಾಗಿ ಮತ್ತು ತದನುಕೂಲ ಕರ್ಮದೊಂದಿಗೆ, [ನಮಃ ಭರಂತಃ] ನಮಸ್ಕಾರ ಮಾಡುತ್ತಾ, [ತ್ವಾ ಉಪ] ನಿನ್ನಬಳಿ, [ಆ ಇಮಸಿ] ಬರುತ್ತೇವೆ.

**ತಾತ್ಪರ್ಯ:–** ಓ ಜ್ಯೋತಿಃಸ್ವರೂಪನೇ ! ನಾವು ಪ್ರತಿದಿನವೂ, ಹಗಲಿರುಳೂ, ಉತ್ತಮ ಪ್ರಜ್ಞೆ ಹಾಗೂ ಉತ್ತಮಕರ್ಮವನ್ನುಳ್ಳವರಾಗಿ ನಮಸ್ಕಾರಮಾಡುತ್ತಾ ನಿನ್ನ ಉಪಾಸನೆ ಮಾಡುತ್ತೇವೆ.

**ಭಾಷ್ಯ:–** ಪ್ರಥಮ ಮಂತ್ರದಿಂದಲೂ ವರ್ಣಿಸಲ್ಪಡುತ್ತಾ ಬಂದಿರುವ ಪರಮಾತ್ಮ ಉಪಾಸನಾಕ್ರಮವನ್ನೇ ಈ ಮಂತ್ರ ಅಭಿವರ್ಣಿಸುತ್ತಿದೆ. ಉಪಾಸಕನೆನ್ನಿ; ಸಾಧಕನೆನ್ನಿ; ಭಕ್ತನೆನ್ನಿ. ಅವನಲ್ಲಿ ಭಗವಂತನ ಬಗೆಗೆ ಮೊಟ್ಟಮೊದಲು ಉದಿಸಬೇಕಾದ ಭಾವನೆ–ವಿನಯ, ಶೀಲತೆ, ನಮ್ರತೆ. ನವವಿಧಾಭಕ್ತಿ–ಎಂದು ಏನೇನೂ ಮನಬಂದ ಊಹಾಪೋಹಗಳನ್ನು ಮಾಡಿಕೊಂಡು, "ದ್ವೇಷಮಯಭಕ್ತಿಯಿಂದಲೂ ಭಗವಂತನನ್ನು ಮೆಚ್ಚಿಸಬಹುದು. ಹಿರಣ್ಯಾಕ್ಷ–ಹಿರಣ್ಯಕಶಿಪುಗಳು, ರಾವಣ–ಕುಂಭಕರ್ಣರು, ಶಿಶುಪಾಲ–ದಂತವಕ್ರರು ಹೀಗೆ ವೈರಮಯ ಭಕ್ತಿಯಿಂದಲೇ ಭಗವಂತನನ್ನು ಮೆಚ್ಚಿಸಿ, ಮೋಕ್ಷಗಾಮಿಗಳಾದರು." – ಎಂದೆಲ್ಲಾ ಕಂತೆಪುರಾಣ ಹೇಳಿ, ಪಾಮರಕೋಟಿಯನ್ನು ಭ್ರಾಂತಿಗೆ ಸಿಲುಕಿಸುವುದು ಮಹಾಶೋಚನೀಯ. ಪರಿಶುದ್ಧ ದಾರ್ಶನಿಕ ದೃಷ್ಟಿಯಿಂದ ನೋಡುವುದಾದರೆ, ಮೊದಲೇ, ಸ್ವರೂಪತಃ ಆನಂದಮಯನೂ, ನಿತ್ಯತೃಪ್ತನೂ ಆದ ಈಶ್ವರನನ್ನು 'ಮೆಚ್ಚಿಸುವುದು' - ಎಂಬ ಮಾತೇ ಅಸಂಗತ. ಮೆಚ್ಚಿ ಹರ್ಷಿತನಾಗುವುದು, ಮೆಚ್ಚದೆ ಮುನಿಯುವುದು - ಇದೆಲ್ಲಾ ಅಪೂರ್ಣನಾದ ಮಾನವನಿಗೆ ಅನ್ವಯಿಸುವುದೇ ಹೊರತು ಪೂರ್ಣನಾದ ಪರಮಾತ್ಮನಿಗಲ್ಲ.

Perfection leaves nothing to want - ಎಂಬ ಹರ್ಬರ್ಟ್ ಸ್ಪೆನ್ಸರನ ವಾಕ್ಯ ನೆನಪಿದ್ದರೆ ,ಅನೇಕ ಅಜ್ಞಾನಭಿತ್ತಿಗಳು ತಮ್ಮಷ್ಟಕ್ಕೆ ತಾವೇ ಮುರಿದು ಬೀಳುವವು.

ಉಪಾಸನೆ ಮಾಡುವುದು ಉಪಾಸಕನ ಉದ್ಧಾರಕ್ಕಾಗಿಯೇ ಹೊರತು ಉಪಾಸ್ಯನ ಉದ್ಧಾರಕ್ಕಲ್ಲ. "ಉಪಾಸ್ಯ ನಿತ್ಯಸತ್ಯ; ಪೂರ್ಣಾನಂದ; ಪ್ರಾಪ್ತಸರ್ವಸ್ವ. ಅವನನ್ನು ಪ್ರಸನ್ನಗೊಳಿಸಲು ಅಥವಾ ಅಪ್ರಸನ್ನಗೊಳಿಸುವುದು ಸಾಧ್ಯವಲ್ಲದ ಸಂಗತಿ. ಆದ ಕಾರಣ, "ಭಗವತ್‌ಪ್ರೀತ್ಯರ್ಥ ಈ ಕರ್ಮ." ಎಂಬ ಅಶುದ್ಧಕಲ್ಪನೆಗೆ ಅಪ್ಪಣೆಚೀಟಿಕೊಟ್ಟು ಆಚೆಗಟ್ಟಿ, "ಆತ್ಮೋದ್ಧಾರದ ಸಲುವಾಗಿ ಈ ಕರ್ಮ" ಎಂಬ ಸತ್ಯಸಿದ್ಧಾಂತವನ್ನು ಅಂಗೀಕರಿಸಿ, ಸಮ್ಪ್ರೀತಿಯಿಂದ ಭಗವಂತನ ಶುಭಗುಣಗಳನ್ನು ಬಾಳಿಗಿಳಿಸಿಕೊಳ್ಳುವ ಸಲುವಾಗಿಯೇ ಉಪಾಸನೆ ಮಾಡಬೇಕು. ಸ್ವಾರ್ಥವೆಂದು ತೋರುವುದೇ ? ನಿಜ. ಮೋಕ್ಷ - ಆನಂದ - ಶಾಂತಿಗಳ ಕಾಮನೆ ಸ್ವಾರ್ಥವಲ್ಲದೆ ಮತ್ತೇನು ?

ವೆಂಕಟ-ಮಾಧವರು ಹಾಗೂ ಆನಂದತೀರ್ಥಸ್ವಾಮಿಗಳು 'ದೋಷಾ' ಎಂದರೆ ರಾತ್ರಿಯೆಂದೂ, ವಸ್ತಃ–ಎಂದರೆ ಹಗಲೆಂದೂ ಹೇಳಿದ್ದಾರೆ. ಮಹರ್ಷಿದಯಾನಂದರು ಆ ಪದಗಳಿಗೆ ಅದೇ ಅರ್ಥ ಹೇಳುತ್ತಾರೆ. ನಿರುಕ್ತಕಾರರು **'ದೋಷೇತಿ ರಾತ್ರಿ ನಾಮುಸು ಪಠಿತಂ."** ಎಂದಿದ್ದಾರೆ. ರಾತ್ರಿಯ ಸಂದರ್ಭದಿಂದ **'ವಸ್ತ:'** ಎಂಬುದು 'ದಿನ'ವೆಂದು ಗ್ರಾಹ್ಯವೆಂದಿದ್ದಾರೆ ಮಹರ್ಷಿದಯಾನಂದರು. "ದಿವೇದಿವೇ" ಎಂಬಲ್ಲಿ ಮಹರ್ಷಿ ಪ್ರವರರ ಅಲೌಕಿಕಪ್ರಜ್ಞೆ ಅನ್ಯರು ಕಾಣದ ಅಂತರಾರ್ಥವನ್ನು ಗ್ರಹಿಸಿದೆ. **"ವಿಜ್ಞಾನಸ್ಯ ಪ್ರಕಾಶಾಯ ಪ್ರಕಾಶಾಯ"** ಎಂದಿದ್ದಾರೆ ತಮ್ಮ ಋಗ್ಭಾಷ್ಯದಲ್ಲಿ. ಎಷ್ಟೆಂದರೂ ಋಷಿ ದೃಷ್ಟಿ. ಅದರ ಆಳವೇ ಬೇರೆ. ಯೋಗದರ್ಶನಕಾರ ಮಹರ್ಷಿಪತಂಜಲಿಗಳ **"ತತ್ರ ನಿರತಿಶಯಂ ಸಾರ್ವಜ್ಞ್ಯಬೀಜಂ"** [ಸಮಾಧಿ - 25] - ಆ ಭಗವಂತನಲ್ಲಿ ಸರ್ವಾತಿಶಯವಾದ ಸರ್ವಜ್ಞತ್ವದ ಬೀಜವಿದೆ."–ಎಂಬ ಸೂತ್ರದ ಸತ್ಯತ್ವವನ್ನು ಸಾಕ್ಷಾತ್ಕರಿಸಿಕೊಂಡು, " ಒಂದಲ್ಲ; ಹಲವಾರು ವಿಜ್ಞಾನಗಳ ಮೂಲವಿದೆ ಭಗವಂತನಲ್ಲಿ. ಅದರಲ್ಲಿ ಒಂದೊಂದರ ಪ್ರಕಾಶಪ್ರಾಪ್ತಿಗಾಗಿಯೂ ಉಪಾಸನೆ ಮಾಡಬೇಕು" ಎಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ. ಮತ್ತೆ ಆ ಭಗವಂತನೂ ಅವಿಚ್ಛಿನ್ನವಾಗಿಯೇ ವಿರಾಜಿಸುವ ಜ್ಯೋತಿರ್ಮಯ. ಋಗ್ವೇದ - **'ದೋಷಾವಸ್ತೋರ್ದಿವೇದಿವಾಂ ಸಮನು ದ್ಯೂನ್'** - [4. 4. 9.] - "ರಾತ್ರಿ - ಹಗಲು ಜಗಜಗಿಸುವ ಭಗವಂತನನ್ನು ದಿನವೂ ಸ್ಮರಿಸೋಣ"- ಎನ್ನುತ್ತಿದೆ. ಮಹರ್ಷಿ ಅದನ್ನೇ ವ್ಯಕ್ತಪಡಿಸಿದ್ದಾರೆ.

ಇನ್ನುಳಿದುದು "ಧಿಯಾ ಉಪ ಏಮಸಿ." - ಎಂಬುದು ಹಿಂದೆ ಹೇಳಿದ್ದೇನೆ. ವೈದಿಕಧರ್ಮ ಎಲ್ಲಕ್ಕಿಂತಧಿಕ ಮಹತ್ತ್ವಕೊಡುವುದು 'ಧೀಃ' ಗೆ, ಇದೊಂದು ವಿಚಿತ್ರ ಶಬ್ದ. ಅಥರ್ವವೇದದಿಂದ 'ವೇದಮಾತಾ' [19.71.1.] ಗಾಯತ್ರೀ ವೈದಿಕ ಧರ್ಮೀಯರ ಗುರು ಮಂತ್ರ. ಅದರ ಪಲ್ಲವಿಯೇ **''ಧಿಯೋ ಯೋನಃ ಪ್ರಚೋದಯಾತ್''** -

ಎಂಬುದು. "**ಧೀರಿತಿ ಪ್ರಜ್ಞಾಕರ್ಮನಾಮಸು ಪಠಿತಂ.**" – ಎಂಬ ನಿರುಕ್ತ ವಾಕ್ಯ - 'ಧೀ ಶಬ್ದ ಪ್ರಜ್ಞೆ ಮತ್ತು ಕರ್ಮ - ಎಂಬರ್ಥಗಳಲ್ಲಿ ಹೇಳಲ್ಪಟ್ಟಿದೆ.' ಎನ್ನುತ್ತದೆ. ಎಂದ ಮೇಲೆ, '**ಅಗ್ನೇ! ತ್ವಾ ಉಪ ಏಮಸಿ**' – 'ಭಗವನ್! ನಿನ್ನ ಉಪಾಸನೆ ಮಾಡುತ್ತೇನೆ.' ಎಂದು ಆತ್ಮನಿವೇದನೆ ಮಾಡಿಕೊಳ್ಳುವ ಉಪಾಸಕರು, ಸದ್ಬುದ್ಧಿಗೆ ಬೀಗ ಬಡಿದು. ಸತ್ಕರ್ಮಕ್ಕೆ ಬೀಳ್ಕೊಡುಗೆಯು ಸಮಾರಂಭ ಮಾಡಿ. ಉಪಾಸನೆಗೆ ಕುಳಿತುಕೊಳ್ಳಲಾರರು. ಬುದ್ಧಿಯ ಪ್ರಯೋಗ ಮತ್ತು ಸತ್ಕರ್ಮಾನುಷ್ಠಾನವಿಲ್ಲದೆ, ಯಾವನೂ ವೈದಿಕ ಧರ್ಮೀಯನಾಗಲಾರನು. ಪ್ರಜ್ಞಾಕರ್ಮ ಸಂಶೋಧನವೇ ವೈದಿಕ ಧರ್ಮದ ಮೊಟ್ಟಮೊದಲ ಕರೆ - ಎಂಬುದು ಸದಾಸ್ಮರಣೀಯ.

ಕೆಲವರು ಪ್ರಾತಃ ಸಾಯಂಕಾಲಗಳ ಸಂಧ್ಯಾವಂದನೆಗಾಗಿ ಇದು ಪ್ರಮಾಣವೆಂದು ಉದ್ಧರಿಸುವುದುಂಟು. ಆದರೆ, ಮೊದಲಾಗಿ 'ದೋಷಾವಸ್ತ' - ಎಂಬುದು ರಾತ್ರಿ ಹಗಲುಗಳ ಸೂಚಕವೇ ಹೊರತು ಬೆಳಕು - ಸಂಜೆಗಳ ದ್ಯೋತಕವಲ್ಲ, ಎರಡನೆಯದಾಗಿ, ಶೀತವಲಯಗಳಲ್ಲಿ ಹಗಲು - ರಾತ್ರಿಗಳ ವ್ಯವಸ್ಥೆ ಆರು - ಆರು ತಿಂಗಳದಾಗಿದೆ. ಆರು ತಿಂಗಳಿಗೊಂದು ಸಂಧ್ಯಾ! ಅಸಂಭವ. ಮತ್ತು ಉತ್ತರಧ್ರುವ ಸದಾ ಸೂರ್ಯಾಭಿಮುಖವಾಗಿಯೇ ಇರುವುದರಿಂದ ಸದಾ ಹಗಲೇ! ಅಲ್ಲಿನ ನಿವಾಸಿಗಳ ಸಂಧ್ಯೆಯು ಗತಿ ಏನು? ಈಗಲ್ಲಿ ವೈದಿಕ ಧರ್ಮೀಯರಿಲ್ಲ; ಆದಕಾರಣ ಈ ಸಮಸ್ಯೆ ಉದಿಸದು - ಎಂಬುದು ದೂರದೃಷ್ಟಿಯುಳ್ಳವರ ಮಾತಲ್ಲ. ನೋಡುತ್ತಾ - ನೋಡುತ್ತಲೇ ರಷ್ಯಾ, ಸೈಬೀರಿಯಾದ ಅದೆಷ್ಟೋ ಭೂಪ್ರದೇಶವನ್ನು ಫಲವತ್ತಾದ ಧಾನ್ಯ ಬೆಳೆಯುವ ಹೊಲ -ಗದ್ದೆಗಳಾಗಿ ಪರಿವರ್ತಿಸಿತು. ಸಾರ್ವಭೌಮ ವೈದಿಕ ಧರ್ಮ ಒಂದಲ್ಲ ಒಂದು ದಿನ ಅಲ್ಲಿಗೂ ಕಾಲಿಡಬಹುದು; ಇಡಬೇಕು. ಹಾಗೆ ಆದಾಗ ಯೋಚಿಸಿರಿ. ಸಂಧ್ಯಾನಿಯಮ ಏನಾದೀತು? ಆದಕಾರಣ ನಾವೀಮಂತ್ರದಿಂದ ದ್ವಿಕಾಲ ಸಂಧ್ಯಾ ಸಾಧಿಸುವುದಿಲ್ಲ.

### ಸಂಹಿತಾ ವಿಭಾಗ

**ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಂ ।**

**ವರ್ಧಮಾನಂ ಸ್ವೇ ದಮೇ ॥೮॥**

**ಪದಪಾಠ:**– ರಾಜಂತಂ, ಅಧ್ವರಾಣಾಂ, ಗೋಪಾಂ, ಋತಸ್ಯ, ದೀದಿವಿಂ, ವರ್ಧಮಾನಂ, ಸ್ವೇ, ದಮೇ.

**ಅನ್ವಯ:**– ಅಧ್ವರಾಣಾಂ ರಾಜಂತಂ, ಗೋಪಾಂ, ಋತಸ್ಯ ದೀದಿವಿಂ, ಸ್ವೇದಮೇ ವರ್ಧಮಾನಂ (ಏಮಸಿ).

**ಶಬ್ದಾರ್ಥ:**– [ಅಧ್ವರಾಣಾಂ] ಹಿಂಸಾರಹಿತ ಕರ್ಮಗಳನ್ನು [ರಾಜಂತಂ] ಪ್ರಕಾಶ ಪಡಿಸುವವನೂ, ಅಥವಾ, [ಅಧ ರಾಣಾಂ] ಹಿಂಸಾರಹಿತಕರ್ಮಗಳಲ್ಲಿ, [ರಾಜಂತಂ] ಪ್ರಕಾಶಿ ಸುವವನೂ, [ಗೋಪಾಂ] ವಾಕ್ಕು, ಭೂಮಿ, ಇಂದ್ರಿಯಗಳು, ಸೂರ್ಯರಶ್ಮಿಗಳು ಹಾಗೂ ಹಸುಗಳನ್ನು ರಕ್ಷಿಸುವವನೂ, [ಋತಸ್ಯ] ಸತ್ಯದ, ಯಜ್ಞದ, ನ್ಯಾಯದ, ಧರ್ಮದ ಹಾಗೂ ವೇದಜ್ಞಾನದ, [ದೀದಿವಿಂ] ನಿರಂತರ ಪ್ರಕಾಶಕನೂ, [ಸ್ವೇ ದಮೇ] ತನ್ನದಾದ ಶಾಸನದಲ್ಲಿ. [ವರ್ಧಮಾನಂ] ಅಭಿನಂದನೀಯನೂ, ಅಥವಾ, [ಸ್ವೇ ದಮೇ] ತನ್ನ ಆನಂದದಲ್ಲಿ, [ವರ್ಧ ಮಾನಂ] ಹೆಚ್ಚುಹೆಚ್ಚಾಗಿ ಜ್ಞಾನಿಗಳ ಅರಿವಿಗೆ ಬರುವವನೂ ಆದ ಭಗವಂತನನ್ನು [ಏಮಸಿ] ಎಲ್ಲೆಡೆಯಿಂದಲೂ ಹೊಂದುತ್ತೇವೆ; ಉಪಾಸನೆ ಮಾಡುತ್ತೇವೆ.

**ಭಾಷ್ಯ:**– ಈ ಮಂತ್ರದಲ್ಲಿ ಕ್ರಿಯಾಪದವಿಲ್ಲ. ಆದ ಕಾರಣ, ಮೇಲಿನ ಮಂತ್ರ ದಿಂದ ಏಮಸಿ ಆ ಇಮಸಿ—ಎಂಬ ಕ್ರಿಯೆಯನ್ನು ಅಧ್ಯಾಹಾರವಾಗಿ ತೆಗೆದುಕೊಳ್ಳಬೇಕು. ಈ ಮಂತ್ರ ಅದೇ ವಿಶ್ವಬ್ರಹ್ಮಾಂಡದ ಏಕಮಾತ್ರ ಅಧಿನಾಯಕನಾದ ಪರಮಾತ್ಮನ ಮತ್ತೂ ಹಲವು ವಿಶಿಷ್ಟಗುಣಗಳನ್ನು ಬಣ್ಣಿಸುತ್ತಿದೆ. ಕೆಲವು ಪದಗಳನ್ನು ಎರಡೆರಡು ರೂಪಗಳಲ್ಲಿ ಇಡಬಹುದಾದ ಕಾರಣ, ಅರ್ಥದಲ್ಲಿಯೂ ಸ್ವಲ್ಪ ಆಧಿಕ್ಯ ಉಂಟಾಗುವುದು ಸಹಜ. ಮೊದಲನೆಯದಾಗಿ, 'ಅಧ್ವರಾಣಾಂ ರಾಜಂತಂ' - ಎಂಬೆರಡು ಶಬ್ದಗಳನ್ನೇ ಗ್ರಹಿ ಸೋಣ. ಈ ಸ್ಥಳದಲ್ಲಿ ವಿಭಕ್ತಿವ್ಯತ್ಯಯವಿದೆ–ಎಂದು ತಿಳಿದು 'ಅಧ್ವರೇಷು ರಾಜಂತಂ' ಎಂಬ ರೂಪವನ್ನು ಗ್ರಹಿಸಬಹುದು. ಇದರ ಅರ್ಥ 'ಅಧ್ವರಗಳಲ್ಲಿ ಪ್ರಕಾಶಿಸುವವನು'— ಎಂದಾಗುತ್ತದೆ. ನಿರುಕ್ತದಲ್ಲಿ — **"ಅಧ್ವರ ಇತಿ ಯಜ್ಞನಾಮ ಧ್ವರತಿರ್ಹಿಂಸಾಕರ್ಮಾ ತತ್ಪ್ರತಿಷೇಧ:"** [ನೈಗಮಕಾಂಡ 1.3.8.3] ಎನ್ನುತ್ತಾರೆ ಯಾಸ್ಕರು. "ಅಧ್ವರ ಎಂಬುದು ಯಜ್ಞದ ಹೆಸರು. ಧ್ವರ—ಎಂದರೆ ಹಿಂಸೆ. ಅದರ ಪ್ರತಿಷೇಧ ಹೊಂದಿರುವುದು ಅಧ್ವರ." ಎಂದಿದರ ತಾತ್ಪರ್ಯ. ಹಿಂಸಾರಹಿತವಾದ ಕರ್ಮವೇ ಯಜ್ಞ ಇಂತಹ ಅಧ್ವರಗಳನ್ನು ಮಾಡುವುದೇಕೆ ? ಯಜ್ಞಗಳ ಉದ್ದೇಶವೇನು ? ಜಲ-ವಾಯು ಗಳ ಶುದ್ಧಿ, ವೃಷ್ಟಿಯನ್ನು ತರುವುದು - ಇದೆಲ್ಲವೂ ಸರಿಯೇ. ಆದರೆ–ಇವೆಲ್ಲಾ ಯಜ್ಞದ ಭೌತಿಕಪಕ್ಷಗಳಾದವು. ಇವು ಹೇಯವೇನಲ್ಲ; ಉಪಾದೇಯವೇ ಸರಿ. ಮಾನವ, ಇದನ್ನೆಲ್ಲ ಪಡೆದೂ ಕೂಡ ಮಾನವಜನ್ಮವೇತಕ್ಕಾಗಿ ಪ್ರಾಪ್ತವಾಗಿದೆಯೋ, ಅದನ್ನೇ ಮರೆತರೆ, ಸಾಧನ ವನ್ನೇ ಸಾಧ್ಯವೆಂದು ತಿಳಿಯುವಂತಹ ಮೌಢ್ಯವಾದೀತು. ಋಗ್ವೇದ ಹೇಳುತ್ತಲಿದೆ:—

**ಯಸ್ಮಾದೃತೇ ನ ಸಿಧ್ಯತಿ ಯಜ್ಞೋವಿಪಶ್ಚಿತಶ್ಚನ ।**
**ಸ ಧೀನಾಂ ಯೋಗಮಿನ್ವತಿ ॥**

[ಋಗ್ವೇದ 1. 18.7.]

"[ಯಸ್ಮಾತ್ ಋತೇ] ಯಾವನಿಲ್ಲವಾದರೆ, [ವಿಪಶ್ಚಿತಃ ಚನ] ಮಹಾವಿದ್ವಾಂಸನ, [ಯಜ್ಞಃ ನ ಸಿಧ್ಯತಿ] ಯಜ್ಞಕೂಡ ಸಿದ್ಧಿಸದೋ, [ಸಃ] ಆ ಭಗವಂತನೇ, [ಧೀನಾಂ]

ಪ್ರಜ್ಞಾ—ಕರ್ಮಗಳೆಲ್ಲವರ, [ಯೋಗಂ ಇನ್ವತಿ] ಸಂಯೋಜನಕ್ಕೆ ಅರ್ಹನಾಗಿರುತ್ತಾನೆ." ಬೇರೆಯು ಕಡೆ ವೇದ ಭಗವಂತನನ್ನು **'ಯಜ್ಞಸ್ಯ ಸಾಧನಂ'** [ಋಕ್:- 1.44.11.] "ಯಜ್ಞಕ್ಕೆ ಸಾಧನ ಆ ಜ್ಯೋತಿರ್ಮಯ ಪ್ರಭು" - ಎಂದಿದೆ. ಇದೇ ಸೂಕ್ತದ ಪ್ರಥಮ ಮಂತ್ರದಲ್ಲಿಯೇ, 'ಯಜ್ಞಸ್ಯ ದೇವಂ' [ಋಕ್ :- 1.1.1.] "ಯಜ್ಞದ ದೇವನು" ಎಂದು ಓದಿದ್ದೇವೆ. ಹೀಗೆ ಭಗವಂತ 'ಯಜ್ಞಗಳಲ್ಲಿ ಪ್ರಕಾಶಿಸುವವನು' ಎಂಬುದು ಸ್ಪಷ್ಟವಾಗುತ್ತದೆ. ಎರಡನೆಯದಾಗಿ, ವಿಭಕ್ತಿ - ಪರಿವರ್ತನದ ಗೋಜಿಗೆ ಹೋಗದೆ, ನೇರವಾಗಿ **'ಅಧ್ವರಾಣಾಂ ರಾಜಂತಂ'** - ಎಂದಿಟ್ಟುಕೊಂಡರೂ, "ಯಜ್ಞಗಳ ಪ್ರಕಾಶಕನು."— ಎಂದೂ ಗ್ರಹಿಸಬಹುದು. ವೇದಗಳ ಮೂಲಕ ಭಗವಂತನು —**"ಪಂಚಜನಾ ಮಮ ಹೋತ್ರಂ ಜುಷಂತಾಂ"** [ಋಕ್ 10.53.5.] - "ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ-ನಿಷಾದರೆಂಬ ಐದು ಬಗೆಯ ಜನರೂ ನನ್ನ ಯಜ್ಞವನ್ನು ಪ್ರೀತಿಸಿರಿ; **''ಪ್ರಾತರ್ಯಜಧ್ವಂ"** [ಋಕ್:- 5.77.2.]; **"ನ ಯಜಮಾನ ರಿಷ್ಯಸಿ.''** [ಋಕ್:-3.31 16.] "ಓ ಯಜ್ಞಕರ್ತ ! ನೀನೆಂದಿಗೂ ನಾಶಹೊಂದುವುದಿಲ್ಲ"; **''ಯಜ್ಞೋಹಿತ ಇಂದ್ರ ವರ್ಧನೋಭೂತ್''** [ಋಕ್:- 3.32.12.] "ಓ ಇಂದ್ರಿಯವಾನ್ ಜೀವ! ಯಜ್ಞವೇ ನಿನ್ನನ್ನು ಸಮೃದ್ಧನನ್ನಾಗಿ ಮಾಡುವಂತಹುದಾಗಿದೆ."; **"ಯಜ್ಞೋ ದೇವಾನಾಂ ಪ್ರತ್ಯೇತಿ ಸುಮ್ನಂ"** [ಯಜುಃ- 8.4.] - "ಯಜ್ಞವು ವಿದ್ವಾಂಸರಿಗೆ ಸುಖವನ್ನು ಒದಗಿಸುತ್ತದೆ." - ಈ ಮೊದಲಾಗಿ ಹೇಳಿ, ಯಜ್ಞಗಳ ಪ್ರಕಾಶಕನೂ ಆಗಿದ್ದಾನೆ.

ಈಗ 'ಗೋಪಾಂ' ಶಬ್ದವನ್ನು ಕುರಿತು ಆಲೋಚಿಸೋಣ. ಈ ಪದವನ್ನು ಏಕೈಕ ಶಬ್ದವೆಂದು ಗ್ರಹಿಸಿ, 'ರಕ್ಷಕ' ಎಂದರ್ಥಮಾಡಬಹುದು. ಈ ಪಕ್ಷ ಹಿಡಿದಲ್ಲಿ 'ರಕ್ಷಿಸಲ್ಪಡುವ ತತ್ತ್ವವಾವುದು ?' ಎಂಬ ಪ್ರಶ್ನೆ ಉದ್ಭವಿಸುತ್ತದೆ. ಆಗ 'ಋತಸ್ಯ ಶಬ್ದವನ್ನು ರಕ್ಷಣೀಯ ತತ್ತ್ವವೆಂದು ಅಂಗೀಕರಿಸಿ, ಸತ್ಯದ, ನ್ಯಾಯದ, ಧರ್ಮದ, ಯಜ್ಞದ ಹಾಗೂ ವೇದಜ್ಞಾನದ ರಕ್ಷಕನೆಂದು ಹೇಳಬೇಕಾಗುವುದು. ಅದೂ ಪೂರ್ಣತಃ ಶಾಸ್ತ್ರ – ಸಮ್ಮತವೂ, ತರ್ಕಸಂಗತವೂ ಆದ ಭವ್ಯವಾದ, ಗ್ರಾಹ್ಯವಾದ ಚೇತೋಹಾರೀ ಅರ್ಥವೇ ಆದೀತು. ಏಕೆಂದರೆ – ಭಗವಂತನು ಇದೆಲ್ಲದರ ರಕ್ಷಕನೂ ಆಗಿದ್ದಾನೆ. ಈ ಪಕ್ಷದಲ್ಲಿ 'ದೀದಿವಿಂ' ಶಬ್ದವನ್ನು 'ಗೋಪಾಂ' ಎಂಬುದರ ವಿಶೇಷಣವೆಂದು ಗ್ರಹಿಸಿ, **''ಋತಸ್ಯ ದೀದಿವಿಂ ಗೋಪಾಂ"** – "ಸತ್ಯಾದಿ ತತ್ತ್ವಗಳ ಪ್ರಕಾಶಮಾನ್ ರಕ್ಷಕನೆಂದು ಅರ್ಥ ಮಾಡಬಹುದು. ಅಥವಾ 'ದೀದಿವಿಂ' ಎಂಬುದನ್ನು ಪ್ರತ್ಯೇಕವೆಂದೇ ಭಾವಿಸಿ, 'ಸದಾ ಪ್ರಕಾಶಮಾನನಾಗಿರುವವನ' ಎಂದು ಗ್ರಹಿಸಿದರೂ ತಪ್ಪೇನೂ ಆಗದು. ಷಷ್ಠಿವಿಭಕ್ತಿಯಲ್ಲಿರುವ 'ಋತಸ್ಯ'ವನ್ನು ಮಾತ್ರ 'ಗೋಪಾಂ' ಎಂಬುದಕ್ಕಾಗಲಿ, 'ದೀದಿವಿಂ' ಎಂಬುದಕ್ಕಾಗಲಿ ಸೇರಿಸದೆ ಗತ್ಯಂತರವಿಲ್ಲ.

ಪದಗಳನ್ನು ಹೇಗೆ ಅಳವಡಿಸಿದರೂ ಮಂತ್ರದ ಭಾವನೆಗೆ ಆಘಾತವಾಗದು.

'ಗೋಪಾ' ಎಂಬುದು ಏಕಶಬ್ದವಲ್ಲ. 'ಗೋನಾಂ ಗವಾಂಪಾಪಾ, ಪಾಲಕ': - ಎಂದು ವಿಗ್ರಹಮಾಡಲ್ಪಡಲು ಶಕ್ಯವಾದ ಸಮಸ್ತ ಶಬ್ದವೆಂದು ತಿಳಿದರೂ, ಆ ಪ್ರಕಾಶಸ್ವರೂಪನು ವಾಣಿಯ ರಕ್ಷಕನು; ಭೂರಕ್ಷಕನು; ಇಂದ್ರಿಯ ರಕ್ಷಕನು; ಸೂರ್ಯರಶ್ಮಿಗಳ, ಸಮೂಹತ್ವೇನ ಸೂರ್ಯನ ರಕ್ಷಕನು – ಎಂಬ ವಿಶಾಲವಾದ ಅರ್ಥವೇ ಹೊರಬರುತ್ತದೆ. ಹೀಗೆ ಅನೇಕ ವಿಕಲ್ಪಗಳಿಂದ ಕೂಡಿದ ಈ ಮಂತ್ರವನ್ನು ವಿಶ್ಲೇಷಿಸಿ ನೋಡಿದಾಗ, ಆ ತೇಜೋಮಯ ದೇವದೇವನ ಮಹಿಮೆ ಸೊಗಸಾಗಿ ಮನದಟ್ಟಾಗುವುದು. ಇನ್ನು ಅಂತಿಮ ಚರಣ. ಇಲ್ಲಿಯೂ ವಿವೇಚನೀಯ ತತ್ತ್ವ ಸಾಕಷ್ಟಿದೆ. "ಸ್ವೇದಮೇ ವರ್ಧಮಾನಂ." - ಎಂಬ ಮೂರು ಶಬ್ದಗಳೊಂದಿಗೆ ಅಧ್ಯಾಹೃತವಾದ 'ವಿಮಸಿ'ಯನ್ನು ಸೇರಿಸಿಕೊಂಡಾಗ ಈಗ ಹೇಳಲಿಕ್ಕಿರುವುದರ ಮತ್ತು ಈವರೆಗೆ ಹೇಳಲ್ಪಟ್ಟುದರ ಭಾವನೆ ಬುದ್ಧಿಗಂದುತ್ತದೆ. ಎಲ್ಲವನ್ನೂ ಯಜ್ಞಪ್ರಕ್ರಿಯೆಗೆಂಯೇ ಹೊಂದಿಸುವ ಸಾಯಣರು, ಅಗ್ನಿಯನ್ನು ಭೌತಿಕಾಗ್ನಿ ಯೆಂದೇ ಗ್ರಹಿಸಿ, **"ಸ್ವೇದಮೇ, ಸ್ವಕೀಯಗೃಹೇ ಯಜ್ಞಶಾಲಾಯಾಂ"** - "ತನ್ನ ಮನೆಯಲ್ಲಿ. ಯಜ್ಞಶಾಲೆಯಲ್ಲಿ" ಎಂದು ಬರೆಯುತ್ತಾರೆ. ದಮಶಬ್ದ ವೇದಗಳಲ್ಲಿ 'ಮನೆ' ಎಂಬರ್ಥದಲ್ಲಿ ಬರುವುದಾದರೂ, ಬ್ರಹ್ಮಾಂಡಾಧಿನಾಯಕನಾದ ಸರ್ವವ್ಯಾಪಕನಿಗೆ 'ಮನೆ' ಕಟ್ಟಿಕೊಡುವ ಧೀರನಾರು ? ವಸ್ತುತಃ, ಇಲ್ಲಿ ವರ್ಣವ್ಯತ್ಯಯಗ್ರಹಿಸಿ, 'ದಮ'ವನ್ನೂ 'ಮದ' ವೆಂದರಿಯಬೇಕು. ಮಾದಕ ದ್ರವ್ಯಗಳಿಂದ ಉಂಟಾಗುವ ಮತ್ತಲ್ಲವಿದು, ಯಾವುದನ್ನೂ ಅಥರ್ವವೇದ **"ಸ್ವರ್ಯಸ್ಯಚಕೇವಲಂ"** [10.8.1] – "ಯಾವನ ಆನಂದ ಯಾವುದೇ ಮಿಶ್ರಣವೂ ಇಲ್ಲದ ಪರಿಶುದ್ಧ ತತ್ತ್ವವೋ." - ಎಂದು ವರ್ಣಿಸು ತ್ತದೋ ಆ ಆನಂದವೇ ಈಮದ. ಭಗವಂತನು ತನ್ನ ಸ್ವಾಭಾವಿಕ ಆನಂದದಲ್ಲಿ ವಿರಾಜಿಸು ತ್ತಿರುತ್ತಾನೆ. ಮತ್ತು ಜಡಬೆಂಕಿಯನ್ನೇ ಬಣ್ಣಿಸುತ್ತಾ ಹೋಗುವ ಸಾಯಣರು 'ವರ್ಧ ಮಾನಂ' ಎಂಬುದಕ್ಕೆ 'ಹವಿರ್ಭಿರ್ವರ್ಧಮಾನಂ' - 'ಹವಿಸ್ಸಿನಿಂದ ವರ್ಧಿಸುವ' – ಎನ್ನುತ್ತಾರೆ. ಯಜ್ಞಾಗ್ನಿಯ ಮಟ್ಟಿಗೆ ಅದು ಸರಿಯೇ. ಆದರೆ – ಜ್ಯೋತಿರ್ಮಯ ಜಗದೀಶ್ವರನು ಪೂರ್ಣತಃ ನಿರ್ವಿಕಾರನು; ವೃದ್ಧಿ – ಹ್ರಾಸ ಅಪೂರ್ಣ ತತ್ತ್ವಗಳ ಲಕ್ಷಣಮಾತ್ರ. ಭಗವಂತ ನಿಗೆ ಅವು ಅನ್ವಯಿಸುವಂತಿಲ್ಲ. ಪರಮಾತ್ಮನಿಗೆ ಅನ್ವಯಿಸಿದಂತೆ ಹೇಳುವಾಗ, 'ವರ್ಧ ಮಾನ' ಎಂಬುದಕ್ಕೆ **'ಯಾದೇವ ವಿದ್ಮ ತಾತ್ತ್ವಾ ಮಹಾಂತಂ'** [ಋಗ್ವೇದ:- 6.21.6.] – "ನಾವೆಷ್ಟು ತಿಳಿಯುತ್ತೇವೋ, ಅದಕ್ಕಿಂತ ದೊಡ್ಡವನೇ ಆಗುತ್ತಾ ಹೋಗುವ ದೇವನೇ! " - ಎಂಬ ಋಗುಕ್ತಿಯಂತೆ, ಸಾಧಕರು ತಿಳಿದಷ್ಟೂ ದೊಡ್ಡವನೇ ಆಗುವವನು. – ಎಂದೇ ಅರ್ಥಮಾಡಬೇಕು. ಎಂದರೆ, ಭಗವಂತನ ವೃದ್ಧಿ ಆತ್ಮ ಸಾಪೇಕ್ಷವಲ್ಲ; ಉಪಾಸಕರ ಜ್ಞಾನ ಸಾಪೇಕ್ಷ. ಭಗವಂತನು ಬೆಳೆಯುವುದಿಲ್ಲ; ಸಾಧಕರಿಗೆ ಅವನ ವಿಷಯಕ ಜ್ಞಾನ ಬೆಳೆಯುತ್ತಾ ಹೋಗುತ್ತದೆ. ಹಾಗೆಯೇ **'ಆರೋಹಂತಂ ಬೃಹತಃ ಪಾಜಸಸ್ಪರಿ ವಯಂ ಜೀವಾ ಪ್ರತಿ ಪಶ್ಯೇಮ ಸೂರ್ಯ.'** [ಋಗ್ವೇದ :– 10.37.8] - ಓ ಸೂರ್ಯ! ಮಹಾನ್ ಶಕ್ತಿಯಿಂದ ಉನ್ನತೋನ್ನತವಾಗುತ್ತಾ ಹೋಗುವ ನಿನ್ನನ್ನು ಜೀವರಾದ ನಾವು ನೋಡುತ್ತಾ ಹೋಗೋಣ." – ಎಂಬ ಪ್ರಮಾಣವೂ ಇದೆ

ವಸ್ತುತಃ ಭಗವಂತ ಎಲ್ಲಾ ದೃಷ್ಟಿಯಿಂದಲೂ ಅಸೀಮನೇ, ತಿಳಿಯುತ್ತಾ ಹೋಗಿರಿ. ಮತ್ತೂ ದೊಡ್ಡವನೆನಿಸುತ್ತಾನೆ. ಇದೇ ಅವನ ವರ್ಧಮಾನತ್ವ. ಹಾಗಾದರೆ, ಈಶ್ವರ ಸಾಕ್ಷಾತ್ಕಾರ ಅಸಂಭವವೇ ? ಅಲ್ಲ. ಸತ್ಯಶಾಸ್ತ್ರಗಳು ಅಸಾಧ್ಯವಾದುದನ್ನು ಎಂದಿಗೂ ವರ್ಣಿಸವು. ಭಗವಂತ ಏಕರಸ. ಹೇಗೆ ಒಂದು ತೊಟ್ಟು ಶರಬತ್ತನ್ನು ನಾಲಗೆಯಮೇಲೆ ಹಾಕಿಕೊಂಡು ಸಕ್ಕರೆ ಸಾಕೋ – ಸಾಲದೋ ಎಂದು ಹೇಳಿ ಬಿಡುತ್ತೇವೋ, ಹಾಗೆ ಆತ್ಮಸ್ಥಿತ ನಾದ ದೇವದೇವನ ಅನುಭೂತಿಯಿಂದ ಅನಂತನನ್ನೂ ಅರಿಯುತ್ತೇವೆ.

ಕೊನೆಗುಳಿದ ಪದ ದಮ. ದಮ-ಎಂಬುದಕ್ಕೆ ವೈದಿಕೀಭಾಷೆಯಲ್ಲಿ ದಮ-ಎಂದರೆ 'ಗೃಹ' ಎಂದಾಗುವುದು ನಿಜ. ಸಾಯಣರು ಅಗ್ನಿಯನ್ನು ಯಜ್ಞಾಗ್ನಿಯೆಂದು ಗ್ರಹಿಸಿ 'ಯಜ್ಞಶಾಲೆ'ಯಲ್ಲಿ ಎಂದರ್ಥವಿಸಿದ್ದಾರೆ. ಆದರೆ - ಹಿಂದೆಯೇ ನಾವೆಂದಿರುವಂತೆ, ಋಷಿ-ದೃಷ್ಟಿಯ ಗಾಂಭೀರ್ಯವೇ ಬೇರೆ. **ದಾಮ್ಯಂತ್ಯುಪಶಾಮ್ಯಂತಿ ದು:ಖಾನಿಯಸ್ಮಿನ್ ತಸ್ಮಿನ್ ಪರಮಾನಂದೇಪದೇ** - ಎಂದರೆ–"ಸಮಸ್ತದುಃಖಗಳನ್ನೂ ಉಪಶಮನ ಮಾಡಿಕೊಂಡು ಪರಮಾನಂದದ ಪದದಲ್ಲಿ" ಎಂದು ವಿಸ್ತರಿಸಿದ್ದಾರೆ. 'ವರ್ಣವ್ಯತ್ಯಯ'ದ ನಿಯಮವನ್ನು ಗಮನದಲ್ಲಿಟ್ಟಾಗ 'ದಮ' ಎಂಬುದು 'ಮದ'ವೆಂದಾಗಿ, ಮಹರ್ಷಿದಯಾನಂದರ ಜ್ಞಾನಪ್ರೌಢಿಮೆ ತನ್ನಷ್ಟಕ್ಕೆ ತಾನೇ ವ್ಯಕ್ತವಾಗುವುದು.

ಈ ರೀತಿ ಉಪಾಸನೀಯವಾದ ಮತ್ತೆ ಹಲವು ಗುಣಗಳನ್ನು ಬಣ್ಣಿಸಿದೆ.

**ಸಂಹಿತಾ ವಿಭಾಗ.**

**ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ।**

**ಸ ಚಸ್ವಾ ನಃ ಸ್ವಸ್ತಯೇ ॥೯॥**

**ಪದಪಾಠ**:– ಸ, ನಃ, ಪಿತಾ, ಇವ, ಸೂನವೇ, ಅಗ್ನೇ, ಸು+ಉಪಾಯನಃ ಭವ । ಸಚಸ್ವನಃ ಸ್ವಸ್ತಯೇ ।

**ಅನ್ವಯ**:– ಅಗ್ನೇಃ ಸಃ ನಃ ಸೂನವೇ ಪಿತಾ ಇವ ಸೂಪಾಯನಃ ಭವ. ನಃ ಸ್ವಸ್ತಯೇ ಸಚಸ್ವ ॥

**ಶಬ್ದಾರ್ಥ**:- [ಅಗ್ನೇ] ಜ್ಯೋತಿಃಸ್ವರೂಪನೇ, [ಸಃ] ಆ ನೀನು, [ಸೂನವೇ] ಮಗನಿಗೆ, [ಪಿತಾ ಇವ] ತಂದೆ ಪ್ರಾಪ್ಯನಾಗುವಂತೆ, [ಸು] ಸುಲಭವಾಗಿ, [ಉಪಾಯನಃ] ಬಳಿಸಾರಲನುಕೂಲವಾಗುವವನು. [ಭವ] ಆಗು. [ಸ್ವಸ್ತಯೇ] ಆತ್ಮ ಕಲ್ಯಾಣಕ್ಕಾಗಿ, [ನಃ] ನಮಗೆ, [ಸಚಸ್ವ] ಒದಗಿಬಾ.

**ತಾತ್ಪರ್ಯ** :— ಓ ತೇಜೋಮಯ ಅಗ್ನಿದೇವ ! ತಂದೆಯು ಮಗನಿಗೆ ಸುಲಭ ವಾಗಿ ಸಿಕ್ಕುವಂತೆ, ನೀನು ನಮಗೆ ಕಷ್ಟವಿಲ್ಲದೆ ಸಿಕ್ಕುವವನಾಗು. ನಮ್ಮ ಆತ್ಮಕಲ್ಯಾ ಣಕ್ಕಾಗಿ ಒದಗಿಬಾ.

**ಭಾಷ್ಯ** :— ಈ ಸೂಕ್ತದಲ್ಲೆಲ್ಲಾ ಅತಿ ಸುಬೋಧವಾದ ಮಂತ್ರವಿದು- ಮತ್ತು ಎಷ್ಟು ಸುಬೋಧವೋ ಅಷ್ಟೇ ಗಂಭೀರ. ಮಾನವ ಜೀವನದಲ್ಲಿ ಎಲ್ಲಕ್ಕಿಂತಧಿಕ ಕಾರ್ಯವಾವುದೆಂದು ಯೋಚಿಸಿದರೆ, ಹೃದಯಾಂತಸ್ತಲದಿಂದ ಹೊರಬರುವ, ಕಿರುದನಿ ಯಾದರೂ ಮರುದನಿಯನ್ನೆಬ್ಬಿಸುವ ಶಬ್ದ 'ಸ್ವಸ್ತಿ'. ಸ್ವಸ್ತಿಯೆಂದರೇನು? ಸು+ಅಸ್ತಿ, ಯಾವುದು ಎಲ್ಲಾ ಕಾಲಗಳಲ್ಲಿಯೂ, ಎಲ್ಲಾದೇಶಗಳಲ್ಲಿಯೂ, ಎಲ್ಲಸ್ಥಿತಿಗಳಲ್ಲಿಯೂ 'ಸು' 'ಒಳ್ಳೆಯದು' ಎಂದೇ ಹೇಳಿಸಿಕೊಳ್ಳುವುದೋ, ಒಳಿತೇ ಆಗಿರುವುದೋ, ಅದು ಸ್ವಸ್ತಿ' ಆ ಸ್ವಸ್ತಿ ನಮಗೆ ಯಾವುದೇ ಪ್ರಾಕೃತಿಕವಸ್ತುವಿನಿಂದಲೂ ಸಿಕ್ಕದು. ಆದಕಾರಣ, ಅದು ಜೀವಾತ್ಮನಿಗೆ ಲಭಿಸಬೇಕಾದರೆ, ಕೇವಲ ಒಬ್ಬನೇ ಒಬ್ಬನಿಗೆ ನಾವು ಮೊರೆಯಿಡಬೇಕಾಗುತ್ತದೆ, ಮರೆಹೋಗಬೇಕಾಗುತ್ತದೆ. ಸಮಸ್ತ ಕಲ್ಯಾಣಗುಣ ಗಳ ಅನಂತಸಾಗರನಾದ ಭಗವಂತ ಮಾತ್ರ ನಮಗೆ 'ಸ್ವಸ್ತಿ'ಯನ್ನು ಕರುಣಿಸಬಲ್ಲನು.

ಆ ದೇವನು ನಮಗೇನು ದೂರದವನೇ? ಯಾವನಾದ 'ಮಸ್ಸೈಯ' ಅಥವಾ 'ಮಸೀಹನ', ನಬೀ ಅಥವಾ ರಸೂಲನ, ಅಂಗವಸ್ತ್ರದ ಅಂಚನ್ನು ಹಿಡಿದುಕೊಂಡು ಹೋಗಬೇಕಾಗಿದೆಯೋ ? ಇಲ್ಲ, ಇಲ್ಲ. ಓದುಗರು ಹಿಂದೆ ಓದಿದ್ದಾರೆ. **"ಸ ನೋ ಬಂಧುರ್ಜನಿತಾ"** [ಯಜು:- 32.10.] - "ಅವನು ನಮ್ಮ ಬಂಧು. ಅವನೇ ಜನ್ಮದಾತಾ." - ಎನ್ನುತ್ತದೆ ಯಜುರ್ವೇದ. **"ದ್ಯೌರ್ವಃ ಪಿತಾ"** [ಋಗ್ವೇದ:- 1.191.6.] ಎನ್ನುತ್ತಿದೆ ಋಗ್ವೇದ. **"ಯೋ ನಃ ಪಿತಾ ಜನಿತಾ ಯೋ ವಿಧಾತಾ"** [ಅಥರ್ವ:- 2.1.3,] "ಜ್ಯೋತಿರ್ಮಯ ಭಗವಂತ ನಿಮ್ಮ ತಂದೆ."; "ಯಾವನು ನಮ್ಮ ತಂದೆಯೋ, ಉತ್ಪಾದಕನೋ, ಯಾವನು ವಿಧಾತೃವೋ, (ಅವನೆಡೆಗೇ ಲೋಕಗಳೆಲ್ಲಾ ತೆರಳುತ್ತವೆ.)" - ಎನ್ನುತ್ತಿದೆ ಅಥರ್ವವೇದ. ಭಗವಂತನ ಪಿತೃತ್ವ ಅನಾದಿವೇದಗಳಿಂದ ಮಾನವರು ಕಲಿತ ಅಮೌಲ್ಯವಾದ ಪಾಠ. ಬೈಬಲ್‌ನಿಂದ ಅಥವಾ ಕುರಾನ್‌ನಿಂದ ಭಗವತ್ಪಿತೃತ್ವವನ್ನು ಮಾನವಸಮಾಜ ಕಲಿತಿತು —ಎಂಬುದು ವೇದಜ್ಞರಲ್ಲದವರ ಮಾತು.

ಪರಮಾತ್ಮನು ಎಲ್ಲರಿಗೂ ತಂದೆಯಿದ್ದಂತೆ; ಎಲ್ಲರೂ ಪರಮಾತ್ಮನಿಗೆ ಮಕ್ಕಳಿದ್ದಂತೆ. "ಪರಮಾತ್ಮನ ಏಕಮಾತ್ರ ಔರಸಪುತ್ರ" – [The only begotten son of God] – ಎಂದು ಸಾಂಪ್ರದಾಯಿಕ ಕ್ರೈಸ್ತರೆನ್ನುವಂತೆ, ಪರಮಾತ್ಮನಿಗೆ ಯಾವ ಔರಸಪುತ್ರರೂ ಇಲ್ಲ; ಏಕೆಂದರೆ - ನಿರಾಕಾರನೂ, ನಿಶ್ಶರೀರನೂ ಆದ ಪರಮಾತ್ಮನಿಗೆ 'ಉರಸ್ಸೇ' ಇಲ್ಲ. 'ಉರಸ್' ಎಂದರೆ ಭೌತಿಕ ಹೃದಯ. ಹೃದಯ ಶರೀರದ ಕೇಂದ್ರ; ರಕ್ತದ ಸಂಚಾಲಕ.

ರಕ್ತದಿಂದಲೇ ರಜೋವೀರ್ಯಗಳ ಉತ್ಪತ್ತಿ. ಆದುದರಿಂದ, ಸ್ವಂತ ರಜೋವೀರ್ಯಗಳ ಸಂಯೋಗದಿಂದ ಉದ್ಭವಿಸಿದ ಮಕ್ಕಳನ್ನು 'ಔರಸ'ಪುತ್ರರೆನ್ನುತ್ತಾರೆ. ಈ ಮಾತು ಪರಮಾತ್ಮನಿಗನ್ವಯಿಸದು. ಅವನ ಮಕ್ಕಳಂತಿರುವ ನಮಗೆ ಅವನು ಸದಾ ಸುಲಭವಾಗಿಯೇ ಸಿಕ್ಕುತ್ತಾನೆ. ನಾವು ಸರಿಯಾದ ಮಾರ್ಗದಲ್ಲಿ ವರ್ತಿಸಬೇಕು ಮಾತ್ರ.

ಆದರೊಂದು ವೈಚಿತ್ರ್ಯ. ಈ ಉಪಮಾನ ಸಮಸ್ಯಾತ್ಮಕ (enigmatic)ವಾಗಿ ಕಾಣುತ್ತದೆ. ಸ್ವತಃ ತಂದೆಯೇ ಭಗವಂತ—ಎಂದಮೇಲೆ, 'ಇವ' - ಎಂಬ ಸಾದೃಶ್ಯ ಸೂಚಕಾವ್ಯಯ ಬೇಕಾದರೂ ಏತಕ್ಕೆ ? ಉತ್ತರವಿಷ್ಟೇ. ಜನತೆಗೆ ಭಗವತ್ಪಿತೃತ್ವ - ಮಾನವ—ಭ್ರಾತೃತ್ವದಂತಹ ಗೂಢದಾರ್ಶನಿಕತತ್ತ್ವಗಳನ್ನು ಗ್ರಹಿಸಲು ಸ್ವಲ್ಪ ಸಿದ್ಧತೆ, ಸನ್ನಾಹ ಬೇಕಾದೀತು. ಸಾಧಾರಣ ಜನಕೋಟಿಯ ದೃಷ್ಟಿಯಲ್ಲಿ ಪರಮಾತ್ಮ 'ದೇವರು' ಅಷ್ಟೇ. 'ದಯಾಳು' ಎಂಬ ರೂಪಕ್ಕಿಂತ ಜನ 'ಭೀಕರ, ಭಯಾನಕ' - ಎಂಬ ರೂಪಗಳ ಕಡೆಗೆ ವಾಲುವುದು ಹೆಚ್ಚು. ಪ್ರಾಣಿಬಲಿಯ ಕ್ರೂರಪದ್ಧತಿಗೂ ಈ 'ಭಗವದ್ಭೀಕರತ್ವ'ವೇ ಅಥವಾ ಭೀಕರನೆಂಬ ನಂಬುಗೆಯೇ ಕಾರಣ.

ಆದರೆ, ಈ ಭಗವದ್ವಿಷಯಕ ಭೀತಿ ದುಷ್ಟ – ನಿಗ್ರಹ ಪ್ರಕರಣದಲ್ಲಿ ಸರಿಯಾದರೂ, ಸಾಧಾರಣತಃ ಈಶ್ವರ ಪ್ರೀತ್ಯರ್ಹನೆ ಹೊರತು ಭೀತ್ಯರ್ಹನಲ್ಲ - ಎಂಬುದು ಪಾಠಕರಿಗೆ ನೆನಪಿರಬೇಕು. "ಇಂದ್ರ"ಶಬ್ದ ಎಲ್ಲಿ ಬಲಯುಕ್ತತತ್ತ್ವವನ್ನು ನಿರ್ದೇಶಿಸುತ್ತದೋ, ಹಾಗೆಯೇ **''ಇಂದವೇ ದ್ರವತೀತಿವಾ''** ಎಂದು ಹೇಳಿ, ಅವನ ಕರುಣಾಮಯತ್ವವನ್ನೂ ಸಾರುತ್ತದೆ. "ಇಂದು, ಎಂದರೆ, ನಿರಸಕಾಯಕ್ಕೆ ಸರಸತ್ವ ನೀಡುವ ಜೀವಾತ್ಮ." ಯಾಸ್ಕರು – **''ಇಂದುರಿಂಧೇರುನತ್ತೇರ್ವಾ''** [4. 4. 41.4.] – "ಆರ್ದ್ರಗೊಳಿಸುವುದರಿಂದ ಇಂದುವನ್ನು ಇಂದುವೆನ್ನುತ್ತಾರೆ." – ಎನ್ನುತ್ತಾರೆ ನಿರುಕ್ತದಲ್ಲಿ. ಇನ್ನೊಂದೆಡೆ ತೆರೆನುಡಿಯ ಯಾಸ್ಕರು **"ಇಂದುರಾತ್ಮಾ"** [ಪರಿ 2. 17.] – "ಇಂದು ಎಂದರೆ ಆತ್ಮಾ" ಎಂದೇ ಹೇಳಿದ್ದಾರೆ. ಇಂದ್ರಶಬ್ದದ ನಿರುಕ್ತಿಯಲ್ಲಿ – **"ಇಂದವೇ ದ್ರವತೀತಿವಾ"** [ನಿರುಕ್ತ:– 4. 1. 8.] ; **''ಇಂದೌರಮತ ಇತಿವಾ''** [ನಿ. 4.1.8] "ಇಂದುವಿಗಾಗಿ, ಜೀವಾತ್ಮನಿಗಾಗಿ ಕರಗುವವನು ಇಂದ್ರ." "ಇಂದುವಿನಲ್ಲಿ, ಜೀವಾತ್ಮನಲ್ಲಿ ರಮಿಸುವವನು ಇಂದ್ರ." ಎಂಬ ವಾಕ್ಯಗಳನ್ನು ನೆನಪಿನಲ್ಲಿಟ್ಟರೆ, ಭಗವಂತ ದಯಾಮಯ ಎಂಬುದು ಹೃದ್ಗತವಾಗಿ, ತಮಗೆ ಜನ್ಮವಿತ್ತ ತಂದೆಯ ಹಾಗೆಯೇ ದೇವದೇವನೂ ತಂದೆ ಎಂಬ ನಿಶ್ಚಯ ಉಂಟಾಗಿ, ಅವನನ್ನು ಸಮೀಪಿಸುವುದು ಸುಲಭವೆಂಬ ಅನುಭವ ಸಹಜವಾಗಿಯೇ ಆಗುವುದು.

ಸಾಯಣರೇನೋ 'ಸೂಪಾಯನಃ– ಎಂಬ ಶಬ್ದಕ್ಕೆ **'ಶೋಭನ ಪ್ರಾಪ್ತಿಯುಕ್ತಃ'** – 'ಸುಂದರವಾಗಿ ಸಿಕ್ಕುವವನು.' - ಎಂದೂ, **'ಸ್ವಸ್ತಯೇ'** - ಎಂಬುದಕ್ಕೆ **'ವಿನಾಶರಾಹಿತ್ಯಾರ್ಥಂ'** ಎಂದೂ ಅರ್ಥಮಾಡಿ ತೃಪ್ತರಾದರು. ಆದರೆ, ಮಹರ್ಷಿ ದಯಾನಂದರು – **"ಸುಷ್ಠೂಪಗತಮಯನಂ ಜ್ಞಾನಂ ಸುಖಸಾಧನಂ ಪದಾರ್ಥ**

**ಸ್ವಾಪಣಂ ಯಸ್ಮಾತ್**" – ಎಂದರೆ "ಸಾಮೀಪ್ಯತಃ ಜ್ಞಾನವು. ಸುಖ ಸಾಧನವಾದ ವಸ್ತುವಿನ ಪ್ರಾಪ್ತಿಯೂ ಯಾವನಿಂದಾಗುವುದೋ, ಅವನೇ ಸೂಪಾಯನನು" ಎಂದಿದ್ದಾರೆ. ಮಹರ್ಷಿಯ ಪ್ರೌಢಿಮೆ ಇಲ್ಲಿಯೂ ವ್ಯಕ್ತವಾಗುತ್ತದೆ. "ಸ್ವಸ್ತಯೇ' ಎಂಬುದಕ್ಕೆ ಸಾಯಣರಂತೆ "ವಿನಾಶರಾಹಿತ್ಯ"ವೆಂಬ ನಕಾರಾತ್ಮಕ ಶಬ್ದ ಬಳಸದೆ, 'ಕಲ್ಯಾಣ' ವೆಂಬ ಸ್ವೀಕಾರಾತ್ಮಕ ಶಬ್ದವನ್ನು ಬಳಸಿ, ಸ್ಪಷ್ಟತ್ವಕ್ಕೆ ಮೆರಗು ತಂದಿದ್ದಾರೆ. ಈ ವ್ಯತ್ಯಾಸ ವನ್ನು ಅರ್ಥಮಾಡಿಕೊಳ್ಳುವುದೂ ಕಷ್ಟವೇನಲ್ಲ. ಸಾಯಣರು ಜಡಾಗ್ನಿಯ ಪಕ್ಷವನ್ನೂ, ದಯಾನಂದರು ವಿರಾಡಾತ್ಮನ ಪಕ್ಷವನ್ನೂ ವಹಿಸಿರುವಾಗ ಇಂತಹ ವ್ಯತ್ಯಾಸ ಸಹಜವೇ ಸರಿ. ಖಂಡನ – ಮಂಡನಕ್ಕಲ್ಲಿ ಎಡೆಯಿಲ್ಲ.

ನಾವು ಈ ಪೂರ್ಣಸೂಕ್ತವನ್ನೂ ಪರಮಾತ್ಮನಿಗೆಯೇ ಅನ್ವಯಿಸಿ ಬರೆದಿದ್ದೇವೆ. ಜಡವಾದ ಬೆಂಕಿಗೆ ಹೊಂದಿಸಿಯೂ ಈ ಸೂಕ್ತಕ್ಕೆ ಭಾಷ್ಯ ಬರೆಯಬಹುದು. ಆದರೆ ಅದು ಪ್ರಧಾನಾರ್ಥವಲ್ಲ; ಗೌಣಾರ್ಥವಾದೀತು, ಅಧ್ಯಾತ್ಮವಿದ್ಯಾಕೋಶವಾದ ವೇದಗಳಿಂದ ಜನ ಮುನ್ನ ಆಧ್ಯಾತ್ಮಿಕ ಜ್ಯೋತಿಯನ್ನು ಗ್ರಹಿಸಲಿ. ಭೌತಿಕವಿದ್ಯೆ ತಾನಾಗಿಯೇ ಜೊತೆ ಜೊತೆಯಲ್ಲಿ ಹರಿಯುತ್ತಾ ಬರುವುದು. ಅಗ್ನಿತತ್ತ್ವದಿಂದ. ವಿದ್ಯುತ್ತಿನಿಂದ ಇಂದು ಯಾವ ಯಾವ ವೈಜ್ಞಾನಿಕ ಅದ್ಭುತ ಸಾಧನೆಗಳನ್ನು ನಡೆಯಿಸಿದ್ದಾರೋ, ಅದು ಎಲ್ಲರ ಕಣ್ಣುಗಳ ಮುಂದಿದೆ. ಭೌತಿಕಾಗ್ನಿಯಿಂದ, ವಿದ್ಯುದಾದಿ ಅಗ್ನೇಯತತ್ತ್ವದ ರೂಪಾಂತರಗಳಿಂದ ವೈಜ್ಞಾನಿಕರು ಇಂದು ಏನೇನನ್ನು ಸಾಧಿಸಿದ್ದಾರೋ, ಅದಕ್ಕಿಂತ ಮುಂದಣ ಅದ್ಭುತ ಕೃತಿ ಗಳು ಈ ಸೂಕ್ತದಲ್ಲಿ ಅಭಿವರ್ಣಿತವಾಗಿದೆ. ಉದಾಹರಣೆಗೆ, **"ರಾಜಂತಮಧ್ವರಾಣಾಂ"** ಎಂಬ ಎಂಟನೆಯ ಮಂತ್ರದಲ್ಲಿ ಪ್ರಕಾಶಮಯವಾದ ದ್ಯುಲೋಕದಲ್ಲಿ ಅಚ್ಚುಕಟ್ಟಾಗಿ ಮನೆ ಕಟ್ಟಿಕೊಂಡು, ಸುಖ-ಶಾಂತಿಗಳಿಂದ ಬಾಳುವ-ಬಾಳಿಸುವ ವಿಜ್ಞಾನದ ವರ್ಣನೆಯಿದೆ. ಅನುಸಂಧಾನವಿಲ್ಲದೆ, ಸಿದ್ಧಿ ಹೇಗಾದೀತು? ಅನುಸಂಧಾನಕ್ಕೆ ಪುಷ್ಕಳಧನರಾಶಿ, ಭೌತಿಕ ತತ್ತ್ವಗಳ ಪೂರ್ಣಜ್ಞಾನ, ಅಪ್ರತಿಮತ್ಯಾಗ, ಪ್ರಾಣಬಲಿದಾನಕ್ಕೂ ಸನ್ನದ್ಧನಾಗುವ ಮನೋಭಾವ ಬೇಕು. ಆಮೇಲೆ ತಾನೇ ಮುಂದಿನಯೋಜನೆ.

**ಇತಿ ಋಗ್ವೇದಸ್ಯ**
**ಪ್ರಥಮ ಮಂಡಲಸ್ಯ ಪ್ರಥಮಂ ಸೂಕ್ತಂ ಸಮಾಪ್ತಂ ||**

**ಈ ವೇದಭಾಷ್ಯದ ೨೪ ಪುಟಗಳ ಪೂರ್ಣವೆಚ್ಚ**
**ಶ್ರೀಮತಿ ಚಿನ್ನಮ್ಮದೇವಿ ಕೆ. ರಾಮಕೃಷ್ಣಪ್ಪ, ಮೈಸೂರು**
**ಇವರ ಸೇವೆ.**

## ಪ್ರಥಮ ಮಂಡಲ ದ್ವಿತೀಯ ಸೂಕ್ತದ ಮಂತ್ರಗಳ ಸಂಖ್ಯೆ ೯.

### ಸಂಹಿತಾ ಭಾಗ

[ಮಧುಚ್ಛಂದಾ ಋಷಿಃ ॥ 1 - 3 ವಾಯುರ್ದೇವತಾ ॥ 4 – 6 ಇಂದ್ರವಾಯೂ ॥ 7-9 ಮಿತ್ರಾವರುಣೌ ॥ ]

ಛಂದಸ್ಸು :– 1, 2 - ಪಿಪೀಲಿಕಾ ಮಧ್ಯಾನಿಚೃದ್ಗಾಯತ್ರೀ. 3. 5, 7. 9 ನಿಚೃದ್ಗಾಯತ್ರೀ. ಷಡ್ಜಃ ಸ್ವರಃ ।

**ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ ।**

**ತೇಷಾಂ ಪಾಹಿ ಶ್ರುಧೀ ಹವಂ ॥೧॥**

**ಪದಪಾಠ:**– ವಾಯೋ । ಆ । ಯಾಹಿ । ದರ್ಶತ । ಇಮೇ । ಸೋಮಾಃ । ಅರಂಕೃತಾಃ । ತೇಷಾಂ । ಪಾಹಿ । ಶ್ರುಧಿ ಹವಂ ॥೧॥

**ಅನ್ವಯ:**– ದರ್ಶತ ವಾಯೋ, ಆ ಯಾಹಿ, ಇಮೇ ಸೋಮಾಃ ಅರಂಕೃತಾಃ ತೇಷಾಂ ಪಾಹಿ ಹವಂ ಶ್ರುಧಿ.

**ಶಬ್ದಾರ್ಥ:**– [ದರ್ಶತ] ದರ್ಶನೀಯನಾದ, ಸರ್ವ ಜಗತ್ತನ್ನೂ ದೃಷ್ಟಿಸುವ, [ವಾಯೋ] ಎಲ್ಲರಿಗೂ ಪ್ರಾಣಸ್ವರೂಪನಾದ ಭಗವಂತನೇ! [ಆ ಯಾಹಿ] ನಮ್ಮ ಬಳಿ ಸಾರು. [ಇಮೇ ಸೋಮಾ:] ಈ ಸಮುತ್ಪನ್ನರಾದ ಜೀವರು, [ಅರಂಕೃತಾಃ] ಅಲಂಕೃತರಾಗಿದ್ದಾರೆ, ನಿನ್ನಿಂದ ಸರ್ವ ಆವಶ್ಯಕತೆಗಳನ್ನೂ ತುಂಬಿಸಿಕೊಂಡವರಾಗಿದ್ದಾರೆ. [ತೇಷಾಂ] ಅವರನ್ನು, ಅವರ ಸಂಪದಾದಿಗಳನ್ನು, [ಪಾಹಿ] ರಕ್ಷಿಸು. [ಹವಂ] ಅವರ ಕರೆಯನ್ನು, [ಶ್ರುಧಿ] ಆಲಿಸು.

**ತಾತ್ಪರ್ಯ:**– ಓ ಪ್ರಾಣಸ್ವರೂಪನಾದ ದರ್ಶನೀಯ ಪರಮಾತ್ಮನ್ ! ನೀನು, ಎಲ್ಲರಿಗೂ ದರ್ಶನೀಯನಾಗಿದ್ದೀಯೆ; ಎಲ್ಲವನ್ನೂ ನೋಡುವ ಸರ್ವದ್ರಷ್ಟನೂ ಆಗಿದ್ದೀಯೇ. ಈ ಶರೀರಧಾರಿಗಳಾಗಿ ಬಂದಿರುವ, ಮುಖ್ಯತಃ ಮಾನವ - ಯೋನಿಯಲ್ಲಿ ಬಂದಿರುವ ಜೀವರು ಅಲಂಕೃತರಾಗಿದ್ದಾರೆ; ಸದೈಶ್ವರ್ಯ – ಸಂಪನ್ನರಾಗಿ, ಸುಭೂಷಿತರಾಗಿದ್ದಾರೆ. ಇವರ ಕರೆಗೆ ಹೋಗೊಡು.

**ಭಾಷ್ಯ:-** ಹಿಂದಿನ ಸೂಕ್ತದಲ್ಲಿ ಪಾಠಕರು 'ಅಗ್ನಿ'ರೂಪದಲ್ಲಿ ಪರಮಾತ್ಮನನ್ನು ಕಂಡಿದ್ದಾರೆ. ಈಗ ಅದೇ ಪರಮಾತ್ಮನು 'ವಾಯುರೂಪದಲ್ಲಿ ತಮ್ಮೆಲ್ಲರ ಮುಂದೆ ಬರುತ್ತಿದ್ದಾನೆ. **"ವಾಯುರ್ವಾತೇರ್ವಾ, ವೇತ್ತೇರ್ವಾ ಸ್ಯಾದ್ಗತಿ ಕರ್ಮಣ ಏವೇತಿ."** [ನಿರುಕ್ತ: ೧೦. 1.2] - "ಬೀಸುವುದರಿಂದ, ಕಷ್ಟ ನಿವಾರಿಸುವುದರಿಂದ ಗತಿಶೀಲನೂ, ಗತಿದಾತನೂ ಆಗಿರುವುದರಿಂದ ವಾಯುವನ್ನು ವಾಯುವೆನ್ನುತ್ತಾರೆ." - ಎನ್ನುತ್ತಾರೆ ಯಾಸ್ಕರು. ಬೀಸುವುದು - ಎಂಬರ್ಥ ಜಡವಾದ ಗಾಳಿಗೆ ಅನ್ವಯಿಸಿದಂತೆ ಸರಿ. ಆದರೆ, ಅದನ್ನು ಕುರಿತು ಹೇಳುವುದಲ್ಲ ಈ ಪ್ರಕರಣ. ಗೌಣವಾಗಿ ವಾಯುವೆಂದರೆ ಗಾಳಿ - ಎನ್ನಬಹುದಾದರೂ, ವೇದಗಳು ವಿಶೇಷತಃ ಅಧ್ಯಾತ್ಮವಿದ್ಯಾಪ್ರಧಾನವಾಗಿರುವುದರಿಂದ ಹಾಗೂ ಪ್ರಕರಣ ಕೂಡಾ ಪರಮಾತ್ಮನ ವಿಷಯಕವಾಗಿರುವುದರಿಂದ, ಇಲ್ಲಿ ವಾಯುವೆಂದರೆ, ಸರ್ವಜ್ಞನಾದ ಪರಮಾತ್ಮನನ್ನು ಗ್ರಹಿಸುವುದೇ ಸೂಕ್ತವಾಗಿರುತ್ತದೆ. **''ತದೇವಾಗ್ನಿಸ್ತದಾದಿತ್ಯಸ್ತದ್ವಾಯುಸ್ತದು ಚಂದ್ರಮಾಃ । ತದೇವ ಶುಕ್ರಂ ತದ್ಬ್ರಹ್ಮ ತಾ ಆಪಃ ಸ ಪ್ರಜಾಪತಿಃ"॥** [ಯಜು:- 31. 1] - "ಅದೇ ಅಗ್ನಿ; ಅದೇ ಆದಿತ್ಯ. ಅದೇ ವಾಯು. ಅದೇ ನಿಜವಾಗಿ ಚಂದ್ರಮಾ. ಅದೇ ಶುಕ್ರ. ಅದೇ ಬ್ರಹ್ಮ. ಅದೇ ಅಪ್, ಅದೇ ಪ್ರಜಾಪತಿ." ಎಂಬ ಯಾಜುಷೀಶ್ರುತಿ ವಿದ್ವಜ್ಜನರಿಗೆ ಹೊಸದಲ್ಲ. **''ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ"** [ಋಗ್ವೇದ:- 1. 164. 46.] "ವಿಶಿಷ್ಟ ಪ್ರಜ್ಞಾವಂತರು ಒಬ್ಬನೇ ಒಬ್ಬ ಸದ್ರೂಪನನ್ನು ನಾನಾ ನಾಮಗಳಿಂದ ಕರೆಯುತ್ತಾರೆ: **"ಯೋದೇವಾನಾಂ ನಾಮಧ ಏಕ ಏವ."** [ಅಥರ್ವ :- 2. 1. 3.] – "**[ಯಃ]** ಕೇವಲ ಯಾವನು," "**[ದೇವಾನಾಂ ಏಕಏವ ನಾಮಧಃ]**" "ಎಲ್ಲ ಅಗ್ನಿ, ಸೋಮ, ವಾಯು ಆದಿ ದೇವತೆಗಳ ಹೆಸರನ್ನೂ ಹೊರುವವನಾಗಿದ್ದಾನೋ," – ಎಂದು ಭಗವಂತನ ಕಡೆಗೆಯೇ ಬೆರಳು ತೋರುತ್ತಿದೆ. ಮತ್ತು ಇಲ್ಲಿ ಸೂಚಿತವಾದ ಗುಣಗಳನ್ನು ಗಾಳಿಗೆ ಅನ್ವಯಿಸಲು ಸಾಧ್ಯವೇ ಇಲ್ಲ. "ವಾಯು" - ಎಂಬುದಕ್ಕೆ ವಿಶೇಷಣವಾಗಿ ಬಂದಿರುವ "ದರ್ಶತ" ಎಂಬ ಶಬ್ದವನ್ನೇ ಗ್ರಹಿಸಿರಿ. ಆ ಅವ್ಯಕ್ತ ತತ್ತ್ವವನ್ನು 'ದರ್ಶತ' "ದರ್ಶನೀಯ" ಎನ್ನಲಾದೀತೇ ? "ಬ್ರಹ್ಮವೂ ಅವ್ಯಕ್ತವೇ. ಮತ್ತೆ ಅದಕ್ಕೇಕೆ 'ದರ್ಶತ'ವನ್ನು ಅನ್ವಯಿಸುತ್ತೀರಿ ?" ಎಂದು ಕೇಳಬಹುದು. ಮೊದಲನೆಯದಾಗಿ, "ಅಂತಃಕರಣದಲ್ಲಿ ಪರಿಶುದ್ಧನಾಗಿ ತನ್ನ ಆತ್ಮನಲ್ಲಿ ತನ್ನನ್ನು ಯೋಗಿಗಳು ನೋಡಬಲ್ಲರು." - ಎಂದು ಅಧ್ಯಾತ್ಮವಾದಿಗಳೆಲ್ಲರೂ ಬಲ್ಲರು. ಸ್ವತಃ ವೇದ - **"ವೇನಸ್ತತ್ ಪಶ್ಯನ್ ನಿಹಿತಂ ಗುಹಾಸತ್."** [ಯಜು:- 32. 8.] "ಜ್ಞಾನಿಯು ತನ್ನ ಹೃದಯ ಗುಹೆಯಲ್ಲಿ ಅಡಗಿರುವ ಆ ಈಶ್ವರನನ್ನು ನೋಡುತ್ತಾನೆ." ಎನ್ನುತ್ತದೆ. ಅಥರ್ವವೇದ – **"ತಸ್ಮಿನ್ ಯದ್ಯಕ್ಷಮಾತ್ಮನ್ವತ್ತದ್ವೈ ಬ್ರಹ್ಮವಿದೋ ವಿದುಃ"** [10. 2. 32.] "ಆ ಹೃದಯದಲ್ಲಿ, ಆತ್ಮನೊಂದಿಗೆ ಯಾವ ಪೂಜನೀಯ ಭಗವಂತನಿದ್ದಾನೋ, ಅವನನ್ನು ಬ್ರಹ್ಮಜ್ಞರು ತಿಳಿದುಕೊಳ್ಳುತ್ತಾರೆ" ಎನ್ನುತ್ತಲಿದೆ. ಹೀಗೆ, ಬಾಹ್ಯತಃ ಚರ್ಮಚಕ್ಷುವಿನಿಂದಲ್ಲವಾದರೂ, ಆಂತರಿಕವಾಗಿ ಭಗವದ್ದರ್ಶನ ಸಾಧ್ಯವೇ ಇದೆ. ಜಡಭೂತವಾದ ವಾಯುವಿನ ಬಗೆಗೆ ಈ ಮಾತುಗಳನ್ನಾಡಲು ಸಾಧ್ಯವೇ ಇಲ್ಲ. ಚರ್ಮೇಂದ್ರಿಯದಿಂದ ಗಾಳಿಯು ಸ್ಪರ್ಶದ ಮೂಲಕ

ಅದರ ಜ್ಞಾನವೂ ಆಗಬಲ್ಲದಾದರೂ, ಈ ಸೂಕ್ತದಲ್ಲಿ ಬರುವ ಬೇರೆಯ ವಿಶೇಷಣಗಳು ಗಾಳಿ - ಎಂಬ ತತ್ತ್ವದ ಸ್ವೀಕೃತಿಗೆ ಸಹಾಯಕವಾಗಿಲ್ಲ - ಎಂದು ಹೇಳಿಯೇ ಇದ್ದೇವೆ.

"ಆ ಯಾಹಿ" – ಎಂಬ ಪದದ್ವಯದ ಅರ್ಥ "ಬಾ, ಆಗಮಿಸು" – ಎಂದೇ ಆಗಿರುತ್ತದೆ. **"ಸ ಓತಃ ಪ್ರೋತಶ್ಚ ವಿಭೂಃ ಪ್ರಜಾಸು"** [ಯಜುರ್ವೇದ 32 8.] "ಆ ವಿಭುವಾದ ಪರಮಾತ್ಮ ಉತ್ಪನ್ನವಾದ ಲೋಕಲೋಕಾಂತರಗಳಲ್ಲೆಲ್ಲಾ ವ್ಯಾಪಿಸಿಯೇ ಇರುವಾಗ, 'ಆಗಮಿಸು' ಎನ್ನುವುದಕ್ಕೆ ಅರ್ಥವೇನು ? ಈಗ ಈಶ್ವರ ಇಲ್ಲಿಲ್ಲವೇ ?" ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಕಾಲ–ಸಂಬಂಧೀ ಸಾಮೀಪ್ಯ ಮತ್ತು ದೇಶ ಸಂಬಂಧೀ ಸಾಮೀಪ್ಯ ಜೀವೇಶ್ವರರ ಅನಾದಿತ್ವದಿಂದ ಮತ್ತು ಈಶ್ವರನ ವ್ಯಾಪಕತ್ವದಿಂದ ಸಿದ್ಧಿಸಿಯೇ ಇವೆ. ಆದರೆ—ಇನ್ನೊಂದು ವಿಧದ ದೂರವಿದೆ; ಅದು ಎಲ್ಲಕ್ಕಿಂತಧಿಕ ಸಮೀಪವಿರುವ ಭಗವಂತನನ್ನೇ, ಯಜುರ್ವೇದವೇ ಹೇಳುವಂತೆ, **"ತದ್ದೂರೇ ತದ್ವಂತಿಕೇ"** [40.5.] "ಅದು ದೂರದಲ್ಲಿದೆ; ಅದೇ ಹತ್ತಿರದಲ್ಲಿಯೂ ಇದೆ." – ನಮ್ಮಿಂದ ದೂರವಿಡುತ್ತದೆ. ಕಾಲ–ದೇಶಗಳಿಗೆ ಸಂಬಂಧಿಸದ, ಆ ದೂರ, ಜ್ಞಾನಕ್ಕೆ ಅಥವಾ ಚಿತ್ತದ ಏಕಾಗ್ರತೆಗೆ ಸಂಬಂಧಿಸಿದ ದೂರ. ಅಜ್ಞಾನಿಯು ಪ್ರಭು ದೂರವಿದ್ದಾನೆಂದು ತಿಳಿಯುತ್ತಾನೆ. ಚಂಚಲಚಿತ್ತನೂ ಕೂಡ, ಅವನ ಮನಸ್ಸು ಬೇರೆ ಎಲ್ಲೆಲ್ಲೋ ತಿರುಗುವುದರಿಂದ ಆ ಭಗವತ್ಸಾಮೀಪ್ಯವನ್ನು ಅನುಭವಿಸುವುದಿಲ್ಲ. **'ಆ ಯಾಹಿ'** – ಎಂದಾಗ, 'ಭಗವನ್ ! ಚಿತ್ತಚಾಂಚಲ್ಯವನ್ನು ದೂರೀಕರಿಸು. ನಮ್ಮ ಅನುಭವದ ಹಿಡಿತಕ್ಕೆ ಸಿಕ್ಕು' ಎಂಬ ಭಾವನೆಯೇ ಇರುತ್ತದೆ.

ವಿಶ್ಲೇಷಣೀಯವಾದ ಮತ್ತೊಂದು ಶಬ್ದ 'ಸೋಮ. ಇದರ ವಿಷಯದಲ್ಲಿರುವ ಅಜ್ಞಾನ ಅಥವಾ ವಿಪರೀತ ಜ್ಞಾನವನ್ನು ದೂರೀಕರಿಸಲು ಬೇರೊಂದು ಬೃಹದ್‌ಗ್ರಂಥವೇ ಬೇಕಾದೀತು. "ಸೋಮ ಯಾವುದೋ ಬಳ್ಳಿಯ ಮಾದಕವಾದ ರಸ" – ಎಂದೇ ಸಾಧಾರಣರು ಮಾತ್ರವಲ್ಲ; ಬಹುಜನ ವಿದ್ವಾಂಸರೂ ಹೇಳುವುದುಂಟು. ಸೋಮ – ಎಂಬುದು ಲತಾವಿಶೇಷದ ರಸವೆಂಬ ಕಥನವೂ ಸುಳ್ಳಲ್ಲ; ಆದರೆ - 'ಸೋಮ' ಎಂದು ಕಂಡೊಡನೆಯೇ ಆ ಮಾದಕರಸದತ್ತ ನೆಗೆಯುವುದು ಮಾತ್ರ ಸರಿಯಲ್ಲ. ಸ್ವಯಂ ಋಗ್ವೇದ ಹೇಳುತ್ತಿದೆ.–

**ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಶಂತ್ಯೋಷಧಿಂ ।**
**ಸೋಮಂ ಯಂ ಬ್ರಹ್ಮಾಣೋ ವಿದುರ್ನತಸ್ಯಾಶ್ನಾತಿ ಕಶ್ಚನ ॥**

[ಋಗ್ವೇದ;– 10.85.3]

" [ಪಪಿವಾನ್] ಕುಡಿಯುವ ರೂಢಿಯುಳ್ಳವನು [ಯತ್ ಓಷಧಿಂ] ಯಾವ ಔಷಧಿಯನ್ನು [ಸಂಪಿಶಂತಿ] ಅರೆಯುತ್ತಾರೋ, [ಸೋಮಂ ಮನ್ಯತೆ ] ಅದನ್ನು ಸೋಮವೆಂದು ತಿಳಿಯುತ್ತಾನೆ. ಆದರೆ, [ಯಂ ಸೋಮಂ] ಯಾವ ಸೋಮವನ್ನು, [ಬ್ರಹ್ಮಾಣಃ ವಿದುಃ] ಬ್ರಹ್ಮಜ್ಞರು ತಿಳಿಯುತ್ತಾರೋ, [ತಸ್ಯ] ಅದನ್ನು, [ಕಶ್ಚನ] ಯಾವನೂ. [ನ ಅಶ್ನಾತಿ] ಭಕ್ಷಿಸುವುದಿಲ್ಲ."

ಈ ಮಂತ್ರ ಲತಾವಿಶೇಷದ ಬಳಿಯಲ್ಲದ ಮತ್ತಾವುದೋ ಒಂದು ವಸ್ತುವಿನತ್ತ ಸನ್ನೆ ಮಾಡುತ್ತಲಿದೆ. ಋಗ್ವೇದದ ಸಂಪೂರ್ಣ ಒಂಬತ್ತನೆಯ ಮಂಡಲವೇ ಪವಮಾನ ಸೋಮಸೂಕ್ತಗಳಿಂದ ತುಂಬಿದೆ. ನಿರುಕ್ತದಲ್ಲಿ **'ಸೋಮ ಆತ್ಮಾ ಏತನ್ಮಾದೇವ.'** [ನಿ. ಪರಿ. 2]– "ಇದೇ (ವ್ಯಾಪಕತ್ವದಿಂದ) ಕಾರಣದಿಂದ ಸೋಮನು ಆತ್ಮನೇ," ಅದೇ ಶಾಸ್ತ್ರ ಸೋಮಶಬ್ದಕ್ಕೆ **'ಸೋಮಃ ಸುನೋತೇಃ'** - "ಹಿಂಡಿ ತೆಗೆಯುವ ಕಾರಣದಿಂದ ಸೋಮವನ್ನು ಸೋಮವೆನ್ನುತ್ತಾರೆ. **'ದಧಾತಿ ರತ್ನಂ ಸ್ವಧಯೋ ರಪೀಚ್ಯಂ ಮದಿಂತಮೋ ಮತ್ಸರ ಇಂದ್ರಿಯೋ ರಸಃ'** [ಋಗ್ವೇದ:- 9. 86. 10]- "[ಸ್ವಧಯೋಃ] ಆತ್ಮನನ್ನು ಶರೀರದೊಂದಿಗಿಡುವ ಅನ್ನ ಜಲಗಳಿಗೆ, ಅಥವಾ ಆತ್ಮೋದ್ಧಾರಕವಾದ ಜ್ಞಾನ-ಕರ್ಮಗಳಿಗೆ. [ಅಪೀಚ್ಯಂ] ಅಂದದಿರುವ, ಗುಪ್ತವಾಗಿರುವ, [ರತ್ನಂ] ರಮ್ಯವಾದ, [ಮದಿಂತಮಃ] ಅತ್ಯಂತ ತೃಪ್ತಿಕರವಾದ, [ಮತ್ಸರಃ] "ನಾನು" ಎಂಬ ಅಹಂಭಾವದಿಂದ ದೂರ ಸರಿಸುವ, [ಇಂದ್ರಿಯಃ ರಸಃ] ಸರ್ವೇಶ್ವರನ ಆನಂದರಸ ಸೋಮವಾಗಿದೆ."- ಎಂದಿದೆ.

ಆದರೆ ಈ ಮಂತ್ರದಲ್ಲಿ ಸೋಮಶಬ್ದ ಬಹುವಚನದಲ್ಲಿದೆ. 'ಸು' ಧಾತುವನ್ನು ಸ್ಮರಿಸಿರಿ. ಸಾರಭೂತವಾದುದು ಸೋಮ-ಎಂದು ತಿಳಿದು ಬರುತ್ತದೆ. ಪರಮಾತ್ಮನೊಬ್ಬನೇ, ಆದಕಾರಣ, ಅವನು ವಸ್ತುತಃ **"ರಸೋವೈಸಃ"** ಉಪನಿಷದ್ವಚನದಿಂದ ರಸರೂಪನೇ ಎಂಬುದೂ ಗೊತ್ತಾಗುತ್ತದೆ. ಆದರೆ, ಬಹುವಚನವಿರುವುದರಿಂದ, ರಸರೂಪಗಳೇ ಆದ ಅನ್ಯ ತತ್ತ್ವಗಳತ್ತ ಹೊರಳಬೇಕಾಗುತ್ತದೆ. ವ್ಯಕ್ತಿ-ವ್ಯಕ್ತಿಯ ಶರೀರದತ್ತ ಗಮನ ಕೊಡಿ. ಕಣ್ಣುಗಳು, ಮೂಗು, ಕಿವಿಗಳು, ಹಸ್ತಪಾದ-ಮೊದಲಾದುವು ಎಷ್ಟೇ ಸುಂದರವಾಗಿರಲಿ, ಸೊಗಸಾಗಿರಲಿ; ದೇಹದಿಂದ ಜೀವ ದೂರವಾದನೆಂದರೆ, ಸುಂದರ ಶರೀರ ಶವಮಾತ್ರ, ಅನ್ಯರ ಮಾತಾದರೂ ಏನು? ಜೂಜುಗಾರನ ದುರವಸ್ಥೆಯನ್ನು ಬಣ್ಣಿಸುತ್ತಾ -ಬಣ್ಣಿಸುತ್ತಾ ಋಗ್ವೇದ- **"ಪಿತಾ ಮಾತಾ ಭ್ರಾತರ ಏನಮಾಹುಃ ನ ಜಾನೀಮೋ ನಯತಾ ಬದ್ಧಮೇನಂ.'** [10. 34. 4.] "ಅವನ ತಾಯಿ-ತಂದೆ ಹಾಗೂ ಸೋದರರೇ - ಇವನಿಗೇನಾಯಿತೋ ತಿಳಿಯೆವು. ಇವನನ್ನು ಕಟ್ಟಿ ತೆಗೆದುಕೊಂಡುಹೋಗಿ,"- ಎನ್ನುತ್ತಾರೆ ಎಂದಿದೆ. ಹೀಗೆ ನೋಡಿದಾಗ, ವೈಯಕ್ತಿಕ ಶರೀರಸಾರ ಜೀವನೇ - ಎಂಬುದು ಸ್ಪಷ್ಟವಾಗುತ್ತದೆ. ವೇದಗಳ ಕಥನವಿದು. **ಕೇತುಂ ಕೃಣ್ವನ್ನ ಕೇತವೇ ಪೇಶೋ ಮರ್ಯಾ ಅಪೇಶಸೇ। ಸಮುಷದ್ಭಿರಜಾಯಥಾಃ ||** [1. 6. 3] "[ಅಕೇತವೇ] ಜ್ಞಾನರಹಿತಕಾಯಕ್ಕೆ, [ಕೇತುಂ] ಜ್ಞಾನವನ್ನು, [ಕೃಣ್ವನ್] ಉಂಟುಮಾಡುತ್ತಾ [ಅಪೇಶಸೇ] ಸೌಂದರ್ಯರಹಿತಕಾಯಕ್ಕೆ. [ಪೇಶಃ ಕೃಣ್ವನ್] ಸೌಂದರ್ಯವನ್ನೆರೆಯುತ್ತಾ, ಓ ಜೀವ! ನೀನು, [ಉಷದ್ಭಿಃ ಸಂ] ನಾನಾಕಾಮನೆಗಳಿಂದ, [ಅಜಾಯಥಾಃ] ಹುಟ್ಟಿ ಬಂದಿರುವೆ." ಈ ವಚನಗಳನ್ನು ನೋಡಿದ ಮೇಲೆ, ಸೋಮನು, ಶರೀರದಲ್ಲಿ ನಿಜವಾಗಿ ಸಾರರೂಪನಾದವನು ಜೀವನೇ - ಎಂಬುದು ಖಚಿತವಾಗುತ್ತದೆ. ಹೀಗೆ ಈ ಮಂತ್ರದಲ್ಲಿ **'ಸೋಮಾಃ'** ಎಂಬ ಶಬ್ದ ಜೀವಾತ್ಮರುಗಳ – ಎಂಬರ್ಥದಲ್ಲಿಯೇ ಪ್ರಯುಕ್ತವಾಗಿದೆ – ಎನ್ನುವುದು ಹಗಲು ಬೆಳಕಿನಷ್ಟೇ ಸ್ಪಷ್ಟವಾಗಿದೆ.

ಮುಂದಿನ ಶಬ್ದ **'ಅರಂಕೃತಾಃ'** – ಎಂಬುದು **"ರಲಯೋಃರಭೇದಃ"** – 'ರಕಾರಕ್ಕೂ, ಲಕಾರಕ್ಕೂ ಭೇದವಿಲ್ಲವೆಂಬ ಸೂತ್ರದಿಂದ, ಇದು **"ಅಲಂಕೃತಾಃ"** ಎಂದೂ ಆಗಬಹುದು. ಎರಡು ರೀತಿಯಲ್ಲಿಯೂ ಒಂದಕ್ಕೊಂದು ಪೂರಕವಾದ ಅರ್ಥಗಳೇ ಹೊರಡುತ್ತವೆ. "ಅರಂಕೃತಾಃ" - ಎಂದರೆ, "ಕುಂದು - ಕೊರತೆಗಳನ್ನೆಲ್ಲಾ ತುಂಬಿಸಿ, ಆವಶ್ಯಕತೆಗಳನ್ನೆಲ್ಲಾ ಪೂರ್ತಿಮಾಡಿ ಸುಖವಾಗಿಡಲ್ಪಟ್ಟವರು," ಎಂದಾಗುತ್ತದೆ. "ಅಲಂಕೃತಾಃ" ಎಂದರೆ, ಈಶ್ವರ – ಸಾಕ್ಷಾತ್ಕಾರಕ್ಕೆ ಸಹಾಯಕವಾಗುವ ಶುಭಗುಣಗಳಿಂದ ಭೂಷಿತರಾದವರು." ಎಂದಾಗುತ್ತದೆ. **ಇಹಕ್ಕೆ "ಅರಂಕೃತಿ; ಪರಕ್ಕೆ ಅಲಂಕೃತಿ. ಅಥವಾ ಇಹಕ್ಕೆ ಅಲಂಕೃತಿ; ಪರಕ್ಕೆ ಅರಂಕೃತಿ"** - ಎಂದಾದರೂ ಭಾವಿಸಿರಿ. ಎರಡೂ ಸಮಾನ ರೂಪದಿಂದಲೇ ಯುಕ್ತವಾಗುತ್ತವೆ.

[ತೇಷಾಂ=ತಾನ್] ಅವರನ್ನು [ಪಾಹಿ] ರಕ್ಷಿಸು, [ಹವಂ ಶ್ರುಧಿ] ಕರೆಯನ್ನಾಲಿಸು ಇವೆಲ್ಲಾ ಕೇಳಲು ಬಹು ಸುಲಭವೇ ಆಗಿವೆ. ಆದರೆ, ದಾರ್ಶನಿಕನ ಹೃದಯ ಗುದುಗುಟ್ಟುತ್ತದೆ:- "ಏನಿದು ಆಲಿಸುವಿಕೆ ? ಅಶರೀರ ಭಗವಂತನೆಂದ ಮೇಲೆ, ಅವನಿಗೆ ಶ್ರೋತ್ರಗಳೆಲ್ಲಿ? ಮತ್ತವನು ಕೇಳುವನಾದರೂ ಹೇಗೆ ?" ಈ ಪ್ರಶ್ನೆಗೆ ಉತ್ತರ ಹುಡುಕುತ್ತಾನೆ. ಋಗ್ವೇದ:– **"ಆ ಶ್ರುತ್ಕರ್ಣ ಶ್ರುಧೀ ಹವಂ"** [1. 10.9] "ಓ ಆಲಿಸುವ ಕಿವಿಯುಳ್ಳ ವಿಭೋ! ಕರೆಯನ್ನಾಲಿಸು" ಎನ್ನುತ್ತದೆ; **"ಶ್ರುತಿ ಶುತ್ಕರ್ಣ"** [ಋಕ್– 1.44.13] – "ಕೇಳುವ ಕಿವಿಗಳನ್ನುಳ್ಳ ಸ್ವಾಮಿನ್! ಆಲಿಸು." – ಎಂಬ ಪ್ರಾರ್ಥನೆಯನ್ನು ಆರಾಧಕನ ನಾಲಗೆಯು ಮೊಳಗಿಡುತ್ತದೆ. ಅಕಾಯನು ಸಕರ್ಣನಾಗಲು ಸಾಧ್ಯವೇ? ಮಾನವೀ ವಾಣಿ ಬಿಟ್ಟರೆ, ನಮ್ಮ ಬಳಿ ಬೇರೆ ಯಾವುವೇ ಸಾಧನವೂ ಇಲ್ಲ ಕೇವಲ ಅನುಭವದಿಂದ ಮಾತ್ರ, ಅನುಭವದ ದೃಷ್ಟಾಂತದಿಂದ ಮಾತ್ರ, ಭಾವನೆಗೆ ಅಭಿವ್ಯಂಜಕ ರೂಪ ಕೊಡಲಾದೀತು. ನಾವು ನಮ್ಮ ಹೃದಯದಲ್ಲಿ ಏನೋ ಆಲೋಚಿಸಿಕೊಳ್ಳುತ್ತೇವೆ. ವ್ಯಕ್ತರೂಪವಾಗಿ, ಅನ್ಯರಿಗೆ ಅಥವಾ ತನಗೆಯೇ ಕೇಳಿಸದು ಆ ಆಲೋಚನೆ. ಆದರೆ – ಶಬ್ದವಿಲ್ಲದೆ ಆಲೋಚನೆ ಉದಿಸಬಲ್ಲದೆ? ಮೂರುಕಾಲಕ್ಕೂ ಇಲ್ಲ. ಹಾಗೆಯೇ ಅಂತರ್ಯಾಮೀ ಈಶ್ವರ ಅನುಕ್ತವಾದ ಶಬ್ದಗಳಲ್ಲಿರುವ ನಮ್ಮ ಆಲೋಚನೆಗಳನ್ನು ಆಲಿಸುತ್ತಾನೆ. ಆದಕ್ಕೆಯೇ ಋಗ್ವೇದ :– **"ಶ್ರಾವಯಾ ವಾಜಂ ಕುವಿದಂಗ ವೇದತ್"** [8.96.12] "ಮಾನವ ! ತೋಡಿಕೋ ನಿನ್ನ ಅಳಲನ್ನು. ಪ್ರಿಯನೇ ! ಜಗತ್ತನ್ನೆಲ್ಲಾ ತಿಳಿದವನು ತಿಳಿದುಕೊಳ್ಳುತ್ತಾನೆ ಖಂಡಿತ." – ಎನ್ನುತ್ತಿದೆ. ಅನ್ಯರ ಮುಂದೆ ಅತ್ತೇನು? ಅರಿಕೆಮಾಡಿಕೊಂಡೇನು? ನಿನ್ನಂತೆಯೇ ಅಲ್ಪಜ್ಞರೂ, ಅಲ್ಪಶಕ್ತರೂ ಆದವರಿಂದ ನಿನಗೆ ಸಿಕ್ಕುವುದಾದರೂ ಏನು ?

ಈ ದೃಢವಾದ ಆಸ್ತಿಕತ್ವ ಮಾನವನ ಜೀವನದ ಅಂಗ-ಅಂಗಗಳಲ್ಲಿಯೂ ಆಳವಾಗಿಳಿದು ಬೇರುಬಿಟ್ಟರೆ, ಸಾವೆಲ್ಲಿ, ಕಾವೆಲ್ಲಿ ? ಸೋಲೆಲ್ಲಿ, ಪೋಲೆಲ್ಲಿ ?

ಪ್ರಜ್ಞಾ-ಸಮನ್ವಿತವಾದ ಶ್ರದ್ಧೆಯಿರಲಿ ಭಗವಂತನಲ್ಲಿ; ಆಮೇಲೆ, ಜಯವೇ ಹೊರತು, ಭಯವಿಲ್ಲ. ನಯವೇ ಹೊರತು ಸಂಶಯವಿಲ್ಲ.

## ಸಂಹಿತಾ ವಿಭಾಗ

**ವಾಯ ಉಕ್ಥೇಭಿರ್ಜರಂತೇ ತ್ವಾಮಚ್ಛಾ ಜರಿತಾರಃ ।**

**ಸುತಸೋಮಾ ಅಹರ್ವಿದಃ ॥ ॥೨॥**

**ಪದಪಾಠ:–** ವಾಯೋ, ಉಕ್ಥೇಭೀ, ಜರಂತೇ, ತ್ವಾಂ ಅಚ್ಛ, ಜರಿತಾರಃ ಸುತ ಸೋಮಾಃ, ಅಹರ್ವಿದಃ ।

**ಅನ್ವಯ:–** ವಾಯೋ! ಸುತಸೋಮಾಃ ಅಹರ್ವಿದಃ ಜರಿತಾರಃ ತ್ವಾಂ ಉಕ್ಥೇಭಿಃ ಅಚ್ಛ ಜರಂತೇ.

**ತಾತ್ಪರ್ಯ:–** ಪ್ರಾಣಸ್ವರೂಪ ಭಗವನ್! ಹಿಂಡಲ್ಪಟ್ಟ ಸೋಮವನ್ನುಳ್ಳವರಾದ, ಎಂದರೆ ನಿನ್ನ ಆನಂದಾನುಭವ ಹೊಂದಿದ ಮತ್ತು ದಿನಗಳ ಮೌಲ್ಯವನ್ನರಿತ ಅಥವಾ ಯಾವ ಕಾಲದಲ್ಲಿ ಏನನ್ನು ಮಾಡಬೇಕೆಂಬುದನ್ನು ಬಲ್ಲ ಸ್ತುತಿಕರ್ತರು ನಿನ್ನನ್ನು ಉತ್ತಮವಾದ ಸ್ತೋತ್ರಗಳಿಂದ ಒಳಿತಾಗಿ ಸ್ತುತಿಸುತ್ತಾರೆ.

**ಭಾಷ್ಯ:–** **"ತದೇವಾಗ್ನಿಸ್ತದಾದಿತ್ಯಸ್ತದ್ವಾಯುಃ"** [ಯಜು:- 32.1.] ಮೊದಲಾದ ಮಂತ್ರಗಳಿಂದ ಒಬ್ಬನೇ ಪರಮಾತ್ಮನಿಗೆ 'ವಾಯು' ಎಂಬ ಹೆಸರೂ ಇದೆ-ಎಂದು ಪ್ರತಿಪಾದಿಸಿಯೇ ಇದ್ದೇವೆ. ಸರ್ವರಿಗೂ ಪ್ರಾಣಸ್ವರೂಪನೂ, ಕಷ್ಟಕಾರ್ಪಣ್ಯಗಳನ್ನು ದೂರೀಕರಿಸುವವನೂ ಆದ ಭಗವಂತನನ್ನೇ ಇಲ್ಲಿಯೂ 'ವಾಯು' ಎಂದು ಸಂಬೋಧಿಸಲಾಗಿದೆ, 'ಜರಿತಾರಃ; ಸುತಸೋಮಾಃ, ಅಹರ್ವಿದಃ' - ಎಂಬ ಮೂರು ಶಬ್ದಗಳನ್ನು ಇಲ್ಲಿ ಉಪಾಸಕರಿಗಾಗಿ ಪ್ರಯೋಗಿಸಲಾಗಿದೆ. **'ಜರತೇ ಸ್ತುತಿಕರ್ಮಣಃ'** [ನಿರುಕ್ತ, ದೈವತಃ:- 4. 1. 8.] "ಸ್ತುತಿಮಾಡು" - ಎಂಬರ್ಥದಲ್ಲಿ "ಜರತೇ" - ಎಂಬ ಪ್ರಯೋಗ ಕಂಡು ಬರುತ್ತದೆ. ಇದೇ ಅರ್ಥದ ಳಳ ಧಾತುಗಳಲ್ಲಿ ಇದೂ ಒಂದಾಗಿದೆ. ಪ್ರಾಣಸ್ವರೂಪನೂ,ರಕ್ಷಕನೂ, ತಾಪ ನಿವಾರಕನೂ, ಆದ ಪರಮೇಶ್ವರನನ್ನು ಸ್ತುತಿಸುತ್ತಾರೆ."- ಎಂದು ಹೇಳಿ, ಈ ಮಂತ್ರ ಉಪಾಸಕರಲ್ಲಿರಬೇಕಾದ ಕೆಲವು ಗುಣಗಳನ್ನು ಪ್ರತಿಪಾದಿಸುತ್ತಿದೆ.

'ಸುತಸೋಮಾಃ' - ಎಂಬ ಶಬ್ದ ಈಗ ವಿವೇಚನೀಯ. ಸೋಮ ಶಬ್ದವನ್ನು ನೀವು ಎಷ್ಟೇ ವರ್ಣಿಸಿರಿ; ಮತ್ತೂ ವರ್ಣಿಸಬೇಕಾದುದು ಉಳಿದೇ ಹೋಗುತ್ತದೆ. "ಯಜ್ಞಯಾಗಗಳಲ್ಲಿ ಯಾಜ್ಞಿಕರು ಬಳಸುತ್ತಿದ್ದ ಲತಾವಿಶೇಷದ ರಸ - ಎಂಬ ರೂಢಮೂಲವಾದ ಮತ್ತು ಅನ್ಯ ಅಷ್ಟೇ ಪ್ರಧಾನವಾದ ಅರ್ಥಗಳನ್ನು ಮುಚ್ಚಿಡುವ ಅರ್ಥ ಜನ-ಮನದ ಮೇಲೆ ಬೀರಿರುವ ಭಾವನೆಯನ್ನು ಒರೆಸಿಹಾಕುವುದು ಸುಲಭವಾದುದಲ್ಲ. ಬಹುವ್ರೀಹಿ ಸಮಾಸದಲ್ಲಿರುವ 'ಸುತಸೋಮಾಃ' ಎಂಬ ಶಬ್ದದ ಅರ್ಥ "ಹಿಂಡಲ್ಪಟ್ಟ ಸೋಮವನ್ನುಳ್ಳವರು" – ಎಂದಾಗುತ್ತದೆ. ಈ ಮುನ್ನವೂ ಹೇಳಿದ್ದೇವೆ. ವಸ್ತುತಃ ಸೋಮ–ಎಂಬುದು

ಪರಮಾತ್ಮ: ಪರಮಾತ್ಮನ ಆನಂದ, ಜೀವಾತ್ಮ, ವಿವೇಕ, ಉತ್ಪನ್ನಮಾಡಲ್ಪಟ್ಟ ಐಶ್ವರ್ಯ ಹೀಗೆ ಅನೇಕ ಅರ್ಥಗಳಲ್ಲಿ ಬರುತ್ತದೆ. ಪ್ರಕರಣ ನೋಡಿದಲ್ಲಿ ಹಾಗೂ ಸ್ತುತಿಮಾಡುವವರಿಗೆ ಅನ್ವಯಿಸಿ ಹೇಳಿರುವುದರಿಂದ ಇಲ್ಲಿ ಕೇವಲ ಭಗವದಾನಂದ ಹಾಗೂ ವಿವೇಕ - ಈ ಎರಡನ್ನು ಮಾತ್ರ ಗ್ರಹಿಸಬಹುದಾಗಿದೆ. ನಾವು ಹಿಂದಿನಿಂದ ಹೇಳುತ್ತಲೇ ಬಂದಿದ್ದೇವೆ. ಪ್ರಜ್ಞಾನಮಯನಾದ ಭಗವಂತನನ್ನು ಅಜ್ಞಾನಾಮಯಯುಕ್ತರಾಗಿ ಆರಾಧಿಸಲಾಗದು - ಎಂದು. ವಿವೇಕವನ್ನು ಎಚ್ಚರಿಸಬೇಕು. ನಮ್ಮ ಸುಪ್ತ ವಿವೇಕ ಜಾಗೃತವಾದಾಗ, ನಾವು ಸುತಸೋಮರಾಗುತ್ತೇವೆ. ಅಷ್ಟೇ ಅಲ್ಲ; ನಾವು ಭಗವಂತನ ಗುಣಗಾನ ಮಾಡಹತ್ತಿದರೆ– ನಮ್ಮ ಸಂಪೂರ್ಣಜೀವನ ಆನಂದ ರಸಾರ್ದ್ರವಾಗಬೇಕು. ಭೌತಿಕವಾದ ಮದವಲ್ಲ; ಆಧ್ಯಾತ್ಮಿಕವಾದ ಮದ ನಮ್ಮ ಬಾಳಿನ ಸ್ವರೂಪವನ್ನೇ ಪರಿವರ್ತಿಸಬೇಕು. ಸುತಸೋಮರು ಪೀತಸೋಮರೂ ಆಗಿಯೇ ತೀರುವರು. ಆಹಾ! ಅದೇನು ರುಚಿ ಆ ಸೋಮರಸದ್ದು ? ಆಲಿಸಿರಿ:—

**ಸ್ವಾದುಷ್ಕಿಲಾಯಂ ಮಧುಮಾಂಉತಾಯಂ ತೀವ್ರಷ್ಕಿಲಾಯಂ ರಸವಾಂಉತಾಯಂ ।**

**ಉತೋ ನ್ವಸ್ಯ ಪಪಿವಾಂಸಮಿಂದ್ರಂ ನ ಕಶ್ಚನ ಸಹತ ಆಹವೇಷು ॥**

[ಋಗ್ವೇದ:– 6.47.1.]

“[ಅಯಂ] ಈ ಸೋಮವು, [ಕಿಲ] ನಿಜವಾಗಿಯೂ, [ಸ್ವಾದುಃ] ರುಚಿಕರವಾಗಿದೆ. [ಅಯಂ] ಇದು, [ಕಿಲ] ಸತ್ಯವಾಗಿಯೂ, [ಮಧುಮಾನ್] ಮಧುರವಾಗಿದೆ. [ಅಯಂ] ಇದು, [ಕಿಲ] ಸತ್ಯವಾಗಿಯೂ, [ತೀವ್ರಃ] ತೀವ್ರವಾಗಿದೆ. [ಉತ] ಹಾಗೂ, [ಉ] ಸತ್ಯವಾಗಿಯೂ, [ಅಸ್ಯಪಪಿವಾಂಸಂ ಇಂದ್ರಂ] ಇದರ ಪಾನಮಾಡುವ ಇಂದ್ರಿಯವಾನ್ ಜೀವನನ್ನು,[ಆ ಹವೇಷು] ಸಂಘರ್ಷಗಳಲ್ಲಿ, [ಕಶ್ಚನ] ಯಾವನೂ ಕೂಡ, [ನ ಸಹತೇ] ಎದುರಿಸಲಾರನು.” ಈ ಸೋಮ ಮದ್ಯವಲ್ಲ: ತಲೆಕೆಡಿಸುವ ಮದ್ಯವಲ್ಲ – ಎಂದು ಓದುಗರಾಗಲೇ ಆಲಿಸಿದ್ದಾರೆ. ಇದು ಆಧ್ಯಾತ್ಮಿಕವಾದ ಮದ ಎಂದಿಟ್ಟುಕೊಳ್ಳಬಹುದು. ಇದನ್ನು ಕುಡಿದವನಿಗೆ ಲಭಿಸುವ ಶಕ್ತಿ ಎಂತಹುದು ?

**ಅಯಂ ಮೇ ಪೀತ ಉದಿಯರ್ತಿ ವಾಚಮಯಂ ಮನೀಷಾಮುಶತೀಮಜೀಗಃ ।**

**ಅಯಂಷಡುರ್ವೀರಮಿಮೀತಧೀರೋ ನಯಾಭ್ಯೋಭುವನಂ ಕಚ್ಚನಾರೇ ॥**

[ಋಗ್ವೇದ:– 6. 47. 3]

"[ಪೀತ ಅಯಂ] ಸೇವಿಸಲ್ಪಟ್ಟ ಈ ಸೋಮ, [ವಾಚಂ] ಹೃದಯಾಂತರಾಳದಿಂದ ದಿವ್ಯವಾಣಿಯನ್ನು ಮೊಳಗಿಸುತ್ತದೆ. [ಅಯಂ] ಇದು, [ಉಶತೀಂ ಮನೀಷಾಂ] ಉನ್ನತ ವಾಗುತ್ತಿರುವ, ಅಭೀಷ್ಟವಾದ ಮನೀಷೆಯನ್ನು, ಮನ ಕಾಮನೆಯನ್ನು-[ಅಜೀಗಃ] ಎಚ್ಚರಿಸು ತ್ತದೆ. [ಧೀರಃಧಿಯಂ ಈರಯತೀತಿ] ಪ್ರಜ್ಞಾಕರ್ಮಗಳನ್ನು ಪ್ರೇರಿಸುವ, [ಅಯಂ] ಇದು, [ಯಾಭ್ಯಃಆರೇ] ಯಾವವುಗಳಿಂದ ಆಚೆಗೆ, [ಕಚ್ಚನ ಭುವನಂ ನ] ಯಾವ ಲೋಕವೂ ಇಲ್ಲವೋ, [ಷಟ್ ಉರ್ವೀಃ] ಆ ಆರು ಮಹಾ ತತ್ತ್ವಗಳನ್ನು, *"[ಅಮಿಮೀತ] ಅಳೆದು ನೋಡುತ್ತದೆ."

ಯಾವವು ಈ ಆರು ಮಹಾತತ್ತ್ವಗಳು ? ಗೀತೆಯಲ್ಲಿ ಯೋಗೇಶ್ವರ ಶ್ರೀ ಕೃಷ್ಣನು – **'ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ'** ॥ [15.7] "ಮನಸ್ಸನ್ನೇ ಆರನೆಯದನ್ನಾಗಿ ಹೊಂದಿದ ಪಂಚ ಜ್ಞಾನೇಂದ್ರಿಯಗಳು ಪ್ರಕೃತಿಯಲ್ಲಿ ನೆಲೆ ಗೊಂಡು ಆಕರ್ಷಿಸುತ್ತವೆ." – ಎಂದಿದ್ದಾನೆ. ಅದು ಯೋಗೇಶ್ವರನ ಸ್ವಂತ ಕಲ್ಪನೆಯೂ ಅಲ್ಲ. ಅಥರ್ವವೇದ – **'ಇಮಾನಿ ಯಾನಿ ಪಂಚೇಂದ್ರಿಯಾಣಿ ಮನಃಷಷ್ಠಾನಿ ಮೇ ಹೃದಿ ಬ್ರಹ್ಮಣಾ ಸಂಶಿತಾನಿ। ಯೈರೇವ ಸಸೃಜೇಘೋರಂ ತೈರೇವ ಶಾಂತಿರಸ್ತು ನಃ'** [19. 9. 5] ಎನ್ನುತ್ತಿದೆ. **ತಾತ್ಪರ್ಯ:** - 'ಭಗವನ್' ಮನಸ್ಸನ್ನೇ ಆರನೆಯದನ್ನಾಗಿ ಉಳ್ಳ ಶ್ರೋತ್ರ, ತ್ವಕ್. ದರ್ಶನ, ರಸನ ಹಾಗೂ ಘ್ರಾಣ – ಎಂಬ ಐದು ಇಂದ್ರಿಯಗಳೂ ನನ್ನ ಹೃದಯದಲ್ಲಿರುವ ಜೀವಾತ್ಮನ ಹಿಡಿತದಲ್ಲಿದ್ದು, ಜ್ಞಾನದಿಂದ ತೀಕ್ಷ್ಣವಾಗಿವೆ. ಅವುಗಳಿಂದಲೇ ಘೋರ ಪರಿಸ್ಥಿತಿ ಬರುವುದು. ಅವುಗಳಿಂದಲೇ ನಮಗೆ ಶಾಂತಿ ಲಭಿಸಲಿ.' – ಎಂದು ಈ ಮಂತ್ರದರ್ಥ. ಸುತಸೋಮನಾಗಿ ಯಾವನೂ ಪೀತ ಸೋಮನಾಗದೇ ಇರನು. ಭಕ್ಷಿಸಲಿಕ್ಕೆಂದೇ ಭಕ್ಷ್ಯ ತಯಾರಿಸಿದಾತ, ಭಕ್ಷಿಸದೇ ಕುಳಿತಾನೇ?

ವಸ್ತುತಃ ನಮಗೆ ಈ ಜಗತ್ತಿನ ಅನುಭವವಾಗುವುದು ಈ ಐದು ಇಂದ್ರಿಯಗಳಿಂದಲೇ ಕುರುಡನ ಪಾಲಿಗೆ ಸೂರ್ಯನೂ ಇಲ್ಲ; ನಕ್ಷತ್ರಗಳೂ ಇಲ್ಲ. ಕಿವುಡನ ಮೇಲೆ ಶಬ್ದವಿಲ್ಲ. ಪಂಚೇಂದ್ರಿಯಗಳೂ, ಇದ್ದೂ ಕೂಡ ಮನ ಒಂದು ವಿಕೃತವಾಗಿದ್ದರೆ, ಎಲ್ಲವೂ ವಿಕೃತವೇ. ಆದರೆ, ಸೋಮರಸಪಾನಗೈದವನು ಮಹಾ ಪುಣ್ಯಶಾಲಿ. ಈ ಆರರ ಯೋಗ್ಯತೆಯನ್ನು ಅಳೆದು ನೋಡುವುದು ಸೋಮರಸ.

ಕಾಲಾಂತರದಲ್ಲಿ ಸೋಮದ ವಿಷಯವೇ ಬರಲಿಕ್ಕಿದೆ. ಹೀಗಿರುವಲ್ಲಿ ಅನಾವಶ್ಯಕ ವಾಗಿ ಈ ಪ್ರಕರಣವನ್ನು ಬೆಳೆಯಿಸಬೇಕಾಗಿಲ್ಲ. ಇಲ್ಲಿ ಉತ್ತಮವಾದ ಸೋಮ ಭಗವದಾ ನಂದರಸ ಮಾತ್ರ. ಉಪನಿಷತ್ಕಾರರೆಂಬಂತೆ- **'ಯದಾ ಪಂಚಾವತಿಷ್ಠಂತೇ ಜ್ಞಾನಾನಿ**

* ಈ ಷಟ್ಕದಿಂದ ಹಲವರು ವೈಶೇಷಿಕೋಕ್ತ ದ್ರವ್ಯ, ಗುಣ, ಕರ್ಮ, ಸಮುದಾಯ, ಸಾಮಾನ್ಯ ಹಾಗೂ ವಿಶೇಷ – ಎಂಬ ಷಟ್ಪದಾರ್ಥಗಳನ್ನೂ, ಕೆಲವರು ಶಮ, ದಮ, ತಿತಿಕ್ಷಾ, ಉಪರತಿ, ಶ್ರದ್ಧಾ ಹಾಗೂ ಸಮಾಧಾನ – ಎಂಬ ಸಂಪತ್ಷಟ್ಕವನ್ನೂ ಗ್ರಹಿಸುತ್ತಾರೆ. ವೈಶೇಷಿಕೋಕ್ತವಂತೂ ಅತಿದೂರ. ಷಟ್‌ಸಂಪತ್ತಿ "ಘಟ್ಟಕುಟೀ ಪ್ರಭಾತನ್ಯಾಯ" ದಿಂದ ನಾವು ಹೇಳಿರುವುದನ್ನೇ ಒಪ್ಪುತ್ತದೆ.

**ಮನಸಾ ಸಹ.'** – ಪಂಚಜ್ಞಾನೇಂದ್ರಿಯಗಳಾವಾಗ ಮನದೊಂದಿಗೆ ಸ್ತಬ್ಧವಾಗಿ ನಿಲ್ಲು ವವೋ, ಆಗ ಆರಾಧಕನ ಆತ್ಮನಿಗೆ ಆಶ್ರಯವಾಗಿ, ಅಲಂಬನವಾಗಿ, ಆಲಯವಾಗಿ ತನ್ನಂಕ ದಲ್ಲಿ ತುಂಬಿಕೊಳ್ಳುವುದು ಅವನನ್ನು ಆ ಆನಂದ. ಆನಂದಾನುಭೂತಿಯಾಚೆಗೆ ಏನೂ ಇಲ್ಲ ಅದು ಏಕದೇಶೀಯನಾದ ಜೀವಾತ್ಮನ ದೃಷ್ಟಿಯಿಂದ, ಸಸೀಮವಾದ ಬ್ರಹ್ಮಾಂಡದ ದೃಷ್ಟಿಯಿಂದ ಅನಂತನಿಗೆ ಆಚೆ ಏನು ? ಈಚೆ ಏನು ?

ಈಗ 'ಅಹರ್ವಿದಃ' – ಇದನ್ನು ಬಿಚ್ಚಿ ನೋಡೋಣ. ಸಾಯಣರು ಇದರ ಬಗೆಗೆ ಹೆಚ್ಚೇನೂ ಹೇಳಲಿಲ್ಲ. ಮಹರ್ಷಿದಯಾನಂದರು – "**ಯೇ ಅಹರ್ವಿಜ್ಞಾನ ಪ್ರಕಾಶಂ ವಿಂದಂತಿ ತೇ**' – ಎಂದರೆ. – 'ಅಹಃ – ಎಂದರೆ ವಿಜ್ಞಾನದ ಪ್ರಕಾಶವನ್ನು ಹೊಂದುವ ವರು' ಎಂದು ಬರೆದಿದ್ದಾರೆ. ಯಾಸ್ಕರು **'ಅಹರ್ದೃಶಃ ಸೂರ್ಯದೃಶಃ'** [6.5.26.4.] ನೇರವಾದ ಸಂಬಂಧವಿಲ್ಲದ ಕಾರಣ, ಇದನ್ನು ಬಿಟ್ಟುಬಿಡೋಣ. "ಅಜ್ಞಾನವೇ ಕತ್ತಲು; ಜ್ಞಾನವೇ ಬೆಳಕು." – ಎಂಬ ಮಾತು ಜನಜನಿತ. "**ಜ್ಯೋತಿರ್ವೃಣೀತ ತಮಸೋ ವಿಜಾನನ್ ಆರೇ ಸ್ಯಾಮ ದುರಿತಾದಭೀಕೇ । ಇಮಾ ಗಿರಃ ಸೋಮಪಾಃ ಸೋಮವೃದ್ಧ ಜುಷಸ್ವೇಂದ್ರ ಪುರುತಮಸ್ಯ ಕಾರೋಃ**" ॥ [ಋಗ್ವೇದ– 3.39.7 ] "ಮಾನವನು, [ತಮಸಃ ವಿ ಜಾನನ್] ಕತ್ತಲಿನಿಂದ ಬೇರ್ಪಡಿಸಿ ತಿಳಿಯುತ್ತಾ, [ಜ್ಯೋತಿ ರ್ವೃಣೀತ] ಜ್ಯೋತಿಯನ್ನು ಗ್ರಹಿಸಿರಿ. [ದುರಿತಾತ್ ಆರೇ] ದುರಾಚಾರದಿಂದ ದೂರ, [ಅಭೀಕೇ] ನಿರ್ಭಯವಾದ ಸ್ಥಿತಿಯಲ್ಲಿ, [ಸ್ಯಾಮ] ಇರೋಣ. [ಇಂದ್ರ] ಓ ಇಂದ್ರಿಯವಾನ್ ಜೀವ ! [ಸೋಮಪಾ] ಆನಂದರಸಪಾನ ಮಾಡುವವನೇ ! [ಸೋಮ ವೃದ್ಧ] ಅದೇ ಆನಂದರಸದಿಂದ ಅಥವಾ ಸ್ವಯಂ ಪರಬ್ರಹ್ಮದಿಂದಲೇ ಸಮೃದ್ಧನಾದ ಜೀವಾತ್ಮನೇ ! [ಪುರುತಮಸ್ಯ ಕಾರೋಃ] ಪೂರ್ಣರಾದವರಲ್ಲೆಲ್ಲಾ ಪೂರ್ಣವಾದ, ಎಲ್ಲರಿಗೂ ಎಲ್ಲರನ್ನೂ ಎರೆದೆರೆದುಕೊಡುವ, [ಕಾರೋಃ] ಸೃಜನಕರ್ತನಾದ ಭಗವಂತನ, [ಇಮಾ ಗಿರಃ] ಈ ವಚನ ಗಳನ್ನು, [ಜುಷಸ್ವ] ಪ್ರೀತಿಯಿಂದಾಲಿಸು." ಭೌತಿಕಪ್ರಕಾಶವೇ ಉದ್ದಿಷ್ಟವಾಗಿದ್ದಲ್ಲಿ ದುರಾ ಚಾರದಿಂದ ದೂರವಾಗುವ ಹಾಗೂ ಭಗವದ್ವಚನ ಶ್ರವಣದ ವಿಷಯ ಈ ಮಂತ್ರದಲ್ಲಿರಲೇ ಬೇಕಾಗಿರಲಿಲ್ಲ.

'ಉಕ್ಥಂ'–ಎಂಬ ಶಬ್ದಕ್ಕೆ ಯಾಸ್ಕರು ನಿರುಕ್ತದಲ್ಲಿ 'ವಕ್ತವ್ಯಪ್ರಶಂಸಂ' [5.3.31. 10.] ಎಂದರ್ಥಮಾಡಿದ್ದಾರೆ. ಹೇಳಲರ್ಹವಾದ ಸ್ತುತಿಗಳಿಂದ ಕೂಡಿದವನು ಎಂದಾಗು ತ್ತದೆ 'ಉಕ್ಥೇಭಿಃ' - ಎಂಬುದರರ್ಥ. 'ಅಚ್ಛ' – ಎಂಬ ಶಬ್ದ ಕ್ರಿಯಾವಿಶೇಷಣವಾಗಿ, 'ಒಳಿತಾಗಿ' ಎಂಬರ್ಥದಲ್ಲಿ ಬಂದಿರುತ್ತದೆ.

ವಿಶೇಷ ವಕ್ತವ್ಯದ ರೂಪದಲ್ಲಿ 'ಅಹರ್ವಿದಃ' – ಎಂಬುದಕ್ಕೆ 'ದಿನವನ್ನು ತಿಳಿದವರು' ಎಂದರೆ, ದಿವಸದ ಒಳಿತು – ಕೆಡಕುಗಳನ್ನರಿತು ಉಚಿತವಾದ ರೀತಿಯಲ್ಲಿ ನಡೆದುಕೊಳ್ಳು ವವರು - ಎಂದೂ ಅರ್ಥಮಾಡಬಹುದು. ಅದೂ ತಪ್ಪಾಗದು.

## ಸಂಹಿತಾ ವಿಭಾಗ

**ವಾಯೋ ತವ ಪ್ರಪೃಂಚತೀ ಧೇನಾ ಜಿಗಾತಿ ದಾಶುಷೇ।**

**ಉರೂಚೀ ಸೋಮ ಪೀತಯೇ ॥೩॥**

**ಪದಪಾಠ:**– ವಾಯೋ, ತವ, ಪ್ರsಪೃಂಚತೀ ಧೇನಾ, ಜಿಗಾತಿ. ದಾಶುಷೇ. ಉರೂಚೀ, ಸೋಮ ಪೀತಯೇ ॥

**ಅನ್ವಯ:**– ವಾಯೋ! ತವ ಪ್ರಪೃಂಚತೀ ಉರೂಚೀಧೇನಾ ದಾಶುಷೇ ಸೋಮ ಪೀತಯೇ ಜಿಗಾತಿ ।

**ಶಬ್ದಾರ್ಥ:**– [ವಾಯೋ] ಸರ್ವಪ್ರಾಣ ಸ್ವರೂಪ ಪರಮಾತ್ಮನ್ ! [ತವ] ನಿನ್ನ [ಪ್ರಪೃಂಚತೀ] ಉತ್ಕೃಷ್ಟವಾದುದೆಲ್ಲವನ್ನೂ, ಸಮಸ್ತಸದ್ವಿದ್ಯೆಗಳನ್ನೂ ಸಂಪರ್ಕಕ್ಕೆ ತರುವ, [ಉರೂಚೀ] ಬಹುವಿಧದ ವಿಜ್ಞಾನಗಳಿಂದ ಭೂಷಿತವೂ ಆದ, [ಧೇನಾ] ವೇದವಾಣಿಯು, [ದಾಶುಷೇ] ಆತ್ಮಸಮರ್ಪಣ ಮಾಡಿಕೊಳ್ಳುವ ಮಾನವನಿಗೆ, [ಸೋಮ ಪೀತಯೇ] ನಿನ್ನ ಆನಂದ ರಸಪಾನಮಾಡಲು, [ಜಿಗಾತಿ] ನೆರವಾಗುತ್ತದೆ; ಒದಗಿ ಬರುತ್ತದೆ.

**ತಾತ್ಪರ್ಯ:**– ಸರ್ವಪ್ರಾಣಾಧಾರನಾದ ಪರಮಾತ್ಮನು ಸರ್ವರ ಹಿತಕ್ಕಾಗಿ ಉಪದೇಶಿಸಿರುವ ವೇದವಾಣಿ ಸಮಸ್ತ ಶ್ರೇಷ್ಠ ಜ್ಞಾನ - ವಿಜ್ಞಾನಗಳ ಪರಿಚಯವನ್ನೂ ಆತ್ಮ ಸಮರ್ಪಣ ಭಾವದಿಂದ ವರ್ತಿಸುವವನಿಗೆ ಮಾಡಿಸುತ್ತದೆ ಮತ್ತು ಅವನಿಗೆ ಆಧ್ಯಾತ್ಮಿಕವಾದ ಆನಂದವನ್ನು ಉಂಟುಮಾಡುತ್ತದೆ.

**ಭಾಷ್ಯ:**– ಸೃಷ್ಟಿಸ್ಥಿತಿ ಪ್ರಳಯ ಕರ್ತೃವಾದ ಪರಮಾತ್ಮನು 'ವಾಯು' ಎಂದರೆ ಪ್ರಾಣಾಧಾರ ಹಾಗೂ ಕ್ಲೇಶನಿವಾರಕ ಮಾತ್ರವಲ್ಲ; ವಿಶ್ವದ ಶಾಸಕನೂ ಆಗಿದ್ದಾನೆ. ತನ್ನ ಪ್ರಜೆಗಳಿಗೆ 'ಇದು ಸರಿ; ಇದು ತಪ್ಪು' ಎಂಬರಿವಿನ ನಿಯಮವನ್ನೇ ಪ್ರಕಾಶಪಡಿಸದೆ, ಪ್ರಜೆಗಳನ್ನು ರಕ್ಷಿಸುತ್ತಾ – ಶಿಕ್ಷಿಸುತ್ತಾ ಹೋದರೆ, ಅವನು ನ್ಯಾಯಕಾರಿಯೆಂದೆನಿಸಲಾರನು. ಆದ ಕಾರಣ ಭಗವಂತನು ಮಾನವ ಸಮಾಜ ಯಾವಾಗ ರೂಪತಾಳಿತೋ ಆಗಲೇ ಕಾರ್ಯಾಕಾರ್ಯಸೂಚಕವಾದ ನಿಯಮಾವಳಿಯನ್ನು ಪ್ರಕಟಿಸಿಯೇ ಇದ್ದಾನೆ. ಆ ನಿಯಮಾವಳಿ ಮಾನವೀಯ ರಾಷ್ಟ್ರಸಂವಿಧಾನಗಳಂತೆ ಅಪೂರ್ಣವಾಗಿಲ್ಲ. ಜ್ಞಾನ, ಕರ್ಮ, ಉಪಾಸನಾ, ವಿಜ್ಞಾನ - ಈ ವಿದ್ಯೆಗಳ ಪರಿಪೂರ್ಣ ಪ್ರಕಾಶನಕ್ಕಾಗಿ ಋಕ್, ಯಜುಷ್, ಸಾಮ, ಅಥರ್ವ ಎಂಬ ವೇದಗಳನ್ನು ಕ್ರಮಶಃ ಅಗ್ನಿ, ವಾಯು, ಆದಿತ್ಯ ಮತ್ತು ಅಂಗಿರಾಃ - ಎಂಬ ಪದ ನಾಮಯುಕ್ತವಾದ ನಾಲ್ವರು ಋಷಿಗಳ ನಿರ್ಮಲಾಂತಃಕರಣದಲ್ಲಿ ಉದ್ಭಾಸನಗೊಳಿಸಿದ್ದಾನೆ. ನಾವು ನಾಲಗೆಯ ನೆರವೇ ಇಲ್ಲದೇ ಹೃದಯದಲ್ಲಿಯೇ ವಾಕ್ಯಗಳನ್ನೋ, ಪದ್ಯಗಳನ್ನೋ,

ಶ್ಲೋಕಗಳನ್ನೋ ರಚಿಸಿಕೊಳ್ಳುವುದಿಲ್ಲವೇ ? ಹಾಗೆಯೇ, ನಿರಾಕಾರನಾದರೂ ಅಂತರ್ಯಾಮಿಯಾದ ಆ ಭಗವಂತ ಋಷಿಗಳ ಹೃದಯಗಳಲ್ಲಿ ವೇದಗಳನ್ನು ಉದ್ಭಾಸಿಸಿದ್ದಾನೆ. "ಆಲೋಚನೆ ಮಾತ್ರ ಭಗವಂತನದಿರಬಹುದು; ಬೇರೆ ಬೇರೆ ಛಂದಸ್ಸುಗಳಲ್ಲಿ ಋಷಿಗಳೇ ಮಂತ್ರಗಳನ್ನು ರಚಿಸಿಕೊಂಡಿರಬಹುದು." - ಎನ್ನುವುದೂ ತಪ್ಪು. ಛಂದಸ್ಸುಗಳೂ ಕೂಡ ಭಗವದುಕ್ತವೇ – ಎನ್ನುವುದಕ್ಕೆ ಋಗ್ವೇದದ ಪ್ರಮಾಣವೇ ಪ್ರತ್ಯಕ್ಷವಾಗಿದೆ:-

**ಆಪ್ರಾ ರಜಾಂಸಿ ದಿವ್ಯಾನಿ ಪಾರ್ಥಿವಾ**
**ಶ್ಲೋಕಂ ದೇವಃ ಕೃಣುತೇ ಸ್ವಾಯ ಧರ್ಮಣೇ ।**
**ಪ್ರ ಬಾಹೂ ಅಸ್ರಾಕ್ಸವಿತಾ ಸವೀಮನಿ**
**ನಿವೇಶಯನ್ ಪ್ರಸುವನ್ನಕ್ತುಭಿರ್ಜಗತ್ ॥** [4. 53. 3.]

"[ಸವಿತಾ ದೇವಃ] ವಿಶ್ವಸೃಜನಕರ್ತೃವಾದ ಪರಮಾತ್ಮನು, [ಸವೀಮನಿ] ಈ ಸೃಷ್ಟಿಯಲ್ಲಿ, [ನಿವೇಶಯನ್] ಪ್ರತಿಯೊಂದು ಗ್ರಹಕ್ಕೂ ಯಾವಯಾವುದು ನಿವೇಶನವೆಂದು ನಿರ್ಧರಿಸಿ, [ಜಗತ್] ಸದಾ ಸಂಚಲನ ಮಾಡುತ್ತಿರುವ ಈ ವಿಶ್ವವನ್ನು, [ಅಕ್ತುಭಿಃ] ಸ್ಪಷ್ಟವಾದ ಲಕ್ಷಣಗಳೊಂದಿಗೆ, [ಪ್ರಸುವನ್] ನಿರ್ಮಿಸಿ, [ಬಾಹೂ] ತನ್ನ ಸೃಜನ - ಪಾಲನ ಸಾಮರ್ಥ್ಯಗಳನ್ನು, [ಪ್ರ ಅಸ್ರಾಕ್] ಉತ್ಕೃಷ್ಟರೀತಿಯಲ್ಲಿ ಬಳಸುತ್ತಾನೆ. [ದಿವ್ಯಾನಿ] ಆಕಾಶೀಯ, ಹಾಗೂ [ಪಾರ್ಥಿವಾ] ಪಾರ್ಥಿವ [ರಜಾಂಸಿ] ಲೋಕಗಳನ್ನು, [ಆಪ್ರಾಃ]ಸರ್ವತ್ರ ವ್ಯಾಪಿಸುತ್ತಿದ್ದಾನೆ. [ಸ್ವಾಯಧರ್ಮಣೇ] **ತನ್ನದೇ ಆದ ಧರ್ಮದ ಸಲುವಾಗಿ,** [ಶ್ಲೋಕಂ ಕೃಣುತೇ] **ಶ್ಲೋಕವನ್ನು ರಚಿಸುತ್ತಾನೆ.**" ಶ್ಲೋಕ - ಎಂದು ಏಕವಚನದಲ್ಲಿ ಹೇಳಿರುವುದು ಕೇವಲ ಉಪಲಕ್ಷಣ ಮಾತ್ರವಾಗಿ. ಒಂದೇ ಮಂತ್ರವನ್ನು ಭಗವಂತನು ರಚಿಸಿದನು; ಉಳಿದುವನ್ನು ಋಷಿಗಳೇ ರಚಿಸಿಕೊಂಡು ಬಿಟ್ಟರು. - ಎಂಬುದು ಸರಿಯಾದ ಪಕ್ಷವಲ್ಲ. ಏಕೆಂದರೆ. ಮುಂದೆ ಋಗ್ವೇದ - ಯಜುರ್ವೇದ - ಸಾಮವೇದಗಳಲ್ಲಿ ಸ್ಪಷ್ಟವಾಗಿಯೇ ಪೂರ್ಣವೇದಗಳೇ ಈಶ್ವರೋಕ್ತವೆಂದು ಹೇಳಿದೆ. ನಾವು 'ಆಪ್ರಾ ರಜಾಂಸಿ' ಎಂಬ ಮಂತ್ರವನ್ನುದ್ಧರಿಸಿದುದು ಕೇವಲ ಸೂಚ್ಯವಾಗಿ, ಅಷ್ಟೇ. ಯಾವನಾದರೂ ನಮ್ಮ ಮೇಲೆ ಬಂದು ಧೊಪ್ಪನೆ ಬಿದ್ದುಬಿಟ್ಟರೆ – "ನಿನಗೆ ಕಣ್ಣಿಲ್ಲವೇನಯ್ಯ?" ಎಂದು ಗದರಿಸುತ್ತೇವಲ್ಲ; ಆಗ ನಮ್ಮ ಅಭಿಪ್ರಾಯ ಅವನಿಗಿರುವುದು ಒಂದೇ ಒಂದು ಕಣ್ಣು ಎಂದೇ? ಪ್ರಕರಣ ಬಂದಾಗ ವಿಷಯವನ್ನು ವಿಸ್ತರಿಸೋಣ. ಈಗಿಷ್ಟು ಸಾಕು.

"ಧೇನಾ" – ಎಂಬುದೇ ಈ ಮಂತ್ರದ ಅತಿಮುಖ್ಯ ಶಬ್ದ. ನಿರುಕ್ತಕಾರರು **'ಧೇನೇತಿವಾಙ್ನಾಮಸು ಪಠಿತಂ'** [ನಿಘಂಟು:– 1. 11] ಎಂದರೆ - 'ಧೇನಾ' ಎಂದು ವಾಕ್ಕಿನ ಹೆಸರುಗಳಲ್ಲಿ ಹೇಳಲ್ಪಟ್ಟಿದೆ." - ಎಂದಿದ್ದಾರೆ. ಮಹರ್ಷಿ ದಯಾನಂದರೂ, ಸಾಯಣರೂ 'ಧೇನಾ' ಶಬ್ದದ ಈ ಅರ್ಥವನ್ನು ಅಂಗೀಕರಿಸುತ್ತಾರೆ. ಆದರೆ – ಎಲ್ಲ ಮಂತ್ರಗಳನ್ನೂ ಯಜ್ಞಕ್ಕೆಯೇ ವಿನಿಯೋಗಿಸುವ ಸಾಯಣರು, ಇಲ್ಲಿಂದ ಬೇರೆ ದಾರಿ ಹಿಡಿಯುತ್ತಾರೆ.

ವಸ್ತುತಃ ಇಲ್ಲಿರುವುದು ಭಗವದುಕ್ತವಾದ ವೇದವಾಣಿಯ ವರ್ಣನೆ. ವಾಣಿ ಮಾನವೀಯವಲ್ಲ; ಸ್ವತಃ ವಾಯುದೇವನದು; ಸರ್ವಪ್ರಾಣಾಧಾರನಾದ ಭಗವಂತನದು. ಅದರ ಎರಡು ವೈಶಿಷ್ಟ್ಯಗಳನ್ನು ಮಂತ್ರ ಹೇಳುತ್ತಿದೆ. 'ಪ್ರ ಪೃಂಚತೀ' ಮತ್ತು 'ಉರೂಚೀ' ಎಂದು. ಮೊದಲನೆಯದಾಗಿ ಆ ಈಶ್ವರೀಯ ವಾಣಿ 'ಪ್ರ ಪೃಂಚತೀ'- ಎಂಬುದನ್ನೇ ವಿವೇಚಿಸೋಣ. 'ಪೃಚ್' ಧಾತುವಿನಿಂದ ರೂಪಗೊಳ್ಳುವ, ಸ್ತ್ರೀಲಿಂಗದಲ್ಲಿರುವ 'ಪೃಂಚತೀ' – 'ಕೂಡಿಸುತ್ತಿರು,' 'ಮೇಳವಿಸುತ್ತಿರು,' 'ಒಂದುಗೂಡಿಸುತ್ತಿರು' – ಎಂಬರ್ಥ ಕೊಡುವುದು. 'ಪ್ರ' ಎಂಬ ಅವ್ಯಯ ಸದಾ ಉತ್ಕೃಷ್ಟತಾ ಸೂಚಕವೇ ಆಗಿರುತ್ತದೆ. ಪ್ರಪೃಂಚತೀ – ಎಂದರೆ, ಉತ್ಕೃಷ್ಟವಾದುದೇನಿದೆಯೋ, ಅದರೊಂದಿಗೆ ಸಂಪರ್ಕವನ್ನುಂಟು ಮಾಡುವಂತಹ ವಾಣಿಯದು – ಎಂದು ವ್ಯಕ್ತವಾಗುತ್ತದೆ. ಪರಬ್ರಹ್ಮವನ್ನುಳಿದರೆ, ಅದಕ್ಕಿಂತ ಜ್ಯೇಷ್ಠವಾದುದು ಮತ್ತು ಶ್ರೇಷ್ಠವಾದುದು ಯಾವುದಿದೆ? 'ಇಲ್ಲ' - ಎನ್ನಲೇಬೇಕು. ಅಂತಹ ಸರ್ವಶ್ರೇಷ್ಠನೂ, ಸರ್ವ ಜ್ಯೇಷ್ಠನೂ ಆದ, ಸ್ವಯಂ ಧೇನಾದಾತನಾದ ದಯಾಮಯ ಪರ ಮಾತ್ಮನ ನೇರವಾದ ಸಂಪರ್ಕದಲ್ಲಿ ತರುವ ದಿವ್ಯ ಸಾಧನ ಈ ಧೇನಾ, ಈ ವೇದವಾಣಿ ಓದಬೇಕು; ಮನನಮಾಡಬೇಕು; ಚಿತ್ತ ಈ ಆನಂದಮಯನನ್ನು ಹಿಡಿಯಬೇಕು. ಆಗ ಈ ಜೀವನಿಗಾಗುವ ಆನಂದವನ್ನೂ ಅಭಿವರ್ಣಿಸುವ ಆ ಲೌಕಿಕ ಆತ್ಮೀಯ ಅರ್ಹತೆ ಆವನಿಗಿದೆ? ಆ ನಂತರ ಜೀವಾತ್ಮನ ಸ್ತರಕ್ಕೆ ಬರುತ್ತೇವೆ. ಅಣುಸ್ವರೂಪನಿರಬಹುದು; ಅಲ್ಪಜ್ಞನಿರಬಹುದು; ಅಲ್ಪಶಕ್ತನೂ ಆಗಿರಬಹುದು. ಆದರೆ – ಅಕಿಂಚನನಲ್ಲ ಈ ಜೀವ; ಅವಸ್ತುವಲ್ಲ. ಜೀವನಿಂದು ವೈಜ್ಞಾನಿಕ ಕ್ಷೇತ್ರದಲ್ಲಿ ಏನೇನನ್ನು ಸಾಧಿಸಿದ್ದಾನೋ, ಪ್ರಾಚೀನಕಾಲದ ಋಷಿ – ಮುನಿಗಳು ಈಗಣದರಂತಹ ವೈಜ್ಞಾನಿಕ ಉಪಕರಣಗಳಿಲ್ಲದೆ ಕೇವಲ ಅಂತರಿಕ್ಷವಲ್ಲ; ಬಾಹ್ಯಾಕಾಶದ ಚಮತ್ಕಾರಿಕ ಸೃಷ್ಟಿಗಳ ಬಗೆಗೆ ಏನೇನು ಬರೆದಿಟ್ಟು ಹೋಗಿದ್ದಾರೋ, ಅದನ್ನೆಲ್ಲಾ ನೋಡಿದರೆ, ಜೀವ ಅಕಿಂಚನನೆಂದು, ಅವಸ್ತುವೆಂದು ತೋರುವುದಿಲ್ಲ. ಅಹುದು; ಸರ್ವಜ್ಞನೂ, ವಿಶ್ವವ್ಯಾಪಕನೂ ಆದ ಆ ವಿರಾಟ್ ಚೇತನನಿಗೆ ಹೋಲಿಸುವ ಅಥವಾ ಆ ವಿರಾಟ್‌ಚೇತನ ತಾನೇ - ಎಂದು ಕೊಳ್ಳುವ ವ್ಯರ್ಥವಾದವನ್ನು ಮಾತ್ರ ಮಾಡಬಾರದು. ವಿರಾಡಾತ್ಮ ಸರ್ವಥಾ ಅನುಪಮೇ - ಎಂದ ವೇಲೆ, ಅವನಿಗೆ ಹೋಲಿಸುವುದಾರನ್ನು? ಹೋಲಿಸುವುದೇನನ್ನು?

ವೇದಗಳು ಕೇವಲ ಪರಮಾತ್ಮ - ಜೀವಾತ್ಮರ ಹಾಗೂ ಆತ್ಮಿಕ ಮೋಕ್ಷಮಾರ್ಗದ ಉಪದೇಶವನ್ನು ಮಾತ್ರ ಮಾಡುತ್ತವೆ – ಎಂದು ಅರೆಕ್ಷಣಕ್ಕಾದರೂ ಯಾರೂ ಯೋಚಿಸ ಬಾರದು. ಒಂದು ಕಾಲದಲ್ಲಿ – ಸಾಯಣ - ಮಹೀಧರರಂತಹವರು ಈ ಅಗ್ರಾಹ್ಯವಾದ ತಿಳುವಿಗೆ ತಮ್ಮ ಅತ್ಯುದಾರವಾದ ಕೊಡುಗೆಯನ್ನು ಕೊಟ್ಟುಹೋಗಿದ್ದಾರೆಂದರೆ ತಪ್ಪಾಗದು– "ವೇದಗಳಲ್ಲೇನಿದೆ ? ಇರುವುದೆಲ್ಲಾ ಯಜ್ಞ – ಯಾಗಗಳ ಬೃಹತ್ಕಾಂಡ ಮಾತ್ರ; ಅಧ್ಯಾತ್ಮ ವಿಕಸಿತವಾಗಿರುವುದು ಉಪನಿಷತ್ತುಗಳಲ್ಲಿ! – ಎಂಬ ನಂಬಿಕೆ ತಾನೇ ತಾನಾಗಿ ಹರಡಿತ್ತು. ಈಸ್ಟ್ ಇಂಡಿಯಾ ಕಂಪೆನಿ ಭಾರತೀಯರಿಗೆ ಎಂತಹ ಶಿಕ್ಷಣಕೊಡಬೇಕೆಂದು ನಿರ್ಧರಿಸಲು (Education Board) ಒಂದನ್ನು ನಿರ್ಮಿಸಿದರು. ಸಂಸ್ಕೃತ ವರ್ಣಮಾಲೆಯ –

ವೈದಿಕೀಭಾಷೆ ದೂರವೇ ಉಳಿಯಿತು - ಮೊದಲ ಮೂರಕ್ಷರಗಳನ್ನೂ ಅರಿಯದ ಲಾರ್ಡ್ ಮೆಕಾಲೇ ಅದರ ಅಧ್ಯಕ್ಷ. ಆತನೊಂದು ವರದಿ ಒಪ್ಪಿಸಿದ; ತಾನು ವೇದಗಳನ್ನು ಓದಿಲ್ಲವೆಂದು ಒಪ್ಪಿಕೊಳ್ಳುವ ಸೌಜನ್ಯವನ್ನೇನೋ ತೋರಿದನಾದರೂ, ಕಾರ್ಯಭರದಲ್ಲಿ ಆ ವಿಷಯದಲ್ಲಿ ತಾನು ಅಜ್ಞ – ಎಂಬುದನ್ನೇ ಮರೆತು–" I do not for a moment propose the teaching of the Vedas that propound what elaborate extirpatory ceremonies are to be gone through, if one commits the sin of killing a goat etc," ಎಂದರೆ ಯಾವನಾದರೂ ಒಂದು ಆಡನ್ನು ಕೊಲ್ಲುವ ಪಾಪಮಾಡಿದರೆ, ಅವನಿಗೆಂತಹ ವಿಸ್ತೃತವಾದ ಪ್ರಾಯಶ್ಚಿತ್ತ ವಿಧಾನ ವಿಧಿಸಬೇಕು. ಮುಂತಾದ ನಿರುಪಯೋಗ ವಿಷಯಗಳನ್ನುಳ್ಳ ವೇದಗಳನ್ನೋದಿಸಬೇಕೆಂದು ನಾನು ಸೂಚಿಸಲಾರೆ. - ಎಂದು ಬರೆದ. ಪುಣ್ಯಾತ್ಮ ಪಶು ಬಲಿಯುಕ್ತಯಜ್ಞಗಳನ್ನು ಬಣ್ಣಿಸುವ ಭಾಷ್ಯಗಳನ್ನೋದಿರಲಿಲ್ಲ. ಅದು ನಮ್ಮ ಪುಣ್ಯವೋ, ಪಾಪವೋ ತಿಳಿಯದು.

ವೈದಿಕ ಯಜ್ಞಸ್ವರೂಪ ತನ್ನ ಸ್ಥಾನದಲ್ಲಿ ಬರಲಿದೆ. ಈಗದರ ಚರ್ಚೆ ಅನಗತ್ಯ. ನಾವಿಲ್ಲಿ ಹೇಳ ಹೊರಟಿರುವ ಸತ್ಯವೇದಗಳು ಸಮಸ್ತ ಪಾರಲೌಕಿಕ, ಐತಿಹಾಸಿಕ ಲೋಕಗಳ ಪೂರ್ಣವಿದ್ಯೆಗಳ ಭಂಡಾರಗಳು – ಎಂಬುದೇ ಆಗಿದೆ. ಮಂತ್ರದಲ್ಲಿ 'ಉರೂಚೀ' ವಿಶೇಷಣವಿದೆ. ಇದರರ್ಥ 'ಬಹುವಿಧದ ಪದಾರ್ಥವಿದ್ಯೆಗಳ ಪ್ರಕಾಶಿಕೆ' - ಎಂದೇ ಆಗಿದೆ. ಈಶ್ವರೋಕ್ತವಾದ ವೇದಗಳು ನವೀನವೇದಾಂತಿಗಳ ಶುಷ್ಕವೇದಾಂತದ, ಮಾಯಾವಾದದ ಗ್ರಂಥಗಳಂತಲ್ಲ. ಸಚ್ಚಿದಾನಂದ ಸ್ವರೂಪ ಪರಮಾತ್ಮ, ಸಚ್ಚಿದ್ರೂಪ ಜೀವಾತ್ಮ, ಸದ್ರೂಪಿಣೀ ಜಡ ಪ್ರಕೃತಿ – ಮೂರರ ಸತ್ಯತ್ವವನ್ನೂ ಅಂಗೀಕರಿಸಿ, ಸರ್ವಹಿತಕ್ಕಾಗಿ ಉಪದೇಶಿಸುವ ವೇದಗಳಲ್ಲಿ ಇಲ್ಲದ ಮಾನವೋಪಯೋಗೀವಿದ್ಯೆ ಯಾವುದೂ ಇಲ್ಲ. ಇಹದಲ್ಲಿಯೂ ಬಾಳು ಹದವಾಗಿ ಅರಳಿ ಬೆಳೆದು ಬೆಳಗಬೇಕು; ಒಂದಿಗೆಯೇ ಆತ್ಮನೂ ದಿನದಿನಕ್ಕೆ ವಿಕಸಿತನಾಗುತ್ತಾ ಹೋಗಿ, ಕೊನೆಗೆ ಆ ಅವರ್ಣನೀಯವಾದ ಬ್ರಹ್ಮಾನಂದಕ್ಕೆ, ಮೋಕ್ಷಕ್ಕೆ, ಅರ್ಹನಾಗಬೇಕು. ಈ ಉಭಯ ನೀತಿಗಳ ಪ್ರಕಾಶನ ವೇದಗಳಲ್ಲಾಗಿದೆ. ಅರ್ಥಶಾಸ್ತ್ರ ಬೇಕೇ? ರಾಜನೀತಿ ಬೇಕೇ? ಸಮಾಜಶಾಸ್ತ್ರ ಬೇಕೇ? ಭೌತಿಕ ವಿಜ್ಞಾನ ಬೇಕೇ? **'ಉರೂಚೀ ಧೇನಾ'** 'ಸಕಲ ವಿದ್ಯಾಮಯೀ ವೇದವಾಣಿ' ಎಲ್ಲವನ್ನೂ ಕಲಿಸಲು ಸಿದ್ಧವಾಗಿದೆ.

**'ಜಿಗಾತಿ'**– ಒದಗಿ ಬರುತ್ತದೆ. ನಿಜ. ಆದರೆ, ಯಾರಿಗೆ? ಮೊದಲಾಗಿ, 'ಸೋಮಪೀತಯೇ' - ಮಂತ್ರದಲ್ಲಿ ಹೇಳಿರುವಂತೆ ಬ್ರಹ್ಮಾನಂದಪಾನಕ್ಕೆ ಸನ್ನದ್ಧನಾಗಿರಬೇಕು. ಸಾಂಸಾರಿಕ, ಐಹಿಕ ಉತ್ತರದಾಯಿತ್ವಗಳನ್ನು ನಿರ್ವಹಿಸದೆ, ಲೋಕಕ್ಕೆ ಋಣಿಯಾಗಿ ಯಾವನೂ ಮೋಕ್ಷಾಧಿಕಾರಿಯಾಗನು. ಆದ ಕಾರಣ, ಐಹಿಕ ಕರ್ತವ್ಯಪಾಲನವನ್ನೂ ಮಾಡುತ್ತಾ ಹೋಗಬೇಕು. ಭವ್ಯವಾದ ಈ ಜೀವನಕಲೆಯನ್ನು ವೇದಗಳಷ್ಟು ಸೊಗಸಾಗಿ ಬೇರಾವ ಶಾಸ್ತ್ರಗಳೂ ಕಲಿಸಲಾರವು. ಆದರೆ, ಯಾಸ್ಕರೆನ್ನುತ್ತಾರೆ:- **"ನ ಹ್ಯೇಷು ಪ್ರತ್ಯಕ್ಷಮಸ್ತ್ಯನೃಷೇರತಪಸೋ ವಾ."** [ನಿರುಕ್ತ:- ಪರಿ- 1.] "ಅನೃಷಿಗಳಿಗೆ ಎಂದರೆ

ಪ್ರಗತಿಶೀಲರಲ್ಲದ ಅಂಧಪರಂಪರಾವಾದಿಗಳಿಗೆ, ಅತಪಸ್ವಿಗಳಿಗೆ—ಎಂದರೆ ಕಷ್ಟ ಪಡಲು ಇಷ್ಟವಿಲ್ಲದ, ಮುಷ್ಟಿಯಲ್ಲೇ ಸೃಷ್ಟಿಯನ್ನೆಲ್ಲಾ ಕಾಣಬಯಸುವ ವಿಲಾಸಿಗಳಿಗೆ ಈ ಮಂತ್ರಗಳು ಪ್ರತ್ಯಕ್ಷವಾಗದು." - ಎಂಬುದು ಮೂರು ಕಾಲಕ್ಕೂ ಸತ್ಯ.ಆದುದರಿಂದ, **'ದಾಶ್ವಾನ್'** - ಎಂದರೆ 'ಆತ್ಮಸಮರ್ಪಕ'ನಾಗುವುದು ವೇದವಿದ್ಯಾಧ್ಯಯನಕ್ಕೂ ಅಗತ್ಯವೇ.

**"ಜಿಗಾತೀತಿ ಗತಿಕರ್ಮಸು ಪಠಿತಂ"** [ನಿ. 2.14.] ಗತಿ, ಗಮನ-ಎಂಬರ್ಥದಲ್ಲಿ 'ಜಿಗಾತಿ' ಎಂಬ ರೂಪ ಪ್ರಯುಕ್ತವಾಗುತ್ತದೆ. ಅಧ್ಯಯನ ಶೀಲರಿಗೆ ತಾನು ಪ್ರಾಪ್ತವಾಗುವುದರಿಂದ, ಅಧ್ಯಯನ ಶೀಲರಿಗೆ ತಾನೇ ಗತಿ, ಪ್ರಗತಿ ನೀಡುವುದರಿಂದ ವೇದವಾಣಿಯ ಬಗೆಗೆ ಪೂರ್ಣತಃ ಸಾರ್ಥಕವಾಗಿದೆ. ಮತ್ತು, ಜ್ಞಾನಪಿಪಾಸುಗಳಾದ ಪಾಠಕರ ಗಮನದಲ್ಲಿರಲಿ. ಅದೇ ಅರ್ಥದ ಐವತ್ತೇಳು ಪದಗಳಲ್ಲಿ ಒಂದು ಈ ಧೇನಾ. ಈ ಧೇನಾ ಶಬ್ದಕ್ಕೂ ಹಾಲು ಮೊಲೆ, ನಾಲಗೆ, ಪ್ರಿಯಪತ್ನಿ–ಮೊದಲಾದ ಹಲವಾರು ಅರ್ಥಗಳಿವೆ. ಭಾಷ್ಯಕಾರ ಎಚ್ಚರಿಕೆ ವಹಿಸಬೇಕಾದುದು ಇಂತಹ ಶಬ್ದಗಳು ಬರುವೆಡೆಯೇ. ಸಂಪೂರ್ಣಸೂಕ್ತ, ಅದರಲ್ಲಿ ಹೇಳಲ್ಪಟ್ಟಿರುವ ದೇವತೆಗಳು, ಒಂದು ಮಂತ್ರದಿಂದ ಇನ್ನೊಂದು ಮಂತ್ರಕ್ಕೆ ಸಂಬಂಧ ಭಂಗವಾಗದಿರುವಿಕೆ-ಮೊದಲಾದ ಅಂಶಗಳನ್ನೆಲ್ಲಾ ಚಿತ್ತದಲ್ಲಿರಿಸಿಕೊಂಡು, ಔಚಿತ್ಯದ ಒರೆಗಲ್ಲಿಗೆ ಹಾಕಿ ತಿಕ್ಕಿ-ತಿಂಡಿ, ಪ್ರಕರಣದ ತಕ್ಕಡಿಯಲ್ಲಿ ತೂಗಿ ನೋಡಿ. ಅತಿ ದೀರ್ಘವೂ ಅಲ್ಲದ, ಅತಿ ಹ್ರಸ್ವವೂ ಅಲ್ಲದ, ಪಾಠಕರ ಬುದ್ಧಿಯಲ್ಲಿ ಸ್ಪಷ್ಟವಾದ ಅರ್ಥವನ್ನು ಬೆಳಗಿಸುವ ಗುರುತರವಾದ ಭಾರ ಭಾಷ್ಯಕಾರನ ಹೆಗಲಮೇಲೆ ಬಿದ್ದಿರುತ್ತದೆ.

ಇಷ್ಟೊಂದು ಸಂದಿಗ್ಧಾರ್ಥಗಳಿಂದ ಕೂಡಿದ ಮಂತ್ರಗಳ ಮೂಲಕ ಉಪದೇಶವನ್ನೇಕೆ ಕೊಡಬೇಕು ಪರಮಾತ್ಮ ? ಸಂತ ಕಬೀರರ, ಸಂತ ನಾನಕರ ಕವಿತೆಗಳಂತೆ, ಬಸವಣ್ಣನವರ ವಚನಗಳಂತೆ, ಬುದ್ಧದೇವನ ವಾಣಿಗಳಂತೆ ಜನತೆಗಂದುವ ಶೈಲಿಯಲ್ಲಿ ಬೋಧಿಸಬಾರದಿತ್ತೇ ಆ ಭಗವಂತ - ಎಂಬ ಪ್ರಶ್ನೆ ಪ್ರಶ್ನೆಯೇ ಅಲ್ಲ. ಕಾಲಚಕ್ರ ಉರುಳಿದಂತೆ, ಇಂದು ಸುಬೋಧವೆಂದು ತೋರುವುದು ಒಂದು ದಿನ ದುರೂಹ, ದುರ್ಬೋಧನವೆನಿಸುತ್ತದೆ. ಜೈನರ ಸೂತ್ರಗ್ರಂಥಗಳಿಗೆ, ಬುದ್ಧನ ಬೋಧೆಗಳಿಗೆ ಈಗಾಗಲೇ ಭಾಷಾಂತರ ಹಾಗೂ ಭಾಷ್ಯಗಳ ಆವಶ್ಯಕತೆಯುಂಟಾಗಿದೆ. ಕನ್ನಡವನ್ನರಿಯದ ಕೋಟ್ಯಂತರ ಜನರಿಗೆ ಇಂದೂ ಬಸವಣ್ಣನವರ ವಚನಗಳು ಭಾಷಾಂತರವನ್ನು ಅಪೇಕ್ಷಿಸುತ್ತವೆ. ಸೃಷ್ಟ್ಯಾದಿಯಲ್ಲಿ ವೇದಗಳ ಪ್ರಕಾಶನವಾದಾಗ ಆ ಭಾಷೆ, ಆ ಶೈಲಿ ತಿಲದ ಕೋಟ್ಯಂಶದಷ್ಟೂ ಕಷ್ಟಕೊಡುತ್ತಿರಲಿಲ್ಲ. ಪಠನ-ಪಾಠನದ ಶೈಲಿಯನ್ನು ಕೆಡಿಸಿಕೊಂಡು, ಆ ದೋಷವನ್ನು ವೇದಗಳ ಮೇಲಾಗಲಿ, ವೇದಪ್ರಕಾಶಕನಾದ ಪರಮಾತ್ಮನ ಮೇಲಾಗಲಿ ಹೇರುವುದು ನಮ್ಮ ಅಲ್ಪತನ ತೋರಿಕೆಯಷ್ಟೇ. ಅದಕ್ಕಿಂತಧಿಕ ಮಹತ್ತ್ವ ಈ ಆಕ್ಷೇಪಕ್ಕಿಲ್ಲ.

ಈ ಗ್ರಂಥದ ವೇದ ಭಾಷ್ಯದ ಪುಟ ೧೪ ರ ಪೂರ್ಣವೆಚ್ಚ
ಶ್ರೀಮತಿ ಮನೋರಮಾದೇವಿ ಎ. ವಿ. ನಾಯಕ್
ಮುಂಬಾಯಿ - ಇವರ ಸೇವೆ.

### ಸಂಹಿತಾ ವಿಭಾಗ

ಇಂದ್ರವಾಯೂ ಇಮೇ ಸುತಾ ಉಪ ಪ್ರಯೋಭಿರಾಗತಂ ।

ಇಂದವೋ ವಾಮುಶಂತಿಹಿ ॥೪॥

**ಪದಪಾಠ:-** ಇಂದ್ರವಾಯೂ, ಇಮೇ, ಸುತಾ. ಉಪ, ಪ್ರಯೋಭಿಃ, ಆ, ಗತಂ । ಇಂದವಃ, ವಾಂ, ಉಶಂತಿ, ಹಿ ।

**ಅನ್ವಯ:-** ಇಂದ್ರವಾಯೂ! ಪ್ರಯೋಭಿಃ ಉಪ ಆಗತಂ । ಹಿ, ಇಮೇ ಸುತಾ ಇಂದವಃ ವಾಂ ಉಶಂತಿ ।

**ಶಬ್ದಾರ್ಥ:-** [ಇಂದ್ರವಾಯೂ] ಓ ಇಂದ್ರಿಯವಾನ್ ಜೀವ ಮತ್ತು ಓ ಸರ್ವಪ್ರಾಣಾಧಾರ ಸರ್ವಕ್ಲೇಶ ನಿವಾರಕ ಪರಮಾತ್ಮನ್! [ಪ್ರಯೋಭಿಃ] ಆಹಾರಾದಿ ಪ್ರಿಯವಸ್ತುಗಳೊಂದಿಗೆ, [ಉಪ ಆಗತಂ] ಹತ್ತಿರ ಬನ್ನಿ. [ಹಿ] ಏಕೆಂದರೆ, [ಇಮೇ ಸುತಾಃ] ಈ ಮಕ್ಕಳಾದ [ಇಂದವಃ] ನೀರಸಕಾಯದಲ್ಲಿ ರಸ ತುಂಬಿಸುವ ಜೀವರು, [ವಾಂ] ನಿಮ್ಮಿಬ್ಬರನ್ನೂ, [ಉಶಂತಿ] ಇಚ್ಛಿಸುತ್ತಾರೆ.

**ಭಾಷ್ಯ:-** ವೇದಗಳಲ್ಲಿ ಅತ್ಯಂತ ಕಷ್ಟವನ್ನು ಭಾಷ್ಯಕಾರನ ಮುಂದೊಡ್ಡುವ ಮಂತ್ರಗಳೆಂದರೆ, ಸಂಯುಕ್ತ ದೇವತಾವಾಚಕ ಮಂತ್ರಗಳು - ಎಂದರೆ. ಒಂದಕ್ಕಿಂತಧಿಕ ದೇವತೆಗಳನ್ನುಳ್ಳ ಮಂತ್ರಗಳು. ಋಷಿಜನರು ತಮ್ಮ ತಮ್ಮ ತಪೋಬಲದಿಂದ ಸಂಪಾದಿಸಿದ ಜ್ಞಾನದ ಸಂಪತ್ತನ್ನುಪಯೋಗಿಸಿ ನಾನಾರ್ಥಗಳನ್ನು ಮಾಡುತ್ತಾರೆ. ಈ ಮಂತ್ರದ ದೇವತಾದ್ವಯ ಇಂದ್ರ -ವಾಯುಗಳು. ಇಬ್ಬರನ್ನೂ ಸಂಬೋಧಿಸಿ. ಯಾವುದೋ ಒಂದು ಆಶಯವನ್ನು ವ್ಯಕ್ತಪಡಿಸಲಾಗಿದೆ. ಇಂದ್ರ ಎಂಬ ಶಬ್ದ ಬಹ್ವರ್ಥವಾಚಕ. ಶತಪಥ, ಗೋಪಥ, ಐತರೇಯ. ನಿರುಕ್ತ, ಕೌಶೀತಕೀ ಆದಿ ಆರ್ಷ - ಗ್ರಂಥಗಳಲ್ಲಿ 'ಇಂದ್ರ' ಶಬ್ದಕ್ಕೆ ನೂರಾರು ಅರ್ಥಗಳು ಹೇಳಲ್ಪಟ್ಟಿವೆ. ನಾವು ಮುಖ್ಯವಾಗಿ **೧. ಇಂದ್ರಿಯವಾನ್** [ಶತ:- 14.2.2.42] **೨. ಇಂದ್ರಇತಿಸೂರ್ಯಃ** [ಶತಪಥ:- [4.6.7.11], **೩. ಇಂದ್ರ ಆತ್ಮಾ** [ಕೌಶೀತಕೀ], **೪. ಇಂದ್ರೋ ವಾಕ್** [ಶತ:- 1.4.5.4] **೫. ಹೃದಯಮೇವೇಂದ್ರ**:- [ಶತ:- 12.9.1.15], **೬. ಮನಏವೇಂದ್ರ**:-[ಶತ:- 12.9.1.13.], **೭. ಇಂದ್ರೋ ವೃಧಾಂ ವಿಹಂತಾ** [ಕೌಶೀತಕೀ], **೮. ಕ್ಷತ್ರಂ ವಾ ಇಂದ್ರಃ** [ಕೌಶೀತಕೀ], **೯. ಇಂದ್ರೋ ಬಲಂ ಬಲಪತಿಃ** [ಶತ:- 11.4.3.12] ಮತ್ತು **೧೦. ಧರ್ಮ ಇಂದ್ರೋರಾಜೇತ್ಯಾಹ ತಸ್ಯ ದೇವಾ ವಿಶಃ** । [ಶತ:- 13.4.3.14]- ಈ ಹತ್ತು ಅರ್ಥಗಳಲ್ಲಿ ಮುಂದಿಟ್ಟುಕೊಂಡು, ಅವುಗಳಲ್ಲಿಯೂ ಬುದ್ಧಿ - ಸಂಗತವೂ, ಪ್ರಕರಣಬದ್ಧವೂ ಆದ ಅರ್ಥವನ್ನು ಮಾತ್ರ ಆರಿಸಬೇಕಾಗಿದೆ. ಸಾಯಣಾರಂತೂ, 'ಇಂದ್ರ

ವಾಯುಗಳೇ!' ಎಂದು ಮಂತ್ರೋಕ್ತ ಶಬ್ದವನ್ನೇ ಬಳಸಿ, ಅವರನ್ನು ಸೋಮರಸಪಾನಕ್ಕಾಗಿ ಆಗಮಿಸಲು ಕರೆಯಿತ್ತು 'ಬರಿಗೈಯಲ್ಲಿ ಬರಬೇಡಿ. ನಮಗಾಗಿ ಏನಾದರೂ ಪ್ರಿಯವಾದುದನ್ನು ತನ್ನಿರಿ.' ಎಂದು ಹೇಳಿ, ವಿರಮಿಸುತ್ತಾರೆ.

ಮಹರ್ಷಿ ದಯಾನಂದರು ಇದೇ 'ಇಂದ್ರವಾಯೂ' ಶಬ್ದಕ್ಕೆ "ಸೂರ್ಯವಾಯುಗಳು" - ಎಂಬ ಆಧಿದೈವಿಕವಾದ ಅರ್ಥವನ್ನು ಮಾಡಿ, ಸೂರ್ಯನ ಆಕರ್ಷಣಶಕ್ತಿ, ಭೂಮಿ ಆದಿಗ್ರಹೋಪಗ್ರಹಗಳು ತಮ್ಮತಮ್ಮ ಕಕ್ಷೆಗಳಲ್ಲಿ ತಿರುಗುವುದು–ಮೊದಲಾದ ವೈಜ್ಞಾನಿಕ ವಿಷಯಗಳನ್ನು ವಿಸ್ತರಿಸಿದ್ದಾರೆ. ಮಹರ್ಷಿಪ್ರವರರ ಆರ್ಷದೃಷ್ಟಿ ಎಂದಿಗೂ ತಪ್ಪಾಗದು. ಆದರೆ, ಅದರ ವಿಶಿಷ್ಟಸ್ಥಾನದಲ್ಲಿ ವಿಜ್ಞಾನವೂ ಬರಲಿದೆ. ಈ ಸೂಕ್ತದಲ್ಲಿ ನಮಗೆ ಪ್ರಕರಣದ ದೃಷ್ಟಿಯಿಂದ ಆಧ್ಯಾತ್ಮಿಕ ವಿವರಣವೇ ಗ್ರಾಹ್ಯವೆಂದು ತೋರುತ್ತದೆ.

ಹಾಗಾದರೆ, ಯಾರೀ ಇಂದ್ರವಾಯುಗಳು ? ವಾಯುವಿನ ಬಗೆಗೆ ನಮಗಾವುದೇ ಸಮಸ್ಯೆಯೂ ಇಲ್ಲ. ಏಕೆಂದರೆ-ಮೇಲಣ ಮೂರುಮಂತ್ರಗಳಲ್ಲಿ ಕ್ಲೇಶ–ನಿವಾರಕ ಪ್ರಾಣಸ್ವರೂಪ ಪರಮಾತ್ಮನೇ 'ವಾಯು' ಎಂದು ಗ್ರಹಿಸಲ್ಪಟ್ಟಿರುವುದರಿಂದ ಇಲ್ಲಿಯೂ ವಾಯುವನ್ನು ಪರಮಾತ್ಮನೆಂದು ಗ್ರಹಿಸಲು ಯಾವುದೊಂದು ಆಕ್ಷೇಪವೂ ಇಲ್ಲ. ಪ್ರಶ್ನೆ ಬರುವುದು ಇಂದ್ರನದು ಮಾತ್ರ. ಪರಮೈಶ್ವರ್ಯವಾನ್ ಸರ್ವಶಕ್ತ ಭಗವಂತನನ್ನೂ ಇಂದ್ರನೆಂದು ಸಚ್ಛಾಸ್ತ್ರಗಳಲ್ಲಿ ಹೇಳಿರುವುದಾದರೂ, ವಾಯು ಶಬ್ದದಿಂದಾಗಲೇ ಈಶ್ವರನನ್ನು ಗ್ರಹಿಸಿದ್ದಾಗಿದೆ. ಇಲ್ಲಿ 'ಇಂದ್ರ' ಶಬ್ದವನ್ನು ವಾಯುವಿನ ವಿಶೇಷಣವೆಂದು ಗ್ರಹಿಸೋಣವೆಂದರೆ 'ಇಂದ್ರವಾಯೂ, ವಾಂ, ಆಗತಂ' ಎಂಬ, ಕೇವಲ ದ್ವಿವಚನಕ್ಕೆ ಮಾತ್ರ ಉಪಯುಕ್ತವಾಗುವ ಶಬ್ದಗಳು ವಿರೋಧವನ್ನೊಡ್ಡುತ್ತವೆ. ಹೀಗೆ, ಇಂದ್ರ ಎಂಬ ಶಬ್ದ ಪರಮಾತ್ಮನಲ್ಲದ ಮತ್ತಾವುದೋ ಒಂದು ತತ್ತ್ವವನ್ನು ಅಂಗೀಕರಿಸುವುದು ಅನಿವಾರ್ಯವೇ ಆಗಿರುತ್ತದೆ.

ಯಾವುದು ಆ ತತ್ತ್ವ ? ನಾವು ಇದೇ ತಾನೇ ಹತ್ತು ಅರ್ಥಗಳನ್ನಿತ್ತಿದ್ದೇವೆ ತಾನೇ ? ಅವುಗಳಿಗೇ ಪಾತ್ರನಾದ ಮತ್ತೊಬ್ಬ ಚೇತನನನ್ನು ಇಲ್ಲಿ ನಾವು ಸ್ವೀಕರಿಸಿದರೆ, ಮಂತ್ರಾರ್ಥ ಸೊಗಸಾಗಿ ಮೂಡಿಬರುತ್ತದೆ. ನಾವು ಹಲವಾರು ಸಾರಿ '**ಇಂದ್ರಿಯವಾನ್ ಜೀವನೇ ಇಂದ್ರ**' ಎಂದು ಹೇಳಿದ್ದೇವೆ. **"ಕ್ಷತ್ರಂ ವಾ ಇಂದ್ರಃ"** [ಕೌಶೀತಕೀ] "ಕ್ಷಾತ್ರಬಲವೇ, ದುರ್ಬಲರಮೇಲಾಗುವ ಆಘಾತವನ್ನು ತಪ್ಪಿಸುವ ಬಲವನ್ನುಳ್ಳ ಶಕ್ತಿಮಾನ್ ಆತ್ಮನೇ ಇಂದ್ರನು"; **"ಇಂದ್ರೋ ಬಲಂ ಬಲಪತಿಃ"** [ಶತ:- 11.4.3.12.] "ಬಲವೇ ಇಂದ್ರ; ಬಲದೊಡೆಯನೇ ಇಂದ್ರ" – ಈ ಮೂರು ಮಾತುಗಳು ನೆನಪಿದ್ದರೆ ಸಾಕು. ಇಂದ್ರನು ಶಕ್ತಿಶಾಲೀ ಜೀವಾತ್ಮನೆಂಬುದು ಹೃದಯಾಂಕಿತವಾಗುತ್ತದೆ. ಇನ್ನು ಪ್ರಶ್ನೆ— ಯಾವ ಜೀವಾತ್ಮ ? ಯಾವನೇ ಒಬ್ಬ ನಿಶ್ಚಿತ ಜೀವಾತ್ಮನ ನಿರ್ದೇಶವೂ ಇಲ್ಲ. ಇತಿಹಾಸರಹಿತವಾದ, ಕೇವಲ ವಿಧಿ ನಿಷೇಧಯುಕ್ತವಾದ, ಪರಿಶುದ್ಧ ಸಾರ್ವಕಾಲಿಕ ಸಾರ್ವಭೌಮ ಶಾಸ್ತ್ರವಾದ, ಬ್ರಹ್ಮಸೂತ್ರಗಳಲ್ಲಿ - **"ಶಾಸ್ತ್ರಯೋನಿತ್ವಾತ್"**॥ [ವೇದಾಂತದರ್ಶನ:- 1.1.3.] –ವೇದರೂಪಿ ಸಚ್ಛಾಸ್ತ್ರಗಳಿಗೆ ಕಾರಣಭೂತನಾಗಿರುವಿಕೆಯಿಂದ" - ಎಂದು ವ್ಯಾಸರು

ವರ್ಣಿಸಿರುವ ಋಗ್ಯಜುಃಸಾಮಾಥರ್ವಗಳಲ್ಲಿ ವೈಯಕ್ತಿಕ ಅಥವಾ ದೇಶೀಯ ಇತಿಹಾಸವಿರು ವುದಾದರೂ ಎಂತು ಶಕ್ಯ ? – ವೇದಗಳಲ್ಲಿ ಯಾವನೇ ಒಬ್ಬ ಜೀವಾತ್ಮನ ವರ್ಣನೆಯಿರಲೂ ಸಾಧ್ಯವಿಲ್ಲ. ಆದಕಾರಣ, ಪ್ರತಿಯೊಬ್ಬ ಜೀವಾತ್ಮನನ್ನೂ ಸಂಬೋಧಿಸುತ್ತಿದೆ ಈ ಮಂತ್ರ ಇಂದ್ರ-ಎಂಬ ಶಬ್ದದಿಂದ.

ವೇದಗಳ ಹಿರಿಮೆಗೂ ಮಿತಿಯಿದೆಯೇ ? ದೇವದೇವನಾದ ಭಗವಂತ ಸರ್ವ ದಾತೃವಹುದು; ಸರ್ವಸಹಾಯಕನೂ ಅಹುದು. ಆದರೆ, ಕೈಮೇಲೆ ಕೈಯಿಟ್ಟು - 'ದೇವನೇ! ನೀನೇ ಎಲ್ಲವನ್ನೂ ನೋಡಿಕೊಳ್ಳಪ್ಪ. ನಾನೇನೂ ಮಾಡಹೋಗುವುದಿಲ್ಲ. ಎಲ್ಲದನ್ನೂ ನೀನೇ ಮಾಡಿಬಿಡು." - ಎಂಬ ಭಕ್ತವರೇಣ್ಯನನ್ನು ದೇವದೇವನು ನೋಡಿಕೊಳ್ಳುತ್ತಾನೆ, ನಿಜ. ಆದರೆ, ಸೋಮಾರಿಯನ್ನು ಹೇಗೆ ನೋಡಿಕೊಳ್ಳಬೇಕೋ, ಹಾಗೆಯೇ ನೋಡಿಕೊಳ್ಳು ತ್ತಾನೆ. ಆಲಿಸಿರಿ:-

**ಅಭ್ರಾತೃವ್ಯೋ ಅನಾ ತ್ವಮನಾಪಿರಿಂದ್ರ ಜನುಷಾ ಸನಾದಸಿ।**
**ಯುಧೇದಾಪಿತ್ವಮಿಚ್ಛಸೇ ॥**

[ಋಗ್ವೇದ:- 8.21.13]

ಸರ್ವೇಶ್ವರ! ಸಾಂಸಾರಿಕ ದೃಷ್ಟಿಯಿಂದ ನೀನು ಅನಾದಿಕಾಲದಿಂದಲೂ ಸಂಬಂಧಿ ಗಳಿಲ್ಲದವನೂ, ನಾಯಕನಿಲ್ಲದವನೂ, ಸೋದರರಹಿತನೂ ಆಗಿದ್ದೀಯೇ. (ಅಂದರೆ– ಎಲ್ಲರೂ ನಿನ್ನವರೇ. ಯಾರನ್ನೂ ವಿಶೇಷ ರೀತಿಯಿದ ತನ್ನವರೆಂದು ನೀನು ತಿಳಿಯುವು ದಿಲ್ಲ) ಹೋರಾಟದಿಂದಲೇ, ಜೀವನದ ಸಂಘರ್ಷದಿಂದಲೇ ನೀನು ಕಷ್ಟ ಸಹಿಷ್ಣುಗಳನ್ನು ಸಂಬದ್ಧರನ್ನಾಗಿಸಿಕೊಳ್ಳುವೆ." ಈ ವೇದವಚನ ಮಾನವನು ಸದಾ ಜೀವನ ಸಂಘರ್ಷಕ್ಕೆ ಸನ್ನದ್ಧನೇ ಆಗಿರಬೇಕೆಂದು ತಿಳಿಸುತ್ತಿದೆ. ಅನ್ಯಮಾನವರನ್ನು ತುಂಡರಿಸಿ ಚೆಲ್ಲುವುದಕ್ಕಾಗಿ ಯಲ್ಲ; ಮಾನವತ್ವದಿಂದ ದೇವತ್ವದತ್ತ–ಪರಬ್ರಹ್ಮದತ್ತ ಎಂಬ ಭ್ರಾಂತಿಗೆ ಬಲಿ ಬೀಳಬೇಡಿ– ಸಾಗುವುದಕ್ಕಾಗಿ ಮಾನವ ಆಭ್ಯಂತರ ಶತ್ರುಗಳೊಂದಿಗೆ ಹೋರಾಡುತ್ತಲೇ ಹೋಗಬೇಕಾ ದೀತು; ಆದಕ್ಕಾಗಿಯೇ ವೇದ ಕರೆಯನ್ನೀಯುತ್ತದೆ:–

**ಗೂಳ್ಹೇ ದ್ಯಾವಾಪೃಥಿವೀ ಅನ್ವವಿಂದೋ**
**ವಿಭುಮದ್ಭ್ಯೋಭುವನೇಭ್ಯೋ ರಣಂ ಧಾಃ॥**

[ಋಗ್ವೇದ:- 8.96.16.]

"ಓ ಜೀವ! [ಗೂಳ್ಹೇ=ಗೂಢೇ] ಗೂಢವಾದ, [ದ್ಯಾವಾ ಪೃಥಿವೀ] ದ್ಯುಲೋಕ ಭೂಲೋಕಗಳನ್ನು, [ಅನು ಅವಿಂದಃ] ಕ್ರಮಾನುಸಾರ ಪಡೆದುಕೊಳ್ಳುವೆ. [ವಿಭುಮದ್ಭ್ಯಃ] ವ್ಯಾಪಕನಾದ ಭಗವಂತನಿಂದ ವ್ಯಾಪ್ತವಾಗಿರುವ, [ಭುವನೇಭ್ಯಃ] ಲೋಕಗಳಿಗಾಗಿ, [ರಣಂ ಧಾ:] ಹೋರಾಡುತ್ತಾನಡೆ." ಈ ಸಂಘರ್ಷ ಅಶಾಂತಿಯ ಬೆಂಕಿಯನ್ನು ಹೊತ್ತಿಸುವ

ಸಮಾಜ ಘಾತುಕ ಹೋರಾಟದಲ್ಲಿ; ಮೈಮರೆತು ಮಲಗಿರುವ, ಮನದ, ಮಾತಿನ, ಮೈಯಿನ ಮಹಿಮೆಯ ಮಾನವನ್ನೇ ಮರೆತಿರುವ ಮೈಗಳ್ಳ ಮಾನವನನ್ನು ಮೇಲ್ಮಟ್ಟದ ಮಾನವ್ಯದತ್ತ ಮರಳಿಸುವ, ಮರೆವಿಗೆ ಮಾರಕವಾದ ಮಹಾಸಂಘರ್ಷವಿದು. **ದೇವರಿದ್ದಾನೆ ಸರ್ವೋಚ್ಚ ಸಹಾಯಕ, ಸರಿ; ಆದರೆ, ಅವನ ಸಹಾಯ ಸಿಕ್ಕುವುದು ಸ್ವತಃ ಸಂಘರ್ಷಕ್ಕೆ ಸನ್ನದ್ಧನಾದ, ಸದಾ ಸಿದ್ಧನೇ ಆದ ಸಾಧಕನಿಗೇ ಹೊರತು, ಸೋಮಾರಿಗಲ್ಲ**. – ಎಂಬ ಸತ್ಯಸನಾತನ ಸಾರ್ವಭೌಮ ಸಿದ್ಧಾಂತವನ್ನು ಸಾರುವುದಕ್ಕಾಗಿಯೇ 'ವಾಯು'ವಿಗೆ ಮುನ್ನ 'ಇಂದ್ರಿಯವಾನ್ ಜೀವ'ನನ್ನು, ಜೀವಾತ್ಮನನ್ನು ಕರೆಯುತ್ತಿದೆ - ವೇದ.

ಬಾಳು ಬೆಳೆದುಬರಬೇಕೇ ? ಹಾಗಾದರೆ, ಪರಮಸಹಾಯಕನಾದ ಈಶ್ವರನೊಂದಿಗೆ ಸಾಧಕ ಜೀವನೂ ಮುಂದೆ ಬರಲಿ. ಇಂದ್ರಿಯವಾನ್, ಸುಖದುಃಖಭಾಕ್ ಜೀವ! ಸರ್ವಜಗತ್ಪ್ರಾಣಾಧಾರ ಪರಮಾತ್ಮನ್! ಹತ್ತಿರ ಬನ್ನಿರಿ. ಜಗದೀಶ್ವರನ ಕರುಣೆಯೊಂದಿಗೆ ಜೀವನ ಯತ್ನವೂ ಕೂಡ, ಪುರುಷಾರ್ಥವೂ ಕೂಡ ಅನಿವಾರ್ಯ. ಸರ್ವವ್ಯಾಪಕ ಭಗವಂತನ ಬಳಿ ಬರುವಿಕೆ, ದೂರ ಸರಿಯುವಿಕೆ - ಎಲ್ಲವೂ ಭಾವನಾತ್ಮಕ. ಮಾನವೀವಾಣಿಯಿಂದಲೇ ಎಲ್ಲ ಭಾವನೆಗಳನ್ನೂ ಅಭಿವ್ಯಕ್ತಗೊಳಿಸಬೇಕಾದಾಗ, ಇಂತಹ ಪ್ರಯೋಗಗಳು ಅನಿವಾರ್ಯ. ಈಶ್ವರನಂತೂ 'ಪ್ರಯಸ್ಸು'ಗಳನು, ಜೀವನಿಗೆ ಪ್ರಿಯವಾದ ಅನ್ನ - ಜಲಾದಿಗಳನ್ನು ಪುಷ್ಕಳ ಪ್ರಮಾಣದಲ್ಲಿ ಸೃಜಿಸಿಯೇ ಇದ್ದಾನೆ 'ಪ್ರೀಣನೇ' - ಎಂಬ, ಪ್ರಿಯವೆಂಬರ್ಥವನ್ನುಳ್ಳ 'ಪ್ರೀಞ್' ಧಾತುವಿನಿಂದ ವ್ಯುತ್ಪನ್ನವಾದ ಶಬ್ದ 'ಪ್ರಯಸ್' - ಎಂಬುದು, ಭಗವತ್ಸೃಷ್ಟವಾದ ಈ ಪ್ರಯಸ್ಸನ್ನು ಪಡೆದುಕೊಳ್ಳಲು ಇಂದ್ರಿಯವಾನ್ ಜೀವನು ಕೈಯನ್ನಾದರೂ ಚಾಚಬೇಕಷ್ಟೇ? ಇಂದ್ರಶಬ್ದದ ಅನೇಕ ಅರ್ಥವಾಚಕಗಳಲ್ಲಿ 'ವಾಜೀ' ಎಂಬುದೂ ಇದೆ. **"ಇಂದ್ರೋವಾಜೀ"** [ಐತರೇಯ :– 3.18] ಎಂಬ ಪ್ರಮಾಣವಿದ್ದೇ ಇದೆ. ವೇದ **'ಸ್ವಯಂ ವಾಜಿನ್ ತನ್ವಂ ಕಲ್ಪಯಸ್ವ ಸ್ವಯಂ ಯಜಸ್ವ ಸ್ವಯಂ ಜುಷಸ್ವ। ಮಹಿಮಾ ತೇಽನ್ಯೇನ ನ ಸಂನ್ನಶೇ॥** [ಯಜು :– 23.15] ಓ ವಾಜಿನ್! ಓ ಇಂದ್ರಿಯವಾನ್ ಜೀವ! [ಸ್ವಯಂ] ಸ್ವತಃ, [ತನ್ವಂ ಕಲ್ಪಯಸ್ವ] ಸ್ವತಃ ಶಾರೀರ ಬಲವನ್ನು ಸೃಜಿಸು. [ಸ್ವಯಂ ಯಜಸ್ವ] ಸ್ವತಃ ಸತ್ಕರ್ಮಮಾಡು. [ಸ್ವಯಂ ಜುಷಸ್ವ] ಸ್ವತಃ ಹರ್ಷಿಸು, [ತೇ ಮಹಿಮಾ] ನಿನ್ನ ಹಿರಿಮೆ, [ಅನ್ಯೇನ] ಬೇರೆಯವನಿಂದ, [ನ ಸನ್ನಶೇ] ಸಿದ್ಧಿಸದು." - ಎಂಬ ಶ್ರುತಿ ಪ್ರಸಿದ್ಧವಾಗಿಯೇ ಇದೆ. ಪ್ರತಿಯೊಬ್ಬ ಜೀವನಿಗೂ ವೇದೋಕ್ತ ಆದೇಶವಿದೇ. ಜೀವೇಶ್ವರರೇ! ಪ್ರಿಯವಾದ ಭೋಗ್ಯವಸ್ತುಗಳೊಂದಿಗೆ ಬಳಿ ಬನ್ನಿರಿ. ಮಹರ್ಷಿ ಪ್ರವರರೂ ಪ್ರಯಃಶಬ್ದ **'ಪ್ರೀಞ್ ತರ್ಪಣೇ ಕಾಂತೌ ಚ'** ಎಂಬ ಧಾತು ಜನ್ಯವೆಂದೇ ಬರೆದಿದ್ದಾರೆ. 'ತೃಪ್ತಿಕಾರಕ ಅನ್ನಾದಿ ವಸ್ತುಗಳೊಂದಿಗೆ' – ಎಂಬ ಮಹರ್ಷಿಕೃತಾರ್ಥ ಸರ್ವಥಾ ನಿರ್ವಿವಾದವೇ. ದಯಪಾಲಿಸುವ ದಯಾಮಯ ದೇವನಿದ್ದೇ ಇದ್ದಾನೆ; ಆ ಭಗವದ್ದತ್ತ ವರಕ್ಕೆ ಪಾತ್ರನಾಗುವ ಪುರುಷಾರ್ಥವನ್ನು ಮಾಡಲೇ

ಬೇಕು ಈ ಜೀವ. ಅದೇ ಕಾರಣದಿಂದ ವಾಯುದೇವನೊಂದಿಗೆ ಇಂದ್ರನಿಗೂ ಆಹ್ವಾನ ವೀಯುತ್ತಿದೆ ಮಂತ್ರ.

ಭಗವತ್ಸೃಷ್ಟಿಯಲ್ಲಿ ಪ್ರಯಸ್ಸಿಗೇನೂ ಕಡಿಮೆಯಿಲ್ಲ. ಜೀವನಿಗೆ ಪ್ರಿಯವಾದು ದೆಲ್ಲವನ್ನೂ ತುಂಬಿಸಿದ್ದಾನೆ ಆ **'ಭೂರಿದಾ ಪ್ರಭು.** [ಋಗ್ವೇದ:– 4.32.20.] ಯಾರಿಗಾಗಿ ಇದೆಲ್ಲಾ ? ಪ್ರಾಪ್ತಸರ್ವಸ್ವನಾದ ಪರಮಾತ್ಮನಿಗಂತೂ ಅಲ್ಲ; ಜಡವಾದ ಪ್ರಕೃತಿಗೆ ಆಕಾಂಕ್ಷಾನಾಕಾಂಕ್ಷೆಗಳ, ಬೇಕು–ಬೇಡಗಳ ಸಮಸ್ಯೆಯೇ ಇಲ್ಲ. ಇನ್ನು ಉಳಿದವ ರಾದರೂ ಯಾರು ?

**'ಇಮೇ ಸುತಾಃ'**— ಈ ಮಕ್ಕಳುಗಳು. 'ಸು' ಧಾತು ಜನಿತವಾದ 'ಸುತ'- ಎಂಬುದು 'ಹಿಂಡಲ್ಪಟ್ಟುದು' – ಎಂಬರ್ಥ ಕೊಡುತ್ತದಾದರೂ, ಮಾತಾಪಿತೃಗಳ ಸಾರರೂಪ ರಾಗಿರುವ ಕಾರಣ 'ಮಗ, ಮಗಳು' ಕೂಡ 'ಸುತ, ಸುತೆ' - ಎನಿಸುತ್ತಾರೆಂಬುದು ಲೌಕಿಕ ಸಂಸ್ಕೃತಜ್ಞರಿಗೂ ತಿಳಿದಿದೆ. **"ತ್ವಂ ಹಿ ನಃ ಪಿತಾ ವಸೋ ತ್ವಂ ಮಾತಾ"** [ಋಗ್ವೇದ:- 8.98.11] "ಓ ಸರ್ವಾಶ್ರಯದಾತಾ ! ನೀನೇ ನಮ್ಮ ತಂದೆ; ನೀನೇ ತಾಯಿ ಎಂಬ ಶ್ರುತಿಯಿಂದ - ಈ ಬಗೆಯ ಶ್ರುತಿಗಳು ಬೇಕಾದಷ್ಟಿವೆ. – ಮತ್ತು **"ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ"** [ಯಜು:– 11.5.] – "ಅಮರನಾದ ಈಶ್ವರನ ಮಕ್ಕಳೆ ಲ್ಲರೂ ಆಲಿಸಿರಿ." - ಎಂಬಂತಹ ಶ್ರುತಿಗಳಿಂದ ಭಗವನ್ಮಾತಾಪಿತೃತ್ವ - ಜೀವಪುತ್ರತ್ವದ ಸಿದ್ಧಾಂತ ಸ್ವಯಂ ಸಿದ್ಧವೇ ಆಗಿದೆ. ಆದುದರಿಂದ 'ಈ ಮಕ್ಕಳು' ಮತ್ತಾರೂ ಅಲ್ಲ; ಜೀವರೇ. ಪ್ರಯಃಕಾಂಕ್ಷೆ, ಇಷ್ಟಸಿದ್ಧಿ ಯಾರಿಗೆ ಬೇಡ ?

ಈ ಮಕ್ಕಳನ್ನು ಈ ಮಂತ್ರ ನಿರ್ದೇಶಿಸುವ ರೀತಿಯೂ ಅನುಪಮವೇ. ಕಾಮ್ಯ ವಸ್ತುಗಳೊಂದಿಗೆ ಪ್ರಾಪ್ತರಾಗುವ ಜೀವೇಶ್ವರನನ್ನು **"ಇಂದವಃ ಉಶಂತಿ"** "ಇಂದುಗಳು ಬಯಸಿಯೇ ಬಯಸುತ್ತಾರೆ." ಈ ಮುನ್ನವೂ ನಾವು 'ಇಂದು' ಶಬ್ದವನ್ನು ವಿಸ್ತರಿಸಿಯೇ ಇದ್ದೇವೆ. **'ಉಂದ್'** ಎಂಬ. ನೆನೆಯಿಸು-ಎಂಬರ್ಥವನ್ನುಳ್ಳ ಧಾತುವಿನಿಂದ ರೂಪಗೊಳ್ಳುವ **'ಇಂದು'** ಶಬ್ದ **"ಉನತ್ತಿ, ಕ್ಲೇದಯತಿ, ಸ್ನೇಹಯತಿ ವಾ"** ನೆನೆಯಿಸುವ, ಒದ್ದೆ ಮಾಡುವ, ಜಿಡ್ಡಾಗಿಸುವ ವಸ್ತುವನ್ನು ಸೂಚಿಸುತ್ತದೆ. ಸ್ವಯಂ "ರಸೋ ವೈ ಸಃ" - "ರಸವೇ ಅವನು" ಎಂದು ಸಾಕ್ಷಾತ್ಕೃತೇಶ್ವರರಾದ ಋಷಿ ಜನರಿಂದ ಹೇಳಲ್ಪಟ್ಟ ಪರಮಾತ್ಮ ನಂತೂ 'ಇಂದು'ವಾಗಿಯೇ ಇದ್ದಾನೆ. ಹಾಗೆಯೇ ಮಾಂಸ-ಮಜ್ಜೆಗಳ ಗೂಡಾದ, ಮಣ್ಣಿನ ಗೊಂಬೆಯಾದ, ಕಟ್ಟಿಗೆಯ ತುಂಡಾದ ಈ ನೀರಸ ತನುವಿನಲ್ಲಿಯೂ 'ರಸ'ವೆನಿಸುವ ಜೀವಾತ್ಮನೂ ಇಂದುವೇ ಸರಿ. ಈ ಮಂತ್ರದಲ್ಲಿ ಬಹುವಚನದಲ್ಲಿ ಬಂದಿರುವ 'ಇಂದು' ಶಬ್ದ ನೇರವಾಗಿಯೇ ಈ ಇಂದು ಈಶ್ವರನಲ್ಲ; ಜೀವಾತ್ಮನೇ ಎಂದು ಸಾರಿ ಹೇಳುತ್ತದೆ. ಅಪ್–ಶಬ್ದದಂತೆ ಇಂದು ಶಬ್ದ ನಿತ್ಯಬಹುವಚನಾಂತವೇನಲ್ಲ. ಆದುದರಿಂದ, ಈ 'ಇಂದು ಗಳು' ನೀರಸ ದೇಹಗಳಲ್ಲಿ ರಸವನ್ನು ತುಂಬಿಸುವ ಜೀವರೇ ಸರಿ. ಪುರುಷಾರ್ಥೀ ಜೀವ ನೊಂದಿಗೆ, ಜೀವಮಾತ್ರರಿಗೆ ಪ್ರಿಯವಾದ ಆಹಾರ–ಪಾನೀಯಗಳನ್ನೂ, ಜೀವನದ ಅನ್ಯ

ಆವಶ್ಯಕತೆಗಳನ್ನೂ ತಂದೆರೆಯುವ ಭಗವಂತನಾರಿಗೆ ಬೇಡ ? "ಓ ಪುರುಷಾರ್ಥೀ ಜೀವ! ಓ ಸರ್ವದಾತಾ ಪರಮೇಶ್ವರ! ಈಶ್ವರಪುತ್ರರೇ ಆದ ಈ ಜೀವಾತ್ಮರು ನಿಮ್ಮಿಬ್ಬರನ್ನೂ ಅಪೇಕ್ಷಿಸುತ್ತಾರೆ; ಆದುದರಿಂದ ಜೀವನೋಪಯೋಗೀ ಕಾಮ್ಯಪದಾರ್ಥಗಳೊಂದಿಗೆ ಜೀವ ಮಾತ್ರರಿಗೆ ಪ್ರಾಪ್ತರಾಗಿರಿ." — ಎಂಬ ಈ ಆಂತರಿಕ ಕರೆಯ, ಮಾರ್ಮಿಕ ಆಹ್ವಾನದ ಮಹಿಮೆ, ಗರಿಮೆ ಅಂತರ್ಮುಖರಾಗಿ ಆಲೋಚಿಸುವ ವಿಚಾರಶೀಲರೆಲ್ಲರ ಹೃದಯದ ಅಂತರ ತಮವನ್ನೂ ಸ್ಪರ್ಶಿಸುವುದರಲ್ಲಿ ಸಂಶಯವೇ ಇಲ್ಲ.

## ಸಂಹಿತಾ ವಿಭಾಗ

**ವಾಯವಿಂದ್ರಶ್ಚ ಚೇತಥಃ ಸುತಾನಾಂ ವಾಜಿನೀವಸೂ ।**

**ತಾವಾ ಯಾತಮುಪ ದ್ರವತ್ ॥೫॥**

**ಪದಪಾಠ:**— ವಾಯೋ, ಇಂದ್ರಃ, ಚ, ಚೇತಥಃ, ಸುತಾನಾಂ, ವಾಜಿನೀವಸೂ, ತೌ, ಆ, ಯಾತಂ, ಉಪ, ದ್ರವತ್.

**ಅನ್ವಯ:**— ವಾಜಿನೀವಸೂ ವಾಯೋ ಇಂದ್ರಃ ಚ ಸುತಾನಾಂ ಚೇತಥಃ । ತೌ ದ್ರವತ್ ಉಪ ಆಯಾತಂ.

**ಶಬ್ದಾರ್ಥ:**- [ವಾಜಿನೀವಸೂ] ಅನ್ನ - ಜಲ - ಬಲ - ಜ್ಞಾನಾದಿ ಸಂಪನ್ನರಾದ [ವಾಯೋ] ಸರ್ವಪ್ರಾಣಸ್ವರೂಪ ಪರಮಾತ್ಮನೇ, [ಚ] ಮತ್ತು, [ಇಂದ್ರಃ] ಇಂದ್ರಿಯ ವಾನ್ ಜೀವಾತ್ಮನೇ! (ಸಂಬೋಧನಸ್ಥಾನೇ ಪ್ರಥಮಾ ಚಕಾರಾಗತತ್ವಾತ್ = ಛಂದೋ ವೈಶಿಷ್ಟ್ಯದಿಂದಾಗಿ, ಸಂಬೋಧನ ಸ್ಥಾನದಲ್ಲಿ ಪ್ರಥಮಾ ವಿಭಕ್ತಿ) [ಸುತಾನಾಂ] ಈಶ್ವರ ಪುತ್ರರಾದ ಜೀವರ ಬಗೆಗೆ, [ಚೇತಥಃ] ನೀವಿಬ್ಬರೂ ತಿಳುವಳಿಕೆ ಹೊಂದಿರುತ್ತೀರಿ. ಹಾಗೆಯೇ, ಉತ್ಪನ್ನವಾದ, ಅನ್ಯವಸ್ತುಗಳನ್ನೂ ತಿಳಿದವರಾಗಿರುತ್ತೀರಿ. [ತೌ] ಅಂತಹ ನೀವಿಬ್ಬರೂ, [ದ್ರವತ್] ಕ್ಷಿಪ್ರವಾಗಿ, [ಉಪ ಆಯಾತಂ[ ಹತ್ತಿರ ಬನ್ನಿರಿ; ಅರಿವಿಗೆ ಅಂದಿರಿ.

**ತಾತ್ಪರ್ಯ:**— ಸಂಪತ್ತು, ಸಾಮರ್ಥ್ಯ, ಸಾಮರ್ಥ್ಯಪ್ರದವಾದ ಅನ್ನಜಲಗಳಿಂದ ಸಂಪನ್ನರೂ, ಅವೆಲ್ಲಕ್ಕೂ ಆಶ್ರಯದಾತ್ರಗಳೂ ಆಗಿರುವ, ಸರ್ವಪ್ರಾಣಸ್ವರೂಪ ಪರಮಾತ್ಮನೇ! ಮತ್ತು ಜೀವಾತ್ಮನೇ! ನೀವಿಬ್ಬರೂ ಈಶ್ವರಪುತ್ರರಾದ ಜೀವರ ಬಗೆಗೆ ಎಲ್ಲವನ್ನೂ ತಿಳಿದಿರುವಿರಿ; ಅವರನ್ನು ಎಚ್ಚರಿಸುವವರೂ ಆಗಿದ್ದೀರಿ. ಹಾಗೆಯೇ ಸೃಷ್ಟ ವಾದ ಅನ್ಯ ಜಗದ್ವಸ್ತುಗಳನ್ನೂ ಬಲ್ಲವರಾಗಿರುತ್ತೀರಿ. ಈ ಪ್ರಕಾರವಾಗಿ, ಅಂತಹ ಗುಣವಿಶಿಷ್ಟರಾದ ನೀವಿಬ್ಬರೂ ಕ್ಷಿಪ್ರವಾಗಿ ಪ್ರಾಪ್ತರಾಗಿರಿ.

**ಭಾಷ್ಯ** :– ವಾಯು (ಈಶ್ವರ) ಹಾಗೂ ಇಂದ್ರ (ಜೀವ) - ಇವರ ವಿಸ್ತೃತ ವರ್ಣನೆ ಮೇಲಣ ಮಂತ್ರದಲ್ಲಿ ಆಗಿರುವುದರಿಂದ, ಮತ್ತೆ ವಿಸ್ತರಿಸಬೇಕಾದ ಆವಶ್ಯಕತೆಯಿಲ್ಲ. ಆ ಮಟ್ಟಿಗೆ ಭಾಷ್ಯಕಾರರ ಕಾರ್ಯ ಹಗುರವಾಯಿತು. ಆದರೆ, ಮುಂದಿನ ಶಬ್ದಗಳಿಗೆ ಸ್ಫುಟವೂ, ನಿರ್ದಿಷ್ಟವೂ ಆದ ವಿವರಣೆ ಅತ್ಯಂತ ಆವಶ್ಯಕ ಮಾತ್ರವಲ್ಲ ಅನಿವಾರ್ಯವೇ ಆಗಿದೆ.

ಜೀವೇಶ್ವರರ ಪರಸ್ಪರ ಸಂಬಂಧ ಅದೆಷ್ಟು ಘನಿಷ್ಠವೂ, ಸಮೀಪವೂ ಆಗಿದೆ - ಎಂದರೆ, ಒಬ್ಬನನ್ನು ಬಿಟ್ಟು ಇನ್ನೊಬ್ಬನ ವಿಷಯದಲ್ಲಿ ಆಲೋಚಿಸುವುದೂ ಕೂಡ ಕಷ್ಟವಾಗಿದೆ. 'ಆತ್ಮನ್' - ಎಂಬ ಒಂದೇ ಶಬ್ದದಿಂದ ಜೀವೇಶ್ವರರಿಬ್ಬರೂ ಗೃಹೀತರಾಗುವ ಕಾರಣ, ವೇದ ವಿರುದ್ಧವಾದ ಚೇತನೈಕ್ಯವಾದ - ಇರುವುದೊಂದೇ ಚೇತನತತ್ತ್ವ ಪರಬ್ರಹ್ಮ; ಆದರಿಂದ ಬೇರೆಯಾದ ಬೇರಾವುದೇ ಜಡ - ಚೇತನತತ್ತ್ವವೂ ಇಲ್ಲ – ಎಂಬ, ವಿಚಿತ್ರವಾದ ಅದ್ವೈತವಾದ ಉದ್ಭವಿಸಿ, ಆಚಾರ್ಯ ಶಂಕರರ ಅಸಾಧಾರಣ ಬುದ್ಧಿ ಚಾತುರ್ಯದ ಪರಿಣಾಮವಾಗಿ, "ದರ್ಶನವೆಂದರೆ ಒಂದೇ - ಅದ್ವೈತವಾದ. ಅದನ್ನುಳಿದ ಬೇರೆ ಯಾವುದೂ ದರ್ಶನವೇ ಅಲ್ಲ." - ಎಂಬ ಅಶುದ್ಧವಾದ ನಿರ್ಣಯ ಕೇವಲ ಭಾರತವಲ್ಲಿಯಲ್ಲ; ಸಂಪೂರ್ಣ ಜಗತ್ತಿನಲ್ಲೇ ಹರಡಿಹೋಯಿತು. "Absolute Monism is the only philosophy and there is no other philosophy than that." - "ಪೂರ್ಣಾದ್ವೈತ ಒಂದೇ ತತ್ತ್ವಶಾಸ್ತ್ರ; ಅದನ್ನುಳಿದು ಬೇರೆಯಾವುದೇ ತತ್ತ್ವಶಾಸ್ತ್ರವೂ ಇಲ್ಲ." – ಎಂದು ಹೇಳುವ ಮಂದಿ ಇಂದೂ ಕೋಟಿ – ಕೋಟಿಸಂಖ್ಯೆಯಲ್ಲಿ ಜಗದಾದ್ಯಂತ ಸಿಕ್ಕುತ್ತಾರೆ. ೯೨ – ೯೩ ಮೂಲತತ್ತ್ವಗಳನ್ನೊಪ್ಪುತ್ತಿದ್ದ ಭೌತಿಕ ವಿಜ್ಞಾನಿಗಳೂ ಈಗ ಮೂಲತತ್ತ್ವಗಳ ಸಂಖ್ಯೆಯನ್ನು ಇಳಿಸುತ್ತಾ – ಇಳಿಸುತ್ತಾ ಈಗ Electrons, protons and neutrons – ಎಂಬ ಮೂರೇ ತತ್ತ್ವಗಳ ಅಸ್ತಿತ್ವಕ್ಕೆ ಮನ್ನಣೆ ಕೊಡಹತ್ತಿದ್ದಾರೆ. ಇದನ್ನು ನೋಡಿ, ಅತ್ತ ಭೌತಿಕ ವಿಜ್ಞಾನದ ಅರಿವೂ ಇಲ್ಲದ, ಇತ್ತ ಅಧ್ಯಾತ್ಮದ ಕುರುಹೂ ಇಲ್ಲದ ವೇದಾಂತಿಗಳು, ಅಥವಾ ತಮ್ಮನ್ನು ತಾವೇ ಹಾಗೆ ಕರೆದುಕೊಳ್ಳುವ ಜನ - "ನೋಡಿ, ಇನ್ನು ಹೆಚ್ಚು ಕಾಲವಿಲ್ಲ. ಶಂಕರರ ಅದ್ವೈತವನ್ನೇ ಸಮಸ್ತ ವಿಜ್ಞಾನಿಗಳೂ ಒಪ್ಪಿಕೊಳ್ಳುವ ದಿನ ಹತ್ತಿರವೇ ಇದೆ." – ಎನ್ನಹತ್ತಿದ್ದಾರೆ. ಆದರೆ, ಸರಳ ಹೃದಯರೂ, ತಮ್ಮ ಕ್ಷೇತ್ರದ ಇತಿ – ಮಿತಿಗಳನ್ನರಿತವರೂ ಆದ ಮಹಾನ್ ವೈಜ್ಞಾನಿಕರು – "ಪ್ರಾಕೃತ ತತ್ತ್ವಗಳ ವಿಶ್ಲೇಷಣ - ನಿರ್ಣಯ ಹಾಗೂ ಜಗದುಪಕಾರಕ್ಕಾಗಿ ಅವುಗಳ ವಿನಿಯೋಗ - ಇಷ್ಟೇ ನಮ್ಮ ಗುರಿ. ಅದಕ್ಕಿಂತ ಬೇರೆಯಾವುದರ ಬಗೆಗೆ ತತ್ತ್ವವಾದೀ ದಾರ್ಶನಿಕರೂ ಶರಣಾಗಬೇಕು" - ಎಂಬುದು ಸದಾ ಸ್ಮರಣೀಯ.

ನಾವು ವಿಷಯಾಂತರ ಮಾಡುತ್ತಿಲ್ಲ. ಈ ಮಂತ್ರದ ಹಾಗೂ ಈ ಸೂಕ್ತದ ಉಳಿದ ಮಂತ್ರಗಳ ಸರಿಯಾದ ಅರ್ಥವನ್ನು ತಿಳಿದುಕೊಳ್ಳಬೇಕಾದರೆ, ದ್ವಿವಚನ ಪ್ರಯೋಗದ ಮರ್ಮವನ್ನು ತಿಳಿಯಲೇ ಬೇಕು. 'ಶ್ರುತಿ' ಎಂಬ ಹೆಸರಿನಿಂದಲೇ ಉಪನಿಷತ್ತುಗಳನ್ನೂ ಕೂಡ ಕರೆಯುವ ಆಧುನಿಕ ವೇದಾಂತಿಗಳು, ಉಪನಿಷತ್ತಿನಲ್ಲಿ ಕಂಡು

ಬರುವ **'ಆತ್ಮನ್'** ಶಬ್ದ ಉಭಯಾರ್ಥವಾಚಕವೆಂಬ ಮೂಲಭೂತತತ್ತ್ವವನ್ನೇ ಮರೆತು ಮುಗ್ಗರಿಸಿದ್ದಾರೆ. ಉಪನಿಷತ್ತುಗಳಲ್ಲಿ ಆತ್ಮನನ್ನು **"ಸತ್ಯಕಾಮಃ ಸತ್ಯಸಂಕಲ್ಪಃ"** – ಎಂಬಂತಹ ಮಾತುಗಳೂ ಸಿಕ್ಕುತ್ತವೆ; **"ಅಯಮಾತ್ಮಾ ಅಪಹತಪಾಪ್ಮಾ"** – ಎಂಬ ಮಾತುಗಳೂ ಸಿಕ್ಕುತ್ತವೆ. ಮೊದಲ ಬಗೆಯ ಮಾತುಗಳು ಸದಾ ಶುದ್ಧನೂ, ಅಪಾಪ ವಿದ್ಧನೂ [ಯಜು:-40. 8.]ಆದ ವಿರಾಡಾತ್ಮನನ್ನೂ, ಎರಡನೆಯ ಬಗೆಯ ಮಾತುಗಳು ಅಲ್ಪಜ್ಞತ್ವದಿಂದಾಗಿ ಪಾಪಮಾಡಿ, ಜ್ಞಾನಪ್ರಾಪ್ತಿಯಿಂದ ಆ ಪಾಪಗಳನ್ನು ನಿರ್ನಾಮಗೈವ ಪರಿಚ್ಛಿನ್ನಾತ್ಮನನ್ನೂ ನಿರ್ದೇಶಿಸುತ್ತದೆ – ಎಂಬ ಮೌಲಿಕ ತತ್ತ್ವವನ್ನೇ ಮರೆತು, ಸತ್ಯವನ್ನು ಗುರುತಿಸಲು ಸಾಧ್ಯವಾದೀತೇ ? ಹೇಗೆ ಉಭಯಾರ್ಥವಾಚಕ 'ಆತ್ಮನ್' ಶಬ್ದ ಭ್ರಾಂತಿಗೆ ಜನ್ಮವಿತ್ತಿತೋ, ಹಾಗೆಯೇ ಜೀವೇಶ್ವರರಿಬ್ಬರಿಗೂ ಅನ್ವಯಿಸುವ ಇಂದ್ರ, ಇಂದು ಮೊದಲಾದ ಶಬ್ದಗಳೂ ಭ್ರಾಂತಿಗೆ ಜನ್ಮವೀಯುವ ಸಂಭವವಿದೆ – ಎಂದು ನಮ್ಮ ಪ್ರಿಯ ಪಾಠಕರಿಗೆ ಸೂಚನೆಕೊಡುವುದೇ ಈ ನಮ್ಮ ಪ್ರಯತ್ನದ ಉದ್ದೇಶ್ಯ.

ಜೀವೇಶ್ವರರಿಬ್ಬರನ್ನೂ 'ವಾಜಿನೀವಸೂ' ಎಂದು ಸಂಬೋಧಿಸುತ್ತಿದೆ. ಇಲ್ಲಿ ವಾಜಿನೀ, ವಸೂ - ಎಂಬೆರಡು ಶಬ್ದಗಳಿವೆ. ಇದನ್ನು 'ವಾಜಿನ್ಯಾಃ ವಸೂ' ಎಂದಾದರೂ ಬಿಡಿಸಬಹುದು. ಅಥವಾ 'ವಾಜಿನ್ಯಾಂ ವಸೂ' ಎಂದಾದರೂ ಬಿಡಿಸಬಹುದು. 'ವಾಜಿನಿಯನ್ನು ನೆಲೆಗೊಳಿಸುವವರು' ಹಾಗೂ 'ವಾಜಿನಿಯಲ್ಲಿ ವಾಸಿಸುವವರು' - ಎಂದು ಈ ವಿಗ್ರಹವಾಕ್ಯಗಳ ಅರ್ಥವಾಗುತ್ತದೆ. ಮತ್ತು ವಸು ಶಬ್ದಕ್ಕಿರುವ 'ಐಶ್ವರ್ಯ' ಎಂಬರ್ಥವನ್ನು ಗ್ರಹಿಸುವುದಾದರೆ, ತತ್ಪುರುಷ ಸಮಾಸವನ್ನು ಕೈಬಿಟ್ಟು, ಬಹುವ್ರೀಹಿಸಮಾಸವನ್ನಂಗೀಕರಿಸಿ, 'ವಾಜಿನ್ಯೇವ ವಸುರ್ಯಯೋಃ ತೌ ವಾಜಿನೀವಸೂ' – ಎಂದರೆ, "ವಾಜಿನಿಯೇ ಯಾರ ಐಶ್ವರ್ಯವೋ ಆ ಇಬ್ಬರು." – ಎಂಬರ್ಥವನ್ನು ಗ್ರಹಿಸಬೇಕಾದೀತು. ಹೇಗೆ ನೋಡಿದರೂ ಸಂಪೂರ್ಣ ಭಾರ ಬೀಳುವುದು 'ವಾಜಿನೀ' ಎಂಬ ಶಬ್ದದ ಮೇಲೆಯೇ. ವಾಜಿನೀ-ಎಂಬುದು ಸ್ವತಃ ಮೂಲವೋ ಅಥವಾ 'ವಾಜ' ಎಂಬ ಶಬ್ದದಿಂದ ಉದ್ಭವಿಸಿದ ಶಬ್ದವೋ ಎಂದೂ ಕೂಡ ಗಮನಿಸಬೇಕು. ನಿರುಕ್ತದಲ್ಲಿಯಂತೂ **'ವಾಜಿನಮನ್ನವಂತಂ'** [4. 3. 28. 4] 'ವಾಜೀ - ಎಂದರೆ ಅನ್ನವಾನ್ ಆದವನನ್ನು ಎಂದು, 'ವಾಜ'ವನ್ನೇ ಮೂಲಶಬ್ದವೆಂದು ಗ್ರಹಿಸಿರುವುದು ಕಂಡುಬರುತ್ತದೆ; **'ವಾಜಿನೀವತಿ ಅನ್ನವತಿ'** [6,1.6.] ಎಂದ ವಾಜಿನೀವಂತನಲ್ಲಿ ಎಂದರೆ ಅನ್ನವಂತನಲ್ಲಿ' – ಎಂದು ವಾಜಿನಿಯನ್ನೇ ಮೂಲಶಬ್ದವೆಂದು ಗ್ರಹಿಸಿರುವುದೂ ಕಂಡುಬರುತ್ತದೆ. ಮೂಲಶಬ್ದವಲ್ಲವಾದರೆ. ವಾಜಿನೀ—ಎಂಬುದು 'ವಾಜ' ಎಂಬ ಶಬ್ದ ಸಮಾನಾರ್ಥವಾಚಕಶಬ್ದವೆಂದಂತೂ ಗ್ರಹಿಸಲೇಬೇಕಾಗುತ್ತದೆ. **'ಯೋ ದೇವಃ ಸಾ ದೇವತಾ; ಅದಿತಿರೇವ ಆದಿತ್ಯಃ'** - ಎಂಬ ರೀತಿಯ ಶಬ್ದಪ್ರಯೋಗಗಳು ಕಂಡುಬರುವ ವೈದಿಕ ಸಾಹಿತ್ಯವಲ್ಲಿ **'ಯೋ ವಾಜೀ ಸಾ ವಾಜಿನೀ'** - ಎಂದು ಹೇಳಿದರೆ, ವಿಸ್ಮಯ ಸ್ಥಾನವಿಲ್ಲ. ಸ್ವಯಂ ಋಗ್ವೇದದಲ್ಲಿ **'ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ'** [ಋಕ್:- 1.3.10.] "ಖಾದ್ಯಗಳಿಂದ ಖಾದ್ಯವತಿಯಾದ ಜ್ಞಾನವತೀವಿದ್ಯೆ ನಮ್ಮನ್ನು ಪವಿತ್ರಗೊಳಿಸಲಿ" – ಎಂಬ ಸ್ಪಷ್ಟ ಪ್ರಯೋಗವೇ ಇದೆ. ಹೀಗಿರುವಾಗ ನಾವಿನ್ನು

ಈ ಶಬ್ದ ಹಿಡಿದು ಎಳೆದಾಡಬೇಕಾದ ಆವಶ್ಯಕತೆಯಿಲ್ಲ. ಸಾಯಣರು 'ವಾಜಿನೀ ಹವಿಃ ಸಂತತಿಃ'- 'ವಾಜಿನೀ - ಎಂದರೆ ಹವಿಸ್ಸಿನ ವಿಸ್ತಾರ' ಎಂದು ಹೇಳಿ, "ವಾಜೋಽನ್ನಂ ತದ್ಯಸ್ಯಾಂ ಹವಿಃ ಸಂತತಾವಸ್ತಿ, ಸಾ ವಾಜಿನೀ. ತಸ್ಯಾಂ ವಸತ ಇತಿ ವಾಜಿನೀವಸೂ" "ವಾಜ–ಎಂದರೆ ಅನ್ನ. ಅದು ಯಾವ ಕ್ರಿಯೆಯಲ್ಲಿ ಹವಿರ್ವಿಸ್ತಾರವಾಗಿರುವುದೋ ಆ ಯಜ್ಞವೇ ವಾಜಿನೀ, ಅದರಲ್ಲಿ ವಾಸಿಸುವವರು ವಾಜಿನೀವಸುಗಳು' ಎಂದು ಕೊನೆಮುಟ್ಟಿಸುತ್ತಾರೆ. ಇಂದ್ರ-ವಾಯು - ಮೊದಲಾದ, ಜೀವಾತ್ಮ – ಪರಮಾತ್ಮರಲ್ಲದ ಅನ್ಯ ಚೇತನಪ್ರಾಯ ದೇವತೆಗಳ ಅಸ್ತಿತ್ವವನ್ನಂಗೀಕರಿಸುವ, ಅವರು ಯಜ್ಞದಲ್ಲಿ ಹವಿರ್ಭಾಗ ಕೊಳ್ಳಲು ಬರುವರೆಂದು ನಂಬುವ ಹಾಗೂ ವೇದ ಮಂತ್ರಗಳನ್ನೆಲ್ಲಾ ಯಜ್ಞಕ್ಕೆ ಅನ್ವಯಿಸಬೇಕೆಂಬ ತತ್ತ್ವವನ್ನು ಪಣವಾಗಿ ಹಿಡಿದಂತೆ ಕಾಣುವ ಸಾಯಣರಿಂದ ನಾವು ಬೇರೇನನ್ನೂ ನಿರೀಕ್ಷಿಸಲೂ ಸಾಧ್ಯವಿಲ್ಲ. ಮಹರ್ಷಿದಯಾನಂದರೂ ವಾಜಿನೀವಸೂ ಎಂಬುದಕ್ಕೆ **"ವಾಜನೀತ್ಯುಷಸೋ ನಾಮಸು ಪಠಿತಂ"** [ನಿ. 1. 8.] – "ಉಷಸ್ಸಿನ ಹೆಸರುಗಳಲ್ಲಿ ವಾಜಿನೀ - ಎಂಬುದೂ ಹೆಸರಿಸಲ್ಪಟ್ಟಿದೆ" – ಎಂಬ ನಿರುಕ್ತ ಪ್ರಮಾಣದಿಂದ **"ಉಷೋವತ್ ಪ್ರಕಾಶವೇಗಯೋರ್ವಸತಃ ಇಂದ್ರವಾಯೂ"** [ಸೂರ್ಯಲೋಕ ಹಾಗೂ ವಾಯು, ಪರ್ಯಾಯತಃ ದ್ಯುಲೋಕಾಂತರಿಕ್ಷ ಲೋಕೌ] - "ಉಷಸ್ಸಿನಂತೆ ಪ್ರಕಾಶವನ್ನೂ, ವೇಗವನ್ನೂ ಆಧರಿಸುವ (ನೆಲೆಗೊಳಿಸುವ) ದ್ಯುಲೋಕಾಂತರಿಕ್ಷಲೋಕಗಳು." - ಎಂಬ ಆಧಿದೈವಿಕಾರ್ಥವನ್ನು ಗ್ರಹಿಸಿದ್ದಾರೆ. ತ್ರಿವಿಧ ಪ್ರಕ್ರಿಯೆಯ ದೃಷ್ಟಿಯಿಂದ ಈ ಅರ್ಥವೂ ಗ್ರಾಹ್ಯವೇ. ಆದರೆ, ಓದುತ್ತೋದುತ್ತಾ ಪ್ರಿಯಪಾಠಕರು ನಾವು ಹಿಡಿದಿರುವ ದೃಷ್ಟಿಬಿಂದುವಿನಿಂದ ಮಹದೌಚಿತ್ಯವನ್ನು ತಾವಾಗಿಯೇ ಕಂಡುಕೊಳ್ಳುವರು.

ವಾಜಶಬ್ದ ಆಕಾರಾಂತ ಪುಲ್ಲಿಂಗವೆಂದು ಗ್ರಾಹ್ಯವಾದಲ್ಲಿ ರೆಕ್ಕೆ, ಪಕ್ಕ, ಯುದ್ಧ, ಸಂಘರ್ಷ, ಘೇದನೀತಿ, ಶಬ್ದ – ಎಂಬರ್ಥಗಳನ್ನೂ, ಅಕಾರಾಂತ ನಪುಂಸಕವೆಂದು ಗ್ರಾಹ್ಯವಾದಲ್ಲಿ ತುಪ್ಪ, ಪಿಂಡ, ಆಹಾರ, ಜಲ, ಪ್ರಾರ್ಥನಾ, ಯಜ್ಞ, ಬಲ ಹಾಗೂ ಐಶ್ವರ್ಯ - ಎಂಬರ್ಥಗಳನ್ನೂ ಕೊಡುತ್ತದೆ. ವಾಜಿನೀಶಬ್ದಕ್ಕೂ ಇವೆಲ್ಲವನ್ನೂ ಹಚ್ಚಬಲ್ಲೆವಾದರೆ, ವಾಜಿನೀವಸೂ ಶಬ್ದವೇ ಒಂದು ಗ್ರಂಥದ ಸಾಮಗ್ರಿಯಾದೀತು. ನಿರುಕ್ತದ ದೈವತಕಾಂಡ [4. 3. 31. 7] ದಲ್ಲಿ **"ವಾಜೀ ವೇಜನವಾನ್ ಪ್ರೇರಣವಾನ್ ವಾ"** – "ವಾಜೀ – ಎಂದರೆ ವೇಗಶಾಲಿ ಅಥವಾ ಪ್ರೇರಕ" – ಎಂದಿದ್ದಾರೆ. ಇವರ ಸ್ತ್ರೀಲಿಂಗರೂಪ 'ವಾಜಿನೀ' ಎಂದಾದಲ್ಲಿ ವೇಗವತಿ ಅಥವಾ ಪ್ರೇರಿಕೆ – ಎಂಬರ್ಥವಿದೆ. ಈಶ್ವರ – ಜೀವರಿಬ್ಬರೂ ವ್ಯಕ್ತಿ - ರೂಪವಲ್ಲದೆ ಚೇತನಶಕ್ತಿರೂಪರೇ ಆಗಿರುವುದರಿಂದ, ಆ ಇಬ್ಬರಿಗೂ ವಾಜಿನೀ ಶಬ್ದವನ್ನನ್ವಯಿಸಬಹುದು. ಈಶ್ವರಾಂತಃಸ್ಥಿತವಾದ ಕಾರಣ ಜೀವನೆಂಬ ಚೇತನಶಕ್ತಿ ವಾಜಿನೀವಸು; ಜೀವಾಂತಃಸ್ಥಿತನೇ ಆದ ಕಾರಣ ಈಶ್ವರನೆಂಬ ಚೇತನ ಶಕ್ತಿಯೂ ವಾಜಿನೀ ವಸುವೇ. ಈ ಗಂಭೀರಾರ್ಥವೂ ಓದುಗರ ಚಿತ್ತದಲ್ಲಿರಲಿ.

ವಾಯು -ಇಂದ್ರಶಬ್ದಗಳಿಂದ ಈಶ್ವರ – ಜೀವರನ್ನು ನಾವು ಗ್ರಹಿಸಿರುವುದು ಅನೇಕರಿಗೆ, ಮುಖ್ಯತಃ ಸಂಪ್ರದಾಯವಾದಿಗಳ ಸಂಕುಚಿತ ಚಿತ್ತಕ್ಕೆ ನೂತನವೆಂದು ತೋರ

ಬಹುದು. ವಸ್ತುತಃ ನೂತನವಾದುದೇನೂ ಇಲ್ಲ. ಹೆಜ್ಜೆ – ಹೆಜ್ಜೆಗೂ ಪ್ರಮಾಣಗಳನ್ನು ಕೊಡುತ್ತಲೇ ಬಂದಿದ್ದೇವೆ. ಅತ್ತ ಪ್ರಾಚೀನ – ಪರಂಪರೆಗೂ ವಿಚ್ಛೇದ ತಂದಿಲ್ಲ; ಇತ್ತ ಸ್ವತಂತ್ರವಿಚಾರತತ್ತ್ವಕ್ಕೂ ಬೆನ್ನುತೋರಿಸಿಲ್ಲ. ಈ ಶೈಲಿಯಲ್ಲಿ ವೇದಾರ್ಥಗ್ರಹಣ ಸುಗಮವಾದೀತು.

ಆಯಿತು. "ಸರ್ವಾಂತಃ ಸ್ಥಿತ ಸರ್ವಜ್ಞ, ಈಶ್ವರನ ಬಗೆಗೇನೋ 'ಸುತಾನಾಂ ಚೇತಥಃ' ದಲ್ಲಿನ ಈಶ್ವರ ಪುತ್ರರೂಪರಾದ ಜೀವರ ತಿಳಿದಿರುವಿಕೆಯನ್ನು ಹೇಳಬಹುದು; ಆದರೆ, ಅಲ್ಪಜ್ಞ ಜೀವನ ಬಗೆಗೆ ಆ ಕಥನ ಉಚಿತವೆ ? – ಎಂಬ ಪ್ರಶ್ನೆ ಸಹಜವಾಗಿಯೇ ಉದಿಸೀತು. ಸರ್ವಜ್ಞನಂತೆ ಜೀವರ ಅಂತರ್ಯವನ್ನೆಲ್ಲಾ ಜೀವ ತಿಳಿಯುತ್ತಾನೆ, ಎಂದಲ್ಲ; ತನ್ನ ಇರುವು – ಅರಿವುಗಳ, ಶಕ್ತಿ – ಸಾಮರ್ಥ್ಯಗಳ ಇತಿಮಿತಿಗಳ ತಿಳಿವಿನಿಂದ, ಆತ್ಮೌಪಮ್ಯದೃಷ್ಟಿಯಿಂದ ಒಬ್ಬ ಜೀವ ಅನ್ಯಜೀವರ ವಿಷಯದಲ್ಲಿ ಜ್ಞಾನಗಳಿಸಬಲ್ಲನು – ಎಂಬ ಭಾವನೆ ಇಲ್ಲಿ ಗ್ರಾಹ್ಯ. ಹಾಗೆಯೇ, ಉತ್ಪನ್ನವಾದ ಇತರ ವಿಶ್ವರಚನೆಗಳನ್ನೂ ತಿಳಿದಿರುತ್ತೀರಿ – ಎಂದೂ ಗ್ರಹಿಸುವುದು ಉಚಿತವಾಗಿದೆ.

'ತಾ ದ್ರವತ್ ಉಪ ಆಯಾತಂ' - 'ಆ ನೀವಿಬ್ಬರೂ ಕ್ಷಿಪ್ರವಾಗಿ ಬಳಿ ಬನ್ನಿರಿ.' – ಎಂಬುದು ಸುಬೋಧವಾಗಿದೆ. **'ದ್ರವದಿತಿ ಕ್ಷಿಪ್ರನಾಮಸು ಪಠಿತಂ.'** [ನಿರುಕ್ತ:- 2. 15. 5] ಎಂಬ ನಿರುಕ್ತವಚನವೂ ಇದೆ. 'ಕ್ಷಿಪ್ರ' – ಎಂದರೆ ಕೂಡಲೇ, ಈಗಲೇ - ಎಂದು ತಿಳಿವರೆ ತಪ್ಪಾದೀತು. ಈಶ್ವರನ ಮತ್ತು ಜೀವನ ಸಾಕ್ಷಾತ್ಕಾರದ ಬಗೆಗೆ ಇರಬೇಕಾದ ಔತ್ಸುಕ್ಯ - ಉತ್ಸುಕತೆ ಅಥವಾ ಕುತೂಹಲದ ದ್ಯೋತಕ ಈ 'ದ್ರವತ್'.

**ಸಂಹಿತಾ ವಿಭಾಗ.**

**ವಾಯವಿಂದ್ರಶ್ಚ ಸುನ್ವತ ಆ ಯಾತಮುಪ ನಿಷ್ಕೃತಂ ।**

**ಮಕ್ಷ್ವಿತ್ಥಾ ಧಿಯಾ ನರಾ ॥೬॥**

**ಪದಪಾಠ:-** ವಾಯೋ ಇತಿ, ಇಂದ್ರಃ, ಚ, ಸುನ್ವತಃ, ಆ ಯಾತಂ, ಉಪ, ನಿಷ್ಕೃತಂ ನಿಃಽಕೃತಂ, ಮಕ್ಷು, ಇತ್ಥಾ, ಧಿಯಾ, ನರಾ ॥

**ಅನ್ವಯ:-** ನರಾವಾಯೋ ! ಇಂದ್ರಃ ಚ ಧಿಯಾ ನಿಷ್ಕೃತಂ ಸುನ್ವತಃ । ಮಕ್ಷು ಇತ್ಥಾ ಉಪ ಆಯಾತಂ ॥

**ಶಬ್ದಾರ್ಥ:-** [ನರಾ] ನಾಯಕರಾದ, ಹ್ರಾಸಕ್ಕೀಡಾಗದ, ಅವಿನಾಶಿಗಳಾದ, [ವಾಯೋ] ಸರ್ವಪ್ರಾಣಾಧಾರ ಈಶ್ವರನೇ ! [ಚ] ಮತ್ತು, [ಇಂದ್ರಃ–ಇಂದ್ರ] ಇಂದ್ರಿಯವಾನ್ ಜೀವನೇ ! [ಧಿಯಾ] ಬುದ್ಧಿಪೂರ್ವಕವಾಗಿ, [ನಿಷ್ಕೃತಂ] ಕರ್ಮಗಳ ಫಲವನ್ನು,

[ಸುನ್ವತಃ] ನಿರ್ಧರಿಸಿ ಕೊಡುತ್ತೀರಿ. [ಇತ್ಥಾ] ಈ ವಿಧದ ನಿಶ್ಚಯದೊಂದಿಗೆ, [ಮಕ್ಷು] ಶೀಘ್ರವಾಗಿ, [ಉಪಆಯಾತಂ] ಬಳಿ ಬನ್ನಿರಿ. ಅಥವಾ, [ಸುನ್ವತಃ] ಯಜ್ಞಕರ್ತನ ಸಾರ ವನ್ನು ಗ್ರಹಿಸುವ ಸತ್ಪುರುಷನ, [ನಿಃಕೃತಂ–ನಿಷ್ಕೃತಂ] ಕರ್ಮಾನುಸಾರವಾದ ಫಲದ, [ಉಪ] ಬಳಿಗೆ, [ಇತ್ಥಾ] ಇಂತಹದೇ ಫಲವೀವ ನಿಶ್ಚಯದೊಂದಿಗೆ, [ಮಕ್ಷು ಆಯಾತಂ] ಕ್ಷಿಪ್ರವಾಗಿ ಬನ್ನಿರಿ.

**ತಾತ್ಪರ್ಯ:**– ಮುನ್ನಡೆಸುವವರೂ, ನಾಶವಿಲ್ಲದವರೂ, ಆದ ಈಶ್ವರನೇ ಮತ್ತು ಜೀವನೇ! ನೀವಿಬ್ಬರೂ ಬುದ್ಧಿಪೂರ್ವಕವಾಗಿ, ಅದನ್ನನುಸರಿಸುವ ಕೃತಿಯೊಂದಿಗೆ, ಪ್ರತಿ ಯೊಬ್ಬನಿಗೂ ಕರ್ಮಾನುಸಾರವಾದ ಫಲವನ್ನೇ ಕೊಡುತ್ತೀರಿ. ಇಂತಹ ನಿಶ್ಚಯದೊಂದಿಗೆ ಬೇಗ ಬಳಿಗೆ ಬನ್ನಿರಿ. ಅಥವಾ ಸತ್ಕರ್ಮನಿಷ್ಠನ ಕೃತಿಗೆ ತಕ್ಕ ಫಲವನ್ನು ಕೊಡುವ ಸಂಕಲ್ಪದೊಂದಿಗೆ ಕ್ಷಿಪ್ರವಾಗಿ ಹತ್ತಿರ ಬನ್ನಿರಿ.

**ಭಾಷ್ಯ:**– ವಾಯು-ಇಂದ್ರರ, ಈಶ್ವರ–ಜೀವರ ವಿವರಣೆ ಹಿಂದಿನ ಎರಡೇ ಮಂತ್ರಗಳಲ್ಲಿ ಬಂದಿವೆ. ಈ ಮಂತ್ರದಲ್ಲಿ 'ನರಾ' – ಎಂಬ ವಿಶೇಷಣ ಬಂದಿದೆ. ಸಾಧಾರಣತಃ 'ನರ' - ಎಂದರೆ ಮಾನವ - ಎಂದು ತಿಳಿಯಲ್ಪಡುತ್ತದೆ. ಮಹರ್ಷಿ ದಯಾನಂದರು ಇದೇ ವ್ಯಾಖ್ಯಾನದಲ್ಲಿ **'ನರಾ ನಯನಕರ್ತಾರೌ'** - ನರರು ಎಂದರೆ ಮುಂದಕ್ಕೆ ಕೊಂಡೊಯ್ಯು ವವರು' – ಎಂದೇ ಅರ್ಥ ಬರೆದಿದ್ದಾರೆ. ಶ್ರೀಮನ್ಮಧ್ವರು ಈ ಮಂತ್ರದ ವ್ಯಾಖ್ಯಾನದಲ್ಲಿ, **"ಯಜನ್ ಸುನ್ವನ್ ಕೃತಸ್ಯಾನುಸಾರಿ ಕರ್ಮೈವ ನಿಷ್ಕೃತಂ। ತದರ್ಥಂ ಕ್ಷಿಪ್ರಮಾಯಾತಂ ಧಿಯೇತ್ಥಭೂತಯಾಚಲೌ। ನರೌ ತಾವವಿನಾಶಿತ್ವಾತ್,"**– "ಸುನ್ವಾನನೆಂದರೆ ಯಜಮಾನ. ಕೃತಿಗನುಸಾರವಾದ ಪ್ರತಿಕೃತಿಯೇ ನಿಷ್ಕೃತ [ಫಲ]. ಅದನ್ನು ಕೊಡುವುದಕ್ಕಾಗಿ, ಅದಕ್ಕನುಗುಣವಾದ ಬುದ್ಧಿಯಿಂದ ನಿಶ್ಚಲರಾಗಿ ಕ್ಷಿಪ್ರವಾಗಿ ಬನ್ನಿರಿ. ಅವಿನಾಶಿಗಳಾದುದರಿಂದ ಅವರಿಬ್ಬರೂ ನರರು" - ಎಂದು ಬರೆಯುತ್ತಾರೆ. ಶಬ್ದಗಳ ಅರ್ಥ ಗಳ ಮಟ್ಟಿಗೆ ಈ ಮಂತ್ರದ ಎಲ್ಲ ಶಬ್ದಗಳೂ ಸ್ಫುಟವಾದ ಪ್ರಮಾಣಗಳೊಂದಿಗೆ ಸ್ಪಷ್ಟವೇ ಆಗಿವೆ. ವಾಯು–ಇಂದ್ರರಿಗೆ ಅರ್ಥಮಾಡುವಾಗ ಮಧ್ವರು ಉಪೇಂದ್ರ-ಸಂಕರ್ಷಣರು' - ಎನ್ನುತ್ತಾರೆ. ಈ ಉಪೇಂದ್ರ-ಸಂಕರ್ಷಣರು ಎಲ್ಲಿಂದ ಬಂದರೋ, ಹೇಳುವುದು ಕಷ್ಟ. ಸಾಯಣರಿಂದಲೂ ನಮಗೆ ಈ ಮಂತ್ರಾರ್ಥಕಾರ್ಯದಲ್ಲಿ ಯಾವುದೇ ಸಹಾಯವೂ ಸಿಕ್ಕದು. ಮಹರ್ಷಿದಯಾನಂದರು ಹಿಂದಣ ಮಂತ್ರದಲ್ಲಿ ಮಾಡಿರುವಂತೆಯೇ ಆಧಿ – ದೈವಿಕಾರ್ಥ ವನ್ನು ಮುಂದುವರಿಸಿದ್ದಾರೆ.

ಈಶ್ವರನಲ್ಲಿ ಮತ್ತು ಜೀವನಲ್ಲಿ, ಮಾನವಮಾತ್ರ ವೇದೋಪದೇಶಾಧಿಕಾರಿಯೂ, ಧರ್ಮಾನುಷ್ಠಾನಾಧಿಕಾರಿಯೂ ಆಗಿರುವುದರಿಂದ, ನಾವು ಈ ವರೆಗೆ 'ಜೀವ' ಎಂದು ಹೇಳುತ್ತಾ ಬಂದಿರುವೆಡೆಯಲ್ಲಾ ಮಾನವಜನ್ಮಧಾರೀ ಜೀವ – ಎಂದೇ ಗ್ರಹಿಸಬೇಕು. ವಿಶಿಷ್ಟ ಸಾಮರ್ಥ್ಯಗಳನ್ನಿಲ್ಲಿ ವಿವರಿಸಲಾಗಿದೆ. ಪ್ರಥಮತಃ ಇಬ್ಬರೂ 'ನರರು', ಎಂದರೆ ಮುನ್ನಡೆಯಿಸುವವರು. ಈಶ್ವರನು ವಿಶ್ವಬ್ರಹ್ಮಾಂಡದ ಸಂಚಾಲಕನಾದ ನಾಯಕನು;

ಜೀವನು ತನ್ನ ಶರೀರದ ಹಾಗೂ ಸೀಮಿತಾರ್ಥದಲ್ಲಿ ಅನ್ಯಜೀವರ ಸಂಚಾಲಕನಾದ ನಾಯಕನು. ಇಬ್ಬರೂ **'ಧೀಃ ಶಕ್ತಿಸಂಪನ್ನರು.'** ನಿರುಕ್ತಕಾರರು **'ಧೀರಿತಿ ಪ್ರಜ್ಞಾ ಕರ್ಮನಾಮಸು ಪಠಿತಂ.'** [ನಿ. 3.9.] "ಧೀಃ – ಎಂದು ಪ್ರಜ್ಞೆ – ಕರ್ಮಗಳ ಹೆಸರುಗಳಲ್ಲಿ ಹೇಳಲ್ಪಟ್ಟಿದೆ." **"ಧಿಯೋವಿಶ್ವಾ ಸರ್ವಾಣಿ ಪ್ರಜ್ಞಾನಾನಿ."** [5. 3. 27. 6.] - "ಎಲ್ಲ ಧೀಗಳು ಎಂದರೆ ಎಲ್ಲ ಪ್ರಜ್ಞಾನಗಳು" ; **"ಧಿಯಂ ಧಿಯಂ ಕರ್ಮ ಕರ್ಮ"** [6. 2. 19, 8.] – "ಧೀಯನ್ನು ಧೀಯನ್ನು ಎಂದರೆ ಕರ್ಮವನ್ನು ಕರ್ಮವನ್ನು" – ಎಂದು ನಿರುಕ್ತದಲ್ಲಿ ಹೇಳಿದ್ದಾರೆ. ಹೀಗೆ ಈಶ್ವರನಲ್ಲಿ ಮತ್ತು ಜೀವನಲ್ಲಿ ಪ್ರಜ್ಞಾನಗಳೂ, ಕರ್ಮಗಳೂ ಇವೆ – ಎಂದು ಸಿದ್ಧವಾಗುತ್ತದೆ. ಅವರಿಬ್ಬರೂ ನಿಷ್ಕೃತವನ್ನು ಎಂದರೆ ಕರ್ಮಾನುಸಾರ ಫಲವನ್ನು ಕೊಡುವ ಸಾಮರ್ಥ್ಯವನ್ನು ಹೊಂದಿದ್ದಾರೆ. ಈ ರೀತಿ ನಾಯಕರೂ, ವಿನಾಶರಹಿತರೂ ಆದ ಈಶ್ವರ – ಜೀವರು ಕ್ಷಿಪ್ರವಾಗಿ ಬಳಿಸಾರಲಿ – ಎಂಬ ಅಭಿಲಾಷೆಯನ್ನು ವ್ಯಕ್ತಪಡಿಸಲಾಗಿದೆ. ಆದರೆ, ಒಂದು ಭೇದಮಾತ್ರ ಎಂದಿಗೂ ಮರೆಯಯಲ್ಪಡಲಾಗದು. ಎಲ್ಲ ರೀತಿಯಿಂದಲೂ ಅನಂತನಾದ ಈಶ್ವರನ ಗುಣ - ಸಾಮರ್ಥ್ಯಗಳೆಲ್ಲವೂ ಅನಂತ; ಪರಿಚ್ಛಿನ್ನನಾದ ಜೀವನ ಗುಣ – ಸಾಮರ್ಥ್ಯಗಳೆಲ್ಲವೂ ಸೀಮಿತವೇ.

**"ಮಕ್ಷ್ವಿತಿ ಕ್ಷಿಪ್ರನಾಮಸು ಪಠಿತಂ"** [ನಿಘಂಟು 2.15.] "ಮಕ್ಷು ಎಂಬುದು ಕ್ಷಿಪ್ರ ಎಂಬುದರ ಹೆಸರುಗಳಲ್ಲಿ ಹೇಳಲಾಗಿದೆ. "ಇತ್ಥಾ–ಇತಿಥಾ, **"ಥಾ ಹೇತೌ ಚ ಛಂದಸಿ"** [ಅಷ್ಟಾಧ್ಯಾಯೀ:- 5.2.26.] - "ಥಾ ಪ್ರತ್ಯಯ ಕಾರಣದ್ಯೋತಕ ಛಂದಸ್ಸಿನಲ್ಲಿ (ಮಂತ್ರದಲ್ಲಿ) ಇಷ್ಟು ಮಾತ್ರ ವಿವರಣೆ ಸಾಕು.

ಭಗವಂತನ ವಿಷಯದಲ್ಲಿ 'ಆಯಾಹಿ, ಯಾಹಿ, ದೇಹಿ, ಗೃಹ್ಣೀಷ್ವ' - ಎಂದರೆ, "ಬಾ, ಹೋಗು, ಕೊಡು, ತೆಗೆದುಕೋ." - ಎಂದು ಮೊದಲಾಗಿ ಹೇಳುವಾಗ, ಮಾನುಷೀ ವಾಣಿಯಲ್ಲಿ ನಮ್ಮ ಅಭಿಲಾಷೆಗಳನ್ನು ಮಾತ್ರ ವ್ಯಕ್ತಪಡಿಸಿಕೊಳ್ಳುತ್ತೇವೆ. ಧರ್ಮವ್ಯಾಪಕನಾದ ಈಶ್ವರ ಬರುವುದು. ಹೋಗುವುದು, ಕೊಡುವುದು, ತೆಗೆದುಕೊಳ್ಳುವುದು ಸರ್ವಥಾ ಅಸಂಭವ. ಗಮನಾಗಮನಗಳಿಂದ, ದಾನಾದಾನಗಳಿಂದ ಯಾವ ಪ್ರಾಪ್ತಿಯಾಗುವುದೋ, ಅದು ಪ್ರಾಪ್ತವಾಗಲಿ - ಎಂಬುದಷ್ಟೇ ಅಂತರ್ನಿಹಿತ ಭಾವನೆ–ಎಂಬುದನ್ನು ಮಾತ್ರ ಯಾರೂ, ಕ್ಷಣಮಾತ್ರಕ್ಕೂ ಮರೆಯಲಾಗದು.

**ಸಂಹಿತಾ ವಿಭಾಗ**

**ಮಿತ್ರಂ ಹುವೇ ಪೂತದಕ್ಷಂ ವರುಣಂ ಚ ರಿಶಾದಸಂ ।**

**ಧಿಯಂ ಘೃತಾಚೀಂ ಸಾಧಂತಾ ॥೭॥**

**ಪದಪಾಠ:**– ಮಿತ್ರಂ, ಹುವೇ. ಪೂತದಕ್ಷಂ, ವರುಣಂ, ಚ, ರಿಶಾದಸಂ, ಧಿಯಂ, ಘೃತಾಚೀಂ, ಸಾಧಂತಾ ॥

**ಅನ್ವಯ:**– ಘೃತಾಚೀಂ ಧಿಯಂ ಸಾಧಂತಾ ಪೂತದಕ್ಷಂ ಮಿತ್ರಂ, ಚ, ರಿಶಾದಸಂ ವರುಣಂ ಹುವೇ ॥

**ಶಬ್ದಾರ್ಥ:**– [ಘೃತಾಚೀಂ] ಸ್ನೇಹಮಯವಾದ ಉದಾತ್ತ ಭಾವನೆಯ ಸಾಕ್ಷಾತ್ಕಾರ ಮಾಡಿಸುವ, [ಧಿಯಂ] ಕರ್ಮವನ್ನು [ಸಾಧಂತಾ] ಸಾಧಿಸುವ, [ಪೂತದಕ್ಷಂ] ಪವಿತ್ರೀಕೃತವಾದ ಸಾಮರ್ಥ್ಯವನ್ನುಳ್ಳ, [ಮಿತ್ರಂ] ಜೀವಮಾತ್ರರ ಮಿತ್ರನಾದ ಈಶ್ವರನನ್ನೂ [ಚ] ಮತ್ತು, [ರಿಶಾದಸಂ] ಹಿಂಸಾಕರ್ಮವನ್ನೂ, ಹಿಂಸಕರನ್ನೂ ನಾಶಪಡಿಸುವ, [ವರುಣಂ] ವರಣೀಯನಾದ ಜೀವನನ್ನೂ. [ಹುವೇ] ಆಹ್ವಾನಿಸುತ್ತೇನೆ.

**ತಾತ್ಪರ್ಯ:**– ಜೀವ - ಜೀವರ ನಡುವೆ ಸ್ನೇಹವೆಂಬ ಹೃದಯಸ್ಪರ್ಶನೀ ಭಾವನೆಯನ್ನೇ ಘೃತಾಚೀ - ಎನ್ನುತ್ತಾರೆ. ಆ ಘೃತಾಚಿಯನ್ನು ರೂಪಿಸುವ ಕರ್ಮವನ್ನು 'ಧೀಃ' ಎನ್ನುತ್ತಾರೆ. ಈ ಶುಭಕರ್ಮವನ್ನು ಪವಿತ್ರೀಕೃತವಾದ ಶಕ್ತಿಯನ್ನುಳ್ಳ ಸರ್ವರ ಮಿತ್ರನಾದ ಈಶ್ವರನನ್ನೂ, ಈ ಸ್ನೇಹವೆಂಬ ಸದ್ಭಾವನೆಯನ್ನು ನಾಶಪಡಿಸುವ ಹಿಂಸಾವೃತ್ತಿಗಳನ್ನೂ, ಹಿಂಸಕರನ್ನೂ ನುಂಗುವ ಶಕ್ತಿಯನ್ನುಳ್ಳ, ಮಾನವಮಾತ್ರರಿಗೆ ವರಣೀಯನಾದ ಜೀವನನ್ನೂ ನಾನು ಜೀವನ - ವಿಕಾಸಕ್ಕಾಗಿ ಆಹ್ವಾನಿಸುತ್ತೇನೆ.

**ಭಾಷ್ಯ:**– ಹಿಂದಣ ಋಕ್ಕುಗಳಲ್ಲಿ ವಾಯು ಮತ್ತು ಇಂದ್ರ - ಎಂದು ನಿರ್ದಿಷ್ಟರಾದ ಈಶ್ವರ ಹಾಗೂ ಜೀವರನ್ನೇ ಈ ಮಂತ್ರದಲ್ಲಿ ಮಿತ್ರ ಮತ್ತು ವರುಣರೆಂದು ಕರೆಯಲಾಗಿದೆ. ಮತ್ತು ಈ ಮಂತ್ರ ಮಾನವ ಜೀವನವನ್ನು ಶುಭ್ರವೂ, ಪ್ರಗತಿಪರವೂ ಆದ ರೀತಿಯಲ್ಲಿ ಅರಳಿಸಲು ಅವಶ್ಯಕವಾದ ತತ್ತ್ವಗಳತ್ತ ನಮ್ಮ ಗಮನವನ್ನು ಸೆಳೆಯುತ್ತದೆ.

ಈಶ್ವರ ಹಾಗೂ ಜೀವ – ಈ ಇಬ್ಬರ ಸಾಧರ್ಮ್ಯ ಒಂದನ್ನು ಮೊದಲು ವಿಮರ್ಶಿಸೋಣ. ಘೃತಾಚೀ - ಎಂಬುದು ಈ ಮಂತ್ರದಲ್ಲಿ ಪ್ರಧಾನ ಪಾತ್ರ ವಹಿಸುವ ಮುಖ್ಯ ಶಬ್ದವಾಗಿದೆ. ಮಹರ್ಷಿ ದಯಾನಂದರು ತಮ್ಮ ಹಿಂದಣ ಶೈಲಿಯನ್ನೇ ಮುಂದುವರಿಸಿ. ಅಧಿದೈವತ್ತ ಪಾಠಕರ ಗಮನ ಸೆಳೆಯುತ್ತಾ, ಮಿತ್ರ – ವರುಣ ಶಬ್ದಗಳಿಂದ ಪ್ರಾಣ - ಅಪಾನವೆಂಬ ವಾಯುಗಳನ್ನು ಗ್ರಹಿಸುತ್ತಾರೆ. ಆದ ಕಾರಣ, ಘೃತಾಚೀ ಶಬ್ದಕ್ಕೆ ಅವರು ನಿರುಕ್ತದ ಪ್ರಮಾಣದಿಂದ **'ಘೃತಮಿತ್ಯುದಕನಾಮ, ಜಿಘರ್ತೇಃ ಸಿಂಚತಿ ಕರ್ಮಣಃ'** [ನಿರುಕ್ತ:– 6. 7. 24. 1.] - "ಘೃತವೆಂಬುದು ನೀರಿನ ಹೆಸರು, ಸೇಚನವೆಂಬ ಅರ್ಥದ ಧಾತುವಿನಿಂದ ಉತ್ಪನ್ನವಾಗುವ ಕಾರಣದಿಂದ." - ಎಂದು ಗ್ರಹಿಸಿ, **"ಘೃತಂ ಜಲಮಂಚತಿ ಪ್ರಾಪಯತೀತಿ ತಾಂ ಕ್ರಿಯಾಂ ಸಮ್ಯಕ್ ಸಾಧಯಂತೌ"** – ಎಂದು ವಿವರಿಸುತ್ತಾರೆ. **"ಘೃತಾಚೀಧೀಃ"** - ಎಂದರೆ ಜಲವನ್ನು ಸುರಿಸುವ ಕರ್ಮ- ಎಂದು ಹೇಳುತ್ತಾರೆ. ಸಾಯಣರೂ ಕೂಡ ಇದೇ ಅರ್ಥವನ್ನು ಅಂಗೀಕರಿಸಿದ್ದಾರೆ. ತರ್ಕಕೇಸರೀ ಪ್ರಮಾಣಪಟು ಮಹರ್ಷಿ ದಯಾನಂದರೊಂದಿಗೆ ಪೂರ್ಣಸಂಪ್ರದಾಯವಾದೀ ಸಾಯಣರನ್ನು ಹೋಲಿಸಲು ಸಾಧ್ಯವಿಲ್ಲ. ಪೂರ್ವಸಂಪ್ರದಾಯದಂತೆ ಸಾಯಣರು ಮಿತ್ರ ಮತ್ತು ವರುಣರೆಂಬ ಚೇತನ ದೇವತೆಗಳನ್ನು ಗ್ರಹಿಸಿ, ಭಾಷ್ಯ ಮಾಡುತ್ತಾ ಹೋಗಿದ್ದಾರೆ.

ಆಧ್ಯಾತ್ಮಿಕ - ಧಾರ್ಮಿಕತತ್ತ್ವಗಳ ವಿಷಯವಲ್ಲಿ ಆಕಾಶ – ಪಾತಾಳದಷ್ಟು ವ್ಯತ್ಯಾಸವಿದ್ದರೂ ಈ ಇಬ್ಬರೂ ಮೂಲ ಶಬ್ದಗಳಿಗೆ ಮಾಡುವ ಅರ್ಥ ವಿಸ್ಮಯಕರವೆಂಬಷ್ಟು ಸಾಮ್ಯ ಹೊಂದಿರುತ್ತದೆ. ಈ ಘೃತಾಚೀ ಧೀಃ - ಎಂಬ ಶಬ್ದಗಳಿಗೆ ಶತಪ್ರತಿಶತ ಪೌರಾಣಿಕ ವೈಷ್ಣವ ರಾದ ಶ್ರೀಮಧ್ವರು **"ಹರಿರ್ಘೃತಃ ಸು ಶುದ್ಧತ್ವಾತ್ ಘೃತಾಚೀ ಚ ತದಂಜನಾತ್।"** "ಅತ್ಯಂತ ಶುದ್ಧವಾಗಿರುವ ಕಾರಣ ಹರಿಯೇ – ವಿಷ್ಣುವೇ - ಘೃತ; ಅವನನ್ನು ಪ್ರಾಪ್ತಿ ಮಾಡಿಸುವ ಕ್ರಿಯೆಯೇ ಘೃತಾಚೀ ಧೀಃ" – ಎಂದರ್ಥ ಮಾಡುತ್ತಾರೆ.

ಮಂತ್ರದಲ್ಲಿ ಮಿತ್ರ–ವರುಣರನ್ನು **'ಘೃತಾಚೀಂ ಧಿಯಂ ಸಾಧಂತಾ'** -ಘೃತ ವನ್ನು ಪ್ರಾಪ್ತಮಾಡಿಸುವ ಕರ್ಮವನ್ನು ಸಾಧಿಸುವವರು" – ಎಂದು ಹೇಳಿದೆ. ಸಾಯಣರು ಮಂತ್ರದ **"ಮಿತ್ರಂ ಹುವೇ ಪೂತದಕ್ಷಂ ವರುಣಂ ಚ ರಿಶಾದಸಂ"** – ಎಂಬ ಭಾಗಕ್ಕೆ **"ಅಹಮಸ್ಮಿನ್ ಕರ್ಮಣಿ ಹವಿಷ್ಪ್ರದಾನಾಯ ಪೂತದಕ್ಷಂ ಪವಿತ್ರ ಬಲಂ ಮಿತ್ರಂ ಹುವೇ. ತಥಾ ರಿಷಾದಶಂ ರಿಶಾನಾಂ ಹಿಂಸಕಾನಾಮದಸ ಮತ್ತಾರಂ ವರುಣಂ ಚ ಹುವೇ ಆಹ್ವಯಾಮಿ."** - ಎಾವರೆ, "ನಾನು ಈ ಕರ್ಮದಲ್ಲಿ ಹವಿಸ್ಸಿನ ಅರ್ಪಣಕ್ಕಾಗಿ ಪೂತದಕ್ಷನಾದ ಎಂದರೆ - ಪವಿತ್ರಬಲನಾದ ಮಿತ್ರನನ್ನು ಕರೆಯು ತ್ತೇನೆ ಮತ್ತು ರಿಶಾದನಾದ, ಎಂದರೆ ಹಿಂಸೆಗಳ. ಹಿಂಸಕರ ಭಕ್ಷಕನಾದ ವರುಣನನ್ನೂ ಕರೆಯುತ್ತೇನೆ; ಆಹ್ವಾನಿಸುತ್ತೇನೆ." ಎಂದು ಅರ್ಥಮಾಡಿದ್ದಾರೆ. ಮಿತ್ರ ಹಾಗೂ ವರುಣರು ಪ್ರತ್ಯೇಕ ದೇವತೆಗಳೇ - ಎಂಬ ನಂಬಿಕೆಗೆ ಗಂಟುಬಿದ್ದ ಅವರ ಬುದ್ಧಿ 'ಮಿತ್ರನಾರು ? ವರುಣ ನಾರು ? - ಎಂದು ತರ್ಕಿಸುವ ಗೋಜಿಗೆ ಹೋಗಲಿಲ್ಲ. ಅಧಿದೈವದ ಕಡೆ ತಿರುಗಿದ ಮಹರ್ಷಿ ದಯಾನಂದರು 'ಮಿತ್ರ' ಶಬ್ದಕ್ಕೆ ವಿಶೇಷಣವಾಗಿ ಬಂದ 'ಪೂತದಕ್ಷಂ' ಎಂಬುದಕ್ಕೆ **"ಪೂತಂ ಪವಿತ್ರಂ ದಕ್ಷಂ ಬಲಂ ಯಸ್ಮಿನ್ ತಂ."** - "ಯಾವನಲ್ಲಿ ಪೂತ ಎಂದರೆ, ಪವಿತ್ರವಾದ ದಕ್ಷ – ಎಂದರೆ ಬಲವಿರುವುದೋ ಅವನನ್ನು" ಎಂದೂ, 'ವರುಣ' ಶಬ್ದಕ್ಕೆ ವಿಶೇಷಣವಾಗಿ ಬಂದಿರುವ **'ರಿಷಾದಸಂ'** ಎಂಬುದಕ್ಕೆ **'ರಿಷಾಃ ರೋಗಾಃ ಶತ್ರವೋ ವಾ ಹಿಂಸಿತಾ ಯೇನ ತಂ'** - 'ಯಾವನಿಂದ ರೋಗಗಳು ಅಥವಾ ಶತ್ರುಗಳು ಹಿಂಸಿಸಲ್ಪಡುತ್ತಾರೋ ಅವನನ್ನು' – ಎಂದೂ ವಿವರಣವನ್ನಿತ್ತಿದ್ದಾರೆ. ಈವರೆಗೇನೋ ಸಾಯಣ–ದಯಾನಂದರ ನಡುವೆ ಭೇದವಿಲ್ಲ. ಇದೇ ಪ್ರಕರಣದಲ್ಲಿ ಮಹೀಧರನು **'ದಕ್ಷ** - ಎಂದರೆ ಜ್ಞಾನೇಂದ್ರಿಯ ಕೌಶಲವೆಂದೂ, **ಬಲ** - ಎಂದರೆ ಕರ್ಮೇಂದ್ರಿಯ ಕೌಶಲವೆಂದೂ ಅರ್ಥಮಾಡಿ, ಪೂರ್ಣತಃ ವಾಮಮಾರ್ಗಿಯಾಗಿದ್ದು, ಅನೇಕ ಮಂತ್ರಗಳಿಗೆ ಅತ್ಯಂತ ಹೇಸಿಗೆಯೆನಿಸುವಂತಹ, ಬಹಳ ಅಶ್ಲೀಲವಾದ ಅರ್ಥಬರೆದು, ಜುಗುಪ್ಸಾರ್ಹ ವ್ಯಕ್ತಿಯೆಂದು ಹೆಸರು ಪಡೆದರೂ, ಈ ಒಂದು ಸ್ಥಾನದಲ್ಲಿ ಬುದ್ಧಿಸಂಗತವಾಗಿ ವರ್ತಿಸಿದ್ದಾನೆ. ಶ್ರೀ॥ ಮಧ್ವರು ಮಿತ್ರ ಹಾಗೂ ವರುಣ ಎಂಬ ಶಬ್ದಗಳಿಗೆ ಭಾಷ್ಯ ಮಾಡುತ್ತಾ ಹೀಗೆ ಹೇಳಿದ್ದಾರೆ:–

**ಮಿತ್ವಾ ತ್ರಾತೀತಿ ಮಿತ್ರೋಽಯಂ ಮಿತಮುಹ್ವಾ ಕರೋತಿ ವಾ।**
**ಮಿತಂ ರಾತೀತಿ ವಾ ನಿತ್ಯಂ ಮಿತಂ ರಮಯತೀತಿ ವಾ॥೧॥**
**ಆವೃಣೋತೀತಿ ವರುಣಃ ತಮಸ್ಯಾಖ್ಯಾನತೋಽಪಿ ವಾ।**
**ವರಮುನ್ನಯತೀತ್ಯಸ್ಮಾತ್ ವರಾನಂದತ್ವತೋಽಪಿ ವಾ॥೨॥**

"ಎಷ್ಟು ಅವಶ್ಯವೋ, ಅಷ್ಟೇ ತ್ರಾಣಗೊಳಿಸುವುದರಿಂದ ಇವನು ಮಿತ್ರನು; ಹಗಲನ್ನು ಆಳತೆಗೆ ಸಲ್ಲಿಸುವುದರಿಂದ ಇವನು ಮಿತ್ರನು. ಮಿತವಾದದ್ದನ್ನು ಕೊಡುವುದರಿಂದ, ಮಿತ್ರರನ್ನರಿತು ಸಂತಸಗೊಳಿಸುವ ಕಾರಣ ಇವನು ಮಿತ್ರನು ॥೧॥. ಕತ್ತಲಿನಿಂದ ಅಥವಾ ಅಜ್ಞಾನದಿಂದ ಆವರಿಸುವುದರಿಂದ ಇವನು ವರುಣನು; ಉತ್ತಮನಾದವನನ್ನೂ ಮೇಲೆತ್ತುವುದರಿಂದ ಅಥವಾ ಉತ್ತಮಾನಂದವತ್ತ್ವದಿಂದ ಇವನು ವರುಣನು.॥೨॥

ಆದರೆ, ಈ ಶಬ್ದನಿರುಕ್ತಿಯಿಂದ ನಮಗೆ ಸಿಕ್ಕುವ ಸಹಾಯ ಇಲ್ಲ. "ಇವನೇ ಮಿತ್ರ; ಇವನೇ ವರುಣ" – ಎಂದು ಕೈ ಬೆರಳಸನ್ನೆಯಿಂದ ಸೂಚಿಸುವಂತೆ, ನಿರ್ದಿಷ್ಟವಾಗಿ ಸೂಚಿಸದೆ, ಶಬ್ದ_ವ್ಯುತ್ಪತ್ತಿಯನ್ನು ಮಾತ್ರ ಹೇಳಿದರೆ, ಜನತೆಗಾಗುವ ಲಾಭ ಶೂನ್ಯ–ಪ್ರಾಯವೇ.ಮುನ್ನಡೆದು, ಅದೇ ಮಧ್ವರು 'ಪೂತದಕ್ಷ'ನೆಂಬುವುದಕ್ಕೆ ಶ್ರೀಹರಿ 'ಪೂತದಕ್ಷ'ನೆನಿಸುತ್ತಾನೆ. (ಇದು ಮಧ್ವರ ಋಗ್ಭಾಷ್ಯದ ಅನುವಾದಕರಾದ ಶ್ರೀ॥ ನಾರಾಯಣತಂತ್ರಿಗಳು ಇತ್ತ ವಿವರಣೆ. ಮಧ್ವರು ಮಿತ್ರನೆಂಬ ಶಬ್ದಕ್ಕೆ ಸೂರ್ಯನೆಂದು ಒಪ್ಪಿ, ಅವನ ಅಂತರ್ಗತನಾದ ಶ್ರೀಹರಿಯೂ ಮಿತ್ರನೆನಿಸುತ್ತಾನೆ. ಉತ್ಕೃಷ್ಟ ಆನಂದವೀಯುವುದರಿಂದ 'ವರುಣ'ನೆನಿಸುತ್ತಾನೆ." ಈ ಮೊದಲಾದ ವಿಸ್ತಾರವನ್ನು ಭಾಷಾಂತರಕಾರರು ಮಾಡಿದ್ದಾರೆ. ಮಿತ್ರ ಹಾಗೂ ವರುಣ ಎಂಬ ಶಬ್ದಗಳಿಗೆ, ನೇರವಾಗಿಯೇ ಶ್ರೀಹರಿ (ಭಗವಾನ್ ವಿಷ್ಣುವೆನ್ನಿರಿ, ನಾರಾಯಣನೆನ್ನಿರಿ. ಶಬ್ದಭೇದದಿಂದ ಇಲ್ಲಿ ಗೊಂದಲವಾಗದು.) ಎಂದು ಅರ್ಥ ಹೇಳಿ ಬಿಟ್ಟಿದ್ದರೆ, ಯಾರಾದರೂ ಸುಗಮವಾಗಿ ಗ್ರಹಿಸಬಹುದು. ಆದರೆ - 'ಸಾಧಂತಾ' ಎಂಬ, ದ್ವಿತತ್ತ್ವಗಳಿಗೆ ಅನ್ವಯಿಸುವ ಶಬ್ದ ಕಷ್ಟಕೊಡುತ್ತದೆ, ಅಹುದು. ಕಲ್ಪಿತ ದೇವತೆಗಳನ್ನೂ ಮುಂದೂಡದೆ, ಮಿತ್ರನೇ ಬೇರೆ; ವರುಣನೇ ಬೇರೆ – ಈ ಪ್ರಕರಣದಲ್ಲಿ ಎಂದೊಪ್ಪಿಕೊಂಡಿದ್ದರೆ, ಎಲ್ಲವೂ ಸರಳವೇ ಆಗುತ್ತಿತ್ತು. ಶ್ರೀ॥ ಮಹರ್ಷಿದಯಾನಂದರು ಈ ಎಡ ಮಿತ್ರ ಶಬ್ದದಿಂದ ಸೂರ್ಯನನ್ನೇ ಗ್ರಹಿಸಿ, ಪ್ರಮಾಣರೂಪದಲ್ಲಿ ಒಂದು ಋಕ್ಕನ್ನು ಉದ್ಧರಿಸಿದ್ದಾರೆ.

ಈ ವ್ಯಾಖ್ಯಾನದ ಮೇಲೆ ಇನ್ನು ಹೆಚ್ಚು ವಿಸ್ತಾರ ಅನವಶ್ಯಕ. ಆದರೆ, "ಅತ್ರ, ಅಗ್ನಿ, ಇಂದ್ರ, ಮಿತ್ರ, ವರುಣ,- ಇತ್ಯಾದಿ ಶಬ್ದಗಳಿಂದ ಜೀವನೂ ಗ್ರಾಹ್ಯನಾಗುತ್ತಾನೆ; ಈಶ್ವರನೂ ಗ್ರಾಹ್ಯನಾಗುತ್ತಾನೆ. ಪ್ರಕರಣಾನುಸಾರ ಯಾರು ಗ್ರಾಹ್ಯರೋ ಅವರನ್ನೇ ಗ್ರಹಿಸಬೇಕು." – ಎಂದು ನಾವು ಹಿಂದೆ ಮಾಡಿರುವ ಮನವಿ, ಮನನಶೀಲರಾದ ನಮ್ಮ ಓದುಗರ ದೃಗ್ಪಥದಿಂದ ಸರಿದು ಹೋಗದಿದ್ದರೆ ಸಾಕು.

**ಸಂಹಿತಾ ವಿಭಾಗ**

**ಋತೇನ ಮಿತ್ರಾವರುಣಾವೃತಾವೃಧಾವೃತಸ್ಪೃಶಾ ।**

**ಕ್ರತುಂ ಬೃಹಂತ ಮಾ ಶಾಥೇ ॥೮॥**

ಪದಪಾಠ:- ಋತೇನ, ಮಿತ್ರಾವರುಣಾ, ಋತಾವೃಧೌ. ಋತಸ್ಪೃಶಾ, ಕ್ರತುಂ. ಬೃಹಂತಂ, ಆಶಾಥೇ

**ಅನ್ವಯ:-** ಋತಾವೃಧೌ ಋತಸ್ಪೃಶಾ ಮಿತ್ರಾವರುಣೌ ಋತೇನ ಬೃಹಂತಂ ಕ್ರತುಂ ಆಶಾಥೇ ಆನಶಾಥೇ ॥

ಶಬ್ದಾರ್ಥ:- [ಋತಾವೃಧೌ] ವೇದಜ್ಞಾನದಿಂದ ಸಂವರ್ಧನ ಹೊಂದುವವರೂ, ಸ್ವಯಂವರ್ಧಿಸುವವರೂ, [ಋತಸ್ಪೃಶೌ] ವೇದಜ್ಞಾನದಿಂದ ಉದ್ಭವಿಸುವ ಸತ್ಯ, ಧರ್ಮ, ಯಜ್ಞ, ನ್ಯಾಯ, ಹಾಗೂ ವಿಶ್ವಶಾಸನ ನಿಯಮಗಳನ್ನು ಸ್ಪರ್ಶಿಸುವವರೂ ಆದ, [ಮಿತ್ರಾವರುಣೌ] ಸರ್ವಸ್ನೇಹಿಯಾದ ಈಶ್ವರ ಹಾಗೂ ವರಣೀಯನಾದ ಜೀವರು, [ಋತೇನ] ವೇದಜ್ಞಾನದಿಂದ, [ಬೃಹಂತಂ ಕ್ರತುಂ] ವಿಶಾಲವಾದ, ದೊಡ್ಡದಾದ ಶುಭಕರ್ಮವನ್ನೂ ಉನ್ನತವಾದ ಆಲೋಚನೆಗಳನ್ನೂ [ಆನಶಾಥೇ] ಮಾಡುತ್ತಾರೆ, ಮಾಡಿಸುತ್ತಾರೆ.

**ತಾತ್ಪರ್ಯ:-** ಮೇಲೆ ಅಭಿವರ್ಣಿತರಾದ ಸರ್ವಮಿತ್ರನಾದ ಈಶ್ವರ ಹಾಗೂ ವರಣೀಯನಾದ ಜೀವ - ಇವರಿಬ್ಬರೂ ಅನಾದ್ಯನಂತವೂ, ಸಮಸ್ತ ಸತ್ಯ ವಿದ್ಯಾಭಂಡಾರಗಳೂ ಆದ ವೇದಗಳಿಂದ ಅಭಿನಂದನೀಯನು ಹಾಗೂ ಸಮೃದ್ಧನು ಆಗತಕ್ಕವರೂ, ಆ ವೇದಗಳ ನಿರ್ಭ್ರಾಂತ ಜ್ಞಾನವನ್ನು ಆಧ್ಯಾತ್ಮಿಕವಾಗಿ ಸ್ಪರ್ಶಿಸುವವರೂ ಆಗಿರುತ್ತಾರೆ. ಅವರಿಬ್ಬರೂ ವೇದಗಳ ನಿಷ್ಕಲ್ಮಷವಾದ ಅರಿವಿನಿಂದ ವಿಶಾಲವೂ, ವರ್ಧಿಸುತ್ತಲೇ ಹೋಗುವಂತಹುದೂ ಆದ ಶುಭಕರ್ಮಗಳನ್ನು ಮಾಡುತ್ತಾರೆ ಮತ್ತು ನಿರ್ಮಲವಾದ ಆಲೋಚನೆಗಳನ್ನು ಅರಳಿಸುತ್ತಾರೆ.

**ಭಾಷ್ಯ:-** ಈ ಮಂತ್ರದ ವ್ಯಾಖ್ಯಾನವನ್ನು ಮಾಡುವುದು ಅಷ್ಟು ಕಷ್ಟವಲ್ಲ. ಮಿತ್ರ ಮತ್ತು ವರುಣರ ವಿಸ್ತೃತ ವಿವರಣವನ್ನು ಪಾಠಕರು ಹಿಂದೆಯೇ ಓದಿದ್ದಾರೆ. ಆದಕಾರಣ ಆ ಪ್ರಸಂಗ ಈಗ ಅನಾವಶ್ಯಕ. ಹಾಗೆ ನೋಡಿದರೆ, ನಮ್ಮ ಪಾಠಕರಿಗೆ 'ಋತ' ಶಬ್ದವೂ ಹೊಸದಲ್ಲ. ಆದರೂ ಈ ಮಂತ್ರದ ಸಮಸ್ತ ಭಾರ ಈ ಒಂದು 'ಋತ' ಶಬ್ದದ ಮೇಲೆಯೇ ಬಿದ್ದಿದೆ. ಶಬ್ದಾರ್ಥದಲ್ಲಿ ನಾವು "ಋತ" ಎಂಬುದಕ್ಕೆ ಕೇವಲ ಒಂದೇ ಅರ್ಥವನ್ನು "ವೇದಜ್ಞಾನವನ್ನು" ಎಂದು ಮಾತ್ರ ಹೇಳಿದ್ದೇವೆ. ಕಾರಣವಿಷ್ಟೇ; ಈಗ ಹೇಳಿರುವ ಅನ್ಯಾರ್ಥಗಳು ಸೂಚಿಸುವ ಸಮಸ್ತ ಭಾವನೆಗಳನ್ನೂ, ಗುಣ - ಕರ್ಮಗಳನ್ನೂ ವೇದಚತುಷ್ಟಯ ತನ್ನ ವಿಶಾಲವಾದ ಗರ್ಭದಲ್ಲಿ ಅಡಗಿಸಿಕೊಂಡಿದೆ. ವೇದಜ್ಞಾನದಲ್ಲಿ ಸಮಸ್ತ ಜ್ಞಾನ – ವಿಜ್ಞಾನಗಳ, ಸಮಸ್ತ ವಿದ್ಯೆಗಳೂ ಸಮಾವಿಷ್ಟವಾಗಿವೆ. ಅಧ್ಯಯನಾಧ್ಯಾಪನಗಳ ವ್ಯವಸ್ಥೆಯಿಲ್ಲದ ಕಾರಣ, ಇರುವ ಪಾಠ್ಯಕ್ರಮದಲ್ಲಿ ಅಂಗೀಕೃತವಾಗಿರುವ ಪಾಠ್ಯ – ಪುಸ್ತಕಗಳ ಹೊಲಸು ನೋಟಗಳಿಂದ, ವೇದಗಳ ಬಗೆಗೆ ಇರುವ ಅಷ್ಟು - ಇಷ್ಟು ಗೌರವ ಕೂಡ ಶೂನ್ಯವಿಲೀನವಾಗುತ್ತಿದೆ. "The very best that India can persent the world with, is Indian culture, as propounded in the Vedas." – ಎಂದು ಕೂಗು ಹಾಕುವುದು ಮತ್ತು ವೇದ

ಮಂತ್ರಗಳಿಗೆ ಅರ್ಥ ಬರೆಯುವಾಗ – "ಆ ದೇವತೆಯ ವೀರ್ಯ ಸ್ಖಲಿತವಾಗಿ ಆ ನೀರಿನ ಮೇಲೆ ಬಿದ್ದಿತು; ಅದನ್ನು ಮೀನುಗಳು ನುಂಗಿದವು. ಅವುಗಳ ಗರ್ಭದಿಂದ ಇಂತಿಂತಹ ಋಷಿ – ಮುನಿಗಳ ಜನನವಾಯಿತು." - ಎಂದು ಬರೆಯುವುದು! ಯಾವ ವಿಚಾರಶೀಲನ ತಲೆ ತಾನೇ ಈ ಬಗೆಯ ವರ್ಣನದಿಂದ, ನಾಚುಗೆಯ ಭಾರದಿಂದ ಬಾಗಿ ಹೋಗದು ?

ಆದರೆ, ದೋಷ ಪೂರ್ಣತಃ ನಿರ್ದೋಷವಾದ, ಭ್ರಾಂತಿರಹಿತವಾದ, ಆಧ್ಯಾತ್ಮಿಕ-ಭೌತಿಕ ಜ್ಞಾನ-ವಿಜ್ಞಾನಗಳ ವಿಶಾಲ ಆಕರವಾದ ವೇದಗಳಗಂತೂ ಆಪ್ತ ಸರ್ವಜ್ಞನಾದ ಈಶ್ವರ ಮತ್ತು ಜ್ಞಾನಾಲೋಕಿತಾಂತಃಕರಣನಾದ ಜೀವ ಸಮಸ್ತ ಜಗತ್ತಿನ ಜೀವಕೋಟಿಯ ಸರ್ವಾಂಗೀಣ ಉತ್ಥಾನಕ್ಕಾಗಿ ಅಭೀಷ್ಟವಾದುದನ್ನು ಮಾಡುವುದು ವೇದೋಕ್ತಪ್ರಶಾಸನದ ನಿಯಮಾನುಸಾರವಾಗಿಯೇ ಹೊರತು, ಅನ್ಯಥಾ ಅಲ್ಲ. ವೇದಜ್ಯೋತಿಯಿಲ್ಲದ ವಿಶ್ವ ಜೀವ ನಿಲ್ಲದ ದೇಹದಂತೆ. ಅಗ್ನಿಯಿಲ್ಲದ ಯಜ್ಞಶಾಲೆಯಂತೆ, ಧರ್ಮಾನುಷ್ಠಾನವಿಲ್ಲದ ಮಾನವ ಜೀವನ ಸರ್ವಥಾ ತಿರಸ್ಕರಣೀಯವಾದ, ವಿಚಾರಶೀಲರಾರಿಗೂ ಜಿಗುಪ್ಸಾಜನಕ ದುರಂತ್ಯಾಜ್ಯವಾದ ನರಕಸದೃಶವಾದ ನೆಲೆ ಮಾತ್ರ.

ಆಯಿತು. ಬನ್ನಿರಿ. ಈ 'ಋತ'ವನ್ನು ಮತ್ತೊಂದು ಸಾರಿ ವಿಶ್ಲೇಷಿಸಿ ನೋಡೋಣ. ಋಗ್ವೇದ – **"ಋತೇನ ಸತ್ಯಾಮೃತಸಾಪ ಆಯನ್ ಶುಚಿ ಜನ್ಮಾನಃ ಶುಚಯಃ ಪಾವಕಾಃ ।"** [7.56.12.] - "[ಋತಸಾಪಃ] ಋತದ ನುಡಿಗಳನ್ನುಪದೇಶಿಸುವ, [ಶುಚಿ ಜನ್ಮಾನಃ] ಶುಚಿಯಾದ ಜನ್ಮಹೊಂದಿದ, [ಶುಚಯಃ] ಸ್ವತಃ ಪವಿತ್ರರೂ, [ಪಾವಕಾಃ] ಅನ್ಯರನ್ನು ಪವಿತ್ರಗೊಳಿಸುವವರೂ ಆದ (ಮರುತಃ) ಮರ್ತ್ಯರು [ಋತೇನ] ಋತದಿಂದಲೇ, [ಸತ್ಯಾಂ ಆಯನ್] ಸತ್ಯವಾದ, ಶಾಶ್ವತವಾದ ಸ್ಥಿತಿಯನ್ನು ಹೊಂದುತ್ತಾರೆ." ಎನ್ನುತ್ತಿದೆ. ಅದೇ ವೇದ **"ಋತೇನ ಋತಂ ಧರುಣಂ ಧಾರಯಂತ."** [ಋಗ್ವೇದ:-5.15.2.] "[ಋತೇನ] ಋತದಿಂದ, [ಧರುಣಂ ಋತಂ] ಧಾರಕವಾದ. ಆತ್ಮೋದ್ಧಾರಕವಾದ ಋತವನ್ನು, [ಧಾರಯಂತ] ಧರಿಸುತ್ತಾರೆ." - ಎಂದು ಮೊಳಗುತ್ತಿದೆ. ಋತದ ವೇದೋಕ್ತ ಸ್ವರೂಪವನ್ನು ಬಣ್ಣಿಸುವ ಈ ಋಕ್ಕು ಸರ್ವಥಾ ಆಲೋಚನೀಯ:—

**ಋತಸ್ಯ ತಂತುರ್ವಿತತಃ ಪವಿತ್ರ ಆ ಜಿಹ್ವಾಯಾ ಅಗ್ರೇ ವರುಣಸ್ಯ ಮಾಯಯಾ ।**
**ಧೀರಾಶ್ಚಿತ್ತತ್ ಸಮಿನಕ್ಷಂತ ಆಶತಾತ್ರಾ ಕರ್ತಮವ ಪದಾತ್ಯ ಪ್ರಭುಃ ॥**

[9.73.9.]

"[ವರುಣಸ್ಯ ಮಾಯಯಾ] ವರಣೀಯನೂ, ದುಃಖನಿವಾರಕನೂ ಆದ ಭಗವಂತನ, [ಮಾಯಯಾ] ಮಾಯೆಯಿಂದ, ಎಂದರೆ ಪ್ರಜ್ಞಾನದಿಂದ, (ಮೀಯತೇಽನಯೇತಿ ಮಾಯಾ_ ಇದರಿಂದ ತಿಳಿಯಲ್ಪಡುವ ಕಾರಣದಿಂದ, ಪ್ರಜ್ಞಾನವನ್ನೇ ಮಾಯೆ ಎನ್ನುತ್ತಾರೆ) [ಜಿಹ್ವಾಯಾಃ] ನಾಲಗೆಯ, [ಪವಿತ್ರೇ ಅಗ್ರೇ] ಪಾವನವಾದ ಅಗ್ರದಲ್ಲಿ, [ಋತಸ್ಯ ತಂತುಃ] ಋತದ

ವಿಸ್ತಾರವು, [ಅವಿತತಃ] ಎಲ್ಲೆಡೆಯಿಂದಲೂ ವಿಸ್ತೃತವಾಗಿದೆ. [ಧೀರಾಃ ಚಿತ್] ಧೀ-ಎಂದರೆ ಬುದ್ಧಿಯಿಂದ ಈರಿತರಾದವರು, ಪ್ರೇರಿತರಾದವರು ಮಾತ್ರ [ತತ್] ಅದನ್ನು, [ಸಂ ಆನಕ್ಷಂತಃ] ಚೆನ್ನಾಗಿ ಗಳಿಸಿಕೊಳ್ಳುತ್ತಾ, [ಆಸತ] ಶಾಂತಿಯಿಂದ ಲೋಕದಲ್ಲಿ ವಿರಾಜಿಸುತ್ತಾರೆ. [ಅತ್ರ] ಈ ಲೋಕದಲ್ಲಿ, [ಅಪ್ರಭುಃ] ಅಸಮರ್ಥನಾದವನು, [ಕರ್ತಂ] ಹಳ್ಳದ, [ಅವ ಪದಾತಿ] ತಳಕ್ಕೆ ಬೀಳುತ್ತಾನೆ."

ಈ ಮಂತ್ರ ಈಶ್ವರನ ಪ್ರಜ್ಞಾನವೇ - ವೇದವೇ - ಋತ. ಅದು ಶ್ರೇಷ್ಠಪುರುಷರ ನಾಲಗೆಯ ತುದಿಯಲ್ಲಿ ಸದಾ ವಿಸ್ತೃತವಾಗಿ ಹರಡಿರುತ್ತದೆ. ಬುದ್ಧಿಶಾಲಿಗಳು ಮಾತ್ರ ಅದರರ್ಥವನ್ನು ಗ್ರಹಿಸಿ ಈ ಜಗತ್ತಿನಲ್ಲಿ ಶಾಂತಿಯಿಂದ ವಿರಾಜಿಸುವರು. ವೇದಾರ್ಥಗ್ರಹಿಸಲು ಸಮರ್ಥನಾಗದವನು ಅಧಃಪತನ ಹೊಂದುತ್ತಾನೆ – ಎನ್ನುತ್ತಿದೆ. ಈ ಮಂತ್ರ ಸ್ಪಷ್ಟವಾಗಿ ವೇದಜ್ಞಾನವೇ ಋತ–ಎನ್ನುತ್ತಿದೆ. ಹಾಗೆಯೇ **"ದಿವೋಧರ್ಮನ್ ಧರುಣೇ, ಋತೇನ ಋತಂ ಧರುಣಂ"** [ಋಗ್ವೇದ:-5.15.2.] "ದಿವ್ಯದೇವನ ಧಾರಕಧರ್ಮದಲ್ಲಿ, ಋತದಿಂದಲೇ ಗೃಹೀತವಾಗುವ ಧಾರಕ–ಋತವನ್ನು ಧರಿಸುತ್ತಾರೆ." ಎಂಬ ಮಾತಿನಿಂದ "ಧಾರಣಶಕ್ತಿಸಂಪನ್ನ ಧರ್ಮ, ಧಾರಣಶಕ್ತಿಸಂಪನ್ನ ಋತ - ಎರಡು ಸಮಾನಾರ್ಥಕ." – ಎಂದು ಮಾತ್ರವಲ್ಲದೆ, "ಆ ಧರುಣವಾದ ಋತವನ್ನು ಧರಿಸುವ ಸಾಧನವೂ ಋತವೇ" – ಎಂದು, ಧರ್ಮಧಾರಣ ಸಾಮರ್ಥ್ಯಪ್ರದ ವೇದಜ್ಞಾನವನ್ನೂ, 'ಋತ' ಎಂದೇ ನಿರ್ದೇಶಿಸಿದೆ. ಈ ಆಶಯದ ಮಂತ್ರಗಳನ್ನು ಪಾಠಕರು ಈ ಮುನ್ನವೂ ಓದಿದ್ದಾರೆ.

ಇನ್ನೂ ಋತಶಬ್ದದ ವ್ಯಾಖ್ಯಾನ ಬೇಕೆಂದರೆ, ಮಂತ್ರದ ಅರ್ಥವನ್ನು ಹೇಳುತ್ತಾ ಮಹರ್ಷಿ ದಯಾನಂದರು - **"ಋತೇನ ಸತ್ಯರೂಪೇಣ ಬ್ರಹ್ಮಣಾ"** – "ಋತದಿಂದ ಎಂದರೆ – ಸತ್ಯರೂಪವಾದ ಬ್ರಹ್ಮದಿಂದ ವೇದದಿಂದ" - ಎಂದು ಬರೆದಿದ್ದಾರೆ. "ಸಾಯಣರು **'ಋತೇನ ಅವಶ್ಯಂ ಭಾವಿತಯಾ ಸತ್ಯೇನ ಫಲೇನ'** – ಎಂದರೆ, "ಅವಶ್ಯವಾಗಿ ನಿಶ್ಚಯೀಕೃತದ ಸತ್ಯವಾದ ಫಲದಿಂದ" - ಎಂದಿದ್ದಾರೆ. ಯಾಸ್ಕಾಚಾರ್ಯರು "ಋತಂ ಸತ್ಯಂ ವಾ ಯಜ್ಞಂ ವಾ." [ನಿ.4.3.19.3.]–ಋತವೆಂದರೆ ಸತ್ಯ ಅಥವಾ ಯಜ್ಞವನ್ನು"- ಎಂದು ಎರಡರ್ಥಗಳನ್ನು ಹೇಳಿದ್ದಾರೆ. **'ಋತಮಿತ್ಯುದಕನಾಮ'** [ನಿರುಕ್ತ:-2.7. 25.3.] "ಋತವೆಂಬುದು ಜಲದ ಹೆಸರು" ಎಂದಿದ್ದಾರೆ. ಮಾಧವರು ಮತ್ತು ಸ್ಕಂದ ಸ್ವಾಮಿಗಳು 'ಋತಾವೃಧೌ' ಎಂಬೀ ಪದಕ್ಕೆ **'ಸತ್ಯಸ್ಯ ವರ್ಧಯಿತಾರೌ'**–"ಸತ್ಯವನ್ನು ಉನ್ನತಗೊಳಿಸುವವರು" ಎಂದು ವ್ಯಾಖ್ಯಾನ ಮಾಡಿದ್ದಾರೆ. ಯಾಜ್ಞಿಕೀ ಪ್ರವೃತ್ತಿಯ ಪರಿಪೋಷಕ ಸಾಯಣರೂ ಸತ್ಯ, ಯಜ್ಞ, ಉದಕ - ಎಂಬರ್ಥಗಳನ್ನೇ ಹೇಳಿರುತ್ತಾರೆ. ಹೀಗೆ ಋತಶಬ್ದಕ್ಕೆ ಸತ್ಯ, ಯಜ್ಞ, ಜಲ, ವೇದ -ಧರ್ಮ (ಸಾರ್ವಭೌಮ ಈಶ್ವರೀಯ ನಿಯಮ) ನ್ಯಾಯ – ಹೀಗೆ ನಾನಾರ್ಥಗಳನ್ನು ಹೇಳಿದ್ದರೂ, ಒಂದು ವೇದಜ್ಞಾನವನ್ನಂಗೀಕರಿಸಿದರೆ ಸಾಕು; ಉಳಿದೆಲ್ಲವೂ ತಮ್ಮಷ್ಟಕ್ಕೆ ತಾವೇ ಕರಗತವಾಗುತ್ತವೆ.

ಇನ್ನು ಈ ಮಂತ್ರದಲ್ಲಿ ಮಿತ್ರ – ವರುಣರಿಗೆ ವಿಶೇಷಣವಾಗಿ ಬಂದಿರುವ "ಋತಾವೃಧೌ, ಋತಸ್ಪೃಶೌ" - ಈ ಎರಡನ್ನು ಗಣನೆಗೆ ತಂದು ಕೊಳ್ಳೋಣ. ಈಶ್ವರನು

ವೇದ ಜ್ಞಾನದಿಂದ ಮಾನವಮಾತ್ರರ ವರ್ಧನವನ್ನು ಸಾಧಿಸುವ ಕಾರಣ 'ಋತಾವೃಧ್' ಹಾಗೂ ಜೀವನು ಅದೇ ಜ್ಞಾನದಿಂದ ಆತ್ಮಾಭ್ಯುದಯ ಸಾಧಿಸುವ ಕಾರಣ ಋತಾವೃಧ್'; ಅವರಿಬ್ಬರೂ ಅದೇ ವೇದಜ್ಞಾನದಿಂದ ಮಾನವಮಾತ್ರರ ಹೃದಯವನ್ನು ಸ್ಪರ್ಶಿಸುವ ಕಾರಣದಿಂದ ಈಶ್ವರ ಜೀವರಿಬ್ಬರನ್ನೂ 'ಋತಸ್ಪೃಶಾ' ಎಂದು ಹೇಳಲಾಗಿದೆ. ವೇದಗಳ ಮರ್ಮಸ್ಪೃಕ್ತ್ವದ - ಹೃದಯವನ್ನು ಮುಟ್ಟುವಿಕೆಯ - ಅದ್ಭುತ ಸಾಮರ್ಥ್ಯದಲ್ಲಿ ಲೇಶ ಮಾತ್ರವೂ ಅತಿಶಯೋಕ್ತಿಯಿಲ್ಲವೆಂದು ೫೦ ವರ್ಷಗಳ ನಿರಂತರ ವೇದಾಧ್ಯಯನಾನಂತರ ನಾವು ಯಾವುದೇ ವಿರೋಧ ಭಯವೂ ಇಲ್ಲದೆ ಸಾರಿಹೇಳಬಲ್ಲೆವು. ಹತಾಶರೂ, ಹತ ಪ್ರಜ್ಞರೂ, ಹತೋತ್ಸಾಹರೂ ಆದ, ಎಂತಹ ಘೋರ ನಿರಾಶಾವಾದಿಗಳೇ ಆಗಿರಲೊಲ್ಲ ರೇಕೆ, ಅವರ ನಿರಾಶಾವಾದ ಕೇವಲ ವೇದಶಬ್ದಗಳ ಸ್ಫೂರ್ತಿದಾಯಕಶಬ್ದಗಳು ಹೃದಯ ವೀಣೆಯ ತಂತಿಗಳಿಂದ ಝಂಕೃತವಾಗಿ, ವಾತಾವರಣವನ್ನು ತುಂಬುವವರೆಗೆ ಮಾತ್ರ. ಈ ಕರೆ ಕೇಳಿಯೂ ಕಿವಿಮುಚ್ಚಿ ಕುಳಿತುಕೊಳ್ಳುವ, ಕರ್ಮಸಾಫಲ್ಯದಲ್ಲಿ ನಂಬಿಕೆಯಿಂದ ಹತಭಾಗ್ಯ ನಿರಬಹುದೇ ? ಆಲಿಸಿರಿ:-

**ಇಂದ್ರಸ್ಯ ವೃಷ್ಣೋ ವರುಣಸ್ಯ ರಾಜ್ಞ**
**ಆದಿತ್ಯಾನಾಂ ಮರುತಾಂ ಶರ್ಧ ಉಗ್ರಂ ।**
**ಮಹಾಮನಸಾಂ ಭುವನಚ್ಯವಾನಾಂ**
**ಘೋಷೋ ದೇವಾನಾಂ ಜಯತಾಮುದಸ್ಥಾತ್ ॥**

[ಅಥರ್ವ:- 19. 13. 10.]

"ಸುಖ-ಸಮೃದ್ಧಿಗಳ, ಉತ್ಕ್ರಾಂತಿ-ಶಾಂತಿಗಳ ಅವಿಚ್ಛಿನ್ನವಾದ ಮಳೆಯನ್ನು ಸುರಿಸುವ ಸರ್ವರ ಪಾಪ - ತಾಪ - ನಿವಾರಕನೂ, ವರಣೀಯತಮನೂ ಆದ, ವಿಶ್ವ ಸಾಮ್ರಾಟ್ ಸರ್ವೇಶ್ವರನ ಅನುಗ್ರಹಿತರೂ, ಪ್ರಾಣದಾಯಕರೂ ಆದ, ಸತ್ಯ - ಧರ್ಮಕ್ಕಾಗಿ ಹೋರಾಡುತ್ತಾ ಆತ್ಮಬಲಿದಾನಕ್ಕೂ ಹಿಂಜರಿಯದ ಸಂಯತಾತ್ಮರ ಪಂಥಾಹ್ವಾನ ನೀಡುವ ಹಾಗೂ ಸ್ಪರ್ಧಿಸುವ ಅನುಪಮ ಪರಾಕ್ರಮ ತನಗೆ ತಾನೇ ಉಪಮಾನ. ಮಹಾಮನಸ್ಕರೂ, ತಮ್ಮ ನಿಃಸ್ವಾರ್ಥಸಂಘರ್ಷದಿಂದ ಪೃಥಿವಿಯ ವರ್ತಮಾನವನ್ನೇ ಮಗುಚಿಹಾಕಬಲ್ಲವರೂ ಆದ, ವಿಜಯೋತ್ಸುಕ, ನಿತ್ಯವಿಜೇತೃ ದೇವ - ಮಾನವರು ನೀವು. ಗೆಲುವಿನ ಮೇಲೆ ಗೆಲುವಿನ ಮುಕುಟವನ್ನಿಡುತ್ತಾ ಮುಂದೆ - ಮುಂದೆ ಸಾಗುವ ದೇವಜನರೆ! ನಿಮ್ಮ ಜಯಘೋಷ ಗಗನಾಂತರಾಳವನ್ನೆಲ್ಲಾ ತುಂಬಿ ಮೇಲೇರುತ್ತಿದೆ.!" ವೇದಗಳ ಈ ಆಹ್ವಾನ ಜನರ ಸುಪ್ತ ಚೇತನವನ್ನು ಎಚ್ಚರಿಸಲಾರದೇ ಹೋದರೆ, ಜನರಲ್ಲಿ ಚೇತನವೇ ಇಲ್ಲವೇನೋ - ಎಂಬ ಸಂಶಯ ಸರ್ರನೆ ಸಿಡಿದೆತ್ತಿ, 'ನಾವು ಜೀವಂತರೋ, ಮೃತರೋ?' ಎಂಬ ವಿಡಂಬನಾತ್ಮಕ ಪ್ರಶ್ನೆಯನ್ನು ಮೇಲೆತ್ತಿ ನಿಲ್ಲಿಸುವುದು ಸಹಜ.

ವೇದಗಳನ್ನೋದಿದವನಾವನೂ ಸೋಲನಪ್ಪಿಕೊಳ್ಳುವ, ಒಪ್ಪಿಕೊಳ್ಳುವ ಸಂಭವ ಮೂರುಕಾಲಕ್ಕೂ ಇಲ್ಲ. ಹೀಗೆ ಪ್ರಭು ಋತಸ್ಪೃಶ್; **ಹೀಗೆಯೇ** ಜೀವನೂ ಋತಸ್ಪೃಶ್ ಸಂದೇಹವಿಲ್ಲ ಸನಿಯ ಸುಳಿಯಲಾರದು; ಸೋಲಿನ ಸೊಲ್ಲನ್ನು ಸೂಚಿಸುವ ಸಂಭವ ಅಸಂಭವಪ್ರಾಯ.

ಇನ್ನುಳಿದುದು ಬೃಹತ್ಕ್ರತುವಿನ ಬಣ್ಣನೆಯಷ್ಟೇ. ಬೃಹತ್ ಎಂದರೆ ದೊಡ್ಡದು. **'ಯೋ ವೈ ಭೂಮಾ ತತ್ಸುಖಂ; ನಾಲ್ಪೇ ಸುಖಮಸ್ತಿ'** - ಎಂಬ ಛಾಂದೋಗ್ಯ ವಚನವನ್ನು ಭೌತಿಕಾರ್ಥದಲ್ಲಿ ಗ್ರಹಿಸಿದಲ್ಲಿ, ಮಾನವ - ಸಮಾಜದ 'ಇತಿಶ್ರೀ' ಬಹುದೂರ ಉಳಿಯದು. **'ದೊಡ್ಡದಾವುದೋ ಅದೇ ಸುಖಪ್ರದ; ಚಿಕ್ಕದರಲ್ಲಿ, ಅಲ್ಪದಲ್ಲಿ ಸುಖವಿಲ್ಲ.'**- ಎಂದಾಗ, ಔಪನಿಷತ್ಕ ಮಹರ್ಷಿಯ ದೃಕ್‌ಪಥದಲ್ಲಿದ್ದುದು ಭೌತಿಕ ಸಂಪತ್ತಿನ ರಾಶಿಯಲ್ಲ; ಆಧ್ಯಾತ್ಮಿಕ ಸಂಪತ್ತಿನ ಪರ್ವತಮಾತ್ರ. ಅಲ್ಪತನಕ್ಕೆ ನೆಲೆಯಾದ ಹೃದಯ ಹೊಲಸು ಹೃದಯ; ಕೀಳ್ತನಕ್ಕೆ ನೆಲೆಯಾದ ನಾಲಗೆ ಕೊಳಕುನಾಲಗೆ: ಚಿಕ್ಕತನಕ್ಕೆ ಚೊಕ್ಕತನವೀವ ಚಿಕ್ಕ ಮನಸ್ಸು, ಚೀತ್ಕಾರವನ್ನೆಬ್ಬಿಸುವ ಮ್ಲಾನ ಮನವಮಾತ್ರ. ದೊಡ್ಡತನ ಒಳಗಿನಿಂದ ಬೆಳೆದು ಬರಬೇಕು. ಅಲ್ಪತನ ಅಳಿದು ಹೋಗಿ, ಅಳಿಸಿಹೋಗಿ, ಆವುದೋ ಅತೀತದ ಕಹಿನೆನಹಾಗಿ, ಕೊನೆಗೆ, ಕೇವಲ ಒಂದು ಪದವಾಗಿ ಉಳಿದಾಗ ಮಾತ್ರ ಮಾನವ ಸಮಾಜ ಶಾಂತಿಯಿಂದ ಉಸಿರಾಡಬಲ್ಲದು.

ಹಿರಿದಾಗಬೇಕು, ದಿಟ. ಆದರೆ - ಯಾವುದು ಹಿರಿದಾಗಬೇಕು ? ಈ ಮಂತ್ರ ಉಗ್ಗಡಿಸುತ್ತಿದೆ - **'ಕ್ರತು'** - ಎಂದು. ಅಹುದು ಕ್ರತು ಹಿರಿದಾಗಬೇಕು; ಹಿಗ್ಗುತ್ತಲೇ ಹೋಗಬೇಕು. ಯಥಾಪ್ರಕಾರ ಸಾಯಣರು **'ಕ್ರತುಂ ಇಮಂ ಸೋಮಯಾಗಂ'** - ಕ್ರತುವನ್ನು – ಎಂದರೆ ಸೋಮಯಾಗವನ್ನು" ಎಂದು ಹೇಳಿ ಮುಗಿಸಿದರು. ಶ್ರೀ॥ ಮಧ್ವರು ತಮ್ಮ 'ಋಗ್ಭಾಷ್ಯ'ದಲ್ಲಿ **'ಮಹಾಕ್ರತುಂ ಮಹತ್ಸುಖಂ'**-ಎಂದು ಇದೇ ಮಂತ್ರದ ತಮ್ಮ ಭಾಷ್ಯಕ್ಕೆ ಇತಿಶ್ರೀ ಹಾಡಿದ್ದಾರೆ. ವಸ್ತುತಃ, ಈ ಕ್ರತುಶಬ್ದ ಮಹದರ್ಥಪೂರ್ಣವಾಗಿದೆ, ಪೌರಾಣಿಕ ಸಾಹಿತ್ಯದಲ್ಲಿ, ಕಲ್ಪಿತ ಸ್ವರ್ಗದ, ಕಲ್ಪಿತನೇ ಆದ ಮಹಾನ್‌ಶಾಸಕ, ಶಚೀದೇವಿಯ ಪತಿಯಾದ, ಅಮರಾವತೀ ನಿವಾಸೀ 'ಇಂದ್ರ'ನನ್ನು 'ಶತಕ್ರತು' ಎಂದು ಕರೆದಿದ್ದಾರೆ. 'ಕ್ರತು' ಎಂದರೆ 'ಯಜ್ಞ'ವೆಂದೂ, ಯಾವನು ನೂರುಯಜ್ಞಗಳನ್ನು ಮಾಡುತ್ತಾನೋ, ಅವನೇ 'ಇಂದ್ರತ್ವ'ವನ್ನು ಪಡೆಯುತ್ತಾನೆಂದು ಈ ಪರಂಪರೆಯ ನಂಬಿಕೆ. ಯಾವ ಭಾಷ್ಯಕಾರನೂ, ಪರಂಪರಾಗತ ಪಥಗಾಮಿಯಾದ ಭಾಷ್ಯಕಾರನೂ, ನಿರುಕ್ತಕಾರರು ವರ್ಣಿಸಿರುವ **'ತರ್ಕಋಷಿ'**ಯ ಕಡೆ ಗಮನವನ್ನೇ ಕೊಡದೆ, ಕಣ್ಣುಗಳನ್ನು ಮುಚ್ಚಿಕೊಂಡೇ ಒಂದೊಂದೇಕೆ, ಹತ್ತುಹತ್ತು ಆನೆಗಳಿಗೂ ಹೊರಲಾರದಷ್ಟು ಭಾರದ ಬೃಹದ್ಗ್ರಂಥಗಳನ್ನು ಬರೆಯುತ್ತಾ ಹೋದುದು ವೈದಿಕಧರ್ಮೀಯರ ದುರ್ಭಾಗ್ಯವಷ್ಟೇ.

ಕ್ರತುಶಬ್ದಕ್ಕೆ 'ಯಜ್ಞ' ಎಂಬರ್ಥವೂ ಇದೆ. ಮಹರ್ಷಿ ದಯಾನಂದರು ಈ ಮಂತ್ರದ ಮೇಲಣ ತಮ್ಮ ಭಾಷ್ಯದಲ್ಲಿ "ಸರ್ವಂ ಸಂಗತಂ ಸಂಸಾರಾಖ್ಯಂ ಯಜ್ಞಂ." ಎಂದರೆ, "ಅಣುವಿನೊಂದಿಗೆ ಅಣುಕೂಡಿ ಒಂದಾಗಿ ರಚಿತವಾಗಿರುವ ಜಗತ್ತೆಂಬ ಯಜ್ಞ" – ಎಂದುಹೇಳಿ, ಕ್ರತುಶಬ್ದದ ಅರ್ಥದ ಕ್ಷೇತ್ರವನ್ನು ವಿಶಾಲಗೊಳಿಸಿದ್ದಾರೆ. ಯಜುರ್ವೇದ ಮಾನವನು ತನ್ನ ಜೀವನದ ಲೀಲಾಸಂವರಣಕ್ಕೆ ಸನ್ನದ್ಧನಾಗುವ ಕಾಲಕ್ಕೆ ನೆನಪಿನಲ್ಲಿಡಲಿ - ಎಂಬ ಆದೇಶನೀಡುತ್ತಾ **"ಓಂ ಕ್ರತೋ ಸ್ಮರ."** [40.15.] "ಓಂ ಕ್ರತೋ! ಕರ್ಮಶೀಲ, ವಿಚಾರಶೀಲ ಜೀವ! ಓಂ - ಎಂದು ಸ್ಮರಿಸು" ಎನ್ನುತ್ತದೆ. ಈ ಮಂತ್ರದಲ್ಲಿ ಕ್ರತುಶಬ್ದ ಯಾವುದೇ ಕ್ರಿಯೆಯ ಸೂಚಕವಾಗಿ ಬಂದಿಲ್ಲ; ಆದರೆ - ಕ್ರಿಯಾವಾನ್ ಹಾಗೂ ವಿಚಾರ

ವಾನ್ ಜೀವನ ಸಲುವಾಗಿ ಬಂದಿದೆ. ಜೊತೆಗೆ, ಉದಾಹರಣೆಗೆ, "**ಆ ನೋ ಭದ್ರಾಃ ಕ್ರತವೋಯಂತು ವಿಶ್ವತಃ**" [ಯಜು:-25.14.] - "[ನಃ] ನಮಗೆ, [ಆ] ಎಲ್ಲೆಡೆ ಯಿಂದಲೂ, [ಭದ್ರಾಃ ಕ್ರತವಃ] ಮಂಗಳಕರವಾದ ಆಲೋಚನೆಗಳೇ. [ಯಂತು] ಪ್ರಾಪ್ತ ವಾಗುತ್ತಿರಲಿ" - ಎಂದು, ಆಲೋಚನೆ, ವಿಚಾರ - ಎಂಬರ್ಥದಲ್ಲಿಯೂ ಬಂದಿರುವುದನ್ನು ಕಾಣುತ್ತೇವೆ. ಇದೇ ಯಾಜುಷೀಶ್ರುತಿಯಲ್ಲಿ ಮುನ್ನಡೆದು ಬರುವ '**ಅದಭ್ಧಾಸಃ, ಅಪರೀತಾಸಃ, ಉದ್ಭಿದಃ**' ಎಂಬವೆ - "ಅದುಮಲು ಅಸಾಧ್ಯವಾದ, ಗೊತ್ತುಗುರಿಯಿಲ್ಲದೆ ಚದುರಿ ಹೋಗದ ಮತ್ತು ಕರಿದೊಯ್ಯುವ ಕ್ರಮಶಃ ಹಿರಿಮೆಯತ್ತ ಸಾಗುವ" - ಎಂಬ ವಿಶೇಷಣ ಗಳನ್ನು ಚಿತ್ತಾಗ್ರದಲ್ಲಿ ನಿಲ್ಲಿಸಿಕೊಂಡಾಗ. ಇದೇ '**ಭದ್ರಾಃ ಕ್ರತವಃ**' ಎಂಬ ಶಬ್ದಗಳು 'ಮಂಗಳಕಾರಿಗಳಾದ ಕರ್ಮನಿಷ್ಠರನ್ನೂ, ವಿಚಾರಶೀಲರನ್ನೂ ಸೂಚಿಸುತ್ತವೆ.' – ಎಂಬ ನಿರ್ಧಾರವೂ ತಪ್ಪಾಗಲಾರದು ಎನಿಸುತ್ತದೆ.

ಈ ವಿಶ್ಲೇಷಣದಿಂದ, ಕ್ರತುಶಬ್ದ ಕ್ರ್ಞ್ ಧಾತು ಜನ್ಯವಾದ ಶಬ್ದ ಕೇವಲ ಉನ್ನತ ಆಲೋಚನೆಗಳನ್ನು ಹಾಗೂ ಉತ್ತಮ ಕರ್ಮಗಳನ್ನು ಮಾತ್ರವಲ್ಲ; ಮಂಗಳವಿಚಾರಶೀಲರೂ, ಮಂಗಳಕರ್ಮನಿಷ್ಠರೂ ಆದ ಪುರುಷರನ್ನೂ ಸಹ ನಿರ್ದೇಶಿಸುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ. ಶಬ್ದಕೋಶಗಳಲ್ಲಿ 'ಕ್ರತು' ಶಬ್ದಕ್ಕೆ ಯಜ್ಞ, ಬುದ್ಧಿಕೌಶಲ, ಪ್ರತಿಭೆ, ಶಕ್ತಿ, ಸಾಮರ್ಥ್ಯ ಯೋಜನೆ, ಉದ್ದೇಶ್ಯ, ಸಂಕಲ್ಪ, ಕಾಮನೆ, ಸ್ಫೂರ್ತಿ, ನೈಪುಣ್ಯ, ಸಾಕ್ಷಾತ್ಕಾರ, ಅರ್ಚನೆ – ಮೊದಲಾದ ಅರ್ಥಗಳನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಈ ಸರ್ವವನ್ನೂ **ಶುಭ ಕರ್ಮ, ಬುದ್ಧಿಕೌಶಲ, ದೃಢನಿರ್ಧಾರ** ಹಾಗೂ **ಶಕ್ತಿ** - ಈ ನಾಲ್ಕರಲ್ಲಿ ಸಮಾವೇಶಗೊಳಿಸಬಹುದು.

ಆದರೆ, ಈ ಸ್ಥಳದಲ್ಲಿ 'ಬೃಹತ್ಕ್ರತು'ವು, "ಮಹಾನ್ ಕರ್ಮನಿಷ್ಠ. ಮಹಾನ್‌ವಿಚಾರ ಶೀಲ"-ಎಂಬುದಕ್ಕಿಂತ, "ಮಹತ್ಕರ್ಮ, ಮಹಾನ್ ವಿಚಾರ" - ಎಂಬರ್ಥವನ್ನು ಅಧಿಕವಾಗಿ ಆದರಿಸುತ್ತದೆ. ಏಕೆಂದರೆ, ಋತವರ್ಧಕರೂ, ಋತಸ್ಪೃಕ್‌ಗಳೂ ಆದ ಜೀವ-ಈಶ್ವರರು ಋತದ ಮೂಲಕ ಆವರಿಸಿ ಬರುವುದು ಮಹತ್ಕರ್ಮ-ಮಹಾನ್ ವಿಚಾರಗಳನ್ನೇ ಹೊರತು, ಮಹತ್ಕರ್ಮನಿಷ್ಠ - ಮಹದ್ವಿಚಾರಶೀಲರನ್ನಲ್ಲ. ಅಹುದು; ಮಹತ್ಕರ್ಮನಿಷ್ಠನಿಲ್ಲದ ಮಹತ್ಕರ್ಮ, ಮಹದ್ವಿಚಾರಶೀಲನಿಲ್ಲದ ಮಹದ್ವಿಚಾರ ಗಾಳಿಯಲ್ಲಿ ತೇಲಾಡುತ್ತಾ ಇರಲಾರವು. ಈ ದೃಷ್ಟಿ ಬಿಂದುವಿನಿಂದ ನಿರೀಕ್ಷಿಸಿದಾಗ, ನೇರವಾಗಿ ಅಲ್ಲವಾದರೂ, ಪರಂಪರೆಯಿಂದ, ಶೃಂಖಲೆಯಿಂದ, "**ಭಗ ಏವ ಭಗವಾನ್ ಅಸ್ತು**" ಎಂಬ [7.41.5.] ಋಕ್ಕಿನಲ್ಲಿರುವಂತಹ, ತತ್ಸ್ಥತ್ವದ, ತದಾಶ್ರಿತತ್ವದ ನಿಟ್ಟಿನಲ್ಲಿ, '**ಕ್ರತುರೇವ ಕ್ರತುಮಾನಸ್ತಿ**' – ಎಂದು ಗ್ರಹಿಸಿದಲ್ಲಿ, ಅದೂ ತಪ್ಪಾಗದು. [ಭಗವೇ ಭಗವಂತ; ಕ್ರತುವೇ ಕ್ರತುಮಂತ - ಎಂಬುದು ನಮ್ಮ ಈ ಉದ್ಧರಣಗಳ ಅರ್ಥ.

ಪಾಠಕರು ಈಗ ಮಂತ್ರದ ಪೂರ್ಣಭಾವನೆಯನ್ನು ಗ್ರಹಿಸಲು ಸಮರ್ಥರಾಗಿದ್ದಾರೆ – ಎಂದು ನಂಬುತ್ತೇವೆ. "ಈಶ್ವರ - ಜೀವರು ಶುಭ್ರವಾದ ವೇದ ಜ್ಞಾನದಿಂದ ಸತ್ಯ - ಧರ್ಮಗಳ ಸಂವರ್ಧಕರೂ, ಸತ್ಯಧರ್ಮಗಳ ಪ್ರತ್ಯಕ್ಷ ಅನುಭೂತಿಯುಕ್ತರೂ ಆಗಿ,

ಜಗತ್ತಿನಲ್ಲಿ ಬೃಹತ್ಪ್ರಮಾಣದಲ್ಲಿ ನಡೆಯುವ ಸತ್ಕರ್ಮ - ಸದ್ವಿಚಾರಗಳನ್ನು ವ್ಯಾಪಿಸುತ್ತಾರ: ಎಂದರೆ, ಭಗವಂತನ ಈ ಅದ್ಭುತ ಸೃಷ್ಟಿಯಲ್ಲಿ ನಡೆಯುವ ಪ್ರತಿಯೊಂದು ಶುಭಕರ್ಮವೂ-ಸದ್ವಿಚಾರವೂ ಪ್ರಥಮತಃ ಈಶ್ವರನನ್ನೂ, ತದನಂತರ ಜೀವನನ್ನೂ ಸ್ಪರ್ಶಿಸುತ್ತವೆ. ನಾಸ್ತಿಕಭಾವನಾಭರಿತವಾದ ಯಾವುದೇ ಕರ್ಮವೂ, ಯಾವುದೇ ವಿಚಾರವೂ ನಡೆಯುವಂತಾಗುವುದು." – ಎಂಬಿಷ್ಟನ್ನು ಸ್ಮೃತಿಪಥದಲ್ಲಿರಿಸಿಕೊಂಡರೂ ಸಾಕು; ಮಾನವ ದೇವ-ಮಾನವನಾದಾನು; ನರಕದಂತಿರುವ ಇದೇ ನಮ್ಮ ನೆಲ ನಾಕದ ನೆಲೆಯಾದೀತು.

## ಸಂಹಿತಾ ವಿಭಾಗ.

**ಕವೀ ನೋ ಮಿತ್ರಾವರುಣಾ ತುವಿಜಾತಾ ಉರುಕ್ಷಯಾ ।**

**ದಕ್ಷಂ ದಧಾತೇ ಅಪಸಂ ॥೯॥**

**ಪದಪಾಠ:–** ಕವೀ, ನಃ, ಮಿತ್ರಾವರುಣಾ, ತುವಿಜಾತೌ, ಉರುಕ್ಷಯಾ, ದಕ್ಷಂ, ದಧಾತೇ ಅಪಸಂ ॥೯॥

**ಅನ್ವಯ:-** ಕವೀ ತುವಿಜಾತೌ ಉರುಕ್ಷಯಾ ಮಿತ್ರಾವರುಣೌ ನಃ ದಕ್ಷಂ ಅಪಸಂ ದಧಾತೇ ।

**ಶಬ್ದಾರ್ಥ:-** [ಕವೀ] ಮೇಧಾವಿಗಳೂ, ಕ್ರಾಂತದರ್ಶನರೂ, ನಡೆಯುವುದನ್ನೆಲ್ಲಾ ನಡೆದುದನ್ನೆಲ್ಲಾ ತಿಳಿದುಕೊಳ್ಳಬಲ್ಲವರೂ, [ತುವಿಜಾತೌ] ಬಹು ಜನರ ನಡುವೆ ಪ್ರಸಿದ್ಧರಾದವರೂ,ಬಹು ಬಹು ಜನ್ಮ ತಾಳಿದವರೂ, [ಉರುಕ್ಷಯಾ] ಬಹಳ ಬಹಳ, ವಿಸ್ತಾರವನ್ನುಳ್ಳ ವಾಸಸ್ಥಾನವನ್ನುಳ್ಳವರೂ ಆದ, [ಮಿತ್ರಾವರುಣೌ] ಸರ್ವಮಿತ್ರನಾದ ಭಗವಂತನು ಮತ್ತು ವರಣೀಯನಾದ ಜೀವನು – ಇಬ್ಬರೂ, [ನಃ] ನಮ್ಮ ಸಲುವಾಗಿ, [ದಕ್ಷಂ] ಬಲವನ್ನೂ, [ಅಪಸಂ] ಕರ್ಮವನ್ನೂ, [ದಧಾತೇ] ನಿರ್ವಹಿಸುತ್ತಾರೆ.

**ತಾತ್ಪರ್ಯ:–** ಪ್ರಜ್ಞಾನಸ್ವರೂಪನಾದ ಪರಮಾತ್ಮನು ಮತ್ತು ಅಲ್ಪಜ್ಞನೇ ಆದರೂ ಘಟಿಸುವುದನ್ನು ಗ್ರಹಿಸಬಲ್ಲ ಚೇತನ ಜೀವಾತ್ಮನು ವಿಶಿಷ್ಟ ಗುಣಸಂಪನ್ನರಾಗಿದ್ದಾರೆ. ಪರಮಾತ್ಮನು ಮಹೋನ್ನತನು ಮತ್ತು ಪ್ರಸಿದ್ಧತಮನು; ಜೀವಾತ್ಮನು ಮತ್ತೆ ಮತ್ತೆ ಜನ್ಮತಾಳಿಬರುವವನು. ಪರಮಾತ್ಮನು ಅನಂತನಾದ ಕಾರಣ, ಅವನ ವಾಸಸ್ಥಾನವೂ ಕೂಡ ಅನಂತವೇ; ಜೀವಾತ್ಮನು ನಾನಾ ಯೋನಿಗಳಲ್ಲಿ, ನಾನಾ ಸ್ಥಾನಗಳಲ್ಲಿ ಜನ್ಮಧರಿಸಿ ಮತ್ತೆ ಮತ್ತೆ ಬರುತ್ತಿರುವ ಕಾರಣ, ಅವನ ವಾಸಸ್ಥಾನವೂ ವಿಸ್ತೃತವೇ ಆಗಿರುತ್ತದೆ. ಸರ್ವಶಕ್ತಿವಾನ್ ಈಶ್ವರನೂ, ಪರಿಚ್ಛಿನ್ನನಾದರೂ ಚೇತನನಾದ ಜೀವನೂ ನಮ್ಮ ಸಲುವಾಗಿ ಶಕ್ತಿಯನ್ನೂ, ಕರ್ಮವನ್ನೂ ಉತ್ಪಾದಿಸುತ್ತಾರೆ.

**ಭಾಷ್ಯ:**— ಈ ಮಂತ್ರವೂ ಮೇಲಣ ಮಂತ್ರಗಳಂತೆ ಈಶ್ವರನ ಮತ್ತು ಜೀವನ ವಿಶಿಷ್ಟ ಲಕ್ಷಣಗಳನ್ನು ನಮ್ಮೆಲ್ಲರ ಮುಂದೆ ಮಂಡಿಸುತ್ತಿದೆ. ಮಿತ್ರ ಹಾಗೂ ವರುಣ — ಈ ಶಬ್ದಗಳ ವಿವರಣೆ ಅನಾವಶ್ಯಕ; ಓದುಗರಿಗೆ ಅದು ನೆನಪಿನಲ್ಲಿಯೇ ಇರಬಹುದು. "ಕವೀ" "ತುವಿಜಾತೌ" ಹಾಗೂ "ಉರುಕ್ಷಯಾ - ಈ ಶಬ್ದಗಳ ಪದರಗಳನ್ನು ಕಳಚಿ ವಿವೇಚಿಸೋಣ. ಈ ಶಬ್ದತ್ರಯ ಈಶ್ವರ - ಜೀವರಿಬ್ಬರಿಗೂ ಅನ್ವಯಿಸುತ್ತದೆ. "ಕವೀ" ಎಂಬುದು 'ಕವಿ' ಶಬ್ದದ ದ್ವಿವಚನರೂಪ. "ಇಬ್ಬರು ಕವಿಗಳು" ಎಂಬುದಾಯಿತು ಶಬ್ದಾರ್ಥ. ಮಹರ್ಷಿ ದಯಾನಂದರು ನಿರುಕ್ತದ **"ಕವಿರ್ಮೇಧಾವೀ ಕ್ರಾಂತದರ್ಶನೋ ಭವತಿ, ಕವತೇ ರ್ವಾ."** [6. 2. 13, 2] ಎಂಬ ವಾಕ್ಯವನ್ನುದ್ಧರಿಸಿ, "ಕವಿಯೆಂದರೆ ಬುದ್ಧಿಶಾಲಿ; ನಡೆಯುವುದೆಲ್ಲದರ ಒಳಹೊಕ್ಕು ನೋಡಬಲ್ಲವನು; ಅಥವಾ ಶಬ್ದೋಚ್ಚಾರಣೆ (ಉಪದೇಶ) ಮಾಡುವುದರಿಂದ ಅವನು ಕವಿ" - ಎಂದು ಭಾಷಾಂತರಿಸುತ್ತಾರೆ. ವಸ್ತುತಃ, ಅಕ್ಷರಕ್ಕೆ ಅಕ್ಷರ ಕೂಡಿಸಿ, ಪದಕ್ಕೆ ಪದ ಜೋಡಿಸಿ, ಯಾವುದೋ ಛಂದಸ್ಸಿನಲ್ಲಿ ಏನೇನೋ ಬರೆದು, ಅಥವಾ ಛಂದಃಶಾಸ್ತ್ರಕಾರ ಆಚಾರ್ಯ ಪಿಂಗಳರಿಗೆ ತಂಗಳನ್ನು ಬಡಿಸಿ, ಗದ್ಯವೇ ಆಗಿರುವ, ಆದರೆ ಪದ್ಯವೆಂದು ತಾವೇ ಕರೆಯುವ ಕೃತಿಗಳನ್ನು ಕವಿ — ಸಮ್ಮೇಳನಗಳಲ್ಲಿ ಮೇಜನ್ನು ಬಡೆಯುತ್ತಾ, ವೇದಿಕೆಯನ್ನು ಗುಡುಗಿಸುತ್ತಾ ಹಾಡುವ ಜನರಲ್ಲ ಕವಿಗಳು. ಮೊದಲಾಗಿ 'ತನ್ನದು' ಎಂದು ಹೇಳಿಕೊಳ್ಳಬಲ್ಲ ಬುದ್ಧಿಯೂ ಇರಬೇಕು; ಸುತ್ತ - ಮುತ್ತ ಜನಜೀವನದಲ್ಲಿ ದಿನ - ದಿನ ಜರುಗುತ್ತಿರುವ ಚಿಕ್ಕ - ದೊಡ್ಡ ಘಟನೆಗಳ ಮರ್ಮವನ್ನು ಸ್ಪರ್ಶಿಸುವ ತನ್ನದೇ ಆದ ಸಾಮರ್ಥ್ಯವೂ ಇರಬೇಕು; ಈ ಅನುಭೂತಿಯನ್ನು ಜನ-ಜನದ ಮನಮುಟ್ಟುವ ರೀತಿಯಲ್ಲಿ ಹೇಳುವ ಶಬ್ದ - ಸಂಪತ್ತಿಯೂ ಇರಬೇಕು. ಈ ಲಕ್ಷಣಗಳಿಗೆ ಸಹಜವಾಗಿಯೇ ಹೊಂದಿಕೊಳ್ಳುವ ಮೂಲಕವಿ — ಎಂದರೆ ಸರ್ವಜ್ಞನಾದ ಪರಮಾತ್ಮನೇ ಪ್ರಥಮಸ್ಥಾನೀಯನಾಗಿರುತ್ತಾನೆ. **"ವಿಶ್ವಾ ರೂಪಾಣಿ ಪ್ರತಿಮುಂಚತೇ ಕವಿಃ"** [ಋಗ್ವೇದ:— 5. 81. 2.] "ಕವಿಯಾದ ಪರಮಾತ್ಮನು ಸಮಸ್ತರೂಪಗಳನ್ನೂ ಅಭಿವ್ಯಕ್ತಪಡಿಸುತ್ತಾನೆ."; **"ಕವಿರ್ಮನೀಷೀ ಪರಿಭೂಃ ಸ್ವಯಂಭೂಃ"** [ಯಜು:— 40. 8.] "ಸರ್ವೋತ್ತಮನೂ, ಅನಾದಿಯೂ ಆದ ಪರಮಾತ್ಮನು ಕವಿ; ಮನಿಷೀ." **"ದೇವಸ್ಯ ಪಶ್ಯ ಕಾವ್ಯಂ ನ ಮಮಾರ ನ ಜೀರ್ಯತಿ."** [ಅಥರ್ವವೇದ:-10.8.32] "ಆ ದೇವ ದೇವನ ಕಾವ್ಯವಾದ ವೇದಗಳನ್ನು ನೋಡು; ಮಾನವೀವಾಣಿಯ ಹಿಡಿತಕ್ಕಂದದ ವಿಶ್ವರಚನಾಕೃತಿಯನ್ನು ನೋಡು. ಅದು ನಾಶಹೊಂದದು; ಜೀರ್ಣವೂ ಆಗದು" - ಎಂದು ವೇದಗಳು ಸರ್ವಪ್ರಥಮ ಕವಿ ಪರಮಾತ್ಮನೇ — ಎಂದು ಸಾರುತ್ತಿವೆ. ಇಂತಹ ಸರ್ವಜ್ಞತ್ವ ಸರ್ವಗತ್ವವಿಲ್ಲದ ಜೀವನ ಬುದ್ಧಿಗೆ ಅಂದದಿರಬಹುದು; ಆದರೆ, ನೈಮಿತ್ತಿಕ ಜ್ಞಾನಗ್ರಹಣ ಸಮರ್ಥನಾದ ಜೀವನು ಈಶ್ವರನ ಈ ರಚನೆಯನ್ನು ನೋಡಿ, ಮೇಧಾಬಲವನ್ನು ವರ್ಧಿಸಿಕೊಂಡು, ಮಾನವ - ಕವಿಯಾಗ ಬಲ್ಲನು. ಅಥರ್ವವೇದ ಹೇಳುತ್ತಲಿದೆ :— **"ಅಹಮಿದ್ಧಿ, ಪಿತುಷ್ಪರಿ ಮೇಧಾಮೃತಸ್ಯ ಜಗ್ರಭ । ಅಹಂ ಸೂರ್ಯಇವಾಜನಿ."** [20. 115. 1.] —"[ಅಹಂ ಇತ್] ನಾನೇ, [ಹಿ] ನಿಜವಾಗಿ, [ಪಿತುಃ] ಜಗಜ್ಜನಕನಾದ ಪರಮಾತ್ಮನ, [ಋತಸ್ಯ] ವೇದದ, [ಮೇಧಾಂ] ಬುದ್ಧಿಯನ್ನು, ಪ್ರಜ್ಞಾನವನ್ನು, [ಪರಿಜಗ್ರಭ] ಗ್ರಹಿಸಿ

ದ್ದೇನೆ. [ಅಹಂ] ನಾನು, [ಸೂರ್ಯಃಇವ] ಸೂರ್ಯನಂತೆ, [ಅಜನಿ] ಪ್ರಕಾಶಮಯನಾಗಿದ್ದೇನೆ." – ಎಂದು ಹೇಳಿಕೊಳ್ಳಬಲ್ಲ ಐತ್ಮೆ ಜೀವನಿಗೂ ಇದೆ. ಹೀಗೆ ಜೀವನೂ ಕವಿಯಾಗಬಲ್ಲನು.

**"ತುವಿಜಾತೌ"** – "ಇಬ್ಬರೂ ತುವಿಜಾತರಾಗಿದ್ದಾರೆ." ಮಹರ್ಷಿ ದಯಾನಂದರು ಈ ಶಬ್ದಕ್ಕೆ **"ಬಹುಷು ಪ್ರಸಿದ್ಧೌ"** - "ಬಹುಜನರ ನಡುವೆ ಪ್ರಸಿದ್ಧರು" ಎಂದರ್ಥ ಮಾಡಿದ್ದಾರೆ. **"ತುವೀತಿ ಬಹುನಾಮಸು ಪಠಿತಂ."** [ನಿ. 3. 1.] "ತುವಿ – ಎಂದರೆ 'ಬಹು' ಎಂಬರ್ಥ" – ಎಂಬ ಯಾಸ್ಕವಚನವನ್ನುದ್ಧರಿಸಿದ್ದಾರೆ. 'ಜನ್' ಧಾತುವಿಗೆ ಕೇವಲ 'ಹುಟ್ಟು' ಎಂಬ ಒಂದೇ ಅರ್ಥವಲ್ಲ; ಪ್ರಸಿದ್ಧನಾಗು, ಬೆಳಕಿಗೆ ಬರು, ಮೇಲೇರು – ಎಂಬರ್ಥಗಳೂ ಇವೆ. ಹೀಗೆ, ಈಶ್ವರನನ್ನು 'ತುವಿಜಾತ'ನೆಂದಾಗ 'ಬಹುಪ್ರಸಿದ್ಧ'ನೆಂದೂ, ಜೀವನನ್ನು **'ತುವಿಜಾತ'** ನೆಂದಾಗ ಬಹುಜನ್ಮಧಾರಿ - ಎಂದೂ ಗ್ರಹಿಸಬೇಕು. ಈಶ್ವರ ಅತಿಪ್ರಸಿದ್ಧನೆಂಬುದಕ್ಕೆ **"ಯಸ್ಯನಾಮ ಮಹದ್ಯಶಃ"** [32. 3.] "ಮಹದ್ಯಶಸ್ವಿಯೆಂದೇ ಯಾವನು ಹೆಸರೆತ್ತಿದ್ದಾನೋ" - ಎಂಬ ಯಾಜುಷೀಶ್ರುತಿಯೂ, ಜೀವನು ಸಾರಿಸಾರಿ ಜನ್ಮತಾಳಿ ಬರುತ್ತಾನೆಂಬುದಕ್ಕೆ **"ಆವರೀವರ್ತಿ ಭುವನೇಷ್ವಂತಃ"** [6. 9. 4.] - "ಜೀವನು ಬಾರಿಬಾರಿ ಜನ್ಮವೆತ್ತಿ ಲೋಕ - ಲೋಕಾಂತರಗಳಿಗೆ ಬಂದು – ಹೋಗಿ ಮಾಡುತ್ತಾನೆ." – ಎಂಬ ಋಕ್ಕೂ ಪ್ರಮಾಣವಾಗಿವೆ.

ಸಾಯಣರೂ 'ಕವೀ' ಎಂಬುದಕ್ಕೆ 'ಮೇಧಾವಿನೌ' ಎಂದೇ ಅರ್ಥಮಾಡುತ್ತಾರೆ. 'ತುವಿಜಾತೌ' ಎಂಬುದಕ್ಕೆ **"ಬಹೂನಾಮುಪಕಾರತಯಾ ಸಮುತ್ಪನ್ನೌ"** – "ಅನೇಕರ ಉಪಕಾರಕ್ಕಾಗಿ ಉತ್ಪನ್ನರಾದವರು." – ಎಂದು ಭಾಷಾಂತರ ಮಾಡುತ್ತಾರೆ. ಈ ಭಾಷಾಂತರ ಶ್ರೀಮಜ್ಜಯಚಾಮರಾಜ ಒಡೆಯರ ಕೃಪಾಶ್ರಯದಲ್ಲಿ ನಿರ್ಮಿತವಾದ ಪಂಡಿತ ಮಂಡಳಿಯದು; ನಮ್ಮದಲ್ಲ. "ಬಹೂನಾಮುಪಕಾರಾರ್ಥಂ" – ಎಂದಿಲ್ಲ. "ಉಪಕಾರಿತಯಾ" ಎಂದಾದರೂ ಇದ್ದಿದ್ದರೆ, "ಬಹುಜನರು ಉಪಕಾರ ಮಾಡಿದುದರಿಂದ ಹುಟ್ಟಿದವರು." – ಎಂದು ಅರ್ಥಮಾಡಬಹುದಾಗಿತ್ತು. ಮೊದಲಿನಿಂದ ಕೊನೆಯವರೆಗೆ ಭ್ರಮೋತ್ಪಾದಕವಾಗಿಯೇ ಇರುವ ಈ ಭಾಷ್ಯದ ಬಗೆಗೆ ವಿಶೇಷ ಗಮನವಿತ್ತು. ಭಾಷ್ಯ - ಕಾಯವನ್ನು ಬೃಹದ್ರೂಪಕ್ಕೆ ತರಬೇಕಾಗಿಲ್ಲ.

ಶ್ರೀ॥ ಮಧ್ವರು "ತುವಿಜಾತೌ" ಎಂದರೆ **"ಬ್ರಹ್ಮಜಾತೌ** ಎಂದು ಬರೆದು, ತುವಿ' ಎಂಬುದು 'ಬ್ರಹ್ಮನಾಮ'ವೆಂದು ಅರ್ಥಬರುವಂತೆ ಮಾಡಿದ್ದಾರೆ. ಅಲ್ಲದೆ ಮಿತ್ರ - ವರುಣರೆಂಬ ದೇವತೆಗಳು **'ತಥಾವಿಧೌ ಹರಿಸ್ತ್ವಥೈವಭೂತತ್ವಾತ್'** – 'ಬ್ರಹ್ಮನಂತೆಯೇ ಸರ್ವಗುಣಪರಿಪೂರ್ಣರು; ಹರಿಯೂ ಹಾಗೆಯೇ ಇರುವುದರಿಂದ ಅವನೂ 'ತುವಿಜಾತ'ನೇ ಎಂದು ಬರೆಯುತ್ತಾರೆ.

"ಉರುಕ್ಷಯಾ" ಎಂಬ ಶಬ್ದಕ್ಕೆ ಮಹರ್ಷಿ ದಯಾನಂದರು **"ಉರ್ವಿತಿ ಬಹುನಾಮಸು ಪಠಿತಂ"** – ಎಂಬ ನಿರುಕ್ತ ಪ್ರಮಾಣದಿಂದ ಮತ್ತು **'ಕ್ಷಿ ನಿವಾಸೇ**

**ಗತೌಕ್ಷ್ಯೇಃ'** – **'ಕ್ಷಿ'** ಧಾತುವಿಗೆ ನಿವಾಸ ಹಾಗೂ ಗತಿ - ಎಂಬರ್ಥಗಳಿವೆ - ಎಂದು ಅಂಗೀಕರಿಸಿ, "ಉರುಕ್ಷಯಾ" ಎಂಬ ಶಬ್ದ ವಿಶಾಲ ನಿವಾಸಸ್ಥಾನಗಳನ್ನೂ, ದೂರದೂರದ ವರೆಗೆ ಗಮನಾಗಮನ ಮಾಡುವವರು." - ಎಂದರ್ಥಮಾಡಿದ್ದಾರೆ. ಹಿಂದಣ ಪ್ರಾಣಾಪಾನಗಳನ್ನೇ ಗ್ರಹಿಸಿರುವುದರಿಂದ 'ಕವೀ' – ಎಂಬುದಕ್ಕೆ 'ಕ್ರಾಂತದರ್ಶನಹೇತುಗಳಾಗಿದ್ದಾರೆ.' ಎಂದು ವ್ಯಾಖ್ಯಾನ ಮಾಡಿದ್ದಾರೆ.

ಶ್ರೀ॥ ಮಧ್ವರೂ **'ಸ್ಥಾನಂ ಕ್ಷಯ ಇಹೋಚ್ಯತೇ'** – 'ಸ್ಥಾನವೇ ಕ್ಷಯ ವೆನಿಸುತ್ತದೆ' - ಎಂದು ಬರೆದಿದ್ದಾರೆ. ಮಧ್ವ - ಸಾಯಣರ ದೃಷ್ಟಿಯಲ್ಲಿ **'ಮಿತ್ರ ಮತ್ತು ವರುಣರು'** ವಿಶಿಷ್ಟ ಚೇತನ ದೇವತೆಗಳು; ಮಹರ್ಷಿ ದಯಾನಂದರು ಮುಖ್ಯತಃ ಪ್ರಾಣಾಪಾನಗಳನ್ನು ಗ್ರಹಿಸುತ್ತಾರೆ.

ಮಂತ್ರದ ಉಳಿದ ಭಾಗದಲ್ಲಿಯೂ ಶಬ್ದಾರ್ಥಗಳ ಮಟ್ಟಿಗೆ ಮೂವರಲ್ಲಿಯೂ ಭೇದವೇನೂ ಕಾಣಿಸದು. **"ದಕ್ಷಂ ಬಲಂ"** – "ದಕ್ಷವೆಂದರೆ ಬಲ" ಎಂದೂ, **'ಅಪಃ'** - ಎಂದರೆ 'ಕರ್ಮ' ಎಂದೂ (**ಅಪ ಇತಿ ಕರ್ಮನಾಮಸು ಪಠಿತಂ** – ಎಂಬ ನಿಘಂಟುವಿನ ಪ್ರಮಾಣವನ್ನು ಕೊಟ್ಟು) ಮಹರ್ಷಿ ದಯಾನಂದರು ಬರೆಯುತ್ತಾರೆ. ಸಾಯಣರೂ **'ದಕ್ಷ'** ವೆಂಬುದು ಬಲದ ಹೆಸರು; **'ಅಪಸ್ಸೆಂದರೆ'** ಕರ್ಮದ ಹೆಸರು ಎಂದೇ ಹೇಳುತ್ತಾರೆ. ಶ್ರೀ॥ ಮಧ್ವರು – **'ಕರ್ಮಾಪಸಂ ಚ ಕರ್ತಾರಂ ದಕ್ಷಂ ಕರ್ತಾರಮೇವ ವಾ। ಅಸ್ಮದರ್ಥಂ ದಧಾತೇ ತೌ ನಿತ್ಯಂ ಬುದ್ಧ್ವಾ ಗತಾಗತೌ ॥ '** – "ಅಪಸ್ಸೆಂದರೆ ಕರ್ಮ. ನಮಗಾಗಿ ಮಿತ್ರ - ವರುಣರು ಯಜ್ಞಕರ್ತನನ್ನು 'ದಕ್ಷ' ಎಂದರೆ ಸಮರ್ಥನನ್ನಾಗಿ ಮಾಡುತ್ತಾರೆ." ಅವರಿಬ್ಬರೂ ಗಮನಾಗಮನ ವಿಜ್ಞಾನಿಗಳು." – ಎಂದು ಬರೆಯುತ್ತಾರೆ. 'ದಕ್ಷ' ಎಂಬುದನ್ನು 'ಬಲ' ಎಂಬ ನಾಮವಾಚಕವಾಗಿ ಗ್ರಹಿಸದೆ, ಬಲಶಾಲಿ, ಚತುರ ಎಂದು ಗ್ರಹಿಸುತ್ತಾರೆ - ಎಂಬುದಿಷ್ಟೇ ಶ್ರೀ॥ ಮಧ್ವರ ವಿಷಯಲ್ಲಿ ಕಾಣುವ ವ್ಯತ್ಯಾಸ.

ತಾತ್ಪರ್ಯವಿಷ್ಟೇ. ಪರಮಾತ್ಮನು ಮಹಾ ಪ್ರಸಿದ್ಧನಾದುದರಿಂದ 'ತುವಿಜಾತ'; ಜೀವಾತ್ಮನು ಪುನಃಪುನಃ ಜನ್ಮತಾಳುವುದರಿಂದ 'ತುವಿಜಾತ'. ಪರಮಾತ್ಮನು ಸರ್ವವ್ಯಾಪಕನಾದುದರಿಂದ 'ಉರುಕ್ಷಯ'; ಜೀವಾತ್ಮನು ಲೋಕಲೋಕಾಂತರಗಳಲ್ಲಿ ಜನ್ಮತಾಳಿ ಬರುವುದರಿಂದ 'ಉರುಕ್ಷಯ'. ಅವರಿಬ್ಬರೂ ಜೀವರಾದ ನಮ್ಮೆಲ್ಲರ ಸಲುವಾಗಿ ಬಲವನ್ನೂ, ಕರ್ಮವನ್ನೂ ಸದಾ ಹೊಂದಿರುತ್ತಾರೆ. ವಿರಾಡಾತ್ಮನಿಗೆ ಪರಿಚ್ಛಿನ್ನಾತ್ಮನು ಮೂರುಕಾಲಗಳಲ್ಲಿಯೂ ಸಮಾನನಾಗಲಾರನಾದರೂ, ವಿಶ್ವಬ್ರಹ್ಮಾಂಡದ ಸಂಚಾಲನದಲ್ಲಿ ಜೀವರ ಪಾತ್ರ ನಗಣ್ಯವೇನಲ್ಲ. ವಿರಾಡಾತ್ಮನು ಅಖಂಡನಾದ ಕಾರಣ ಎಂದೂ ಪರಿಚ್ಛಿನ್ನ ಜೀವನಾಗಿ ಪರಿಣಮಿಸನು. ಸತ್ಯ ಹೀಗಿರುವಲ್ಲಿ, ಶಾಶ್ವತರಾದ ಜೀವರೇ ಇಲ್ಲದಿದ್ದಲ್ಲಿ ವಿರಾಡಾತ್ಮ ಬ್ರಹ್ಮಾಂಡವನ್ನು ನಿರ್ಮಿಸಲು ಕಾರಣವೇ ಇರುವುದಿಲ್ಲ. **"ಲೋಕವತ್ತು ಲೀಲಾ ಕೈವಲ್ಯಂ"** – "ಜಗತ್ತಿನಲ್ಲಿ ಆಟಕ್ಕಾಗಿ ರಾಜನೂ ಅಂಬಿಗನಾಗಿ ದೋಣಿ ನಡೆಯಿಸುವಂತೆ, ಬ್ರಹ್ಮನು ಲೀಲಾಮಾತ್ರಕ್ಕಾಗಿ ಜಗದ್ರಚನೆ ಮಾಡುತ್ತಾನೆ." – ಎಂದು,

ವ್ಯಾಸೋಕ್ತ ಬ್ರಹ್ಮಸೂತ್ರಕ್ಕೆ ಅಪಾರ್ಥ ಕಲ್ಪಿಸುವುದು ಬ್ರಹ್ಮದ್ರೋಹವೇ ಸರಿ. "ಲೋಕದಲ್ಲಿ ಸಮರ್ಥನಾದವನು ಶ್ರಮಪಡದೆ ಮಹಾಕೃತಿಗಳನ್ನು ಕೇವಲ ಆಟವೋ – ಎಂಬಂತೆ ಮಾಡುವ, ಹಾಗೆ ಸರ್ವಶಕ್ತ ಪರಬ್ರಹ್ಮನು ಕಿಂಚಿತ್ತೂ ಶ್ರಮಪಡದೆ, ಲೀಲಾ ಮಾತ್ರವೆಂಬಂತೆ ಜಗತ್ತನ್ನೆಲ್ಲಾ ನಿರ್ಮಿಸುತ್ತಾನೆ." – ಎಂಬುದು ಆ ಸೂತ್ರದ ಸರಿಯಾದ ಅರ್ಥ. ಜೀವರೇ ಇಲ್ಲದಿದ್ದಲ್ಲಿ ಪ್ರಾಪ್ತಸರ್ವಸ್ವನಾದ, ನಿತ್ಯಾನಂದಸ್ವರೂಪನಾದ ಭಗವಂತ ಈ ಲೋಕವನ್ನು ರಚಿಸುವ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ.

**ವಿಶೇಷಕಥನ:**– "ಮಹರ್ಷಿ ದಯಾನಂದರು ಋಗ್ವೇದದ ಪ್ರಥಮ ಮಂಡಲದ ದ್ವಿತೀಯ ಸೂಕ್ತದಿಂದ ನಾಲ್ಕನೆಯ ಮಂತ್ರದಿಂದ ಹಿಡಿದು ಒಂಬತ್ತನೆಯ ಮಂತ್ರದ ವರೆಗೆ, 'ಇಂದ್ರವಾಯೂ' ಎಂಬ ದೇವತೆಗಳಿಂದ 'ಸೂರ್ಯ ಮತ್ತು ಪವನ' ರನ್ನೂ 'ಇಂದುವಿನಿಂದ ಜಲ ಹಾಗೂ ಯಜ್ಞವನ್ನೂ, 'ಇಂದ್ರ' ಎಂಬುದರಿಂದ ಸೂರ್ಯಪ್ರಕಾಶ ಅಥವಾ 'ವಾಯು'ವನ್ನೂ, ಮಿತ್ರ - ವರುಣಶಬ್ದಗಳಿಂದ ಪ್ರಾಣಾಪಾನಗಳನ್ನೂ, ಸೂರ್ಯ ಲೋಕಾದಿಗಳನ್ನೂ ಗ್ರಹಿಸಿರುವಾಗ, ಅವರ ಪದಚಿಹ್ನಾನುಸಾರವಾಗಿ ನಡೆಯುವ ನೀವು ಈ ಶಬ್ದಗಳಿಂದ ಈಶ್ವರ - ಜೀವರನ್ನು ಗ್ರಹಿಸುತ್ತೀರಲ್ಲ! ಮಹರ್ಷಿಕೃತಭಾಷ್ಯ ಅಶುದ್ಧವೇ?"- ಎಂದು ಜಿಜ್ಞಾಸುಗಳ ಹೃದಯಗಳಲ್ಲಿ ಶಂಕೆಯುದಿಸಬಹುದು. ಆದರೆ, ನಾವು ಮಹರ್ಷಿಯ ಮುಂದೆ ಗಣನೆಗೇ ಬಾರದಷ್ಟು ಚಿಕ್ಕವರು. ಇಂದು ನಮ್ಮಲ್ಲಿ ಯಾವ ಕಿಂಚಿಜ್ಜ್ಞಾನ ವಿದೆಯೋ, ಅದೆಲ್ಲವೂ ಮಹರ್ಷಿಕೃತಗ್ರಂಥಗಳ ಅಧ್ಯಯನದ ಫಲವಷ್ಟೇ. ನಮ್ಮ ರೋಮ-ರೋಮವೂ ಮಹರ್ಷಿಗೆ ಋಣಿ.

ಮಹರ್ಷಿ ಈ ಜಗತ್ತಿಗೆ ಆವಶ್ಯಕವೇ ಆದ ಆಧಿದೈವಿಕ ಅರ್ಥವನ್ನು ಗ್ರಹಿಸಿ ಭಾಷ್ಯ ಬರೆದಿದ್ದಾರೆ; ನಾವು ಅಧ್ಯಾತ್ಮದ ಹಾದಿ ಹಿಡಿದು ನಡೆದಿದ್ದೇವೆ. ಇದು ಮಹರ್ಷಿಗೆ ವಿರುದ್ಧವಾದ ಕಾರ್ಯವಲ್ಲ; ಅವರ ಕಾರ್ಯಕ್ಕೆ ಕಿಂಚಿತ್ಪೂರಕ ಮಾತ್ರ – ಎಂದು ಬಿನ್ನವಿಸು ತ್ತೇವೆ.

ಮತ್ತು, ನಾವು ಮಾಡಿರುವ ಅರ್ಥ ಯಾವುದೇ ದೃಷ್ಟಿಯಿಂದಲೂ ಮಹರ್ಷಿ – ಸಿದ್ಧಾಂತಕ್ಕೆ ಎಳ್ಳಿನ ಕೋಟ್ಯಂಶದಷ್ಟೂ ವಿರುದ್ಧವಾಗಿಲ್ಲ. ಈ ಸೂಕ್ತದ ತೃತೀಯ ಮಂತ್ರ ದಲ್ಲಿ ಮಹರ್ಷಿ ನಮ್ಮಂತೆಯೇ 'ವಾಯು'ವನ್ನು ಪ್ರಾಣಸ್ವರೂಪ ಈಶ್ವರನೆಂದು ಬರೆದಿ ದ್ದಾರೆ. ಇಂದ್ರಶಬ್ದಕ್ಕೆ ನಾವು ಮಾಡಿರುವ "ಇಂದ್ರಿಯವಾನ್ ಜೀವ" – ಎಂಬರ್ಥಕ್ಕೆ ಮಹರ್ಷಿಗಳ ಕಥನದ ಪ್ರಮಾಣವೂ ಇದೇ. ಇದೇ ಸೂಕ್ತದ ಆರನೆಯ ಮಂತ್ರದಲ್ಲಿ ಬಂದಿರುವ "ಇಂದ್ರ"ಶಬ್ದಕ್ಕೆ ಅಷ್ಟಾಧ್ಯಾಯಿಯ [5. 2. 93.]ನೆಯ ಸೂತ್ರವನ್ನುದ್ಧರಿಸಿ, ಅನ್ಯಾರ್ಥಗಳೊಂದಿಗೆ **'ಇತಿಸೂತ್ರಾಶಯಾದಿಂದ್ರಶಬ್ದೇನ ಜೀವಸ್ಯಾಪಿ ಗ್ರಹಣಂ'** - "ಈ ಸೂತ್ರದ ಆಶಯದಿಂದ, ಇಂದ್ರಶಬ್ದದಿಂದ ಜೀವಾತ್ಮನ ಗ್ರಹಿಕೆಯೂ ಆಗುವುದು." ಎಂದು ಬರೆದಿದ್ದಾರೆ. "ಮಿತ್ರ" ಶಬ್ದದಿಂದ ಮಹರ್ಷಿ ಪರಮಾತ್ಮನನ್ನು ಗ್ರಹಿಸುತ್ತಿದ್ದ ರೆಂಬುದಕ್ಕೆ, ತಮ್ಮ ಅಮರಕೃತಿ "ಸತ್ಯಾರ್ಥಪ್ರಕಾಶನ" ದಲ್ಲಿ, ಎಲ್ಲಕ್ಕಿಂತ ಮೊದಲು

ಅವರು ಉದ್ಧರಿಸಿರುವ **"ಶಂ ನೋ ಮಿತ್ರಃ"** – ಎಂಬ ಮಂತ್ರದ ಪ್ರಮಾಣವೇ ಸಾಕಾಗಿದೆ. ಮತ್ತು "ವರುಣ" ಶಬ್ದದಿಂದ ನಾವು ಜೀವಾತ್ಮನನ್ನು ಗ್ರಹಿಸಿರುವುದು ಮಹರ್ಷಿ ಕೃತ "ಸಂಸ್ಕಾರವಿಧಿ" ಯ "ಸಾಮಾನ್ಯ ಪ್ರಕರಣ"ದಲ್ಲಿನ "ತ್ವಂನೋ ಅಗ್ನೇ." ಎಂದಾರಂಭವಾಗುವ ಅಷ್ಟಾಜ್ಯಾಹುತಿ ಮಂತ್ರಗಳಲ್ಲಿನ ಮೊದಲನೆಯ ಎರಡು ಮಂತ್ರಗಳಿಂದ ಸ್ಪಷ್ಟವಾಗಿ ಸಿದ್ಧವಾಗುತ್ತದೆ. **'ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ ದೇವಸ್ಯ ಹೇಳೋಽವಯಾಸಿ ಸೀಷ್ಠಾಃ।** – [ಅಗ್ನೇ] ಓ ಜ್ಯೋತಿರ್ಮಯ ದೇವ! [ನಃ ತ್ವಂ] ನಮ್ಮವನಾದ ನೀನು, [ವಿದ್ವಾನ್] ಜ್ಞಾನ ಸ್ವರೂಪನು. [ದೇವಸ್ಯ ವರುಣಸ್ಯ] ದಿವ್ಯಗುಣ ಸಂಪನ್ನ, ವರಣೀಯ ಜೀವನ. [ಹೇಳಃ — ಹೇಡಃ] ಅಗೌರವವನ್ನು, ಅಪಮಾನವನ್ನು, [ಅವ ಯಾಸಿ ಸೀಷ್ಠಾಃ] ದೂರೀಕರಿಸು." **'ಅವ ಯಕ್ಷ್ವ ನೋ ವರುಣಂ ರರಾಣಃ'**– "[ನಃ] ನಮಗೆ, [ರರಾಣಃ] ಜ್ಞಾನದಾನ ಮಾಡುತ್ತಾ, [ವರುಣಂ] ವರಣೀಯನಾದ ಜೀವನನ್ನು, [ಅವ] ಕೆಳಗಣ ಸ್ತರದಲ್ಲಿದ್ದರೂ ಸಹ, (ಉದ್ಧರಿಸಿ) [ಯಕ್ಷ್ವ] ಗೌರವಾರ್ಹನನ್ನಾಗಿ ಮಾಡು." – ಈ ಎರಡು ಮಂತ್ರಗಳಿಂದ, 'ವರುಣ'ನೆಂದು ಜೀವನನ್ನೂ ಕೂಡ ನಿರ್ದೇಶಿಸುತ್ತಾರೆಂಬುದು ಸ್ಪಷ್ಟವಾಗುತ್ತದೆ. ಮತ್ತು "ಆತ್ಮನ್" ಶಬ್ದದಿಂದಾರಂಭಿಸಿ, ಇಂದ್ರ, ಮಿತ್ರ, ವರುಣ, ಅಗ್ನಿ - ಮೊದಲಾದ ಯಾವ ಶಬ್ದಗಳಿಂದ ಪರಮಾತ್ಮನನ್ನು ಅಂಗೀಕರಿಸುತ್ತಾರೋ, ಆ ಶಬ್ದಗಳಿಂದ ಜೀವಾತ್ಮನನ್ನೂ ಕೂಡ ಗ್ರಹಿಸುತ್ತಾರೆ - ಎಂಬ ತಥ್ಯ ವೈದಿಕ ಸಾಹಿತ್ಯದ ಸಾಧಾರಣ ಪರಿಚಯವನ್ನುಳ್ಳವರಿಗೂ ಕೂಡ ಗೊತ್ತಿರುತ್ತದೆ.

ಹೀಗೆ ನಾವು ಮಹರ್ಷಿ ದಯಾನಂದರಿಗೆ ವಿರುದ್ಧವಾಗಿಯಲ್ಲ; ಕೇವಲ ಪೂರಕವಾಗಿ ಭಾಷ್ಯರಚನೆ ಮಾಡಹೊರಟಿದ್ದೇವೆ. ಆ ವಿದ್ಯಾವಾರಿಧಿಯನ್ನೆದುರಿಸುವ ಸ್ವಪ್ನವನ್ನಾದರೂ ನಾವು ಕಾಣಬಲ್ಲೆವೇ ?

**ಋಗ್ವೇದದ ಪ್ರಥಮ ಮಂಡಲದ ದ್ವಿತೀಯ ಸೂಕ್ತದ ಭಾಷ್ಯ ಸಮಾಪ್ತವಾಯಿತು.**

---

**ಈ ವೇದಭಾಷ್ಯದ ೨೭ ಪುಟಗಳ ಪೂರ್ಣ ವೆಚ್ಚ ಶ್ರೀ ಕೆ. ಮಾಧವ ಕುಡ್ವ ಮತ್ತು ಅವರ ಧರ್ಮಪತ್ನಿ ಶ್ರೀಮತಿ ಗೌರಿ ಕುಡ್ವ, ಕುಂದಾಪುರ ಇವರ ಸೇವೆ.**

**ಅಥಾಸ್ಯರ್ಗ್ವೇದಸ್ಯ ದ್ವಾದಶರ್ಚಸ್ಯ ತೃತೀಯ-**
**ಸೂಕ್ತಸ್ಯ ಮಧುಚ್ಛಂದಾ ಋಷಿಃ**
**ದೇವತಾಃ** ೧-೩. ಅಶ್ವಿನೌ; ೪-೬. ಇಂದ್ರಃ;
೭-೯. ವಿಶ್ವೇದೇವಾಃ; ೧೦-೧೨. ಸರಸ್ವತೀ.
**ಛಂದಃ** ೧, ೩, ೫-೧೦, ೧೨. ಗಾಯತ್ರೀ.
೨. ನಿಚೃದ್ಗಾಯತ್ರೀ. ೪; ೧೧ ಪಿಪೀಲಿಕಾಮಧ್ಯಾ
ನಿಚೃದ್ಗಾಯತ್ರೀ. ಷಡ್ಜಃ **ಸ್ವರಃ**

**ತೃತೀಯ ಸೂಕ್ತ ಮಂತ್ರಗಳ ಸಂಖ್ಯೆ ೧೨.**

**ಸಂಹಿತಾ ವಿಭಾಗ**

**ಅಶ್ವಿನಾ ಯಜ್ವರೀರಿಷೋ ದ್ರವತ್ಪಾಣೀ ಶುಭಸ್ಪತೀ ।**

**ಪುರುಭುಜಾ ಚನಸ್ಯತಂ ॥೧॥**

**ಪದಪಾಠ:-** ಅಶ್ವಿನಾ, ಯಜ್ವರೀಃ, ಇಷಃ, ದ್ರವತ್ಪಾಣೀ, ಶುಭಃಽಪತೀ ಪುರುಭುಜಾ, ಚನಸ್ಯತಂ.

**ಅನ್ವಯ:-** ದ್ರವತ್ಪಾಣೀ ಶುಭಸ್ಪತೀ ಪುರುಭುಜಾ ಅಶ್ವಿನಾ ! ಯಜ್ವರೀಃ ಇಷಃ ಚನಸ್ಯತಂ.

**ಶಬ್ದಾರ್ಥ:-** [ದ್ರವತ್ಪಾಣೀ] ಕ್ಷಿಪ್ರವಾಗಿ ಕಾರ್ಯಸಾಧಿಸುವ ಕೈಗಳನ್ನುಳ್ಳ, [ಶುಭಸ್ಪತೀ] ಶುಭವಾದುದನ್ನು ರಕ್ಷಿಸುವ, [ಪುರುಭುಜಾ] ಪುಷ್ಕಳಪ್ರಮಾಣದಲ್ಲಿ ಭೋಗಗಳನ್ನು ಸೇವಿಸುವ, [ಅಶ್ವಿನಾ] ನರ-ನಾರಿಯರೇ! ಆಧ್ಯಾತ್ಮಿಕಪ್ರವೃತ್ತಿಯ ಸ್ತ್ರೀ-ಪುರುಷರೇ! [ಯಜ್ವರೀಃ] ನಿಮ್ಮನ್ನು ಪರಮಾತ್ಮನ ಹಾಗೂ ಸಂಗ-ಯೋಗ್ಯ ಜೀವರ ಸಂಪರ್ಕದಲ್ಲಿ ತರುವ, [ಇಷಃ] ಇಚ್ಛೆಗಳನ್ನು, [ಚನಸ್ಯತಂ] ಸೇವಿಸಿರಿ; [ಇಷಃ] ಅಂತಹ ಸಾತ್ವಿಕಭೋಜನಗಳನ್ನು, [ಚನಸ್ಯತಂ] ಸೇವಿಸಿರಿ.

**ತಾತ್ಪರ್ಯ:-** ಆಧ್ಯಾತ್ಮಿಕೀವೃತ್ತಿಯ ಸ್ತ್ರೀ-ಪುರುಷರೇ ! ವೇಗದಿಂದ ಕಾರ್ಯ ಮಾಡುವ ಕೈಗಳನ್ನುಳ್ಳವರಾಗಿ. ಮಂಗಳವಾದುದನ್ನು ಪರಿಪೋಷಿಸಿರಿ. ಮಾನಸಿಕ ಹಾಗೂ ಶಾರೀರಿಕ ಶಕ್ತಿಗಳನ್ನು ವರ್ಧಿಸುವಷ್ಟು ಪ್ರಮಾಣದಲ್ಲಿ, ಸಾಕಾಗುವಷ್ಟು ಭೋಜನವನ್ನು ಮಾಡುವವರಾಗಿ. ಪರಮಾತ್ಮನ ಹಾಗೂ ಸೇವನೀಯರಾದ ಪವಿತ್ರಾತ್ಮರ ಸಂಪರ್ಕಕ್ಕೆ ನಿಮ್ಮನ್ನು ಯೋಗ್ಯರನ್ನಾಗಿ ಮಾಡುವ ಸತ್ಕಾಮನೆಗಳನ್ನು ರೂಢಿಸಿಕೊಳ್ಳಿರಿ. ಅಂತಹ ಮಂಗಳಮಯೀ ಕಾಮನೆಯನ್ನು ಕುದುರಿಸುವ ಸಾತ್ವಿಕಾಹಾರ-ಪಾನೀಯಗಳನ್ನು ಸ್ವೀಕರಿಸಿರಿ.

**ಭಾಷ್ಯ:-** ಈ ಮಂತ್ರದ ದೇವತೆಗಳು 'ಅಶ್ವಿನೌ' ಆಗಿದ್ದಾರೆ. ಸದಾ ದ್ವಿವಚನದಲ್ಲಿಯೇ ಬರುವ ಈ ಶಬ್ದ ಸ್ವಲ್ಪ ಸಮಸ್ಯಾತ್ಮಕ. ಪೌರಾಣಿಕ ಸಾಹಿತ್ಯದಲ್ಲಿ "ಅಶ್ವಿನೌ" ದೇವಲೋಕದ ಚಿಕಿತ್ಸಕರೆಂದು ಓದುತ್ತೇವೆ. ಈ ಪೌರಾಣಿಕ ಕಲ್ಪನೆ ಪೂರ್ಣತಃ ನಿರಾಧಾರವಲ್ಲ. ಋಗ್ವೇದದಲ್ಲಿ, - **"ಅಂಧಸ್ಯ ಚಿನ್ನಾಸತ್ಯಾ ಕೃಶಸ್ಯ ಚಿದ್ಯುವಾ ಮಿದಾಹುರ್ಭಿಷಜಾ ರುತಸ್ಯ ಚಿತ್** ॥ [10.39.3.] - "[ನಾಸತ್ಯಾ] ಎಂದಿಗೂ ಮಿಥ್ಯಾ ಚಾರಿಗಳಾಗದ, ಸದಾ ಸತ್ಯವಂತರೇ ಆಗಿರುವ 'ಅಶ್ವಿನೌ' ದೇವತೆಗಳೇ ! [ಅಂಧಸ್ಯಚಿತ್] ಕುರುಡನಿಗೂ ಕೂಡ, [ಕೃಶಸ್ಯಚಿತ್] ಕ್ಷಯಾದಿಗಳಿಂದ ಕೃಶನಾದವನಿಗೂ, [ರುತಸ್ಯಚಿತ್] ಯಾವುದೇ ಬಗೆಯ ವ್ಯಾಧಿಯಿಂದ ಗ್ರಸ್ತನಾಗಿರುವವನಿಗೂ, [ಯುವಾಂ ಇತ್] ನಿಮ್ಮನ್ನೇ [ಭಿಷಜಾ] ಚಿಕಿತ್ಸಕರೆಂದು, [ಆಹುಃ] ಹೇಳುತ್ತಾರೆ." ಸತ್ಯವಾಗಿಯೂ ವೇದವೇತ್ತರಾಗಿದ್ದ ಶ್ರೀಮದ್ವ್ಯಾಸ ಮಹರ್ಷಿಗಳ ಹೆಸರಿನಲ್ಲಿ ಮನಬಂದಂತೆ ಹದಿನೆಂಟು ಪುರಾಣಗಳನ್ನು ಬರೆದಿಟ್ಟು ಹೋದ ಮತ-ಮತಾಂತರವಾದಿಗಳಿಗೆ ಇಷ್ಟೇ ಸಾಕಾಯಿತು. ಅಶ್ವಮೇಧ, ಗೋಮೇಧ, ಅಜಮೇಧ-ಎಂಬ ಶಬ್ದಗಳನ್ನು ವೇದಗಳಲ್ಲಿ ಕಂಡು, ಹಿಂಸಾತ್ಮಕ ಯಜ್ಞಪ್ರಕ್ರಿಯೆಯನ್ನಾ ರಂಭಿಸಿದ ತಾಂತ್ರಿಕರಂತೆ, ವಾಮಮಾರ್ಗಿಗಳಂತೆ, ಪೌರಾಣಿಕರೂ ಈ 'ಅಶ್ವಿನೌ'ಗಳನ್ನು ದೇವ ಲೋಕದ ಚಿಕಿತ್ಸಕರಾಗಿಯೇ ನಿಯೋಜಿಸಿಯೇ ಬಿಟ್ಟರು. ಅವರಿಬ್ಬರೂ ತಮ್ಮದೇ ಆದ ಅಸ್ತಿತ್ವಹೊಂದಿದ ಭಿನ್ನದೇವತೆಗಳಾಗಿ, ವಾಸ್ತವಿಕವಾಗಿಯಲ್ಲ; ಪುರಾಣಕರ್ತರ ಮಸ್ತಿಷ್ಕ ಗಳಲ್ಲಿ - ಮೆರೆಯಹತ್ತಿದರು. 'ನಾಸತ್ಯಾ' ಶಬ್ದ 'ಅಶ್ವಿನೌ' ಗಳಿಗೆಯೇ ಮೀಸಲಾಗಿಟ್ಟ ವಿಶೇಷಣವೆಂದು ವೇದಜ್ಞರು ಬಲ್ಲರು.

ಆದರೆ, ಸತ್ಯವಿದ್ಯಾಭಂಡಾರಗಳಾದ ವೇದಗಳಲ್ಲಿ ಕೇವಲ ಕಾಲ್ಪನಿಕತತ್ತ್ವಗಳಿಗೆ ಕಿಂಚಿನ್ಮಾತ್ರವೂ ಎಡೆಯಿಲ್ಲ.

'ಅಶ್ವಿನೌ'ಗಳನ್ನು ಪೃಥಗ್ದೇವತೆಗಳಾಗಿ ಭಾವಿಸಿದ, ಪೌರಾಣಿಕ ವಿಶ್ವಾಸದ ಭಾಷ್ಯ ಕಾರರಿಂದ ನಾವು ಯಾವುದೇ ಸಹಾಯವನ್ನೂ ನಿರೀಕ್ಷಿಸುವಂತಿಲ್ಲ. ಆಚಾರ್ಯತ್ರಯರಲ್ಲಿ ಶ್ರೀಮದಾನಂದತೀರ್ಥರೊಬ್ಬರನ್ನುಳಿದರೆ, ಉಳಿದಿಬ್ಬರು ವೇದಸಂಹಿತಗಳಿಗೆ ಕೈಹಾಕಲೇ ಇಲ್ಲ. ಶ್ರೀ॥ ಮಧ್ವರು ಮಾತ್ರ ಋಗ್ವೇದದ ಪ್ರಥಮಮಂಡಲದ ೪೦ಸೂಕ್ತಗಳಿಗೆ ಭಾಷ್ಯಬರೆಯಲು ಯತ್ನಿಸಿದರು. ಭಿನ್ನ ಭಿನ್ನ ಚೇತನ ದೇವತೆಗಳ ಅಸ್ತಿತ್ವವನ್ನೂ ಅವರಲ್ಲಿಯೂ ತಾರತಮ್ಯ ವನ್ನೂ ಅಂಗೀಕರಿಸಿದ ಶ್ರೀಮನ್ಮಧ್ವರೂ, ಪೂರ್ವಕರ್ಮ ಕಾಂಡಿಗಳೇ ಆದ ಸಾಯಣ ಮಹೀಧರರೂ ಅಶ್ವನೀದೇವತಾಕ ಮಂತ್ರಗಳನ್ನೆಲ್ಲಾ ಆ ಕಲ್ಪಿತ ದೇವತೆಗಳಿಗೆಯೇ ಅನ್ವಯಿಸಿ, "ಅಶ್ವಿನೌಗಳೇ ! ಯಜ್ಞದ ಹವಿರ್ಭಾಗವನ್ನು ಕೊಳ್ಳಲು ಬೇಗ ಬನ್ನಿರಿ."— ಎಂದು ಆಹ್ವಾನಪತ್ರನೀಡಿ ತೃಪ್ತರಾಗಿ ಕುಳಿತರು. ಜಡ-ಚೇತನವೆಲ್ಲದರಲ್ಲಿಯೂ ನಿಯಾಮಕನಾಗಿ ವಿರಾಜಿಸುವ ಶ್ರೀಹರಿಯನ್ನೂ - **"ಅಶ್ನುತೇಽಖಿಲಮಿತ್ಯೇವ"** - ಈ ಎಲ್ಲದರಲ್ಲಿಯೂ ವ್ಯಾಪಕನೂ, ಎಲ್ಲವನ್ನೂ ಸೇವಿಸುವವನೂ ಆದುದರಿಂದ ಅವನೂ ಅಶ್ವಿಯೇ." - ಎಂದಿಷ್ಟು ಅಧಿಕವಾಗಿ, ಹೇಳಿ, ಮಹಾನ್ ವೈಷ್ಣವಾಚಾರ್ಯ ಶ್ರೀಮನ್ಮಧ್ವರು ಭಾಷ್ಯ ಮುಗಿಸಿದರು.

ಹಾಗೆ ನೋಡಿದರೆ, ಈ ಮಂತ್ರದ ಪ್ರತಿಯೊಂದು ಶಬ್ದವೂ ತೆರೆದಿಟ್ಟಂತೆ ಸ್ಪಷ್ಟವಾಗಿದೆ. ಮಹರ್ಷಿ ದಯಾನಂದರು, ಆಚಾರ್ಯಯಾಸ್ಕರ - "ದ್ಯುಃಸ್ಥಾನವಾಸಿಗಳು ಅಶ್ವಿನೀ ದೇವತೆಗಳು" ಎಂಬ ಕಥನದ ಆಧಾರದ ಮೇಲೆ, ಜಲ ಮತ್ತು ಅಗ್ನಿ – ಇವೇ ಅಶ್ವಿನೌ"- ಎಂದು ಆಧಿದೈವಿಕ-ಆಧಿಭೌತಿಕ ಅರ್ಥವನ್ನೇ ಗ್ರಹಿಸಿ, ವೈಜ್ಞಾನಿಕ ಯಂತ್ರೋಪಕರಣಗಳ ವರ್ಣನೆಯನ್ನು ಈ ಮಂತ್ರದಲ್ಲಿ ಮಾಡಿದ್ದಾರೆ. ಈ ಜಡ ದ್ರವ್ಯಗಳನ್ನು ಪ್ರತಿಪಾದ್ಯ ವಿಷಯವಾಗಿ ಗ್ರಹಿಸಿದುದರ ಪರಿಣಾಮವಾಗಿ, 'ದ್ರವತ್ಪಾಣೀ, ಶುಭಸ್ಪತೀ' ಮೊದಲಾದ ಪ್ರತ್ಯಕ್ಷವಾಗಿ ಅನ್ವಯಿಸುವ ವಿಶೇಷಣಗಳನ್ನೆಲ್ಲಾ ಪರೋಕ್ಷವಾಗಿ ಅನ್ವಯಿಸುವಂತೆ ಮಾಡಬೇಕಾಗಿ ಬಂದಿತು. 'ಶುಭಸ್ಪತೀ' – 'ಮಂಗಳವಾದುದರ ರಕ್ಷಕರು' - ಎಂಬ, ನೇರವಾಗಿಯೇ ಅನ್ವಯಿಸಬಹುದಾದ ವಿಶೇಷಣವನ್ನು, 'ಮಂಗಳಕರವಾದುದನ್ನು ರಕ್ಷಿಸುವುದಕ್ಕೆ ಸಾಧನ ಭೂತವಾದ' – ಎಂದು ಬಳಸಿ ಬಂದು ಅನ್ವಯಿಸಬೇಕಾಯಿತು.

ಆದರದು ಮಹರ್ಷಿ ಶೈಲಿ. ಮಾನವ ಜನಾಂಗಕ್ಕೆ ಭೌತಿಕವಿಜ್ಞಾನ ವಿಕಾಸದ ಆವಶ್ಯಕತೆ ಕಡಿಮೆ – ಎಂದು ನಾವೇನೂ ಭಾವಿಸುವುದಿಲ್ಲ. ಓದುಗರು ಮುಂದೆ-ಮುಂದೆ ನಡೆದಂತೆ ಜಲಯಾನ-ವಾಯುಯಾನ-ಸ್ಥಳಯಾನಗಳ ನಿರ್ಮಾಣ, ಭೂಮಿಯ ಗರ್ಭದಲ್ಲಿ, ಭೂತಳದ ಮೇಲೆ, ಗಗನದಲ್ಲಿ ಗೃಹಗಳ ನಿರ್ಮಾಣ, 'ವಿಶ್ವಶ್ರವಾ' (Radio), 'ವಿಶ್ವದೃಕ್' (Television) ಮೊದಲಾದ ವೈಜ್ಞಾನಿಕೋಪಕರಣಗಳ ನಿರ್ಮಾಣ-ಮೊದಲಾದ ಅದ್ಭುತಕಲೆಗಳನ್ನೂ, ಗಣಿತ, ಜ್ಯೋತಿಷ, ವ್ಯಾಪಾರ, ವಾಣಿಜ್ಯ, ರಾಜನೀತಿ, ಅರ್ಥನೀತಿ-ಮೊದಲಾದ ಅತ್ಯಾವಶ್ಯಕ ವಿದ್ಯಾಶಾಖೆಗಳನ್ನೂ ಈ ಭಾಷ್ಯದಲ್ಲಿ ಕಾಣುವರು. ಇವೆಲ್ಲವೂ ಸಿದ್ಧಿಸಿ, ಆತ್ಮ-ವಿದ್ಯೆಯೊಂದು ತಿಳಿಯದಿದ್ದರೆ-ಸರ್ವನಾಶವೇ ಹೊರತು ಮತ್ತೇನೂ ಕೈಗೆಂದುವಂತಿಲ್ಲ. ಆದಕಾರಣ, ನಾವು ಆಧ್ಯಾತ್ಮಿಕಾರ್ಥದ ಮೇಲೆಯೇ ಹೆಚ್ಚು ಒತ್ತಡ ಬೀರುತ್ತಿದ್ದೇವೆ.

ಈಗ ಮುಂದೆ ಹೆಜ್ಜೆ ಹಾಕೋಣ. 'ಅಶ್ವಿನೌ' ಶಬ್ದದ ಬಗೆಗೆ ಶ್ರೀಮದ್ಯಾಸ್ಕಾಚಾರ್ಯರು ಹೀಗೆಂದಿದ್ದಾರೆ:-"**ಅಥಾತೋ ದ್ಯುಃಸ್ಥಾನಾ ದೇವತಾಃ । ತಾಸಾಮಶ್ವಿನೌ ಪ್ರಥಮಗಾಮಿನೌ ಭವತಃ । ಅಶ್ವೈರಶ್ವಿನಾವಿತ್ಯೌರ್ಣನಾಭಃ । ದ್ಯಾವಾಪೃಥಿವ್ಯಾವಿತ್ಯೇಕೇ ಸೂರ್ಯಾಚಂದ್ರಮಸಾವಿತ್ಯೇಕೇ॥**" [ದೈವತ:-6.1.1.] "ಇನ್ನು ದ್ಯುಲೋಕೀಯ ದೇವತೆಗಳ ವರ್ಣನೆ. ಅವರಲ್ಲಿ 'ಅಶ್ವಿನೌ' ಪ್ರಥಮಗಾಮಿಗಳು. ಅಶ್ವ'ಗಳನ್ನು ಹೊಂದಿರುವುದರಿಂದ 'ಅಶ್ವಿನೌ' ಎನಿಸುತ್ತಾರೆ. ದ್ಯಾವಾಪೃಥಿವಿಗಳೇ ಅಶ್ವಿನೌ-ಎಂದು ಕೆಲವರೂ, ಸೂರ್ಯ-ಚಂದ್ರರು ಎಂದು ಕೆಲವರೂ ಹೇಳುತ್ತಾರೆ."

ನಾವು ಮೇಲೆ ಹೇಳಿದಂತೆ ಇದೇ 'ದ್ಯುಃಸ್ಥಾನೀಯತ್ವ'ದ ಅವಲಂಬನದಿಂದ ಮಹರ್ಷಿ ದಯಾನಂದರು ಈ ಶಬ್ದದಿಂದ ಜಲಾಗ್ನಿಗಳನ್ನು ಅಂಗೀಕರಿಸಿದ್ದಾರೆ. ಮಂತ್ರದಲ್ಲಿನ ವಿಶೇಷಣಗಳು ಸ್ಪಷ್ಟವಾಗಿಯೇ ಯಾರೋ ಚೇತನರನ್ನು ಬಣ್ಣಿಸುತ್ತಿರುವಂತೆ ಕಾಣುತ್ತದೆ. ಯಾಸ್ಕರ ತಾತ್ಪರ್ಯ – "ದ್ಯುಲೋಕ-ಪೃಥಿವೀ ಲೋಕಗಳೇ ಅಶ್ವಿನೌ; ಸೂರ್ಯಚಂದ್ರರೇ

'ಅಶ್ವಿನೌ' - ಎಂದಾಗಿದೆ. ಇಲ್ಲಿಯೂ ಕೂಡ ಅವರು ಅನ್ಯರ ಅಭಿಪ್ರಾಯಗಳನ್ನೇ ಸಂಗ್ರಹಿಸಿದ್ದಾರೆ. **ಅಶ್ವಗಳಿಂದಾಗಿ ಅವರು ಅಶ್ವಿನಿಗಳೆನಿಸುತ್ತಾರೆ. ಎಂಬಲ್ಲಿ ಮಹತ್ವಪೂರ್ಣವಾದ ದಿಗ್ದರ್ಶನವಿದೆ.** ಇರಲಿ. ದ್ಯಾವಾ-ಪೃಥಿವೀ– ಎಂಬ ಶಬ್ದಗಳೂ ಈ ಸ್ಥಾನದಲ್ಲಿ ಬಹು ಸಹಾಯಕವಾಗಿವೆ. ದ್ಯುಲೋಕ-ಪೃಥಿವೀಲೋಕ ಎಂಬ ಬಹುಜ್ಞಾತ ಅರ್ಥವತ್ತು ಇರಲಿ. ಋಗ್ವೇದದ ಹಾಳೆಗಳನ್ನೇ ತಿರುಹಿ ಹಾಕೋಣ. **'ದ್ಯಾವಾಪೃಥಿವೀ'**– ಇವನ್ನೇ ದೇವತೆಯಾಗಿ ಹೊಂದಿರುವ ಈ ಮಂತ್ರವನ್ನೋದಿರಿ:—

**ಉರುವ್ಯಚಸಾ ಮಹಿನೀ ಅಸಶ್ಚತಾ ಪಿತಾ ಮಾತಾ ಚ ಭುವನಾನಿ ರಕ್ಷತಃ ॥**
[ಋಗ್ವೇದ:–1.160.2 ]

"[ಪಿತಾ ಚ ಮಾತಾ] ತಾಯಿ ಮತ್ತು ತಂದೆ–ಇವರೇ, [ಉರುವ್ಯಚಸಾ] ವಿಶಾಲವಾದ ಹಾಗೂ ಕಾಂತಿಯುಕ್ತವಾದ ನಾನಾ ವಸ್ತು ಸಂಪನ್ನರೂ, [ಮಹಿನೀ] ವಿಶಾಲ ಹೃದಯರೂ, [ಅಸಶ್ಚತಾ] ಭೋಗವಿಲಾಸಗಳಲ್ಲಿ ಅನಾಸಕ್ತರೂ ಆದ ದ್ಯಾವಾಪೃಥಿವಿಗಳು ಅವರು, [ಭುವನಾನಿ] ಲೋಕಗಳನ್ನು, [ರಕ್ಷತಃ] ರಕ್ಷಿಸುತ್ತಾರೆ." **ಈ ಮಂತ್ರ ತಾಯಿ-ತಂದೆಗಳೇ ದ್ಯಾವಾಪೃಥಿವಿಗಳೆಂದು ಹೇಳುತ್ತಿವೆ.** ಮತ್ತೂ ಆಲಿಸಿರಿ:—

**ಇದಂ ದ್ಯಾವಾಪೃಥಿವೀ ಸತ್ಯಮಸ್ತು**
**ಪಿತರ್ಮಾತರ್ಯದಿಹೋಪ ಬ್ರುವೇ ವಾಂ ॥** [ಋಗ್ವೇದ:- 1. 185. 11.]

"[ದ್ಯಾವಾ ಪೃಥಿವೀ] ಮಹಾಶಕ್ತಿಸಂಪನ್ನ ಹಾಗೂ ವಿಶಾಲಮನಸ್ಕರಾದ, [ಪಿತಃ] ತಂದೆಯೇ ! [ಮಾತಃ] ತಾಯಿಯೇ ! [ವಾಂ] ನಿಮಗೆ, [ಇಹ ಯತ್] ಇಲ್ಲಿ ಏನನ್ನು, [ಉಪ ಬ್ರುವೇ] ಹೇಳುತ್ತೇನೋ, [ಇದಂ ಸತ್ಯಂ ಅಸ್ತು] ಇದು ಸತ್ಯವಾಗಲಿ." ಈ ಮಂತ್ರವೂ **'ದ್ಯಾವಾಪೃಥಿವಿಗಳು ತಂದೆ-ತಾಯಿಗಳೇ'** ಎಂದು ಸ್ಪಷ್ಟಪಡಿಸುತ್ತದೆ ಇದರ ಮೇಲಣ ಮಂತ್ರವೂ, **"ದಿವೇ ಪೃಥಿವ್ಯಾ ಋತಂ ಅವೋಚಂ ಪಾತಾಮವದ್ಯಾದ್ದುರಿತಾದಭೀಕೇ ಪಿತಾ ಮಾತಾ ಚ ರಕ್ಷತಾಮವೋಭಿಃ ॥** [ಋಗ್ವೇದ:–1.185.10.]

"ಪ್ರಕಾಶಮಯನಾದ ದ್ಯುವಿಗೂ, ವಿಶಾಲಹೃದಯಳಾದ ಪೃಥಿವಿಗೂ ಸತ್ಯವನ್ನೇ ಹೇಳುತ್ತೇನೆ. ನಿಂದಾರ್ಹವಾದ ದುರ್ನಡೆಯಿಂದ ದೂರ, ಭಯರಹಿತ ಸ್ಥಿತಿಯಲ್ಲಿಟ್ಟು, ನಮ್ಮ ರಕ್ಷಣಾಶಕ್ತಿಗಳಿಂದ, ಆ **ತಂದೆತಾಯಿಗಳು** ನಮ್ಮನ್ನು ಪಾಲಿಸಲಿ, ಪೋಷಿಸಲಿ."

ಹೀಗೆ "ದ್ಯಾವಾಪೃಥಿವಿಗಳೇ ಅಶ್ವಿನೌ. ಆ ದ್ಯಾವಾಪೃಥಿವಿಗಳು ತಂದೆ-ತಾಯಿಗಳೇ." – ಎಂದು ನಾವು ನಿಷ್ಕರ್ಷಿಸಿರುವುದು ಏಕೆಂದು ಓದುಗರು ಸುಲಭವಾಗಿ ಗ್ರಹಿಸಬಹುದು. **'ತಂದೆ-ತಾಯಿಗಳೇ ಅಶ್ವಿನೌ'**–ಎಂಬ ತಾತ್ಪರ್ಯ ಹೃದ್ಗತವಾಗಿ ಮಂತ್ರಾರ್ಥ ಗ್ರಹಣ ಸುಲಭವಾದೀತು.

ಶತಪಥ ಬ್ರಾಹ್ಮಣದಲ್ಲಿನ್ನೂ ಅನೇಕ ಅರ್ಥಗಳನ್ನು ಕೊಟ್ಟು, **'ಸಯೋನೀ ವಾ ಅಶ್ವಿನೌ'** [ಶತ:-5.3.1.8.] - "ಏಕಗೃಹನಿವಾಸಿಗಳಾದ ಗೃಹಸ್ಥ - ಗೃಹಿಣಿಯರೇ ಅಶ್ವಿನೌ." – ಎಂದು ಹೇಳಲಾಗಿದೆ. ಯೋನಿ ಶಬ್ದಕ್ಕೆ ಗರ್ಭ ಅಥವಾ ಉದರವೆಂದು ಅರ್ಥಗ್ರಹಿಸಿ, 'ಸಹೋದರರು, ಸಹೋದರ–ಸಹೋದರಿಯರು' - ಎಂದೂ ಅರ್ಥ ಮಾಡಬಹುದು. ಆದರೆ, ಪ್ರಕರಣದ ದೃಷ್ಟಿಯಿಂದ ಈ ಅರ್ಥ ಅಷ್ಟು ಪುಷ್ಟವಾಗಿ ತೋರುವುದಿಲ್ಲ.

ಯಾಸ್ಕರ **'ಅಶ್ವೈರಶ್ವಿನೌ'** ಎಂಬ ಸೂತ್ರ ಹಿಡಿದು ನಡೆಯೋಣ. ಅಶ್ವ ಶಬ್ದವೂ ಹಲವಾರು ಅರ್ಥಗಳಿಂದ ಕೂಡಿದೆ. **"ಯಃ ಕಶ್ಚಾಧ್ವಾನಮಶ್ನುವೀತ ಅಶ್ವಃ ಸ ವಚನೀಯಃ"** [ನಿರುಕ್ತ:-1.13.] - "ಯಾವನು ಮಾರ್ಗವನ್ನು ಕ್ರಮಿಸುತ್ತಾನೋ, ಅವನನ್ನೇ ಅಶ್ವವೆನ್ನಬೇಕು." – ಎಂದಿದ್ದಾರೆ ಯಾಸ್ಕರು. 'ಅಶ್ನೋತಿ' - ಎಂದರೆ, ತಿನ್ನುತ್ತಾನೆ, ಅನುಭವಿಸುತ್ತಾನೆ." ಎಂದೂ ಅರ್ಥವಾಗುತ್ತದೆ. ಶತಪಥ ಬ್ರಾಹ್ಮಣದ **'ಇಂದ್ರೋ ವಾ ಅಶ್ವಃ'** [6.4.4.12.] - **'ಇಂದ್ರಿಯವಾನ್ ಜೀವಾತ್ಮನೇ ಅಶ್ವ'** - ಎಂಬ ಪ್ರಮಾಣ ನೆನಪಿನಲ್ಲಿದ್ದರೆ, ಅಶ್ವವಂತರಾದ 'ಅಶ್ವಿ'ಗಳನ್ನು ಗುರುತಿಸುವುದು ಕಷ್ಟವಾಗದು. **"ಅಶ್ನೋತಿ ಸುಖ-ದುಃಖಾನೀತಿ ಭೋಕ್ತಾಜೀವಾತ್ಮಾ ಅಶ್ವಃ। ತಂ ಪ್ರಧಾನಂ ಮನ್ಯಮಾನೌ ಆಧ್ಯಾತ್ಮಿಕವೃತ್ತಿಪ್ರಧಾನೌ ಸ್ತ್ರೀ-ಪುರುಷೌ ಅಶ್ವಿನೌ."** - "ಸುಖ-ದುಃಖಗಳನ್ನು 'ಅಶನ'ವಾಗಿ ಹೊಂದಿರುವ ಜೀವಾತ್ಮನೇ ಅಶ್ವ. ಅವನನ್ನು ಪ್ರಧಾನವಾಗಿಟ್ಟುಕೊಂಡು ಜೀವಿಸುವವನು 'ಅಶ್ವಿನ್'. ಅದರ ದ್ವಿವಚನರೂಪ 'ಅಶ್ವಿನೌ'. ಹೀಗೆ ಸುಖ–ದುಃಖ ಭಾಕ್ ಆತ್ಮನನ್ನು ವಿಕಾಸಗೊಳಿಸಬೇಕೆಂಬ ಗುರಿಯಿಂದ, ಅಧ್ಯಾತ್ಮಪ್ರಧಾನರಾಗಿ ಬಾಳುವ ನರ-ನಾರಿಯರೇ 'ಅಶ್ವಿನೌ'! ಸದಾ ಯುಗಳವಾಗಿಯೇ ಸ್ಮರಿಸಲ್ಪಡುವುದರಿಂದ, ಯಾವನೋ ನರ, ಯಾವಳೋ ನಾರಿ– ಎಂದು ತಿಳಿಯುವುದಕ್ಕಿಂತ, ಅನ್ಯೋನ್ಯಾಶ್ರಯಿಗಳಾಗಿ ಜೀವನ ನಡೆಯಿಸುವ ಜಾಯಾಪತೀ' ಎಂದರೆ ದಂಪತಿಗಳೇ 'ಅಶ್ವಿನೌ' – ಎಂದೆಣಿಸಿದರೆ, ಅದು ಹೆಚ್ಚು ಬುದ್ಧಿಸಂಗತವಾದೀತು. ತೈತ್ತಿರೀಯದಲ್ಲಿ – **"ಈಶ್ವರೋ ವಾ ಅಶ್ವಃ ಪ್ರಮುಕ್ತಃ"** [3.8.9.3.] - ಪ್ರಮುಕ್ತನಾದ, ನಿತ್ಯಮುಕ್ತನಾದ ಈಶ್ವರನೇ ಅಶ್ವ. - ಎಂದೋದುತ್ತೇವೆ. ಅಂತಹ ಅಶ್ವ ಎಂದರೆ ನಿತ್ಯಮುಕ್ತ ಪರಮಾತ್ಮನನ್ನೇ ಸರ್ವಸ್ವವೆಂದರಿತು, ಈಶ್ವರಾರ್ಪಣ ಬುದ್ಧಿಯಿಂದ ವರ್ತಿಸುವ, ಭಕ್ತರಾದ ನರನಾರಿಯರನ್ನೇ, ದಂಪತಿಗಳನ್ನೇ 'ಅಶ್ವಿನೌ' ಎಂದು ಗ್ರಹಿಸಿದರೆ, ಅರ್ಥಕ್ಕೆ ಮತ್ತೂ ಕಳೆಕಟ್ಟುತ್ತದೆ. ಆತ್ಮಾರಾಮರೂ, ಈಶ್ವರಾರ್ಪಿತ ಸರ್ವಸ್ವರೂ ಆದ ದಂಪತಿಗಳನ್ನೇ - ಮಾತಾ-ಪಿತೃಗಳೂ ದಂಪತಿಗಳೇ ತಾನೇ ? - **"ಅಶ್ವಿನೌ"** - ಎಂದರಿತರೆ, ಮಂತ್ರ ಸೊಗಸಾಗಿ ಜೀವನಪಥವನ್ನು ತೋರಿಸುತ್ತದೆ.

ಇಷ್ಟು ದೀರ್ಘ ವಿವೇಚನಾ ನಂತರ, ಪ್ರಕರಣೋಚಿತವಾದ ತೀರ್ಮಾನವಿದೇ ಆಗಿದೆ. ಈ ಮಂತ್ರದಲ್ಲಿ ಹೇಳಲ್ಪಟ್ಟ **'ಅಶ್ವಿನೌ'**ಗಳು ಮತ್ತಾರೂ ಅಲ್ಲ; ದಂಪತಿಗಳು.

ಆದರ್ಶ ದಂಪತಿಗಳಾಗಬೇಕಾದರೆ, ಯಾವ ಯಾವ ಗುಣಗಳನ್ನು ಜೀವನದಲ್ಲಿ ಅರಳಿಸಿ ಕೊಳ್ಳಬೇಕು - ಎಂಬ ಮರ್ಮಸ್ಪರ್ಶೀ ಆದೇಶವಿದೆ, ಈ ಮಂತ್ರದಲ್ಲಿ.

"**ಅಶ್ವಿನಾ! ಯಜ್ವರೀಃ ಇಷಃ ಚನಸ್ಯತಂ.**" – "ಆತ್ಮವಂತರಾದ, ಆತ್ಮ - ಪರಮಾತ್ಮರೆಂಬ ಶಾಶ್ವತ ತತ್ತ್ವಗಳ ಸಾಕ್ಷಾತ್ಕಾರಕ್ಕಾಗಿ ಮಹದಾಸಕ್ತಿಹೊಂದಿರುವ ದಂಪತಿಗಳೇ! ಆ ಶಾಶ್ವತ ತತ್ತ್ವಗಳೊಂದಿಗೆ ನಿಮ್ಮ ಸಂಪರ್ಕವನ್ನು ಸಾಧಿಸಲು ಸಾಧನ ಗಳಾದ ಸತ್ಕಾಮನೆಗಳನ್ನೇ ಜೀವನಗತವಾಗಿ ಮಾಡಿಕೊಳ್ಳಿರಿ; ಅಥವಾ ಅಂತಹ ಆಧ್ಯಾತ್ಮಿಕ ಸಂಪರ್ಕವನ್ನು ಸಾಧಿಸಲು ತಕ್ಕ ಮನೋಭಾವವನ್ನು ರೂಢಿಸಲು ನೆರವಾಗುವ, ಹಿಂಸಾರಹಿತವಾದ ಸಾತ್ವಿಕಾಹಾರವನ್ನೇ ಸೇವಿಸಿರಿ." – ಎಂಬುದೇ ಈ ವಿಧಿವಾಕ್ಯದ ಸರಳ ವಾದ ಅರ್ಥ. "**ಆಹಾರಶುದ್ಧೌ ಸತ್ವಶುದ್ಧಿಃ; ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ**" "ಆಹಾರ ಶುದ್ಧಿಯಿಂದಲೇ ಬುದ್ಧಿ ಶುದ್ಧವಾಗುವುದು; ಬುದ್ಧಿಶುದ್ಧವಾದಲ್ಲಿ (ಮೋಕ್ಷ ಶಾಸ್ತ್ರಗಳೆಲ್ಲದರ) ಸ್ಮರಣವೂ ದೃಢವಾಗುವುದು." – ಎಂಬ ಉಪನಿಷದ್ವಚನ ತ್ರಿಕಾಲಾ ಬಾಧಿತಸತ್ಯ ಕಾಮನೆಯ ಬಗೆಗೆ ಹೇಳಬೇಕಾದರೂ ಏನಿದೆ? ಸತ್ಕಾಮನೆಯೇ ಸಮಸ್ತ ಸನ್ಮಂಗಳಗಳ ಸ್ರೋತಸ್ಸು. ಆ ಸ್ರೋತಸ್ಸೊಂದು ಬತ್ತಿಹೋಗದಿದ್ದರೆ ಸಾಕು; ಎಲ್ಲ ಐಶ್ವರ್ಯಗಳಿಗಿಂತ ಮಿಗಿಲಾದ ಐಶ್ವರ್ಯ ಅದೇ.

ಅಹುದು. ಆ ಐಶ್ವರ್ಯ ಬಾಳಿಗೆ ಹೊಸೆದು ಬರಬೇಕಾದರೆ, ದಂಪತಿಗಳು, ನರನಾರಿಯರು ರೂಢಿಸಿಕೊಳ್ಳಲೇ ಬೇಕಾದ ತತ್ತ್ವಗಳೆರಡಿವೆ. ಅವರು ಮೊದಲಾಗಿ 'ದ್ರವತ್ಪಾಣಿ' ಗಳಾಗಬೇಕು; ಎಂದರೆ, ಶೀಘ್ರವಾಗಿಯೇ ತನ್ನ ಪಾಲಿನ ಕರ್ತವ್ಯಗಳನ್ನು ಚಾಚೂತಪ್ಪದಂತೆ ಮಾಡುವ ಕೈಗಳು ಅವರದಾಗಿರಬೇಕು. ಕೈಮೇಲೆ ಕೈಹಾಕಿ, ಆರಾಮ ಕುರ್ಚಿಯಲ್ಲಿಯೋ, ತೂಲಿಕಾತಲ್ಪ (ಹತ್ತಿಯ ಹಾಸಿಗೆ) ದಲ್ಲಿಯೋ ಬಿದ್ದುಕೊಂಡಿರುವ ಸೋಮಾರಿಯ ಮನಸ್ಸಿನಲ್ಲಿ ಎಂದೂ ಸತ್ಕಾಮನೆಗಳುದಿಸಲಾರವು. "Lazy mind is the devil's work - shop" – ಎಂಬ ಆಂಗ್ಲಭಾಷಾ ಕಥನ ಶತಪ್ರತಿಶತ ಸತ್ಯ. ಮಹರ್ಷಿ ದಯಾನಂದರನ್ನು ಕಲ್ಕತ್ತಾನಿವಾಸೀ ಶಿಷ್ಯನೊಬ್ಬ – "ಸ್ವಾಮೀಜೀ! ನೀವು ಅದೆಂತು ಪೂರ್ಣಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬಂದಿದ್ದೀರಿ? ಕಾಮ ನೆಂದೂ ನಿಮ್ಮ ಚಿತ್ತ - ದ್ವಾರವನ್ನು ತಟ್ಟಲಿಲ್ಲವೇ? ನಿಮ್ಮ ಬುದ್ಧಿಯ ಕಿಟಕಿಯಿಂದ ಇಣಿಕಿ ನೋಡಲಿಲ್ಲವೇ?" – ಎಂದು ಕೇಳಿದನು. ಮಹರ್ಷಿ ಒಂದೆರಡು ನಿಮಿಷ ಕಣ್ಮುಚ್ಚಿ ಕುಳಿತರು. ಆ ಮೇಲೆ - "ಇಲ್ಲ, ಭದ್ರಪುರುಷನೇ! ಇಲ್ಲ ವೇದ - ಪ್ರಚಾರ, ಸಮಾಜಸುಧಾರ, ಉಪಾಸನಾಧಾರಗಳಲ್ಲೇ ಮಗ್ನವಾಗಿರುವ ನನ್ನ ಮನಸ್ಸಿಗೆ, ಕಾಮನ ಬಗೆಗೆ ಚಿಂತಿಸುವ ಬಿಡುವಾದರೂ ಎಲ್ಲಿದೆ?" ಎಂದು ಹೇಳಿದರು. ಕೈ ತುಂಬ ಕೆಲಸ ಇಟ್ಟುಕೊಂಡಿದ್ದ ಮಹರ್ಷಿಗೆ ಮನ್ಮಥನ ಸ್ಮರಣೆಮಾಡಲು ಕಾಲವಾದರೂ ಎಲ್ಲಿತ್ತು?

ದ್ವಿತೀಯ ಸೂಕ್ತದ ಐದನೆಯ ಮಂತ್ರದಲ್ಲಿ 'ದ್ರವತ್'ಶಬ್ದ ಬಂದೇ ಇದೆ. ಮತ್ತೆ ಅದನ್ನು ವರ್ಣಿಸುವ ಆವಶ್ಯಕತೆಯಿಲ್ಲ. 'ಪಾಣಿ' ಶಬ್ದ ಅನ್ಯ ಅವಯವಗಳ

ಪ್ರತಿನಿಧಿ; ವಸ್ತುತಃ ಸಮಸ್ತ ಅಂತಃಕರಣ ಬಾಹ್ಯಕರಣಗಳನ್ನೂ ಈ ಒಂದು ಶಬ್ದದಿಂದ ಗ್ರಹಿಸಬೇಕು.

ಎರಡನೆಯದಾಗಿ, ದಂಪತಿಗಳು 'ಶುಭಸ್ಪತಿ'ಗಳಾಗಬೇಕು. ಶುಭದ ಮೇಲೆ, ಮಂಗಳದ ಮೇಲೆ ಭಾಷಣ ಮಾಡುವುದರಿಂದಲ್ಲ; ಶುಭವನ್ನು ಪಾಲಿಸುವುದರಿಂದ ಮಾತ್ರ ಜೀವನ ಮಾನವೀಯತೆಯು ಮಹದೈಶ್ವರ್ಯದಿಂದ ಮೆರೆದೀತು. ಪ್ರಚಾರಕ್ಕಿಂತ ವಿಚಾರ; ವಿಚಾರಕ್ಕಿಂತ ಆಚಾರ ಶಕ್ತಿಶಾಲಿ – ಎಂಬುದು ನೆನಪಿರಬೇಕು. "ಯಜ್ಞವನ್ನೂ, ಸತ್ಕರ್ಮವನ್ನೂ ರಕ್ಷಿಸುವುದೆಂತು ?" – ಎಂಬ ಪ್ರಶ್ನೆಗೆ ಋಗ್ವೇದ ಕೊಟ್ಟಿರುವ ಉತ್ತರವಿದು:- **"ಯಜ್ಞೇನ ಯಜ್ಞಮವ ಯಜ್ಞಿಯಃ ಸನ್"** [3. 32. 12.] ಓ ಇಂದ್ರಿಯವಾನ್ ಜೀವ! [ಯಜ್ಞಿಯಃಸನ್] ಸ್ವತಃ ಯಜ್ಞಕರ್ತನಾಗಿ, ಮಂಗಳಕಾರ್ಯನಿಷ್ಠನಾಗಿ, [ಯಜ್ಞೇನ] ಯಜ್ಞದಿಂದ, ಶುಭಕರ್ಮದಿಂದ, [ಯಜ್ಞಂ ಅವ] ಯಜ್ಞವನ್ನೂ, ಶುಭಕರ್ಮವನ್ನೂ ರಕ್ಷಿಸು."

ಸಕ್ರಿಯಧರ್ಮೋಪದೇಶ ವೇದಗಳ ವೈಶಿಷ್ಟ್ಯ. **"ಯಶ್ಚಿಕೇತ ಸ ಸುಕ್ರತುಃ ದೇವತ್ರಾ ಸ ಬ್ರವೀತು ನಃ ।"** [ಋಗ್ವೇದ:–5. 65. 1.]- "[ಯಃ] ಯಾವನು, [ಚಿಕೇತ] ತಿಳಿದಿದ್ದಾನೋ, [ಸಃ] ಅವನು, [ಸುಕ್ರತುಃ] ಉತ್ತಮ ಕರ್ಮನಿಷ್ಠನೂ, ಉದಾತ್ತ ವಿಚಾರಶೀಲನೂ ಆಗಿರಲಿ. [ಸಃ] ಅವನೇ, ಜ್ಞಾನಿಮಾತ್ರವಲ್ಲ; ಸತ್ಕರ್ಮನಿಷ್ಠನೂ, ವಿಚಾರ ವಿಶ್ಲೇಷಕನೂ ಆದ ಭದ್ರ ಪುರುಷನೇ, [ದೇವತ್ರ] ವಿದ್ವತ್ಸಭೆಯಲ್ಲಿ, [ಸಬ್ರುಃವೀತು] ನಮಗೆ ಉಪದೇಶಮಾಡಲಿ." – ಈ ಬಗೆಯ ಆದೇಶ ವೇದಗಳಲ್ಲಿ ತುಂಬಿ ತುಳುಕುತ್ತಲಿದೆ. ಅಹುದು; ತಾನೇ ಅನುಸರಿಸದುದನ್ನು ಅನ್ಯರಿಗೆ ಉಪದೇಶ ಮಾಡುವ ಅಧಿಕಾರವಾವನಿಗಿದೆ ? **"ಸತ್ಯಮೂಚುರ್ನರ ಏನಾಹಿಚಕ್ರುಃ"** [ಋಗ್ವೇದ:- 4. 33. 6.] - " [ನರಃ] ಮಾನವರು, [ಸತ್ಯಂ ಊಚುಃ] ಸತ್ಯವನ್ನಾಡಬೇಕು; [ಏನಾಹಿ] ಅದಕ್ಕೆ ತಕ್ಕಂತೆಯೇ, [ಚಕ್ರುಃ] ಆಚರಿಸಬೇಕು." - ಎಂಬ ಋಗ್ವೇದೀಯ ಆದೇಶ ಯಾರ ಹೃದಯದ ಅಂತರತಮವನ್ನು ತಾನೇ ಸ್ಪರ್ಶಿಸದು ?

ಈರೀತಿ ಶುಭವಾದ ಕರ್ಮಗಳನ್ನು ಮಾಡುತ್ತಲೇ, ಶುಭದ ರಕ್ಷಕರಾಗಬೇಕು.- ಎಂಬ ಭಾವನಾದ್ಯೋತಕ ಈ **'ಶುಭಸ್ಪತೀ'** ಎಂಬ ವಿಶೇಷಣ. ಈ ಎರಡು ಅನಿವಾರ್ಯ ತತ್ತ್ವಗಳನ್ನು ಮೈಗೂಡಿಸಿಕೊಳ್ಳದೆ, **'ಋಜ್ವರೀಃ ಇಷ'** - ಭಗವತ್ಸಂಪರ್ಕ - ಜೀವಮಾತ್ರರಲ್ಲಿ ಐಕ್ಯತರುವ ಸತ್ಕರ್ಮವನ್ನು ಹಾಗೂ ಸತ್ಕಾಮನೆಯನ್ನು ಬಾಳಿಗಿಳಿಸಿಕೊಳ್ಳಲು ಸಾಧ್ಯವಿಲ್ಲ; ಯಾರಿಗೂ ಸಾಧ್ಯವಿಲ್ಲ. ಆದಕಾರಣ ದಂಪತಿಗಳು ಸದಾ ಕೈ ತುಂಬಾ ಕೆಲಸವನ್ನಿಟ್ಟುಕೊಂಡು, ಅದನ್ನು ಕ್ಷಿಪ್ರವಾಗಿ ಸಾಧಿಸಿಕೊಳ್ಳುವವರೂ, ಸ್ವತಃ ಶ್ರೇಷ್ಠವಾದ ಆಚಾರವನ್ನಿಟ್ಟುಕೊಂಡು ಶುಭ - ಶುಭ್ರ ವೃತ್ತಿ - ಪ್ರವೃತ್ತಿಗಳ ರಕ್ಷಕರಾಗಬೇಕು. ಸ್ತುತಿಗಲ್ಲ; ಕೃತಿಗೆ ಕರುಣಾಮಯನು ಸತ್ಫಲವನ್ನು ಕೊಡುವನು.

## ಸಂಹಿತಾ ವಿಭಾಗ

**ಅಶ್ವಿನಾ ಪುರುದಂಸಸಾ ನರಾ ಶವೀರಯಾ ಧಿಯಾ ।**

**ಧಿಷ್ಣ್ಯಾ ವನತಂ ಗಿರಃ ॥೨॥**

**ಪದಪಾಠಃ**– ಅಶ್ವಿನಾ, ಪುರುದಂಸಸಾ, ನರಾ, ಶವೀರಯಾ, ಧಿಯಾ, ಧಿಷ್ಣ್ಯಾ ವ ನತಂ, ಗಿರಃ ॥೨॥

**ಅನ್ವಯಃ**– ಪುರುದಂಸಸಾ ನರಾ ಧಿಷ್ಣ್ಯಾ ಅಶ್ವಿನಾ! ಧಿಯಾ ಗಿರಃ ವನತಂ॥

**ಶಬ್ದಾರ್ಥ**:– [ಪುರುದಂಸಸಾ] ಬಹುಕರ್ಮನಿಷ್ಠರೂ, [ನರಾ] ಅನ್ಯರಿಗೆ ಪಥ ಪ್ರದರ್ಶನ ಮಾಡುವ ನಾಯಕರೂ, [ಧಿಷ್ಣ್ಯಾ] ವಿಶಾಲವಾದ, ಆಶ್ರಯದಾತೃಗಳೂ ಆದ, [ಅಶ್ವಿನಾ] ಅಧ್ಯಾತ್ಮ ಪ್ರಧಾನರಾದ, ದಂಪತಿಗಳೇ ! ನರ–ನಾರಿಯರೇ ! [ಧಿಯಾ] ಬುದ್ಧಿ ಪೂರ್ವಕವಾಗಿ, ತದನುಸಾರವಾದ ಕರ್ಮದೊಂದಿಗೆ, [ಗಿರಃ] ವಚನಗಳನ್ನು [ವನತಂ] ಅಕ್ಕರೆಯಿಂದ ಅಂಗೀಕರಿಸಿರಿ.

**ತಾತ್ಪರ್ಯ**:– ನರನಾರಿಯರು ಮಾನವಜನ್ಮದ ಸಾರ್ಥಕ್ಯಕ್ಕಾಗಿ ಬಹುಕರ್ಮ ನಿಷ್ಠರಾಗಿರಬೇಕು. ತಮ್ಮ ಕ್ರಿಯಾತ್ಮಕವಾದ ಜೀವನದಿಂದ ಅನ್ಯರಿಗೆ ದಾರಿತೋರಿಸಬೇಕು. ದೀನ-ಹೀನರಿಗೆ, ದುಃಖೀ-ದರಿದ್ರರಿಗೆ ಸ್ವಲ್ಪವೂ ಮರೆಮಾಚದೆ ತಮ್ಮ ಶಕ್ತ್ಯನುಸಾರ ಆಶ್ರಯವನ್ನು ನೀಡಬೇಕು. ಮತ್ತು ಪ್ರಜ್ಞಾನ-ಶುಭಕರ್ಮಗಳ ಆಧಾರದ ಮೇಲೆ, ಭಗವದುಕ್ತಿಗಳಾದ ವೇದಗಳ ಹಾಗೂ ಅನ್ಯ ವಿಶಾಲಹೃದಯರಾದ ವಿದ್ವಜ್ಜನರ ಉಪದೇಶ ಗಳನ್ನು ಪ್ರೀತ್ಯಾದರಗಳಿಂದ ಅಂಗೀಕರಿಸಬೇಕು.

**ಭಾಷ್ಯ**:– ಈ ಮಂತ್ರದಲ್ಲಿ ಬಂದಿರುವ ಶಬ್ದಗಳಲ್ಲಿ ಅನೇಕ ಶಬ್ದಗಳು ಹಿಂದಣ ಮಂತ್ರಗಳಲ್ಲಿ ಬಂದಿರುವವೇ ಆಗಿವೆ. ಕೇವಲ 'ಪುರುದಂಸಸಾ' ಹಾಗೂ 'ಧಿಷ್ಣ್ಯಾ' ಈ ಎರಡೇ ಹೊಸವಾಗಿವೆ.

ಈ 'ಅಶ್ವಿನೌ' ಯಾರು – ಎಂದು ಸಾಕಷ್ಟು ಚರ್ಚಿಸಿದ್ದೇವೆ. ಪೌರಾಣಿಕ ಕಲ್ಪನೆಯು 'ಅಶ್ವಿನೌ'ಗಳನ್ನು ಹಿಡಿದು ಯಾರೂ ಭ್ರಾಂತರಾಗಬಾರದು. 'ಅಶ್ವ' ಎಂಬಶಬ್ದ ಸ್ವತಃ ಅನೇಕಾರ್ಥವಾಚಕವಾದುದರಿಂದ, "ತದ್ವಾನಶ್ವೀ, ತದ್ವತೀ ಅಶ್ವಿನೀ. ತಾವುಭೌ ಅಶ್ವಿನೌ" - ಎಂಬ ಮೂಲ ಸೂತ್ರವನ್ನೇನೋ ರೂಪಿಸಿಕೊಳ್ಳಬಹುದು. ಆದರೆ, 'ಅಶ್ವ' ಎಂಬ ಪದದ ಸಮಸ್ತಾರ್ಥಗಳನ್ನೂ ಗ್ರಹಿಸಿ, ಅವುಗಳ ಆಧಾರದಿಂದ 'ಅಶ್ವಿನೌ' ಶಬ್ದದ ವ್ಯಾಖ್ಯಾನಕ್ಕಿಳಿದರೆ, ಅದಕ್ಕೇ ಒಂದು ಬೃಹದ್‌ಗ್ರಂಥ ಬೇಕಾದೀತು, ನಾವು 'ಋಗ್ವೇದ ದರ್ಶನ'ಕ್ಕಾಗಿ ಲೇಖನಿಯನ್ನೆತ್ತಿರುವುದು, ಜನಸಾಧಾರಣರಿಗೂ ಸುಲಭವಾಗಿ ಅರ್ಥವಾಗುವಂತಹ ಸುಬೋಧ ಭಾಷ್ಯವನ್ನು ರಚಿಸುವುದಕ್ಕಾಗಿ ಮಾತ್ರ; ವ್ಯಾಕರಣ

ಪ್ರಕ್ರಿಯೆಗಳ, ತರ್ಕವಿತರ್ಕಗಳ, ಸ್ವಪಾಂಡಿತ್ಯ ಪ್ರದರ್ಶನದ ಸೌಕರ್ಯದ ಸಿಕ್ಕುಗಟ್ಟಿದ ಶಬ್ದ ಜಾಲದಲ್ಲಿ ಪಾಠಕರನ್ನು ಸಿಕ್ಕಿಸುವುದಕ್ಕಾಗಿಯಲ್ಲ.

ಮಹರ್ಷಿದಯಾನಂದರು ಅದೇ ಜಲಾಗ್ನಿಗಳನ್ನು ಹಿಡಿದು ಮುನ್ನಡೆದಿದ್ದಾರೆ. ಮಧ್ವರು ತಮ್ಮ ಪೌರಾಣಿಕ ನಿಲುವನ್ನೇ ಭದ್ರವಾಗಿ ಹಿಡಿದು 'ಅಶ್ವಿನೌ' ಎಂಬ ವಿಶಿಷ್ಟ ದೇವತಾಯುಗಳವನ್ನೇ ಸಂಬೋಧಿಸುತ್ತಾ ನಡೆದಿದ್ದಾರೆ. **'ಪುರುದಂಸಸೌ'** ಎಂಬುದಕ್ಕೆ **'ಬಹುಕರ್ಮಕೃತೌ'** – 'ಬಹಳ ಕಾರ್ಯಗಳನ್ನು ಮಾಡುವವರು' ಎಂದೂ **'ಶವೀರಯೊಧಿಯೊ'** ಎಂಬುದಕ್ಕೆ **'ಸೌಖ್ಯವೀರ್ಯಾತ್ಮಿಕ್ಯಾಧಿಯಾ'** - 'ಸುಖ - ವೀರ್ಯಾತ್ಮಕವಾದ ಪ್ರಜ್ಞಾಕರ್ಮಗಳಿಂದ ಯುಕ್ತರಾಗಿ'–ಎಂದೂ, **'ಧಿಷ್ಣ್ಯೌ'** ಎಂಬುದಕ್ಕೆ **'ಸರ್ವಾಶ್ರಂತು'** "ಎಲ್ಲರಿಗೂ ಆಶ್ರಯ ಕೊಡುವವರು" – ಎಂದೂ ಭಾಷ್ಯ ಮಾಡಿದ್ದಾರೆ. ಶಬ್ದಾರ್ಥಗಳ ಮಟ್ಟಿಗೆ ಯಾವ ವಿವಾದವೂ ಇಲ್ಲ. 'ಗಿರಃ' – ಎಂಬುದಕ್ಕೆ 'ಸ್ತುತಿರೂಪವಾದ ವಚನಗಳು' – ಎಂದಿದ್ದಾರೆ. ಅಶ್ವಿನೌ - ಎಂಬವರು ಇಲ್ಲಿನವರೇ ; ಆಧ್ಯಾತ್ಮಿಕ ವೃತ್ತಿಯತ್ತ ಹೊರಳಿರುವ ಮಾತಾ–ಪಿತೃಗಳು, ಪತಿ–ಪತ್ನಿಯರು, ನರ–ನಾರಿಯರು – ಎಂಬ ಸರಳವಾದ, ಸುಬೋಧವಾದ, ಶಾಸ್ತ್ರ - ಪ್ರಮಾಣಗಳಿಂದಲೂ ಪರಿಪುಷ್ಟವಾದ ಅರ್ಥವನ್ನು ಗ್ರಹಿಸಿದರೆ, ಆಗ ಪಾಠಕರು ಅದೆಷ್ಟು ಸುಲಭವಾಗಿ ವೇದಗಳ ಗೌರವ - ಗರಿಮೆಯನ್ನು ಕಂಡುಕೊಂಡಾರು– ಎಂಬ ತಥ್ಯ ಓದುಗರಿಗೆಯೇ ತಿಳಿಯುವುದು.

ಅಹುದು; ಅಶ್ವಶಬ್ದಕ್ಕಿರುವ **'ವೀರ್ಯಂ ವಾ ಅಶ್ವಃ'** [ಶತ:-2.1.4.24.] "ವೀರ್ಯವೇ ಅಶ್ವ" ಎಂಬ ವಿಶಿಷ್ಟಾರ್ಥವನ್ನು ಗ್ರಹಿಸಿ, **'ತದ್ವಂತಾ, ವೀರ್ಯವಂತಾ ಅಶ್ವಿನೌ'.** "ವೀರ್ಯಸಂಪನ್ನರಾದ, ಸಾಮರ್ಥ್ಯ ಸೌಂದರ್ಯವಂತರಾದ ನರ-ನಾರಿಯರೇ ಅಶ್ವಿನೌ." - ಎಂಬ ಭಾವನೆಯನ್ನು ಹೃದಯಾಂಕಿತವಾಗಿ ಮಾಡಿಕೊಂಡರೆ, ಈ ಮಂತ್ರದ ಅನ್ಯಶಬ್ದಗಳ ಆಕಾಂಕ್ಷೆ ಅಚ್ಚುಕಟ್ಟಾಗಿ ಬುದ್ಧಿಗಮ್ಯವಾಗುತ್ತದೆ.

"ಪುರುದಂಸಸಾ" – ಎಂಬ ಶಬ್ದದಲ್ಲಿನ 'ಪುರು' ಪದ ಪಾಠಕರ ಗಮನಕ್ಕೆ ಬಂದೇ ಇದೆ. ನಿರುಕ್ತದಲ್ಲಿ [4.4.25.4.] ನಾವು **"ದಂಸಯಃ ಕರ್ಮಾಣಿ"**–ಎಂಬರ್ಥವನ್ನು ಕಾಣುತ್ತೇವೆ. ಈ ದಂಸಶಬ್ದ, ದಂಸಿ, ದಂಸನ್, ದಂಸನಂ, ದಂಸನಾ–ಹೀಗೆ ನಾಲ್ಕು ರೂಪಗಳಲ್ಲಿ ಕಂಡುಬರುತ್ತದೆ. ಕೊನೆಯ ಎರಡು ರೂಪಗಳು ಲೌಕಿಕ ಸಂಸ್ಕೃತದಲ್ಲಿ ಮಾತ್ರ ಕಂಡುಬರುತ್ತದೆ. ನಾಲ್ಕು ರೂಪಗಳಿಗೂ ಅರ್ಥ ಮಾತ್ರ ಒಂದೇ - ಕರ್ಮ ವೆಂಬುದು, ಮಂತ್ರದಲ್ಲಿನ 'ಪುರುದಂಸಸಾ' ಎಂಬ ಪ್ರಯೋಗದಲ್ಲಿ ಅದು 'ದಂಸಸ್' ಎಂಬ ರೂಪದಲ್ಲಿದೆ. ಬಹುವ್ರೀಹಿ ಸಮಾಸವಿಲ್ಲಿದೆ; **"ಪುರೂಣಿ ದಂಸಾಂಸಿ ಯಯೋಃ, ತಾ ದೇವ ಪುರುದಂಸಸೌ"** - ಎಂದು ಬಿಡಿಸಬೇಕಾಗುತ್ತದೆ. "ಯಾವ ಇಬ್ಬರ ಕರ್ಮ ಗಳು ಬಹಳವೋ, ಅವರು 'ಪುರುದಂಸಸೌ' - ಎಂದಾಗುತ್ತದೆ. ಈಗ 'ಶವೀರಯಾ' ಶಬ್ದ, ಇದು ಶವೀರಾಶಬ್ದದ ತೃತೀಯಾ ವಿಭಕ್ತಿರೂಪ. **'ಶವಗತಾ'** - ಎಂದರೆ ಗತಿ, ಗಮನ. ಚಲನೆ - ಎಂಬರ್ಥದ ಧಾತುವಿನಿಂದ ವ್ಯುತ್ಪನ್ನವಾದ ಈ ಶಬ್ದ **'ಶವೇರಿತಾ ಶವೀರಾ'**

ಎಂದರೆ ವೇಗದಿಂದ ಅಥವಾ ಗಮನ (ಕನ್ನಡದ ಗಮನದಲ್ಲಿ) ದಿಂದ ಪ್ರೇರಿತವಾದುದು'- ಎಂಬರ್ಥವನ್ನು ಕೊಡುತ್ತದೆ. 'ಧೀಃ' ಶಬ್ದ ಓದುಗರಿಗೆ ಹೊಸತಲ್ಲ. ಒಟ್ಟು '**ಶವೀರಯಾ ಧಿಯಾ**' ಎಂದಾಗ, ಗಮನದಿಂದ ಪ್ರೇರಿತವಾದ, ಸ್ತಬ್ಧವಾಗಿ ನಿಲ್ಲದ, ಚುರುಕಾಗಿ ಆಲಸ್ಯರಹಿತವಾಗಿ ನಡೆಯುತ್ತಾ ಹೋಗುವ ಪ್ರಜ್ಞಾನ-ಕರ್ಮಗಳಿಂದ" - ಎಂಬ ಅರ್ಥ ನಿಷ್ಪನ್ನವಾಗುತ್ತದೆ.

ಇನ್ನುಳಿದುದು 'ಧಿಷ್ಣ್ಯಾ' ಅಥವಾ 'ಧಿಷ್ಣ್ಯೇ' "**ಧಿಷ್ಣ್ಯಃ, ಧಿಷಣ್ಯಃ, ಧಿಷಣಾಭವ; ಧಿಷಣಾವಾಕ್**" [ದೈವತಕಾಂಡ:- 2. 1. 3.] — "ಧಿಷ್ಣ್ಯ ಎಂದರೆ ಧಿಷಣ್ಯ; ಧಿಷಣೆಯಿಂದ ಹುಟ್ಟಿದುದು. ಧಿಷಣಾ-ಎಂದರೆ ವಾಕ್." ಎಂದಿದ್ದಾರೆ ಯಾಸ್ಕರು. 'ವಾಕ್ಕಿನಿಂದ, ವಾಣಿಯಿಂದ ಉದ್ಭವಿಸುವುದು ಯಾವುದೋ ಅದೇ ಧಿಷ್ಣ್ಯ; ಅವನೇ ಧಿಷ್ಣ್ಯ'- ಎಂದಿದರ ಭಾವನೆ. ವೇದಾದಿ ಸತ್ಯಶಾಸ್ತ್ರಗಳ ಅಧ್ಯಯನದಿಂದ ಮತ್ತು ವಿದ್ವಜ್ಜನರ ಸಂಗದಿಂದ, ಅವರ ಉಪದೇಶ ವಾಕ್ಯಗಳಿಂದ ಜೀವನ ಸೌಂದರ್ಯ ಪಡೆದವನು ಧಿಷ್ಣ್ಯನು. ಅವನು ಸಂಕುಚಿತ ಹೃದಯನಾಗುವುದಂತಿರಲಿ; ಸಂಕುಚಿತ ಹೃದಯತ್ವದ, ಹೃದಯದ ಚಿಕ್ಕತನದ ಸ್ವಪ್ನವನ್ನೂ ಕೂಡ ಕಾಣಲಾರನು. '**ಪ್ರಿಯೋ ದೇವಾನಾಂ ಭೂಯಾಸಂ; ಪ್ರಿಯಃ ಪ್ರಜಾನಂ ಭೂಯಾಸಂ; ಪ್ರಿಯಃ ಪಶೂನಾಂ ಭೂಯಾಸಂ; ಪ್ರಿಯಃ ಸಮಾನಾನಾಂ ಭೂಯಾಸಂ.**' [ಅಥರ್ವವೇದ:-17.1.2.5.]—"ಓ ದೇವದೇವ! ನಾನು ವಿದ್ವಜ್ಜನರಿಗೆ ಪ್ರಿಯನಾಗುವೆ; ಜನಸಾಧಾರಣರಿಗೆ ಪ್ರಿಯನಾಗುವೆ; ಪಶುಗಳಿಗೆ ಪ್ರಿಯನಾಗುವೆ. ಸಮಾನರಿಗೆ ಪ್ರಿಯನಾಗುವೆ." - ಎಂದು ಹೃದಯಾಂತರಾಳದಿಂದ ಪ್ರಾರ್ಥಿಸುವ, '**ಅದ್ಯಾಮುರೀಯ ಯದಿ ಯಾತುಧಾನೋ ಅಸ್ಮಿ ಯದಿ ವಾಯುಸ್ತತಪ ಪೂರುಷಸ್ಯ**' [ಋಗ್ವೇದ:-7.104.15.] - "ಭಗವನ್! ನಾನು ಪರಸ್ವಾಪಹಾರಿಯಾದ ಭೋಗವಿಲಾಸಿಯಾಗಿದ್ದಲ್ಲಿ, ಅಥವಾ ಬೇರಾವನೊಬ್ಬನ ಬಾಳಿಗೆ ನೋವನ್ನುಂಟುಮಾಡಿದ್ದರೆ, ನನಗೆ ಇಂದೇ ಸಾವು ಬರಲಿ." - ಎಂದು ಮೊರೆಯಿಡುವ ವೈದಿಕ ಎಂದಿಗೂ ಸಂಕುಚಿತ ಹೃದಯನಾಗಲಾರನು. "**ಉತದೇವಾ ಅವಹಿತಂ ದೇವಾ ಉನ್ನಯಥಾ ಪುನಃ। ಉತಾಗಶ್ಚಕ್ರುಷಂ ದೇವಾ ದೇವಾ ಜೀವಯಥಾ ಪುನಃ॥**" [ಅಥರ್ವವೇದ:-4.13.1.]—"ವಿದ್ವಜ್ಜನರೇ! ಉದಾರಾಶಯರೇ! ಕೆಳಗೆ ಬಿದ್ದವನನ್ನು ಮತ್ತೆ ಮೇಲೆತ್ತಿರಿ. ಪಾಪ ಮಾಡುತ್ತಾ ನಡೆಯುವ ಆತ್ಮಶಕ್ತಿಹೀನನಲ್ಲಿ ನವಜೀವನವನ್ನೂದಿರಿ."— ಎಂಬ ಭವ್ಯಾದೇಶವನ್ನು ಆಲಿಸಿದ ವೇದಾನುಯಾಯಿ ಎಂದಿಗೂ ಚಿಕ್ಕತನವನ್ನು ತೋರಲಾರನು. ಕೊನೆಗೆ, "**ಮಮದೇವಾ ವಿಹವೇಸಂತು ಸರ್ವೇ ಇಂದ್ರವಂತೋ ಮರುತೋ ವಿಷ್ಣುರಗ್ನಿಃ**" [ಋಗ್ವೇದ:-10.128.2.]– "ಜ್ಞಾನಿಗಳೇ! ಸರ್ವೇಶ್ವರನ ಆರಾಧಕರೂ, ಸಂಯತಾತ್ಮರೂ, ತೇಜೋಮಯನಾದ ಸರ್ವವ್ಯಾಪಕ ಪರಮಾತ್ಮನೂ ಸದಾ ನನ್ನ ವಿಶಿಷ್ಟವಾದ ಆಹ್ವಾನಕ್ಕೆ ಓಗೊಡಲಿ." - ಎಂದು ಹಾಡುವ ವೇದಾನುಯಾಯಿ ಮೂರುಕಾಲಕ್ಕೂ ಸಂಕುಚಿತಹೃದಯನಾಗಲಾರನು.

ಹೀಗೆ ನೋಡಿದಾಗ, ಮಂತ್ರದಲ್ಲಿನ 'ಧಿಷ್ಣ್ಯ'ಗಳು ಸರ್ವರಿಗೂ ಆಶ್ರಯ ಕೊಡುವ ಉದಾರಾತ್ಮರೇ ಆಗಿರಬೇಕು. ಎಷ್ಟು ಗಂಭೀರ, ಆದರೆ ಅದೆಷ್ಟು ಸರಳ ಈ ವೇದದ ಕರೆ ? ವಿರಾಡಾತ್ಮನಲ್ಲಿಯೂ ತಮ್ಮ ಆತ್ಮಗಳಲ್ಲಿಯೂ ಅಕ್ಷುಣ್ಣವಾದ ಆಸಕ್ತಿಯುಳ್ಳ ನರ-ನಾರಿಯರೇ ! ಆಲಸ್ಯರಹಿತರಾಗಿ ಸದಾ ಬಹುಕಾರ್ಯ ಮಗ್ನರಾಗಿರಿ. ಬೇರೆಯವರಿಗೆ ಮಾರ್ಗತೋರಿಸುವ ಕ್ರಿಯಾತ್ಮಕ ನಾಯಕರಾಗಿರಿ. ದೀನ-ದುಃಖೀ-ದರಿದ್ರರಿಗೆ ಆಶ್ರಯದಾತೃಗಳಾಗಿರಿ. ಉತ್ಕೃಷ್ಟಜ್ಞಾನವನ್ನೂ, ಶುಭಕರ್ಮಗಳನ್ನೂ ರೂಢಿಸಿಕೊಂಡು ನಿಷ್ಕ್ರಿಯರಾಗಿ ಬಿದ್ದಿರದೆ, ಚೈತನ್ಯದ ಪ್ರತಿಮೆಗಳಂತೆ ಎಲ್ಲರಿಗೂ ನಲಿವನ್ನು ತರುತ್ತಾ, ಮುಗುಳ್ನಗೆಯನ್ನು ಹಂಚುತ್ತಾ ಸುಳಿದಾಡಿರಿ. ವೇದಗಳ ವಚನಗಳಿಗೆ ಹಾಗೂ ವಿದ್ವಾಂಸರುಗಳ ಪ್ರವಚನಗಳಿಗೆ ಕಿವಿಕೊಡಿರಿ. ಮುಂದೆಲ್ಲವೂ ಚೆಂದ; ಮುಂದೆಲ್ಲವೂ ಅಂದ.

## ಸಂಹಿತಾ ವಿಭಾಗ

**ದಸ್ರಾ ಯುವಾಕವಃ ಸುತಾ ನಾಸತ್ಯಾ ವೃಕ್ತಬರ್ಹಿಷಃ ।**

**ಆ ಯಾತಂ ರುದ್ರವರ್ತನೀ ॥೩॥**

**ಪದಪಾಠ:–** ದಸ್ರಾ, ಯುವಾಕವಃ, ಸುತಾಃ, ನಾಸತ್ಯಾ, ವೃಕ್ತ ಬರ್ಹಿಷಃ ಆ, ಯಾತಂ, ರುದ್ರವರ್ತನೀ

**ಅನ್ವಯ:–** ದಸ್ರಾ ನಾಸತ್ಯಾಃ ವೃಕ್ತ ಬರ್ಹಿಷಃ ಸುತಾಃ ಯುವಾಕವಃ । ರುದ್ರವರ್ತನೀ ಆ ಯಾತಂ.

**ಶಬ್ದಾರ್ಥ:–** [ದಸ್ರೌ] ದುಷ್ಟ ಶಕ್ತಿಗಳನ್ನೆಲ್ಲಾ ಧ್ವಂಸ ಮಾಡುವ, [ನಾಸತ್ಯೌ] ಎಂದಿಗೂ ಅಸತ್ಯವಾದ ವ್ಯವಹಾರಗಳಲ್ಲಿ ತೊಡಗದ, ಸದಾ ಸತ್ಪಥದಲ್ಲಿಯೇ ನಡೆಯುವ ನರ - ನಾರಿಯರೇ! [ವೃಕ್ತ ಬರ್ಹಿಷಃ] ಹರಡಿದ ಅಥವಾ ಪವಿತ್ರಗೊಳಿಸಿದ ಆಸನಗಳಲ್ಲಿ, ಯಜ್ಞ - ಕರ್ಮನಿರತರಾದ, [ಸುತಾಃ] ಈಶ್ವರ ಪುತ್ರರಾದ ಸನ್ನರ - ಸನ್ನಾರಿಯರು, [ಯುವಾಕವಃ] ನಿಮ್ಮವರಾಗಿದ್ದಾರೆ; ಭೌತಿಕ ಪದಾರ್ಥಗಳ ಸಂಯೋಗ – ವಿಭಾಗ ಮಾಡುವ ವಿಜ್ಞಾನಿಗಳಾಗಿದ್ದಾರೆ. [ರುದ್ರವರ್ತನೀ] ಪಾಪಾತ್ಮರಿಗೆ ದಂಡವಿಧಿಸಿ ರೋದನಮಾಡಿಸುವ ಭಗವಂತನ ಹಾಗೂ ರೋಗನಿವಾಕರಾದ ಚಿಕಿತ್ಸಾಭಿಜ್ಞರ ಮಾರ್ಗದಲ್ಲಿಯೇ ನಡೆಯುವವರಾಗಿ, [ಆ ಯಾತಂ] ನಮ್ಮ ಬಳಿ ಬನ್ನಿರಿ.

**ತಾತ್ಪರ್ಯ:–** ಹೊಲಸಾದುದನ್ನೆಲ್ಲಾ ಹುಡಿಗೂಡಿಸುವ, ಅಂತಃಶತ್ರುಗಳ ನಿರ್ನಾಮ ಮಾಡುವ, ಸತ್ಯಾಚಾರ - ಸತ್ಯವಿಚಾರ - ಸತ್ಯಪ್ರಚಾರಗಳಲ್ಲಿಯೇ ಸದಾ ನಿರತರಾಗಿರುವ, ಯಾವುದೇ ಕಾರಣದಿಂದಲೂ ಅಸತ್ಯಕ್ಕೆ ಎಡೆಗೊಡದ, ಪ್ರಾಮಾಣಿಕರಾದ ನರ

ನಾರಿಯರೇ! ವಿಶಾಲವಾದ ಆಸನಗಳಲ್ಲಿ ವಿರಾಜಿಸುವ, ಪಾವನವಾದ ಯಜ್ಞಕರ್ಮಗಳಲ್ಲಿ ನಿರತರಾದ, ಭಗವತ್ಪುತ್ರರಾದ ಮಾನವಶ್ರೇಷ್ಠರು ವೈಜ್ಞಾನಿಕ ಕ್ಷೇತ್ರದಲ್ಲಿ ಭೌತಿಕ ವಸ್ತುಗಳ ಸಂಯೋಜನ – ವಿಭಾಜನ ಮಾಡಿ ನಿತ್ಯನೂತನ ಆವಿಷ್ಕಾರಗಳನ್ನು ಮಾಡುವವರೂ ಮತ್ತು ನಿಮ್ಮವರೂ ಆಗಿದ್ದಾರೆ. ದುಷ್ಟಶಿಕ್ಷಕನಾಗಿ ಪಾಪಿಗಳನ್ನು ರೋದನಕ್ಕೀಡು ಮಾಡುವ ಪರಮಾತ್ಮನ ಮಾರ್ಗದಲ್ಲಿ ಅಥವಾ ರೋಗನಿವಾರಕರಾದ ವೈದ್ಯರುಗಳ ಪರೋಪಕಾರವಾದ ಪಥದಲ್ಲಿ ನಡೆಯುತ್ತಾ ನಮ್ಮ ಹತ್ತಿರ ಬನ್ನಿರಿ.

**ಭಾಷ್ಯ:–** ಮಹರ್ಷಿ ದಯಾನಂದರು ಜಲಾಗ್ನಿವಿದ್ಯಾಪರವಾದ ಭಾಷ್ಯವನ್ನೇ ಮುಂದುವರಿಸಿದ್ದಾರೆ. ಮಹರ್ಷಿಗಳು, ಸಾಯಣರು, ಮಧ್ವರು ಹಾಗೂ ಮಹೀಧರರು ಕೊಡುವ ಶತಪಥದ, ಹಾಗೂ ನಿರುಕ್ತದ ಪ್ರಮಾಣಗಳೆಲ್ಲವೂ ಒಂದೇ ಆಗಿವೆ. ಮಹರ್ಷಿಗಳ ವ್ಯಾಖ್ಯಾನದಲ್ಲಿ, ಮಂತ್ರದಲ್ಲಿಲ್ಲದ ಹಲವಾರು ಶಬ್ದಗಳನ್ನು ಸೇರಿಸಬೇಕಾಗಿ ಬಂದಿದೆ. ಮಂತ್ರದಲ್ಲಿಲ್ಲದ ಯಾವುದೇ ಶಬ್ದವನ್ನೂ ಸೇರಿಸದಿರುವುದು ಸರ್ವೋತ್ತಮ. ಸೇರಿಸಲೇ ಬೇಕಾಗಿ ಬಂದರೆ, ಎಷ್ಟು ಸಾಧ್ಯವೋ ಅಷ್ಟು ಕಡಿಮೆ ಶಬ್ದಗಳನ್ನು ಸೇರಿಸುವುದು ಉಚಿತ. ಮೇಲಿನ ಅಥವಾ ಕೆಳಗಿನ ಮಂತ್ರದಿಂದ ಯಾವುದಾದರೂ ಶಬ್ದವನ್ನು ಅಧ್ಯಾಹಾರಮಾಡಿಕೊಳುವುದು ಅನುಚಿತವೇ ಅಲ್ಲ.

ಸಾಯಣ - ಮಹೀಧರರನ್ನು ಸದ್ದಿಲ್ಲದೆ ಬಿಟ್ಟೇಬಿಡಬಹುದು. ಏಕೆಂದರೆ ಅವರ ಪೌರಾಣಿಕ ಪರಂಪರೆಯ ಭಾಷ್ಯ ಯಾವ ರೀತಿಯಲ್ಲಿಯೂ ಸತ್ಯಾರ್ಥ ಗ್ರಹಣಕ್ಕೆ ನೆರವಾಗದು. ಶ್ರೀ॥ಮಧ್ವರದೂ ಪೌರಾಣಿಕ ಪರಂಪರೆಯೇ ಆದರೂ, ಅವರು ಮಾಡುವ ಶಬ್ದಾರ್ಥಗಳು ಬಹುಮಟ್ಟಿಗೆ ಗ್ರಾಹ್ಯವೇ ಆಗಿರುತ್ತವೆ.

ನರನಾರಿಯರ ಸರ್ವತೋಮುಖೀ ಉನ್ನತಿಯ ಸಾಧನೆಗಾಗಿ ಅವರು ಹಲವು ವಿಶಿಷ್ಟಗುಣಗಳನ್ನು ತಮ್ಮ ಜೀವನದಲ್ಲಿಯೇ ರೂಢಿಸಿಕೊಳ್ಳಬೇಕಾಗುತ್ತದೆ. ಇದರ ಮೊದಲಿನ ಎರಡು ಮಂತ್ರಗಳು ಸಾಕಷ್ಟು ವಿವರಣೆ ನೀಡಿವೆ. ಈ ಮಂತ್ರ ಉಪಸಂಹಾರ ಮಾಡುತ್ತಿದೆ.

**"ದಸ್ರಾ"** – ಇದು ಮೊದಲನೆಯ ಶಬ್ದ. 'ಉಪಕ್ಷಯ' ಎಂಬರ್ಥನೀಡುವ 'ದಸು' ಶಬ್ದದಿಂದ ವ್ಯುತ್ಪನ್ನವಾಗಿದೆ. ಯಾರನ್ನೋ, ಯಾವುದನ್ನೋ ಧ್ವಂಸಮಾಡುವ ಸಾಮರ್ಥ್ಯಶಾಲಿಗಳು 'ದಸ್ರ' ರೆನಿಸುತ್ತಾರೆ. ಯಾರನ್ನು ? ಯಾವುದನ್ನು ? ಈ ಪ್ರಶ್ನೆಗಳಿಗೆ ಉತ್ತರ ಹುಡುಕಬೇಕಾಗಿದೆ. ಶ್ರೀ॥ ಮಧ್ವರು 'ಭೇದಕೌ ಸರ್ವಶತ್ರೂಣಾಂ' - "ಸಮಸ್ತ ಶತ್ರುಗಳನ್ನೂ ಛಿನ್ನ - ಭಿನ್ನವಾಗಿ ಮಾಡುವವರೇ 'ದಸ್ರ'ರು - ಎನ್ನುತ್ತಾರೆ. ಈ ಅರ್ಥ ಮಾನ್ಯವೇ ಸರಿ. ಆದರೆ, ಸ್ವಲ್ಪ ಆಳಕ್ಕಿಳಿದು ಆಲೋಚಿಸಬೇಕಾಗಿದೆ. ಬಾಹ್ಯ ಶತ್ರುಗಳನ್ನೆಲ್ಲಾ ಸದೆ ಬಡೆದರೂ, ಕಾಮಕ್ರೋಧಾದಿ ಅಂತಃಶತ್ರುಗಳು ಪ್ರಬಲವಾಗಿಯೇ ಉಳಿದಿದ್ದಲ್ಲಿ, ಸುಖ – ಶಾಂತಿಗಳಿರಬೇಕಾದೆಡೆ, ಭಾರಿಯದೊಂದು 'ಸೊನ್ನೆ' ಉಳಿದಿರುತ್ತದಷ್ಟೇ. ಅಂತರ್ನಿಹಿತರಾಗಿ ಹಲವು ವೈರಿಗಳು ಆತ್ಮನಮೇಲೆ ಭಯಾನಕ ಪ್ರಹಾರ

ಮಾಡುತ್ತಲೇ ಇರುತ್ತಾರೆ. ವೈದಿಕ ಪರಿಭಾಷೆಯಲ್ಲಿ ಅವನ್ನು 'ರಕ್ಷಸು'ಗಳೆಂದು ಕರೆದಿದ್ದಾರೆ. ಯಾಸ್ಕರು ನಿರುಕ್ತದಲ್ಲಿ - **"ರಕ್ಷೋ ರಕ್ಷಿತವ್ಯಮಸ್ಮಾತ್ ರಹಸಿಕ್ಷಣೋತೀತಿ ವಾ, ರಾತ್ರೌ ನಕ್ಷತ್ರ ಇತಿ ವಾ."** [4 3.18.2.] "ರಕ್ಷಸ್ಸೆಂದರಾರು ? ಇದರಿಂದ ದೂರವಿಟ್ಟು ಆತ್ಮತತ್ತ್ವವನ್ನು ರಕ್ಷಿಸಬೇಕಾಗುವುದರಿಂದ, ಅಥವಾ ಗುಪ್ತವಾಗಿಯೇ ಪ್ರಹರಿಸುವುದರಿಂದ, ಅಥವಾ ರಾತ್ರಿಯಲ್ಲಿ ಹತ್ತಿರ ಬರುವುದರಿಂದ ಅದನ್ನು ರಕ್ಷಸ್ಸೆನ್ನುತ್ತಾರೆ." ರಕ್ಷಸ್ಸಿನ ಈ ಗುಣವನ್ನು ಋಗ್ವೇದದ [7.104.18.] ಮಂತ್ರ ಎತ್ತಿ ತೋರಿಸುತ್ತದೆ;— **"ವಿತಿಷ್ಠಧ್ವಂ ಮರುತೋ ವಿಕ್ಷ್ವಿಚ್ಛತ ಗೃಭಾಯತ ರಕ್ಷಸಃ ಸಂ ಪಿನಷ್ಟನ। ವಯೋ ಯೇ ಭೂತ್ವೀ ಪತಯಂತಿ ನಕ್ತಭಿರ್ಯೇ ವಾ ರಿಪೋದಧಿರೇ ದೇವೇ ಅಧ್ವರೇ॥"** ಇದರ ತಾತ್ಪರ್ಯವಿಷ್ಟು - "ಮರ್ತ್ಯರಾದ ಮಾನವರೇ ! ದೃಢವಾಗಿ ನಿಲ್ಲಿರಿ. ಜನರ ನಡುವೆ (ಆ ರಕ್ಷಸ್ಸುಗಳು) ಅಸ್ತಿತ್ವವನ್ನು ಹುಡುಕಲಿಚ್ಛಿಸಿರಿ. ಯಾವುವು ರಾತ್ರಿಯಲ್ಲಿ ವಿಶಾಲರೂಪ ತಾಳಿ ಮೇಲೆರಗುತ್ತವೋ ಮತ್ತು * ಯಾವುವು ಹಿಂಸಾರಹಿತವಾದ, ದಿವ್ಯವಾದ ಯಜ್ಞಗಳಲ್ಲಿ ದೋಷವನ್ನುಂಟುಮಾಡುತ್ತವೋ, ಆ ರಕ್ಷಸ್ಸುಗಳನ್ನು ಹಿಡಿಯಿರಿ; ಹುಡಿಗೂಡಿಸಿ ಬಿಡಿರಿ." ಈ ಮಾತುಗಳನ್ನೋದಿದ ಮೇಲೆ, ರಕ್ಷಸ್ಸಾರು - ಎಂಬ ಸಂಶಯ ಉಳಿಯದು. **'ನಕ್ತಂ' - 'ರಾತ್ರಿ'** ಎಂದರೆ, ಹಗಲಿನ ನಂತರ ಬರುವ ಕಾಲವಿಶೇಷವೆಂದು ಭಾವಿಸಬೇಕಾಗಿಲ್ಲ. ಅಜ್ಞಾನಾಂಧಕಾರಾವೃತವಾದ ಸ್ಥಿತಿ - ಎಂದಿಟ್ಟುಕೊಂಡಲ್ಲಿ ಭಾವನೆ ಸುಬೋಧವಾದೀತು. ಕಾಮ - ಕ್ರೋಧಾದಿ ಅವಗುಣಗಳಲ್ಲಿ ಈ ಸಮಸ್ತ ಲಕ್ಷಣಗಳು ಹೊಂದಿಕೊಳ್ಳುತ್ತವೆ. ಸ್ವತಃ ಘೋಷಿಸುತ್ತಿದೆ ಅಥರ್ವವೇದ:—

**ಉಲೂಕಯಾತುಂ ಶುಶುಲೂಕಯಾತುಂ ಜಹಿ ಶ್ವಯಾತುಮುತ ಕೋಕಯಾತುಂ ।**
**ಸುಪರ್ಣಯಾತುಮುತ ಗೃಧ್ರಯಾತುಂ ದೃಷದೇವ ಪ್ರಮೃಣ ರಕ್ಷ ಇಂದ್ರ ॥**
[8.4.22.]

"[ಇಂದ್ರ] ಓ ಇಂದ್ರಿಯವಾನ್ ಜೀವ! **[ಉಲೂಕಯಾತುಂ ರಕ್ಷಃ]** ಗೂಗೆಯ ನಡೆ—ಎಂಬ, ಅಜ್ಞಾನಾಂಧಕಾರವನ್ನೇ ಬಯಸುವ, '**ಮೋಹ**'ವೆಂಬ ರಕ್ಷಸ್ಸನ್ನೂ, **[ಶುಶೂಲಕಯಾತುಂ]** ತೋಳನನಡೆಯೆಂಬ, '**ಕ್ರೋಧ**'ವೆಂಬ ರಕ್ಷಸ್ಸನ್ನೂ, [ಉತ] ಮತ್ತು, **[ಶ್ವಯಾತುಂ]** ನಾಯಿಯನಡೆ-ಎಂಬ, **ಲೋಭ**ವೆಂಬ, [ರಕ್ಷಃ] ರಕ್ಷಸ್ಸನ್ನೂ, ಹಾಗೆಯೇ, **[ಕೋಕಯಾತುಂ ರಕ್ಷಃ]** ಜಕ್ಕವಕ್ಕಿಯ ನಡೆ - ಎಂಬ, **ಕಾಮ**ವೆಂಬ, [ರಕ್ಷಃ] ರಕ್ಷಸ್ಸನ್ನೂ, [ಜಹಿ] ಧ್ವಂಸಮಾಡು. **[ಸುಪರ್ಣಯಾತುಂ ರಕ್ಷಃ]** ಗರುಡನ

* ವಾ-ಎಂಬ ಅವ್ಯಯ ಲೌಕಿಕ ಸಂಸ್ಕೃತದಲ್ಲಿ 'ಅಥವಾ' ಎಂಬರ್ಥದಲ್ಲಿಯೇ ಬಂದರೂ, ವೈದಿಕಭಾಷೆಯಲ್ಲಿ ಅದು 'ವೈ' - 'ನಿಜವಾಗಿ' ಎಂಬರ್ಥದಲ್ಲಿ ಬರುತ್ತದೆ.

ನಡೆಯೆಂಬ, **ಗರ್ವ**ವೆಂಬ, [ರಕ್ಷಃ] ರಕ್ಷಸ್ಸನ್ನೂ, [ಉತ] ಮತ್ತು, **[ಗೃಧ್ರಯಾತುಂ]** ಹದ್ದಿನ ನಡೆಯೆಂಬ, **ಈರ್ಷ್ಯೆ**ಯೆಂಬ, [ರಕ್ಷಃ] ರಕ್ಷಸ್ಸನ್ನೂ, [ದೃಷದಾ ಇವ] ಕಲ್ಲಿನಂತೆ ಗಡಸಾದ ಮನೋಬಲದಿಂದ, [ಪ್ರಮೃಣ] ಜಜ್ಜಿಹಾಕು."

ಅತಿ ಭವ್ಯವಾದ, ಎಷ್ಟು ಪ್ರಾಚೀನವೋ, ಅಷ್ಟೇ ನವೀನವೂ ಆದ, ಮೂರು ಕಾಲಕ್ಕೂ, ಎಲ್ಲದೇಶದವರಿಗೂ, ಎಲ್ಲ ಭಾಷೆಯವರಿಗೂ, ಎಲ್ಲ ಬಣ್ಣದವರಿಗೂ ಬೇಕೇ ಆದ ಆದೇಶವಿದು. "ಅರಿಷಡ್ವರ್ಗ" – ಎಂಬ ಮಾತು ಎಲ್ಲ ಹರಿಕಥಾ ದಾಸರುಗಳ ಹಾಗೂ ಪುರಾಣ ಹೇಳುವ ಜನರ ನಾಲಗೆಯ ತುದಿಯಲ್ಲೇ ಇರುತ್ತದೆ. ಆದರೆ, ಈ ಅರಿಗಳನ್ನು ಜಯಿಸಿದ ಭಾಗ್ಯಶಾಲಿಗಳು ಮಾತ್ರ ಅತಿ ದುರ್ಲಭರು. ಮಥುರಾದಲ್ಲಿ * ಮಹರ್ಷಿ ದಯಾನಂದರು ಪ್ರಚಾರಮಾಡುತ್ತಿದ್ದಾಗ ಇಬ್ಬರು ಯುವಕಸಂನ್ಯಾಸಿಗಳು ಬಂದರು. ಸಂಭಾಷಣೆಯ ನಡುವೆ ಅವರು 'ನಾವು ಅಹಂಕಾರವನ್ನು ಪೂರ್ಣವಾಗಿ ಜಯಿಸಿದ್ದೇವೆ.' ಎಂದರು. ಆಗ ಮಹರ್ಷಿ ನಸುನಕ್ಕರು ಮಾತ್ರ. ವಾರ್ತಾಲಾಪ ಮುಗಿದು ಆ ಇಬ್ಬರು ಯುವಕಯತಿಗಳು "ಓಂ ನಮೋ ನಾರಾಯಣಾಯ." – ಎನ್ನುತ್ತಾ ದಿಡ್ಡೀಬಾಗಿಲಬಳಿಗೆ (gate) ಹೋದರು. ಮಹರ್ಷಿಗಳ ಸಂಕೇತದಿಂದ, ಬ್ರಹ್ಮಚಾರಿಯೊಬ್ಬ ಅವರಿಬ್ಬರನ್ನೂ ಕೆಣಕಿದ. ಮರುಕ್ಷಣವೇ ಯತೀಶ್ವರರೂ, ಬ್ರಹ್ಮಚಾರಿಯೂ ನೆಲಕ್ಕುರುಳಿ ಕುಸ್ತಿಮಾಡು ವಂತೆ ಮೇಲಕ್ಕೂ–ಕೆಳಕ್ಕೂ ಎದ್ದು–ಬಿದ್ದು ಒದ್ದಾಡಹತ್ತಿದರು. ಮಹರ್ಷಿಗಳು ನಗು ನಗುತ್ತಾ ಹೊರಬಂದು–'ಓಹೋ ! ಅಹಂಕಾರ ಗೆದ್ದ ಮಹಾತ್ಮರೇ ! ಎಲ್ಲಿ ಹೋಯಿತು ನಿಮ್ಮ ತಪಃಫಲ ?" ಎನ್ನುತ್ತಾ ಅವರನ್ನು ಬಿಡಿಸಿದರು. ಯತಿದ್ವಯ ಕ್ಷಮೆಬೇಡಿ, ತಲೆಬಾಗಿಸಿ ಹೊರಟುಹೋದರು. ವಸ್ತುತಃ ಈ ಅಂತಃಶತ್ರುಗಳನ್ನು ಗೆಲ್ಲುವುದಕ್ಕಿಂತ ಹಿರಿದಾದ ತಪಸ್ಸಿಲ್ಲ.

ಹೀಗೆ ಅಂತಃಶತ್ರುಗಳನ್ನು ಸದೆಬಡೆದ ಮೇಲೆಯೇ 'ದಸ್ರ'ರೆಂಬ ಹೆಸರು ಸಂದೀತು. 'ಅಶ್ವಿನೌ' - ಎಂದರೆ ನರ–ನಾರಿಯರು ಹೀಗೆ 'ದಸ್ರ'ರಾಗಬೇಕು. 'ನಾಸತ್ಯಾ' ಶಬ್ದ ಹಿಂದೆ ಬಂದಿದೆ; ಮತ್ತದರ ವಿವರಣೆ ಅನಾವಶ್ಯಕ.

"ಬರ್ಹಿಃ, ಬರ್ಹಿಸ್" ಎಂಬಶಬ್ದ, ಋತ್ವಿಕ್ಕುಗಳು ಕುಳಿತುಕೊಳ್ಳುವ, ಕುಶಾ – ಎಂಬ ಹುಲ್ಲಿನಿಂದಾಗಲಿ, ಬೇರಾವುದಾದರೂ ಜೊಂಡಿನಿಂದಾಗಲಿ ಹೆಣೆದ, ಚಾಪೆಯಂತಹ ಆಸನ. 'ವೃಕ್ತ' ಎಂದರೆ ಬಿಚ್ಚಿದುದು, ಹರಡಿದುದು. ಹೀಗೆ "ವೃಕ್ತ ಬರ್ಹಿಷಃ"–ಎಂದರೆ, ವೇದಿಕೆಯ ಮೇಲೆ ವಿಸ್ತೃತವಾದ ಆಸನದ ಮೇಲೆ ಕುಳಿತ ಋತ್ವಿಕ್ಕುಗಳು. ಯಾಸ್ಕರು **'ವೃಕ್ತ ಬರ್ಹಿಷಃ ಇತಿ ಋತ್ವಿಜ್ನಾಮಸು ಪಠಿತಂ.'** [ನಿಘಂಟು:–3.18.] "ಋತ್ವಿಕ್ಕುಗಳಿಗೇ ವೃಕ್ತಬರ್ಹಿಷ್ಷುಗಳೆಂಬ ಹೆಸರಿದೆ-ಎನ್ನುತ್ತಾರೆ. ಇದು ಕರ್ಮಕಾಂಡಾ ತ್ಮಕವಾದ ಅರ್ಥವಾಯಿತು. ಇದರ ಆಧ್ಯಾತ್ಮಿಕ ಅರ್ಥ ಬಹುಗಂಭೀರ. 'ಬರ್ಹಿಸ್' ಎಂಬುದಕ್ಕೆ 'ಯಜ್ಞ' ಎಂಬರ್ಥವಿದೆ. 'ವೃಕ್ತ' ಎಂದರೆ 'ಪವಿತ್ರಗೊಳಿಸಲ್ಪಟ್ಟ' ಎಂಬರ್ಥವೂ

* ಪ್ರಾಯಶಃ ಸೂರತ್ ಅಥವಾ ಬರೋಡ ಇದ್ದರೂ ಇರಬಹುದು.

## ವೇದಗಳ ಪದಪಾಠಗಳು

ವೇದಗಳ ಶಾಖೆಗಳು ವೇದಪಾಠಕ್ರಮ ಅಥವಾ ಪ್ರವಚನಗಳೆಂಬುದನ್ನು ನೋಡಿದ್ದೇವೆ. ಶಾಖೆಗಳ ಉದಯವು ವೇದಭಾಷ್ಯದ ಪ್ರಾಥಮಿಕ ಸ್ಥಿತಿ ಎಂಬುದನ್ನೂ ಉಲ್ಲೇಖಿಸಿದ್ದೇವೆ. ಸಮಯ ಕಳೆದಂತೆ, ಜನರಿಗೆ ವೇದಮಂತ್ರಗಳು ಅಧಿಕ ಕ್ಲಿಷ್ಟವಾಗಿಯೂ, ಅರ್ಥಗಳು ಅಧಿಕ ಅಸ್ಪಷ್ಟವಾಗಿಯೂ ಕಂಡುಬಂದಿರಬೇಕು. ವೇದವಾಕ್ಯಗಳು ಸಂಹಿತೆಯ ರೂಪದಲ್ಲಿರುವುದರಿಂದ ಪ್ರಾತಿಪದಿಕ, ಪ್ರತ್ಯಯ, ಸಮಾಸ ಇತ್ಯಾದಿಗಳನ್ನು ಬಿಡಿಸಿ ತೋರಿಸಿ ಮಂತ್ರಾರ್ಥವು ಅಧಿಕ ಸುಗಮವಾಗುವಂತೆ ಮಾಡಲಾಯಿತು. ಮಂತ್ರಗಳ ಈ ರೀತಿಯ ಪದವಿಭಾಗ ಪದ್ಧತಿಯೂ ಬಹು ಪುರಾತನ ಕಾಲದಿಂದಲೇ ನಡೆದು ಬಂದಿದೆ. ಇದರಿಂದ ಮುಂದಿನ ಭಾಷ್ಯಕಾರರಿಗೆ ತುಂಬಾ ಸಹಾಯತೆಯು ದೊರೆಯಿತು. ಅಲ್ಲದೆ, ಮನಬಂದಂತೆ ಮಂತ್ರಗಳ ಪದವಿಭಾಗ ಮತ್ತು ತದನುಸಾರವಾಗಿ ಅರ್ಥ ಮಾಡುವುದು ಈ ಪದಪಾಠದಿಂದಾಗಿ ಅಸಾಧ್ಯವಾಯಿತು. ಒಂದು ದೃಷ್ಟಿಯಿಂದ ಪದಪಾಠಗಳು ಮೂಲ ಸಂಹಿತೆ ಅರ್ಥವನ್ನು ಸುರಕ್ಷಿತವಾಗಿಡಲು ಸಹಾಯಕವಾಗಿವೆ.

ಋಗ್ವೇದದ ಪದಪಾಠಕಾರರಲ್ಲಿ ಶಾಕಲ್ಯ ಮತ್ತು ರಾವಣರ ಹೆಸರುಗಳು ಪ್ರಸಿದ್ಧವಾಗಿವೆ. ಯಜುರ್ವೇದದ ಮಾಧ್ಯಂದಿನ ಮತ್ತು ಕಾಣ್ವ ಶಾಖೆಗಳ ಪದಪಾಠಕಾರರ ಹೆಸರುಗಳು ಸಂದಿಗ್ಧವಾಗಿವೆ. ಆತ್ರೇಯರು ತೈತ್ತಿರೀಯ ಸಂಹಿತೆಯ ಪದಪಾಠಕಾರರೆಂದು ಹೇಳುತ್ತಾರೆ. ಗಾರ್ಗ್ಯರು ಸಾಮವೇದದ ಪದಪಾಠಕಾರರು. ಆದರೆ ಅಥರ್ವವೇದದ ಪದಪಾಠಕಾರರ ಹೆಸರು ಅಜ್ಞಾತವಾಗಿದೆ.

## ಪದಪಾಠದ ಕೆಲವು ನಿಯಮಗಳು

ಪದಪಾಠದಲ್ಲಿ ಸಮಾಸ ಪದಗಳನ್ನು ಬಿಡಿಸುವಾಗ ವಿಶೇಷ ಭಾಗವನ್ನು ಸೂಚಿಸುವುದಕ್ಕಾಗಿ ಈ ರೀತಿ ऽ ಅವಗ್ರಹ ಚಿಹ್ನೆಯನ್ನು ಉಪಯೋಗಿಸುತ್ತಾರೆ. ಹೇಗೆಂದರೆ—

ಪುರೋಹಿತಂ [ಋಗ್. ೧-೧-೧] — ಪುರಃऽಹಿತಂ

ತ್ರಿಸಪ್ತಾಃ [ಅಥರ್ವ. ೧-೧-೧] — ತ್ರಿऽಸಪ್ತಾಃ

ಶುಕ್ಲ ಯಜುರ್ವೇದ, ತೈತ್ತಿರೀಯ, ಮೈತ್ರಾಯಣೀಯ ಮತ್ತು ಸಾಮವೇದದ ಪದಪಾಠಗಳಲ್ಲಿ ಪೂರ್ಣಪದಗಳ ಪುನರಾವೃತ್ತಿ ಮಾಡುವ ಕ್ರಮ ಇದೆ. ಉದಾಹರಣೆಗೆ–

ಶ್ರೇಷ್ಠತಮಾಯ [ಶುಕ್ಲಯಜು. ೧-೧]—ಶ್ರೇಷ್ಠತಮಾಯೇತಿ ಶ್ರೇಷ್ಠऽತಮಾಯ

ತೈತ್ತಿರೀಯ ಶಾಖೆಯಲ್ಲಿ ಅವಗ್ರಹದ ಬದಲಿಗೆ, — ಈ ರೀತಿಯ ಚಿಹ್ನೆಯನ್ನು ಉಪಯೋಗಿಸುತ್ತಾರೆ; ಹೇಗೆಂದರೆ:—

ಶ್ರೇಷ್ಠತಮಾಯೇತಿ ಶ್ರೇಷ್ಠ—ತಮಾಯ

ಋಗ್ವೇದ, ಯಜುರ್ವೇದ [ಶುಕ್ಲ], ಮೈತ್ರಾಯಣೀ, ಮತ್ತು ಅಥರ್ವವೇದಗಳ ಪದಪಾಠಗಳಲ್ಲಿ ಇವ ಶಬ್ದವು ಸಮಸ್ತ ಪದವೆಂದು ಗಣನೆ ಮಾಡಲಾಗುತ್ತದೆ—

ಮಹಾ ವೈದ್ಯನೆಂದು ಆಲಿಸಿದ್ದೇನೆ." – ಎನ್ನುತ್ತಿದೆ ಋಗ್ವೇದಿಯ ಮಂತ್ರ ಒಂದು. ಶ್ರೀ॥ ಮಧ್ವರು 'ರುಜಾಂ ದ್ರಾವಣತೋರುದ್ರ:' ಎಂದು ಈ ಮಂತ್ರದ ಭಾಷ್ಯದಲ್ಲಿ ಹೇಳಿರುವುದು ಪೂರ್ಣತ: ವೇದಾನುಕೂಲವಾಗಿದೆ. "**ಪ್ರಜೆಗಳನ್ನು ದ್ರಾವಣ ಮಾಡಿಸುವುದರಿಂದ** ಎಂದರೆ ರೋಗಗಳನ್ನು ನಿವಾರಿಸುವುದರಿಂದ, ಭಗವಂತನನ್ನು 'ರುದ್ರ'ನೆನ್ನುತ್ತಾರೆ." ಎಂಬುದೇ ಶ್ರೀಮಧ್ವರ ಭಾಷ್ಯದರ್ಥ. ಭಗವತ್ಸೃಷ್ಟಿಯಲ್ಲಿ ಓಷಧಿಗಳು, ಗಿಡ ಮರ – ಬಳ್ಳಿಗಳು ಪುಷ್ಕಳವಾಗಿವೆ. ಭಗವನ್ನಿರ್ಮಿತ ವಾಯು - ಜಲಗಳಲ್ಲಿ, ಅಗ್ನಿ – ಪೃಥ್ವಿಗಳಲ್ಲಿ ಅಲೌಕಿಕವಾದ ರೋಗನಾಶಕ ಶಕ್ತಿ ತುಂಬಿ ತುಳುಕುತ್ತಿದೆ. ಇದು ರುದ್ರದೇವನ ಮಹಾನ್ ಚಿಕಿತ್ಸಾಲಯ.

ನರ - ನಾರಿಯರು ಅದೇ ಪರಮಾತ್ಮನ ಮಾರ್ಗದಲ್ಲಿ, ಕೇವಲ ಭವರೋಗವೇ ಅಲ್ಲ; ಶಾರೀರಿಕ ವ್ಯಾಧಿಗಳಿಗೂ ಈ ರೀತಿ ಔಷಧಿಗಳನ್ನು ಒದಗಿಸುವ ಆ ಮಹಾನ್ ವೈದ್ಯನ ಪಥದಲ್ಲಿಯೇ ನಡೆದು ಬರಬೇಕು. ಆತ್ಮದಮನ ಸಮರ್ಥರಾಗಿ, ವಿಜ್ಞಾನಕ್ಷೇತ್ರದಲ್ಲಿ ಮುನ್ನಡೆಯುವ, ತಮ್ಮಾವರೇ ಆದ ವಿಜ್ಞಾನಿಗಳೊಂದಿಗೆ ಸಂಪರ್ಕ ಬೆಳೆಯಿಸಿಕೊಳ್ಳಬೇಕು. ಈ ಆಧ್ಯಾತ್ಮಿಕೀವೃತ್ತಿ - ಭೌತಿಕೋನ್ನತಿಪ್ರವೃತ್ತಿಗಳ ಹದನಾದ ಸಮ್ಮಿಳನದಿಂದ ಮಾನವಮಾತ್ರರಿಗೆ ಲಭಿಸುವ ಸುಖ - ಶಾಂತಿಗಳು ಕೇವಲ ಅನುಭವಗಮ್ಯವಷ್ಟೇ; ಅವನ್ನು ವರ್ಣಿಸುವ ಶಕ್ತಿ ಮಾನವೀಜಿಹ್ವೆಗಿಲ್ಲ.

## ಸಂಹಿತಾ ವಿಭಾಗ

**ಇಂದ್ರಾಯಾಹಿ ಚಿತ್ರಭಾನೋ ಸುತಾ ಇಮೇ ತ್ವಾಯವಃ**

**ಅಣ್ವೀಭಿಸ್ತನಾ ಪೂತಾ ಸಃ ॥೪॥**

**ಪದಪಾಠ**:– ಇಂದ್ರ, ಆ, ಯಾಹಿ, ಚಿತ್ರಭಾನೋ, ಇಮೇ, ಸುತಾ:, ತ್ವಾಯವಃ, ಅಣ್ವೀಭಿ:, ತನಾ, ಪೂತಾಸ: ॥

**ಅನ್ವಯ**:– ಚಿತ್ರಭಾನೋ ಇಂದ್ರಃ ಇಮೇ ಅಣ್ವೀಭಿಃ ತನಾ ಪೂತಾಸಃ ಸುತಾಃ ತ್ವಾಯುವಃ. ಆಯಾಹಿ.

**ಶಬ್ದಾರ್ಥ**:– [ಚಿತ್ರಭಾನೋ] ಆಶ್ಚರ್ಯಕರವಾದ ಪ್ರಕಾಶವನ್ನುಳ್ಳ, [ಇಂದ್ರ] ಸರ್ವೇಶ್ವರನೇ! [ಇಮೇ] ಈ, [ಅಣ್ವೀಭಿಃ] ಸೂಕ್ಷ್ಮಾಣು ರೂಪಗಳಿಂದ ಪ್ರಾಕೃತತತ್ತ್ವಗಳಿಂದ, [ತನಾ] ಸ್ಥೂಲವಾದ ದೇಹಗಳನ್ನುಳ್ಳ, [ಪೂತಾಸಃ] ಪವಿತ್ರರಾದ, [ಸುತಾಃ] ನಿನ್ನ ಮಕ್ಕಳೇ ಆದ ಜೀವರು, [ತ್ವಾಯವಃ] ನಿನ್ನ ಆಕಾಂಕ್ಷೆಯನ್ನೇ ಹೊಂದಿದವರಾಗಿದ್ದಾರೆ. [ಆಯಾಹಿ] ಪ್ರಾಪ್ತನಾಗು.

**ತಾತ್ಪರ್ಯ:**- ಅದ್ಭುತ ಜ್ಯೋತಿರ್ಮಯನಾದ ಸರ್ವಶಕ್ತಿಮಾನ್, ಸರ್ವೈಶ್ವರ್ಯ ಸಂಪನ್ನ ಪರಮಾತ್ಮನೇ! ಸೂಕ್ಷ್ಮಾತಿಸೂಕ್ಷ್ಮ ಪರಮಾಣುಗಳ ಸಂಯೋಗದಿಂದ ಸ್ಥೂಲಾಕಾರವಾದ ದೇಹಗಳನ್ನು ಪಡೆದಿರುವ, ಐಶ್ವರ್ಯಸಂಪಾದನಾ ಸಮರ್ಥರಾದ ಪವಿತ್ರಾತ್ಮರಾದ ನಿನ್ನ ಮಕ್ಕಳಾದ ಈ ಜೀವರು ನಿನ್ನನ್ನೇ ಬಯಸುವವರಾಗಿದ್ದಾರೆ-ಅಂತಹ ಜೀವರಿಗೆ ಪ್ರಾಪ್ತನಾಗು.

**ಭಾಷ್ಯ:**- ಈ ಮಂತ್ರದ ದೇವತೆ, ಎಂದರೆ ಪ್ರತಿಪಾದ್ಯ ವಿಷಯ. 'ಇಂದ್ರ'; ಓದುಗರು 'ಇಂದ್ರಿಯವಾನ್ ಜೀವ' - ಎಂಬರ್ಥದಲ್ಲಿ ಈ ಮುನ್ನ 'ಇಂದ್ರ'ನನ್ನು ಸಂಧಿಸಿದ್ದಾರೆ. ಇಂದ್ರ - ಎಂಬ ಶಬ್ದ ವೇದಗಳಲ್ಲಿ ಸಾಮರ್ಥ್ಯಸಂಪನ್ನ ಸಮಸ್ತಸಂಪದಧೀಶ್ವರ, ವಿರಾಡಾತ್ಮನೆಂಬರ್ಥದಲ್ಲಿ ಬಹಳ ಸ್ಥಳಗಳಲ್ಲಿ ಬಂದಿದೆ. **'ಇಂದ್ರಂ ಮಿತ್ರಂ ವರುಣಮಗ್ನಿಮಾಹು.'** [ಋಗ್ವೇದ:-1 164.46.]—"ವಿಶ್ವಾಗ್ರಣೀ ಜ್ಯೋತಿರ್ಮಯ ಪರಮಾತ್ಮನನ್ನು ಇಂದ್ರ, ಮಿತ್ರ ಇತ್ಯಾದಿ ಶಬ್ದಗಳಿಂದ ಕರೆಯುತ್ತಾರೆ." - ಎಂಬ ಋಕ್ಕು ಇಂದ್ರನೆಂದರೆ ಪರಮಾತ್ಮನೇ" - ಎಂದುಸಾರುತ್ತಿದೆ. "**ಯಃ ಪೃಥಿವೀಂ ವ್ಯಥಮಾನಾಮದೃಂಹತ್ ಯಃ ಪರ್ವತಾನ್ ಪ್ರಕುಪಿತಾನರಮ್ಣಾತ್ । ಯೋ ಅಂತರಿಕ್ಷಂ ವಿಮಮೇ ವರೀಯೋ ಯೋ ದ್ಯಾಮಸ್ತಭ್ನಾತ್ಸ ಜನಾಸ ಇಂದ್ರಃ ॥**" [ಋಗ್ವೇದ: 2.12 2 ] - "ಜನರೇ ! ಯಾವನು ತತ್ತರಿಸುವ ಪೃಥಿವಿಯನ್ನು ದೃಢೀಕರಿಸಿದ್ದಾನೋ ಯಾವನು ಕ್ರುದ್ಧವಾಗಿರುವಂತೆ ಕಪ್ಪುಗಟ್ಟಿ ಬರುವ ಮೇಘರಾಶಿಯನ್ನು ಹಿಡಿತದಲ್ಲಿಟ್ಟಿದ್ದಾನೋ, ಯಾವನು ಪ್ರಾಣಸಂಪನ್ನಭರಿತವಾದ ಅಂತರಿಕ್ಷವನ್ನು ಅಳೆದಿದ್ದಾನೋ, ಯಾವನು ಸೂರ್ಯ, ಅಸಂಖ್ಯನಕ್ಷತ್ರಗಳು ಹಾಗೂ ಗ್ರಹೋಪಗ್ರಹಗಳನ್ನು ಎತ್ತಿಹಿಡಿದಿದ್ದಾನೋ ಅವನೇ ಇಂದ್ರನು." - ಎಂಬ ಶ್ರುತಿಯನ್ನು ವಿರಾಡಾತ್ಮನೊಬ್ಬನನ್ನು ಬಿಟ್ಟರೆ, ಬೇರೆ ಯಾವುದೇ ಜಡ ಅಥವಾ ಚೇತನತತ್ತ್ವಕ್ಕೂ, ಅನ್ವಯಿಸಲು ಸಾಧ್ಯವಿಲ್ಲ. "**ದ್ಯಾವಾ ಚಿದಸ್ಮೈ ಪೃಥಿವೀ ನಮೇತೇ ಶುಷ್ಮಾಚ್ಚಿದಸ್ಯ ಪರ್ವತಾ ಭಯಂತೇ ।**" [ಋಗ್ವೇದ:- 2.12.13.] - "ದ್ಯುಲೋಕ-ಪೃಥಿವೀಲೋಕಗಳು ಇವನಿಗೆ ಎರಗುತ್ತವೆ. ಇವನಶಕ್ತಿಗೆ ಗಗನಾಂತರಾಳದಲ್ಲಿ ತೇಲುವ ಮೇಘಗಳೂ, ಭೂಮಿಯ ಮೇಲಿನ ಪರ್ವತಗಳೂ ಅಂಜುತ್ತವೆ." - ಎಂದು ಯಾವನಾದರೂ ಜೀವನ ಬಗೆಗೆ ಹೇಳಲಾದೀತೇ ? ಇಂದ್ರನ ಸಾಮರ್ಥ್ಯ ವರ್ಣನೆಗೈಯುವ ಸೂಕ್ತ-ಸೂಕ್ತಗಳೇ ವೇದಸಂಹಿತೆಗಳಲ್ಲಿವೆ. ಎಲ್ಲವನ್ನೂ ಇಲ್ಲಿ ಉದ್ಧರಿಸಲು ಸಾಧ್ಯವಿಲ್ಲ. ಈ ಇಂದ್ರ ಇಂದ್ರಿಯವಾನ್ ಜೀವನಲ್ಲ; ಆ ಜೀವನಿಗೂ ಆತ್ಮನಾಗಿ ಅಂತರಾತ್ಮನಾಗಿ ವಿರಾಜಿಸುವ ಈ ಇಂದ್ರ ವಸ್ತುತಃ ವಿಶ್ವಚೇತನನೇ ಆಗಿದ್ದಾನೆ. ಧಾತ್ವರ್ಥವನ್ನು ಗ್ರಹಿಸಿದಾಗ, "**ಇದಿ ಪರಮೈಶ್ವರ್ಯೇ**" - "ಪರಮೈಶ್ವರ್ಯನೆಂಬರ್ಥದಲ್ಲಿ ಇದಿ ಧಾತು ಪ್ರಯುಕ್ತವಾಗುತ್ತದೆ. ಪರಮೈಶ್ವರ್ಯವಂತನೇ ಇಂದ್ರನೆಂಬ ನಿರ್ಣಯ ಹೊರಬೀಳುತ್ತದೆ. ಮರಳಿ, 'ಐಶ್ವರ್ಯ' ಶಬ್ದ, ಸಂಪತ್ತು ಹಾಗೂ ಸ್ವಾಮಿತ್ವ–ಎಂಬ ಎರಡು ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತದೆ. ಈ ದೃಷ್ಟಿಯಿಂದ ನೋಡಿದಾಗ, **ಪರಮಸಂಪದ್ಯುಕ್ತನೇ ಇಂದ್ರ; ಪರಮೇಶ್ವರನೇ ಇಂದ್ರ** - ಎಂಬ ಭಾವನೆ ಸ್ಫುಟವಾಗಿ ಹೃದಯಾಂಕಿತವಾಗುತ್ತದೆ.

ಇಂದ್ರ ಶಬ್ದದ ಪೂರ್ಣವ್ಯುತ್ಪತ್ತಿಯನ್ನು ನಾವು ನಿರುಕ್ತದಲ್ಲಿ ಕಾಣುತ್ತೇವೆ. ಯಾಸ್ಕರು ಹೇಳುತ್ತಾರೆ:- **"ಇಂದ್ರಃ ಇರಾ ದೃಣಾತೀತಿವಾ, ಇರಾಂ ದದಾತೀತಿ ವಾ, ಇರಾಂ ದಧಾತೀತಿ ವಾ, ಇರಾಂ ದಾರಯತ ಇತಿ ವಾ, ಇರಾಂ ಧಾರಯತ ಇತಿವಾ, ಇಂದವೇ ದ್ರವತೀತಿ ವಾ, ಇಂದೌ ರಮತ ಇತಿ ವಾ, ಇಂಧೇ ಭೂತಾನೀತಿ ವಾ, ತದ್ಯದೇನಂ ಪ್ರಾಣೈಃ ಸಮೈಂಧಂಸ್ತದಿಂದ್ರಸ್ಯ ಇಂದ್ರತ್ವಮಿತಿ ವಿಜ್ಞಾಯತೇ. ಇದಂ ಕರಣಾದಿತ್ಯಾಗ್ರಾಯಣಃ, ಇದಂ ದರ್ಶನಾದಿತ್ಯೌಪಮನ್ಯವಃ, ಇಂದತೇ ವಾ ಐಶ್ವರ್ಯಕರ್ಮಣಃ, ಇಂಚ್ಛತ್ರೂಣಾಂ ದಾರಯಿತಾ ವಾ, ದ್ರಾವಯಿತಾ ವಾ, ಆದರಯಿತಾ ವಾ ಯಜ್ವನಾಂ."** [ನಿರುಕ್ತ: - 4. 1. 8].

ಇಂದ್ರನ ಪೂರ್ಣರೂಪವನ್ನರಿಯಬೇಕಾದರೆ, ನಿರುಕ್ತಕಾರ ಯಾಸ್ಕರ ಈ ಸಮಸ್ತ ಅರ್ಥಗಳನ್ನೂ ಸ್ಮರಣೆಯಲ್ಲಿಡಬೇಕು. 'ಇರಾ' ಎಂಬುದು ಪ್ರಮುಖವಾದ ಶಬ್ದ. ವೈದಿಕ ಭಾಷೆಯಲ್ಲಿ ಈ ಶಬ್ದಕ್ಕೆ ಆಹಾರ, ಪಾನೀಯ, ಉಲ್ಲಾಸಪ್ರದ ವಸ್ತು ಎಂಬ ಮೂರು ಅರ್ಥಗಳಿವೆ. ಲೌಕಿಕ ಸಂಸ್ಕೃತದಲ್ಲಿ ಭೂಮಿ, ವಾಣಿ, ಜಲ, ಮದ್ಯ, ಹರ್ಷ, ಸೌಕರ್ಯ ಎಂಬರ್ಥಗಳಿವೆ. ಸ್ವಲ್ಪ ಆಲೋಚಿಸಿದರೆ, ವಾಣಿ ಹಾಗೂ ಮದ್ಯ – ಎರಡನ್ನುಳಿದರೆ, ವೈದಿಕ ಭಾಷೆಯಲ್ಲಿನ ಅರ್ಥಗಳಲ್ಲಿಯೇ ಇವನ್ನೂ ಸಮಾವೇಶಗೊಳಿಸಬಹುದಾಗಿದೆ. ವಾಣಿ - ಎಂಬರ್ಥ ಒಂದೆರಡು ಕಡೆ ವೇದಗಳಲ್ಲಿಯೂ ಕಂಡು ಬರುತ್ತದೆ. ಹೀಗೆ, ಆಹಾರ, ಪಾನೀಯ, ಉಲ್ಲಾಸಸಾಧನ ಹಾಗೂ ವಾಣಿ - ಈ ನಾಲ್ಕನ್ನೂ ಗ್ರಹಿಸಬಹುದಾಗಿದೆ. ಇವನ್ನು ಸ್ವತಃ ಬೇರ್ಪಡಿಸುವವನು ಇಂದ್ರ; ಅನ್ಯರ ಮೂಲಕ ಬೇರೆ ಮಾಡಿಸುವವನು ಇಂದ್ರ; ಇವನ್ನು ಧಾರಣೆ ಮಾಡಿಸುವವನು ಇಂದ್ರ - ಎಂದಿಷ್ಟು ಭಾವನೆ ನಿಷ್ಪನ್ನವಾಗುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ, ಜೀವರ ಕರ್ಮಾನುಸಾರ ಅವರಿಗೆ ಭೋಗ ಸಾಮಗ್ರಿಗಳನ್ನೊದಗಿಸುವವನು; ಅನರ್ಹರಿಂದ ಅವನ್ನು ಕಸಿದುಕೊಳ್ಳುವವನು ಇಂದ್ರ - ಎನ್ನಬಹುದು. ಮೂಕಯೋನಿಯಲ್ಲಿ ಅಥವಾ ವಾಗ್ಯುಕ್ತಯೋನಿಯಲ್ಲಿ ಜನ್ಮನೀಡುವವನು ಹಾಗೂ ವೇದ ವಾಣಿಯನ್ನು ಕರುಣಿಸುವವನು ಇಂದ್ರ. ಇದಿಷ್ಟೂ ಇಂದ್ರನ ಒಂದು ರೂಪವಾಯಿತು.

ಇನ್ನೂ ಮೂರು ಮುಖಗಳಿವೆ ಇಂದ್ರನಿಗೆ. ನೀರಸವಾದ ದೇಹವನ್ನು ಸರಸಗೊಳಿಸುವ ಜೀವಾತ್ಮನನ್ನು 'ಇಂದು' – ಎನ್ನುತ್ತಾರೆ – ಎಂದು ಹೇಳಿದ್ದೇವೆ. **"ಇಂದುರಾತ್ಮಾ"** [ನಿರುಕ್ತ, ಪರಿ: – 2. 17] - "ಆತ್ಮನೇ ಇಂದು" ಎಂಬ ಯಾಸ್ಕ ವಚನವೂ ಇದೆ. **"ಇಂದವೇ ದ್ರವತೀತಿ ವಾ"** - "ಅಥವಾ ಜೀವಾತ್ಮನಿಗಾಗಿ ಕರುಣೆಯಿಂದ ಕರಗುವವನು ಇಂದ್ರ. **"ಇಂದೌ ರಮತ ಇತಿ ವಾ"** - "ಅಥವಾ ಜೀವಾತ್ಮನಲ್ಲಿ ಅಂತರ್ಯಾಮಿಯಾಗಿ ರಮಿಸುವವನು ಇಂದ್ರ."; **"ಇಂಧೇ ಭೂತಾನಿ ವಾ."**- "ಪೃಥಿವ್ಯಾದಿ ಜಡ ಭೂತಗಳಿಂದಲೇ ರಚಿತವಾದ ಸೂರ್ಯಾದಿ ಗ್ರಹಗಳಿಗೆ ಪ್ರಕಾಶಕೊಡುವವನು ಮತ್ತು ಪ್ರಳಯ ಸ್ಥಿತಿಯಲ್ಲಿ ಅದೃಶ್ಯವಾಗಿರುವ ಪ್ರಾಣಗಳನ್ನು ಸೃಷ್ಟಿಕಾಲದಲ್ಲಿ ಬೆಳಕಿಗೆ ತರು

ವವನು ಇಂದ್ರ"; "ಹೀಗೆ ಅವ್ಯಕ್ತವಾದುದನ್ನು ವ್ಯಕ್ತರೂಪಕ್ಕೆ ತರುವುದೇ ಇಂದ್ರನ ಇಂದ್ರತ್ವವೆಂದು ತಿಳಿಯಲ್ಪಡುತ್ತದೆ." "**ಇದಂಕರಣ**" ಎಂದರೆ 'ಇದನ್ನು ರಚಿಸುವುದರಿಂದ ಇಂದ್ರ - ಎನ್ನುತ್ತಾರೆ ಆಗ್ರಯಣಾಚಾರ್ಯ. "**ಇದಂದರ್ಶನ** - ಇದರ ದರ್ಶನದಿಂದಾಗಿ ಇಂದ್ರ - ಎನ್ನುತ್ತಾರೆ ಉಪಮನ್ಯುವಿನ ಅನುಯಾಯಿಗಳು." ಇದು ಇಂದ್ರನ ಮತ್ತೊಂದು ಮುಖವಾಯಿತು.

"ಐಶ್ವರ್ಯವಂತನಾದ ಕಾರಣ ಇಂದ್ರನೆನ್ನಿಸುತ್ತಾನೆ." "ಶತ್ರುಗಳನ್ನು ಛಿನ್ನ – ಭಿನ್ನ ಮಾಡುವವನು ಅಥವಾ ಓಡಿಸುವವನು ಇಂದ್ರ" ಎನ್ನುತ್ತಾರೆ. ಇದು ಇಂದ್ರನ – ಮೂರನೆಯ ಮುಖವಾಯಿತು.

"ಯಜ್ಞಕರ್ತೃಗಳಿಗೆ ಆದರ ತೋರಿಸುವವನು ಇಂದ್ರನೆನಿಸುತ್ತಾನೆ." ಇದು ಇಂದ್ರನ ನಾಲ್ಕನೆಯ ಮುಖವಾಯಿತು.

ಈ ವಿಸ್ತೃತ ವರ್ಣನೆಯ ಸಾರವೇನು ? "ಪ್ರತಿಯೊಬ್ಬ ಜೀವಾತ್ಮನ ಕರ್ಮಾನುಸಾರ ಅವನಿಗೆ ಭೋಗ್ಯವಸ್ತುಗಳನ್ನು ಹಾಗೂ ವಾಣಿಯನ್ನು ಕರುಣಿಸುವವನು; ಜೀವರಿಗಾಗಿ ಮರುಕ ತೋರುವವನು; ಜೀವರಲ್ಲಿ ರಮಿಸುವವನು; ಅವ್ಯಕ್ತ ಕಾರಣರೂಪ ಜಗತ್ತನ್ನು ವ್ಯಕ್ತಕಾರ್ಯರೂಪ ಜಗತ್ತಾಗಿ ರೂಪಿಸುವವನು, ಸರ್ವದ್ರಷ್ಟನು, ಐಶ್ವರ್ಯ ಸಂಪನ್ನನು, ಶತ್ರುಗಳನ್ನು ಛಿನ್ನ - ಭಿನ್ನ ಮಾಡುವವನು, ದೂರೀಕರಿಸುವವನು, ಕೊನೆಯದಾಗಿ ಸತ್ಕರ್ಮನಿಷ್ಠರಿಗೆ ಆದರ ತೋರಿಸುವವನು ಇಂದ್ರ." – ಎನ್ನುವುದೇ ಇಂದ್ರನ ಸ್ವರೂಪವಾಗಿದೆ. ಎಷ್ಟೇ ದೊಡ್ಡ ಯೋಗಿಯಾಗಿರಲಿ; ಜ್ಞಾನಿಯಾಗಿರಲಿ; ಸಾಮರ್ಥ್ಯಸಂಪನ್ನನಾಗಿರಲಿ; ಯಾವನೇ ಜೀವಾತ್ಮನೂ ಈ ಲಕ್ಷಣಗಳನ್ನೆಲ್ಲಾ ತನ್ನಲ್ಲಿ ಹೊಂದಿರಲಾರನು. ಇಂದ್ರ - ಎಂಬ ಶಬ್ದದಿಂದ ಇಂದ್ರಿಯವಾನ್ ಜೀವ, ಸೂರ್ಯ, ಮನಸ್ಸು, ವಿದ್ಯುತ್ತು, ಪ್ರಾಣ - ಮೊದಲಾದ ಇತರ ಅಸ್ತಿತ್ವಗಳನ್ನೂ ಅಂಗೀಕರಿಸಿದ್ದರೂ ಕೂಡ, ಮುಖ್ಯಾರ್ಥದಲ್ಲಿ ಇಂದ್ರ ಶಬ್ದದಿಂದ ಪರಮಾತ್ಮನೇ ಗ್ರಾಹ್ಯನಾಗಿರುತ್ತಾನೆ. ಈಗ ವ್ಯಾಖ್ಯಾನ ಮಾಡುತ್ತಿರುವ ಮಂತ್ರದ ವಿಷಯ ಪರಮಾತ್ಮನೇ; ಅವನೇ ಇಂದ್ರ ಶಬ್ದದಿಂದ ನಿರ್ದೇಶಿಸಲ್ಪಟ್ಟಿದ್ದಾನೆ – ಎಂದು ತಿಳಿಯಬೇಕು. ಆಗ ಮಂತ್ರದ ಸಂಪೂರ್ಣಾರ್ಥ ಸೊಗಸಾಗಿ ಹೃದ್ಗತವಾಗುತ್ತದೆ.

ಮಹರ್ಷಿ ದಯಾನಂದರೂ ಈ ಮಂತ್ರದಲ್ಲಿನ 'ಇಂದ್ರ' ಶಬ್ದಕ್ಕೆ, 'ಸೂರ್ಯ' ಎಂಬ ಇನ್ನೊಂದು ಅರ್ಥವನ್ನು ಮಾಡಿದ್ದರೂ, ಮುಖ್ಯತಃ ಪರಮಾತ್ಮನನ್ನೇ ಗ್ರಹಿಸಿದ್ದಾರೆ. ಆದಕಾರಣ, ಈ ಮಂತ್ರದ ಭಾಷ್ಯಕ್ಕೆ ಅವರ ಭಾಷ್ಯದಿಂದ ಬಹಳ ನೆರವು ಸಿಕ್ಕುವುದು.

ಮಹರ್ಷಿಗಳು "**ಇರಾಶಬ್ದೇನಾನ್ನಂ ಪೃಥಿವ್ಯಾದಿಕಮುಚ್ಯತೇ. ತದ್ದಾರಣಾತ್ತದ್ದಾನಾತ್ತದ್ಧಾರಣಾತ್; ತಥಾ ಸರ್ವೇಷಾಂ ಭೂತಾನಾಂ**

**ಪ್ರಕಾಶನಾತ್ಪ್ರಾಣೈರ್ಜೀವಸ್ಯೋಪಕರಣಾತ್, ಅಸ್ಯ ಸರ್ವಸ್ಯ ಜಗತಃ ಉತ್ಪಾದನಾತ್, ದರ್ಶನ ಹೇತೋಶ್ಚ, ಸರ್ವೈಶ್ವರ್ಯ ಯೋಗಾತ್, ದುಷ್ಟಾನಾಂ ಶತ್ರೂಣಾಂ ವಿನಾಶಕತ್ವಾತ್, ದೂರೇ ಗಮಕತ್ವಾತ್, ಯಜ್ವನಾಂ ರಕ್ಷಕತ್ವಾಚ್ಚ ಇಂದ್ರ ಶಬ್ದೇನ ಈಶ್ವರಸ್ಯ ಗ್ರಹಣಂ."** ಎಂದರೆ, ಯಾಸ್ಕರನ್ನೇ ಅನುಸರಿಸಿ – "ಇರಾ - ಎಂಬ ಶಬ್ದದಿಂದ ಅನ್ನ, ಪೃಥಿವೀ – ಮೊದಲಾದುವು ಹೇಳಲ್ಪಡುತ್ತವೆ. ಅಯೋಗ್ಯರಿಂದ ಅದನ್ನು ಕಸಿದುಕೊಳ್ಳುವುದರಿಂದ, ಅದನ್ನು ಧರಿಸುವುದರಿಂದ, ಅದನ್ನು ಪಾತ್ರರಿಗೆ ಕೊಡುವುದರಿಂದ, ಹಾಗೂ ಸರ್ವಭೂತಗಳ ಪ್ರಕಾಶಕತ್ವದಿಂದ, ಪ್ರಾಣದ ಮೂಲಕ ಜೀವರಿಗೆ ಉಪಕಾರ ಮಾಡುವುದರಿಂದ, ಈ ಸಮಸ್ತ ಜಗತ್ತಿನ ಉತ್ಪಾದನದಿಂದ ಮತ್ತು ಸರ್ವದರ್ಶಿತ್ವದಿಂದ, ಸರ್ವೈಶ್ವರ್ಯ ಸಂಪನ್ನತ್ವದಿಂದ, ದುಷ್ಟ ಶತ್ರುಗಳನ್ನು ಧ್ವಂಸಮಾಡುವುದರಿಂದ, ತನ್ನ ಅಸೀಮ ವ್ಯಾಪ್ತಿಯಿಂದಾಗಿ ದೂರಗಾಮಿಯಾದುದರಿಂದ ಮತ್ತು ಯಜ್ಞಕರ್ತೃಗಳ, ಎಂದರೆ ಶುಭ – ಕರ್ಮನಿರತರ ಆದರವನ್ನು ಮಾಡುವುದರಿಂದ, ಇಂದ್ರ ಶಬ್ದದಿಂದ ಈಶ್ವರನನ್ನೇ ಗ್ರಹಿಸಬೇಕು." – ಎನ್ನುತ್ತಾರೆ.

ಆಮೇಲೆ, ಇಂದ್ರನಿಗೆ ವಿಶೇಷಣವಾಗಿ ಬಂದಿರುವ 'ಚಿತ್ರಭಾನು'ವನ್ನು ವಿಮರ್ಶಿಸೋಣ. ಮಹರ್ಷಿದಯಾನಂದರು **"ಚಿತ್ರಾ ಆಶ್ಚರ್ಯಭೂತಾ ಭಾನವಃ ದೀಪ್ತಯೋಽಸ್ಯ ಸಃ"** – "ಯಾವನ ಜ್ಯೋತಿಗಳು ಆಶ್ಚರ್ಯಕರವಾಗಿರುವವೋ, ಅವನು ಚಿತ್ರಭಾನು" – ಎಂದಿದ್ದಾರೆ. ಶ್ರೀ॥ ಮಧ್ವರು – **"ಚಿತ್ರಂ ಭದ್ರಂ ರತಂ ಚಿತೌ"** – "ಚಿತ್ರವೆಂದರೆ ಭದ್ರವಾದುದು; ಮಂಗಳಕರವಾದುದು. ಅಥವಾ ಚಿದ್ರೂಪನಾದ, ಚೇತನನಾದ ಜೀವನಲ್ಲಿ ರತವಾದದು." – ಎಂದು ಹೇಳಿ, **"ತಾದೃಶಾ ರಶ್ಮಯೋ ಜ್ಞಾನೆಮಸ್ಯೇತಿ ಭಗವಾನ್ ಪರಃ ।"** - "ಅಂತಹ, ಚೇತನನಾದ ಜೀವನಲ್ಲಿ ರತವಾಗಿರುವ ರಶ್ಮಿಗಳು, ಜ್ಞಾನಗಳು, ಜೀವಾತ್ಮನ ಅಂತರತಮವನ್ನು ಸ್ಪರ್ಶಿಸುವ ಜ್ಞಾನಪ್ರಭೆಗಳು ಅವನಲ್ಲಿರುವ ಕಾರಣ ಭಗವಂತನು 'ಚಿತ್ರಭಾನು' ಎನಿಸುತ್ತಾನೆ" ಎಂದಿದ್ದಾರೆ. 'ಚಿತ್ರಭಾನುವೆಂದರೆ ಜಡವಾದ ಬೆಂಕಿ' ಎಂದೇ ಅರ್ಥಮಾಡುವ ಅನ್ಯ ಆಚಾರ್ಯರಿಗಿಂತ ಶ್ರೀ॥ ಮಧ್ವರು ಬಹಳ ಮುಂದಿದ್ದಾರೆ.

ಈಗ **"ಅಣ್ವೀಭಿಃ ತನಾ ಪೂತಾಸಃ"** ಈ ಶಬ್ದಗಳನ್ನು ವಿಶ್ಲೇಷಿಸಬೇಕಾಗಿದೆ. ಅಣುಪ್ರಮಾಣದ, ಪ್ರಾಕೃತ ದ್ರವ್ಯದಿಂದ ವಿಸ್ತೃತವಾದ ದೇಹಗಳಿಂದ ಯುಕ್ತರಾದವರು ಐಶ್ವರ್ಯಸಂಪನ್ನರಾದವರು ಹಾಗೂ ಪರಿಶುದ್ಧರಾದವರು." **"ಇಮೇ ಸುತಾಃ"** ಈ ನಿನ್ನ ಮಕ್ಕಳಾದ ಜೀವಾತ್ಮರು. [ತ್ವಾಯವಃ] ಇವರೆಲ್ಲಾ ನಿನ್ನನ್ನೇ ಇಚ್ಛಿಸುವವರಾಗಿದ್ದಾರೆ, ಆದಕಾರಣ, [ಆಯಾಹಿ] ಇವರಿಗೆ ಪ್ರಾಪ್ತನಾಗು; ಇವರಿಗೆ ಅನುಭವಗಮ್ಯನಾಗು. ಇದು ಸಂಬೋಧ ಭಾಷ್ಯವಾಯಿತು. **"ವಿಸ್ತೃತ್ಯ ಶೋಧಿತಾಃ ಸೂಕ್ಷ್ಮ ಪ್ರಮಾಭಿರ್ಮನಾಂಸಿ ಚ"** – ಎಂಬ ಮಧ್ವಕೃತ ಆಧ್ಯಾತ್ಮಿಕಾರ್ಥವೂ ಮನನೀಯವೇ ಆಗಿದೆ. ಐತರೇಯೋಪನಿಷತ್ತಿನ ತೃತೀಯ ಅಧ್ಯಾಯದತ್ತ ದೃಷ್ಟಿಬೀರೋಣ. **"ಕೋಽಯಮಾತ್ಮಾ?"**

"ಈ ಆತ್ಮನಾವನು?" – ಎಂದು ಆರಂಭವಾಗುತ್ತದೆ ಅಧ್ಯಾಯ. **"ಯದೇತತ್ ಹೃದಯಂ ಮನಶ್ಚೈತತ್"** – "ಎಂದು ದ್ವಿತೀಯ ಕಂಡಿಕೆ, 'ಸಂಜ್ಞಾನಮಾಜ್ಞಾನಂ ವಿಜ್ಞಾನಂ, ಪ್ರಜ್ಞಾನಂ ...... ..ಇತಿ ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ." ಎಂದು ಕೊನೆಯಾಗುತ್ತದೆ. ಆತ್ಮನೇ ಹೃದಯ, ಮನಸ್ಸು, ಸಂಜ್ಞಾನ, ಆಜ್ಞಾನ, ವಿಜ್ಞಾನ, ಪ್ರಜ್ಞಾನ ಇತ್ಯಾದಿಗಳೆಲ್ಲಾ ಪ್ರಜ್ಞಾನನಾದ (ಆತ್ಮನ) ಹೆಸರುಗಳೇ." ಎಂದು ತಾತ್ಪರ್ಯ. ಹೀಗೆ ಮಧ್ವರು – "ಶೋಧಿತಾ ಸೂಕ್ಷ್ಮಪ್ರಮಾಭಿರ್ವಾ ಮನಾಂಸಿ ಚ." ಎಂದಾಗ, 'ಮನಸ್ಸು ಗಳು' ಎಂಬುದಕ್ಕೆ "ಆತ್ಮಗಳು,, ಜೀವರು" ಎಂದರ್ಥ ಮಾಡಿದರೆ, ಅದು ಆಭಾಸವಾಗದು.

ಮಂತ್ರದ ಸ್ಪಷ್ಟವಾದ ತಾತ್ಪರ್ಯವೇನು ? ಚಿತ್ರ - ವಿಚಿತ್ರವಾದ, ಅದ್ಭುತವಾದ ಪ್ರಭೆಗಳನ್ನುಳ್ಳ ಸರ್ವೇಶ್ವರನಲ್ಲಿ ಒಂದು ಮಾರ್ಮಿಕ ಪ್ರಾರ್ಥನೆ ಮಂಡಿಸಲ್ಪಟ್ಟಿದೆ. ಸೂಕ್ಷ್ಮವಾದ ಪ್ರಾಕೃತಿಕ ಪರಮಾಣುಗಳಿಂದ ವಿಸ್ತೃತವಾದ ದೇಹವನ್ನು ಪಡೆದು ಬಂದಿದ್ದಾರೆ ಜೀವರು; ಜಡದೇಹಕ್ಕೆ ಸ್ವತಃ ಮೂರುಕಾಸಿನ ಬೆಲೆಯಿಲ್ಲ. ಬೆಲೆ ಬರುವುದು ಜೀವಾತ್ಮ ಅದರಲ್ಲಿ ಪ್ರವಿಷ್ಟನಾದಾಗ; ಬೆಲೆಯಿರುವುದು ಅವನು ಅದರಿಂದ ಬೇರೆಯಾಗುವವರೆಗೆ ಮಾತ್ರ. ಹೀಗೆ ಪ್ರಾಣಯುಕ್ತವಾದ, ಜೀವಂತವಾಗಿರುವ ದೇಹದ ಐಶ್ವರ್ಯ, ಧನ ಈ ಜೀವಾತ್ಮನೇ **"ತನೇತಿ ಧನನಾಮಸು ಪಠಿತಂ"** – [ನಿಘಂಟು:-2. 10. ] "ತನಾ - ಎಂಬುದು ಧನದ ಹೆಸರುಗಳಲ್ಲಿ ಒಂದು." - ಎಂಬ ಆರ್ಷವಾಕ್ಯವನ್ನಿಲ್ಲಿ ಸ್ಮರಿಸಬಹುದು. ದೇಹದ ಧನವೇ ಏನು ? ತಾಯಿ - ತಂದೆ, ಸೋದರ - ಸೋದರಿ, ಪತಿ - ಪತ್ನೀ - ಎಲ್ಲರಿಗೂ ಧನದಂತೆ ಆಕರ್ಷಕವಾಗಿರುವುದು ಜಡದೇಹವಲ್ಲ; ಚೇತನ ಆತ್ಮನೇ. ನಿಜವಾದ ಐಶ್ವರ್ಯ ಶರೀರವಲ್ಲ; ಶರೀರಸ್ಥ ಜೀವಾತ್ಮ ಮಾತ್ರ. ಇಂತಹ ಜೀವರು **"ಪೂತಾಸಃ"** ಪವಿತ್ರರಾದಾಗ ಮಾತ್ರ ಈಶ್ವರ-ಸಾಕ್ಷಾತ್ಕಾರಕ್ಕೆ ಸಮರ್ಥರಾದಾರು. ಆಗ ಮಾತ್ರ **''ತ್ವಾಯವಃ"**- "ನಿನ್ನನ್ನು ಬಯಸುವವರು." – ಎಂದು ಭಗವಂತನಲ್ಲಿ ಹೇಳಿಕೊಳ್ಳಲು ಅರ್ಹರಾದಾರು.

ಇಂದ್ರ - ಎಂದೊಡನೆ, ಯಜ್ಞದಲ್ಲಿ ಸೋಮರಸ ಕುಡಿಯಲು ದೇವಲೋಕದಿಂದ ಧಾವಿಸಿ ಬರುವ ದೇವತೆಗಳ ರಾಜ – ಎಂಬ ಪರಂಪರಾಗತ ವಿಶ್ವಾಸಕ್ಕೇ ಗಂಟುಬಿದ್ದ ಸಾಯಣ, ಮಹೀಧರ ಹಾಗೂ ಮಧ್ವರೂ ಸಹ 'ಸುತಾಃ' ಎಂಬ ಪದ ಕಂಡೊಡನೆ, 'ಹಿಂಡಿ, ಶೋಧಿಸಿ, ಅಣಿಮಾಡಿಟ್ಟ ಸೋಮಗಳು.' - ಎಂದೇ ಅರ್ಥ ಬರೆಯುತ್ತಾರೆ. 'ಸುತ' ಎಂಬ ಶಬ್ದಕ್ಕೆ ಬೇರೆ ಅರ್ಥಗಳೂ ಇರಬಹುದು. ಎಂಬ ಕಲ್ಪನೆ ಕೂಡ ಆ ಭಾಷ್ಯಕಾರರಿಗೆ ಮೂಡುವುದಿಲ್ಲ. ಶ್ರೀ|| ಮಧ್ವರು ಮಾತ್ರ **'ಸೋಮಾನಾಂ ಮನಸಾಂ ಚೈವ ದೇವತಾಃ ಸೋಮರಶ್ಮಿಗಾಃ'** – ಎಂದರೆ, "ಸೋಮಗಳಿಗೆ ಹಾಗೂ ಮನಸ್ಸುಗಳಿಗೆ ದೇವತೆಗಳು ಸಾಮಾನ್ಯರೇ, ಎಂದರೆ ಸೋಮಗಳ ದೇವತೆಗಳೂ, ಮನಸ್ಸುಗಳ ದೇವತೆಗಳೂ ಚಂದ್ರ ಕಿರಣಗಳ ಮೂಲಕವೇ ಸಂಚರಿಸುವ ಕಾರಣ ಸಮಾನರೇ ಆಗಿದ್ದಾರೆ." ಎಂದು ಬರೆಯು

ತ್ತಾರೆ. ಕೇವಲ ಮಾನವ ಮಸ್ತಿಷ್ಕದ ನಿರಾಧಾರ ಕಲ್ಪನೆಗಳಾದ ಅಭಿಮಾನ ದೇವತೆಗಳ ಅಸ್ತಿತ್ವವೇ ಬೃಹಚ್ಛೂನ್ಯವಾಗಿರುವಾಗ, ಆ ಬಗೆಗೆ ಚರ್ಚಿಸುವುದು ಪೂರ್ಣ ನಿರರ್ಥಕ. ನಾವು ಶ್ರೀ॥ ಮಧ್ವರ ವಾಕ್ಯವನ್ನುದ್ಧರಿಸುವುದು, ಅವರು ಕೇವಲ 'ಸೋಮ'ವನ್ನೇ ಅಲ್ಲದೆ 'ಮನಸ್ಸನ್ನೂ' ಕೂಡ ಆ ಶಬ್ದದಿಂದ ಅಂಗೀಕರಿಸಿದ್ದಾರೆ - ಎಂದು ತೋರಿಸಲುಮಾತ್ರ.

**ಸಂಹಿತಾ ವಿಭಾಗ**

**ಇಂದ್ರಾಯಾಹಿ ಧಿಯೇಷಿತೋ ವಿಪ್ರಜೂತಃ ಸುತಾವತಃ।**

**ಉಪ ಬ್ರಹ್ಮಾಣಿ ವಾಘತಃ ॥೫॥**

**ಪದಪಾಠಃ-** ಇಂದ್ರ, ಆ, ಯಾಹಿ, ಧಿಯಾ, ಇಷಿತಃ, ವಿಪ್ರಽಜೂತಃ, ಸುತಽವತಃ, ಉಪ, ಬ್ರಹ್ಮಾಣಿ, ವಾಘತಃ ॥

**ಅನ್ವಯ:-** ಇಂದ್ರ ! ಧಿಯಾ ಇಷಿತಃ ವಿಪ್ರಜೂತಃ ಸುತಾವತಃ ವಾಘತಃ ಬ್ರಹ್ಮಾಣಿ ಉಪ ಆಯಾಹಿ ॥

**ಶಬ್ದಾರ್ಥ:-** [ಇಂದ್ರ[ ಸರ್ವಶಕ್ತಿಮಾನ್ ಸರ್ವೇಶ್ವರ ! [ಧಿಯಾ] ನಮ್ಮ ಶುದ್ಧವಾದ ಜ್ಞಾನ-ಸತ್ಕರ್ಮಗಳಿಂದ, [ಇಷಿತಃ] ಇಚ್ಛಿತನಾಗಿ, [ವಿಪ್ರಜೂತಃ] ವಿಪ್ರರಿಂದ ವಿಶಿಷ್ಟ ಪ್ರಜ್ಞಾವಂತರಾದ ಮೇಧಾವಿಗಳಿಂದ ತಿಳಿಯಲ್ಪಟ್ಟವನೂ, ಪ್ರೀತಿಸಲ್ಪಟ್ಟವನೂ ಆಗಿ, [ಸುತಾವತಃ] ಸಾರಭೂತವಾದ ಸತ್ತತ್ತ್ವವನ್ನು ಹೊಂದಿದವರೂ, [ವಾಘತಃ] ಯಜ್ಞಕರ್ತೃಗಳೂ ಆದ ಸತ್ಪುರುಷರ, (ಮತ್ತು) [ಬ್ರಹ್ಮಾಣಿ] ಸಮಸ್ತಸತ್ಯವಿದ್ಯಾಭಂಡಾರವಾದ ವೇದಗಳ, [ಉಪ] ಸಮೀಪಕ್ಕೆ, [ಆಯಾಹಿ] ಆಗಮಿಸು, ಪ್ರಾಪ್ತನಾಗು.

**ತಾತ್ಪರ್ಯ:-** ಓ ಸರ್ವೈಶ್ವರ್ಯಸಂಪನ್ನ ಸರ್ವಶಕ್ತಿಮಾನ್ ಸರ್ವೇಶ್ವರ ! ನೀನು ಸರ್ವದಾ ಪ್ರಜ್ಞಾನ-ಉತ್ಕೃಷ್ಟಕರ್ಮಗಳಿಂದ ಅಂತಃಕರಣಕ್ಕೆ ಅಂದುವವನಾಗಿದ್ದೀಯೆ. ಪ್ರಬಲ ಮೇಧಾಶಕ್ತಿ ಸಂಪನ್ನರಾದ ತತ್ತ್ವದರ್ಶಿಗಳಿಂದ ತಿಳಿಯಲ್ಪಡುವವನೂ, ಪ್ರೀತಿಸಲ್ಪಡುವವನೂ ಆಗಿದ್ದೀಯೆ. ನಾನಾ ವಿಧದ ಸಾರಭೂತವಾದ ಭೌತಿಕ-ಆಧ್ಯಾತ್ಮಿಕ ತತ್ತ್ವಗಳಿಂದ ಯುಕ್ತರೂ, ಯಜ್ಞದಲ್ಲಿ ಶ್ರೇಷ್ಠತಮ ಕರ್ಮಗಳಲ್ಲಿ ನಿರತರೂ ಆಗಿರುವವರ ಸಮೀಪಕ್ಕೆ ಮತ್ತು ವೇದ ಮಂತ್ರಗಳ ಸ್ತುತಿಗೆ ಹತ್ತಿರಕ್ಕೆ ಆಗಮಿಸು. ವೇದಮಂತ್ರಗಳ ಉಚ್ಚಾರಣದೊಂದಿಗೇ ನಿನ್ನ ಅನುಭೂತಿಯೂ ನಮಗಾಗಲಿ.

---

**ಈ ವೇದಭಾಷ್ಯದ ೨೨ ಪುಟಗಳ ಪೂರ್ಣ ವೆಚ್ಚ**
**ಶ್ರೀಮತಿ ವತ್ಸಲಾದೇವಿ ಕಿಣಿ ಮತ್ತು ಎಂ. ದಯಾನಂದ ಕಿಣಿ, ಮಾಬುಕಳ**
**ಇವರ ಸೇವೆ.**

**ಭಾಷ್ಯ:**— ಈ ಮಂತ್ರದಲ್ಲಿ ಕಠಿಣವಾದ ಶಬ್ದಗಳಾವವೂ ಇಲ್ಲ. ಅತಿ ಸುಲಭ ವಾಗಿಯೇ ವ್ಯಾಖ್ಯಾನ ಮಾಡಬಹುದು. ಹಿಂದಿನ ಮಂತ್ರದಲ್ಲಿ ಓದುಗರು ಇಂದ್ರಶಬ್ದದ ವಿಸ್ತೃತ ವಿವರಣವನ್ನು ಓದಿದ್ದಾರೆ. ಅದೇ ಸರ್ವೇಶ್ವರ ಈ ಮಂತ್ರಕ್ಕೂ ದೇವತೆಯಾಗಿ ದ್ದಾನೆ. ಆ ಭಗವಂತನಲ್ಲಿ ಒಂದು ಮಾರ್ಮಿಕವಾದ ಪ್ರಾರ್ಥನೆಯಿದೆ. ಅದಕ್ಕೆ ಮುನ್ನ ಎರಡು ಶಬ್ದಗಳಿಂದ ಆ ಭಗವಂತನನ್ನು ವರ್ಣಿಸಲಾಗಿದೆ.

ಮೊದಲಿನ ಶಬ್ದ 'ಧಿಯೇಷಿತಃ' ಎಂಬುದು. ಧೀಃ ಬಗೆಗೆ ಪಾಠಕರು ಸಾಕಷ್ಟು ಓದಿದ್ದಾರೆ. ಪ್ರಜ್ಞಾ ಮತ್ತು ಕರ್ಮ ಈ ಎರಡರ್ಥಗಳೂ ಧೀಃ ಶಬ್ದಕ್ಕಿವೆ. ಸಾಧಾರಣತಃ 'ಇಷಿತಃ' – ಎಂದರೆ ಪ್ರೇರಿತನೆಂದು ಅರ್ಥ ಗ್ರಹಿಸುವುದುಂಟು. ಈ ಅರ್ಥವನ್ನು ಗ್ರಹಿಸಿ ದರೆ ಬಹುದೊಡ್ಡ ಸೈದ್ಧಾಂತಿಕ ಸಮಸ್ಯೆಯೊಂದು ತಲೆಯೆತ್ತುತ್ತದೆ. ಭಗವಂತ ಯಾರಿಂದ ಲಾದರೂ 'ಪ್ರೇರಿತ'ನಾಗಬಲ್ಲನಾದರೆ, ಮತ್ತಾರಿಂದಲಾದರೂ ನಿರುತ್ಸಾಹಗೊಳಿಸಲ್ಪಡಲೂ ಶಕ್ಯವೆಂಬ ಪ್ರತಿಪಕ್ಷವನ್ನೂ ಕೂಡ ಅಂಗೀಕರಿಸಬೇಕಾದೀತು. ಸ್ಪಷ್ಟವಾಗಿಯೇ ಇದು ನಿರ್ವಿ ಕಾರನಲ್ಲಿ 'ವಿಕಾರ'ದ ಆರೋಪಣೆ ಮಾಡುವ ಅಸತ್ಕರ್ಮವಾಗಿದೆ. ಆದ ಕಾರಣ, 'ಇಷೀತಃ' ಎಂಬ ಶಬ್ದಕ್ಕೆ 'ಪ್ರೇರಿತ' ನೆಂದಲ್ಲ; ಇಚ್ಛಿತನೆಂಬ ಸಾಧುವಾದ ಅರ್ಥವನ್ನೆ ಮಾಡಬೇಕು. 'ಇಚ್ಛೆ' ಎಂಬರ್ಥ ಸೂಚಿಸುವ 'ಇಷ್' ಧಾತುವೂ ಇದ್ದೇ ಇದೆ. ಈ ರೀತಿ 'ಧಿಯೇಷಿತಃ' ಎಂದಾಗ, "ಪ್ರಜ್ಞಾ - ಕರ್ಮಗಳಿಂದ ಇಚ್ಛಿತನಾಗಿ, ಅಭೀಷ್ಟನಾಗಿ" – ಎಂದೇ ಗ್ರಹಿಸಬೇಕು. ಸರಿ; ಯಾರ ಪ್ರಜ್ಞಾ - ಕರ್ಮಗಳಿಂದ ? ಶ್ರೀಮಧ್ವರೇನೋ 'ಅಸ್ಮದ್ಬುಧ್ಯಾ ಪ್ರಾರ್ಥಿತೋ ವಾ ಸ್ವಬುಧ್ಯಾಪ್ರೇರಿತೋಽಪಿವಾ' - ಎಂದು ಬರೆದಿದ್ದಾರೆ. 'ನಮ್ಮ ಬುದ್ಧಿಯಿಂದ ಪ್ರಾರ್ಥಿತನಾಗಿ' - ಎಂಬುದನ್ನೇನೋ ಒಪ್ಪಿಕೊಳ್ಳಬಹುದು; ಆದರೆ "ಸ್ವ - ಬುಧ್ಯಾ ಪ್ರೇರಿತೋಽಪಿವಾ" "ಭಗವಂತನು ತನ್ನ ಬುದ್ಧಿಯಿಂದ ಪ್ರೇರಿತನಾಗಿ" ಎಂಬ ವಿಕಲ್ಪ ವೊಂದನ್ನು ಮುಂದಿಟ್ಟಾಗ, ಪೂರ್ಣನಾದ ಪರಮಾತ್ಮನಿಗೆ ಹುಮ್ಮಸ್ಸು ಹುಟ್ಟುವುದು; ತಣ್ಣಗಾಗುವುದು ಇತ್ಯಾದಿ ಮಾನವೀಯ ವಿಕಾರಗಳನ್ನು ಕಲ್ಪಿಸುವುದು ತತ್ತ್ವಗಳಿಗೆ ಅಭಿಮತವಲ್ಲ. ಯಾವನ ಬಗೆಗೆ **"ಅಪ್ರಾಣೋ ಹ್ಯಮನಾಃ ಶುದ್ಧಃ"** "ಅಶರೀರನಾದ ಕಾರಣ ಪ್ರಾಣರಹಿತನು; ಮನೋರಹಿತನು; ಶುದ್ಧನು." ಎಂದು ಉಪನಿಷತ್ಕಾರರು ಹೇಳಿದ್ದಾರೋ, ಅದೇ ಪರಮಾತ್ಮನಿಗೆ ಒಂದು 'ಬುದ್ಧಿ'ಯನ್ನು ಕಲ್ಪಿಸಿ, ಆದರಿಂದ ಪ್ರೇರಿತ ನಾಗುತ್ತಾನೆನ್ನುವುದು ತತ್ತ್ವದರ್ಶಿಗಳ ದೃಷ್ಟಿಯಲ್ಲಿ ಸತ್ಯಕ್ಕೆ ಬಹುದೂರ. ಪರಮಾತ್ಮ ಸ್ವಯಂ ಪ್ರಜ್ಞಾನ ಸ್ವರೂಪನೇ ಹೊರತು, ಪ್ರಜ್ಞಾವಂತನಲ್ಲ. ಸ್ವಯಂ ಬುದ್ಧಿಸ್ವರೂಪನೇ ಹೊರತು ಬುದ್ಧಿವಂತನಲ್ಲ. ಆದ ಕಾರಣ 'ತನ್ನ ಬುದ್ಧಿಯಿಂದ ಪ್ರೇರಿತನಾಗಿ' – ಎಂಬ ಶಬ್ದಗಳಿಗೆ ನಿರ್ದಿಷ್ಟವಾದ ಅರ್ಥವಿಲ್ಲ. ಅಹುದು; ಸಶರೀರನಾದ, ಜೀವಾತ್ಮನ ಬಗೆಗೆ ಇಂತಹ ಮಾತುಗಳನ್ನಾಡಬಹುದು; ಅಶರೀರನಾದ, ನಿರಾಕಾರನಾದ, ಯಜುರ್ವೇದದಲ್ಲಿ **''ಅಕಾಯಮವ್ರಣಮಸ್ನಾವಿರಂ"** [40. 8.] – "ಕಾಯರಹಿತನು, ವ್ರಣರಹಿತನು, ನಾಡೀಬಂಧನರಹಿತನು" – ಎಂದು ನಿರ್ದಿಷ್ಟನಾದ ಭಗವಂತನ ವಿಷಯದಲ್ಲಿ ಇಂತಹ ಮಾತುಗಳನ್ನಾಡಲು ಸಾಧ್ಯವಿಲ್ಲ.

ಎಂದಮೇಲೆ, ಧೀಃ, ಪ್ರಜ್ಞಾನ ಹಾಗೂ ಕರ್ಮ ಉಪಾಸಕನಾದ ಜೀವನದೇ ಆಗಿರಬೇಕು. ಮತ್ತು ಭಗವಂತನು ಉಪಾಸಕನ ಪ್ರಜ್ಞಾಕರ್ಮಗಳಿಂದ ಪ್ರೇರಿತನಾಗುವುದಿಲ್ಲ, ಇಚ್ಛಿತನಾಗುತ್ತಾನೆ. ಅಷ್ಟೇ. ಎಂದರೆ, ಉಪಾಸಕನ ಜ್ಞಾನದ ಹಾಗೂ ಕರ್ಮದ ಉದ್ದೇಶ್ಯ, ಗುರಿ, ಇಚ್ಛೆ ಆ ಭಗವಂತನೇ ಆಗಿರುತ್ತಾನೆ.

ಎರಡನೆಯ ವಿಶೇಷಣ '**ವಿಪ್ರಜೂತಃ**' ಎಂಬುದನ್ನು ವಿಶ್ಲೇಷಿಸೋಣ. ನಿಘಂಟು ವಿನಲ್ಲಿ **"ವಿಪ್ರ ಇತಿ ಮೇಧಾವಿ ನಾಮಸು ಪಠಿತಂ."** [3.5.] ಎಂದರೆ, ವಿಪ್ರ– ಎಂಬುದು ಮೇಧಾವಿ–ಎಂಬುದರ ಅರ್ಥವನ್ನೇ ಹೊಂದಿದೆ. "ವೇದ" ಎಂಬ ಶಬ್ದದ, ಅರ್ಥವೇ 'ಜ್ಞಾನ' ಎಂದಾಗಿರುವಾಗ, ವೈದಿಕಧರ್ಮದಲ್ಲಿ ಅಜ್ಞಾನಕ್ಕೆಡೆಯಿಲ್ಲ. **"ವೇದದ ವಿದ್ವಾನ್ ಶೃಣವಚ್ಚ ವಿದ್ವಾನ್"** [ಋಗ್ವೇದ:–5.30.3.]–"ತಿಳಿಯದವನು, ಅಜ್ಞಾನಿಯು, ತಿಳಿದುಕೊಳ್ಳಲಿ, ಜ್ಞಾನಿಯಾಗಲಿ. ತಿಳಿದವನು, ಜ್ಞಾನಿಯಾದವನು ಮತ್ತು ಅಧಿಕ ಆಲಿಸಲಿ; ಇನ್ನೂ ಹೆಚ್ಚು ಜ್ಞಾನಗಳಿಸಲಿ."–ಎಂದೇ ವೇದಾದೇಶವಿದೆ. ಆದಕಾರಣ, ಮಾನವನು ವಿಪ್ರನಾಗಬೇಕು; ಮೇಧಾವಿಯಾಗಬೇಕು. ಅಂತಹ ಮೇಧಾವಿಗಳಿಂದ 'ಜೂತ'ನಾಗಿದ್ದಾನೆ ಪರಮಾತ್ಮ; ಪ್ರೀತಿಸಲ್ಪಡುವವನಾಗಿದ್ದಾನೆ; ತಿಳಿಯಲ್ಪಟ್ಟವನಾಗಿದ್ದಾನೆ.

ಅಂತಹ ಪರಮಾತ್ಮನಲ್ಲಿ ಉಪಾಸಕರ ಅಭ್ಯರ್ಥನೆ, ಪ್ರಾರ್ಥನೆ ಏನು ? '**ಆ–ಯಾಹಿ**' - "ಆಗಮಿಸು"-ಎಂದು. ಸರ್ವತ್ರವ್ಯಾಪಕನಾದ ಆ ಭಗವಂತ ಬರುವುದೆಲ್ಲಿಂದ ? ಬರುವುದೆಲ್ಲಿಗೆ ? ಸರ್ವವ್ಯಾಪಕನ ಗಮನಾಗಮನಗಳು ಭೌತಿಕ ದೃಷ್ಟಿಯಿಂದ ಸರ್ವಥಾ ಅಸಂಭವ." "ಅನುಭವ ಗಮ್ಯನಾಗು; ಅಂತಃಕರಣದ ಹಿಡಿತಕ್ಕೆ ಅಂದು."–ಎಂದು ತಾತ್ಪರ್ಯ ಈ **"ಆಯಾಹಿ"** –ಎಂಬುದಕ್ಕೆ. ಆದರೆ, ಈ ಅನುಭವಗಮ್ಯತ್ವ, ಅಂತಃಕರಣಕ್ಕೆ ಅಂದುವಿಕೆ ಮಹಾತಪಸ್ಸಿನ ಫಲ; ಪುಸ್ತಕದಲ್ಲಿ ಓದುವಷ್ಟು, ಕಾಗದದ ಮೇಲೆ ಬರೆಯುವಷ್ಟು ಸುಲಭವಲ್ಲ ಈ ಈಶ್ವರ-ಸಾಕ್ಷಾತ್ಕಾರ. ಮಹತೀ ಸಾಧನೆಯಿಲ್ಲದೆ ಇದು ಸಿದ್ಧಿಸದು.

ಈ ಧ್ಯೇಯ ಸಿದ್ಧಿಗೆ ನಿರ್ದಿಷ್ಟವಾದ ಮಾರ್ಗವಿದೆ. "ಸುತಾವಂತರೂ, ವಾಘತರೂ" ಆಗದೆ ಈ ಉದ್ದೇಶ್ಯ ಸಿದ್ಧಿಸದು. ಸಾರಸಾರ ವಿಚಾರಮಾಡಿ, ಸಾರಭೂತವಾದುದನ್ನು ಗ್ರಹಿಸುವವರು ಹಾಗೂ ಋತ್ವಿಕ್ಕುಗಳು ಮಾತ್ರ ಈಶ್ವರಾನುಭೂತಿ ಪಡೆಯಬಲ್ಲರು. **''ವಾಘತ ಇತಿ ಋತ್ವಿಜ್ನಾಮಸು ಪಠಿತಂ"** [3. 18] "ಋತ್ವಿಕ್ಕುಗಳ ಹೆಸರುಗಳಲ್ಲಿ ವಾಘತ – ಎಂದೂ ಹೇಳಲ್ಪಟ್ಟಿದೆ. ಪರಮಾತ್ಮನ ಅನುಭವ ಈ ಬಗೆಯ ವಿವೇಕಿಗಳ ಹಾಗೂ ಯಜ್ಞಕರ್ತೃಗಳ – ಎಂದರೆ ಶ್ರೇಷ್ಠತಮ ಕರ್ಮಗಳಲ್ಲಿ ತೊಡಗಿರುವವರ ಹಿಡಿತಕ್ಕೆ ಮಾತ್ರ ಸಿಕ್ಕುತ್ತದೆ. ಮತ್ತೆ ಇನ್ನೊಂದು ಶಬ್ದವಿದೆ – '**ಬ್ರಹ್ಮಾಣಿ**' – ಎಂದು. ಮಹರ್ಷಿ ದಯಾನಂದರು '**ಬ್ರಹ್ಮ ವೈ ಬ್ರಾಹ್ಮಣಃ**' [ಶತಃ-13. 1. 5. 3.] "ಬ್ರಹ್ಮಾಣಿ" ಎಂಬುದನ್ನು 'ಸುತಾವತಃ' ಎಂಬ ಶಬ್ದಕ್ಕೇ ಸೇರಿಸಿ "ವಿಜ್ಞಾತ ವೇದಾರ್ಥಾನ್ ಬ್ರಾಹ್ಮಣಾನ್" "ವೇದಾರ್ಥಜ್ಞರಾದ ಬ್ರಾಹ್ಮಣರನ್ನು'' - ಎಂದರ್ಥ ಮಾಡುತ್ತಾರೆ. ವಿಭಕ್ತಿ – ವ್ಯತ್ಯಯ–

ಪುರುಷ ವ್ಯತ್ಯಯ ಮೊದಲಾದ ಛಾಂದಸೀ ಶೈಲಿಗನುಸಾರ, 'ಸುತಾವಂತಿ ಬ್ರಹ್ಮಾಣಿ' ಎಂದಿರಬೇಕಾದುದು 'ಸುತಾವತಃಬ್ರಹ್ಮಾಣಿ' – ಎಂದಾಗಿದೆ - ಎಂದಾಗಲಿ, ಬ್ರಹ್ಮಾಣಿ – ಎಂಬುದು 'ಸುತಾವತಃ' ಶಬ್ದಕ್ಕೆ ಸಂಬಂಧವಿಲ್ಲದ ಸ್ವತಂತ್ರ ಶಬ್ದವೆಂದಾಗಲಿ ಎಣಿಸಬಹುದು. ನಾವು ದ್ವಿತೀಯ ಪಕ್ಷವನ್ನು ವಹಿಸಿದ್ದೇವೆ. ಮತ್ತು 'ಬ್ರಹ್ಮಾಣಿ' ಎಂಬುದು 'ವೇದಗಳು ಎಂಬರ್ಥವನ್ನೇ ತಾಳ್ದಿವೆ; ಬ್ರಾಹ್ಮಣರು – ಎಂದಲ್ಲ – ಎನ್ನುವುದು ನಮ್ಮ ಪಕ್ಷವಾಗಿದೆ.

ಹೀಗೆ 'ಸುತಾವತಃ ವಾಘತಃ ಬ್ರಹ್ಮಾಣಿ ಉಪ ಆಯಾಹಿ,, ಎಂಬ ವಾಕ್ಯಕ್ಕೆ 'ಸಾರ ಭೂತ ಸತ್ತತ್ತ್ವವನ್ನು ಹೊಂದಿದವರೂ, ಯಜ್ಞಕರ್ತೃಗಳೂ ಆದ ಸತ್ಪುರುಷರ ಹಾಗೂ ಸಮಸ್ತ ವಿದ್ಯಾ ಭಂಡಾರಗಳಾದ ವೇದಗಳ ಸಮೀಪಕ್ಕೆ ಆಗಮಿಸು." ಎಂದು ಅರ್ಥಮಾಡಿದ್ದೇವೆ. ಈ ಸಂಯುಕ್ತ ವಾಕ್ಯದ ದ್ವಿತೀಯ ಭಾಗ ಸ್ವಲ್ಪ ವಿವರಣೆಯನ್ನು ಅಪೇಕ್ಷಿಸುತ್ತದೆ. ಚತುರ್ವೇದಗಳ ಚರಮಲಕ್ಷ್ಯ ಈಶ್ವರ - ಸಾಕ್ಷಾತ್ಕಾರವೇ. ವೇದಗಳು ನಿಷ್ಪನ್ನವಾದುದು ಈಶ್ವರನಿಂದಲೇ. ಈಶ್ವರ - ಸಾಕ್ಷಾತ್ಕಾರಕ್ಕೆ ತಣ್ಣೀರನ್ನೆರಚಿ, ಬೇರೆ ಎಲ್ಲಾ ಅರ್ಥಗಳನ್ನೂ ಗ್ರಹಿಸಿದರೂ, ಸಿಕ್ಕುವ ಫಲ ಅಷ್ಟಕಷ್ಟೇ. **''ಯಸ್ತಿತ್ಯಾಜ ಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿ ಭಾಗೋ ಅಸ್ತಿ''** [ಋಗ್ವೇದ:– 10. 71. 6] "ಯಾವನು ತನ್ನ ಸುಖವಾದ ಜೀವನವನ್ನು ಕೈಬಿಡದೆ, ಅವನನ್ನರಿತು ಎಲ್ಲ ಸೌಕರ್ಯಗಳನ್ನೂ ಕರುಣಿಸುತ್ತಾನೋ, ಆ ಸರ್ವೋತ್ತಮ ಸಖನಾದ ಪರಮಾತ್ಮನನ್ನು ತೊರೆದು ಬಿಡುತ್ತಾನೋ, ಅವನಿಗೆ ವೇದವಾಣಿಯಲ್ಲಿ ಯಾವ ಪಾಲೂ ಇಲ್ಲ" – ಎಂದು ಘೋಷಿಸುತ್ತಲೇ ಇದೆ ಋಗ್ವೇದ. **'ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ.'** [ಋಗ್ವೇದ:– 1. 164. 39] –"ಯಾವನು ಆ ಸರ್ವರಕ್ಷಕನನ್ನರಿಯನೋ, ಅವನು ಋಕ್ಕುಗಳನ್ನು ಕಟ್ಟಿಕೊಂಡು ಮಾಡುವನಾದರೂ ಏನನ್ನು?" ಎಂದು ಪ್ರಶ್ನಿಸುತ್ತದೆ – ಅದೇ ಋಗ್ವೇದ.

ನಮ್ಮ ಭಾವನೆ ಅರಿವಿಗೆಂದದ ಸಮಸ್ಯೆಯಲ್ಲ. "ಬ್ರಹ್ಮಾಣಿ ಉಪ ಆಯಾಹಿ." – ಎಂಬುದಕ್ಕೆ "ವೇದಗಳ ಸಮೀಪಕ್ಕೆ ಆಗಮಿಸು." ಎಂದು ನಾವು ಅರ್ಥ ಮಾಡುವಾಗ, "ನಮ್ಮ ವೇದಾಧ್ಯಯನ ಈಶ್ವರ ಸಾಕ್ಷಾತ್ಕಾರವನ್ನು ನಮ್ಮ ಬಳಿಗೆ ತರಲಿ." – ಎಂಬ ಆಶಯವನ್ನೇ ನಾವು ಹೊಂದಿದ್ದೇವೆ. ವೇದಗಳ ಸಮೀಪಕ್ಕೆ ಈಶ್ವರನ ಆಗಮನ, ವೇದಪಾಠಿಗಳ ಸಮೀಪಕ್ಕೆ ಈಶ್ವರನ ಆಗಮನವೇ ಸರಿ. ಅಹುದು; ವೇದವಾಣಿಯಿಂದಲೇ ಈ ಆಶಯವನ್ನು ವ್ಯಕ್ತಪಡಿಸಿ, ಮುಂದಿನ ಮಂತ್ರಕ್ಕೆ ಚಿತ್ತ ಹರಿಸೋಣ:–

**ಯಸ್ಮಾತ್ಕೋಶಾದುದಭರಾಮ ವೇದಂ ತಸ್ಮಿನ್ನಂತರವದಧ್ಮ ಏನಂ।**
**ಕೃತಮಿಷ್ಟಂ ಬ್ರಹ್ಮಣೋ ವೀರ್ಯೇಣ ತೇನ ಮಾ ದೇವಾಸ್ತಪಸಾವತೇಹ ॥**

[ಅಥರ್ವವೇದ:–19.72.1.]

"[ಯಸ್ಮಾತ್ ಕೋಶಾತ್] ಯಾವ ಜ್ಞಾನಕೋಶದಿಂದ, [ವೇದಂ] ವೇದವನ್ನು [ಉತ್ ಅಭರಾಮ] ಮೇಲಕ್ಕೆತ್ತಿಕೊಂಡೆವೋ, [ತಸ್ಮಿನ್ ಅಂತಃ] ಆ ಈಶ್ವರನಲ್ಲಿಯೇ,

[ಏನಂ] ಈ ವೇದವನ್ನು, [ಅವದಧ್ಮಃ] ಸ್ಥಾಪಿಸಿ ಬಿಡೋಣ. [ಬ್ರಹ್ಮಣಃ ವೀರ್ಯೇಣ] ವೇದದ ಶಕ್ತಿಯಿಂದ, [ಇಷ್ಟಂ ಕೃತಂ] ಅಭಿಷ್ಟವನ್ನು ಸಾಧಿಸಿಕೊಂಡಿದ್ದೇವೆ. [ದೇವಾಃ] ಸತ್ಯವಂತರಾದ ವಿದ್ವಜ್ಜನರೇ! [ತೇನ ತಪಸಾ] ಆ ವೇದಜ್ಞಾನಮಯವಾದ ತಪಸ್ಸಿನಿಂದ, [ಇಹ] ಇಲ್ಲಿ, [ಮಾ ಅವತ] ನನ್ನನ್ನು ರಕ್ಷಿಸಿರಿ; ಮುಂದುಮುಂದಕ್ಕೆ, ಪ್ರಗತಿಯಿಂದ ಪ್ರಗತಿಗೆ ನಡೆಯಿಸಿರಿ." ಈಶ್ವರ-ಸಾಕ್ಷಾತ್ಕಾರಕ್ಕಾಗಿ ವೇದ. ಅದು ವೇದಗಳ ಮುಖ್ಯವಾದ ವಿಷಯ. ಹಾಗೆಂದ ಮಾತ್ರಕ್ಕೆ ಐಹಿಕ ಪ್ರಗತಿಯುಕ್ತ ವೇದಗಳು ಮೌನ ತಾಳಿವೆ-ಎಂಬರ್ಥವಲ್ಲ. ಎಲ್ಲ ಭೌತಿಕ ವಿಷಯಗಳಲ್ಲಿಯೂ ಪ್ರಗತಿ ಸಾಧಿಸಲು ವೇದಗಳು ದಾರಿ ತೋರಿಸುತ್ತವೆ. ಆದರೂ ಮುಖ್ಯವಾದುದು ಈಶ್ವರ-ಸಾಕ್ಷಾತ್ಕಾರ-ಎಂಬುದೇ ತಾತ್ಪರ್ಯ.

## ಸಂಹಿತಾ ವಿಭಾಗ

ಇಂದ್ರಾಯಾಹಿ ತೂತುಜಾನ ಉಪ ಬ್ರಹ್ಮಾಣಿ ಹರಿವಃ।

ಸುತೇ ದಧಿಷ್ವ ನಶ್ಚನಃ॥೬॥

**ಪದಪಾಠ:**- ಇಂದ್ರ, ಆಯಾಹಿ, ತೂತುಜಾನ, ಉಪ, ಬ್ರಹ್ಮಾಣಿ, ಹರಿವಃ, ಸುತೇ, ದಧಿಷ್ವ, ನಃ, ಚನಃ॥

**ಅನ್ವಯ:**- ತೂತುಜಾನ ಹರಿವಃ ಇಂದ್ರ! ಬ್ರಹ್ಮಾಣಿ ಉಪ ಆಯಾಹಿ. ಸುತೇ, ನಃ ಚನಃ ದಧಿಷ್ವ॥

**ಶಬ್ದಾರ್ಥ:**- [ತೂತುಜಾನ] ಮಹಾವೇಗಶಾಲಿಯಾದ, [ಹರಿವಃ] ಮಾನವ ಮಾತ್ರರಿಗೆ ಸೇರಿದವನಾದ, ವಿಷಯಹಾರಿಗಳಾದ ಇಂದ್ರಿಯಗಳ ನಿಯಾಮಕವಾದ, [ಇಂದ್ರ] ಸರ್ವೇಶ್ವರನೇ! [ಬ್ರಹ್ಮಾಣಿ ಉಪ] ವೇದಗಳ ಸಮೀಪಕ್ಕೆ, [ಆ ಯಾಹಿ] ಆಗಮಿಸು. [ಸುತೇ] ಉತ್ಪನ್ನವಾದ ಈ ಜಗತ್ತಿನಲ್ಲಿ, [ನಃ] ನಮಗೆ, [ಚನಃ] ಅನ್ನ-ಪಾನಾದಿಗಳನ್ನು [ದಧಿಷ್ವ] ಧಾರಣೆ ಮಾಡಿಸು.

**ತಾತ್ಪರ್ಯ:**- ಮಹಾವೇಗಶಾಲಿಯೂ, ಮಾನವಮಾತ್ರರಿಗೆ, ಜೀವಮಾತ್ರರಿಗೆ ಏಕಪ್ರಕಾರವಾಗಿ ಸೇರಿದ ಸರ್ವೇಶ್ವರನೇ! ಪ್ರತಿಯೊಂದು ಇಂದ್ರಿಯಕ್ಕೂ ವಿಷಯಗಳನ್ನು ನಿರ್ಧರಿಸುವ ನಿಯಾಮಕನೇ! ನಾವು ಬಳಸುವ, ಉಚ್ಚರಿಸುವ ವೇದಮಂತ್ರಗಳು ನಮಗೆ ಕರುಣಿಸುವ ಜ್ಞಾನದಿಂದ ನೀನು ನಮಗೆ ಸಮೀಪಸ್ಥನಾಗು. ನಿನ್ನ ಸೃಷ್ಟಿಯಾದ ಈ ಜಗತ್ತಿನಲ್ಲಿ ನಮಗೆ ಜೀವನಾಧಾರವಾದ ಆಹಾರ-ಪಾನೀಯಗಳನ್ನು ದಯಪಾಲಿಸು.

**ಭಾಷ್ಯ:**- ಮಹರ್ಷಿ ದಯಾನಂದರು ಈ ಮಂತ್ರದಲ್ಲಿ 'ಇಂದ್ರ' ಶಬ್ದದಿಂದ ವಾಯುವನ್ನು ಗ್ರಹಿಸಿ ವ್ಯಾಖ್ಯಾನ ಮಾಡಿದ್ದಾರೆ. ನಾವು ಯಥಾರೀತಿ ಆಧ್ಯಾತ್ಮಿಕ ಅರ್ಥಕ್ಕೆ

ಪ್ರಾಧಾನ್ಯವಿತ್ತು, ಹಿಂದಿನ ಎರಡು ಮಂತ್ರಗಳಲ್ಲಿ ಗ್ರಹಿಸಿದಂತೆಯೇ, ಈ ಮಂತ್ರದಲ್ಲಿಯೂ ಇಂದ್ರನೆಂದರೆ ಸರ್ವೇಶ್ವರನೆಂದೇ ಗ್ರಹಿಸಿದ್ದೇವೆ. ಪ್ರಕರಣ ಸರಿಯಾಗಿ ಹೊಂದಿಕೊಂಡು ಹೋಗುತ್ತದೆ. ಶಬ್ದಗಳನ್ನು ಹಿಡಿದು ಎಳೆದಾಡುವ ಪ್ರಸಂಗವೂ ಬರುವುದಿಲ್ಲ. ನೇರವಾದ ಹೃದಯಸ್ಪರ್ಶೀ ಅರ್ಥ ಹೊರಬೀಳುತ್ತದೆ.

ಈ ಮಂತ್ರದಲ್ಲಿಯೂ ಆರಾಧಕರು ಸರ್ವೈಶ್ವರ್ಯ ಸಂಪನ್ನನಾದ ಪರಮಾತ್ಮನನ್ನು 'ಆಗಮಿಸು' ಎಂದೇ ಬೇಡುತ್ತಾರೆ. ಭಗವಂತನು 'ತೂತುಜಾನ'ನು; ವೇಗಶಾಲಿಯು ಯಜುರ್ವೇದವು [40. 4] **"ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ ಆಪ್ನುವನ್ ಪೂರ್ವಮರ್ಶತ್."** – "ಏಕಮಾತ್ರನಾದ ಪರಮಾತ್ಮನು ಸ್ವತಃ ನಿಶ್ಚಲನು, ಆದರೂ ಕೂಡ ಮನಸ್ಸಿಗಿಂತಲೂ ಹೆಚ್ಚು ವೇಗಶಾಲಿಯು. ದಿವ್ಯಶಕ್ತಿ ಸಂಪನ್ನ ಇಂದ್ರಿಯಗಳು ಇವನನ್ನು ಹಿಡಿಯಲಾರವು; ಇವನು ಅವಕ್ಕಿಂತ ಮುನ್ನವೇ ಧಾವಿಸಿರುತ್ತಾನೆ." – ಎನ್ನುತ್ತಲಿದೆ. ನಿಶ್ಚಲತತ್ತ್ವ ಮನಸ್ಸಿಗಿಂತ ವೇಗಶಾಲಿ – ಎಂದರೆ ಮನಸ್ಸಿಗೆ ಅದು ಅಂದದು. ದೇಹಸ್ಥದೇವತೆಗಳಾದ ಅನ್ಯ ಇಂದ್ರಿಯಗಳಿಗೂ ಅದು ಸಿಕ್ಕದು; ಎಂದರೆ – ಅದು ಅತೀಂದ್ರಿಯ ತತ್ತ್ವವಾಗಿದೆ. ಇದೇ ಅಚಲನಾದ ಸರ್ವೇಶ್ವರನ ವೇಗಶಾಲಿತ್ವ. ನಿಘಂಟು – **"ತೂತುಜಾನ ಇತಿ ಕ್ಷಿಪ್ರನಾಮಸು ಪಠಿತಂ."** – [2. 15] "ತೂತುಜಾನನೆಂದರೆ ಕ್ಷಿಪ್ರಗಾಮಿ" ಎಂದು ಹೇಳಿಯೆ ಇದೆ. ಮಧ್ವರೂ – **'ವೇಗವಾನ್ ತೂತುಜಾನಃ ಸ್ಯಾತ್'** – "ವೇಗಶಾಲಿಯು ತೂತುಜಾನನೆನಿಸುತ್ತಾನೆ." – ಎಂದೇ ಅರ್ಥಮಾಡಿದ್ದಾರೆ.

ಮುಂದಿನ ಶಬ್ದ **'ಹರಿವಃ'** ಎಂಬುದು, ಇದು **ಹರಿವಾ** ಶಬ್ದದ ಸಂಬೋಧನ ರೂಪ. 'ಹರಿ' ಎಂಬ ಶಬ್ದ ಬಹ್ವರ್ಥವಾಚಕ. ಮನುಷ್ಯ, ಮಂಗ, ಕುದುರೆ, ಕೋಗಿಲೆ ಕಪ್ಪೆ, ಗಿಳಿ, ಹಾವು, ನವಿಲು, ಕಿರಣ, ಬೆಂಕಿ, ಗಾಳಿ, ಸಿಂಹ – ಹೀಗೆ ಅನೇಕ ಪ್ರಾಣಧಾರಿಗಳನ್ನು 'ಹರಿ' ಎನ್ನುತ್ತಾರೆ. ಪೌರಾಣಿಕ ಕಲ್ಪನೆಯ ವಿಷ್ಣು, ಶಿವ, ಬ್ರಹ್ಮ ಮೊದಲಾದ ದೇವತೆಗಳಿಗೆ ಕೂಡ 'ಹರಿ' ಎಂಬ ಹೆಸರನ್ನೇ ಹೊಂದಿಸಿದ್ದಾರೆ. ಮಾನವರು ಮಾತ್ರ ಧರ್ಮೋಪದೇಶಕ್ಕೆ ಪಾತ್ರರಾದ ಕಾರಣ, ನಾವು ಅನ್ಯಪ್ರಾಣಿಗಳನ್ನು ಬಿಟ್ಟು, ಕೇವಲ ಮನುಷ್ಯರನ್ನು ಮಾತ್ರ ಹರಿಶಬ್ದದಿಂದ ಗ್ರಹಿಸಿ, **'ಹರಿವಾ'** ಎಂಬುದಕ್ಕೆ "ಮಾನವ ಮಾತ್ರರಿಗೆ ಸೇರಿದವನು" – ಎಂದರ್ಥ ಮಾಡಿದ್ದೇವೆ. ಇದರರ್ಥ ಪರಮಾತ್ಮನಿಗೆ ಮಾನವೇತರ ಜೀವರ ಮೇಲೆ ಪ್ರೀತಿಯಿಲ್ಲವೆಂದಲ್ಲ. ದೇವರು, ಆತ್ಮ, ಧರ್ಮ, ಶಾಸ್ತ್ರ – ಈ ವಿಷಯಗಳಲ್ಲಿ ಕೇವಲ ಮಾನವರಿಗೆಯೇ ಅಧಿಕಾರವಿದೆ – ಆತ್ಮವಿಕಾಸದ ದೃಷ್ಟಿಯಿಂದ. ಇದೇ ಅವಲೋಕನ ಬಿಂದುವಿನಿಂದ ಋಗ್ವೇದ [1. 59. 5.] **"ರಾಜಾ ಕೃಷ್ಟೀನಾಮಸಿ ಮಾನುಷೀಣಾಂ."** – "ದೇವದೇವ! ನೀನು ಮಾನವೀಯ ಭೋಕ್ತೃಗಳ ರಾಜನಾಗಿದ್ದೀಯೇ" - ಎಂದಿದೆ. ಇದೇ ಸಂದರ್ಭದಲ್ಲಿ **'ಯಚ್ಚಿದ್ಧಿ ಶಶ್ವತಾಮಸೀಂದ್ರ ಸಾಧಾರಣಸ್ತ್ವಂ'** – "ಓ ಇಂದ್ರ! ನೀನು ಶಾಶ್ವತರಾದ ಜೀವರೆಲ್ಲರಿಗೂ ಸಾಧಾರಣನಾಗಿದ್ದೀಯೇ." ಎಂಬ [4. 32. 13.] ಋಕ್ಕನ್ನೂ ಸ್ಮರಿಸಬಹುದು.

**'ಹರಿವಾ'** "ಮಾನವಮಾತ್ರಕ್ಕೆ" ಸೇರಿದವನಾಗಲಿ, "ಜೀವಮಾತ್ರರಿಗೆ" ಸೇರಿದವನಾಗಲಿ, ಅವನ ಪ್ರಭುತ್ವವನ್ನಾರೂ ಪ್ರಶ್ನಿಸುವಂತಿಲ್ಲ. ನಮ್ಮ ಸೌಕರ್ಯಕ್ಕಾಗಿ ನಾವು ಅನ್ಯ ಜೀವರಿಂದ ಮಾನವರನ್ನು ಪ್ರತ್ಯೇಕಿಸಬಹುದು; ಆದರ ಅರ್ಥ ಅನ್ಯಪ್ರಾಣಿಗಳ ಮೇಲೆ ಭಗವಂತನ ಕೃಪಾದೃಷ್ಟಿಯಿಲ್ಲವೆಂದಲ್ಲ. **"ಇಂದ್ರೋ ವಿಶ್ವಸ್ಯ ರಾಜತಿ । ಶನ್ನೋ ಅಸ್ತುದ್ವಿಪದೇಶಂ ಚತುಷ್ಪದೇ ॥"** [ಯಜು:– 36. 8.] – 'ಸರ್ವೇಶ್ವರನು ಸಮಸ್ತ ವಿಶ್ವಕ್ಕೇ ಅಧಿರಾಜನಾಗಿದ್ದಾನೆ. ನಮ್ಮ ದ್ವಿಪಾದ ಜೀವರಿಗೆ ಸುಖಶಾಂತಿಗಳಿರಲಿ; ಚತುಷ್ಪಾದ ಜೀವರಿಗೂ ಸುಖ - ಶಾಂತಿಗಳಿರಲಿ." - ಎಂಬ ಸತ್ಯ ಕಣ್ಮರೆಯಾಗುವಂತಿಲ್ಲ.

ಮಹರ್ಷಿ ದಯಾನಂದರು ವಾಯುಪರವಾದ ಅರ್ಥವನ್ನೇ ಮಾಡಿದ್ದರೂ, ಹರಿ ಶಬ್ದಕ್ಕೆ **'ಹರಯೋ ಹರಣನಿಮಿತ್ತಾಃ'** – "ಹರಣಕ್ಕೆ ನಿಮಿತ್ತವಾದವು ಹರಿಗಳು."–ಎಂದು ಅರ್ಥಮಾಡಿರುತ್ತಾರೆ. ಶ್ರೀ ॥ ಮಧ್ವರು – **'ಸಂಸಾರಮುಪ ಸಂಹರನ್ ವರ್ತತೇ ಯೇನ ಹರಿವಾ.'** - "ಭಕ್ತರ ಸಂಸಾರಭಾರವನ್ನು ಹರಣ ಮಾಡುವುದರಿಂದ ಶ್ರೀಹರಿಯೇ ಹರಿವಾ" ಎಂದೂ, **"ಹರಣಾದ್ವಿಷಯಾಣಾಂ ಚ ಪ್ರಾಣಾ ಹರಯ ಈರಿತಾಃ "**– "ರೂಪ–ರಸಾದಿವಿಷಯಗಳನ್ನು ಹರಣಗೈಯುವುದರಿಂದ ಇಂದ್ರಿಯಗಳು ಹರಿಗಳೆನಿಸುತ್ತವೆ. ಅವುಗಳಲ್ಲಿರುವುದರಿಂದ ಶ್ರೀ ಹರಿಯೇ ಹರಿವಾ" ಎಂದೂ ಎರಡರ್ಥ ಮಾಡುತ್ತಾರೆ. ತಾತ್ಪರ್ಯವಿಷ್ಟೇ. ಮಾನವಮಾತ್ರರಿಗೆ, ಜೀವಮಾತ್ರರಿಗೆ ಏಕಪ್ರಕಾರವಾಗಿ ಸೇರಿದವನಾದ ಕಾರಣ ಮತ್ತು ಇಂದ್ರಿಯಗಳ ಅರ್ಥಗಳ ನಿಯಾಮಕನಾಗಿರುವ ಕಾರಣ ಭಗವಂತನು "ಹರಿವಾ" ಎನಿಸುತ್ತಾನೆ.

**'ಬ್ರಹ್ಮಾಣಿ ಉಪ ಆ ಯಾಹಿ'** – ಎಂಬ ವಾಕ್ಯದ ಭಾವನೆ ಇವರ ಹಿಂದಿನ ಮಂತ್ರದಲ್ಲಿಯೂ ಬಂದಿರುವ ಕಾರಣ, ನಾವು ಮತ್ತೆ ಅದರ ವ್ಯಾಖ್ಯಾನಕ್ಕೆ ಕೈ ಹಾಕೆವು. ನಮ್ಮ ವೇದಜ್ಞಾನಕ್ಕೆ ಸಮೀಪತಮ ವಿಷಯವಾಗಿ, ನಮ್ಮ ಮನಸ್ಸಿಗೆ ಅಥವಾ ಬುದ್ಧಿಗೆ ಗಮ್ಯನಾಗು.' – ಎಂಬಿಷ್ಟನ್ನು ಗ್ರಹಿಸಿದರೆ ಸಾಕು.

**'ಸುನೋತಿ'** ಎಂಬ ಕ್ರಿಯೆಯಿಂದ ವ್ಯುತ್ಪನ್ನವಾದ **'ಸುತ'** – ಎಂಬ ಶಬ್ದ 'ಸಾರರೂಪವಾದುದು', 'ರೂಪಿಸಿದುದು' – ಎಂದಾಗುತ್ತದೆ. ಹೀಗೆ **'ಸುತೇ'** ಎಂದಾಗ, "ಪ್ರಕೃತಿಯ ಪರಮಾಣುಗಳಿಂದ ಕಾರ್ಯರೂಪಕ್ಕೆ ತರಲ್ಪಟ್ಟ **ಜಗತ್ತಿನಲ್ಲಿ"** ಎಂದರ್ಥವಾಗುತ್ತದೆ. ಮೊದಲು ಕರುಣಾಮಯನಾದ ಭಗವಂತನ ಸಾಮೀಪ್ಯಾನುಭವ; ಆಮೇಲೆ, ಪ್ರಾಪಂಚಿಕ ಆಹಾರಾದಿಗಳ ಕಾಮನೆ – ಈ ಕ್ರಮ ಜೀವನದಲ್ಲಿ ನಡೆದು ಬಂದಾಗ, ಜೀವನ ನಿರಸವಾಗಿ ತೋರುವುದಿಲ್ಲ. **'ನಃ ಚನಃ ದಧಿಷ್ವ'** – "ನಮಗಾಗಿ ಅನ್ನಾದಿಗಳನ್ನು ಎರೆದು ಕೊಡು." – ಎಂದು ಮಂತ್ರ ಕೊನೆಯಾಗುತ್ತದೆ. ಮಹರ್ಷಿ ದಯಾನಂದರು 'ಚನಃ' ಎಂಬುದಕ್ಕೆ **'ಅನ್ನಭೋಜನಾದಿ ವ್ಯವಹಾರಂ'** . ಎಂದು ಅರ್ಥ ಮಾಡಿದ್ದಾರೆ. ಶ್ರೀ। ಮಧ್ವರು **"ಚನೋ ಮನ ಇಹ ಪ್ರೋಕ್ತಂ ಸುಖಂ ಚ ಕ್ವಚಿದೀರ್ಯತೇ"** - **'ಚನಃ'** ಎಂದರೆ **ಮನಸ್ಸು; ಸುಖವನ್ನೂ** ಅಲ್ಲಲ್ಲಿ 'ಚನಃ' ಎಂದಿದ್ದಾರೆ." ಎಂದು ಎರಡು ಅರ್ಥಗಳನ್ನು

ಮಾಡಿದ್ದಾರೆ. ಆದರೆ, ಪ್ರಾಧಾನ್ಯತಃ ಚನಃ, ಚನಕಂ ಚಣಕಂ–ಇವು 'ಖಾದ್ಯ' ಎಂಬರ್ಥದಲ್ಲಿಯೇ ಪ್ರಯೋಗಿಸಲ್ಪಡುತ್ತವೆ. ಚನಃ (ಕಡಲೆ) ಎಂಬುದು ಸಮಸ್ತ ಧಾನ್ಯಗಳನ್ನು ಪ್ರತಿನಿಧೀಕರಿಸುವ ವಸ್ತು; ಉಪಲಕ್ಷಣವಾಗಿ ಒಂದು ಖಾದ್ಯವಸ್ತು ನಿರ್ದೇಶಿಸಲ್ಪಟ್ಟಿದೆ–ಎಂದರಿಯಬೇಕು. ಸಾಯಣ–ಮಹೀಧರರ ವ್ಯಾಖ್ಯಾನಗಳೂ ಬಹಳ ವ್ಯತ್ಯಾಸವನ್ನು ಹೊಂದಿಲ್ಲ. ಪ್ರತಿಪಾದ್ಯ ವಿಷಯ ಸ್ಫುಟವೇ ಆಗಿರುವಾಗ, ಭಾಷ್ಯಕಾರರ ಮಧ್ಯೆ ಮತಭೇದ ಹುಟ್ಟಲು ಅವಕಾಶವು ಕಡಿಮೆಯೇ ಇರುತ್ತದೆ.

### ಸಂಹಿತಾ ವಿಭಾಗ.

ಓಮಾಸಶ್ಚರ್ಷಣೀಧೃತೋ ವಿಶ್ವೇ ದೇವಾಸ ಆ ಗತ ।

ದಾಶ್ವಾಂಸೋ ದಾಶುಷಃ ಸುತಂ ॥೭॥

**ಪದಪಾಠ:** ಓಮಾಸಃ, ಚರ್ಷಣೀಧೃತಃ, ವಿಶ್ವೇ, ದೇವಾಸಃ, ಆ, ಗತ, ದಾಶ್ವಾಂಸಃ, ದಾಶುಷಃ, ಸುತಂ ॥

**ಅನ್ವಯ:–** ಓಮಾಸ: ಚರ್ಷಣೀಧೃತ: ವಿಶ್ವೇದೇವಾಸ: । ದಾಶುಷ: ಸುತಂ ದಾಶ್ವಾಂಸ: ಆಗತ.

**ಶಬ್ದಾರ್ಥ:–** [ಓಮಾಸಃ] ಅನ್ಯರಿಗೆ ರಕ್ಷಣೆಕೊಡುವ, [ಚರ್ಷಣೀಧೃತಃ] ದರ್ಶನಶಕ್ತಿಸಂಪನ್ನರಾಗಿರುವ ಮಾನವರಿಗೆ ಆಧಾರಕೊಡುವ, [ವಿಶ್ವೇ ದೇವಾಸಃ] ಸಮಸ್ತ ವಿದ್ವಜ್ಜನರೇ! [ದಾಶುಷಃ] ಸರ್ವದಾತೃವಾದ ಭಗವಂತನ, [ಸುತಂ] ನಿರ್ಮಿತವಾದ ಜೀವನಾಧಾರ ಸಾರಭೂತ ಸಾಮಗ್ರಿಯನ್ನು, [ದಾಶ್ವಾಂಸಃ] ದಾನಮಾಡುವವರಾಗಿ, [ಆಗತ] ಬಳಿಸಾರಿರಿ; ಹತ್ತಿರ ಬನ್ನಿರಿ.

**ತಾತ್ಪರ್ಯ:–** ಈ ಮಂತ್ರದಲ್ಲಿ–"ಸಮಸ್ತ ಜ್ಞಾನಿಗಳೂ ದೀನ–ದುರ್ಬಲರಿಗೆ ರಕ್ಷಣೆ ಕೊಡುವವರೂ, ಮಾನವಮಾತ್ರರನ್ನು ಸನ್ಮಾರ್ಗದಲ್ಲಿ ನಡೆಯಿಸಿ ಉದ್ಧರಿಸುವವರೂ, ಸರ್ವದಾತೃವಾದ ಪರಮಾತ್ಮನಿಂದ ರಚಿತವಾದ, ಸಾರಭರಿತವಾದ ಈ ಸೃಷ್ಟಿಯಲ್ಲಿನ ವಸ್ತುಗಳು ಸರ್ವರಿಗೂ ಲಭಿಸುವಂತೆ ಉದಾರ ಭಾವನೆಯಿಂದ ವರ್ತಿಸುವವರೂ ಆಗಿರಬೇಕು. ಅಂತಹ ವಿದ್ವಾಂಸರು ನಮಗೆ ಉಪಲಬ್ಧರಾಗಿ, ನಮ್ಮ ಏಳಿಗೆಗೂ ನೆರವಾಗಬೇಕು."–ಎಂಬ ದಿವ್ಯ ಭಾವನೆಯನ್ನು ಧಾರ್ಮಿಕರ ವಾಣಿಯು ಮೂಲಕ ಸೂಚಿಸುತ್ತದೆ.

**ಭಾಷ್ಯ:**– ಈ ಮಂತ್ರದ ದೇವತೆಗಳು, ಪ್ರತಿಪಾದಿಸಲ್ಪಡುವ ವಿಷಯ 'ವಿಶ್ವ ದೇವತೆ'ಗಳು. ಹಿಂದೆ ನಾವು ಈ ದೇವಶಬ್ದವನ್ನು ಹಿಡಿದು, ಜಡದೇವತೆಗಳೂ ಇದ್ದಾರೆ ಚೇತನದೇವತೆಗಳೂ ಇದ್ದಾರೆ–ಎಂದಿದ್ದೇವೆ. **'ಅಗ್ನಿರ್ದೇವತಾ ವಾತೋ ದೇವತಾ ಸೂರ್ಯೋ ದೇವತಾ ಚಂದ್ರಮಾ ದೇವತಾ ವಸವೋ ದೇವತಾ ರುದ್ರಾ ದೇವತಾಽಽದಿತ್ಯಾ ದೇವತಾ ಮರುತೋ ದೇವತಾ ವಿಶ್ವೇದೇವಾ ದೇವತಾ ಬೃಹಸ್ಪತಿರ್ದೇವತಾ, ಇಂದ್ರೋ ದೇವತಾ ವರುಣೋ ದೇವತಾ."** - ಎಂಬ ಯಜುರ್ವೇದೀಯ [14.20.] ಮಂತ್ರವನ್ನುದ್ಧರಿಸಿ, ಈ ಮಾತನ್ನು ಬಲಪಡಿಸಿದ್ದೇವೆ. "ಅಗ್ನಿ, ವಾಯು, ಸೂರ್ಯ, ಚಂದ್ರ, ವಸುಗಳು, ರುದ್ರರು, ಆದಿತ್ಯರು, ಮರುತ್ತರು, ವಿಶ್ವೇದೇವರು, ಬೃಹಸ್ಪತಿ, ಇಂದ್ರ, ವರುಣ" - ಇವರೆಲ್ಲಾ, ಇದೆಲ್ಲಾ ದೇವತೆಗಳು - ಎಂಬ ಈ ಮಂತ್ರದಲ್ಲಿ ಜಡದೇವತೆ-ಚೇತನದೇವತೆಗಳು ಒಟ್ಟಿಗೆ ಎಣಿಸಲ್ಪಟ್ಟಿದ್ದಾರೆ. ೩೩ ಕೋಟಿ ದೇವತೆಗಳ ಎಣಿಕೆಯನ್ನು ನಾವು ಬ್ರಾಹ್ಮಣ ಗ್ರಂಥಗಳಲ್ಲಿ ಕಾಣುತ್ತೇವೆ. ಅಷ್ಟ ವಸುಗಳು, ಏಕಾದಶರುದ್ರರು. ದ್ವಾದಶ ಆದಿತ್ಯರು, ವಿದ್ಯುತ್ತು ಮತ್ತು ಯಜ್ಞ–ಇವನ್ನು, ೩೩ ದೇವತೆಗಳೆಂದೆಣಿಸಿದ್ದಾರೆ. ಕೋಟಿ–ಎಂಬುದು ೧೦೦ ಲಕ್ಷಗಳನ್ನು ಸೂಚಿಸುವ ಸಂಖ್ಯಾ ವಾಚಕವಲ್ಲ; ಶ್ರೇಣಿ ಅಥವಾ ವರ್ಗವನ್ನು ಸೂಚಿಸುವ ಸಂಜ್ಞಾಶಬ್ದ (ನಾಮವಾಚಕ) - ಎಂದು ಮಹರ್ಷಿ ದಯಾನಂದರು ಹೇಳಿದ್ದಾರೆ. ಮೇಲೆ ಸೂಚಿಸಿದ ಪ್ರಮಾಣ ಕೂಡ '೩೩'ನ್ನು ಎಣಿಸುತ್ತದೆಯೇ ಹೊರತು, ೩೩ ಕೋಟಿಯನ್ನಲ್ಲ. ಪೌರಾಣಿಕ ಕಲ್ಪನೆಯಂತೆ 'ಕೋಟಿ' ಎಂಬುದು ಸಂಖ್ಯಾವಾಚಕವಾದರೂ. ವೇದಗಳಲ್ಲಿ **'ತ್ರಯಸ್ತ್ರಿಂಶತ್ ತ್ರಿಶತಾ ಷಟ್ ಸಹಸ್ರಾಃ'** [ಅಥರ್ವವೇದ:- 11,5.2 ] "೬,೩೩೩" (?) ದೇವತೆಗಳ ವರ್ಣನೆಯನ್ನು ಕಾಣುತ್ತೇವೆ. ಅಷ್ಟವಸು-ಆದಿ ಉಪರ್ಯುಕ್ತ ೩೩ ದೇವತೆಗಳ ಗಣನೆಗೇನೋ ವೇದಗಳಲ್ಲಿ ಪ್ರಮಾಣವಿದೆ. ಉದಾಹರಣೆಗೆ **"ಯಸ್ಯ ತ್ರಯಸ್ತ್ರಿಂಶದ್ದೇವಾ ನಿಧಿಂ ರಕ್ಷಂತಿ ಸರ್ವದಾ."** [ಅಥರ್ವವೇದ:- 10.7.23 ] "ಯಾವನ ನಿಧಿಯನ್ನು **೩೩ ಮಂದಿ ದೇವತೆಗಳು** ಸದಾ ರಕ್ಷಿಸುತ್ತಾರೋ......" ಎಂಬ ಪ್ರಮಾಣವನ್ನೇ ನೋಡಬಹುದು. **"ಯೇ ತ್ರಿಶಂತಿ ತ್ರಯಸ್ಪರಃ"** [ಋಗ್ವೇದ:- 8 28.1.] "ಯಾವ ೩೦ ಹಾಗೂ ಮೇಲೆ ಮೂರು ಮಂದಿ ದೇವತೆಗಳು ಇದ್ದಾರೋ......" - ಎಂಬ ಋಕ್ಕನ್ನೂ ಗಮನಿಸಬಹುದಾಗಿದೆ.

ಆದುದರಿಂದ, 'ಕೋಟಿ'ಯನ್ನುಸಂಖ್ಯಾವಾಚಕವೆಂದು ಗಣಿಸದೆ, ನಾಮವಾಚಕ ವೆಂದು ಗಣಿಸುವುದು 'ಬುದ್ಧಿಸಂಗತ'ವೆಂದು ತೋರುತ್ತದೆ. ಜಡದೇವತೆಗಳ ನಿರ್ದೇಶ ಈ ಮಂತ್ರದಲ್ಲಿಲ್ಲದ ಕಾರಣ, ನಾವು ಕೇವಲ ಚೇತನದೇವತೆಗಳನ್ನೇ ಗ್ರಹಿಸಿ, ಮುನ್ನಡೆಯ ಬಹುದು. ವೇದಗಳಲ್ಲಿ, ಬ್ರಾಹ್ಮಣಗಳಲ್ಲಿ, ಉಪನಿಷತ್ತುಗಳಲ್ಲಿ ನಾವು ಪುನಃ ಪುನಃ ಚೇತನ ದೇವತೆಗಳನ್ನು ಸಂಧಿಸುತ್ತೇವೆ. ಸ್ವತಃ ಪ್ರಮಾಣವಾದ ವೇದಗಳಲ್ಲೇ ನಾವು ದೇವತೆಗಳ ಸ್ವರೂಪವರ್ಣನೆಯನ್ನು ನೋಡುತ್ತಿರುವಾಗ, ಬೇರೆ ಗ್ರಂಥಗಳ ಹಾಳೆಗಳನ್ನು ಮಗುಚಿ ಹಾಕಬೇಕಾದ ಆವಶ್ಯಕತೆಯಿಲ್ಲ. ಆಲಿಸಿರಿ:—

**ಸುಕರ್ಮಾಣಃ ಸುರುಚೋ ದೇವಯಂತೋ ಅಯೋನ ದೇವಾ ಜನಿಮಾ ಧಮಂತಃ ।**
**ಶುಚಂತೋ ಅಗ್ನಿಂ ವಾವೃಧಂತ ಇಂದ್ರಮುರ್ವೀಂಗವ್ಯಾಂ ಪರಿ ಷದಂನೋ ಅಕ್ರನ್ ॥**

[ಅಥರ್ವವೇದ:- 18.3.22.]

"[ಸುಕರ್ಮಾಣಃ] ಸತ್ಕರ್ಮನಿಷ್ಠರೂ, [ಸುರುಚಃ] ಉತ್ತಮವಾದ ಅಭಿರುಚಿಗಳನ್ನುಳ್ಳವರೂ, ಉಜ್ಜ್ವಲತೇಜಸ್ವಿಗಳೂ, [ದೇವಯಂತಃ] ವಿಜಯಾಭಿಲಾಷಿಗಳೂ ಆದ, [ದೇವಾಃ] ದೇವಜನರು, [ಅಯಃನ] ಕಬ್ಬಿಣವನ್ನು ಕಾಯಿಸಿ ಶುದ್ಧೀಕರಿಸುವಂತೆ, [ಜನಿಮ] ಜೀವನವನ್ನು [ಧಮಂತಃ] ತಪಸ್ಸಿನಿಂದ ನಿರ್ಮಲಗೊಳಿಸುತ್ತಾ, [ಅಗ್ನಿಂ] ತೇಜೋಮಯ ಪರಮಾತ್ಮನನ್ನು, [ಶುಚಂತಃ] ಬೆಳಕಿಗೆ ತರುತ್ತಾ, [ಇಂದ್ರಂ] ಸೇಂದ್ರಿಯ ಜೀವನನ್ನು, [ವಾವೃಧಂತಃ] ವಿಕಾಸಗೊಳಿಸುತ್ತಾ, [ದೇವಾಃ] ದೇವಜನರು, ದೇವತೆಗಳು. [ಉರ್ವೀಂ ಗವ್ಯಾಂ] ಮಹಾವಿಶಾಲ ಜ್ಞಾನವಾಣಿಗಳಾದ ವೇದಗಳ, [ಪರಿಷದಂ] ಅವಲಂಬನದಿಂದ ಉನ್ನತರಾಗಿ, [ನಃ ಅಕ್ರನ್] ನಮಗೆ ಮಾನವೀಯ ರೂಪವನ್ನು ಕೊಡುತ್ತಾರೆ." **"ಪರಿಷದಂತೋ ಅಗ್ಮನ್"** – ಎಂದು ಹೇಳಿ ಋಗ್ವೇದ[4. 2. 17,] "ವೇದಗಳ ಜ್ಞಾನದಿಂದ ಉನ್ನತ ಆಸನಾಸೀನರಾಗಿ ಮುಂದುವರಿಯುತ್ತಾರೆ." – ಎಂದಿಷ್ಟು ವ್ಯತ್ಯಾಸವನ್ನು ತೋರಿಸಿದೆ. ಈ ಮಂತ್ರ ದೇವಜನರ ಅತಿಸ್ಪಷ್ಟವಾದ ಚಿತ್ರವನ್ನು ಮೂಡಿಸುತ್ತಿದೆ. ಯಾರು ದೇವತೆಗಳು? ಸತ್ಕರ್ಮನಿಷ್ಠರು ದೇವಜನರು; ಉತ್ತಮ ಅಭಿರುಚಿ ಪ್ರಕಾಶಯುಕ್ತರು ದೇವಜನರು; ವಿಜಯಾಭಿಲಾಷಿಗಳು ದೇವಜನರು; ತಪಶ್ಚರ್ಯೆಯಿಂದ ಜೀವನವನ್ನು ನಿರ್ಮಲಗೊಳಿಸಿಕೊಳ್ಳುವವರು ದೇವಜನರು; ತಮ್ಮ ಭವ್ಯಜೀವನದಿಂದ ಪರಮಾತ್ಮನ ಅರಿವು ಅನ್ಯರಿಗೆ ಮೂಡುವಂತೆ ಮಾಡುವವರು ದೇವಜನರು; ಆತ್ಮವಿಕಾಸ ಸಾಧಕರು ದೇವಜನರು; ವೇದವಾಣಿಯ ನೆರವಿನಿಂದ ಜೀವನದ ಔನ್ನತ್ಯವನ್ನು ಸಾಧಿಸುವವರು ದೇವಜನರು. ಈ ದೇವಜನರ ಮತ್ತಷ್ಟು ಲಕ್ಷಣಗಳನ್ನರಿಯೋಣ :–

**ದೇವಾನ್ ಹುವೇ ಬೃಹಚ್ಛ್ರವಸಃ ಸ್ವಸ್ತಯೇ ಜ್ಯೋತಿಷ್ಕೃತೋ ಅಧ್ವರಸ್ಯ ಪ್ರಚೇತಸಃ।**
**ಯೇ ವಾವೃಧುಃ ಪ್ರತರಂ ವಿಶ್ವವೇದಸೇ ಇಂದ್ರಜ್ಯೇಷ್ಠಾಸೋ ಅಮೃತಾ ಋತಾವೃಧಃ॥**

[ಋಗ್ವೇದ:- 10. 66. 1.]

"[ಯೇ] ಯಾವ, [ಇಂದ್ರ ಜ್ಯೇಷ್ಠಾಸಃ] ಸರ್ವೈಶ್ವರ್ಯವಾನ್, ಸರ್ವಶಕ್ತಿಮಾನ್ ಪರಮಾತ್ಮನನ್ನೇ ಜ್ಯೇಷ್ಠನನ್ನಾಗಿ ಹೊಂದಿರುವವರೂ, [ಅಮೃತಾಃ] ಅಮರಯಶಸ್ವಿಗಳೂ, [ಋತಾವೃಧಃ] ವೇದಜ್ಞಾನದಿಂದ ವರ್ಧಿಸುವವರೂ, ವೇದಗಳ ಜ್ಞಾನವನ್ನು ಪ್ರಸರಿಸುವವರೂ

ಆದ ಸತ್ಪುರುಷರು,* ಆ, [ಬೃಹಚ್ಛ್ರವಸಃ] ಮಹಾಶಕ್ತಿಶಾಲಿಗಳೂ, [ಜ್ಯೋತಿಷ್ಕೃತಃ] ಜ್ಞಾನ ಪ್ರಭಾ ಪ್ರಸಾರಕರೂ, [ಅಧ್ವರಸ್ಯ] ಹಿಂಸಾ ರಹಿತಕರ್ಮಗಳ, [ಪ್ರಚೇತಸಃ] ಮಹಿಮೆಯನ್ನೆಚ್ಚರಿಸುವವರೂ ಆದ, [ದೇವಾನ್] ದೇವಜನರನ್ನು, [ಸ್ವಸ್ತಯೇ] ಆತ್ಮಕಲ್ಯಾಣಕ್ಕಾಗಿ [ಹುವೇ] ಆಹ್ವಾನಿಸುತ್ತೇನೆ."

ಇದರ ಮೇಲೆಯೂ ವಿವರಣೆ ಬೇಕೇ? ಸರ್ವೈಶ್ವರ್ಯ ಸಂಪನ್ನ ಸರ್ವೇಶ್ವರನನ್ನು ಸರ್ವೋತ್ತಮನೆಂದರಿತು, ಅವನ ಆರಾಧನೆ ಮಾಡುವವರು ದೇವಜನರು. ಅಮರವಾದ ಯಶಸ್ಸನ್ನುಳ್ಳವರು ದೇವಜನರು. ವೇದಜ್ಞಾನದಿಂದ ಅಭ್ಯುದಯ-ನಿಃಶ್ರೇಯಸಗಳನ್ನು ಸಾಧಿಸುವವರು, ವೇದಜ್ಞಾನವನ್ನು ಪ್ರಸರಿಸುವವರು ದೇವಜನರು. ಮಹಾಶಕ್ತಿಶಾಲಿಗಳು ದೇವಜನರು. ಜ್ಞಾನಜ್ಯೋತಿಯನ್ನು ಬೀರುವವರು ದೇವಜನರು. ಹಿಂಸಾರಹಿತಶುಭಕರ್ಮಗಳ ಬಗೆಗೆ ಜ್ಞಾನನೀಡುವವರು, ಅದರ ಪ್ರಸರಣಕ್ಕಾಗಿ ಎಚ್ಚರಿಕೆ ನೀಡುವವರು ದೇವಜನರು. ಮತ್ತು ಪರಮಾತ್ಮ ಸಾಕ್ಷಾತ್ಕಾರಕ್ಕಾಗಿ ಆತ್ಮವಿಕಾಸಮಾಡಿಕೊಳ್ಳುವವರು ದೇವಜನರು.

ಇಷ್ಟರಿತ ಮೇಲೆ, ಸ್ವತಃ 'ವಿಶ್ವೇದೇವಾಃ' ಎಂದು ನಿರ್ದಿಷ್ಟರಾದವರ ಲಕ್ಷಣಗಳನ್ನೂ ಆಲಿಸಿರಿ:–

**ಪೃಷದಶ್ವಾ ಮರುತಃ ಪೃಶ್ನಿಮಾತರಃ ಶುಭಂ ಯಾವಾನೋ ವಿದಥೇಷು ಜಗ್ಮಯಃ ।**
**ಅಗ್ನಿಜಿಹ್ವಾ ಮನವಃ ಸೂರಚಕ್ಷಸೋ ವಿಶ್ವೇ ನೋ ದೇವಾ ಅವಸಾಗಮನ್ನಿಹ ॥**
[ಋಗ್ವೇದ:- 1.89.7.]

"[ಪೃಷದಶ್ವಾಃ] ಬಲಿಷ್ಠ ಆತ್ಮಗಳನ್ನುಳ್ಳ, [ಮರುತಃ] ಸಂಯಮಿಗಳಾದ, ಸತ್ಯಕ್ಕಾಗಿ ಸಾವನ್ನು ಕೂಡ ಸಂತೋಷದಿಂದ ತಮ್ಮೆಡೆಗೆ ಸೆಳೆದುಕೊಳ್ಳುವ, [ಪೃಶ್ನಿಮಾತರಃ] ಭೂಮಾತೆಯ ಪುತ್ರರೂ, ಮಾತೃಭೂಮಿಯ ಭಕ್ತರೂ, [ಶುಭಂ ಯಾವಾನಃ] ಮಂಗಳದೆಡೆಗೆ ನಡೆಯುವವರೂ, [ವಿದಥೇಷು] ವಿದ್ವಜ್ಜನರ ಕೂಟಗಳಿಗೆ, ಆವಶ್ಯಕವಾದಾಗ ಯುದ್ಧಕ್ಕೆ ಕೂಡ, [ಜಗ್ಮಯಃ] ಹೋಗುವವರೂ, [ಅಗ್ನಿಜಿಹ್ವಾಃ] ಜ್ಞಾನತೇಜೋಯುಕ್ತ ವಾಣಿಯುಳ್ಳವರೂ, [ಮನವಃ] ಮನನ ಶೀಲರೂ, ವಿಚಾರಶಾಲಿಗಳೂ, [ಸೂರಚಕ್ಷಸಃ] ಸರ್ವಜ್ಞನಾದ ಭಗವಂತನನ್ನೇ ತಮ್ಮ ಕಣ್ಣೆಂದು ತಿಳಿಯುವ ಭಕ್ತರೂ ಆದ, [ವಿಶ್ವೇದೇವಾಃ] ಸಮಸ್ತ ವಿದ್ವಾಂಸರೂ,

---

* ಇದರ ನಂತರ, "[ವಿಶ್ವವೇದಸೇ] ಸಮಸ್ತ ಐಶ್ವರ್ಯಗಳಿಂದಲೂ, ಜ್ಞಾನಗಳಿಂದಲೂ ಯುಕ್ತನಾದ ಪರಮೇಶ್ವರನ ಸಾಕ್ಷಾತ್ಕಾರಕ್ಕಾಗಿ, [ಪ್ರತರಂ] ಶ್ರೇಷ್ಠವಾದ ರೀತಿಯಲ್ಲಿ, [ವಾವೃಧುಃ] ಆತ್ಮವಿಕಾಸ ಸಾಧಿಸಿಕೊಳ್ಳುತ್ತಾರೋ," ಅನಂತರ ಆ "ಬೃಹಚ್ಛ್ರವಸಃ" ಇತ್ಯಾದಿ, ಗಳನ್ನು ಓದಿಕೊಳ್ಳಬೇಕು.

[ಅವಸಾ] ತಮ್ಮ ರಕ್ಷಣಾಶಕ್ತಿಗಳೊಂದಿಗೆ, [ಇಹ ಆಗಮನ್] ಇತ್ತ ಆಗಮಿಸಲಿ." ಈ ಸರಳ ಮಂತ್ರಕ್ಕೆ ವ್ಯಾಖ್ಯಾನವೇಕೆ? ಇಂತಹ ವಿಶಿಷ್ಟ ಗುಣಸಂಪನ್ನರಾದ ದೇವಜನರೇ ನಾವು ವ್ಯಾಖ್ಯಾನಮಾಡುತ್ತಿರುವ ಮಂತ್ರದ ಪ್ರತಿಪಾದ್ಯವಿಷಯವಾಗಿದೆ.

ಆಯಿತು, ಮುನ್ನಡೆಯೋಣ. ಈ ವಿಧವ ದೇವಜನರನ್ನು ಕುರಿತು ಬಂದಿರುವ ಮೊದಲನೆಯ ವಿಶೇಷಣ **'ಓಮಾಸಃ'**– ಎಂಬುದು. ಇದು ಓಮನ್ ಎಂಬ ನಕಾರಾಂತ ಪುಲ್ಲಿಂಗದ ಪ್ರಥಮಾ ವಿಭಕ್ತಿಯ ಬಹುವಚನದ ಛಾಂದಸ ರೂಪ. ಪರಮಾತ್ಮನ ಸ್ವನಾಮ ವಾದ 'ಓಂ' ಎಂಬುದು ವ್ಯುತ್ಪನ್ನವಾಗಿರುವ 'ಅವ' ಧಾತುವಿನಿಂದಲೇ ಈ ಓಮನ್ ಶಬ್ದವೂ ವ್ಯುತ್ಪನ್ನವಾಗಿದೆ. ಈ ಅವ ಧಾತುವಿಗಿರುವ ೧೯ ಅರ್ಥಗಳೂ ಈ ಶಬ್ದಕ್ಕನ್ವಯಿಸುತ್ತವೆ. ಮಹರ್ಷಿ ದಯಾನಂದರೂ **'ವಿಶ್ವೇ ದೇವಾಃ'** ಎಂಬುದೇ ಈ ಮಂತ್ರದ ದೇವತೆ, ಪ್ರತಿ ಪಾದ್ಯವಿಷಯ - ಎಂದು ಅಂಗೀಕರಿಸಿ, ಎಲ್ಲ ಅರ್ಥಗಳನ್ನೂ ಹೊಂದಿಸಿ ಈ 'ಓಮಾಸ' ಎಂಬ ಶಬ್ದಕ್ಕೆ ಈ ರೀತಿ ಭಾಷ್ಯ ಬರೆದಿದ್ದಾರೆ:–

**"ಓಮಾಸಃ ರಕ್ಷಕಾ ಜ್ಞಾನಿನೋ ವಿದ್ಯಾಕಾಮಾ ಉಪದೇಶ ಪ್ರೀತಯೋ ವಿಜ್ಞಾನ ತೃಪ್ತಯೋ, ಯಥಾತಥ್ಯಾವಗಮಾಃ ಶುಭಗುಣ ಪ್ರವೇಶಾಃ ಸರ್ವವಿದ್ಯಾಶ್ರಾವಿಣಃ ಪರಮೇಶ್ವರ ಪ್ರಾಪ್ತೌ ವ್ಯವಹಾರೇ ಚ ಪುರುಷಾರ್ಥಿನಃ ಶುಭವಿದ್ಯಾಗುಣಯಾಚಿನಃ ಕ್ರಿಯಾವಂತಃ ಸರ್ವೋಪಕಾರ ಮಿಚ್ಛುಕಾ ವಿಜ್ಞಾನೇ ಪ್ರಶಸ್ತಾ ಆಪ್ತಾಃ ಸರ್ವಶುಭಗುಣಲಿಂಗಿನೋ ದುಷ್ಟ ಗುಣ ಹಿಂಸಕಾಃ ಶುಭಗುಣದಾತಾರಃ ಸೌಭಾಗ್ಯವಂತೋ ಜ್ಞಾನವೃದ್ಧಾಃ"** ಎಂದರೆ – "ರಕ್ಷಕರೂ, ಜ್ಞಾನಿಗಳೂ, ವಿದ್ಯಾಭಿಲಾಷಿಗಳೂ, ಅಜ್ಞಾನಿಗಳಿಗೆ ಉಪದೇಶ ಮಾಡುವುದರಲ್ಲಿ ಮತ್ತು ತಮಗಿಂತ ಜ್ಞಾನಿಗಳಾದವರ ಉಪದೇಶವನ್ನಾಲಿಸುವುದರಲ್ಲಿ, ಪ್ರೀತಿಯುಳ್ಳವರೂ, ವಿಜ್ಞಾನದಿಂದ ತೃಪ್ತರಾದವರೂ, ಯಥಾರ್ಥತಥ್ಯ ಬೋಧವಂತರೂ, ಶುಭಗುಣದಲ್ಲಿ ಪ್ರವಿಷ್ಟರಾಗುವವರೂ ಹಾಗೂ ಅನ್ಯರನ್ನು ಪ್ರವೇಶ ಮಾಡಿಸುವವರೂ, ಸಮಸ್ತ ವಿದ್ಯೆಗಳನ್ನೂ ಶ್ರವಣ ಮಾಡುವವರೂ ಹಾಗೂ ಮಾಡಿಸುವವರೂ, ಪರಮೇಶ್ವರ ಪ್ರಾಪ್ತಿಯಲ್ಲಿ ಹಾಗೂ ವ್ಯವಹಾರದಲ್ಲಿ ಶ್ರಮಿಸುವವರೂ, ಹಿರಿಯರಿಂದ ಮತ್ತು ಪರಮಾತ್ಮ ನಿಂದ ಶುಭವಿದ್ಯಾಗುಣಗಳನ್ನು ಯಾಚಿಸುವವರೂ, ಕ್ರಿಯಾವಂತರೂ, ಸರ್ವೋಪಕಾರೇಚ್ಛು ಕರೂ, ವಿಜ್ಞಾನದಲ್ಲಿ ಪ್ರಶಂಸಾರ್ಹರೂ, ನಿಷ್ಪಕ್ಷಪಾತರಾದ ಆಪ್ತರೂ, ಶುಭಗುಣಲಕ್ಷಣ ವಂತರೂ, ದುಷ್ಟಗುಣಧ್ವಂಸಕರೂ, ಶುಭಗುಣದಾತೃಗಳೂ, ಸೌಭಾಗ್ಯವಂತರೂ ಮತ್ತು ಜ್ಞಾನವೃದ್ಧರೂ ಆದವರೇ 'ಓ ಮಾಸಃ' ಎಂಬ ಶಬ್ದದಿಂದ ಗ್ರಾಹ್ಯರು."–ಎಂದಿದ್ದಾರೆ. ಇಷ್ಟೊಂದು ಸದ್ಗುಣಗಳು ಒಬ್ಬನಲ್ಲಿ ಕಂಡುಬರುವವಾದರೆ, ಅವನಿಗಿಂತ ಭಾಗ್ಯಶಾಲಿಗಳು ಮತ್ತಾರಿದ್ದಾರು ?

ಶ್ರೀ॥ ಮಧ್ವರು ಹೀಗೆ ವ್ಯಾಖ್ಯಾನಮಾಡಿದ್ದಾರೆ. 'ಓಮಾ' ಶಬ್ದಕ್ಕೆ:–

**ಆ ಸಮಂತಾತ್ ಸ್ವೀಕೃತಾ ಮಾ ಓಮಾ ಇತಿ ಚ ಶಬ್ದಿತಾಃ ॥೧॥**
**ಓಂ ನಾಮಾ ಭಗವಾನ್ವಿಷ್ಣುಸ್ತೇನ ವಾ ನಿರ್ಮಿತಾಃ ಸುರಾಃ ॥೨॥**
**ಓತಾ ಮಾನೇಷು ಮಾ ಯೇಷು ಪ್ರೋತಾ ಓಮಾ ಇತೀರಿತಾಃ ॥**

"ಎಲ್ಲೆಡೆಯಿಂದಲೂ ಯಾರಿಂದ 'ಮಾ' ಎಂದರೆ ಜ್ಞಾನವು ಸ್ವೀಕೃತವಾಗಿದೆಯೋ, ಅವರೇ 'ಓಮಾ' ಎನಿಸುತ್ತಾರೆ. (ಇಲ್ಲಿ ಉಕಾರ ಅಥವಾ ಊಕಾರದ ಸುಳಿವೇ ಇಲ್ಲದ ಕಾರಣ ಶಬ್ದ 'ಆಮಾ' ಎಂದಾಗಬೇಕಾಗಿತ್ತು; ಇಲ್ಲಿ ಏನೋ ಬಿಟ್ಟು ಹೋದಂತೆ ಕಾಣು ತ್ತದೆ. ಆದರೆ. ಶ್ರೀ॥ ನಾರಾಯಣ ತಂತ್ರಿಗಳು ಕನ್ನಡಿಸಿರುವೆಡೆ ಈ ದೋಷ ನಿವಾರಿತವಾದಂತೆ ಕಾಣುತ್ತದೆ. "ಆ - ಸಮಂತಾತ್, ಊರೀಕೃತಾ (ಉರರೀಕೃತಾ ?) ಮಾ - ಪ್ರಮಾ, ಯೈಃ ತೇ ಓಮಾಃ" ಎಂದರೆ "ಯಾರಿಂದ ಎಲ್ಲೆಡೆಯಿಂದಲೂ ಮಾ, ಪ್ರಮಾ, ಜ್ಞಾನ ಹೃದ್ಗತ ವಾಗಿ ಮಾಡಲ್ಪಟ್ಟಿದೆಯೋ ಅವರು ಓಮಾಃ" - ಎಂದಿದ್ದಾರೆ ತಂತ್ರಿಗಳು. "ಭಗವಾನ್ವಿಷ್ಣು ಓಂ ನಾಮಕನು; ಅವನಿಂದ ನಿರ್ಮಿತರಾದ ಸುರರು ಓಮಾ ಎನಿಸುತ್ತಾರೆ.॥೨॥" - ಎಂಬ ಮಧ್ವವಾಣಿ ಮಸಕು ಮಸಕಾಗಿಯೇ ಇದೆ. "ಸುರರನ್ನು ವಿಷ್ಣು ನಿರ್ಮಿಸುತ್ತಾನೆ." - ಎಂಬ ಮಾತು ಬುದ್ಧಿಗಮ್ಯವಲ್ಲ. ಸುರರು ಚೇತನರಾದ ಜೀವರಾಗಿದ್ದಲ್ಲಿ, ಅನಾದಿ ಜೀವರನ್ನು 'ನಿರ್ಮಿಸುವ' ಪ್ರಶ್ನೆಯೇ ಏಳುವುದಿಲ್ಲ. ಕ್ರೈಸ್ತ-ಮುಸಲ್ಮಾನ ಬಾಂಧವರಂತೆ ಜೀವರನ್ನೂ ವಿಷ್ಣುವೇ ಉತ್ಪನ್ನಮಾಡುತ್ತಾನೆ - ಎನ್ನುವುದಾದರೆ, ಮಧ್ವರ ದ್ವೈತ ಸಿದ್ಧಾಂತವಂತಿರಲಿ ವೇದಗಳೇ ಸುಳ್ಳು - ಎಂದು ಒಪ್ಪಬೇಕಾಗುತ್ತದೆ. "ಮಾ ಅಥವಾ ಮಾನಗಳಲ್ಲಿ, ಜ್ಞಾನಗಳಲ್ಲಿ 'ಓತ' ರಾಗಿರುವವರು ಮತ್ತು ಜ್ಞಾನಗಳು ಯಾರಲ್ಲಿ 'ಪ್ರೋತ' ವಾಗಿವೆಯೋ ಅವರೇ 'ಓಮಾಃ' ಎನಿಸುವವರು. ॥೩॥" - ಎಂಬ ಮಧ್ವೋಕ್ತಿ, ಮಾನ್ಯವಾಗಿದೆ. ನಿಷ್ಪತ್ತಿ ಬೇರೆ ಯಾದರೂ, ಅರ್ಥಗೌರವ ಸ್ಪಷ್ಟವಾಗಿದೆ. ಶ್ರೀ॥ ಮಧ್ವರು 'ಅವ' ಧಾತುವಿನಿಂದ ಹುಟ್ಟಿದ ಶಬ್ದ 'ಓಮಾ' ಎಂದೊಪ್ಪಿಲ್ಲ.

ಎರಡನೆಯ ವಿಶೇಷಣ '**ಚರ್ಷಣೀಧೃತಃ**' ಎಂಬುದಾಗಿದೆ. ಮಹರ್ಷಿ ದಯಾ ನಂದರು "**ಚರ್ಷಣಯಃ ಇತಿ ಮನುಷ್ಯನಾಮಸು ಪಠಿತಂ.**" [2. 3.] ಎಂಬ ನಿಘಂಟುವಿನ ಪ್ರಮಾಣದಿಂದ, "ಚರ್ಷಣಿ"ಗಳೆಂದರೆ ಮಾನವರು - ಎಂದು ಗ್ರಹಿಸಿ "ಸತ್ಯೋಪ ದೇಶದಿಂದ ಮಾನವರಿಗೆ ಸುಖವನ್ನು ಧಾರಣೆ ಮಾಡಿಸುವವರು '**ಚರ್ಷಣೀಧೃತ**'ರು ಎಂದಿ ದ್ದಾರೆ. ಶ್ರೀ॥ ಮಧ್ವರು, "**ಪ್ರಜಾಶ್ಚರ್ಷಣಯಃ ಪ್ರೋಕ್ತಾಃ**" - ಎಂದು ಚರ್ಷಣೀ ಶಬ್ದಕ್ಕೆ "ಪ್ರಜೆಗಳು – ಮಾನವರು" ಎಂದೇ ಹೇಳಿದ್ದಾರೆ. ಮುಂದೆ ನಡೆದು "ದೇವತೆಗಳದೇ ಒಂದು ಪ್ರತ್ಯೇಕಯೋನಿ." ಎಂಬ- ಪೌರಾಣಿಕ ಕಲ್ಪನೆಯ ಆಧಾರದ ಮೇಲೆ ಮಾಡಿರುವ ಭಾಷ್ಯ ಯಥಾಪ್ರಕಾರ ಸಾಂಪ್ರದಾಯಿಕ; ಪರಂಪರಾಗತ. ಅದರೆಡೆ ನಾವು ಹೆಚ್ಚು ಗಮನಕೊಡ ಬೇಕಾಗಿಲ್ಲ. "**ಮರ್ತಾಸಃ ಸಂತೋ ಅಮೃತತ್ವಮಾನಶುಃ**" [ಋಗ್ವೇದ:–......] "ಮೊದಲು ಮರ್ತ್ಯರಾಗಿದ್ದರೂ ಅಮರತ್ವಪಡೆಯುತ್ತಾರೆ." ಮೊದಲಾದ ಶ್ರುತಿಗಳು ಎದು ರಿಗಿರುವಾಗ ದೇವತೆಗಳ ಪ್ರತ್ಯೇಕ ಯೋನಿಯನ್ನು ಕಲ್ಪಿಸಿಕೊಳ್ಳುವುದು ಸಮಂಜಸವೆನಿಸದು. "**ತೇನ ದೇವತ್ವಮೃಭವಃ ಸಮಾನಶ**"[ಋಗ್ವೇದ:– 3.60.2.] "ಅದರಿಂದ ಋಭುಗಳು

(ಋತೇನ ಭವಂತೀತಿ ಋಭವಃ -- ವೇದಜ್ಞಾನದಿಂದ ರೂಪತಾಳುವ ಮಾನವರೇ ಋಭುಗಳು) ದೇವತ್ವವನ್ನು ಪಡೆದುಕೊಳ್ಳುತ್ತಾರೆ." "**ಸೌಧನ್ವನಾಸೋ ಅಮೃತತ್ವ ಮೇರಿರೇ.**" [ಋಗ್ವೇದ-: 3. 60. 3] "ಮಾತೃಭೂಮಿಯ ಸುಪುತ್ರರು ಅಮೃತತ್ವವನ್ನು ಹೊಂದುತ್ತಾರೆ." - ಎಂಬ ಶ್ರುತಿವಾಕ್ಯಗಳೂ ಚಿತ್ತದಲ್ಲಿರಲಿ. ದೇವತಾಶಬ್ದಕ್ಕೆ, ದೇವಶಬ್ದಕ್ಕೆ ಅಮರಶಬ್ದ ಪರ್ಯಾಯವಾಚಕವಷ್ಟೆ? ಪರಂಪರಾಗತರೂಢಿವಾದಿಗಳೂ 'ಅಮರ' ಎಂದೊಡನೆ 'ದೇವತೆ' ಎಂದೇ ಗ್ರಹಿಸುತ್ತಾರೆ.

ಇರಲಿ. "**ಚರ್ಷಣೀಶಬ್ದ**"ಕ್ಕೆ "ಪ್ರಜೆಗಳನ್ನು, ಮಾನವರನ್ನು ಉದ್ಧರಿಸುವವರೇ ದೇವಜನರು - ಎಂಬ ನಿಷ್ಕರ್ಷೆ ಎಲ್ಲ ದೃಷ್ಟಿಗಳಿಂದಲೂ, ಎಲ್ಲರ ದೃಷ್ಟಿಗಳಿಂದಲೂ ಸ್ವೀಕಾರ್ಯ. ಹಿಂದೆ ನಾವೆಂದಿರುವಂತೆ," **ದೇವಾ ಉನ್ನಯಥಾ ಪುನಃ ; ದೇವಾಜೀವ ಯಥಾ ಪುನಃ**" - ಎಂಬ ಋಗ್ವೇದ [10, 137. 1.] ಹಾಗೂ ಅಥರ್ವವೇದ [4. 13. 1.]ಗಳ ಆಶಯು, "ದೇವಜನರೇ! ಕೆಳ ಬಿದ್ದವರನ್ನು ಮರಳಿ ಮೇಲೆತ್ತಿರಿ; ಸತ್ತಂತಿರುವವರಲ್ಲಿ ನವಜೀವನವನ್ನು ತುಂಬಿಸಿರಿ." - ಎಂಬ ವಿಧಿವಾಕ್ಯ, ದೇವಜನರನ್ನು ಕುರಿತು ಹೇಳಿರುವ ಮಾತುಗಳೇ ಆಗಿವೆ. ಈ ರೀತಿ ವಿಶ್ವ ದೇವಜನರು 'ಚರ್ಷಣೀಧೃತ್‌ಗಳು.' ಎಂಬುದು ಅತಿಸ್ಪಷ್ಟ.

ಮುಂದಣ ಮುಖ್ಯ ಶಬ್ದ "**ದಾಶ್ವಾಂಸಃ.**" ಇದರ ಸರಳಾರ್ಥ "ದಾನಮಾಡು ವವರು." ಎಂದೇ ಆಗಿದೆ. ನಿರುಕ್ತಕಾರರು ದೇವಶಬ್ದಕ್ಕೆ ನಿರುಕ್ತಿ ಹೇಳುವಾಗ, "**ದೇವೋ ದಾನಾದ್ವಾ.........**" [ದೈವತ:- 1. 4. 15. 2.] - "ದಾನಮಾಡುವುವರಿಂದ ದೇವನು ದೇವನೆನಿಸುತ್ತಾನೆ." ಎಂದೇ ಆರಂಭಿಸಿದ್ದಾರೆ. '**ದಾಶ್ವಾನ್**' ಶಬ್ದದ ಬಹುವಚನರೂಪ ವಾದ ಈ "**ದಾಶ್ವಾಂಸಃ** ಶಬ್ದಕ್ಕೆ ಮಹರ್ಷಿ ದಯಾನಂದರು - "**ಸರ್ವಸ್ಯಾಭಯ ದಾತಾರಃ**" ಎಂದು ಬರೆದಿದ್ದಾರೆ. ಸಾಯಣರು - "**ದಾಶ್ವಾಂಸಃ ಫಲಸ್ಯ ದಾತಾರಃ**" - ಎಂದು ಬರೆದಿದ್ದಾರೆ. ಶ್ರೀ॥ ಮಧ್ವರ ವ್ಯಾಖ್ಯಾನ ಈ ಶಬ್ದದ ಮೇಲೆ ಸಿಕ್ಕುತ್ತಲಿಲ್ಲ. ಕೊಡುಗೆ ಇಲ್ಲಿ ಸಾಮಾನ್ಯ.

ಅಭಯವನ್ನೇ ಕೊಡಲಿ; ಫಲವನ್ನೇ ಕೊಡಲಿ, ಮಂತ್ರದ ಉತ್ತರಾರ್ಧಕ್ಕೆ ಸಂಬಂಧವನ್ನು ಕಲ್ಪಿಸುವುದು ಹೇಗೆ? "**ದಾಶುಷಃ ಸುತಂ ದಾಶ್ವಾಂಸ:**" - ಎಂದು ಸಂಗತಿ ಹೊಂದಿಸಿಕೊಂಡಲ್ಲಿ, ಪೂರ್ಣಭಾವನೆ ಬಹಳ ಸೊಗಸಾಗಿ ಹೊಂದಿಕೊಳ್ಳುತ್ತದೆ. ಮಹರ್ಷಿ ದಯಾನಂದರು "**ದಾಶುಷಃ ಸುತಂ**" - ಎಂಬುದಕ್ಕೆ - "**ಸೋಮಾದಿಕಂ ಗೃಹೀತುಂ ವಿಜ್ಞಾನಂ ಪ್ರಕಾಶಯಿತುಂ ಚಾಭೀಷ್ಟಂ ವಸ್ತು.**" - "ಸೋಮ - ಮೊದಲಾದುವನ್ನು ಗ್ರಹಿಸಲು, ವಿಜ್ಞಾನವನ್ನೂ, ಅಭೀಷ್ಟವಸ್ತುವನ್ನು ಬೆಳಕಿಗೆ ತರಲು," ಎಂದು ಬರೆದಿದ್ದಾರೆ. '**ಆಗತ**' - 'ಆಗಮಿಸಿರಿ,' ಎಂದು ಕೂಡಿಸಿ, ವಾಕ್ಯಪೂರ್ತಿಮಾಡುತ್ತಾರೆ. ಸೋಮ ಮೊದ ಲಾದುದು ಏನು? 'ವಿಜ್ಞಾನ, ಅಭೀಷ್ಟವಸ್ತು' - ಈ ಎರಡನ್ನೇನೋ 'ಸುತಂ' - ಎಂಬ ಶಬ್ದ ದಿಂದ ಗ್ರಹಿಸಿದ್ದಾರೆ. ಇವೆರಡೇ ಅಲ್ಲದೆ, ಸೋಮ ಎಂಬ ಶಬ್ದ, ಈಶ್ವರ, ಜೀವ, ಸ್ಪಷ್ಟವಾದ ಯಾವುದೇ ವಸ್ತು, ಹಿಂಡಲ್ಪಟ್ಟ ಓಷಧಿರಸು ಎಂಬರ್ಥಗಳನ್ನು ಕೂಡ ವ್ಯಕ್ತ ಪಡಿಸುತ್ತದೆ.

ಯಾಜ್ಞಿಕರಾದ ಸಾಯಣರು **'ದಾಶುಷಃ ಸುತಂ ಆಗತ'** - ಎಂಬ ವಾಕ್ಯವನ್ನು ಗ್ರಹಿಸಿ - **"ದಾಶುಷಃ ಹವಿರ್ದತ್ತವತಃ ಯಜಮಾನಸ್ಯ ಸುತಂ ಅಭಿಸುತಂ ಸೋಮಂ ಪ್ರತ್ಯಾಗತ."** - ಎಂದರೆ, ದಾತೃವಿನ, ಹವಿಸ್ಸನ್ನರ್ಪಿಸಿದ ಯಜಮಾನನ, ಹಿಂಡಲ್ಪಟ್ಟ ಸೋಮವನ್ನು ಉದ್ದೇಶ್ಯವಾಗಿಟ್ಟುಕೊಂಡು ಆಗಮಿಸಿರಿ." - ಎಂದು 'ವಿಶ್ವೇ ದೇವ'ರಿಗೆ ಆಹ್ವಾನ ನೀಡುತ್ತಾರೆ.

ಮಹರ್ಷಿ ದಯಾನಂದರು ಗ್ರಹಿಸಿರುವ ವಿಜ್ಞಾನ ಹಾಗೂ ಜೀವನಾಧಾರ ವಸ್ತು ಎಂಬುದು, ಸಾಯಣರು ಗ್ರಹಿಸಿದ ಓಷಧಿರಸಕ್ಕಿಂತ ಹೆಚ್ಚು ಕಾವ್ಯ - ಎಂಬಲ್ಲಿ ಎರಡು ಅಭಿಪ್ರಾಯಗಳಿರಲು ಸಾಧ್ಯವಿಲ್ಲ. ಮತ್ತು ವಿಜ್ಞಾನ ಮತ್ತು ಮಾನವ ಜೀವನದ ಅಕ್ಷುಣ್ಣ ವಿಕಾಸಕ್ಕೆ ಬೇಕಾದ ವಸ್ತುಗಳು ಸಾರಭೂತವಾದ ಕಾರಣ 'ಸುತ' - 'ಹಿಂಡಲ್ಪಟ್ಟಂತಹವು'- ಎಂಬುದರಲ್ಲಿಯೂ ಸಂದೇಹಕ್ಕೆಡೆಯಿಲ್ಲ.

ಆದರೆ, **"ದಾಶುಷ: ಸುತಂ ದಾಶ್ವಾಂಸ: ಆಗತ"** ಎಂದರೆ, "ದಾತೃವಿನಿಂದ ಸಾರಭೂತವಾಗಿ ಕೊಡಲ್ಪಟ್ಟ ಸಮಸ್ತ ವಸ್ತುಗಳನ್ನೂ ಸರ್ವರಿಗೂ ದಾನಮಾಡುವವರಾಗಿ ಆಗಮಿಸಿರಿ." - ಎಂದು ಅರ್ಥಮಾಡಿದರೆ, ಮಂತ್ರದ ಮಹೋನ್ನತ ಮಹತ್ವ ಮಾನವ - ಮಾನವನ ಮನ–ಮನಕ್ಕೂ ಮಧುರವಾಗಿ ಮುಟ್ಟುವುದು—ಎಂದು ನಮಗೆ ತೋರುತ್ತದೆ. ಎಲ್ಲರ ಸಲುವಾಗಿ ಜಗತ್ಪಿತನಿತ್ತ ಜಗತ್ತಿನ ವಸ್ತುಗಳ ಮೇಲೆ ಎಲ್ಲೋ ಕೆಲವರು ಅಧಿಕಾರ ಸ್ಥಾಪಿಸಿಕೊಂಡು, ಸ್ವಾರ್ಥಪೂರ್ತಿಯಲ್ಲೇ ಜೀವನದ ಸಾಫಲ್ಯವನ್ನು ಕಾಣುತ್ತಿರುವವರೆಗೆ ಈ ವಸುಂಧರೆ ಸುಂದರಿಯಾಗಿ ಅಲ್ಲ; ಮಹಾಕ್ರೂರ ರಕ್ಕಸಿಯಾಗಿಯೇ ಕಣ್ಣಿಗೆ ಕಟ್ಟುವಳೆಂಬುದು, ಈ ನಮ್ಮ ನೆಲ ನಾಕವಾಗದೆ, ನರಕವಾಗಿಯೇ ಉಳಿದು, ನರ-ನರನ, ನಾರಿ-ನಾರಿಯ ಬಾಳೂ ಬಾಳಾಗಿಯೇ ಉಳಿಯದೇ, ಹವಗೆಟ್ಟು, ಹಲವಾರು ಹೋಳಾಗಿ ಸಿಡಿದು, ಸೀಳಿ, ಗೋಳಾಗಿ ಮಾತ್ರ ಉಳಿದುಕೊಳ್ಳುವುದೆಂಬುದು, ರಕ್ತ-ಸಿಕ್ತವಾದ ಮಾನವನ ಇತಿಹಾಸದ ಹಾಳೆ–ಹಾಳೆಯಿಂದಲೂ ಅಭಿವ್ಯಕ್ತವಾಗುತ್ತಿದೆ.

ಆನಂದಮಯನ ಈ ಸುಂದರ ಸೃಜನ ಸುಖ-ಶಾಂತಿಗಳ, ಸೌಗಮ್ಯ-ಸೌಕರ್ಯಗಳ ಸಾಕಾರ ಸೌಧವಾಗಬೇಕಾದರೆ, ಭಗವದ್ದತ್ತ ವಸ್ತುಗಳೆಲ್ಲವೂ, ಎಲ್ಲರಿಗೂ ಸಿಕ್ಕುವಂತೆ ಮಾಡುವ, ದಾನಶೀಲರಾದ ಸಮಸ್ತ ದೇವಜನರ ಆಗಮನ ಮಾನವರ ಕರ್ಮ ರಂಗಕ್ಕೆ ಅವಶ್ಯವಾಗಿ ಆಗಲೇಬೇಕು. ಎಲ್ಲರಿಗಿಂತ ದೊಡ್ಡ ದಾತಾರ ಆ ಭಗವಂತ. ಅವನ ರಚನೆ, ಅವನಿತ್ತ ದಾನ ಎಲ್ಲರಿಗೂ ಸಿಕ್ಕಬೇಕು; ಎಲ್ಲರಿಗೂ ದಕ್ಕಬೇಕು. ಆ ಸರ್ವದಾತೃವಿನ ಸಾರಭೂತವಾದ ಜಾಗತಿಕ ಭೋಗ್ಯವಸ್ತುವಿನ ಮೇಲೆ ಹಲವರ ಅಧಿಕಾರವಲ್ಲ; ಎಲ್ಲರ ಅಧಿಕಾರವೂ ಇದೆ. **"ಸಮಾನೀ ಪ್ರಪಾ ಸಹವೋಽನ್ನಭಾಗಃ"** [ಅಥರ್ವ:- 3.30.6.]– "ಜಲಾಶಯ ನಿಮ್ಮೆಲ್ಲರಿಗೂ ಸಮಾನವಾಗಿರಲಿ. ಭೋಜ್ಯ - ವಸ್ತುವೂ ಕೂಡ ಎಲ್ಲರ ಭಾಗಕ್ಕೂ ಬೀಳಲಿ." ಎಂಬ ಭಗವದ್ವಾಣಿಗೆ ಮಾನವ ಬೆಂದೋರಿದಾಗಲೇ ಅನಾವಶ್ಯಕ

ವಾದ, ಸಮಾಜದ ತಳಹದಿಯನ್ನೇ ಕದಲಿಸಿಬಿಡುವ ರಕ್ತಕ್ರಾಂತಿ ರೂಪತಾಳುವುದು. ಆದರೆ– ರಕ್ತಕ್ರಾಂತಿ ಯಾವ ಸಮಸ್ಯೆಗೂ ಸಮುಚಿತವಾದ ಸಾಧನವಲ್ಲ; ಅದು ದಾನವೀವೃತ್ತಿಯ ಹೊರಚಿಮ್ಮುವಿಕೆ ಮಾತ್ರ.

ಮಾನವ ಸಮಾಜ ಸುಭದ್ರವೂ, ಸುಮಂಗಳವೂ ಆದ ಪ್ರಶಾಂತ ಜೀವನ ನಡೆಯಿಸ ಬೇಕಾದರೆ, 'ವಿಶ್ವೇದೇವ'ರ, ಸಕಲ ವಿದ್ವಾಂಸರ ಶಾಬ್ದಿಕೋಪದೇಶವಲ್ಲ; ಕ್ರಿಯಾತ್ಮಕ ಕಾರ್ಯ ಕ್ರಮ ಹೊತ್ತು ಕರ್ಮರಂಗಕ್ಕಿಳಿದು ಬರಲೇಬೇಕು. ಬೇರಾವುದೇ ಮಾರ್ಗವೂ ಇಲ್ಲ. ದೇವ ಜನರು ಉದಾರಾಶಯರು; ದಾನಶೀಲರು. ಮಹಾದೇವ ಮಹಾನ್‌ದಾನಿ; ಅವನ ದಾನ ವಾದ ಈ ಜಗದ್ವಸ್ತುಗಳನ್ನು, ಯಾರಿಗೂ ತಪ್ಪದಂತೆ, ಎಲ್ಲರಿಗೂ, ಸಿಕ್ಕುವಂತೆ ಹಂಚುವ ಹೊಣೆ ಹೊತ್ತವರು. (ದಾಶ್ವಾನ್‌ಗಳು) ಸಮಸ್ತ ವಿದ್ವಾಂಸರು. ಹೀಗೆ **"ದಾಶುಷಃ ಸುತಂ ಸರ್ವಪ್ರದಸ್ಯೇಶ್ವರಸ್ಯ ಸಮುತ್ಪನ್ನಂ ಭೌತಿಕಂ ವಸ್ತು ಜಾತಂ ದಾಶ್ವಾಂಸಃ ಯೇ ದದತಿ ತೇ ದಾನಿನಃ ವಿಶ್ವೇ ದೇವಾಸಃ ಆಗತ."** – ಎಂದರೆ–"ಸರ್ವ ದಾತೃವಾದ ಭಗವಂತನು ರಚಿಸಿದ ಭೌತಿಕವಸ್ತು ಸಮೂಹವನ್ನು ಯಾರಿಗೂ ಸೊನ್ನೆ ಬೀಳ ದಂತೆ ನಿಃಸ್ವಾರ್ಥರಾಗಿ ದಾನಮಾಡುವ ಸಮಸ್ತ ಜ್ಞಾನಿಗಳೂ ಆಗಮಿಸಿರಿ." - ಎಂಬರ್ಥ ಗ್ರಹಿಸಿದರೆ, ಅದೆಷ್ಟು ಮರ್ಮಸ್ಪರ್ಶಿಯಾಗುವುದು ಈ ಮಂತ್ರ–ಎಂದು ವಿಚಾರಶೀಲರೇ ಸುಲಭವಾಗಿ ಗ್ರಹಿಸಬಲ್ಲರು. ಮತ್ತು, ಮಾನವ ಜೀವನದಲ್ಲಿ ಕೇವಲ ಭೌತಿಕವಸ್ತುಗಳದೇ ಅಲ್ಲ; ಜ್ಞಾನ–ವಿಜ್ಞಾನಗಳ ಪಾತ್ರವೂ ಮಹತ್ತ್ವಪೂರ್ಣವೇ ಆಗಿದೆ. ಜ್ಞಾನ-ವಿಜ್ಞಾನಗಳಿಗೆ ಬೆಲೆಕಟ್ಟಲು ಯಾರಿಗಾದರೂ ಸಾಧ್ಯವಿದೆಯೇ ? 'ಅವು ಮಾನವತ್ವದ ಸಾರ' - ಎಂಬ ಬಗೆಗೂ ವಿರೋಧ ಹುಟ್ಟಲು ಎಂದಿಗಾದರೂ ಸಾಧ್ಯವೇ ? ಹೀಗೆ, ಮಹರ್ಷಿ ದಯಾ ನಂದರು ಮಾಡಿದ 'ವಿಜ್ಞಾನ' ಎಂಬರ್ಥವೂ ಅತ್ಯಂತ ಗ್ರಾಹ್ಯವೇ ಸರಿ. 'ವಿಶ್ವೇದೇವ'ರ ಈ ಆಕರ್ಷಕ ಲಕ್ಷಣಗಳು, ಜೀವಮಾತ್ರರಿಗೆ ರಕ್ಷಣಾದಾನ, ಮಾನವಮಾತ್ರರ ಉದ್ಧಾರ ಹಾಗೂ ಭಗವದ್ರಚಿತವಾದ ಸಮಸ್ತ ವಸ್ತುಗಳನ್ನೂ ಸರ್ವರಿಗೂ ಸಿಕ್ಕುವಂತೆ, ಸ್ವಾರ್ಥರಹಿತವಾಗಿ ದಾನ ಮಾಡುವುದು - ಈ ಮೂರು ಹೃದಯಾಂಕಿತವಾದರೆ, ಭ್ರಾಂತಿಯಳಿದು, ರಕ್ತ-ಕ್ರಾಂತಿಯೂ ಶೂನ್ಯವಿಲೀನವಾಗಿ, ಶಾಂತಿ ತಾನೇತಾನಾಗಿ ಮೆರೆದೀತು ಈ ವಿಶ್ವನಾಥನ ವಿಚಿತ್ರ ಸೃಷ್ಟಿಯಲ್ಲಿ.

---

**ಈ ವೇದಭಾಷ್ಯದ ೧೬ ಪುಟಗಳ ಪೂರ್ಣವೆಚ್ಚ**
**ಶ್ರೀಮತಿ ಉಮಾದೇವಿ ಕೆ. ವರದರಾಯ ಪ್ರಭು ಲಾಲ್‌ಬಾಗ್**
**ಮಂಗಳೂರು ಇವರ ಸೇವೆ.**

## ಸಂಹಿತಾ ವಿಭಾಗ

ವಿಶ್ವೇ ದೇವಾಸೋ ಅಪ್ತುರಃ ಸುತಮಾಗಂತ ತೂರ್ಣಯಃ।

ಉಸ್ರಾ ಇವ ಸ್ವಸರಾಣಿ॥೮॥

**ಪದಪಾಠ:**– ವಿಶ್ವೇ, ದೇವಾಸಃ, ಅಪ್ತುರಃ, ಸುತಂ, ಆ, ಗಂತ, ತೂರ್ಣಯಃ ಉಸ್ರಾಃ, ಇವ, ಸ್ವಸರಾಣಿ॥

**ಅನ್ವಯ:**– ಅಪ್ತುರಃ ತೂರ್ಣಯಃ ವಿಶ್ವೇ ದೇವಾಸಃ! ಉಸ್ರಾಃ ಸ್ವಸರಾಣಿ ಇವ ಸುತಂ ಆಗಂತ॥

**ಶಬ್ದಾರ್ಥ:**– [ಅಪ್ತುರಃ] ಕರ್ಮದಲ್ಲಿ ತ್ವರೆಯನ್ನುಂಟು ಮಾಡುವ, ಚುರುಕಾಗಿ ಕಾರ್ಯ ಮಾಡುವ, [ತೂರ್ಣಯಃ] ಶೀಘ್ರಗಾಮಿಗಳಾದ, [ವಿಶ್ವೇ ದೇವಾಸಃ] ಸಮಸ್ತ ವಿದ್ವಜ್ಜನರೇ! [ಉಸ್ರಾಃ] ಕಿರಣಗಳು, [ಸ್ವಸರಾಣಿ] ಹಗಲುಗಳನ್ನು ಬಳಿಸಾರುವಂತೆ [ಸುತಂ] ಉತ್ಪನ್ನವಾದ, ಸಾರಭೂತವಾದ, ನಿರ್ಭ್ರಾಂತ ಜ್ಞಾನವನ್ನು, [ಆಗಂತ] ಬಳಿ ಸಾರಿರಿ.

**ತಾತ್ಪರ್ಯ:**– ಆಲಸ್ಯರಹಿತರಾಗಿ, ವೇಗದಿಂದ ಕರ್ಮಗಳನ್ನು ಮಾಡುವ ಸ್ವತಃ ತೀವ್ರಗಾಮಿಗಳಾದ ಸಮಸ್ತ ವಿದ್ವಜ್ಜನರೇ! ಸೂರ್ಯಕಿರಣಗಳು ಹಗಲುಗಳನ್ನು ಸಮೀಪಿಸುವಂತೆ, ಭಗವನ್ನಿರ್ಮಿತವಾದ ಈ ಸಾರಭೂತ ಜಗತ್ತನ್ನೂ, ಭ್ರಾಂತಿರಹಿತವಾದ ಜ್ಞಾನವನ್ನೂ ಸಮೀಪಿಸಿರಿ.

**ಭಾಷ್ಯ:**– "ವಿಶ್ವೇ ದೇವಾಃ" ಎಂಬ ಶಬ್ದದ್ವಯದ ವಿಸ್ತೃತ ವ್ಯಾಖ್ಯಾನವನ್ನು ಓದುಗರಾಗಲೇ ಜೀರ್ಣಿಸಿಕೊಂಡಿದ್ದಾರೆ. ಈ ಮಂತ್ರದಲ್ಲಿ ವಿವೇಚನೀಯವಾದ ಶಬ್ದಗಳು "ಅಪ್ತುರಃ, ತೂರ್ಣಯಃ, ಉಸ್ರಾಃ, ಸ್ವಸರಾಣಿ." ಈ ನಾಲ್ಕು ಮಾತ್ರ. ಈ ಮಂತ್ರವೂ ಸಮಸ್ತ ವಿದ್ವಾಂಸರನ್ನೂ ಸಾರಭೂತವಾದುದರ ಕಡೆಗೆ ಬರಬೇಕೆಂದು ಆಹ್ವಾನಿಸುತ್ತದೆ.

**"ವಿಶ್ವೇ ದೇವಾ":**– ಇವರ ವಿಶೇಷಣವಾಗಿ ಮೊದಲು "ಅಪ್ತುರ: ಎಂಬ ಪದವಿದೆ. ಶ್ರೀ॥ ಮಧ್ವರು ಈ ಪದಕ್ಕೆ - "**ಅಪ್ತುರಃ ಕರ್ಮವೇಗಿನಃ**" - ಎಂದರ್ಥ ಮಾಡಿದ್ದಾರೆ. ಎಂದರೆ - "ತೀವ್ರಗತಿಯಿಂದ ಕರ್ಮಮಾಡುವವರು." - ಎಂದು ತಾತ್ಪರ್ಯ. ಸಾಯಣರು ಈ ಶಬ್ದಕ್ಕೆ - "**ತತ್ತತ್ಕಾಲೇ ವೃಷ್ಟಿ ಪ್ರದಾ**":– "ಆಯಾಕಾಲದಲ್ಲಿ ಮಳೆ ಸುರಿಸುವಂತಹವರು." - ಎಂದರ್ಥ ಮಾಡಿದ್ದಾರೆ. ಇದೇ ಶಬ್ದಕ್ಕೆ ಮಹರ್ಷಿ ದಯಾನಂದರು "**ಮನುಷ್ಯಾಣಾಂ ಪ್ರಾಣಾನ್ ತುತುರತಿ ವಿದ್ಯಾದಿ ಬಲಾನಿ ಪ್ರಾಪ್ನುವಂತಿ,**

**ಪ್ರಾಪಯಂತಿ ಚಯೇ, ತೇ ಅಪ್ತುರಃ"** ಎಂದಿದ್ದಾರೆ. ತಾತ್ಪರ್ಯ- "ಮಾನವರ ಪ್ರಾಣ, ಶಕ್ತಿಯನ್ನೂ, ವಿದ್ಯಾದಿಬಲಗಳನ್ನು ತಾವೂ ಪಡೆದುಕೊಂಡು, ಅನ್ಯರಿಗೂ ಪ್ರಾಪ್ತಿ ಮಾಡಿಸುವವರು ಅಪ್ತುರರು." ಎಂದಾಗುತ್ತದೆ. ಹೀಗೆ ಮಹರ್ಷಿಗಳು ಅಪ್ ಶಬ್ದಕ್ಕೆ ಪ್ರಾಣ ವಿದ್ಯೆ ಮೊದಲಾದ ಬಲಗಳು – ಎಂದಿಷ್ಟು ವಿಶೇಷಾರ್ಥ ಮಾಡಿದ್ದಾರೆ. 'ವೃಷ್ಟಿಪ್ರದ ಎಂದು ಅರ್ಥ ಮಾಡುವಾಗ ಸಾಯಣರು ಅಪ್ ಶಬ್ದದಿಂದ ಜಲವನ್ನು ಗ್ರಹಿಸಿದ್ದಾರೆ.

ಎರಡನೆಯ ವಿಶೇಷಣ **'ತೂರ್ಣಯಃ'** ಎಂದಿದೆ. ಇದಕ್ಕೆ ಸಾಯಣರು – **"ತ್ವರಾಯುಕ್ತಾಃ, ಯಜಮಾನಮನುಗ್ರಹೀತುಂ ಆಲಸ್ಯರಹಿತಾಃ"** - "ಶೀಘ್ರಕಾರಿಗಳು; ಯಜ್ಞಕರ್ತನ ಮೇಲೆ ಅನುಗ್ರಹ ಮಾಡಲು, ಆಲಸ್ಯಮಾಡದೆ ತ್ವರೆಗೈಯುವವರು." – ಎಂದರ್ಥಮಾಡಿದ್ದಾರೆ. ಯಜ್ಞವೇ ಸಮಸ್ತ ವೇದಗಳ ಪ್ರಧಾನೋದ್ದೇಶ್ಯವೆಂಬ ನಂಬಿಕೆ ಹೊತ್ತ ಅವರಿಂದ, ಮತ್ತೇನನ್ನೂ ನಿರೀಕ್ಷಿಸುವಂತಿಲ್ಲ. ಶ್ರೀ॥ ಮಧ್ವರೀ ಪದಕ್ಕೆ ಅರ್ಥ ಬರೆದಂತೆ ಕಾಣುವುದಿಲ್ಲ. ಮಹರ್ಷಿ ದಯಾನಂದರು – **"ತೂರ್ಣಯಃ ಸರ್ವತ್ರ ವಿದ್ಯಾಂ ಪ್ರಕಾಶಯಿತುಂ ತ್ವರಮಾಣಾಃ"** – "ವಿದ್ಯಾಪ್ರಕಾಶನಕ್ಕಾಗಿ ಸರ್ವತ್ರ ತೀವ್ರಗತಿಯಿಂದ ಸಂಚರಿಸುವವರು" - ಎಂದಿದ್ದಾರೆ.

ಆಯಿತು; ಏತರ ಸಲುವಾಗಿ ಈ ತ್ವರೆ? ಈ ಶೀಘ್ರತೆ? **"ಸುತಂ ಆಗಂತ"** – ಎನ್ನುತ್ತಿದೆ ಮಂತ್ರ. 'ಸುತವನ್ನುದ್ದೇಶ್ಯ ಮಾಡಿಕೊಂಡು ಆಗಮಿಸಿರಿ' - ಎಂಬುದು ಸರಳಾರ್ಥ. ಶ್ರೀ॥ ಮಧ್ವರ ಹಾಗೂ ಶ್ರೀ॥ ಸಾಯಣರ ದೃಷ್ಟಿಯಲ್ಲಿ ಸುತವೆಂದರೆ ಹಿಂಡಿ, ಸಿದ್ಧಪಡಿಸಿದ ಸೋಮಲತೆಯ ರಸ. "ಅದನ್ನು ಕುಡಿಯಲು ಬೇಗ ಬನ್ನಿರಿ" - ಎಂದು ವಿಶ್ವೇದೇವರಿಗೆ ಆಹ್ವಾನ.

ಆದರೆ, ಋಷಿದೃಷ್ಟಿ, " ಆ ಪ್ರಕಾರದ ದೇವತಾ ವಿಶೇಷರೂ ಇಲ್ಲ; ಸುತವೆಂದರೆ ಕೇವಲ ಲತಾ ವಿಶೇಷದ ರಸವೂ ಅಲ್ಲ." – ಎಂಬ ತಥ್ಯವನ್ನು ಗ್ರಹಿಸಿದೆ. ಅಂತಿಮ ನಿರ್ಣಯ, ಪೂರ್ಣವಿವೇಚನಾ ನಂತರ ಮಾಡಲ್ಪಡುವ ನಿಷ್ಕರ್ಷೆ, ಕೊನೆಯ ನಿರ್ಧಾರ – ಎಂಬರ್ಥದಲ್ಲಿಯೂ 'ಸುತ' ಎಂಬ ಶಬ್ದ ಬಳಸಲ್ಪಡುತ್ತದೆ. ಮಂತ್ರದ ದೇವತೆಗಳು 'ಸಮಸ್ತ ವಿದ್ವಜ್ಜನರು.' ಎಂದ ಮೇಲೆ, ಆ ಜ್ಞಾನೀಮಹಾನುಭಾವರು ತೀವ್ರಗತಿಯಿಂದ, ಆಲಸ್ಯರಹಿತರಾಗಿ ಓಡಾಡುವುದೇಕೆ? ಯಾವುದೋ ಬಳ್ಳಿಯ ರಸ ಕುಡಿಯಲಿಕ್ಕಾಗಿಯೇ? ಆ ಮಾದಕದ್ರವ್ಯದ ಸೇವನೆಯಿಂದ ಮದೋನ್ಮತ್ತರಾಗಿ, ತೂರಾಡುತ್ತಾ, ಯದ್ವಾತದ್ವಾ ಹಾಡುತ್ತಾ – ಕುಣಿಯುತ್ತಾ ಮೆರೆಯಲಿಕ್ಕಾಗಿಯೇ? ಇರಲಾರದು; ನೂರಕ್ಕೆ ನೂರಂಶ ಸ್ಥಿತಿಯದಲ್ಲ. 'ಸುತ'ವು, 'ಹಿಂಡಿತೆಗೆಯಲ್ಪಟ್ಟದ್ದು', ಸಾರಭೂತವಾದುದು ಏನೋ ಇದೆ; ಅದನ್ನು ಸ್ವೀಕರಿಸಲಿಕ್ಕಾಗಿಯೇ ಸಮಸ್ತ ವಿದ್ವಜ್ಜನರನ್ನೂ ಆಹ್ವಾನಿಸುವುದೇನೋ ಸತ್ಯವೇ. ಆದರೆ, ಆ 'ಸುತ' ಏನು? ನಮ್ಮ ಮಾತುಗಳಲ್ಲಿ ಅಲ್ಲ; ವೇದಗಳ ಮಾತುಗಳಲ್ಲಿಯೇ ಆಲಿಸೋಣ:–

**ನ ಮಾ ತಮನ್ನ ಶ್ರಮನ್ನೋತ ತಂದ್ರನ್ನ ವೋಚಾಮ ಮಾ ಸುನೋ ತೇತಿ ಸೋಮಂ |**
**ಯೋಮೇಪೃಣಾದ್ಯೋ ದದದ್ಯೋನಿಬೋಧಾದ್ಯೋ ಮಾ ಸುನ್ವಂ ತಮುಪ ಗೋಭಿರಾಯತ್ ||**
[ಋಗ್ವೇದ:– 2. 30. 7]

"[ಯಃ] ಯಾವುದು, [ಮೇ ಪೃಣಾತ್[ ನನಗೆ ಶಕ್ತಿ ತುಂಬಿಕೊಡುತ್ತದೋ, [ಯಃ ದದತ್] ಯಾವುದು ಐಶ್ವರ್ಯವನ್ನೂ ಕೊಡುತ್ತದೋ, [ಯಃ ನಿಬೋಧಾತ್] ಯಾವುದು ಜ್ಞಾನವನ್ನೂ ಒದಗಿಸುತ್ತದೋ, [ಯಃ] ಯಾವುದು, [ಸುನ್ವಂತಂ ಮಾ ಉಪ] ಸಾರತೆಗೆ ಯುವ ನನ್ನ ಬಳಿಗೆ, [ಗೋಭಿಃ] ದಿವ್ಯವಾಣಿಗಳೊಂದಿಗೆ ಹಾಗೂ ಇಂದ್ರಿಯಗಳ ಶಕ್ತಿ ಯೊಂದಿಗೆ, [ಆಯತ್] ಬರುತ್ತದೋ, [ಸೋಮಂ] ಆ ಸೋಮವನ್ನು, [ಮಾಸುನೋತ ಇತಿ] ಹಿಂಡಬೇಡಿರಿ – ಎಂದು, [ನ ವೋಚಾಮ] ಹೇಳದಿರೋಣ. ಅದು, [ಮಾ ನ ತಮತ್] ನನ್ನನ್ನು ಕತ್ತಲಿಗೆ ತಳ್ಳುವುದಿಲ್ಲ; [ನ ಶ್ರಮತ್] ಆಯಾಸಪಡಿಸುವುದಿಲ್ಲ; [ಉತ] ಮತ್ತು [ನ ತಂದ್ರತ್] ತೂಕಡಿಕೆಯನ್ನೂ ತರುವುದಿಲ್ಲ."

"ನಿಜವಾಗಿ ಈ ಸುತವನ್ನೇ ಅರಸಿಕೊಂಡು ತಿರುಗುವುದು ಸಮಸ್ತ ವಿದ್ವಜ್ಜನರೂ, ಕೇವಲ ಓಷಧಿರಸ ಒಂದೇ ಅಲ್ಲ; ಯಾವುದರ ಬಗೆಗೆ ವೇದ **"ಸೋಮಂ ಯಂ ಬ್ರಹ್ಮಾಣೋ ವಿದುಃ ನ ತಸ್ಯಾಶ್ನಾತಿ ಕಶ್ಚನ||"** [ಋಗ್ವೇದ:– 10. 85. 3] – "ಯಾವ ಸೋಮವನ್ನು ಬ್ರಹ್ಮಜ್ಞರು ಬಲ್ಲರೋ, ಅದನ್ನಾರೂ ಅನುಭವಿಸರು." – ಎನ್ನುತ್ತಿದೆಯೋ, ಯಾವುದನ್ನು ವೇದ **'ಮದಿಂತಮೋ ಮತ್ಸರ ಇಂದ್ರಿಯೋ ರಸಃ ।'** [ಋಗ್ವೇದ:– 9. 86. 10]"ಸರ್ವಾಧಿಕ ಹರ್ಷಪ್ರದವೂ, ತೃಪ್ತಿಕಾರಕವೂ ಆದ ಭಗವಂತನ ಆನಂದ ರಸ."- ಎಂದು ಅಭಿವರ್ಣಿಸುತ್ತಿದೆಯೋ, ಅದನ್ನರಸಿಕೊಂಡೇ ವಿದ್ವಜ್ಜನರೆಲ್ಲರೂ ತಿರುಗುವುದು. ವೇದ, ಆ 'ಸುತ'ವನ್ನೇ, ಹಿಂಡಿತೆಗೆದ ಆನಂದ ರಸವನ್ನೇ ಪಾನಮಾಡಲು ಸಮಸ್ತ ಜ್ಞಾನಿಗಳನ್ನೂ ಆಹ್ವಾನಿಸುತ್ತದೆ. ಮಹರ್ಷಿದಯಾನಂದರು 'ಸುತಂ' ಎಂಬುದಕ್ಕೆ ಮಾಡಿರುವ **''ಅಂತಃಕರಣಾಭಿಗತಂ ವಿಜ್ಞಾನಂ ಕರ್ತುಂ."** – "ವಿಜ್ಞಾನವನ್ನು ಅಂತಃಕರಣ ಸ್ಥಿತವಾಗಿ ಮಾಡಲು" – ಎಂಬರ್ಥ ಇದೇ ದಿಕ್ಕಿಗೆ ಜಿಜ್ಞಾಸುಗಳನ್ನು ಕರೆದೊಯ್ಯುತ್ತದೆ. ವಿಜ್ಞಾನ ಗ್ರಂಥದ ಹಾಳೆಗಳಲ್ಲಿಯೇ ಉಳಿದು ಹೋಗದೆ, ಅಂತಃಕರಣದ ಅಂತರ ತಮಕ್ಕಿಳಿದಾಗ ಲಭಿಸುವುದು ಈ ಭಗವದಾನಂದವಲ್ಲದೆ ಮತ್ತೇನು ?

ಉಳಿದುದು ಮಂತ್ರದ ಉತ್ತರಾರ್ಧ, **'ಉಸ್ರಾ ಇವ ಸ್ವಸರಾಣಿ.'** ಇದೊಂದು ಉಪಮಾನ. **''ಉಸ್ರಾ ಇತಿ ರಶ್ಮಿನಾಮಸು ಪಠಿತಂ."** [ನಿ. 1. 5.] – "ಉಸ್ರಾ - ಎಂಬುದು ರಶ್ಮಿಗಳ ಹೆಸರುಗಳಲ್ಲಿ ಹೇಳಲ್ಪಟ್ಟಿದೆ. **"ಸ್ವಸರಾಣೀತ್ಯಹರ್ನಾಮಸು ಪಠಿತಂ"** [ನಿ. 1. 9] "ಸ್ವಸರಾಣಿ – ಎಂದು ಹಗಲಿನ ಹೆಸರುಗಳಲ್ಲಿ ಎಣಿಸಲ್ಪಟ್ಟಿದೆ." **"ಉಸ್ರಾಃ ಸೂರ್ಯರಶ್ಮಯಃ। ಸ್ವಸರಾಣಿಹಾನೀ ಭವಂತಿ। ಸ್ವಯಂ ಸಾರೀಣಿ**

**ಅಪಿವಾ। ಸ್ವರಾದಿತ್ಯೋ ಭವತಿ। ಸ ಏತಾನಿ ಸಾರಯತಿ।"** [ನಿ. 5. 4.] – "ಉಸ್ರಾಃ ಎಂದರೆ ಸೂರ್ಯರಶ್ಮಿಗಳು. ಸ್ವಸರಾಣಿ – ಎಂದರೆ ಹಗಲುಗಳು. ಸ್ವತಃ ಸರಿದು ಬರುವುದರಿಂದ ಅವು 'ಸ್ವಸರಗಳು' ಎನಿಸುತ್ತವೆ. ಅಥವಾ ಸ್ವಃ – ಎಂದರೆ ಸೂರ್ಯನು. ಅವನು ಈ ಹಗಲುಗಳನ್ನು ಸರಿಸುತ್ತಾನೆ." – ಎನ್ನುತ್ತಾರೆ. **"ಉಸ್ರಾಸ್ತು ರಶ್ಮಯಶ್ಚೈವ ಸ್ವಸರಾಣಿ ದಿನಾನಿ ಚ."** – "ಉಸ್ರಗಳೆಂದರೆ ಕಿರಣಗಳು. ಸ್ವಸರಗಳೆಂದರೆ ದಿನಗಳು" ಎಂದಿದ್ದಾರೆ ಶ್ರೀ॥ಮಧ್ವರು. ಸಾಯಣರೂ ಕೂಡ – **'ಉಸ್ರಾಃ ಸೂರ್ಯರಶ್ಮಯಃ; ಸ್ವಸರಾಣ್ಯಹಾನಿ"** – "ಉಸ್ರಗಳೆಂದರೆ ಸೂರ್ಯರಶ್ಮಿಗಳು. ಸ್ವಸರಗಳೆಂದರೆ ದಿನಗಳು." – ಎಂದೇ ಹೇಳಿದ್ದಾರೆ. ಮಹರ್ಷಿ ದಯಾನಂದರೂ ಉಪರ್ಯುದ್ಧೃತ ಯಾಸ್ಕವಚನಗಳನ್ನೇ ಉದ್ಧರಿಸಿ, ಈ ಅರ್ಥಗಳನ್ನೇ ಗ್ರಹಿಸಿದ್ದಾರೆ. ಇದಕ್ಕಿಂತಧಿಕವಾಗಿ, ಯಾಸ್ಕರು – **'ಉಸ್ರಾಃ ಗಾವಃ। ಸ್ವಸರಾಣಿ ಸ್ವಗೃಹಾಣಿ।'** – ಎಂದಿದ್ದಾರೆ. ತಾತ್ಪರ್ಯ – "ಉಸ್ರಗಳೆಂದರೆ ಹಸುಗಳು. ಸ್ವಸರಗಳು ಸ್ವಗೃಹಗಳು." – ಎಂದಾಗುತ್ತದೆ.

ಎಲ್ಲವನ್ನೂ ಗಮನದಲ್ಲಿಟ್ಟರೆ, "ಸೂರ್ಯರಶ್ಮಿಗಳು ದಿನಗಳಿಗೆ ಹರಡಿಬರುವಂತೆ, ಗೋವುಗಳು ತಮ್ಮ ಮನೆಗಳಿಗೆ ಧಾವಿಸಿ ಬರುವಂತೆ, ವಿದ್ವಜ್ಜನರು ಭಗವದಾನಂದರಸ ಪಾನಕ್ಕಾಗಿ ಆಲಸ್ಯರಹಿತರಾಗಿ, ಶೀಘ್ರಗಾಮಿಗಳಾಗಿ ಆಗಮಿಸಲಿ." - ಎಂಬ ನೇರವಾದ ಅರ್ಥ ಹೊರಡುತ್ತದೆ. ಸೂರ್ಯಕಿರಣಗಳು ದಿನಗಳಿಗೆ ಹೊಸೆದು ಬರುವುದೇಕೆ? ಪ್ರಕಾಶವನ್ನು ತುಂಬಿಸುವುದಕ್ಕೆ. ಹಾಗೆಯೇ 'ವಿಶ್ವೇದೇವರು'ಗಳು 'ಸುತ'ದತ್ತ ಧಾವಿಸಿ ಬರಬೇಕೇತಕ್ಕೆ? ಆನಂದರಸ ಕುಡಿಯುವುದಕ್ಕೆ? ಗೋವುಗಳು ತಮ್ಮ ಗೋಶಾಲೆಗಳಿಗೆ ಧಾವಿಸುವುದೇಕೆ? ಹಾಲನ್ನು ಕರೆದು ಎರೆಯಲಿಕ್ಕೆ ತಾನೇ? ಹಾಗೆಯೇ ಸಮಸ್ತ ವಿದ್ವಜ್ಜನರೂ ಆನಂದರಸ ಪಾನ ಮಾಡುವುದು ಈ ಜಗತ್ತನ್ನು ಇನ್ನೂ ಹೆಚ್ಚು ಆಹ್ಲಾದಮಯವಾಗಿ ಮಾಡುವುದಕ್ಕೆ. ಈ ದಿವ್ಯ ಭಾವನೆ ಜೀವನದ ಕ್ಷಣ - ಕ್ಷಣದಲ್ಲಿಯೂ ಸ್ಮರಣೀಯವಾಗಿರಲಿ.

### ಸಂಹಿತಾ ವಿಭಾಗ

**ವಿಶ್ವೇ ದೇವಾಸೋ ಅಸ್ರಿಧ ಏಹಿಮಾಯಾಸೋ ಅದ್ರುಹಃ।**

**ಮೇಧಂ ಜುಷಂತ ವಹ್ನಯಃ ॥೯॥**

**ಪದಪಾಠ:–** ವಿಶ್ವೇ, ದೇವಾಸಃ, ಅಸ್ರಿಧಃ, ಏಹಿಽಮಾಯಾಸಃ, ಅದ್ರುಹಃ, ಮೇಧಂ, ಜುಷಂತ, ವಹ್ನಯಃ ॥೯॥

**ಅನ್ವಯ:–** ಅಸ್ರಿಧಃ, ಏಹಿಮಾಯಾಸಃ ಅದ್ರುಹಃ ವಹ್ನಯಃ ವಿಶ್ವೇದೇವಾಸಃ ಮೇಧಂ ಜುಷಂತ.

**ಶಬ್ದಾರ್ಥ:–** [ಅಸ್ರಿಧಃ] ಅಹಿಂಸಕರೂ. ಅಕ್ಷಯವಿಜ್ಞಾನವಂತರೂ, [ಏಹಿಮಾಯಾಸಃ] ಎಲ್ಲೆಡೆಯಿಂದ ಕ್ರಿಯಾರತವಾಗುವ ಪ್ರಜ್ಞೆಯುಳ್ಳವರೂ, [ಅದ್ರುಹಃ] ದ್ರೋಹಮಾಡದವರೂ, [ವಹ್ನಯಃ] ದೀನ - ಹೀನರನ್ನು, ದಳಿತ - ಪತಿತರನ್ನು ಉದ್ಧರಿಸುವವರೂ ಆದ, [ವಿಶ್ವೇ ದೇವಾಸಃ] ಸಮಸ್ತ ವಿದ್ವಾಂಸರೇ! [ಮೇಧಂ] ಬುದ್ಧಿಸಂಗತವೂ ಕ್ರಿಯಾಮಯವೂ ಆದ ಯಜ್ಞವನ್ನು, [ಜುಷಂತ] ಪ್ರೀತಿಸಿರಿ, ಪ್ರೇರಿಸಿರಿ.

**ತಾತ್ಪರ್ಯ:–** ಹಿಂಸಾವಿಮುಖರೂ, ಕ್ಷೀಣವಾಗದ ವಿಜ್ಞಾನದಿಂದ ತೊಳಗುವವರೂ, ಎಲ್ಲೆಡೆಯಿಂದಲೂ ಕ್ರಿಯಾತ್ಮಕರೂಪತಾಳುವ, ಇಚ್ಛಾಮಯವಾದ ವಿಜ್ಞಾನದ ಸ್ವಾಮಿಗಳೂ, ಯಾರಿಗೂ ದ್ರೋಹಬಗೆಯದವರೂ, ಸೇವಾ - ಸಹಾಯಗಳಿಗೆ ಪಾತ್ರರಾದ ದುರ್ಬಲರನ್ನು ಎತ್ತಿ ಹಿಡಿಯುವವರೂ ಆದ ಸಮಸ್ತ ವಿದ್ವಜ್ಜನರೇ; ಪ್ರಜ್ಞಾಕರ್ಮ ಸಮನ್ವಿತವಾದ ಯಜ್ಞದಲ್ಲಿ ಪ್ರೀತಿ - ಆಸಕ್ತಿಗಳನ್ನಿಡಿರಿ. ಅನ್ಯರನ್ನೂ ಅಂತಹ ಯಜ್ಞಕರ್ಮಕ್ಕೆ ಹುರಿದುಂಬಿಸಿರಿ.

**ಭಾಷ್ಯ:–** ಈ ಮಂತ್ರದಲ್ಲಿ ಪಾಠಕರು ಗಮನಿಸಬೇಕಾದ ಶಬ್ದಗಳು ಐದಾರಿವೆ. ಅದೇ 'ವಿಶ್ವೇದೇವರು'ಗಳ ಮತ್ತೂ ಹಲವು ಸ್ಫುಟವಾದ ಲಕ್ಷಣಗಳನ್ನು ಈ ಮಂತ್ರ ವರ್ಣಿಸುತ್ತಿದೆ. ಮೊದಲನೆಯ ವಿಶೇಷಣ 'ಅಸ್ರಿಧಃ' ಎಂಬುದಾಗಿದೆ. ಶ್ರೀ॥ ಮಧ್ವರು **"ಅಸಂಸಾರಾದಸ್ರಿಧಸ್ತೇ,"** ಎಂದರೆ, "ಅವರು ಸಂಸಾರ ಬಂಧನಕ್ಕೆ ಸಿಕ್ಕದ ಕಾರಣ **ಅಹಿಂಸನೀಯ**ರಾಗುತ್ತಾರೆ." - ಎಂದಿದ್ದಾರೆ. ಸಾಯಣರು ಇದೇ ಶಬ್ದಕ್ಕೆ - **"ಕ್ಷಯ ರಹಿತಾ ಶೋಷರಹಿತಾ ವಾ"** - "ಕ್ಷೀಣವಾಗದವರು, ಶೋಷಣಕ್ಕೆ ಸಿಕ್ಕದವರು." - ಎಂದರ್ಥಮಾಡಿದ್ದಾರೆ. ಮಹರ್ಷಿದಯಾನಂದರ ಋಷಿದೃಷ್ಟಿ, ಇದಕ್ಕಿಂತ ಬಹುಮುಂದೆ ಹೋಗುತ್ತದೆ. ಅವರು ಈ ಶಬ್ದಕ್ಕೆ "ಅಕ್ಷಯವಾದ ವಿಜ್ಞಾನದಿಂದ ಯುಕ್ತರಾದವರು."-ಎಂದು ಭಾಷ್ಯ ಬರೆದಿದ್ದಾರೆ. ವಿದ್ವಜ್ಜನರ ದೃಷ್ಟಿಯಲ್ಲಿ ಬೇರಾವ ಹಿಂಸೆಯೂ ಹಿಂಸೆಯಲ್ಲ; ಕ್ಷಯವೂ ಕ್ಷಯವಲ್ಲ. ವಸ್ತುತಃ, ಅವರು ವಿಜ್ಞಾನಕ್ಕೆ ಧಕ್ಕೆ ಬಂದರೆ ಮಾತ್ರ "ನಿಜವಾಗಿ ತಮಗೆ ಹಿಂಸೆಯಾಯಿತು; ಕ್ಷೀಣತ್ವ ಬಂದಿತು." ಎಂದು ಭಾವಿಸುತ್ತಾರೆ. ಆ ಕಾರಣದಿಂದ ಅವರು ಸರ್ವಸ್ವವನ್ನೂ ಬಲಿಯಿತ್ತಾದರೂ ಭಗವದ್ದತ್ತವಾದ ವರಗಳಲ್ಲಿ ಶ್ರೇಷ್ಠತಮ ವರವಾದ ಜ್ಞಾನ - ವಿಜ್ಞಾನಗಳನ್ನು ಕಾಪಾಡಿಕೊಳ್ಳುತ್ತಾರೆ. ಅದೇ ಕಾರಣದಿಂದ ಮಹರ್ಷಿಪ್ರವರರು 'ಅಸ್ರಿಧಃ' ಶಬ್ದಕ್ಕೆ "ಕ್ಷೀಣವಾಗದ ವಿಜ್ಞಾನವನ್ನುಳ್ಳವರು." - ಎಂದು ಬರೆಯುತ್ತಾರೆ.

ಎರಡನೆಯ ವಿಶೇಷಣ ಮೊದಲ ನೋಟಕ್ಕೆ ಸ್ವಲ್ಪ ದುರ್ಬೋಧವೆಂಬಂತೆ ಕಾಣುತ್ತದೆ. **"ಏಹಿಮಾಯಾಸಃ"** - ಎಂಬುದೇ ಈ ಎರಡನೆಯ ವಿಶೇಷಣ. ಶ್ರೀ॥ ಮಧ್ವರು ಈ ಶಬ್ದಕ್ಕೆ **"ಯೇಷಾಮಿಷ್ಟ ನಿಶ್ಚಿತ ಜ್ಞಾನಾ ಏಹಿಮಾಯಾಃ ಸಮಂತತಃ."** - ಎಂದರೆ, ತಮಗೆ ಇಷ್ಟವಾದ ಹಾಗೂ ಎಲ್ಲೆಡೆಯಿಂದಲೂ ನಿಶ್ಚಿತವಾದ ಜ್ಞಾನವುಳ್ಳವರೇ ಏಹಿಮಾಯರು." – ಎಂದು ಬರೆದಿದ್ದಾರೆ. ತಾತ್ಪರ್ಯ – ಎಲ್ಲರೀತಿಯಿಂದಲೂ, ಎಲ್ಲಕಡೆ

ಯಿಂದಲೂ ಇಚ್ಛಾಪ್ರಯೋಗ್ಯವೂ, ಭ್ರಾಂತಿರಹಿತವೂ ಆದ ಜ್ಞಾನವನ್ನುಳ್ಳವರು ಏಹಿಮಾಯರು ಎನ್ನುವುದೇ, ಸೊಗಸಾದ ಅರ್ಥವೇ ಸರಿ. ಸಾಯಣರು ಈ ಶಬ್ದಕ್ಕೆ "**ಏಹಿಮಾಯಾಸಃ ಸರ್ವತೋವ್ಯಾಪ್ತ ಪ್ರಜ್ಞಾಃ**" "ಎಲ್ಲೆಡೆಯಲ್ಲಿಯೂ, ಎಲ್ಲೆಡೆಯಿಂದಲೂ ವ್ಯಾಪ್ತವಾದ ಪ್ರಜ್ಞೆಯುಳ್ಳವರು ಏಹಿಮಾಯರು." - ಎಂದರ್ಥಮಾಡಿದ್ದಾರೆ. ಮಹರ್ಷಿದಯಾನಂದರು 'ಈಹ' ಧಾತುವನ್ನು ಮೂಲವೆಂದಿಟ್ಟುಕೊಂಡು "**ಆ ಸಮಂತಾದೀಹತ ಇತ್ಯೇಹಿಃ**" "ಎಲ್ಲೆಡೆಯೂ ವ್ಯವಹರಿಸುವುದು ಯಾವುದೋ, ಅದು ಏಹಿ." - ಎಂದು ಈ ಸಮಸ್ತ (ಸಮಾಸ ಬದ್ಧ) ಶಬ್ದದ ಪೂರ್ವಪದವನ್ನು ಸಾಧಿಸಿದ್ದಾರೆ, "**ಮಾಯೇತಿ ಪ್ರಜ್ಞಾನಾಮಸು ಪಠಿತಂ**" [ನಿಘಂಟು:– 3. 9.] – ಪ್ರಜ್ಞೆಯ ಹೆಸರುಗಳಲ್ಲಿ ಮಾಯಾ–ಎಂಬುದೂ ಹೇಳಲ್ಪಟ್ಟಿದೆ.'' - ಎಂಬ ಯಾಸ್ಕ ವಚನವನ್ನಾಧರಿಸಿ - "**ಏಹಿ ಸರ್ವತ್ರ ಪ್ರವರ್ತಿತಾ ಪ್ರಜ್ಞಾ ಯೇಷಾಂ, ತೇ ಏಹಿಮಾಯಾಸಃ**'' - "ಯಾರ ಪ್ರಜ್ಞೆ ಸರ್ವತ್ರ ಪ್ರವರ್ತಿಸುತ್ತಿರುವುದೋ ಅವರೇ ಏಹಿಮಾಯರು." ಎಂದು ವಿಸ್ತರಿಸಿದ್ದಾರೆ. ಹೀಗೆ ನಾವು ಮೂವರು ಭಾಷ್ಯಕಾರರೂ ಒಂದೇ ನಿರ್ಣಯಕ್ಕೆ ಬಂದಿರುವುದನ್ನು ಕಾಣುತ್ತೇವೆ.

ಸಮಸ್ತವಿದ್ವಜ್ಜನರಲ್ಲಿ ಅನಿವಾರ್ಯವಾಗಿ ಇರಲೇ ಬೇಕಾದ ಲಕ್ಷಣವಿದು. ಆದಿ ಶಂಕರರುದ್ಭವಿಸಿ, ಮಾಯಾಶಬ್ದಕ್ಕೆ ಸಾಕ್ಷಾತ್ ಪರಬ್ರಹ್ಮವನ್ನೇ ಆವರಿಸಿ, ಅದನ್ನು ಬ್ರಹ್ಮತ್ವದಿಂದ ಕೆಳಗಿಳಿಸುವ 'ಸದಸದ್ವಿಲಕ್ಷಣ' ವಾದ, ಎಂದರೆ ಭಾವರೂಪವೂ ಅಲ್ಲದ, ಅಭಾವರೂಪವೂ ಅಲ್ಲದ ಏನೋ ಒಂದು ಬಗೆಯ, ಪರಬ್ರಹ್ಮದಿಂದ ಬೇರೆಯೂ ಅಲ್ಲದ ಪರಬ್ರಹ್ಮದ ಶಕ್ತಿ (?) ವಿಶೇಷವಾದ ತತ್ತ್ವ – ಎಂಬ ಅರ್ಥಕೊಡುವ ಮುನ್ನ ವೇದಗಳಲ್ಲಿ 'ಮಾಯಾ' ಶಬ್ದ ಪ್ರಜ್ಞೆ, ಛಲ. ಕಪಟ – ಈ ಮೊದಲಾದ ಅರ್ಥಗಳಲ್ಲಿಯೂ, ಉಪನಿಷತ್ತುಗಳಲ್ಲಿ 'ಪ್ರಕೃತಿ' ಎಂಬರ್ಥದಲ್ಲಿಯೂ ಪ್ರಯುಕ್ತವಾಗಿತ್ತು.

"ಏಹಿಮಾಯಾಸ:"– ಎಂಬ ಶಬ್ದದಲ್ಲಿನ "ಮಾಯಾ", ನಿಶ್ಚಯವಾಗಿಯೂ "ಪ್ರಜ್ಞೆ, ಜ್ಞಾನ" ಎಂಬರ್ಥದಲ್ಲಿಯೇ ಬಂದಿದೆ. ವಿದ್ವಜ್ಜನರು ಕೂಪಮಂಡೂಕಗಳಾಗಿರಲು ಸಾಧ್ಯವಿಲ್ಲ. ಅವರ ಜ್ಞಾನ, ಅವರ ನಿರ್ಭ್ರಾಂತಪ್ರಜ್ಞೆ, ಎಲ್ಲೆಡೆಯೂ, ಎಲ್ಲರಹಿತಕ್ಕಾಗಿ ಸದಾ ಕಾರ್ಯಮಗ್ನವಾಗಿರಬೇಕು. ಜಗದ್ಧಿತ ಸಾಧಿಸುತ್ತಾ – ಸಾಧಿಸುತ್ತಾ, ತಾನೂ ಅರಳುತ್ತಾ ಹೋಗಬೇಕು. ಹೀಗೆ ಈ ಶಬ್ದ ಮಹಾಪ್ರಗಲ್ಭವಾದ ಅರ್ಥದತ್ತ ಸಂಕೇತ ಮಾಡುತ್ತಿದೆ.

ಮುಂದಿನ ವಿಶೇಷಣ '**ಅದ್ರುಹ:**' ವಿಶ್ವೇದೇವರು ದ್ರೋಹರಹಿತರಾಗಿರಬೇಕು. '**ದ್ರುಹ ಜಿಘಾಂಸಾಯಾಂ**' – 'ಕೊಲ್ಲುವ ಬಯಕೆ' ಎಂಬರ್ಥವನ್ನುಳ್ಳ 'ದ್ರುಹ' ಧಾತುವಿನಿಂದ ನಿಷ್ಪನ್ನವಾದ ಈ 'ಅದ್ರುಹಃ' ಶಬ್ದ, "ಯಾರನ್ನೂ ಕೊಲ್ಲಲು ಬಯಸದವರು." – ಎಂಬರ್ಥವನ್ನು ಕೊಡುತ್ತದೆ. ತಮ್ಮಿಂದ ಯಾರಿಗೂ ಸಾವಾಗಬಾರದು; ನೋವಾಗಬಾರದು. ಯಾವುದೇ ರೀತಿಯಿಂದಲೂ ಯಾರಿಗೂ, ಎಂದೂ ತಮ್ಮಿಂದ ಹಿಂಸೆಯಾಗಬಾರದು – ಎಂಬ ಉದಾತ್ತ ಆದರ್ಶವನ್ನು ಹೊತ್ತು, "**ಅದ್ಯಾಮುಗಿಯ**

**ಯದಿ ಯಾತು ಧಾನೋ ಅಸ್ಮಿ ಯದಿ ವಾಯುಸ್ತತಪ ಪೂರುಷಸ್ಯ॥** [ಋಗ್ವೇದ:- 7, 104. 15.] – "ಓ ದೇವ ದೇವ! ನಾನು ಪರಸ್ವಾಪಹಾರೀ ಸ್ತೇನನಾಗಿದ್ದರೆ, ಅಥವಾ ಯಾವನಾದರೂ ದೇಹಧಾರೀ ಜೀವನ ಬಾಳಿಗೆ ತಾಪವನ್ನು ತಂದಿದ್ದರೆ, ನನಗಿಂದೇ ಸಾವು ಬರಲಿ." - ಎಂದು ಜಗತ್ಪತಿಯಲ್ಲಿ ಮೊರೆಯಿಡುತ್ತಾ, ಪೂರ್ಣ ಅಹಿಂಸಕರಾಗಿ ಜೀವಿಸುವವರೇ 'ಅದ್ರುಹ' ರು. ಈ ದ್ರೋಹರಾಹಿತ್ಯ, ಈ ಅಹಿಂಸಕತ್ವ ಸಮಸ್ತ ವಿದ್ವಜ್ಜನರ ವಿಶಿಷ್ಟ ಲಕ್ಷಣ. **"ಅದುಃಖತ್ವಾದದ್ರುಹಸ್ತೇ".** – "ದುಃಖರಹಿತತ್ವದಿಂದ ಅವರು 'ಅದ್ರುಹ' ರು – ಎಂದಿದ್ದಾರೆ ಮಧ್ವಗುರುರಾಯರು. ಸಾಯಣರು **"ಅದ್ರುಹೋ ದ್ರೋಹರಹಿತಾ:"** – "ದ್ರೋಹರಹಿತರು ಅದ್ರುಹರು." ಎಂದಿದ್ದಾರೆ. ದ್ರೋಹ, ಅಭಿದ್ರೋಹವೆನ್ನಿರಿ, ಹಿಂಸೆಯು ಪರ್ಯಾಯವಾಚಕವೆಂಬುದು. ವ್ಯಾಸರು ಪಾತಂಜಲಯೋಗ ಸೂತ್ರಗಳ ಮೇಲೆ ಭಾಷ್ಯಮಾಡುತ್ತಾ **'ಅಹಿಂಸಾ ಸರ್ವಭೂತಾನಾಮನಭಿ ದ್ರೋಹಃ"** – ಸರ್ವಭೂತಗಳ ಬಗೆಗೆ ಅಭಿದ್ರೋಹಮಾಡದಿರುವುದೇ ಅಹಿಂಸೆ" – ಎಂದು ಹೇಳಿರುತ್ತಾರೆ. ಮಹರ್ಷಿದಯಾನಂದರೂ ಕೂಡ "ಅದ್ರುಹಃ ದ್ರೋಹರಹಿತಾ" – "ದ್ರೋಹರಹಿತರು, ಹಿಂಸಾರಹಿತರು ಅದ್ರುಹರು." – ಎಂದೇ ಹೇಳಿದ್ದಾರೆ.

ಮತ್ತೊಂದು ವಿಶೇಷಣ **"ವಹ್ನಯ:"** –ಎಂಬುದು. ಶ್ರೀ॥ ಮಧ್ವರು **"ವಹ್ನಯೋವಹನಾದಸ್ಯ"** – ಅವರು (ಹವಿಸ್ಸನ್ನು) ತೆಗೆದುಕೊಂಡು ಹೋಗವುದರಿಂದ "ವಹ್ನಿಗಳು." - ಎಂದಿದ್ದಾರೆ. ಅವರ 'ದೇವತಾವಿಶೇಷರು' ಎಂಬ ಪೌರಾಣಿಕ ಕಲ್ಪನೆ, "ಯಜ್ಞದಲ್ಲರ್ಪಿಸಿದ ಹವಿಸ್ಸನ್ನು ತೆಗೆದುಕೊಳ್ಳುವುದಕ್ಕಾಗಿಯೇ ಬರುವ, ಮಾನವರಲ್ಲದ, ಮಾನವರಿಗಿಂತ ಮೇಲಾದ ವ್ಯಕ್ತಿವಿಶೇಷಗಳು". – ಎಂದು ಹೇಳಲು ಅವರ ಮೇಲೆ ಒತ್ತಡ ಹೇರುವುದು ಸಹಜ. ಮುಂದೆ ಬರುವ **"ಮೇಧ"** ಶಬ್ದ ಯಜ್ಞ – ಎಂಬರ್ಥ ಹೊಂದಿರುವುದು ಅವರ ಕಲ್ಪನೆಗೆ ಪೋಷಕವೆಂಬಂತೆ ತೋರುತ್ತದೆ. ಆದರೆ, ಯಜ್ಞದಲ್ಲಿತ್ತ ಹವಿಸ್ಸನ್ನು ಸ್ವೀಕರಿಸಿ, ಛಿನ್ನ - ಭಿನ್ನಮಾಡಿ ವಾತಾವರಣದಲ್ಲೆಲ್ಲಾ ಸೂಕ್ಷ್ಮ ಕಣಗಳಾಗಿ ಹರಡುವ ಅಗ್ನಿ ಜಡದೇವತೆ; ಅದನ್ನು ದೇಶ–ದೇಶಾಂತರಗಳಿಗೊಯ್ಯುವ ವಾಯುವು ಜಡದೇವತೆಯೇ, ಮತ್ತು ಇಂದ್ರ ಇಂದ್ರಾಗ್ನೀ, ಇಂದ್ರವಾಯೂ, ಅಶ್ವಿನೌ, ವಿಶ್ವೇದೇವಾ — ಮೊದಲಾದ ದೇವತೆಗಳು ಜೀವಾತ್ಮ–ಪರಮಾತ್ಮರೇ ಹೊರತು ಬೇರಾರೂ ಅಲ್ಲ. ಪರಮಾತ್ಮನೆಂಬರ್ಥ ಸಲ್ಲದಾಗ, ಮಾನವದೇಹಧಾರೀ ಜೀವರೇ ಈ ವರ್ಣಿತ ದೇವತೆಗಳು – ಎಂದು ನಮ್ಮ ಓದುಗರು ಈಗಾಗಲೇ ಗ್ರಹಿಸಿರಬಹುದು. ಬೇರೆ ಎಲ್ಲಿಂದಲೋ ಇಂದ್ರ, ವರುಣ, ಮಿತ್ರ, ಅಶ್ವಿನೌ, ವಾಯು– ಆದಿ ದೇವತೆಗಳು ಯಜ್ಞದ ಹವಿಸ್ಸನ್ನು ಕೊಳ್ಳಲು ಬರುವುದಿಲ್ಲ. ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸುವುದು – ಹರಡುವುದು ಜಡದೇವತೆಗಳ ಕಾರ್ಯವೆಂದು ಹೇಳಿಯೇ ಇದ್ದೇವೆ. ಇಂದ್ರಾದಿನಾಮಗಳು ಭಗವಂತನಿಗನ್ವಯಿಸಿದರೂ, ಮಂತ್ರದ ಆಕಾಂಕ್ಷೆ ಬೇರೆಯಾಗಿದ್ದಾಗ, ಗುಣಬೋಧಕ ಶಬ್ದಗಳು ಅವನ್ನು ಭಗವಂತನಿಗನ್ವಯಿಸಲು ಎಡೆಕೊಡದಿದ್ದಾಗ, ಮಂತ್ರಸ್ಥ ಶಬ್ದಗಳಿಂದ ಚೈತನ್ಯ ಸೂಚಿತವಾಗುತ್ತಿದ್ದರೆ ವಿಶಿಷ್ಟ ಲಕ್ಷಣಯುಕ್ತರಾದ ಮಾನವರನ್ನೇ ಗ್ರಹಿಸಬೇಕು. ಬೇರೆಮಾತುಗಳಲ್ಲಿ ಹೇಳುವು

ದಾದರೆ, ನಾವೇ ಇಂದ್ರರೋ, ವರುಣರೋ, ಮಿತ್ರರೋ ವಾಯುಗಳೋ, ಅಗ್ನಿಗಳೋ ಆಗಿ ವಿಕಸಿತರಾಗಬೇಕು. ವೇದಗಳು ಮಾನವೋಪಯೋಗೀ ಸತ್ಯ ವಿದ್ಯಾಭಂಡಾರಗಳೇ ಹೊರತು, ಬೇರೆಯಲ್ಲ. ಮಾನವರಲ್ಲದ ಮಾನವರಿಗೆ ಸಲ್ಲದ ಯಾವುದೋ ಚಿತ್ರ-ವಿಚಿತ್ರವಾದ ದೇವತೆಗಳ ಕಲ್ಪನೆ ಪೂರ್ಣತಃ ಅಳಿಸಿಹೋದಾಗಮಾತ್ರ ವೇದಗಳ ಔನ್ನತ್ಯ ಅರ್ಥವಾದೀತು.

ಇದೇ **'ವಹ್ನಯಃ'** ಶಬ್ದಕ್ಕೆ ಸಾಯಣರು – **"ವಹ್ನಯೋ ವೋಢಾರೋಃಧನಾನಾಂ ಪ್ರಾಪಯಿತಾರಃ"** – "ವಹ್ನಿಗಳೆಂದರೆ ಹೊರುವವರು; ಧನವನ್ನು ಒದಗಿಸುವವರು." – ಎಂದಿದ್ದಾರೆ. ಹೊರುವವರು, ಹೊತ್ತು ತರುವವರು – ಎಂಬುದೇನೋ ನಿಃಸಂಶಯ. ಅದು ಧನವೇ – ಎನ್ನಲು ಪುಷ್ಟಪ್ರಮಾಣವಿಲ್ಲ. ಮಹರ್ಷಿದಯಾನಂದರು **"ವಹ್ನಯೋವೋಢಾರಃ"** [ನಿರುಕ್ತ:– 8. 3.] ಎಂಬ ಯಾಸ್ಕವಚನವನ್ನುದ್ಧರಿಸಿ "ವಹ್ನಿಗಳೆಂದರೆ ಹೊತ್ತು ತರುವವರು" ಎಂದಿಷ್ಟೇ ಹೇಳಿದ್ದಾರೆ.

ಇಂತಿಂತಹ ಗುಣವಿಶಿಷ್ಟರಾದ ಸಮಸ್ತ ವಿದ್ವಜ್ಜನರ ಕುರಿತು ವೇದ ಕೊಡುವ ಆದೇಶವೇನು? **"ಮೇಧಂ ಜುಷಂತ"** - "ಮೇಧವನ್ನು ಪ್ರೀತಿಯಿಂದ ಸೇವಿಸಿರಿ; ಅನುಷ್ಠಾನ ಮಾಡಿರಿ." - ಎಂಬುದೇ ಆ ಆದೇಶ. ಮೇಧವೆಂದರೇನು? ಶ್ರೀ ಮಧ್ವರು **"ಮೇಧಂ ಯಜ್ಞಂ"** – "ಮೇಧವನ್ನು – ಎಂದರೆ ಯಜ್ಞವನ್ನು." ಎನ್ನುತ್ತಾರೆ. ಶ್ರೀ ಸಾಯಣರು - **'ಮೇಧೃ ಸಂಗಮೇಚ. ಮೇಧ್ಯತೇ ದೇವೈಃ ಸಂಗಮ್ಯತ ಇತಿ ಮೇಧಂ ಹವಿಃ'** – ಮೇಧೃಧಾತುವಿಗೆ 'ಸಂಗಮ' ಎಂಬರ್ಥವಿದೆ. ದೇವತೆಗಳೊಂದಿಗೆ ಸಂಗಮಹೊಂದುವುದರಿಂದ, 'ಹವಿಸ್ಸೇ' "ಮೇಧ," – ಎಂದು ಬರೆದಿದ್ದಾರೆ. ಯಜ್ಞದ ಉಪಲಕ್ಷಣ ಹವಿಸ್ಸೆಂದು ಭಾವಿಸಿದರೆ, ಈ ಅರ್ಥವೂ ಸಂಗ್ರಾಹ್ಯವೇ. ಮಹರ್ಷಿದಯಾನಂದರು **'ಮೇಧ ಇತಿ ಯಜ್ಞನಾಮಸು ಪಠಿತಂ.'** [ನಿಘಂಟು:– 3. 17.] "ಮೇಧ – ಎಂಬುದು ಯಜ್ಞದ ನಾಮಗಳಲ್ಲಿ ಒಂದು" – ಎಂಬ ಪ್ರಮಾಣದಿಂದ ಮೇಧವೆಂದರೆ ಯಜ್ಞವೆಂದೇ ಹೇಳಿದ್ದಾರೆ.

ಶ್ರೀ॥ ಮಧ್ವರು ವಿಶ್ವೇದೇವರನ್ನು ಪ್ರಥಮಪುರುಷದಲ್ಲಿ (Third Person) ಭಾವಿಸಿ 'ಜುಷಂತು' - 'ಪ್ರೀತಿಯಿಂದ ಸೇವಿಸಲಿ' – ಎಂದಿದ್ದಾರೆ ಶ್ರೀ॥ ಸಾಯಣರು. ಮಹರ್ಷಿದಯಾನಂದರು ಅವರನ್ನು ಮಧ್ಯಮಪುರುಷದಲ್ಲಿ ಭಾವಿಸಿ, "ಜುಷಂತ ಸೇವಧ್ವಂ" "ಪ್ರೀತಿಯಿಂದ ಸೇವಿಸಿರಿ." – ಎಂದು ಬರೆದಿದ್ದಾರೆ.

ಈ ಸೂತ್ರದ ೭ - ೮ - ೯ ಈ ಮೂರು ಮಂತ್ರಗಳಲ್ಲಿ ಅಭಿವ್ಯಕ್ತವಾಗಿರುವ 'ವಿಶ್ವೇದೇವರ' – 'ಸಮಸ್ತವಿದ್ವಜ್ಜನರ' ಲಕ್ಷಣಗಳನ್ನು ಗ್ರಹಿಸಿ, ನಾವೂ ನಮ್ಮ ನಮ್ಮ ಜೀವನಗಳಿಗೆ ಅಳವಡಿಸಿಕೊಂಡಾಗ ಮಾತ್ರ ಈ ವಿಸ್ಮೃತ ವೇದ ಭಾಷ್ಯವನ್ನೋದಿದುದು ಸಾರ್ಥಕವಾಗುತ್ತದೆ. ಹಾಗಲ್ಲದೆ, 'ಅದಾರೋ ದೇವತೆಗಳು, ಅದೆಲ್ಲಿಂದಲೋ ಬರುತ್ತಾರೆ; ಲಂಚದ ರೂಪದಲ್ಲಿ ಹವಿಸ್ಸನ್ನು ಸ್ವೀಕರಿಸಿ, ನಮಗೆ ಬೇಕಾದುದನ್ನು ಕರುಣಿಸಿ ಹೋಗುತ್ತಾರೆ,"- ಎಂಬ ಅವೈಜ್ಞಾನಿಕ ಹಾಗೂ ಬುದ್ಧಿವಿರುದ್ಧವಾದ ಭಾವನೆಗಳಿಂದಲೇ ವೇದಪಾಠ

ಮಾಡುವುದಾದರೆ, ತಿರಿದುಂಬದಾಸಯ್ಯನ ಬುಡು ಬುಡಿಕೆಯ ಶಬ್ದದಂತೆಯೇ ಪರಮ ಪವಿತ್ರ ಈಶ್ವರೀಯ ವಾಣೀ ವೇದಗಳ ಶಬ್ದಗಳೂ ಕೂಡ ಟೊಳ್ಳುದನಿಗಳೇ ಆದಾವು! ಇದಕ್ಕಿಂತಧಿಕ ಅಪಚಾರವನ್ನು ವೇದಗಳಿಗೆ ಯಾವ ನಾಸ್ತಿಕನೂ ಮಾಡಲಾರನು. ಸ್ಥಿತಿ ಹಾಗಾಗದಿರಲಿ. ಮಾನವರಿಗಿಂತ ಮೇಲ್ಮಟ್ಟದ ಯೋನಿವಿಶೇಷರಾದ ದೇವೀ - ದೇವತೆಯರ ನಿರಾಧಾರ ಕಲ್ಪನೆಗಳನ್ನು ಮಾಡಿಕೊಂಡು, ತಮ್ಮ ನಿಲುವನ್ನು ಪುಷ್ಟೀಕರಿಸಲು ಬೇರೆ ಯಾವ ದಾರಿಯೂ ತೋರದಾಗ, "**ಅಪರೋಕ್ಷ ಜ್ಞಾನಿಗಳು.**" - ಎಂದು ಯಾರಾರಿಗೋ ಹೆಸರಿಟ್ಟು, "ಅವರು ಸರ್ವಜ್ಞಕಲ್ಪರು; ಅಥವಾ ಸರ್ವಜ್ಞರೇ." – ಎಂಬ ಹಣೆಪಟ್ಟಿಯನ್ನು ಬಿಗಿದು, "ಅವರ ಕಥನ ಸರ್ವಥಾ ಅಂಗೀಕಾರ್ಯವೇ ಹೊರತು, ತರ್ಕದ ವಿಷಯವೇ ಅಲ್ಲ!" - ಎಂಬ ತೀರ್ಮಾನವನ್ನು ತಾವೇ ಸಾರಿಹೇಳಿ, ಸಾಂಪ್ರದಾಯಿಕ ಆಚಾರ್ಯರುಗಳು ತಮ್ಮ ತಮ್ಮವರೇ ಆದ ದೇವೀ ದೇವತೆಯರ ವಿಚಿತ್ರಸೃಷ್ಟಿಯನ್ನೇ ಮಾಡಿಕೊಂಡಿದ್ದಾರೆ. ಬೌದ್ಧರು, ಜೈನರು, ಪೌರಾಣಿಕರು, ಕ್ರೈಸ್ತರು, ಮುಸಲ್ಮಾನರು, ಶಂಕರ – ರಾಮಾನುಜರು ಎಲ್ಲರೂ ಈ ವಿಕಲ್ಪವೃತ್ತಿಗೇ ಕಟ್ಟು ಬಿದ್ದು ದೇವತೆಗಳ ಮಹಾಸೇನೆಯನ್ನೇ ಸೃಜಿಸಿ ಹೋಗಿದ್ದಾರಾದರೂ, ಮೂಲತಃ ಅಖಂಡನೀಯವೂ, ಏಕಮಾತ್ರ ಸತ್ಯವೂ ಆದ, ಜೀವೇಶ್ವರ ಪ್ರಕೃತಿಗಳ ಪರಸ್ಪರ ಹಾಗೂ ಶಾಶ್ವತ ಭೇದವನ್ನಂಗೀಕರಿಸಿದರೂ, ದ್ವೈತವಾದಕ್ಕೆ ಬೇಕೇ ಇಲ್ಲದ ದೇವತಾ – ತಾರತಮ್ಯ, ನಿತ್ಯನಾರಕೀ ಜೀವ, ಮೋಕ್ಷ ಯೋಗ್ಯ ಜೀವ – ಮೊದಲಾದ ಆತ್ಮಗೌರವಕ್ಕೆ ಕುಠಾರಾಘಾತಮಾಡುವ ಬುಡವಿಲ್ಲದ ತತ್ತ್ವ(?)ಗಳನ್ನು ಸಾರಿ ಹೋದ ಶ್ರೀ॥ ಮಧ್ವಗುರುರಾಯರು ಈ ವಿಷಯದಲ್ಲಿ ಎಲ್ಲರಿಗಿಂತ ಮುಂದೆ ನಿಂತು, ಆಚಾರ್ಯತ್ರಯರಲ್ಲಿ ವೇದ – ಸಂಹಿತೆಯ ಹಲ – ಕೆಲವು ಸೂಕ್ತಗಳಿಗೆ ಭಾಷ್ಯ ಬರೆದ ಏಕಮಾತ್ರ ಆಚಾರ್ಯರಾದರೂ, ವೈದಿಕಧರ್ಮಕ್ಕೆ ಭ್ರಾಂತಕಲ್ಪನೆಗಳ ತೆರೆ ಹೊದಿಸಿ ಹೋದುದು ಶೋಚನೀಯ; ಮಹಾಶೋಚನೀಯ. ದೇವತಾ – ತಾರತಮ್ಯದ ಕಾಟ, ಮರ್ತ್ಯರಾದ ನಮಗೆ, ಅಷ್ಟು ಹೆಚ್ಚಾಗಿ ತಾಕದು. ಆದರೆ, ಮಾನವರಲ್ಲಿಯೇ ನಿತ್ಯನಾರಕೀ, ಮುಕ್ತಿಯೋಗ್ಯ - ಮೊದಲಾದ ಅವೈಜ್ಞಾನಿಕ ಕಲ್ಪನಾ - ಕುಹಕ, ದೈವವಶಾತ್ ಮೇಲ್ಮಟ್ಟದವರೆನ್ನಿಸಿಕೊಂಡವರಿಗೇನೋ ಆಘಾತ ತಾರದು. ಆದರೆ, ದುರ್ಭಾಗ್ಯದಿಂದ ಕೀಳ್ಮಟ್ಟದವರೆಂದು, ಅವರು ಮಾಡದ ತಪ್ಪಿಗಾಗಿ ಗಣಿಸಲ್ಪಡುವವರು ಆತ್ಮಗೌರವಕ್ಕಾಗುವ ಪ್ರಹಾರವನ್ನು ಎಷ್ಟುಕಾಲ ಸಹಿಸಿಯಾರು? ವೇದಾರ್ಥ ನಿಜವಾಗಿ ಹೃದ್ಗತವಾಗಬೇಕಾದರೆ, ಸರ್ವಪ್ರಥಮ ಪಾತಂಜಲ ಯೋಗಸೂತ್ರಗಳಲ್ಲಿ ಉಕ್ತವಾದ ಚಿತ್ತದ ಪಂಚವೃತ್ತಿಗಳಲ್ಲಿ ಮೂರನೆಯದಾದ '**ವಿಕಲ್ಪ ವೃತ್ತಿ**'ಯನ್ನು ಬಲವಂತದಿಂದಾದರೂ ನಿಗ್ರಹಿಸಿ, ನಿರೋಧಿಸಿಯೇ ಮುಂದಿನ ಹೆಜ್ಜೆ ಇಡಬೇಕಾದೀತು. ಸಮಾಧಿಪಾದದ ಒಂಬತ್ತನೆಯ ಸೂತ್ರದಲ್ಲಿ **ಮಹರ್ಷಿ** ಪತಂಜಲಿ - "**ಶಬ್ದ ಜ್ಞಾನಾನುಪಾತೀ ವಸ್ತು ಶೂನ್ಯೋ ವಿಕಲ್ಪಃ**" ಎಂದರೆ - "ಶಬ್ದಗಳಜ್ಞಾನವನ್ನನುಸರಿಸಿ ಮಾಡುವ, ಆದರೆ ವಸ್ತುಶೂನ್ಯವಾದ, ಊಹಾ ಮಾತ್ರವಾದ ವೃತ್ತಿ ವಿಕಲ್ಪ," - ಎಂದಿದ್ದಾರೆ. ಇಂದು ಸಂಪೂರ್ಣ ಜಗತ್ತಿನಲ್ಲಿ, ಸಮಸ್ತ ಮತಗಳಲ್ಲಿಯೂ ಇಂತಹ ಊಹಾಮಾತ್ರರಾದ, ಕೇವಲ ಕಾಲ್ಪನಿಕರಾದ, ದೇವೀ - ದೇವತೆಯರ ತಂಡ-ತಂಡಗಳೇ ಕಂಡು ಬಂದು, ಕೇವಲ ಸತ್ಯಾನ್ವೇಷಣಕ್ಕಾಗಿ ಹೊರಟ ಜಿಜ್ಞಾಸುವನ್ನು

ವಿವಿಧ ಭ್ರಾಂತಿಗಳ ಚಕ್ರವ್ಯೂಹದಲ್ಲಿ ಸಿಲುಕಿಸುತ್ತವೆ. ಈ ಚಕ್ರವ್ಯೂಹವನ್ನು ಭೇದಿಸಿಕೊಂಡು ಮುನ್ನುಗ್ಗುವ ಅಸಿಧಾರವ್ರತವನ್ನು-ಎಂದರೆ ಕತ್ತಿಯ ಕೂರಲಗಿನ ಮೇಲೆ ನಡೆಯುವ ದೃಢ ಸಂಕಲ್ಪವನ್ನು ತಳೆದು, ಮುಂದೆ ಸಾಗುವ ಧೀರ ಮಾತ್ರ ಕೃತಕೃತ್ಯನಾದಾನು. ವೇದ-ಸಂಹಿತೆಗಳಲ್ಲಿ ಕಂಡು ಬರುವ "**ತ್ರ್ಯಂಬಕಂ**" [ಯಜು:– 3.60.]. "**ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್।**" [ಯಜು:- 31. 1.], "**ಸಹಸ್ರಾಕ್ಷೋ ವಿಚರ್ಷಣಿಃ**" [ಋಗ್ವೇದ:– 1. 79. 12.], "**ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರ ಪಾತ್.**" [ಋಗ್ವೇದ:- 10. 90. 1.], "**ಸಹಸ್ರ ಬಾಹುಃ ಪುರುಷಃ.**" [ಅಥರ್ವ:- 19. 6, 1.], "**ಯಸ್ಯ ಸೂರ್ಯಶ್ಚಕ್ಷುಶ್ಚಂದ್ರಮಾಶ್ಚ ಪುನರ್ಣವಃ**" [ಅಥರ್ವ ವೇದ:– 10. 7. 33.], "**ನಮಸ್ತೇ ರುದ್ರ ಕೃಣ್ಮಃ ಸಹಸ್ರಾಕ್ಷಾಯಾಮರ್ತ್ಯ.**' [ಅಥರ್ವ:– 11. 2. 3.]. "**ನಮಸ್ತೇ ರುದ್ರ ಮನ್ಯವೇ ಉತೋತ ಇಷವೇ ನಮಃ**" [ಯಜು:– 16. 11.]. "**ಅರ್ಹನ್ ಬಿಭರ್ಷಿ ಸಾಯಕಾನಿ ಧನ್ವಾ.**"- [ಋಗ್ವೇದ:– 2. 33. 10.] – "ಮುಕ್ಕಣ್ಣನನ್ನು;" "ಸಾವಿರತಲೆಗಳ, ಸಾವಿರಕಣ್ಣುಗಳ, ಸಾವಿರಪಾದಗಳ ವ್ಯಾಪಕ ದೇವನು.;" "ಸಾವಿರಕಣ್ಣುಗಳವನು, ವಿಶ್ವದರ್ಶಕನು;" "ಸಾವಿರ ಬಾಹುಗಳನ್ನುಳ್ಳ ವ್ಯಾಪಕ ದೇವನು.;" "ಯಾವನಿಗೆ ಸೂರ್ಯಚಂದ್ರರೇ ಕಣ್ಣುಗಳೋ, ಆ ನಿತ್ಯನವೀನ ದೇವನು.;" "ಓ ರುದ್ರ! ಸಾವಿರ ಕಣ್ಣುಗಳುಳ್ಳ ಅಮರನಾದ ನಿನಗೆ ನಮಸ್ಕಾರ;" "ಓ ರುದ್ರ! ಉಗ್ರಕೋಪನಾದ ನಿನಗೆ, ಮತ್ತು ಬಾಣಕ್ಕೆ ನಮಸ್ಕಾರ.;" "ಓ ಅರ್ಹನ್ ಬಾಣಗಳನ್ನೂ, ಬಿಲ್ಲನ್ನು ಧರಿಸಿರುವೆ." - ಈ ಮೊದಲಾದ ಕಾವ್ಯಮಯವಾದ ಅಲಂಕಾರಿಕ ವರ್ಣನೆಗಳನ್ನು ಶಬ್ದಶಃ ಗ್ರಹಿಸಿ, ಸಾಕಾರನಾದ ಈಶ್ವರನ ಅಥವಾ ಸಾಕಾರ ದೇವತೆಗಳನ್ನು ಒಪ್ಪಿಕೊಂಡು ಮುಗ್ಗರಿಸುತ್ತಿರುವವರೆಗೆ, ವೇದಾರ್ಥಗ್ರಹಣ ಅತಿಕಷ್ಟವೇ ಆದೀತು. ಈ ಒಂದು ಮೂಲಸೂತ್ರ ನೆನಪಿದ್ದರೆ, ವೇದೋಕ್ತ ದೇವತೆಗಳು ಈಶ್ವರನಿಗೆ, ಅಥವಾ ವಿಶಿಷ್ಟ ಗುಣ - ಯುಕ್ತರಾದ ಮಾನವರ ಕಡೆಗೆಯೇ ಪ್ರಧಾನತಃ ನಿರ್ದೇಶಿಸುತ್ತವೆ. ಪ್ರಕರಣಾನುಸಾರ ಜಡವಸ್ತುಗಳಿಗೂ ಅನ್ವಯಿಸುವವು; **ಅಷ್ಟೇ ಹೊರತು, ಮಾನವಾತೀತ ಯೋನಿ ವಿಶೇಷಗಳು ಅಥವಾ ಚೇತನ ವಿಶೇಷರು** - ಎಂಬ ಕಲ್ಪನೆ ಅಳಿದು ಹೋಗದೆ, ವೇದಗಳ ಸರ್ವಕಾಲಿಕ ಉಪಯೋಗಿತ್ವ ಅರ್ಥವಾಗುವುದು ಅಸಂಭವವೇ.

ಹೀಗೆ, ನಾವೇ ವಿಶ್ವೇದೇವತ್ವವನ್ನು ಪಡೆದುಕೊಳ್ಳಬೇಕಾಗಿದೆಯೇ ಹೊರತು, ಯಾರೋ, ಎಲ್ಲಿಂದಲೋ, ಹವಿರ್ಗ್ರಹಣಕ್ಕಾಗಿ ಓಡಿ ಬರುವ, ಮಾನವರಲ್ಲದ ದೇವತೆಗಳಲ್ಲಿ ವಿಶ್ವೇ ದೇವರುಗಳು. ಇನ್ನು ಮುಂದೆ ವರ್ಣಿತವಾಗಲಿರುವ ಸರಸ್ವತಿಯ ಹಾಗೂ ಇನ್ನಿತರ ದೇವತೆಗಳ ಬಗೆಗೂ ಇದೇ ಸತ್ಯವನ್ನು ಗ್ರಹಿಸಿದರೆ, ಪಾಠಕರು ವೇದಗಳ ಭಾವನೆಯನ್ನು ಗ್ರಹಿಸಲು ಸಮರ್ಥರಾದಾರು.

## ಸಂಹಿತಾ ವಿಭಾಗ

ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ ।

ಯಜ್ಞಂ ವಷ್ಟು ಧಿಯಾವಸುಃ ॥೧೦॥

**ಪದಪಾಠ:**– ಪಾವಕಾ, ನಃ, ಸರಸ್ವತೀ, ವಾಜೇಭಿಃ, ವಾಜಿನೀऽವತೀ, ಯಜ್ಞಂ, ವಷ್ಟು, ಧಿಯಾವಸುಃ ॥

**ಅನ್ವಯ:**– ವಾಜೇಭಿಃ ವಾಜಿನೀವತೀ ಧಿಯಾವಸುಃ ನಃ ಪಾವಕಾ ಸರಸ್ವತೀ ಯಜ್ಞಂ ವಷ್ಟು ॥

**ಶಬ್ದಾರ್ಥ:**– [ವಾಜೇಭಿಃ] ಆತ್ಮೋತ್ಕರ್ಷಕ್ಕೆ ಸಾಧಕವಾದ, ಉದ್ಧಾರಕವಾದ ಆತ್ಮಬಲದಿಂದಲೂ, ಸದಸದ್ವೃತ್ತಿಗಳ ನಡುವಣ ಸಂಘರ್ಷದಿಂದಲೂ, ಆತ್ಮನಲ್ಲಿಯೇ ಮೊಳಗುವ ನಾದಗಳಿಂದಲೂ, ಅನ್ನ-ಜಲಗಳಿಂದಲೂ, ಉದ್ಬೋಧಕ ಮಂತ್ರಗಳಿಂದಲೂ ಯುಕ್ತವಾದ, [ವಾಜಿನೀವತೀ] ಆ ತತ್ತ್ವಗಳೆಲ್ಲದರಿಂದಲೂ ರೂಪಗೊಳ್ಳುವ ಕ್ರಿಯೆಗಳಿಂದಲೂ ಕೂಡಿದ, [ಧಿಯಾವಸುಃ] ಪ್ರಜ್ಞಾ-ಕರ್ಮಗಳಲ್ಲಿ ನೆಲೆಸಿರುವ, ಪ್ರಜ್ಞಾ-ಕರ್ಮಗಳಿಂದ ಜೀವರನ್ನು ನೆಲೆಗೊಳಿಸುವ, [ನಃ ಪಾವಕಾ] ನಮ್ಮನ್ನು ಪವಿತ್ರಗೊಳಿಸುವ, [ಸರಸ್ವತೀ] ಜ್ಞಾನ ಮೊದಲಾದ ಪ್ರಶಂಸನೀಯ ಗುಣಗಳಿಂದ ವಿರಾಜಿಸುವ, ಸರ್ವವಿದ್ಯಾ ಪ್ರಾಪ್ತಿಗೊಳಿಸುವ ವಾಣಿಯು, [ಯಜ್ಞಂ] ಸತ್ಕರ್ಮಸಂಕುಲವನ್ನು, [ವಷ್ಟು] ಅಪೇಕ್ಷಿಸಲಿ; ಎತ್ತಿ ಹಿಡಿಯಲಿ; ನಿರ್ವಹಿಸಲಿ.

**ತಾತ್ಪರ್ಯ:**– ಜ್ಞಾನ-ವಿಜ್ಞಾನಮಯ ಶುಭಗುಣಗಳಿಂದ ರಂಜಿಸುವ ನಿಭ್ರಾಂತ ವಾಣಿಯು, ಅನ್ನ-ಜಲ-ಬಲ-ಮೊದಲಾದ, ಗ್ರಾಹ್ಯ ಪದಾರ್ಥ-ಗುಣಗುಣಗಳಿಂದಲೂ, ಅವುಗಳ ಆಧಾರದಿಂದ ರೂಪತಾಳುವ ಕ್ರಿಯೆಗಳಿಂದಲೂ ಕೂಡಿದುದಾಗಿ, ಪ್ರಜ್ಞಾ-ಕರ್ಮಗಳಿಂದ ಎಲ್ಲರನ್ನೂ ಜೀವನದಲ್ಲಿ ದೃಢವಾಗಿ ನಿಲ್ಲಿಸುವಂತಹುದಾಗಿ, ಶ್ರೇಷ್ಠತಮ ಕರ್ಮವನ್ನು ನಿರ್ವಹಿಸುವಂತಹುದಾಗಿ, ನಮ್ಮೆಲ್ಲರನ್ನೂ ಪಾವನಗೊಳಿಸಲಿ.

**ಭಾಷ್ಯ:**– ತ್ರಿಕರಣಶುದ್ಧಿಯಿಲ್ಲದೆ ಮನಸ್ಸು, ಮಾತು ಹಾಗೂ ಮೈಗಳಿಂದ ಪವಿತ್ರನಾಗದೆ, ಮಾನವ ಮಾನಗೇಡಿಯಾಗಿ, ಮಾನವತ್ವದ ಮನೋಹರ ಮುಖ-ಮಂಡಲಕ್ಕೆ ಮಸಿ ಬಳೆದೂ ಕೂಡ, ಹೇಗೋ-ಹಾಗೆ ಉಸಿರಾಡಿಕೊಂಡು ಬದುಕಿರಬಹುದು. ಆದರೆ, ಆ ಬದುಕು, ಭಗವಂತನ ಬಳಿಗೆ ಬುದ್ಧಿಪೂರ್ವಕವಾಗಿ ಬಾಗಿ ನಡೆಯುವ ಬಲ್ಮೆಯನ್ನು ತಾಳಿಬಾರದು; ಮೈ ಬೆಳೆಯಬಹುದು; ಬಾಯಿ ಬಡುಕತನವೂ ಬೆಳೆದು ಬರಬಹುದು; ಮನಸ್ಸೂ ಕೂಡ ಮಾನವ ಮೈಮರೆತು, ಮಂಗಳಕರವಲ್ಲದ, ಮಹಿಮಾರಹಿತವಾದ, ಮೇಲು-ಮೇಲಣ

ಮಂಜು–ಮಂಜಾದ ಮಾರ್ಗದಲ್ಲಿ ಮುನ್ನಡೆಯಲು ಮಸುಕು–ಮಸಕಾದ ಹುರುಪನ್ನೂ ಹುಟ್ಟಿಸಬಹುದು. ಆದರೆ, ಅಂತಹ ಜೀವನ ಮಾನವ ಜೀವನವೆನ್ನಿಸಿಕೊಳ್ಳಲು ಎಂದಿಗೂ ಸಮರ್ಥವಾಗಲಾರದು.

ಅಹುದು: ಪ್ರಶ್ನೆ ಏಳುತ್ತದೆ. "**ತ್ರಿಭಿಃ ಪವಿತ್ರೈರಪುಪೋದ್ಧ್ಯರ್ಕಮ್.**" - [ಋಗ್ವೇದ:– 3. 26. 8.] "ಮೂರು ಪವಿತ್ರವಾದ ಸಾಧನಗಳಿಂದ, ನಿರ್ಮಲ ಚಿತ್ತ, ನಿರ್ಮಲವಾಕ್ಕು ಹಾಗೂ ನಿರ್ಮಲಕಾಯಗಳಿಂದ ಅರ್ಚನೀಯನಾದ, ಆದರಣೀಯನಾದ ಜೀವಾತ್ಮನನ್ನು ಪರಿಪುಷ್ಟನನ್ನಾಗಿ ಮಾಡಿಕೊಳ್ಳಬೇಕು." - ಎಂಬ ಋಕ್ಕಿನ ಆದೇಶವನ್ನು ಜೀವನಗತವಾಗಿ ಮಾಡಿಕೊಳ್ಳುವುದೆಂತು? ಈ ಮಂತ್ರ "**ನಃ ಪಾವಕಾ ಸರಸ್ವತೀ**" – ಎನ್ನುತ್ತದೆ. "ನಮ್ಮನ್ನು ಪಾವನಗೊಳಿಸುವುದು ಸರಸ್ವತೀ." - ಎಂದಿದರ ಅರ್ಥ. 'ಪಾವಕಾ' - ಎಂಬ ಶಬ್ದಕ್ಕೆ ಶ್ರೀ॥ ಮಧ್ವರು "**ಶೋಧಕತ್ವಾತ್ತು ಪಾವಕಾ.**" 'ಶುದ್ಧಗೊಳಿಸುವ ಕಾರಣದಿಂದ ಸರಸ್ವತೀ ಪಾವಕ." - ಎಂದಿದ್ದಾರೆ. ಶ್ರೀ॥ ಸಾಯಣರು '**ಪಾವಕಾ ಶೋಧಯಿತ್ರೀ**' - "ನಿರ್ಮಲಗೊಳಿಸುವಂತಹುದೇ ಪಾವಕ." - ಎಂದಿದ್ದಾರೆ. ಮಹರ್ಷಿ ದಯಾನಂದರು - "**ಪಾವಂ ಪವಿತ್ರಕಾರಕಂ ವ್ಯವಹಾರಂ ಕಾಯತಿ ಘೋಷಯತೀ ಯಾ ಸಾ ಪಾವಕಾ**" - "ಯಾವುದು ಪವಿತ್ರಕರವಾದ ವ್ಯವಹಾರವನ್ನು ಘೋಷಿಸುತ್ತದೋ ಅದೇ ಪಾವಕ." - ಎಂದು ವಿಸ್ತರಿಸುತ್ತಾರೆ. ಭಾವನೆಯಲ್ಲಿ ಭೇದವಿಲ್ಲ. ಈ ರೀತಿ ಪಾವನಗೊಳಿಸುವುದು 'ಸರಸ್ವತೀ' - ಎಂದಾಗ ವಿಚಾರಸಂಘರ್ಷ ಆರಂಭವಾಗುತ್ತದೆ.

ಯಾವಳು ಅಥವಾ ಯಾವುದು ನಮ್ಮನ್ನು ಪಾವನಗೊಳಿಸುವ ಈ ಸರಸ್ವತೀ? ಶ್ರೀ॥ಮಧ್ವರು "**ಸರಣಾತ್ ಸರ್ವಗತ್ವೇನ ಸರ್ವಜ್ಞೋ ವಾ ಸರೋ ಹರಿಃ। ಸರಸಃ ಸರತಿತ್ವಾದ್ವಾ ತದ್ವತ್ಯೇವ ಸರಸ್ವತೀ। ಹರೌ ಗುಣಾಃ ಸರಃ ಶಬ್ದಾಃ ದೇವೀ ತು ಹರಿ ವಾಚಿನೀ। ಹರಿಪ್ರಿಯತ್ವತೋ ವಾಯುಃ ಸರಸ್ವಾನ್ ತತ್ ಪ್ರಿಯಾ ಥವಾ।**" - ಸರಿದು ಬರುವುದರಿಂದ, ಸರ್ವವ್ಯಾಪಕನಾಗಿದ್ದು ಸರ್ವಜ್ಞನಾದ ಕಾರಣ '**ಸರಸ್**' ಎಂದರೆ ಹರಿಯೇ ಸರಿ. ಸರಿದು ಬರುವಿಕೆಯಿಂದಲೇ ಹರಿಯು 'ಸರಸ್' ಎನಿಸುತ್ತಾನೆ. ಆ ಸರಸ್ಸನ್ನು ಹೊಂದಿರುವಂತಹುದೇ ಸರಸ್ವತೀ. ಹರಿಯಗುಣಗಳೇ ಸರಸ್ಸುಗಳು. ಅವುಗಳನ್ನು ಬೆಳಕಿಗೆ ತರುವ ತತ್ವವೇ ಹರಿನಿರ್ದೇಶಕವಾದ ದೇವೀ. ಹರಿಪ್ರಿಯನಾದ ಕಾರಣ ವಾಯು ಸರಸ್ವಾನ್ ಎನಿಸುತ್ತಾನೆ. ಆ ವಾಯುಪತ್ನಿ ಭಾರತೀಯೇ *ಸರಸ್ವತೀ. ಗುಣಗಳಿಂದ ವ್ಯಾಪಕನಾಗಿರುವುದರಿಂದ ಭಗವಂತನೂ ಸರಸ್ವತಿಯೇ." - ಎಂದಿದ್ದಾರೆ ಮಹರ್ಷಿ ದಯಾನಂದರು. "ಸತ್ಯಾರ್ಥಪ್ರಕಾಶ"ದ ಪ್ರಥಮ ಸಮುಲ್ಲಾಸದಲ್ಲಿ, **ದೇವೀ, ಶಕ್ತಿ, ಶ್ರೀ, ಲಕ್ಷ್ಮಿ** - ಮೊದಲಾದ ಸ್ತ್ರೀ ವಾಚ್ಯ ಶಬ್ದಗಳೊಂದಿಗೆ, "**ಸರೋ ವಿವಿಧಜ್ಞಾನಂ ವಿದ್ಯತೇ ಯಸ್ಯಾಂ ಚಿತೌ ಸಾ ಸರಸ್ವತೀ**" - "ಯಾವ ಚಿಚ್ಛಕ್ತಿಯಲ್ಲಿ 'ಸರಸ್'ಗಳು

* ಜಡವಾಯುವಿಗೆ ಹೆಂಡತಿಯೇ? ವಾಯುವಿನ ಅಭಿಮಾನದೇವತೆ - ಎಂಬುದಕ್ಕೆ ಆಧಾರವಿಲ್ಲ. ಇನ್ನು ಭಾರತದೇವಿಗೆ ಎಡೆ ಎಲ್ಲಿ?

ವಿವಿಧ ಜ್ಞಾನಗಳು ಇರುತ್ತವೋ, ಅದೇ ಸರಸ್ವತೀ. ಇದರಿಂದ ಪರಮೇಶ್ವರನ ಹೆಸರು ಸರಸ್ವತೀ." - ಎಂದು ಹೇಳಿರುವುದನ್ನು ಸ್ಮರಿಸಬಹುದು. ಮುಂದಿನ ಹೆಜ್ಜೆಯಲ್ಲಿ ಶ್ರೀ॥ ಮಧ್ವರೂ, ಮಹರ್ಷಿ ದಯಾನಂದರೂ ಬೇರೆ - ಬೇರೆ ದಾರಿ ಹಿಡಿಯುತ್ತಾರೆ. ಮಹರ್ಷಿಗಳು, **"ಬ್ರಹ್ಮ ಚಿತಿರೀಶ್ವರಶ್ಚೇತಿ"** "ಬ್ರಹ್ಮ ನಪುಂಸಕವಾಚಕ, ಚಿತಿ ಸ್ತ್ರೀವಾಚಕ, ಈಶ್ವರ ಪುರುಷವಾಚಕ - ಹೀಗೆ ಮೂರು ಲಿಂಗಗಳಲ್ಲಿಯೂ ಪರಮೇಶ್ವರನ ಹೆಸರುಗಳಿವೆ." - ಎಂದು ಬರೆದಿದ್ದಾರೆ, ಶ್ರೀ॥ ಮಧ್ವರು **"ಸ್ತ್ರೀರೂಪಶ್ಚೈವ ಪುಂರೂಪೋ ಭಗವಾನ್ನ ನಪುಂಸಕಃ"** - "ಭಗವಂತ ಸ್ತ್ರೀರೂಪನೂ ಅಹುದು; ಪುರುಷರೂಪನು ಅಹುದು; ಆದರೆ – ಎಂದಿಗೂ ನಪುಂಸಕನಲ್ಲ." - ಎಂದು ಹೇಳಿದ್ದಾರೆ. "ಭಗವಂತ ಅಶರೀರ, ಆದರೆ, ವೈದಿಕೀ ವಾಣಿಯಲ್ಲಿಯೂ ಗೀರ್ವಾಣವಾಣಿಯಲ್ಲಿಯೂ ಶಬ್ದಗಳು ಯಾವಲಿಂಗದಲ್ಲಿರುತ್ತವೋ, ಅದೇ ಲಿಂಗದಲ್ಲಿ ವರ್ಣಿತವಾಗುತ್ತಾನೆ. ವಸ್ತುತಃ ಲಿಂಗಗಳು ದೇಹಗಳ ಲಕ್ಷಣವೇ ಹೊರತು, ಆತ್ಮನ ಲಕ್ಷಣಗಳಲ್ಲ." - ಎಂಬ ದೃಢವಾದ ಆಧಾರದ ಮೇಲೆ ಮಹರ್ಷಿಗಳು ದಿಟ್ಟತನದಿಂದ ಸಾರಿದರೆ, ಸಾಕಾರೇಶ್ವರವಾದಿಗಳಾದ, ಅದರಲ್ಲಿಯೂ **'ಧ್ಯೇಯಃ ಸದಾ ಸವಿತೃ ಮಂಡಲ ಮಧ್ಯವರ್ತೀ ನಾರಾಯಣಃ ಸರಸಿಜಾಸನ ಸನ್ನಿವಿಷ್ಟಃ। ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ ಹಾರಿ ಹಿರಣ್ಮಯವಪುರ್ಧೃತಶಂಖಚಕ್ರಃ॥'** - ಸೂರ್ಯ ಮಂಡಲದ ಮಧ್ಯವಿರುವ, ಬ್ರಹ್ಮನಲ್ಲಿ ಸನ್ನಿವಿಷ್ಟನಾದ ತೋಳು-ಬಳೆಗಳನ್ನುಳ್ಳ, ಮೀನಿನಾಕಾರದ ಓಲೆಗಳನ್ನು ಹಾಕಿಕೊಂಡ, ಕಿರೀಟಧಾರಿಯಾದ, ಮಾಲೆ ಧರಿಸಿದ, ಸ್ವರ್ಣಮಯದೇಹವನ್ನುಳ್ಳ, ಶಂಖಚಕ್ರಧಾರಿಯಾದ ನಾರಾಯಣನು ಸದಾ ಧ್ಯೇಯನಾಗಿರುತ್ತಾನೆ." - ಎಂಬ ಶ್ಲೋಕದಲ್ಲಿ ಕಂಡು ಬರುವ ಪುರುಷರೂಪನಾದ, ಹರಿಯನ್ನು ಹೃತ್ಪೂರ್ವಕ ನಂಬಿದ್ದ ಮಧ್ವಗುರುರಾಯರು, ಹರಿಯು ಸ್ತ್ರೀರೂಪನಾಗಿರುತ್ತಾನೆ'' - ಎಂದೊಪ್ಪಿಕೊಂಡುದೇ ಭಾರೀ ರಿಯಾಯಿತಿಯಾಗಿರುವಾಗ, "ನಪುಂಸಕರೂಪನೂ ಆಗಿರುತ್ತಾನೆ' - ಎಂದು ಸ್ವೀಕರಿಸಿದರೆ, ಆ ದೇವರು ಷಂಢ, ಶಿಖಂಡಿ - ಎಂದಹಾಗೆ ಆಗುತ್ತದಲ್ಲ! - ಎಂದು ಸ್ವಲ್ಪ ಹಿಂಜರಿದಿರಬೇಕು. ಆದರೂ, "ಬ್ರಹ್ಮ, ಶುಕ್ರ - ಎಂಬ ನಪುಂಸಕ ಲಿಂಗದಲ್ಲಿರುವ ಶಬ್ದಗಳು ಭಗವದ್ವಾಚ್ಯವೆಂದು ಸ್ಪಷ್ಟವಾಗಿಯೇ ಕಂಡು ಬರುತ್ತದಲ್ಲ!" ಎಂದು ಶಂಕಿಸಿದರೆ, **'ಸ್ತ್ರೀ - ಪುಂದೋಷ ವಿಹೀನತ್ವಾತ್ ಅಪಿ ತಚ್ಛಬ್ದಗೋಚರಃ'** - "ಸ್ತ್ರೀ - ಪುರುಷರಲ್ಲಿರುವ ದೋಷವಿಲ್ಲದ ಕಾರಣ, "ತತ್'' ಆದಿ ನಪುಂಸಕಲಿಂಗದಲ್ಲಿರುವ ಶಬ್ದಗಳಿಂದ ಶ್ರೀಹರಿ ವರ್ಣಿತನಾಗಿದ್ದರೂ, ಸ್ವತಃ ಶ್ರೀಹರಿ ನಪುಂಸಕನಲ್ಲ.'' - ಎಂದು ಸಮಾಧಾನ ಹೇಳಿದ್ದಾರೆ.

ಶ್ರೀ ॥ ಸಾಯಣರು ತಮ್ಮ ಭಾಷ್ಯದಲ್ಲಿ ಕೇವಲ ಸರಸ್ವತೀ ದೇವಿ–ಎಂದಿಷ್ಟೇ ಹೇಳಿ, ಸ್ವರೂಪಾಖ್ಯಾನವನ್ನೂ ಕೂಡ ಮಾಡದೆ, ಆ ದೇವಿಗೆ ವಿಶೇಷಣಗಳಾಗಿ ಬಂದಿರುವ **ಪಾವಕಾ, ವಾಜಿನೀವತೀ, ಧಿಯಾವಸುಃ** – ಈ ಶಬ್ದಗಳಿಗೆ ವ್ಯಾಖ್ಯಾನ ಮಾಡಿಕೊಂಡು ಹೋಗಿದ್ದಾರೆ. ಹೀಗಾಗಿ, ಅವರಿಂದ ಸರಸ್ವತಿಯ ವರ್ಣನೆಯನ್ನು ಅಥವಾ ಆ ಶಬ್ದದ ನಿರ್ವಚನವನ್ನು ನಿರೀಕ್ಷಿಸುವಂತಿಲ್ಲ.

ಇಲ್ಲಿ ಮಹರ್ಷಿ ದಯಾನಂದರ ದಿಟ್ಟತನದ, ನೆಟ್ಟದಿಟ್ಟಿಯ ಅಚ್ಚುಕಟ್ಟಾದ ಹಾಗೂ ಅಚ್ಚುಮೆಚ್ಚಿನ ಹೆಜ್ಜೆ ದರ್ಶನೀಯವಾಗಿವೆ. **"ಸರಸಃ ಪ್ರಶಂಸಿತಾ ಜ್ಞಾನಾದಯೋ ಗುಣಾ ವಿದ್ಯಂತೇ ಯಸ್ಯಾಂ, ಸಾ ಸರ್ವವಿದ್ಯಾಪ್ರಾಪಿಕಾ ವಾಕ್ ಸರಸ್ವತೀ; ವಾ ಸರಂತಿ ಪ್ರಾಪ್ನುವಂತಿ ಸರ್ವಾ ವಿದ್ಯಾ ಯೇನ, ತತ್ ಸರಃ; ಪ್ರಶಂಸಾ ಯಾಂ ಮತುಪ್."** ಎಂದರೆ, ಸರಸ್ಸುಗಳು, ಶ್ಲಾಘ್ಯವಾದ ಜ್ಞಾನಾದಿ ಗುಣಗಳು ಯಾವುದರಲ್ಲಿದೆಯೋ, ಆ ಸರ್ವವಿದ್ಯಾ ಪ್ರಾಪ್ತಿಮಾಡಿಸುವ ವಾಣಿಯೇ ಸರಸ್ವತೀ. ಅಥವಾ ಜನರು ಯಾವುದರಿಂದ ಸಕಲವಿದ್ಯೆಗಳನ್ನೂ ಪಡೆದುಕೊಳ್ಳುತ್ತಾರೋ, ಅದೇ 'ಸರಸ್'; ಪ್ರಶಂಸಾರ್ಥವಾಗಿ ಅದಕ್ಕೆ 'ಮತುಪ್' ಪ್ರತ್ಯಯ [ವತ್, ವತೀ, ವಾನ್, ಮತ್, ಮತೀ, ಮಾನ್-ಇವು] ಹಚ್ಚಿದರೆ, 'ಸರಸ್ವತೀ' ಶಬ್ದ ನಿಷ್ಪನ್ನವಾಗುತ್ತದೆ."–ಎಂದಿದ್ದಾರೆ. ತಾತ್ಪರ್ಯ **'ಜ್ಞಾನವತೀ ವಾಗೇವ ಸರಸ್ವತೀ'**-"ಜ್ಞಾನ-ವಿಜ್ಞಾನಮಯವಾದ ವಾಕ್ಕೇ ಸರಸ್ವತೀ."–ಎಂಬುದೇ ಆಗಿದೆ. ತಮ್ಮ ನಿಷ್ಕರ್ಷಕ್ಕೆ ಪೋಷಕವಾಗಿ **"ಸರಸ್ವತೀತಿ ವಾಙ್ನಾಮಸು ಪಠಿತಂ."** [ನಿಘಂಟು:- 1.11.] "ವಾಣಿಯ ಹೆಸರುಗಳಲ್ಲಿ ಸರಸ್ವತೀ-ಎಂಬುದೂ ಇದೆ." ಎಂಬ ಶಾಸ್ತ್ರಪ್ರಮಾಣವನ್ನು ಕೊಟ್ಟಿದ್ದಾರೆ.

ಮುಂದೆ ವಿವೇಚನೀಯವಾದ ಶಬ್ದ **'ವಾಜೇಭಿಃ'** ಎಂಬುದಾಗಿದೆ. ಈ ಶಬ್ದ **"ವಾಜಃ"**–ಎಂದು ಪುಂವಾಚಕವಾಗಿಯೂ, **'ವಾಜಂ'**–ಎಂದು ನಪುಂಸಕವಾಚಕವಾಗಿಯೂ ಬಳಸಲ್ಪಡುತ್ತದೆ. **'ವಾಜಃ'** - ಎಂದರೆ, ರೆಕ್ಕೆ, ಪುಕ್ಕ, ಕದನ, ಸಂಗರ, ಧ್ವನಿ–ಎಂಬರ್ಥಗಳನ್ನೂ, **'ವಾಜಂ'** - ಎಂದರೆ, ತುಪ್ಪ, ಪಿಂಡ, ಆಹಾರ, ಜಲ, ಮಂತ್ರ-ಎಂಬರ್ಥಗಳನ್ನೂ ಗ್ರಹಿಸಲಾಗುತ್ತದೆ ಶ್ರೀ॥ ಮಧ್ವರು ವಾಜ ಶಬ್ದವನ್ನು 'ಅನ್ನ' ಎಂಬರ್ಥದಲ್ಲಿ ಗ್ರಹಿಸಿ (ಅಶನವೆಂದಿದ್ದಾರೆ.), **"ಸರಸ್ವತೀ ಯಜ್ಞಂ ವಹತು ನೋಽಶನೈಃ"**-"ಸರಸ್ವತೀ ಅಥವಾ ಹರಿಯು, ಆಹಾರದಿಂದ ನಮ್ಮನ್ನು, ನಮ್ಮ ಯಜ್ಞವನ್ನು ನಿರ್ವಹಿಸಲಿ." ಎಂದು ಹೇಳಿದ್ದಾರೆ. ಶ್ರೀ ॥ ಸಾಯಣರು **'ವಾಜೇಭಿಃ'** ಎಂಬುದಕ್ಕೆ **"ಹವಿರ್ಲಕ್ಷಣೈರನ್ನೈರ್ನಿಮಿತ್ತಭೂತೈಃ ! ಯದ್ವಾ ಯಜಮಾನೇಭ್ಯೋ ದಾತವ್ಯೈರನ್ನೈರ್ನಿಮಿತ್ತಭೂತೈ.॥"** "ಹವಿಸ್ಸಿನ ಲಕ್ಷಣಗಳನ್ನುಳ್ಳ, ಕಾರಣಭೂತವಾದ ಅನ್ನಗಳಿಂದ ಅಥವಾ, ಯಜ್ಞಕರ್ತೃಗಳಿಗೆ ಕೊಡಬೇಕಾದ, ನಿಮಿತ್ತಭೂತವಾದ ಅನ್ನಗಳಿಂದ." ಎಂದು ವ್ಯಾಖ್ಯಾನ ಮಾಡಿದ್ದಾರೆ. ಮಹರ್ಷಿ ದಯಾನಂದರು **"ವಾಜೇಭಿಃ ಸರ್ವವಿದ್ಯಾ ಪ್ರಾಪ್ತಿನಿಮಿತ್ತೈಃ ಅನ್ನಾದಿಭಿಃ ಸಹ"** – ಎಂದರೆ - "ಸಕಲ ವಿದ್ಯಾರ್ಜನಕ್ಕೆ ಕಾರಣಗಳಾದ ಅನ್ನ-ಮೊದಲಾದುವುಗಳಿಂದ.' ಎಂದಿದ್ದಾರೆ. ಮೂವರು ಭಾಷ್ಯಕಾರರ ಭಾವನೆಗಳನ್ನೂ ಕ್ರೋಢೀಕರಿಸಿ ಹೇಳುವುದಾದರೆ, "ಸರಸ್ವತಿಯು, ಜ್ಞಾನಮಯೀ ವಾಣಿಯು ಅನ್ನಾದಿಗಳನ್ನು ಸಂಪಾದಿಸುವ ಸಾಮರ್ಥ್ಯವನ್ನು ನಮಗೆ ಸಲ್ಲಿಸಲಿ"-ಎಂದಾಗಲಿ, ಉಪವಾಸ ಮಾಡಿಕೊಂಡು, ಶರೀರದ ಅಂತಃಕರಣ-ಬಾಹ್ಯಕರಣಗಳನ್ನು ನಿಃಸತ್ತ್ವಗೊಳಿಸಿ, ಜ್ಞಾನವಾಣಿಯನ್ನು ಗ್ರಹಿಸಲಾಗದ ಕಾರಣ, ಅನ್ನಾದಿಗಳು ಜ್ಞಾನಮಯೀವಾಣಿಯ ಸಂಪಾದನಕ್ಕೆ ಕಾರಣಪ್ರಾಯವಾಗಿವೆ" – ಎಂದಾಗಲಿ ನಿರ್ಧರಿಸಬೇಕಾಗುವುದು. ಎರಡೂ ಕ್ರಮಗಳೂ ಬುದ್ಧಿಸಂಗತವೇ. "ಜ್ಞಾನಮಯೀವಾಣಿಯಿಂದ ಜೀವನಪೋಷಕವಾದ ಆಹಾರ-ಪಾನೀಯಗಳು ಪ್ರಾಪ್ತವಾಗುತ್ತವೆ; ಆಹಾರ-ಪಾನೀಯಗಳ

ಮೂಲಕ ಶಕ್ತಿ-ಸಂಪನ್ನವಾದ ಬಾಹ್ಯಾಭ್ಯಂತರ ಕರಣೋಪಕರಣಗಳಿಂದಲೇ ಜ್ಞಾನವಾಣಿ ಲಭಿಸೀತು.'' - ಎಂಬ ಅನ್ಯೋನ್ಯಾಶ್ರಯ ಸ್ಥಿತಿಯನ್ನು (state of inter dependence) ಒಪ್ಪಬೇಕಾಗುತ್ತದೆ. ಈ ಅನ್ಯೋನ್ಯಾಶ್ರಯವನ್ನು ದೋಷವೆಂದು ಗ್ರಹಿಸದೆ, ಅಪರಿಹಾರ್ಯ ಸ್ಥಿತಿಯೆಂದೇ ತಿಳಿಯಬೇಕು. ಈ ಅನ್ಯೋನ್ಯಾಶ್ರಯ ಮನಸ್ಸು-ದೇಹಗಳ ಅನ್ಯೋನ್ಯಾಶ್ರಯದಂತೆ, ಅಖಂಡನೀಯವಾದ ತಥ್ಯವೆಂದೇ ಅಂಗೀಕರಿಸಬೇಕು.

ಈ ವಾಜ ಶಬ್ದಕ್ಕೆ ಯಾಸ್ಕರು '**ವಾಜೀ ಅನ್ನೇ**' [4, 3. 33. 9] 'ವಾಜನಲ್ಲಿ ಎಂದರೆ ಅನ್ನದಲ್ಲಿ.'; '**ವಾಜೇಭಿರನ್ನೇಭಿಃ**' [5. 3. 26. 5.] - 'ವಾಜಗಳಿಂದ ಎಂದರೆ ಅನ್ನಗಳಿಂದ.'; '**ವಾಜಸಾತಯೇ ಅನ್ನಸಂಸನನಾಯ**' [6. 4. 45. 11.] 'ವಾಜ ಸಾತಿಗೆ' ಎಂದರೆ 'ಅನ್ನದಾನಕ್ಕೆ'; '**ವಾಜಿನಮನ್ನವಂತಂ.**' [4. 3. 28. 4.]- 'ವಾಜಿ' ಯನ್ನು ಎಂದರೆ 'ಅನ್ನವಂತನನ್ನು' - ಎಂದು, ಮುಖ್ಯಾರ್ಥ '**ಅನ್ನ**' ಎಂದೇ ಗ್ರಹಿಸಿದ್ದಾರೆ. ಆದರೂ, ನಾವು ಮೊನ್ನವರ್ಣಿಸಿರುವ, ಯುದ್ಧ, ಕದನ, ಸಂಘರ್ಷ ಎಂಬರ್ಥಗಳನ್ನೂ ಮರೆಯುವಂತಿಲ್ಲ. ಶ್ರೀ|| ಮಧ್ವರು '**ಅನ್ನವತ್ತ್ವಾದ್ವಾಜನೀ ವಾಕ್ ಜ್ಞಾನಯುದ್ಧತ್ವತೋऽಪಿವಾ**' "ಅನ್ನಯುಕ್ತವಾಗಿರುವುದರಿಂದ ವಾಕ್ಕನ್ನು ವಾಜಿನೀ ಎನ್ನುತ್ತಾರೆ. ಅಥವಾ ಜ್ಞಾನ - ಯುದ್ಧಕ್ಕೆ ಸಾಧನವಾದುದರಿಂದಲೂ ವಾಕ್ಕು ವಾಜಿನೀ ಎನಿಸುತ್ತದೆ." ಎಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ. ಭಾಷೆಯಿಲ್ಲದೆ, ಆಲೋಚನೆ, ವಿಚಾರ ಉದ್ಭವಿಸದು. ವಿಚಾರವಿಲ್ಲದೆ ಜ್ಞಾನ ಹುಟ್ಟದು. ಮತ್ತು ವಾದ - ವಿವಾದಗಳಿಲ್ಲದೆ, ಮನಸ್ಸು ಹಾಗೂ ಬುದ್ಧಿಯ ಸಂಘರ್ಷವಿಲ್ಲದೆ ಮನನ - ನಿದಿಧ್ಯಾಸನಗಳ ಬಳಕೆಯಿಲ್ಲದೆ, ನಿರ್ಮಲ ಜ್ಞಾನ ಉದ್ಭವಿಸದು. ಈ ಆಭ್ಯಂತರ ತುಮುಲ ಸಂಗ್ರಾಮವನ್ನೇ 'ಜ್ಞಾನಯುದ್ಧ' ಎನ್ನುತ್ತಾರೆ. 'ವಾಜ' ಶಬ್ದ ವೇದಸಂಹಿತೆಗಳಲ್ಲಿಯೂ 'ಯುದ್ಧ' ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. '**ವಾಜೇ ವಾಜೇऽವತ ವಾಜಿನೋ ನಃ**' [ಋಗ್ವೇದ:– 7. 38. 8.] - "ಅಮರ ಯಶಸ್ವಿಗಳೂ, ವೇದಾಭಿಜ್ಞರೂ ಆದ ವಿಪ್ರರೇ! ವಿಶಿಷ್ಟ ಪ್ರಜ್ಞರಾದ ಶಾಸ್ತ್ರ - ಶಾಸನಾಭಿಜ್ಞರೇ!" [ಉದ್ಧೃತ ಮಂತ್ರದ ಮುಂದಣ ಚರಣದಲ್ಲಿ '**ಧನೇಷು ವಿಪ್ರಾ ಅಮೃತಾ ಋತಜ್ಞಾಃ**'|| - ಎಂದಿದೆ.] ನಿರುಕ್ತಕಾರರು '**ವಿಪ್ರಾ ಮೇಧಾವಿನಃ**'; '**ವಿಪ್ರಾಣಾಂ ವ್ಯಾಪನ ಕರ್ಮಣಾಂ.**'; '**ವಿಪ್ರಾಸಃ ಮೇಧಾವಿನಃ.**' [ಕ್ರಮಶಃ– (1. 4. 18. 5.) (ಪರಿ:– 2. 13.) ಮತ್ತು (4. 2. 20. 7.] ತಾತ್ಪರ್ಯ:– 'ವಿಪ್ರರೆಂದರೆ ಮೇಧಾವಿಗಳು'; 'ವಿಪ್ರರ - ಎಂದರೆ ವ್ಯಾಪಕ ಕರ್ಮಕರ್ತಾರರ'; 'ವಿಪ್ರರುಗಳು ಮೇಧಾವಿಗಳು.' - ಎಂದಾಗುತ್ತದೆ. ಅಂತಹ ವಿಪ್ರರನ್ನು ಸಂಬೋಧಿಸಿ - "ಮೇಧಾವಿಗಳೇ! ಸಂಗ್ರಾಮ - ಸಂಗ್ರಾಮದಲ್ಲಿಯೂ ನಮ್ಮನ್ನು, ನಮ್ಮ ಸಂಪತ್ತುಗಳಲ್ಲಿ ನೆಲೆಗೊಳಿಸಿ ರಕ್ಷಿಸಿರಿ." - ಎಂದು ಆರಾಧಕರು ಕೇಳಿಕೊಳ್ಳುತ್ತಾರೆ. ಮಾತ್ರವಲ್ಲ; '**ಅಭ್ರಾತೃವ್ಯೋ ಅನಾತ್ವಮನಾಪಿರಿಂದ್ರ ಜನುಷಾ ಸನಾದಸಿ। ಯುಧೇದಾಪಿತ್ವಮಿಚ್ಛಸೇ॥** [ಋಗ್ವೇದ:– 8. 21. 13.] "ಓ ಸರ್ವೈಶ್ವರ್ಯವಾನ್ ಸರ್ವೇಶ್ವರ! ನೀನು ಶತ್ರುರಹಿತನು. ಅನ್ಯರ ನೇತೃತ್ವವಿಲ್ಲದ; ಸ್ವಯಂ ನಾಯಕನು. ಸಂಬಂಧಿ ಬಂಧವಿಹೀನನು. ಸ್ವರೂಪತಃ ಅನಾದಿ ಪ್ರಸಿದ್ಧನಾಗಿದ್ದೀಯೇ. ನೀನು

ಹೋರಾಟದ, ಜೀವನಸಂಘರ್ಷದ ಮೂಲಕವೇ ಜೀವರು ನಿನ್ನ ಬಂಧುಗಳಾಗುವುದನ್ನು ಬಯಸುತ್ತೀಯೆ.' – ಎಂದೂ ಶ್ರುತಿವಚನವಿದೆ. **ವಸ್ತುತಃ** ವಾಜವು ಸವಸದ್ವೃತ್ತಿಗಳ ತಿಕ್ಕಾಟದ ಹೆಸರೇ ಸರಿ. ಸದ್ವೃತ್ತಿಗಳನ್ನು ಗೆಲಿಸಿದಾಗ ಮಾತ್ರ, ಅಸದ್ವೃತ್ತಿಗಳನ್ನು ಕಡೆದು ರುಳಿಸಿದಾಗ ಮಾತ್ರ ಈ 'ವಾಜ', ಶ್ರೀ॥ ಮಧ್ವರೆಂದ '**ಜ್ಞಾನಯುಂದ್ಧತ್ವ**' ಹೃದಯಾಂಕಿತ ವಾಗುತ್ತದೆ.

ಮುಂದಿನ ಶಬ್ದ '**ವಾಜಿನೀವತೀ**' - ಎಂಬುದಾಗಿದೆ. ಮತುಪ್ ಪ್ರತ್ಯಯಾಂತ ವಾದ 'ವಾಜಿನೀ' ಶಬ್ದಕ್ಕೆ ನಿರುಕ್ತಕಾರರು - '**ವಾಜಿನೀವತಿ ಅನ್ನವತಿ**' – ಎಂದು ಹೇಳಿ [ದೈ. 6.1.6.] ವಾಜ, ವಾಜಿನೀ – ಎರಡೂ ಸಮಾನಾರ್ಥಕವೆಂದು ಭಾವಿಸಿದಂತಿದೆ. '**ವಾಜಿನೀವತಿ ! ಅನ್ನವತಿ !**' ಎಂದರೆ, ಬೇರೆ ಯಾವ ನಿಷ್ಕರ್ಷ ತಾನೇ ಸಾಧ್ಯ ? ಶ್ರೀ ॥ ಮಧ್ವರು – '**ಅನ್ನವತ್ತ್ವಾದ್ವಾಜಿನೀ ವಾಕ್.**' - "ಅನ್ನಯುಕ್ತತ್ವದಿಂದಾಗಿ, ವಾಜಿನೀ-ಎಂದರೆ ವಾಕ್-ಎಂದೇ ಅರ್ಥವೆಂದಿದ್ದಾರೆ. 'ವಾಜ' 'ಅನ್ನ' ವಾದರೆ, 'ವಾಜಿನ್' 'ಅನ್ನಯುಕ್ತವೇ ತಾನೇ ? ಅದರ ಸ್ತ್ರೀಲಿಂಗ ರೂಪ 'ವಾಜಿನೀ' ವಾಜಕ್ಕೂ ಮಧ್ವರೂ ಇದೇ ಅರ್ಥ ಹೇಳಿದ್ದಾರೆ.

ಈ ಬಗೆಯ ಅರ್ಥಗ್ರಹಣ ವೈದಿಕಸಾಹಿತ್ಯಕ್ಕೆ ಆಶ್ಚರ್ಯಕರವೇನೂ ಅಲ್ಲ. **"ಗಣಾನಾಂ ತ್ವಾ ಗಣಪತಿಂ ಹವಾಮಹೇ ಪ್ರಿಯಾಣಾಂ ತ್ವಾ ಪ್ರಿಯಪತಿಂ ಹವಾಮಹೇ। ನಿಧೀನಾಂ ತ್ವಾಂ ನಿಧಿಪತಿಂ ಹವಾಮಹೇ।"** [ಯಜು:- 23.19.] "ಓ ದೇವ! ಗಣಗಳಿಗೆ ಗಣಪತಿಯಾದ ನಿನ್ನನ್ನು, ಪ್ರಿಯರಿಗೆ ಪ್ರಿಯಪತಿಯಾದ ನಿನ್ನನ್ನು, ನಿಧಿಗಳಿಗೆ ನಿಧಿಪತಿಯಾದ ನಿನ್ನನ್ನು ಕರೆಯುತ್ತೇವೆ." ಈ ಯಾಜುಷೀ ಶ್ರುತಿ ಗಣಗಳ ಗಣಪತಿ, ಪ್ರಿಯರಿಗೆ ಪ್ರಿಯಪತಿ, ನಿಧಿಗಳಿಗೆ ನಿಧಿಪತಿ - ಎನ್ನುವಾಗ, "ಗಣ್ಯರಾದ ಜೀವರಿಗೆ ಗಣ್ಯನೇ ಆದ ಸ್ವಾಮಿ, ಪ್ರಿಯರಿಗೆ ಪ್ರಿಯನೇ ಆದ ಒಡೆಯ. ನಿಧಿಗಳಿಗೆ ನಿಧಿರೂಪನೇ ಆದ ರಕ್ಷಕ." ಎಂಬ ಮರ್ಮ ಸ್ವಗರ್ಭವನ್ನೇ ಮಂಡಿಸುವಂತೆ, '**ವಾಜೇಭಿಃ ವಾಜಿನೀವತೀ**'- ಎಂದಾಗ, ನಾವು ಅಧಿಕ ಗಾಂಭೀರ್ಯಕ್ಕೆ ಇಳಿಯಬೇಕಾದೀತು. 'ವಾಜವತೀ, ವಾಜಿನೀವತೀ'- ಎರಡೂ ಸಮಾನಾರ್ಥವಾಚಕವೇ - ಎಂದಾಗ, 'ಅನ್ನಗಳಿಂದ ಅನ್ನ ಯುಕ್ತವಾದುದು'-ಎಂಬ ಶಬ್ದ ಸಂಘಾತ. "ಅನ್ನಯುಕ್ತವಾದ, ಆರಾಧಕರಿಗೆ ಆಧ್ಯಾತ್ಮಿಕ ಭೋಜನವನ್ನು ಕರುಣಿಸುವ ವಾಣಿ" - ಎಂಬ ಭಾವನೆ ಗ್ರಾಹ್ಯವಾದೀತು.

ಸರಿ; ಆದರೆ, ಇನ್ನೂ ಆಳವಾದ, ಅರ್ಥಸಂಪತ್ತು ಸಿಕ್ಕಲಾರದೇ?" ಶ್ರೀ ॥ ಮಧ್ವ ಗುರುರಾಯರು '**ಅನ್ನದಾ ಹಿ ಸದಾ ದೇವಿ**' - 'ವಾಗ್ದೇವಿ ಸದಾ ಅನ್ನದಾತ್ರಿಯೇ'-ಎಂದು ಹೇಳಿ ತೃಪ್ತರಾದರು. ಶ್ರೀ॥ ಸಾಯಣರು, ಸ್ವಲ್ಪ ಮುಂದುವರಿದು, '**ವಾಜಿನೀವತೀ ಅನ್ನವತ್ಕ್ರಿಯಾವತೀ**'–"ವಾಜಿನೀವತಿಯೆಂದರೆ ಅನ್ನಯುಕ್ತ-ಕ್ರಿಯಾಯುಕ್ತವಾಣಿ ಎಂದಿದ್ದಾರೆ. ಮರಳಿ ಸಾಯಣರು - "**ವಾಜೋ ಅನ್ನಮಾಸ್ವಿತಿ ವಾಜಿನ್ಯಃ ಕ್ರಿಯಾ । ತಾ ಕ್ರಿಯಾ ಯಸ್ಯಾಃ ಸಂತೀತಿ ಸಾ ಸರಸ್ವತೀ ವಾಜಿನೀವತೀ.**' – "ಈ ಕರ್ಮಗಳಲ್ಲಿ ಅನ್ನವಿರುವ

ಕಾರಣದಿಂದ ಕ್ರಿಯೆಗಳನ್ನು ವಾಜಿನಿಗಳೆನ್ನುತ್ತಾರೆ. ಯಾವುದಕ್ಕೆ ಈ ಕ್ರಿಯಾ-ಸಂಬಂಧವಿದೆಯೋ, ಅದನ್ನು **'ಸರಸ್ವತೀ ವಾಜಿನೀವತೀ'** ಎನ್ನುತ್ತಾರೆ.' – ಎಂದು ಬರೆದು, ತಮ್ಮ ಹಾಗೂ ಮಹರ್ಷಿಗಳ ನಡುವಣ ಶತಮಾನಗಳ ಕಾಲದ ಅಂತರ ಸತ್ಯಕ್ಕೆ ವಿಕಾರ ತಂದಿಲ್ಲವೆಂದು ತೋರಿಸಿದ್ದಾರೆ. ಏಕೆಂದರೆ, ಮಹರ್ಷಿ ದಯಾನಂದರು ಕೂಡ **'ವಾಜಿನೀವತೀ'** ಎಂದರೆ, **'ಸರ್ವವಿದ್ಯಾಸಿದ್ಧಾ ಕ್ರಿಯಾ ವಾಜಿನೀ ತದ್ವತೀ ವಾಜಿನೀವತೀ'** - "ಸಕಲವಿದ್ಯೆಗಳಿಂದ ಸಿದ್ಧವಾಗುವ ಕ್ರಿಯೆಯೇ ವಾಜಿನೀ. ಆ ವಾಜಿನಿಯಿಂದ ಕೂಡಿದುದೇ ವಾಜಿನೀವತೀ,'' – ಎಂದಿದ್ದಾರೆ. ವಾಜಿನೀಶಬ್ದ ಕ್ರಿಯಾಸೂಚಕ. ಅನ್ನಜಲಾದಿಗಳಿಂದ ದೃಢವಾದ ಮೇಧಾಬಲದಿಂದ ಲಭಿಸುವ ಸದ್ವಿದ್ಯಾವಾಣಿಯೇ ಸರಸ್ವತೀ. ಆ ಜ್ಞಾನವಾಗ್ಬಲದಿಂದ ಸಾಧಿಸಲ್ಪಡುವ **ಕ್ರಿಯೆಯೇ ವಾಜಿನೀ.** ಅಂತಹ ಕ್ರಿಯೆಯಿಂದ ಯುಕ್ತವಾದುದೇ ವಾಜಿನೀವತೀ." - ಎಂದಿದ್ದಾರೆ ಮಹರ್ಷಿಗಳು. "ವಾಜವು ಅನ್ನವಾದರೆ, ಜಲವಾದರೆ, ಸಂಘರ್ಷವಾದರೆ, ಆ ಅನ್ನದಿಂದ, ಜಲದಿಂದ, ಆ ಸಂಘರ್ಷದಿಂದ ಉದಿಸುವ, ಸಮಸ್ತ ವಿದ್ಯಾ ಸ್ರೋತಸ್ಸಿನಿಂದ ಹೊರಬರುವ, ತದನುಕೂಲಕ್ರಿಯೆ ವಾಜಿನೀ. ಈ ಕ್ರಿಯೆಯಿಂದ ಕೂಡಿದುದೇ, ಸಕ್ರಿಯವಾದುದೇ **ವಾಜಿನೀವತೀ."** ಎನ್ನುತ್ತಾರೆ ಮಹರ್ಷಿ ದಯಾನಂದರು. ಮಂತ್ರದ ದೇವತೆ 'ಸರಸ್ವತಿ'ಯಾಗಿದ್ದು, ಹಿಂದೆಯೇ ಹೇಳಿರುವಂತೆ, **"ಸರಸ್ವತೀತಿ ವಾಕ್ ನಾಮಸು ಪಠಿತಂ"** [ನಿಘಂಟು:- 1.11.] "ಸರಸ್ವತೀ ಎನ್ನುವುದು ವಾಣಿಯ ಹೆಸರುಗಳಲ್ಲೊಂದು."–ಎಂಬುದನ್ನು ಸ್ಮರಿಸಿದಾಗ, ಜ್ಞಾನಮಯೀ ವಾಣಿಯಿಂದ ರೂಪಗೊಳ್ಳುವ, ಸರ್ವವಿದ್ಯಾ - ಸಿದ್ಧವಾದ ವ್ಯವಹಾರಗಳಿಂದ ಕೂಡಿದುದೇ ವಾಜಿನೀ – ಎಂಬ ವಿಷಯದಲ್ಲಿ ಸಂದೇಹ ಉಳಿಯದು. **'ಅನೇನ ವಾಜಿನೀತಿ ಗಮನಾರ್ಥಾ ಪ್ರಾಪ್ತ್ಯರ್ಥಾಚ ಕ್ರಿಯಾ ಗೃಹ್ಯತೇ.'** – "ಇದರಿಂದ, ವಾಜಿನೀ - ಎಂದರೆ, ಗತಿ ಹಾಗೂ ಪ್ರಾಪ್ತಿ ಎಂಬರ್ಥಗಳಿಂದ ಕೂಡಿದ ಕ್ರಿಯೆ ಗ್ರಾಹ್ಯವಾಗುತ್ತದೆ." - ಎಂದು ವಿವರಿಸಿದ್ದಾರೆ ಮಹರ್ಷಿ ದಯಾನಂದರು.

ಇನ್ನುಳಿದುದು **"ಯಜ್ಞಂ ವಷ್ಟು ಧಿಯಾವಸುಃ"** – ಎಂಬಂಶ ಮಾತ್ರ. ಶ್ರೀ ಮಧ್ವರು - **"ಯಜ್ಞಂ ವಹತು ನೋsಶನೈಃ"** - "ಅನ್ನಾದಿಗಳಿಂದ ಸರಸ್ವತೀ ನಮ್ಮ ಯಜ್ಞವನ್ನು ವಹಿಸಲಿ." ಎಂದು ಬರೆದಿದ್ದಾರೆ. ಯಜ್ಞಶಬ್ದಕ್ಕೆ ಬೇರೆ ಅರ್ಥವನ್ನು ಹೇಳಿಲ್ಲ, **'ಧಿಯಾವಸುಃ'** ಎಂಬ ಶಬ್ದಕ್ಕೆ – **"ಧಿಯಾ ಸಹ ವಸೇದ್ಯತಃ । ಧಿಯಾವಸುರ್ನಿತ್ಯಬೋಧಾ."** – "ಸರಸ್ವತೀ ಧೀಃ – ಎಂದರೆ ಬುದ್ಧಿಯೊಂದಿಗೇ ಇರುವುದರಿಂದ, ಆ ವಾಣಿ 'ಧಿಯಾವಸು.'; ಸದಾ ಜ್ಞಾನಮಯವಾಗಿರುವುದರಿಂದಲೂ ಸರಸ್ವತಿಯು ಧಿಯಾವಸು." – ಎಂದು ವಿಸ್ತರಿಸಿದ್ದಾರೆ. ಶ್ರೀ ॥ ಸಾಯಣರು ಯಜ್ಞಶಬ್ದದ ವ್ಯಾಖ್ಯಾನ ಮಾಡುತ್ತಾ - **"ಯಜ್ಞಂ ಯಜ, ಯಾಚಾದಿನಾ"** "ಹವಿರ್ದಾನ ಮಾಡು, ಪ್ರಾರ್ಥಿಸು-ಎಂಬರ್ಥಗಳನ್ನುಳ್ಳ ಧಾತುಜನ್ಯವಾದ 'ಯಜ್ಞ' ಆಹುತ್ಯರ್ಪಣ, ಭಗವತ್ಪ್ರಾರ್ಥನಾ-ಎಂದು ಮೊದಲಾದ ಅರ್ಥಗಳನ್ನೂ ಕೊಡುವ ಸತ್ಕರ್ಮ" – ಎಂದಿದ್ದಾರೆ. ಸರಸ್ವತಿಗೆ ವಿಶೇಷಣವಾಗಿ ಬಂದಿರುವ "ಧಿಯಾವಸುಃ" ಶಬ್ದಕ್ಕೆ ಸಾಯಣರು - **"ಧಿಯಾ ಕರ್ಮಣಾ ವಸು ಯಸ್ಯಾಃ ಸಕಾಶತ್ ಭವತಿ ಸಾ ಧಿಯಾವಸುಃ"**-"ಧೀಃ ಎಂದರೆ ಕರ್ಮದಿಂದ, ಯಾವುದರಿಂದ ಐಶ್ವರ್ಯ

ಲಭಿಸುವುದೋ, ಅದೇ ಧಿಯಾವಸು.'' ಎಂದಿದ್ದಾರೆ. ಜ್ಞಾನಮಯೀ ವಾಣಿಯಿಂದ, ಅನುಕೂಲ ಕರ್ಮಮಾಡುವುದರಿಂದ ಐಶ್ವರ್ಯ ಲಾಭವಾಗುವುದು ಶಾಶ್ವತ ಸತ್ಯ. ಆದುದರಿಂದ ಸರಸ್ವತೀ ಅಥವಾ ವಾಕ್ಕು ಧಿಯಾವಸು.'' ಎಂದು ಸಾಯಣರ ಭಾವನೆ. ಈ ನಿಲುವು. ಸಂಪೂರ್ಣಾರ್ಥಪ್ರದರ್ಶಕವಲ್ಲದಿದ್ದರೂ, ಜ್ಞಾನಾಭಿಲಾಷಿಗಳಿಗೆ ಪಥಪ್ರದರ್ಶನ ಮಾಡಲು ಸಮರ್ಥವಾಗಿದೆ. **"ವಷ್ಟು"** ಕ್ರಿಯೆಗೆ ಸಾಯಣರು 'ವಶ ಕಾಂತೌ; ಕಾಂತಿರಭಿಲಾಷಃ' - ಎಂಬ ಪ್ರಮಾಣದಿಂದ, **"ವಷ್ಟು ಕಾಮಯತಾಂ; ಕಾಮಯಿತ್ವಾಚ ನಿರ್ವಹತ್ವಿತ್ಯರ್ಥಃ''**-"ವಷ್ಟು - ಎಂದರೆ, ಕಾಮಿಸಲಿ. ಬಯಸಿ ನಿರ್ವಹಿಸಲಿ - ಎಂದರ್ಥ'' - ಎಂದಿದ್ದಾರೆ.

ಈಗ, ಮಹರ್ಷಿದಯಾನಂದರ ಆರ್ಷದೃಷ್ಟಿಯ ಗಾಂಭೀರ್ಯವನ್ನು ಅವಲೋಕಿಸೋಣ. **'ಧಿಯಾವಸುಃ ಯಜ್ಞಂ ವಷ್ಟು.'** - ಈ ಶಬ್ದಗಳ ಭಾಷ್ಯ ಮಾತ್ರ ಉಳಿದಿದೆ· ಮಹರ್ಷಿಗಳು ಹೇಳುತ್ತಾರೆ:– **'ಶುದ್ಧ ಕರ್ಮಣಾ ಸಹ ವಾಸ ಪ್ರಾಪಿಕಾ ಧಿಯಾವಸುಃ.'** - **'ಪವಿತ್ರಕರ್ಮದೊಂದಿಗೆ ವಾಸ ಮಾಡುವ ಸೌಗಮ್ಯವನ್ನುಂಟುಮಾಡುವಂತಹುದೇ ಧಿಯಾವಸು'** ಮಂತ್ರದ ದೇವತೆ 'ವಾಕ್' ಎಂಬರ್ಥವನ್ನು ಹೊಂದಿರುವ ಸರಸ್ವತಿಯೇ ಆದಕಾರಣ, ಈ ಧಿಯಾವಸು ವಾಕ್ಕಿನ ವಿಶೇಷಣವೇ ಸರಿ. ಜ್ಞಾನಮಯೀ ವಾಣಿಯ ಪ್ರಭಾವವೆಷ್ಟೆಂದು ಹೇಳೋಣ? ಯಾಸ್ಕರು **'ಧಿಯಾವಸುಃ'** - ಎಂದರೆ **'ಕರ್ಮವಸುಃ'** [5. 3. 26. 5.] **'ಧಿಯಾ ಕರ್ಮಣಾ ವಸತಿ, ವಾಸಯತಿ ವಾ'** - ಎಂದರೆ - 'ಶುಭಕರ್ಮದೊಂದಿಗೆ ಸ್ವತಃ ವಾಸಿಸುವ, ಅಥವಾ ಅನ್ಯರಿಗೆ ವಾಸಮಾಡಿಸುವ ವಾಣಿಯೇ ಧಿಯಾವಸು' - ಎಂದೂ ಬಿಡಿಸಬಹುದು; **'ಧಿಯಃ ಪ್ರಜ್ಞಾನಾನಿ.'** [5. 3. 27. 6] ಎಂಬ ಯಾಸ್ಕೋಕ್ತಿಯನ್ನು ಗ್ರಹಿಸಿ - **"ಧಿಯಾವಸುಃ** ಎಂದರೆ **'ಧೀಭಿಃ ಪ್ರಜ್ಞಾನೈಃ ಸ್ವಯಂ ವಸತಿ, ವಾ ಸಯತಿವಾಽನ್ಯಾನಿತಿ ಧಿಯಾವಸುಃ"** ಎಂದರೆ, "ಪ್ರಜ್ಞಾನಗಳಿಂದ ಸ್ವತಃ ವಾಸಮಾಡುವಂತಹುದು. ಅಥವಾ ಅನ್ಯರನ್ನು ವಾಸಗೊಳಿಸುವಂತಹುದು ಧಿಯಾವಸು" - ಎಂದಾದರೂ ವಿಶ್ಲೇಷಿಸಬಹುದು. ಸರಸ್ವತಿಯು, ಜ್ಞಾನವತೀ ವಾಣಿಯ ಗರಿಮೆ, ಗೌರವ, ವಸ್ತುತಃ ಅನುಪಮವಾದ ಈಶ್ವರೀಯ ವರದಾನ. ವಾಣಿ ಟೊಳ್ಳುದನಿಗಳ, ಪೊಳ್ಳುಸದ್ದುಗಳ, ಜಳ್ಳು ಸ್ವನಗಳ ಹೆಸರಲ್ಲ. ಭರ್ತೃಹರಿಯು - **'ಕೇಯೂರಾ ನ ವಿಭೂಷಯಂತಿ ಪುರುಷಂ ಹಾರಾ ನ ಚಂದ್ರೋಜ್ಜ್ವಲಾ, ವಿಲೇಪನಂ ನ ಕುಸುಮಂ ನಾಲಂಕೃತಾ ಮೂರ್ಧಜಾಃ। ವಾಣ್ಯೇಕಾ ಸಮಲಂಕರೋತಿ ಪುರುಷಂ ಯಾ ಸಂಸ್ಕೃತಾ ಧಾರ್ಯತೇ, ಕ್ಷೀಯಂತೇಽಖಿಲಭೂಷಣಾನಿ ಸತತಂ ವಾಗ್ಭೂಷಣಂ ಭೂಷಣಂ॥'** - 'ಮಾನವನನ್ನು ತೋಳುಬಳೆಗಳು ಸಿಂಗರಿಸವು; ಶುಭ್ರಬೆಳದಿಂಗಳಂತೆ, ಅಥವಾ ಪೂರ್ಣಚಂದ್ರನಂತೆ ಥಳಥಳಿಸುವ ಹಾರಗಳೂ ಅಲಂಕರಿಸವು; ಸ್ನಾನವೂ ಶೋಭೆತಾರದು; ಚಂದನಾನು ಲೇಪನವೂ ಸೌಂದರ್ಯ ಮೂಡಿಸದು; ಹೂವೂ ಚೆಂದವಾಗಿಸದು; ಸಿಂಗರಿಸಲ್ಪಟ್ಟ ತಲೆಗೂದಲುಗಳೂ ಶೃಂಗಾರತಾರವು: ಸುಸಂಸ್ಕೃತವಾದ, ಅಚ್ಚು - ಕಟ್ಟಾಗಿ ವ್ಯವಹೃತವಾಗುವ ವಾಣಿಯೊಂದು ಮಾತ್ರ, ಒಳಿತಾಗಿ, ಒಳಿತಿಗಾಗಿ, ಪುರುಷನನ್ನು ಸಿಂಗರಿಸುತ್ತದೆ. ಬೇರೆ ಒಡವೆಗಳೆಲ್ಲಾ ನಶಿಸಿ ಹೋಗುತ್ತವೆ; ಆದರೆ - ವಾಗ್ಭೂಷಣ ಮಾತ್ರ ಸದಾ ನಿಜವಾದ ಭೂಷಣವಾಗಿ ವಿರಾಜಿಸುವುದು." ಎಂದು ಹಾಡಿ

ದಾಗ, ತ್ಯಕ್ತಸರ್ವಸ್ವನಾದ, ಮಹಾನ್ ರಾಜನೇ ಆದರೂ, ಅಕಿಂಚನನಾದ ಶ್ರೀ ಸಾಮಾನ್ಯ ನಂತೆಯೇ ಬಾಳಿದ ಆ ಕವಿ ಭಾವೋದ್ವೇಗದಿಂದ ಒಂದೇ ಒಂದು ಅಕ್ಷರವನ್ನೂ ಕೂಡ ಬರೆಯಲಿಲ್ಲ. ಸ್ವಯಂ ಋಕ್ಸಂಹಿತೆಯೇ **"ಭದ್ರೈಷಾಂ ಲಕ್ಷ್ಮೀ ರ್ನಿಹಿತಾಧಿ ವಾಚಿ."** [10.71.2.] - "ಈ ಮಾನವನ ಕಲ್ಯಾಣಕಾರಿಣೀ ಸಂಪತ್ತು ವಾಣಿಯಲ್ಲಿಯೇ ಅಡಗಿದೆ." - ಎನ್ನುತ್ತಿದೆ. **'ಯದ್ವದಾಮಿ ಮಧುಮತ್ತದ್ವದಾಮಿ.'** [ಅಥರ್ವ:- 12.5.58.] - 'ಏನನ್ನೂ ಮಾತನಾಡುವೆನೋ, ಅದೆಲ್ಲವನ್ನೂ ಮಧುರ-ಮಧುರವಾಗಿಯೇ ಮಾತನಾಡು ವೆನು .' - ಎಂಬ ಸಾಂಕಲ್ಪಿಕ ಅಥರ್ವಣೀ ಶ್ರುತಿಯೂ ಗಮನಾರ್ಹವೇ ಆಗಿದೆ.

ಪ್ರಶಂಸನೀಯವಾದ ಪ್ರಜ್ಞಾಕರ್ಮಗಳಿಂದ ಮಾನವಮಾತ್ರರ ಮೋಹಕ-ಮುಖ ಮಂಡಲಕ್ಕೆ ಮಧುರಮಹಿಮೆಯನ್ನೊಡಮೂಡಿಸುವ ಧಿಯಾವಸು ಸರಸ್ವತೀ ಮಾನವ ಜನ್ಮಕ್ಕೆ ಮತ್ತಾವ ಮೆರಗನ್ನು ಹೊಸೆಯುವುದೆಂದು ಹೇಳಿದರೆ, ವ್ಯಾಖ್ಯಾತವಾಗುತ್ತಿರುವ ಮಂತ್ರ ಉತ್ತರಿಸುತ್ತಿದೆ:- **'ಯಜ್ಞಂ ವಷ್ಟು.'** - ಎಂದು.

ಯಜ್ಞದ ಬಹುಮುಖೀ ವರ್ಣನೆಯನ್ನು ಓದುಗರೀವರೆಗೆ ಅಲ್ಲಲ್ಲಿ ಓದಿಕೊಂಡೇ ಬಂದಿದ್ದಾರೆ. ಶತಪಥದಲ್ಲಿ ನಾವು - **'ಯಜ್ಞೋ ವೈ ಮಹಿಮಾ.'** [6. 2. 3. 18.] **'ಯಜ್ಞೋ ವೈ ಕರ್ಮ.'** [1, 1. 2. 1.] - ಯಜ್ಞವೆಂದರೆ ಮಹಿಮೆ.; ಯಜ್ಞವೆಂದರೆ ದಿಟವಾಗಿಯೂ ಕರ್ಮ. - ಈ ಎರಡು ವಿಶೇಷಾರ್ಥಗಳನ್ನೋದುತ್ತೇವೆ. ಕೇವಲ 'ಹಿರಿಮೆ ಕೆಲಸ - ಇವೇ ಯಜ್ಞ - ಎಂಬ ಮೇಲೆ ಮೇಲೆ ತೇಲಾಡುವ, ತೂಕವಿಲ್ಲದ ಭಾವನೆಯಿಂದ ವೇದದ ಗಾಂಭೀರ್ಯ - ಗೌರವ ಹೃದ್ಗತವಾಗದು. ಹಿರಿಮೆ, ದೊಡ್ಡಸ್ತಿಕೆ, ಮಹತ್ತ್ವ, ಮಹಿಮೆ ಅಡಗಿರುವುದು ಧನ - ಧಾನ್ಯಗಳಲ್ಲಿ ಅಲ್ಲ; ಚಿನ್ನ - ಬೆಳ್ಳಿ - ವಜ್ರ - ವೈಡೂರ್ಯ ಗಳಲ್ಲಿಯೂ ಅಲ್ಲ; ಮನೆ - ಮಠಗಳಲ್ಲಿ - ಭೂಮಿ - ಕಾಣೆಗಳಲ್ಲಿಯೂ ಅಲ್ಲ; ಆದರೆ, ಅದು ಅಡಗಿರುವುದು ಆತ್ಮನ ಹಿರಿತನದಲ್ಲಿ; ಆತ್ಮವೈಶಾಲ್ಯದಲ್ಲಿ. ಯಾವುದೇ ಭೌತಿಕ - ಸಂಪತ್ತು ಆತ್ಮನ ಅಭ್ಯುತ್ಥಾನಕ್ಕೆ ನೆರವಾಗದು; ಅದು ನೆರವಾಗುವುದಕ್ಕಿಂತ ಹೆಚ್ಚು ಎರವಾಗುವ ಸಂಭ ವವೇ ಇರುತ್ತದೆ. ಹಾಗಾದರೆ, ಮಹಿಮೆ ಮಾನವ ಜೀವನಕ್ಕೆ ಇಳಿದು ಬರುವುದು ಏತರಿಂದ? ಯಾಜುಷೀ ಶ್ರುತಿ ಹೀಗಿದೆ:-

**'ಸ್ವಯಂ ಯಜಸ್ವ ಸ್ವಯಂ ಜುಷಸ್ವ। ಮಹಿಮಾ ತೇಽನ್ಯೇನ ನ ಸನ್ನಶೇ॥'** [23. 15] 'ಸ್ವತಃ ಯಜ್ಞ ಮಾಡು. ಸ್ವತಃ ಹರ್ಷಿತನಾಗು. ಅನ್ಯರಿಂದ ನಿನಗೆ ಮಹಿಮೆ ಲಭಿಸದು. ಅಹುದು; ಆತ್ಮ ವಿಕಾಸ ಕೇವಲ ಯಜ್ಞದಿಂದ ಮಾತ್ರ ಲಭ್ಯ. ಅದೇ ಕಾರಣ ದಿಂದ ಮತ್ತೆ ಯಜುರ್ವೇದದಲ್ಲಿ ಓದುತ್ತೇವೆ:-

**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್।**
**ತೇಹ ನಾಕಂ ಮಹಿಮಾನಃ ಸ ಚಂತೇ ಯತ್ರ ಪೂರ್ವೇ ಸಾಧ್ಯಾಸಂತಿ ದೇವಾಃ॥**

[ಯಜು:- 31. 16.]

"[ದೇವಾಃ] ಶುಭಗುಣ - ಶುಭಕರ್ಮ - ಶುಭಸ್ವಭಾವ - ಶುಭಜ್ಞಾನಸಂಯುಕ್ತರಾದ, ವಿದ್ವತ್ಪ್ರವರರು, [ಯಜ್ಞೇನ] ಯಜ್ಞದಿಂದ, [ಯಜ್ಞಂ] ಪೂಜನೀಯನಾದ ಭಗವಂತನನ್ನು [ಅಯಜಂತ] ಆರಾಧಿಸುತ್ತಾರೆ. [ತಾನಿ] ಆ '**ಯಜ್ಞ**' **ವೆಂಬ ಸಾಧನ, ಆ ಪೂಜನೀಯನಾದ ಭಗವಂತ** ಹಾಗೂ **ಆ ಆರಾಧನಾ ಕ್ರಿಯೆ** – ಈ ಮೂರು ಕೂಡ, ಅಥವಾ **ಯಜ್ಞವಿಧಾನ, ಆರಾಧಕ ಜ್ಞಾನಿಗಳು** ಹಾಗೂ **ಪೂಜನೀಯ ಪರಮಾತ್ಮ** - ಈ ಮೂರು, ಇಲ್ಲವೇ, ಯಜ ಧಾತುವಿನಿಂದ ಸೂಚಿತವಾಗುವ **ದೇವಪೂಜಾ, ಸಂಗತಿಕರಣ** ಹಾಗೂ **ದಾನ** - ಎಂಬ ಮೂರು ತತ್ತ್ವಗಳೂ [ಪ್ರಥಮಾನಿ ಧರ್ಮಾಣಿ] ಆದ್ಯ ಹಾಗೂ ವಿಶಾಲ ಧಾರಕತತ್ತ್ವಗಳು, [ಆಸನ್] ಆಗಿರುತ್ತವೆ. [ಹ] ನಿಜವಾಗಿ, [ತೇ ಮಹಿಮಾನಃ] ಆ ಮಹಿಮಾವಂತರಾದ ಉಪಾಸಕರು, [ಯತ್ರ] ಎಲ್ಲಿ, [ಪೂರ್ವೇ] ಪೂರ್ವಜರೂ, ಅಗ್ರಗಾಮಿಗಳೂ ಆದ, [ಸಾಧ್ಯಾಃ ದೇವಾಃ] ಸಾಧಕರಾದ ವಿದ್ವಜ್ಜನರು [ಸಂತಿ] ಇರುತ್ತಾರೋ, [ನಾಕಂ=ನ+ಅ+ಕಂ=ಅಕಂ ನ] **ಆ ಅಸುಖದ ಇರುವಿಕೆಯಿಲ್ಲದ ಸ್ಥಿತಿಯನ್ನು** * ಸುಖರಹಿತವಲ್ಲದ ದಶಾವಿಶೇಷವನ್ನು, ದುಃಖವಿಲ್ಲದ ಅವಸ್ಥೆಯನ್ನು, [ಸಚಂತೇ] ಪಡೆದುಕೊಳ್ಳುತ್ತಾರೆ." ನಾವು ಸೂಚಿಸಿರುವ ಮೂರು ವಿಕಲ್ಪಗಳಲ್ಲಿ (ದಯೆಯಿಟ್ಟು ಪಾತಂಜಲಸೂತ್ರೋಕ್ತ ವಿಕಲ್ಪವೃತ್ತಿಯನ್ನು ಗ್ರಹಿಸಬೇಡಿರಿ; ಆಂಗ್ಲಭಾಷೆಯಲ್ಲಿ 'option' ಎಂದು ನಿರ್ದೇಶಿಸಿರುವ, ಇಚ್ಛಾನುಕೂಲವಾದ ತತ್ತ್ವವನ್ನು ಮಾತ್ರ ಗ್ರಹಿಸಿರಿ.) ಯಾವುದನ್ನೇ ಬೇಕಾದರೂ ಗ್ರಹಿಸಿರಿ. ತಾತ್ಪರ್ಯದಲ್ಲಿ ವ್ಯತ್ಯಾಸಬಾರದು. ಯಜ್ಞದ್ವಾರಾ ಭಗವದುಪಾಸನೆ ಮಾಡುವವರು ಮಹಿಮಾವಂತರಾಗುತ್ತಾರೆ. ಆಕಾಂಕ್ಷೆಯನ್ನು, ವಿವಕ್ಷೆಯನ್ನು (ಹೇಳಬಯಸುವ ಗುರಿಯನ್ನು) ಗಮನಿಸಿ, ತಾದಾತ್ಮ್ಯಭಾವ ಪ್ರಯೋಗದಿಂದ 'ಯಜ್ಞಕರ್ತನೇ ಮಹಿಮಾವಾನ್' - ಎನ್ನುವುದಕ್ಕೆ ಪ್ರತಿಯಾಗಿ 'ಯಜ್ಞವೇ ಮಹಿಮೆ' - ಎಂದಿದ್ದಾರೆ. ಕರ್ಮದ ವಿಷಯವನ್ನೂ ಹೀಗೆಯೇ ಗ್ರಹಿಸಿರಿ. ಮಹರ್ಷಿ ಕಣಾದರೇನೋ **ಉತ್ಕ್ಷೇಪಣಮವಕ್ಷೇಪಣ ಮಾಕುಂಚನಂಪ್ರಸಾರಣಂಗಮನಮಿತಿ ಕರ್ಮಾಣಿ."** [ವೈಶೇಷಿಕ:- 1.1.5.] - "ಮೇಲೇರುವುದು, ಏರಿಸುವುದು, ಕೆಳಕ್ಕಿಳಿಯುವುದು, ಇಳಿಸುವುದು, ಚಿಕ್ಕದಾಗುವುದು, ಆಗಿಸುವುದು, ಹರಡುವುದು, ಹರಡಿಸುವುದು, ನಡೆಯುವುದು, ನಡೆಸುವುದು." -ಎಂದು ಮೌಲಿಕ ಕರ್ಮಗಳನ್ನು ಎಣಿಸಿದ್ದರೂ. ಒಂದೊಂದರಲ್ಲಿಯೂ ಭೌತಿಕವಾಗಿಯೂ, ಆಧ್ಯಾತ್ಮಿಕವಾಗಿಯೂ ಅದೆಷ್ಟೆಷ್ಟೋ ಕರ್ಮಗಳು ಹುದುಗಿರುತ್ತವೆ. ಲೆಕ್ಕ ಹಾಕಿ. "ಇವೆಷ್ಟೋ, ಅಷ್ಟೇ ಕರ್ಮಗಳು"-ಎಂಬ ಧೀರ ಈವರೆಗೇನೋ ಹುಟ್ಟಿಲ್ಲ; ಮುಂದೆ ಹುಟ್ಟಿಬರುವ ಸಂಭವವೂ ಇಲ್ಲ.

ಅಹುದು; ಕರ್ಮದ ಮಟ್ಟಿಗೆ ಎಲ್ಲವೂ ಕರ್ಮವೇ. ಆದರೆ, ಕರ್ಮ ಯಜ್ಞೀಯವಾದಾಗ ಮಾತ್ರ, ಅದು 'ಅತ್ತ ನೋಡಿ. ಕರ್ಮವೆಂದರೆ ಅದೇ ಸರಿ.' - ಎಂಬ ಶ್ಲಾಘನೆಗೆ ಪಾತ್ರವಾದೀತು. ಶತಪಥಕಾರರು '**ಯಜ್ಞೋ ವೈ ಕರ್ಮ**' - ಎಂದಾಗ, ಅವರ ಗಂಭೀರ ಹೃದಯಸಾಗರದಲ್ಲಿ ತೆರೆಮಸುಗುತ್ತಿದ್ದುದು ಇದೇ ಯಜ್ಞೀಯ ಭಾವನೆ. "ಕರ್ಮವೆಲ್ಲಾ ಯಜ್ಞವಲ್ಲ; ಆದರೆ, ಯಜ್ಞೀಯ ಕರ್ಮ ಮಾತ್ರ. ಮಾನವತ್ವ ವಿಕಾಸಕ್ಕೆ ದೇವತ್ವ ನಿವಾಸಕ್ಕೆ ಎಡೆ

* ಅಕಂ=ಅಸುಖವು (ಸುಖರಾಹಿತ್ಯ=ದುಃಖ.) ನ=ಇಲ್ಲ-ಎಂಬ ಸ್ಥಿತಿ.

ಮಾಡಿಕೊಡುವ ಕರ್ಮ" - ಎಂಬ ಆರ್ಷಭಾವನೆ ಅರ್ಥವಾದಾಗ, ಯಜ್ಞಕ್ಕೆ ಕರ್ಮದ ತಾದಾತ್ಮ್ಯಭಾವ ಸಲ್ಲುವುದು ಹೇಗೆ - ಎಂಬಂಶವೂ ಹೃದ್ಗತವಾದೀತು. ಮಹರ್ಷಿ ದಯಾನಂದರು ಈ ಗುಟ್ಟನ್ನರಿತರು. **"ಯಜ್ಞಂ ಶಿಲ್ಪ ವಿದ್ಯಾಮಹಿಮಾನಂ ಕರ್ಮ ಚ."** - "ಯಜ್ಞವನ್ನು ಎಂದರೆ ಶಿಲ್ಪವಿದ್ಯಾಮಹಿಮೆಯನ್ನೂ, ತತ್ಸಾಧಕ ಕರ್ಮವನ್ನೂ ಕೂಡ." ಎಂದು ಬರೆದರು. **"ವಷ್ಟು"** - ಎಂಬುದೇ ಅಂತಿಮ ಶಬ್ದ. ಅದಕ್ಕೆ ಮಹರ್ಷಿಗಳು **'ಕಾಮಸಿದ್ಧಿಪ್ರಕಾಶಿಕಾ ಭವತು.'** - "ಅಭೀಷ್ಟವನ್ನು ಸಿದ್ಧಪಡಿಸಿ, ಅದನ್ನು ಪ್ರಕಾಶಗೊಳಿಸುವಂತಾಗಲಿ." - ಎಂದು ಭಾಷ್ಯ ಬರೆದಿದ್ದಾರೆ. ಈ ನಿಲುವಿನ ಮೇಲೆ ಆಕ್ಷೇಪವೆತ್ತುವ ಧೀರ ಯಾವನೂ ಕಾಣಿಸನು.

ಒಟ್ಟಿನಲ್ಲಿ ಜ್ಞಾನಮಯೀ ವಾಣಿ ನಮ್ಮನ್ನೆಲ್ಲಾ ಪಾವನಗೊಳಿಸಿ, ಅನ್ನಾದಿಗಳಿಂದ, ಸಮೃದ್ಧರನ್ನಾಗಿಸಿ, ಅದರಿಂದ ಲಭಿಸುವ ಬಾಹ್ಯಾಭ್ಯಂತರ ಸಾಮಾರ್ಥ್ಯಗಳಿಂದ, ಸರ್ವಸ್ವ ವಿದ್ಯಾಸಂಪಾದನೆಯಿಂದ ಅದಕ್ಕನುಗುಣವಾದ ಕ್ರಿಯೆಗಳಿಂದ ಯುಕ್ತವಾಗಿ, ಪ್ರಜ್ಞಾಕರ್ಮಗಳಿಂದ ಎಲ್ಲರನ್ನೂ ಜೀವಿತದಲ್ಲಿ ನೆಲೆಗೊಳಿಸಿ, ಮಾನವತ್ವದ ಮಾಹಾತ್ಮ್ಯವನ್ನೂ ಮಾನವೋಚಿತ ಕರ್ಮಸಮುಚ್ಚಯವನ್ನೂ ಬೆಳಕಿಗೆ ತರಲಿ." - ಎನ್ನುತ್ತಿದೆ ಈ ಋಕ್ಕು.

ಮುಂದಿನ ಎರಡು ಮಂತ್ರಗಳೂ ಸರಸ್ವತೀ ದೇವತಾಕಗಳೇ ಆಗಿರುವುದರಿಂದ ಮುಂದಿನ ಮಂತ್ರದಲ್ಲಿಯೂ 'ಯಜ್ಞ' ಶಬ್ದವಿರುವುದರಿಂದ, ಓದುಗರು ಯಜ್ಞದ ಮೇಲೆ ಮತ್ತಷ್ಟು ಪ್ರಕಾಶವನ್ನು ಕಾಣುವರು.

**ಸಂಹಿತಾ ವಿಭಾಗ**

**ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಂ ।**

**ಯಜ್ಞಂ ದಧೇ ಸರಸ್ವತೀ ॥೧೧॥**

**ಪದಪಾಠ:-** ಚೋದಯಿತ್ರೀ, ಸೂನೃತಾನಾಂ, ಚೇತಂತೀ, ಸುಮತೀನಾಂ, ಯಜ್ಞಂ, ದಧೇ, ಸರಸ್ವತೀ ॥೧೧॥

**ಅನ್ವಯ:-** ಸೂನೃತಾನಾಂ ಚೋದಯಿತ್ರೀ, ಸುಮತೀನಾಂ ಚೇತಂತೀ, ಸರಸ್ವತೀ ಯಜ್ಞಂ ದಧೇ॥

**ಶಬ್ದಾರ್ಥ:-** [ಸೂನೃತಾನಾಂ] ಅನೃತಧ್ವಂಸಿಗಳಾದ ಸತ್ಯವಂತರನ್ನು, [ಚೋದಯಿತ್ರೀ] ಹುರಿದುಂಬಿಸುವಂತಹುದೂ, [ಸುಮತೀನಾಂ] ಸದ್ಬುದ್ಧಿಯುಳ್ಳಜನರನ್ನು, [ಚೇತಂತಿ] ಎಚ್ಚರಿಸುವಂತಹುದೂ ಆದ, [ಸರಸ್ವತೀ] ಜ್ಞಾಮಯಿವಾಣಿ, [ಯಜ್ಞಂ] ಶ್ರೇಷ್ಠತಮಕರ್ಮವನ್ನು, [ದಧೇ] ಧರಿಸುತ್ತದೆ.

**ತಾತ್ಪರ್ಯ:**– ಸತ್ಯಜ್ಞಾನ - ವಿಜ್ಞಾನಮಯೀ ವಾಣಿಯು ಸುಳ್ಳನ್ನು ದೂರಕ್ಕೆ ತಳ್ಳಿ ಸತ್ಯವನ್ನೇ ವ್ಯವಹರಿಸುವ ಸಜ್ಜನರಿಗೆ ಸ್ಫೂರ್ತಿ ನೀಡುತ್ತದೆ. ಸದ್ಬುದ್ಧಿಯುಳ್ಳವರಿಗೆ ಜಾಗರೂಕತೆಯನ್ನು ಕರುಣಿಸುತ್ತದೆ. ಅದೇ ವಾಣಿ ಶ್ರೇಷ್ಠತಮಕರ್ಮವನ್ನು ಎತ್ತಿ ಹಿಡಿಯುತ್ತದೆ.

**ಭಾಷ್ಯ:**– ಈ ಮಂತ್ರ ಸರಸ್ವತಿಯ ಮತ್ತೂ ಮೂರು ವೈಶಿಷ್ಟ್ಯಗಳನ್ನು ಮುಂದಿಡುತ್ತಲಿದೆ. ಮಾನವನು ವಂಶಾನುಗತ ರೀತಿ - ನೀತಿಗಳಿಂದಲೂ, ಸುತ್ತಮುತ್ತಲ ಪರಿಸರಗಳ ಒತ್ತಡದಿಂದಲೂ, ಸಾಮಾಜಿಕ - ಆರ್ಥಿಕ - ರಾಜಕೀಯ - ಸಾಂಪ್ರದಾಯಿಕ ಪ್ರಭಾವಗಳಿಂದಲೂ, ವೈಯಕ್ತಿಕ ಸ್ವಾರ್ಥ ಹಾಗೂ ದೌರ್ಬಲ್ಯಗಳಿಂದಲೂ, ತನ್ನಿಚ್ಛೆಯಿಂದಲೋ ಹೆರರ ಅತ್ಯಾಚಾರದಿಂದಲೋ ಪತಿತನಾಗುವ, ಹಾಗೆಯೇ ದಳಿತನಾಗುವ ಸಂಭವ ಸದಾ ಇದ್ದೇಯಿರುತ್ತದೆ. **ಆದರೆ, ಯಾವ ಮಾನವನೂ ನಿತ್ಯ ನಾರಕೀ - ಎಂಬ ಉಪಾಧಿ ಹಚ್ಚಿ, ಅವನ ಉದ್ಧಾರ ಮೂರು ಕಾಲಕ್ಕೂ ಆಗಲಾರದು – ಎಂದು ಹೇಳಿಸಿಕೊಳ್ಳುವಷ್ಟು ನಿಷ್ಪ್ರಯೋಜಕನಾಗಿರುವುದಿಲ್ಲ** - ಎಂಬಂಶವನ್ನು ಸದಾ ಸ್ಮೃತಿ – ಪಥದಲ್ಲಿಟ್ಟುಕೊಂಡಿರಬೇಕು. ಯಾವ ಮಾನವನೂ ಉದ್ಧಾರವನ್ನು ಮೂರು ಕಾಲಕ್ಕೂ ಪಡೆದುಕೊಳ್ಳಲಾರದಷ್ಟು ಅಲ್ಪನೂ, ನೀಚನೂ, ಅನಧಿಕಾರಿಯೂ ಆಗಿರುವುದಿಲ್ಲ. ಯಾವುದೇ ರಾಷ್ಟ್ರೀಯ, ಜಾತೀಯ, ಸಾಂಪ್ರದಾಯಿಕ ಪಕ್ಷಪಾತಗಳಿಗೆ ಸಿಕ್ಕದ, ಸರ್ವ ಸಮಸ್ಯೆಗಳನ್ನೂ 'ನೃಚಕ್ಷಾಸ್ತ್ವ'ದ ದೃಗ್ಬಿಂದುವಿನಿಂದಲೇ ಮಾನವೀಯ ದೃಷ್ಟಿಕೋನದಿಂದಲೇ ಅಳೆದು ನೋಡುವ, ಆಪ್ತನ ಬಾಯಿಂದ ಹೊರಹೊರಡುವ ಪ್ರತಿಯೊಂದು ಜ್ಞಾನಮಯೀ ವಾಣಿಗೂ ಜಗತ್ತಿನ ಜನ – ಜೀವನವನ್ನೇ ಆಪಾದಮಸ್ತಕ ಪರಿವರ್ತಿಸಿ ಬಿಡುವ ಅಲೌಕಿಕ ಸಾಮರ್ಥ್ಯವಿರುತ್ತದೆ. ವೇದಾದೇಶ ಹೀಗಿದೆ:–

**ಮನೀಷಿಣಃ ಪ್ರಭರಧ್ವಂ ಮನೀಷಾಂ ಯಥಾ ಯಥಾ ಮತಯಃ ಸಂತಿ ನೃಣಾಂ।**
**ಇಂದ್ರಂ ಸತ್ಯೈರೇರಯಾಮಾ ಕೃತೇಭಿಃ ಸಹಿ ವೀರೋ ಗಿರ್ವಣಸ್ಯುರ್ವಿದಾನಃ॥**

[ಋಗ್ವೇದ:– 10. 111. 1:]

"[ಮನೀಷಿಣಃ] ಮನಃಶಕ್ತಿಸಂಪನ್ನ ವಿಚಾರಶೀಲರೇ! [ನೃಣಾಂ ಮತಯಃ] ಮಾನವರ ಮತಿಗಳು, ಬುದ್ಧಿಗಳು, [ಯಥಾಯಥಾಸಂತಿ] ಹೇಗೆ ಹೇಗೆ ಇವೆಯೋ, ಎಷ್ಟೆಷ್ಟು ಇವೆಯೋ ಹಾಗೆ ಹಾಗೆ, ಅಷ್ಟು ಅಷ್ಟು, [ಮನೀಷಾಂ] ವಿಚಾರ – ಸಾರವನ್ನು, [ಪ್ರಭರಧ್ವಂ] ತುಂಬಿಸುತ್ತಾ ನಡೆಯಿರಿ. [ಇಂದ್ರಂ] ಮಾನವ ದೇಹಿಯಾದ ಇಂದ್ರಿಯವಂತನಾದ ಜೀವಾತ್ಮನನ್ನು, [ಸತ್ಯೈಃ ಕೃತೇಭಿಃ] ಸತ್ಯಮಯ ಕರ್ಮಗಳಿಂದ [ಆ ಈರಯಾಮ] ನಿರಂತರವಾಗಿ, ಅವಿಚ್ಛಿನ್ನವಾಗಿ ಪ್ರೇರಿಸೋಣ. [ಹಿ] ಏಕೆಂದರೆ, [ಸಃ] ಆ ಜೀವನು, [ವೀರಃ= ವಿ + ಈರಃ] ಚೇತನನಾದ ಜೀವನಿಂದ ಪ್ರೇರಿಸಲ್ಪಡುವವನೂ,

[ಗಿರ್ವಣಸ್ಯೂ:] ಸ್ತುತ್ಯನಾದ ಭಗವಂತನ ಸಾಕ್ಷಾತ್ಕಾರಾಭಿಲಾಷಿಯೂ, [ವಿದಾನಃ] ಅರಿತುಕೊಳ್ಳುವ ಆತ್ಮಸಹಜ ಜ್ಞಾನವಂತನೂ ಆಗಿದ್ದಾನೆ."

ಇದು ವೇದಾದೇಶ. ನರ - ನಾರಿಯರನ್ನು ಸಂಬೋಧಿಸಿ, ವೇದವೇ ಸ್ವತಃ- **"ಶೃಣ್ವಂತು ವಿಶ್ವೇ ಅಮೃತಸ್ಯಪುತ್ರಾಃ"** [ಯಜುಃ-11. 5.] - "ಸರ್ವರೂ ಅಮರನಾದ ಪರಮೇಶ್ವರನ ಪುತ್ರರು; ಎಲ್ಲರೂ ಆಲಿಸಲಿ." - ಎನ್ನುತ್ತಿರುವಾಗ, **"ಯಥೇ ಮಾಂವಾಚಂ ಕಲ್ಯಾಣೀ ಮಾವದಾನಿ.........ಶೂದ್ರಾಯ."** [ಯಜುಃ- 26 2.] - "ಶೂದ್ರನಿಗಾಗಿಯೂ ಈ ಕಲ್ಯಾಣೀ ವೇದವಾಣಿಯನ್ನು ಉಪದೇಶಿಸುತ್ತೇನೆ." ಎಂಬ ಶ್ರುತಿವಚನವೇ ಇರುವಾಗ, ಭಗವತ್ಪುತ್ರರಲ್ಲಿ ಹಲವರಿಗೆ **"ನಿತ್ಯ ನಾರಕೀ ಜೀವರು."** ಎಂಬ ಹಣೆ ಪಟ್ಟಿ ಕಟ್ಟಿ ದೂರ ತಳ್ಳಲು ಮಾನವರಾದ ನಮಗೆಲ್ಲಿಯ ಅಧಿಕಾರವಿದೆ?

ಸರಸ್ವತೀ ದೇವೀ, ಜ್ಞಾನಮಯೀ ವಾಗ್ದೇವೀ, ಸತ್ಪುರುಷದಲ್ಲಿ 'ಆಪ್ತತ್ವ'ವನ್ನು ತುಂಬಿಸಿ ಕೊಡುವುದಕ್ಕೆ ಸದಾ ಸನ್ನದ್ಧಳೇ ಆಗಿದ್ದಾಳೆ. **ಸೂನೃತತ್ವ, ಸುಮತಿತ್ವ, ಯಜ್ಞಕರ್ತೃತ್ವ - ಈ ಮೂರು ಗುಣಗಳ ಮೊತ್ತವೇ ಆಪ್ತತ್ವ.** ಸರಸ್ವತೀ ದೇವಿ ಸೂನೃತತ್ವವನ್ನು ಪ್ರೇರಿಸುತ್ತಾಳೆ; ಸುಮತಿತ್ವವನ್ನು ಎಚ್ಚರಿಸುತ್ತಾಳೆ; ಮತ್ತು, ಯಜ್ಞ ಕರ್ತೃತ್ವದ ಸಿದ್ಧಿಗಾಗಿ ಯಜ್ಞವನ್ನು ಎತ್ತಿ ಹಿಡಿಯುತ್ತಾಳೆ.*

ಈಗ ಯಜ್ಞಶಬ್ದ ವಿಶ್ಲೇಷಣೆಯವಾಗಿದೆ. ಈ ವರೆಗೆ ಓದುಗರು ಯಜ್ಞದ ವಿವಿಧ ಮುಖಗಳತ್ತ ದೃಷ್ಟಿಬೀರುತ್ತಾ ಬಂದಿರುತ್ತಾರೆ. ಇನ್ನೊಂದು ಹೆಜ್ಜೆ ಮುಂದಿಡುವ ಯತ್ನಮಾಡೋಣ. ಯಾಸ್ಕರು ಯಜ್ಞ ಶಬ್ದಕ್ಕೆ ಹಲವಾರು ಅರ್ಥಗಳನ್ನು ಹೇಳುತ್ತಾ - **"ಯಜ್ಞೇ ವಿದಥೇ"** [3. 1. 3.] - "ಯಜ್ಞದಲ್ಲಿ - ಎಂದರೆ ವಿದಥದಲ್ಲಿ." ಎನ್ನುತ್ತಾರೆ ಈ ವಿದಥ ಶಬ್ದಕ್ಕೆ ಜ್ಞಾನಿಗಳ ಸಂಗ ಹಾಗೂ ಸಂಗ್ರಾಮ" ಎಂಬ ಎರಡು ಅರ್ಥಗಳಿರುತ್ತವೆ. ವಿದಥ ಶಬ್ದದ ಪರ್ಯಾಯವಾಚಕವಾದ ಯಜ್ಞದ ಮೂಲ ಧಾತು 'ಯಜ' ಎಂಬುದಕ್ಕೆ **'ದೇವ ಪೂಜೆ'** ಎಂಬರ್ಥವಿರುವುದರಿಂದ 'ದೇವಜನರ ಸತ್ಕರಣ'-ಎಂದಾಗ 'ಜ್ಞಾನಿಗಳ ಸತ್ಸಂಗ' - ಎಂಬ ಭಾವ ಎದ್ದುಕಾಣುತ್ತದೆ.** ಯಜ ಧಾತುವಿನ ದ್ವಿತೀಯಾರ್ಥ **'ಸಂಗತಿ ಕರಣ'** ಕ್ರಿಯಾರೂಪ ತಳೆದಾಗ, ರಣ - ರಂಗಕ್ಕಿಳಿದ ಉಭಯಪಕ್ಷೀಯರ ಸಂಗತಿಕರಣ, ಪರಸ್ಪರ ಸಂಯೋಗ ಸಿದ್ಧಿಸುವ ಕಾರಣ, ಆ ಅರ್ಥವೂ ಹೊಂದುತ್ತದೆ. ಯಜಧಾತುವಿನ

---

* ವಾಕ್ಯದಲ್ಲಿನ ಸ್ತ್ರೀಲಿಂಗಪ್ರಯೋಗ ಶಬ್ದಲಿಂಗಾನುಸಾರಿಮಾತ್ರ; ಸ್ತ್ರೀದೇವತೆ ಗ್ರಾಹ್ಯವಲ್ಲ

---

** ಮಾತ್ರವಲ್ಲ. 'ದೇವ ಪೂಜಾ, ವಿದ್ವಜ್ಜನರ ಸತ್ಕಾರ'ಕ್ಕಾಗಿಯೂ, ದೇವಜನರ ರಕ್ಷಣೆ ಮಾಡಿ, ಅವರ ಬಗೆಗೆ ಗೌರವ ಪ್ರದರ್ಶನ ಮಾಡಲಿಕ್ಕಾಗಿಯೂ, **"ಸತ್ಯಂವೈ ದೇವಾ ಅನೃತಂ ಮನುಷ್ಯಾಃ"** - "ತ್ರಿಕರಣಾತ್ಮಕ ಸತ್ಯವಂತರೇ ದೇವಜನರು, ಅನ್ + ಋತರು ವೇದ - ನ್ಯಾಯ - ಸತ್ಯ - ಯಜ್ಞಗಳಿಗೆ ವಿಮುಖರಾಗಿರುವವರು ಮನುಷ್ಯರು.". ಎಂಬ.- ಪ್ರಮಾಣಾನುಸಾರ, ದೇವಸತ್ಕಾರಕ್ಕಾಗಿಯೂ ಯುದ್ಧ ಮಾಡಬಹುದಷ್ಟೇ?

ತೃತೀಯಾರ್ಥ **'ದಾನ'**, ತಮ್ಮ ತಮ್ಮ ಪಕ್ಷಕ್ಕಾಗಿ ಹೋರಾಡುವ ಯೋದ್ಧರು, ಎಲ್ಲಕ್ಕಿಂತ ಮೂಲವಾನ್‌ವಸ್ತುವಾದ 'ಪ್ರಾಣ'ವನ್ನೂ ದಾನಮಾಡುವುದರಿಂದ, ಆ ಅರ್ಥವು ಸಂಗತವೇ ಆಗುತ್ತದೆ. ಹೀಗೆ ಯಜ್ಞ ಹಾಗೂ ವಿದಥಗಳ ಅರ್ಥ ಸಮಾನವಾಗಿರುವುದರಿಂದ, ಯಜ್ಞ ಶಬ್ದಕ್ಕೆ **"ವಿದ್ವಜ್ಜನ ಸೇವಾ – ಸಂಗತಿಕರಣ - ದಾನ'** - ಎಂಬಲ್ಲದೆ **' ಸಂಗ್ರಾಮ'** ಎಂಬರ್ಥವೂ ಅನ್ವಯಿಸುತ್ತದೆ.

ವಿಶೇಷತಃ ಯಾಸ್ಕರು–**"ಯಜ್ಞಃ ಕಸ್ಮಾತ್? ಪ್ರಖ್ಯಾತಂ ಯಜತಿ ಕರ್ಮೇತಿ; ಯಾಚ್ಞೋ ಭವತೀತಿ ವಾ. ಯಜುರುನ್ನೋ ಭವತೀತಿ ವಾ. ಯಜೂಂಷ್ಯೇನಂ ನಯಂತೀತಿ ವಾ."** [3 4.19 2.] – "ಯಜ್ಞವೆನ್ನುವುದೇಕೆ? ಆದರಲ್ಲಿ ಆಹುತಿದಾನವೇ ಪ್ರಖ್ಯಾತವಾದುದರಿಂದ; ಭಗವಂತನಲ್ಲಿ ಪ್ರಾರ್ಥನೆ ಮಾಡಲ್ಪಡುವುದರಿಂದ; ಯಜುರ್ದ್ವಾರಾ ಸ್ನಾತನಾಗುವುದರಿಂದ, ಅಥವಾ ಯಾಜುಷ ಮಂತ್ರಗಳೇ ಇದನ್ನು ಮುಂದುವರಿಸುವುದರಿಂದ ಇದು ಯಜ್ಞವೆನಿಸುತ್ತದೆ." ತಾತ್ಪರ್ಯವಿದು:– **'ಆಹುತಿಗಳ ಮೂಲಕ ಪ್ರಖ್ಯಾತವಾಗುವ ಕರ್ಮ ಯಜ್ಞ; ಈಶ್ವರನಲ್ಲಿ ಜೀವನು ಸಲ್ಲಿಸುವ ಪ್ರಾರ್ಥನೆ ಯಜ್ಞ; ಯಜುರ್ಮಂತ್ರಗಳಿಂದ ಅಭ್ಯಂತರ ಸ್ನಾನಮಾಡುವ ಕರ್ಮ ಯಜ್ಞ; ಯಾಜುಷೀ ಶ್ರುತಿಗಳಿಂದ ನೀರಸ ಜೀವನವನ್ನು ರಸಾರ್ದ್ರ ಮಾಡಿಕೊಳ್ಳುವ ಕರ್ಮ ಯಜ್ಞ. ಮತ್ತು ಯಾಜುಷೀ ವಾಣಿಗಳು ಯಾವುದನ್ನು ಪ್ರಗತಿಪಥಕ್ಕೊಯ್ಯುವವೋ ಆ ಕರ್ಮ ಯಜ್ಞ."** ಯಾಸ್ಕರು ವಿಕಲ್ಪದ್ಯೋತಕವಾದ 'ವಾ' ಎಂಬ ಅವ್ಯಯವನ್ನು ಬಳಸಿದ್ದಾರಾದರೂ, ಎಲ್ಲವೂ ಸಮಾನರೂಪದಿಂದ ಪ್ರಧಾನವಾಗಿರುವುದರಿಂದ ನಾವು ವಿಕಲ್ಪಕ್ಕೆ ಅಂಟಿಕೊಳ್ಳಬೇಕಾಗಿಲ್ಲ. ಸರ್ವಾರ್ಥಗಳೂ ಸಂಗ್ರಾಹ್ಯವೇ ಸರಿ.

ಇಷ್ಟು ಹೇಳಿದ ಮೇಲೆ, ಮತ್ತೆ ಯಜ್ಞಶಬ್ದದ ವಿಸ್ತಾರ ಅನಾವಶ್ಯಕ. **"ಯಜ್ಞಂ ದಧೇ ಸರಸ್ವತೀ."** - ಎಂದಾಗ ಜ್ಞಾನಮಯೀ ವಾಣಿ, ದೇವಪೂಜಾ, (ಈ ಸ್ಥಾನದಲ್ಲಿ ದೇವರ ದೇವನಾದ ವಿರಾಡಾತ್ಮನನ್ನು ಮರೆಯದಿರೋಣ) ಸಂಗತಿಕರಣ, ದಾನ, ಧರ್ಮ ಸಂಗ್ರಾಮ, ಶಾಸ್ತ್ರೀಯ ವಿಧಿಗನುಸಾರ ನಿರ್ಮಿತವಾದ ಹವಿಸ್ಸಿನ ಹಾಗೂ ಘೃತದ ಆಹುತಿದಾನ, ಭಗವಂತನಲ್ಲಿ ಅಭೀಷ್ಟಯಾಚನೆ, ಯಜುರ್ವೇದ ಮಂತ್ರ ಪಾಠಗಳಿಂದ (ಅನ್ಯ ವೇದಗಳ ಪಾಠ ನಿಷಿದ್ಧವೆಂದಲ್ಲ.) *ಅಭ್ಯಂತರ ಶೌಚ ಹಾಗೂ ನವ್ಯಸ್ಫೂರ್ತಿಯ ಸಂಪಾದನೆ ಯಜುರ್ವೇದ-ಪಾರಾಯಣ-ಇವೆಲ್ಲವನ್ನೂ ಎತ್ತಿಹಿಡಿಯುತ್ತದೆ." - ಎಂಬ ಸಮಗ್ರದೃಷ್ಟಿಯಿದ್ದಲ್ಲಿ ಮಂತ್ರದ ಮಹಿಮಾದರ್ಶನ ಸುಕರವಾದೀತು.

ಶ್ರೀ ಮಧ್ವರು - **"ಸೂನೃತಾನಾಂ ಚೋದಯಿತ್ರೀ"** - ಎಂಬುದಕ್ಕೆ **"ಸುವಾಚಾಂ ಪ್ರೇರಕಾ ಸದಾ."**–"ಸದ್ವಾಣೀ ಪ್ರಯೋಗಕರ್ತರನ್ನು ಸದಾ ಪ್ರೇರಿಸುವಂತಹುದು"–

---

* ಕರ್ಮಕಾಂಡ ದ್ಯೋತಕ ಯಜುರ್ವೇದವಾದ ಕಾರಣ ಈ ವಿಶಿಷ್ಟ ಕಥನ.

ಎಂದೂ. ಶ್ರೀ॥ ಸಾಯಣರು - "**ಸೂನೃತಾನಾಂ ಪ್ರಿಯಾಣಾಂ ಸತ್ಯವಾಕ್ಯಾನಾಂ ಪ್ರೇರಯಿತ್ರಿ**" - "ಪ್ರಿಯವೂ, ಸತ್ಯವೂ ಆದ ವಾಕ್ಯಗಳನ್ನು ಅಥವಾ ಅಂತಹ ವಾಕ್ಯಗಳ ನ್ನಾಡುವವರನ್ನು ಪ್ರೇರಿಸುವಂತಹುದು." – ಎಂದು ಹೇಳಿದ್ದಾರೆ. ಶ್ರೀ॥ ಮಧ್ವಗುರು ರಾಯರು - '**ಸುಮತೀನಾಂ ಚೇತಂತೀ**'-ಎಂಬುದಕ್ಕೆ "**ಸುಬುದ್ಧಿ ಜ್ಞಾಪಿಕಾ ಸೈವ**"– "ಸುಬುದ್ಧಿಗಳನ್ನು ಜ್ಞಾಪಿಸಿಕೊಡುವಂತಹುದು ಅದೇ ಎಂದೂ, ಶ್ರೀ॥ ಸಾಯಣರು–"**ಸುಮತೀನಾಂ ಶೋಭನಬುದ್ಧಿಯುಕ್ತಾನಾಂ ಅನುಷ್ಠಾತೃಣಾಂ ಚೇತಂತೀ ಜ್ಞಾಪಯಂತೀ**" – "ಸನ್ಮತಿವಂತರ, ಸುಂದರವಾದ ಅಥವಾ ಮಂಗಳಕರವಾದ ಬುದ್ಧಿಯುಕ್ತ ರಾಗಿರುವ ಅನುಷ್ಠಾನನಿರತರನ್ನು ಜ್ಞಾಪಿಸುವಂತಹುದು." – ಎಂದೂ ವ್ಯಾಖ್ಯಾನ ಮಾಡಿದ್ದಾರೆ. ಶಬ್ದ ಪ್ರಯೋಗಕ್ರಮ ಬೇರೆಬೇರೆಯಾದರೂ, ಇಬ್ಬರು ಭಾಷ್ಯಕಾರರ ಅಭಿಪ್ರಾಯವೂ ಒಂದೇ ಆಗಿದೆ. ಆದಷ್ಟೂ ಅಲ್ಪಶಬ್ದಗಳು ಚುಟುಕಗಳಂತಹ ಅತಿಸಂಕ್ಷಿಪ್ತ ವ್ಯಾಖ್ಯಾನ ಮಾಡುವ ಶ್ರೀ॥ ಮಧ್ವರು, ಈ ಯುಗದ ಮಹಾತ್ಮಾಗಾಂಧಿಗಳನ್ನೂ ನಾಚಿಕೆಪಡಿಸಲು ಸಮರ್ಥರಾಗಿದ್ದರು. ಲವಪುರದಿಂದ ತಿರುವನಂತಪುರದ ದೇಶಭಕ್ತರೊಬ್ಬರಿಗೆ, ಮಹಾತ್ಮಾಜೀಯವರ ಗುಮಾಸ್ತರಾಗಿ, ಅವರು ಹೇಳಿದುದನ್ನು ಬರೆಯುತ್ತಾ "ಇಲ್ಲಿ ನಾವೆಲ್ಲಾ ಕ್ಷೇಮವಾಗಿದ್ದೇವೆ. ಎಂದು ನಾವು ಬರೆದಾಗ – "ಕರ್ನಾಟಕೀ! ಕಾಗದ, ಕಡ್ಡಿ, ಮಸಿ, – ನಿಮ್ಮ ಮಾವ ಬಿಟ್ಟಿ ಕೊಡುತ್ತಾನೇನು? ಅಂಚೆಚೀಟಿಯ ಮೇಲೆ, ಅಂಚೆಯವರು 'ಲಾಹೋರ್' ಎಂದು ಮುದ್ರೆಯೊತ್ತುವಾಗ, ನಾವು ಲಾಹೋರಿನಲ್ಲಿದ್ದೇವೆ-ಎಂದು ತಿಳಿದುಕೊಳ್ಳಲಾರರೇ ಮನ್ಮಥಂ ಪದ್ಮನಾಭನ್? "ನಾವೆಲ್ಲಾ" ಏಕೆ? 'ಎಲ್ಲಾ' – ಎಂದರೆ ಸಾಲದೇ? ಕ್ಷೇಮವಾಗಿದ್ದೇವೆ - ಏಕಯ್ಯ? 'ಕ್ಷೇಮ' ಎಂದರಾಗದೇ? 'ಕ್ಷೇಮ' - ಎನ್ನುವುದು ಜೀವಂತರಿಗೆ ತಾನೇ? ಮತ್ತೆ 'ಆಗಿದ್ದೇವೆ' ಏತಕ್ಕೋ? "ಎಲ್ಲಾ ಕ್ಷೇಮ" - ಎಂದು ಬರೆ, ಸಾಕು."– ಮಹಾತ್ಮಾ ಗುಡುಗಿದ್ದರು. ಈ ಬಗೆಯ ಸಂಕ್ಷಿಪ್ತತ್ವ ಶ್ರೀ॥ ಮಧ್ವರಿಗೂ ಬೆನ್ನಿಗಂಟಿರಬೇಕು.

ಶ್ರೀ॥ಮಧ್ವರು '**ಯಜ್ಞಂ ದಧೇ**' – ಎಂಬುದಕ್ಕೆ "**ಸೈವ ಯಜ್ಞಾದಿಧಾರಿಣಿ.**" "ಅದೇ ಯಜ್ಞ ಮೊದಲಾದುದರ ಧಾರಕ." ಎಂದಿದ್ದಾರೆ. ಯಜ್ಞಶಬ್ದಕ್ಕೆ ವಿಶಿಷ್ಟಾರ್ಥ ಬರೆಯಲಿಲ್ಲ. ಶ್ರೀ॥ಸಾಯಣರೂ "**ಯಾ ಸರಸ್ವತೀ ಸೇಯಮಿಮಂ ಯಜ್ಞಂದಧೇ, ಧಾರಿತವತೀ.**" – "ಯಾವ ಸರಸ್ವತಿಯಿದ್ದಾಳೋ, ಅವಳು ಈ ಯಜ್ಞವನ್ನು ಧರಿಸಿದ್ದಾಳೆ." – ಎಂದು ಮುಗಿಸಿದರು.

ಇಬ್ಬರೂ "**ಸರಸ್ವತೀ ವಾಙ್ನಾಮ**" – "ಸರಸ್ವತೀ ವಾಕ್ಕಿನ ಹೆಸರು." - ಎಂದು ಒಪ್ಪಿದರೂ, ಪರಂಪರಾಗತ ಕಲ್ಪನೆ ಅವರನ್ನು ಅಟ್ಟಿಸಿಕೊಂಡೇ ನಡೆದಂತಿದೆ. ಪೌರಾಣಿಕರಲ್ಲಿ ಅಭಿಮಾನೀ ದೇವತೆಗಳ ಸೈನ್ಯಕ್ಕೆ ಸೈನ್ಯವೇ ಉಪಸ್ಥಿತವಾಗಿರುವಾಗ, ವಿದ್ಯಾಭಿಮಾನೀ ದೇವತೆ ಸರಸ್ವತೀ ದೇವಿಯೊಬ್ಬಳಿಗೆ ಸ್ಥಳ ಸಿಕ್ಕದೇ?

**"ಯಾ ಕುಂದೇಂದು ತುಷಾರ ಹಾರಧವಳಾ ಯಾ ಶುಭ್ರವಸ್ತ್ರಾವೃತಾ**
**ಯಾ ವೀಣಾವರದಂಡಮಂಡಿತ ಕರಾ ಯಾ ಶ್ವೇತ ಪದ್ಮಾಸನಾ।**
**ಯಾ ಬ್ರಹ್ಮಾಚ್ಯುತ ಶಂಕರ ಪ್ರಭೃತಿಭಿರ್ದೇವೈಃ ಸದಾ ವಂದಿತಾ**
**ಸಾ ಮಾಂ ಪಾತು ಸರಸ್ವತೀ ಭಗವತೀ ನಿಃಶೇಷ ಜಾಡ್ಯಾಪಹಾ ॥**

"ಯಾವಳು ಪೂರ್ಣಚಂದ್ರ – ಶುಭ್ರಹಿಮದಂತೆ ಬಿಳುಪಾದ ಹಾರಧರಿಸಿ, ಬೆಳ್ಳಗೆ ಬೆಳಗುತ್ತಿದ್ದಾಳೋ, ಯಾವಳು ಅಪ್ಪಟ ಬಿಳುಪಾದ ವಸ್ತ್ರದಿಂದ ಆವೃತಳಾಗಿದ್ದಾಳೊ, ಯಾವಳು ವೀಣಾಪ್ರಕೃಷ್ಟದಂಡಮಂಡಿತಕರಗಳನ್ನು ಹೊಂದಿದ್ದಾಳೋ, ಯಾವಳು ಶ್ವೇತಪದ್ಮದ ಪೀಠದಲ್ಲಿ ರಾರಾಜಿಸುತ್ತಿದ್ದಾಳೋ, ಯಾವಳು ಬ್ರಹ್ಮ,ವಿಷ್ಣು,ಶಿವ ಮೊದಲಾದ ದೇವತೆಗಳಿಂದ ಸದಾವಂದಿತಳಾಗಿದ್ದಾಳೋ, ಸಮಸ್ತ ಜಾಡ್ಯಗಳನ್ನೂ ಕೊಸರೂ ಉಳಿಯದಂತೆ ನಿವಾರಿಸಿಬಿಡುವ ಆ ಭಗವತೀ ಸರಸ್ವತಿಯು ನನ್ನನ್ನು ರಕ್ಷಿಸಲಿ." – ಎಂಬ ಕವಿಕಲ್ಪನೆಯ ವಿಕಲ್ಪವೃತ್ತಿಯ ಕಪಿಮುಷ್ಟಿಗೆ ಸಿಲುಕಿದ ಮಾನವೀಬುದ್ಧಿ, ನೇರವಾಗಿ ಸರಸ್ವತಿಯನ್ನು ಅಂಗೀಕರಿಸುವುದು ಅಸಂಭವವಲ್ಲವಾದರೆ, ಕಷ್ಟಸಾಧ್ಯವೆಂಬುದು ಅಸಂದಿಗ್ಧ ಸತ್ಯ.

ಈ ಕ್ಲಿಷ್ಟಾತಿಕ್ಲಿಷ್ಟ ಶಾಬ್ದಿಕ ಘೋರ ಕಾಂತರದಲ್ಲಿಯೂ, ಈ ವಿಕಲ್ಪದಾರುದಾರುಣ ಘನಾಟವಿಯಲ್ಲಿಯೂ, ಮಾರ್ಗತೋರಬಲ್ಲ ಧೀರ - ವೀರ ಪುರುಷಸಿಂಹರೊಬ್ಬರು ಇದ್ದಾರೆ. ಜಗತ್ತು ಅವರನ್ನು ಮಹರ್ಷಿ ದಯಾನಂದ ಸರಸ್ವತೀ - ಎಂದು ಗುರುತಿಸಿದೆ. ಅವರ ಹೆಸರಿಗೇ ಹತ್ತಿಬಂದ 'ಸರಸ್ವತೀ' ಶಬ್ದ, ಈ ಸಾರಸ್ವತ ಶ್ರೇಷ್ಠರೇ ಸರಸ್ವತಿಯನ್ನು ಕಂಡುಕೊಳ್ಳಲು ಸಮರ್ಥರೆಂದು ಅನ್ನಿಸಿದರೆ, ಅಲ್ಲಿ ಅತಿಶಯೋಕ್ತಿಯಾಗಲಿ, ಭಾವೋದ್ರೇಕವಾಗಲಿ ಸಾಸಿವೆಯ ಸಾವಿರದ ಒಂದಂಶದಷ್ಟೂ ಇಲ್ಲ. ಮಹರ್ಷಿ ಬರೆದಿದ್ದಾರೆ:–

"[ಸೂನೃತಾನಾಂ] ಸುತರಾಮೂನಯತಿ ಅನೃತಂ ಯತ್ಕರ್ಮ ತತ್ **ಸೂನ್; ತದೃತಂ. ಯಥಾರ್ಥಂ ಸತ್ಯಂ ಯೇಷಾಂ ತೇ ಸೂನೃತಾಃ ತೇಷಾಂ, [ಚೋದಯಿತ್ರೀ] ಶುಭಗುಣ ಗ್ರಹಣ ಪ್ರೇರಿಕಾ, [ಸುಮತಿನಾಂ] ಶೋಭನಾ ಮತಿಃ, ಬುದ್ಧಿರ್ಯೇಷಾಂ, ತೇ ಸುಮತಯಃ ತೇಷಾಂ ವಿದುಷಾಂ, [ಚೇತಂತೀ] ಸಂಪಾದಯಂತೀ, [ಯಜ್ಞಂ ದಧೆ] ಯಜ್ಞಂದಧಾತಿ."** ಈ ದೀರ್ಘವಾದ ಉದ್ಧರಣದ ಅರ್ಥ:- '**ಸೂನ್**' - ಎಂಬ, ಅಸತ್ಯ ಧ್ವಂಸಕವಾದ ಋತವನ್ನು (ಸತ್ಯವನ್ನು) ಹೊಂದಿರುವ '**ಸೂನೃತ**'ರನ್ನು ಶುಭಗುಣಗ್ರಹಣಕ್ಕಾಗಿ ಪ್ರೇರಿಸುವಂತಹುದೂ, '**ಸುಮತಿ**'ಗಳನ್ನು, ಸುಂದರ ಮತಿಯುಳ್ಳವರನ್ನು ಸುಬುದ್ಧಿ ಸಂಯುಕ್ತರಾದ ವಿದ್ವಜ್ಜನರನ್ನು ಜಾಗೃತರನ್ನಾಗಿ ಮಾಡುತ್ತಾ, [ಸರಸ್ವತೀ] ಜ್ಞಾನವಿಜ್ಞಾನಮಯೀ ವಾಣಿಯು, **[ಹರೌ ಗುಣಾಃ ಸರಶ್ಚ ಬ್ಧಾ ದೇವೀತು ಹರಿವಾಚಿನೀ** 'ಸರಸ್'ಗಳು ಹರಿಯ ಗುಣಗಳು. ಅವುಗಳನ್ನುಳ್ಳದು ಸರಸ್ವತೀ. ದೇವೀ - ಎಂಬುದು ಹರಿ ನಿರ್ದೇಶಕ ಶಬ್ದ - ಎಂಬ - ಶ್ರೀ॥ಮಧ್ವವಾಣಿಯಿಂದ, ಭಗವದ್ಗುಣೋಪದೇಶಿಕೆಯಾದ ವೇದವಾಣಿಯೇ **"ಸರಸ್ವತೀ ದೇವೀ."** - ಎನ್ನುವುದೂ ಬುದ್ಧಿಸಂಗತವೇಸರಿ.] ಯಜ್ಞವನ್ನು ದೃಢೀಕರಿಸುತ್ತದೆ." ಈ ಸೂಕ್ತದ ೧೦ನೆಯ ಮತ್ತು ೧೧ನೆಯ ಮಂತ್ರಗಳಲ್ಲಿಯೂ ಯಜ್ಞ ಶಬ್ದ ಬಂದಿದೆ. ಮಹರ್ಷಿಗಳು 'ಯಜ್ಞ' ಎಂಬುದಕ್ಕೆ 'ಮಹಿಮೆ, ಕರ್ಮ' ಎಂಬ ಎರಡು ವಿಶಿಷ್ಟಾರ್ಥಗಳನ್ನು ಮಾಡಿರುವುದನ್ನೂ, ಅವುಗಳ ಮೇಲಿನ ವಿಸ್ತೃತ ವ್ಯಾಖ್ಯಾನವನ್ನು ಓದುಗರು ಓದಿಯೇ ಇದ್ದಾರೆ.

ಈಗ ಈ ಸೂಕ್ತದ ಕೊನೆಯ ಮಂತ್ರವನ್ನು ವಿಶ್ಲೇಷಿಸೋಣ:–

## ಸಂಹಿತಾ ವಿಭಾಗ

ಮಹೋ ಅರ್ಣಃ ಸರಸ್ವತೀ ಪ್ರಚೇತಯತಿ ಕೇತುನಾ।

ಧಿಯೋ ವಿಶ್ವಾ ವಿರಾಜತಿ ॥೧೨॥

ಪದಪಾಠ:– ಮಹಃ, ಅರ್ಣಃ, ಸರಸ್ವತೀ, ಪ್ರ, ಚೇತಯತಿ, ಕೇತುನಾ, ಧಿಯಃ, ವಿಶ್ವಾಃ, ವಿರಾಜತಿ ॥೧೨॥

ಅನ್ವಯ:– ಸರಸ್ವತಿ ಕೇತುನಾ ಮಹಃ ಅರ್ಣಃ ಪ್ರಚೇತಯತಿ. ವಿಶ್ವಾ ಧಿಯಃ ವಿರಾಜತಿ.

ಶಬ್ದಾರ್ಥ:– [ಸರಸ್ವತೀ] ಜ್ಞಾನಮಯೀ ವಾಣಿಯು, [ಕೇತುನಾ] ಮಂಗಳಕರವಾದ ಕರ್ಮದಿಂದ, ಪ್ರಜ್ಞೆಯಿಂದ, [ಮಹಃ ಅರ್ಣಃ] ಮಹಾನ್ ವಿದ್ಯಾಸಮುದ್ರವನ್ನು, [ಪ್ರಚೇತಯತಿ] ಉತ್ಕೃಷ್ಟ ರೀತಿಯಲ್ಲಿ ಜ್ಞಾಪಿಸುತ್ತದೆ. [ವಿಶ್ವಾಃ] ಸಮಸ್ತ, ಸರ್ವತ್ರ ವ್ಯಾಪಕವಾದ, [ಧಿಯಃ] ಪ್ರಜ್ಞಾಕರ್ಮಗಳನ್ನು, [ವಿರಾಜತಿ] ವಿಶೇಷವಾಗಿ ಪ್ರಕಾಶಪಡಿಸುತ್ತದೆ.

ತಾತ್ಪರ್ಯ:– ಪ್ರಶಂಸನೀಯವಾದ ಜ್ಞಾನವೇ ಮೊದಲಾದ ಗುಣಗಳನ್ನೂ, ನಿಂತಲ್ಲಿ ನಿಲಗೊಡದೆ ಪ್ರಗತಿಪಥದಲ್ಲಿ ಮಾನವರನ್ನು ಮುನ್ನಡೆಯಿಸುವ ಸಾಮರ್ಥ್ಯವನ್ನೂ ತನ್ನಲ್ಲಿಯೇ ಹೊಂದಿರುವ, ವಿವಿಧಾರ್ಥಯುಕ್ತವೂ, ವಿಶಿಷ್ಟ ಶಕ್ತಿಸಂಯುಕ್ತವೂ ಆದ ವಾಣಿಯೇ ಸರಸ್ವತೀ. ಆ ಸರಸ್ವತೀ ತನ್ನಲ್ಲಿಯೇ ಹುದುಗಿರುವ, ಸರ್ವವಸ್ತುಗಳನ್ನೂ ಆಚ್ಛಾದಿಸುವ ಜ್ಞಾನದಿಂದ, ಸುಂದರ ಕರ್ಮದಿಂದ ಮಾನವರನ್ನೆಲ್ಲಾ ಅವರವರ ಉತ್ತರ ದಾಯಿತ್ವಗಳ ಹಾಗೂ ಕರ್ತವ್ಯಗಳ ಬಗೆಗೆ ಉನ್ನತ ಮಟ್ಟದಲ್ಲಿ ಎಚ್ಚರಿಸುತ್ತದೆ. ಮನುಜ ಕುಲವೆಲ್ಲದರ, ಎಲ್ಲ ಮುಖಗಳ ಪ್ರಜ್ಞಾನಗಳನ್ನೂ, ವಿಕಾಸೋನ್ಮುಖೀ ಕರ್ಮಗಳನ್ನೂ ಪ್ರಕಾಶಪಡಿಸುತ್ತದೆ.

ಭಾಷ್ಯ:– ಹನ್ನೆರಡು ಋಕ್ಕುಗಳ ಈ ತೃತೀಯ ಸೂಕ್ತ ಈ ಮಂತ್ರದೊಂದಿಗೆ ಮುಕ್ತಾಯವಾಗುತ್ತದೆ. ಮೊದಲು ಓದಿದ ಶಬ್ದಗಳೇ ಪೂರ್ವೋಕ್ತವಾದ ಅರ್ಥದ ಅಧಿಕ ಸ್ಪಷ್ಟೀಕರಣಕ್ಕಾಗಿ ಬಂದಿರುವುದರಿಂದ, 'ಮಹಃ ಅರ್ಣಃ' – ಈ ಎರಡು ಶಬ್ದಗಳ ವ್ಯಾಖ್ಯಾನ ಮಾಡಿದರೆ, ಭಾವನೆ ಸ್ಫುಟವಾಗುವುದು.

ಶ್ರೀ॥ ಮಧ್ವರು ಗಂಭೀರವಾದ ಆಧ್ಯಾತ್ಮಿಕಾರ್ಥದ ಅಂತರತಮಕ್ಕಿಳಿದು, ತಮ್ಮದೇ ಆದ ಶೈಲಿಯಲ್ಲಿ ಈ ಪದಗಳಿಗೆ ಹೀಗೆ ಅರ್ಥಮಾಡಿದ್ದಾರೆ:–

**ಮಹೋ ಅರ್ಣಃ ಪರಂಬ್ರಹ್ಮ ತೇಜಸ್ತ್ವಾಚ್ಚ ಮಹತ್ವತಃ।**

**ಅರಮಾನಂದ ಪೂರ್ಣತ್ವಾತ್ ಣೋ ಹಿ ನಿರ್ವೃತಿ ವಾಚಕಃ॥**

"ಮಹಃ - ಎಂದರ ಮಹಾನ್, ತೇಜಸ್ವಿಯಾದ, ಅರ್ಣಃ - ಎಂದರೆ ಸ್ವತಃ ಬ್ರಹ್ಮ, ಅರಂ+ಣಃ=ಅರುಣಃ - ಎಂದರೆ, ಪ್ರಯಾಪ್ತ ಪಮಾಣದಲ್ಲಿ, ಪೂರ್ಣವಾಗಿ ಆನಂದಮಯನಾಗಿದ್ದಾನೆ. ಣಃ - ಎಂದರೆ ಪರಿಪೂರ್ಣಸುಖಭಾವ. ಅದು ನಿರ್ವೃತ್ತಿ ವಾಚಕವೂ ಆಗಿದ್ದೆ. ಆನಂದಮಯತ್ವದ ಪರಾಕಾಷ್ಠೆಯನ್ನು, ಅಂತಿಮ ಮಿತಿಯನ್ನು ತಿಳಿಸುತ್ತದೆ;" "**ತಚ್ಚಾಜ್ಞಾಪಯತಿ ಸಾದೇವೀ ಜ್ಞಾನಂ ದತ್ವಾ ಮಹತ್ತರಂ। ಮಹೋ ಅರ್ಣಃ ಸ್ವಯಂ ದೇವಃ ಸ್ವಮಾತ್ಮಾನಂ ಪ್ರಕಾಶಯೇತ್। ವಿರಾಜಯತಿ ವಿಶ್ವಾಶ್ಚ ಧಿಯಃ ಸುಜ್ಞಾನದಾನತಃ**" - "ಆ ದೇವೀ, ಜ್ಞಾನಮಯೀ ವಾಣೀ, ಮಹತ್ತರವಾದ ಜ್ಞಾನವನ್ನಿತ್ತು ಆ ಬ್ರಹ್ಮನನ್ನು ಜ್ಞಾನಕ್ಕೆ ಅಂದುವಂತೆ ಮಾಡುತ್ತದೆ. ಸ್ವತಃ ದೇವನನ್ನೇ "**ಮಹೋ ಅರ್ಣಃ**" - ಎಂಬ ಪಕ್ಷದಲ್ಲಿ. ತನ್ನನ್ನು ತಾನೇ ಪ್ರಕಾಶಕ್ಕೆ ತಂದುಕೊಳ್ಳುತ್ತಾನೆ. ಸುಜ್ಞಾನ - ಜ್ಞಾನದಿಂದ ಸಮಸ್ತ ಬುದ್ಧಿಗಳನ್ನು ವಿಶೇಷತಃ ಬೆಳಗಿಸುತ್ತಾನೆ.

ಹೀಗೆ ಮಧ್ವರು '**ಮಹೋ ಅರ್ಣಃ**' - ಎಂಬ ಪದಗಳನ್ನು ಮಹದಾನಂದ ಮಯ ಪರಬ್ರಹ್ಮಕ್ಕೆಯೇ ಅನ್ವಯಿಸಿ, ಅದನ್ನು ಕರ್ಮವೆಂದು ನಿರ್ಧರಿಸಿ, ಸರಸ್ವತಿಯನ್ನು ಕರ್ತೃ - ಎಂದೆಣಿಸಿ. ಆ ಸರಸ್ವತೀ ಮಹತ್ತಾದ ಜ್ಞಾನವನ್ನಿತ್ತು ಪರಬ್ರಹ್ಮನನ್ನು ಜ್ಞಾಪಕಕ್ಕೆ ತರುತ್ತದೆ. ಎಂದಿದ್ದಾರೆ. ಪರಬ್ರಹ್ಮನೇ ಸ್ವತಃ ಕರ್ತೃವೆಂದಾದಲ್ಲಿ, ಅದೇ ಸ್ವತಃ ಸ್ವಪ್ರಕಾಶವನ್ನು ಮಾಡುತ್ತದೆ. ಮತ್ತು ಸುಜ್ಞಾನದಾನದಿಂದ ಬುದ್ಧಿಗಳನ್ನೆಲ್ಲಾ ವಿರಾಜಿಸುವಂತೆ ಮಾಡುತ್ತದೆ." - ಎಂದು ಎರಡು ಪಕ್ಷಗಳ ಸಮನ್ವಯವನ್ನು ಮಾಡುತ್ತಾರೆ. ಈ ಕ್ರಮದ ಭಾಷ್ಯರಚನೆ ಮಹರ್ಷಿ ದಯಾನಂದರಿಗೆ ಅಪರಿಚಿತವೇನಲ್ಲ – ಎಂದು ಆರ್ಯರೆಲ್ಲರೂ ಬಲ್ಲರು. ಆದರೆ, ಈ ಭಾಷ್ಯ ವಿಧಾನ ಮಧ್ವರ ಅನುಕರಣವೆಂಬ ಕಪೋಲ ಕಲ್ಪನೆಗೆ ಕಿಂಚಿತ್ತೂ ಎಡೆಯಿಲ್ಲ. ಏಕೆಂದರೆ, ಮಹರ್ಷಿಕೃತ ವಿಶಾಲ ವೈದಿಕ ಸಾಹಿತ್ಯದಲ್ಲಿ ಮಧ್ವಸಾಹಿತ್ಯದ ಪರಿಚಯ ಅವರಿಗಿದ್ದಿತು - ಎನ್ನಲು ಯಾವುದೊಂದು ಪ್ರಮಾಣವೂ ಇಲ್ಲ. ಆದರೆ ಸತ್ಯಕ್ಕೆ ಸಾವೆಲ್ಲಿ? ಸಟೆ ದಿಟವನ್ನು ಗೆಲ್ಲಲಾದೀತೇ?

ಶ್ರೀ॥ ಸಾಯಣರ ಈ ಮಂತ್ರದ ಮೇಲಣ ಭಾಷ್ಯ ಶ್ರೇಷ್ಠತಮ ವಿದ್ವಾಂಸನಿಗೂ ಕೂಡ "ತನ್ನ ವಿದ್ವತ್ತ್ವ ಶೂನ್ಯಪ್ರಾಯವೋ ?" – ಎಂಬ ಶಂಕೆಯ ಸೋಂಕನ್ನು ಸಲ್ಲಿಸುವಷ್ಟು ಸಂದಿಗ್ಧವಾಗಿದೆ. ಯಾಸ್ಕರು ಯಾವುದೋ ಸಂದರ್ಭದಲ್ಲಿ ಸೂಚಿಸಿದ–"**ದ್ವಿವಿಧಾ ಹಿ ಸರಸ್ವತಿಃ ವಿಗ್ರಹವದ್ದೇವತಾವದಿಃ ರೂಪಾ ಚ। ತತ್ರ ಪೂರ್ವಾಭ್ಯಾಂ ಋಗ್ಭ್ಯಾಂ ವಿಗ್ರಹವತೀ ಪ್ರತಿಪಾದಿತಾ। ಅನಯಾ ತು ನದೀರೂಪಾ ಪ್ರತಿಪಾದ್ಯತೇ।** - "ಸರಸ್ವತೀ ಎರಡು ವಿಧದವಳು. ಸಾಕಾರ ದೇವತೆಯಾಗಿ ಮತ್ತು ನದೀ ರೂಪದವಳು." ಎಂದಾರಂಭಿಸುತ್ತಾರೆ. "**ತತ್ರ ಸರಸ್ವತೀತ್ಯೇತಸ್ಯ ನದೀವದ್ದೇವತಾ**

**ವಚ್ಚ ನಿಗಮಾ ಭವಂತಿ.**" [ನಿ:-2.23.] - "ಅಲ್ಲಿ ಸರಸ್ವತೀ ವಿಷಯಕವಾದ, ನದೀ– ಎಂಬಂತೆಯೂ, ದೇವತಾ – ಎಂಬಂತೆಯೂ ಬಣ್ಣಿಸುವ ವೇದಮಂತ್ರಗಳಿವೆ." - ಎನ್ನುವುದು ಯಾಸ್ಕರ ನೇರವಾದ ಉಕ್ತಿ. ಇದರ ನೆರಳಿನಲ್ಲಿ ನಡೆಯುತ್ತಾ, ಸಾಯಣರು – "ಹಿಂದಿನ ಎರಡು ಋಕ್ಕುಗಳಲ್ಲಿ (ಪಾವಕಾ ನಃ ಸರಸ್ವತೀ, ಚೋದಯಿತ್ರೀ ಸೂನೃತಾನಾಂ - ಎಂಬಿವು ಆಕಾರವತೀ ದೇವತೆಯಂತೆ ಸರಸ್ವತೀ ವರ್ಣಿತಳಾಗಿದ್ದಾಳೆ. ಈ ಮಂತ್ರದಲ್ಲಿ ನದಿಯಂತೆ ಪ್ರತಿಪಾದಿಸಲ್ಪಡುತ್ತಾಳೆ." - ಎಂದು ಸಾರಿದ್ದಾರೆ. ನದೀ - ಎಂದಮೇಲೆ. ಎಲ್ಲ ಶಬ್ದಗಳನ್ನೂ ನದಿಗೇ ಅನ್ವಯಿಸಬೇಕು ತಾನೇ ? "ತಾದೃಶೀ **ಸರಸ್ವತಿ, ಕೇತುನಾ** ಕರ್ಮಣಾಪ್ರವಾಹ ರೂಪೇಣ. **ಮಹೋ ಅರ್ಣಃ** ಪ್ರಭೂತಮುದಕಂ **ಪ್ರಚೇತಯತಿ ಪ್ರಕರ್ಷೇಣ ಜ್ಞಾಪಯತಿ.**" - "ಆ ನದೀರೂಪಿಣೀ ಸರಸ್ವತಿಯು. **ಕೇತುನಾ** – ಎಂದರೆ ಪ್ರವಾಹ ರೂಪವಾದ ಕರ್ಮದಿಂದ, **ಮಹೋ ಅರ್ಣಃ** ಎಂದರೆ-ಪುಷ್ಕಳ ಪ್ರಮಾಣದ ಪಯಸ್ಸನ್ನು. (ನೀರನ್ನು) **ಪ್ರಚೇತಯತಿ** - ಎಂದರೆ ಉತ್ತಮವಾಗಿ ಜ್ಞಾಪಿಸುತ್ತಾಳೆ."-ಎಂದು ಬರೆದರು. "**ವಿಶ್ವಾಃ ಧಿಯಃ**" - ಎಂದರೆ, ಅನುಷ್ಠಾನ ಪರರಾದವರ ಸಮಸ್ತ ಪ್ರಜ್ಞಾಗಳನ್ನೂ **ವಿರಾಜತಿ** - ಎಂದರೆ, ವಿಶೇಷವಾಗಿ ಉದ್ದೀಪನಗೊಳಿಸುತ್ತಾಳೆ." ಎಂದು ಮಂಗಳ ಹಾಡಿದರು. ಮಂಗಳ ಹಾಡಿದರೇ ? ಹಾಗೆಂದರೆ - ತಪ್ಪಾದೀತು. "ಈ ಋಕ್ಕಿನಲ್ಲಿ ನದೀರೂಪದಿಂದ ಪ್ರತಿಪಾದ್ಯಳಾಗಿದ್ದಾಳೆ; ಹಿಂದಣ ಮಂತ್ರದ್ವಯದಲ್ಲಿ ಹೇಳಲ್ಪಟ್ಟ ದೇವತಾರೂಪದಿಂದಲ್ಲ."- ಎಂದು ತಾವೇ ಮಾಡಿದ ಪ್ರತಿಜ್ಞೆಗೆ ತಣ್ಣೀರನ್ನೆರಚಿ, "**ಕಿಂಚ, ಸ್ವಕೀಯೇನ ದೇವತಾ ರೂಪೇಣ ವಿಶ್ವಾಧಿಯಃ ಸರ್ವಾಣ್ಯನುಷ್ಠಾತೃಪ್ರಜ್ಞಾನಾನಿ ವಿರಾಜತಿ ವಿಶೇಷಣ ದೀಪಯತಿ; ಅನುಷ್ಠಾನ ವಿಷಯಾ ಬುದ್ಧೀಃ ಸರ್ವದೋತ್ಪಾದಯತೀತ್ಯರ್ಥಃ**" ಎಂದರೇಕೆ ? "ಮತ್ತು, ತನ್ನ ದೇವತಾರೂಪದಿಂದ ಸರ್ವಬುದ್ಧಿಗಳನ್ನೂ, ಅನುಷ್ಠಾನ ಮಾಡುವವರ ಪ್ರಜ್ಞಾನಗಳನ್ನೂ ವಿಶೇಷತಃ ಬೆಳಗಿಸುತ್ತಾಳೆ." ಅನುಷ್ಠಾನ ವಿಷಯ ಬುದ್ಧಿ ಗಳನ್ನು ಸದಾ ಉತ್ಪಾದಿಸುತ್ತಾಳೆ." - ಎಂದದ್ದೇಕೆ ? ನದಿಯೂ ದೇವತೆಯೇ - ಎಂಬ ಪಕ್ಷಕ್ಕೆ "**ನದೀವದ್ದೇವತಾವಚ್ಚ**"-"ನದಿಯಂತೆ ಮತ್ತು ದೇವತೆಯಂತೆ" – ಎಂಬ ಯಾಸ್ಕವಚನ ಬಳಸಿದ್ದಾದರೂ ಏಕೆ? ನದೀ-ದೇವತೈಕ್ಯವಿದ್ದಲ್ಲಿ. ಏಕತ್ವಕ್ಕೆ ಮುಸಿಬಳೆದು **ನದೀ ಹಾಗೂ ದೇವತೆ**" - ಎಂದು ಎರಡನ್ನು ಎಣಿಸಿದುದೇಕೆ ? ಪ್ರಶ್ನೆ ಸಹಜ; ಉತ್ತರ ಸಹೋಜ (ಸಹಃ + ಜ)–ಎಂದರೆ. ತಲೆಯ ತೂಕವನ್ನು ಅಕ್ಕಪಕ್ಕಕ್ಕೆ ಕುಕ್ಕಿ, ಕನಲದೆ, ಕೊಸರದೆ ಕುಗ್ಗದೇ, ಹಿಗ್ಗಿನಿಂದಲೇ 'ಸಹಸ್ಸನ್ನೂ' ಸಂರಕ್ಷಿಸಿಕೊಂಡೇ, ಸಹನಶೀಲತೆಯಿಂದಲೇ. ಸ್ಥೈರಣೆ ಯಿಂದಲೇ, ಸಮರಸ ಸಿದ್ಧಾಂತಕ್ಕೆ ಸಿಂಹಪೀಠವಿತ್ತೇ, ಸಮುಚಿತ ಸಮಾಧಾನದ ಸೊಲ್ಲನ್ನು ಸೊಗಸಾಗಿ ಸಹೃದಯರ ಮುಂದೆ ಸಿಂಗರಿಸಿಡಬೇಕು. ಅದಷ್ಟು ಸುಲಭವಲ್ಲ. ಏತದ್ವಿಷಯಕ, ಯಾಸ್ಕ ವಚನವಾದರೂ ಸಂದೇಹಗಳ ಸೀಮೆಯಲ್ಲಿಯೇ ಸಿಕ್ಕಿಕೊಂಡಂತಿದೆ. "**ಮಹದರ್ಣ ಸರಸ್ವತೀ ಪ್ರಚೇತಯತಿ ಪ್ರಜ್ಞಾಪಯತಿ ಕೇತುನಾ ಕರ್ಮಣಾ ಪ್ರಜ್ಞಯಾ ವಾ, ಇಮಾನಿಚ ಸರ್ವಾಣಿ ಪ್ರಜ್ಞಾನಾನ್ಯನುವಿರಾಜತಿ.**" [ನಿ:-11.17.] "ಮಹಾ ಜಲವಾಹಿನೀ ಸರಸ್ವತೀ ನದಿಯು, ಕರ್ಮದಿಂದ ಅಥವಾ ಪ್ರಜ್ಞೆಯಿಂದ ಎಚ್ಚರಿಸುತ್ತಾಳೆ ಈ ಸಮಸ್ತ ಪ್ರಜ್ಞಾನಗಳನ್ನೂ ವಿಶಿಷ್ಟಕ್ರಮದಿಂದ ಜ್ಯೋತಿಯಪರಿಧಿಯೊಳಕ್ಕೆ ತರುತ್ತಾಳೆ."-

ಎಂಬ ಯಾಸ್ಕೋಕ್ತಿ, ಜಡವಾದ ನದಿ, ಪ್ರವಾಹವೆಂಬ ಕರ್ಮದಿಂದ, ಅಥವಾ ಪ್ರಜ್ಞೆಯಿಂದ ಮಹೋ ಅರ್ಣಃ' – ಎಂದರೆ ಬೃಹಜ್ಜಲ ರಾಶಿಯನ್ನು ಪ್ರದರ್ಶಿಸುತ್ತದೆ. ಪ್ರಜ್ಞಾನವನ್ನು ಬೆಳಗುತ್ತಾಳೆ." ಎನ್ನುತ್ತದಲ್ಲ! ಪ್ರಜ್ಞೆ, ಪ್ರಜ್ಞಾನಗಳು ಜಡಜಲವಿಜೃಂಭಿ ನದಿಗೆ ಎಂದಿಗಾದರೂ ಸಿದ್ಧಿಸಿಯಾವೇ ? "ಇದು ಕಾವ್ಯಮಯ ಭಾಷೆ; ಇಲ್ಲಿ ಜಡವೂ ಬುದ್ಧಿಯುಕ್ತ; ಜಡವೂ ವಾಕ್ಶಕ್ತಿಸಂಯುಕ್ತ." – ಎಂಬ ಕಲ್ಪನೆಗೆ ತೆಕ್ಕೆಬಿದ್ದು ಸಂಶಯಕ್ಕೆ ಸಮರ್ಥವಾದ ಸಮಾಧಾನವನ್ನು ಸಲ್ಲಿಸಲು ಸಾಧ್ಯವೆಂದು ಸಜ್ಜನರು ಸಾಫಲ್ಯದೊಂದಿಗೆ ಸಾಧಿಸಬಲ್ಲರೇ ? ಏಕೋ, ಏನೋ, ಕೊಂಡಿ ಕಳಚಿಕೊಂಡಂತೆ ಕಾಣುತ್ತದೆ.

ಈಗ ದಯಾನಂದ ದಂಡೀಧರಾದೀಶ್ವರರ ಭಾಷ್ಯದತ್ತ ನೋಡೋಣ. ಅವರು ಸರಸ್ವತಿಯನ್ನು **"ಜ್ಞಾನಮಯಿವಾಣಿ"** ಎಂದು ಅಭಿವರ್ಣಿಸಿದ್ದಾರೆ. ಆ ವಾಣಿ ಸಾಧಿಸಬಲ್ಲುದಾದರೂ ಏನನ್ನು? ಜಡಜಲ ಸಾಧಿಸಲಾರದುದನ್ನು ವಾಣಿ, ಜ್ಞಾನಮಯೀ ವಾಣಿ ಸಾಧಿಸಬಲ್ಲದು. ಅದೂಕೂಡ, ಪಶು–ಪಕ್ಷಿಗಳ ಅಥವಾ ಕ್ರಿಮಿ–ಕೀಟಗಳ ಸಂಕೇತದ ಭಾಷೆಯಲ್ಲಿದೆ. ಸಾರ್ಥಕ ಶಬ್ದಗಳ ಸುಸಂಗತ ಸಮುದಾಯದ ಭಾಷೆಯಾಗಿದ್ದರೆ, ಅದರ ಸತ್ತ್ವದ ಸ್ಫುಟವಾದ ವರ್ಣನೆಮಾಡುವ ಶಕ್ತಿ, ನರನ ನುಡಿಯ ಗಡಿಯ ಹೊರಗಿನದೇ ಸರಿ.

ಮಹರ್ಷಿ ದಯಾನಂದರು ಶ್ರೀ॥ಮಧ್ವರಂತೆ **'ಮಹ: ಅರ್ಣ'** ಎಂಬ ಪದ ದ್ವಯವನ್ನು ಆನಂದಮಯ ಭಗವಂತನಿಗೆ ಅನ್ವಯಿಸದೆ, 'ಮಹತ್ಸಮುದ್ರ' ಎಂದೇ ಅಂಗೀಕರಿಸುತ್ತಾರೆ. ಜ್ಞಾನಮಯೀ ವಾಣಿಗೂ, ಮಹತ್ಸಮುದ್ರಕ್ಕೂ ಸಂಬಂಧವೇನು ? "ಸರಸ್ವತೀ ಕೇತುನಾ **ಮಹೋ ಅರ್ಣಃ ಪ್ರಚೇತಯತಿ**" - ಎಂಬ ವಾಕ್ಯಕ್ಕೆ ಅರ್ಥ ಮಾಡುತ್ತಾ "ಜ್ಞಾನಮಯೀ ವಾಣಿ ಜಲದ ಮಹಾಸಮುದ್ರದಂತಹ ಶಬ್ದ ಸಮುದ್ರವನ್ನು ಪ್ರಕೃಷ್ಟರೂಪದಲ್ಲಿ ಅರಿವಿನ ಪರಿಧಿಗೆ ಪ್ರವೇಶಗೊಳಿಸುತ್ತದೆ." - ಎಂದಿದ್ದಾರೆ. ಸಾಧನಗಳಾವುವು ? 'ಕೇತುನಾ' - 'ಚೇತೋಹಾರಿ ಕರ್ಮದಿಂದ ಅಥವಾ ಪ್ರಜ್ಞೆಯಿಂದ' ಮಹರ್ಷಿಗಳು– **"ಶೋಭನೇನ ಕರ್ಮಣಾ ಪ್ರಜ್ಞಯಾ ವಾ."**-'ಶೋಭಾಜನಕ ಕರ್ಮದಿಂದ, ಅಥವಾ ಪ್ರಜ್ಞೆಯಿಂದ' – ಎಂದು ಹೇಳಿದ್ದಾರೆ. ಇದಕ್ಕೆ ನಿರುಕ್ತಕಾರ ಯಾಸ್ಕರು–**"ಕೇತುನಾ ಕರ್ಮಣಾ ಪ್ರಜ್ಞಯಾ ವಾ.** [5.3.27.6.] - "ಕೇತುವಿನಿಂದ ಎಂದರೆ ಕರ್ಮದಿಂದ, ಅಥವಾ ಪ್ರಜ್ಞೆಯಿಂದ"; **'ಕೇತುರಿತಿ ಪ್ರಜ್ಞಾನಾಮಸು ಪಠಿತಂ.'** [ನಿಘಂಟು–3.9.] "ಕೇತು - ಎನ್ನುವುದು ಪ್ರಜ್ಞೆಯ ಹೆಸರುಗಳಲ್ಲಿ ಒಂದು."; **"ಕೇತುಂ ಪ್ರಜ್ಞಾನಂ."** [6.1,7.] 'ಕೇತುವನ್ನು ಎಂದರೆ ಪ್ರಜ್ಞಾನವನ್ನು". ಈ ಮೊದಲಾದ ವಚನಗಳ ತಳಹದಿಯನ್ನು ಉಪಯೋಗಿಸಿಕೊಂಡಿದ್ದಾರೆ. "ಧಿಯೋ ವಿಶ್ವಾ ವಿರಾಜತಿ." - ಎಂಬುದಕ್ಕೆ-ಧಿಯೋ ಮನುಷ್ಯಾಣಾಂ ಧಾರಣಾವತೀಃ ಬುದ್ಧೀಃ"–"ಧೀಗಳನ್ನು - ಎಂದರೆ ಮಾನವರ ಧಾರಣಾವತೀ ಬುದ್ಧಿಗಳನ್ನು" - ಎಂದರ್ಥ ಮಾಡಿದ್ದಾರೆ. ಇದಕ್ಕೂ ಯಾಸ್ಕರ **'ಧಿಯಃ ಇಮಾನಿ ಸರ್ವಾಣಿ ಪ್ರಜ್ಞಾನಾನಿ.'** [5.3.27.6.] – **"ಧೀಗಳನ್ನು, ಎಂದರೆ ಈ ಸಮಸ್ತ ಪ್ರಜ್ಞಾನಗಳನ್ನು"** ಎಂಬ ಪ್ರಮಾಣವಿದೆ. ಸ್ಕಂದಸ್ವಾಮಿಗಳು, ಉವ್ವಟರು, ಮಹೀಧರರು **"ಧೀಯಃ"** ಎಂಬುದಕ್ಕೆ – **"ಬುದ್ಧಿಗಳನ್ನು"** ಎಂದೇ ಅರ್ಥ ಮಾಡಿದ್ದಾರೆ.

ವೆಂಕಟಮಾಧವರು **"ಕೇತುನಾ"** ಎಂಬುದಕ್ಕೆ **'ಕರ್ಮಣಾ, ಕರ್ಮದಿಂದ'**-ಎಂದೂ, **'ಧಿಯಃ ಪ್ರಜ್ಞಾಃ'** - "ಧೀಗಳನ್ನು ಎಂದರೆ ಪ್ರಜ್ಞೆಗಳನ್ನೂ" ಎಂದೂ ವಿವರಿಸಿದ್ದಾರೆ. ಆದರೆ, **"ಧಿಯಂ ಧಿಯಂ ಕರ್ಮ ಕರ್ಮ"** [6.2.18.7.] - "ಧೀಯನ್ನು ಧೀಯನ್ನು ಎಂದರೆ ಕರ್ಮವನ್ನು ಕರ್ಮವನ್ನು." **"ಧೀಭಿಃ ಕರ್ಮಭಿಃ"** [6.3.30.11.]- "ಧೀಗಳಿಂದ, ಎಂದರೆ ಕರ್ಮಗಳಿಂದ." ಎಂಬ ಯಾಸ್ಕೋಕ್ತಿ ಅದಾವ ಭಾಷ್ಯಕಾರರಿಗೂ ಏಕೆ ಹೊಳೆಯಲಿಲ್ಲವೋ ?

ಅದು ಹೇಗಾದರೂ ಇರಲೊಲ್ಲದೇಕೆ? ಮಹರ್ಷಿದಯಾನಂದರು - **"ಜಲಾರ್ಣವಮಿವ ಶಬ್ದಸಮುದ್ರಂ"** ಎಂದು ಹೇಳಿದುದರ ಔಚಿತ್ಯವೇನು? ನಿರುಕ್ತಕಾರರು - **"ಸಮುದ್ರ ಆತ್ಮಾ"** [ಪರಿ. 2. 16.] - "ಸಮುದ್ರ - ಎಂದರೆ ಆತ್ಮನು."; **"ಸಮುದ್ರಾ ಮೇಘಾ:"** [5. 4. 41. 7.] - "ಸಮುದ್ರಗಳೆಂದರೆ ಮೇಘಗಳು."; **"ಸಮುದ್ರಂ: ಮೇಘಂ."** [4. 3. 32. 8.] - "ಸಮುದ್ರವನ್ನು-ಎಂದರೆ ಮೇಘವನ್ನು."; **"ಸಮುದ್ರ ಕಸ್ಮಾತ್? ಸಮುದ್ರವಂತಿ ಅಸ್ಮಾದಾಪ:। ಸಮುದ್ರವಂತ್ಯೇನಮಾಪ ಸಂಮೋದಂತೇಽಸ್ಮಿನ್ ಭೂತಾನಿ। ಸಮುದಕೋ ಭವತಿ। ಸಮುನತ್ತೀತಿವಾ॥** [2. 3. 10. 1.] ಮಹರ್ಷಿದಯಾನಂದರ ಮೇಧಾಮಹಿಮೆಯನ್ನೂ, ಮಂತ್ರಾರ್ಥದರ್ಶನದ ಆರ್ಷ - ಗಾಂಭೀರ್ಯವನ್ನೂ ಕಂಡುಕೊಂಡಾಗ, ಅವರ ಭಾಷ್ಯ ಭಾವನಾ ಬಲವನ್ನೂ ಮಂತ್ರಗಳ ಶಬ್ದ-ಶಬ್ದದ ನೈಜಾರ್ಥ-ಧ್ವನಿತಾರ್ಥಗಳ ಅಂಗೀಕರಣಚಾತುರ್ಯವನ್ನೂ ತಿಳಿದು, **'ಮಹರ್ಷೇ! ಮಹರ್ಷಿರೇವಾಸಿತ್ವಂ!"** - "ಮಹರ್ಷೇ! ಮಹರ್ಷಿಯೇ ಸರಿ ನೀನು." - ಎನ್ನಲೇ ಬೇಕಾದೀತು. "ಶಬ್ದ" ಎಂಬುವುದಕ್ಕೆ ಸ್ವನ, ಸದ್ದು, ನಾದ - ಇತ್ಯಾದಿ ಅನ್ಯಾರ್ಥಗಳಿದ್ದರೂ. ಶಾಸ್ತ್ರಪ್ರಪಂಚದಲ್ಲಿ ಅದಕ್ಕೆ ಬೇರೆಯದೊಂದು ಅರ್ಥವೇ ಇರುತ್ತದೆ. ವ್ಯಾಕರಣದ 'ಶಬ್ದ'ವಲ್ಲ; ಧರ್ಮಶಾಸ್ತ್ರಗಳ ಲೋಕದಲ್ಲಿ. **'ಆಪ್ತೋಪದೇಶಃ ಶಬ್ದ:"** [ನ್ಯಾಯ:- 1. 1. 7.] - ಎಂಬ ಗೌತಮ ವಚನ ಈಗ ಸ್ಮರಣೀಯ. ಹಿಂದೆ ಆಪ್ತಲಕ್ಷಣ ಹೇಳಿದ್ದೇವೆ. ಆಪ್ತರಿಗೂ ಆಪ್ತ; ಆಪ್ತತಮರಿಗೂ ಆಪ್ಯ ಆ ಆಪ್ ಶಬ್ದ ವರ್ಣಿತನಾದ ಭಗವಂತ. ಉದಾರಾತ್ಮರಾದ ಋಷಿಮುನಿಗಳ ಉಪದೇಶವು ಶಬ್ದ; ಉದಾರತಮ ಮಹಾನ್ ಆತ್ಮನಾದ ಪರಮಾತ್ಮನ ಉಪದೇಶವಾದ ವೇದಗಳೂ ಶಬ್ದವೇ. ಗೌತಮೋಕ್ತ **ಶಬ್ದ,** ಪತಂಜಲಿಪ್ರೋಕ್ತ **'ಆಗಮ'**, ಕಣಾದೋಕ್ತ **ಆಮ್ನಾಯ,** ವ್ಯಾಸೋಕ್ತ **'ಶಾಸ್ತ್ರ,** ಕಪಿಲಕೀರ್ತಿತ **'ಶಬ್ದ'**, ಯಾಸ್ಕೋಪದಿಷ್ಟ **'ನಿಗಮ'** - ಎಲ್ಲವೂ ಏಕಭಾವನಾ ಸೂಚಕವೇ.

ಒಟ್ಟಿನಲ್ಲಿ, ವೈದಿಕಸಾಹಿತ್ಯದ ಚೌಕಟ್ಟಿನಲ್ಲಿ "ಶಾಸ್ತ್ರ" ಎಂದರೆ' ಶಬ್ದ' ಎಂದೇ ಗ್ರಾಹ್ಯ' **ಸರಸ್ವತೀ ಜಲಾರ್ಣವಮಿವ ಶಬ್ದಸಮುದ್ರಂ ಪ್ರಚೇತಯತಿ."** - ಎಂದು ಮಹರ್ಷಿಗಳು ಹೇಳುವಾಗ "ಜಲದ ಅರ್ಣವದಂತೆ ಶಬ್ದಸಮುದ್ರವನ್ನು ಜ್ಞಾಪಿಸುತ್ತಾಳೆ. ಎಂದಿದ್ದಾರೆ. ಯಾಸ್ಕರು - **'ಸಮುದ್ರಃ ಆತ್ಮಾ'** [ಪರಿ:- 2. 16]; **'ಸಮುದ್ರಃ ಮೇಘಾಃ'** [5. 4. 41. 7.]; **"ಸಮುದ್ರಃ ಕಸ್ಮಾತ್? ಸಮುದ್ರವಂತ**

**ಸ್ಮಾದಾಪಃ। ಸಮಭಿದ್ರವಂತೀಸಮಾಪಃ। ಸಮ್ಮೋದಂತೇಽಸ್ಮಿನ್ ಭೂತಾನೀ ಸಮುದಕೋ ಭವತಿ ಸಮುನತ್ತೀತಿವಾ॥** [2. 3. 10. 1.]

ಹೀಗೆ, ಆತ್ಮನು ಸಮುದ್ರ; ಮೇಘಗಳು ಸಮುದ್ರ; ಯಾವುದರಿಂದ ಆಪ್ತರು ಮೇಲೇರುತ್ತಾರೋ ಅದು ಸಮುದ್ರ; ಯಾವುದರಲ್ಲಿ ಆಪ್ತರು ಪ್ರವಿಷ್ಟರಾಗುತ್ತಾರೋ ಅದು ಸಮುದ್ರ; ಪ್ರಾಣಿಮಾತ್ರರಿಗೆ ಹರ್ಷಕೊಡುವಂತಹುದು ಸಮುದ್ರ. ಉತ್ತಮ ರೀತಿಯಲ್ಲಿ ಉದ್ಧರಿಸುವುದು ಸಮುದ್ರ; ನೀರಸವನ್ನೂ ಸರಸಗೊಳಿಸುವುದು ಸಮುದ್ರ." - ಇದಿಷ್ಟು ಯಾಸ್ಕೋಕ್ತಿ. ಆತ್ಮಗಳೆಲ್ಲರಿಗೂ ಆತ್ಮನಾದ ಪರಮಾತ್ಮನು ಸಮುದ್ರ. ಅವನು ಆನಂದಘನನು.; ಆನಂದವರ್ಷಕನು. ಆಪ್ತರು ಅವನ ಅನುಕಂಪದಿಂದಲೇ ಆತ್ಮೋದ್ಧಾರವನ್ನು ಸಾಧಿಸುತ್ತಾರೆ. ಮೋಕ್ಷಾವಸ್ಥೆಯಲ್ಲಿ ಅವನಲ್ಲಿಯೇ ಪ್ರವಿಷ್ಟರಾಗುತ್ತಾರೆ. ಜೀವರೆಲ್ಲಾ ಅವನಲ್ಲಿ ಹರ್ಷಿತರಾಗುತ್ತಾರೆ. ಸಮ್ಯಗ್ರೂಪದಲ್ಲಿ ಸಮಸ್ತರಿಗೂ ಸುಖವನ್ನುಂಟು ಮಾಡುತ್ತಾನೆ; ಜೀವನ ಆಕರ್ಷಣ ಹೀನವಾದಾಗ, ರಸರಹಿತವಾದಾಗ, ಅದಕ್ಕೆ ರಸಪ್ರದಾನ ಮಾಡುವವನೂ ಆ ಪರಮಾತ್ಮನೇ." ಸರ್ವಾಂತರಾತ್ಮನೂ, ಆನಂದದಾಯಕನೂ, ಆಪ್ತೋದ್ಧಾರಕನೂ, ಸಜ್ಞಾನಾಶ್ರಯನೂ, ಜೀವರನ್ನು ಹರ್ಷಗೊಳಿಸುವವನೂ, ಸರ್ವಸುಖಪ್ರದನೂ ಜೀವನಕ್ಕೆ ರಸವೆರೆಯುವವನೂ ಆದ ಕರುಣಾಮಯ ಭಗವಂತನೇ ಸಮುದ್ರ. ಮಹರ್ಷಿ "ಶಬ್ದ ಸಮುದ್ರ" ಎಂಬ ಸಮಾಸ ಬದ್ಧ ಶಬ್ದವನ್ನು ಬಳಸಿದ್ದಾರೆ. "ಶಬ್ದೈಃಶಾಸ್ತ್ರೈಃ ವರ್ಣಿತಃ ಸಮುದ್ರಃ ಸರ್ವೋದ್ಧಾರಕಃ ಸರ್ವಾನಂದಪ್ರದಃ ಸರ್ವಾಶ್ರಯ ಸ್ವರೂಪಃ ಪರಮಾತ್ಮಾ" - ಎಂದರೆ, "ಶಾಸ್ತ್ರಗಳಿಂದ ವರ್ಣಿತನಾದ ಸರ್ವಸುಖ - ಶಾಂತಿಪ್ರದ, ಸರ್ವೋದ್ಧಾರಕ ಸರ್ವಾಶ್ರಯ ಪರಮಾತ್ಮನು" ಎಂದು ಬಿಡಿಸಿ ಹೇಳಬಹುದು. ಸತ್ಯಜ್ಞಾನಸರ್ವಾಭೀಷ್ಟ ಸಾಧಕವಾಣೀ ಸರಸ್ವತೀ, ಸರ್ವವಿದ್ಯಾಮಯೀವಾಕ್ಕು, ಅನರ್ಘ ರತ್ನದಿಂದ ಹಿಡಿದು ಕ್ರೂರ ತಿಮಿಂಗಿಲಾದಿಗಳೆಲ್ಲಕ್ಕೂ ಆಶ್ರಯ ಭೂತವಾಗಿರುವ ಮಹಾವಿಶಾಲ ಸಾಗರದಂತೆ ಅನಂತನಾಗಿ, ಅಸೀಮನಾಗಿ, ಸಮಸ್ತ ಬ್ರಹ್ಮಾಂಡವನ್ನೂ ತನ್ನಲ್ಲಿಯೇ ಅಡಗಿಸಿಕೊಂಡು ಸುಖ - ಸೌಲಭ್ಯ - ಭೋಗ - ಆನಂದಗಳನ್ನೆರೆಯುತ್ತಿರುವ ದಯಾಮಯ ದೇವ - ದೇವನ ನೇರವಾದ ಜ್ಞಾನವನ್ನುಂಟುಮಾಡುತ್ತಿದೆ. ಈಶ್ವರಸಾಕ್ಷಾತ್ಕಾರಕ್ಕೊದಗದ ಜ್ಞಾನಮಯೀ ವಾಣೀ ಇದ್ದರೆಷ್ಟು, ಇಲ್ಲದಿದ್ದರೆಷ್ಟು ? ಸಮಸ್ತ ವೇದಗಳ ಜ್ಞೇಯ ಆ ಒಬ್ಬ ದೇವನೇ ಆಗಿರುವಾಗ, ಸರ್ವ ವಿದ್ಯೆಗಳನ್ನೂ ಕಲಿಸಿ, ಆ ಒಬ್ಬನನ್ನು ತಿಳಿಸಲಾರದೇ ಹೋದರೆ, ಏಕಿರಬೇಕು ಆ ಸರಸ್ವತೀ ? ಸ್ವಯಂ ಋಕ್ಕೇ ಹೇಳುತ್ತಿದೆ:-

**ಋಚೋ ಅಕ್ಷರೇ ಪರಮೇವ್ಯೋಮನ್ ಯಸ್ಮಿನ್ದೇವಾ ಅಧಿ ವಿಶ್ವೇ ನಿಷೇದುಃ।**
**ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಯ ಇತ್ತದ್ವಿದುಸ್ತ ಇಮೇ ಸಮಾಸತೇ ॥**

[ಋಗ್ವೇದ:- 1.164.39.]

"[ವಿಶ್ವೇದೇವಾಃ] ಸಮಸ್ತ ಜಡ-ಚೇತನ ದೇವತೆಗಳೂ, [ಯಸ್ಮಿನ್] ಯಾವ, [ಅಕ್ಷರೇ ಪರಮೇ ವಿ+ಓಮನ್ ಅಧಿ] ಅಕ್ಷಯನೂ, ಸರ್ವಶ್ರೇಷ್ಠನೂ, ವಿಶಿಷ್ಟ ಸರ್ವ ರಕ್ಷಕನೂ ಆದ ಭಗವಂತನಲ್ಲಿ, ಅಥವಾ, [ವ್ಯೋಮನ್ ಅಧಿ] ಆಕಾಶದಂತೆ ಸರ್ವವ್ಯಾಪಕನಾದ

ಪರಮಾತ್ಮನಲ್ಲಿ, [ನಿಷೇದುಃ] ನೆಲೆಸಿದ್ದಾರೋ, [ತಂ] ಅವನನ್ನು, [ಋಚಃ] ಋಕ್ಕಿನಿಂದ, [ನ ವೇದ] ತಿಳಿದುಕೊಳ್ಳುವುದಿಲ್ಲವೋ, ಅವನು [ಋಚಾ] ಋಕ್ಕಿನಿಂದ, [ಕಿಂ ಕರಿಷ್ಯತಿ] ಸಾಧಿಸುವನಾದರೂ ಏನನ್ನು ? [ಯೇ ಇತ್] ಕೇವಲ ಯಾರು, [ತತ್‌ವಿದುಃ] ಅವನನ್ನು ಅರಿತುಕೊಳ್ಳುತ್ತಾರೋ, [ತೇ ಇಮೇ] ಅಂತಹ ಇವರೇ, [ಸಂ ಆಸತೇ] ಒಂದಾಗಿ, ಒಳಿತಾಗಿ. ಜೊತೆಗೂಡಿ, ಸುಖದಿಂದ ಬಾಳುತ್ತಾರೆ." ಶಾಸ್ತ್ರಗಳೆಲ್ಲದರ ಏಕಮಾತ್ರ ವೇದ್ಯನಾದ ಈಶ್ವರ ನನ್ನು ತೋರಿಸಲಾರದ ಶಾಸ್ತ್ರ ಶಾಸ್ತ್ರವೇ ಅಲ್ಲ.

ಸರ್ವಜ್ಯೇಷ್ಠ-ಸರ್ವಶ್ರೇಷ್ಠ, ವೇದ ವೇದ್ಯ ಪರಮೇಶ್ವರನೇ, ಜಿಜ್ಞಾಸುಗಳ ಜಾತ್ಯ ಗಳ, ಜಿಜೀವಿಷುಗಳ (ಬದುಕ ಬಯಸುವವರ) ಹಾಗೂ ಮುಮುಕ್ಷುಗಳ (ಮೋಕ್ಷ-ಕಾಮರ) ಮರ್ಮವನ್ನರಿಯುವಂತೆ ವೇದಗಳು ಅಲ್ಲಲ್ಲಿ ಪ್ರಶ್ನೆಗಳನ್ನು ಹಾಕುತ್ತವೆ. **'ಕಸ್ತೇಜಾಮಿ ರ್ಜನಾನಾಂ ? ಕೋ ಹ ಕಸ್ಮಿನ್ನಸಿಶ್ರಿತಃ ?'** [ಋಕ್:–1.75.3.] – "ನಿನ್ನ ಜನರ ನಂಟನಾವನು ? ನೀನಾದರೂ ಯಾವನು ? ಯಾವನಲ್ಲಿ ಆಶ್ರಯ ಪಡೆದಿರುವೆ?", **'ಕೋ ಅದ್ಧಾವೇದ ಕ ಇಹ ಪ್ರವೋಚತ್ ?'** [ಋಕ್:-10.129.6.] "ಯಾವನು ಬಲ್ಲನು ಚೆನ್ನಾಗಿ ? ಯಾವನು ಇಲ್ಲಿ ಪ್ರವಚನವಿತ್ತಾನು ?"; **"ಕೋ ವಸ್ತ್ರಾತಾ ವಸವಃ ಕೋ ವರೂತಾ ?......ಕೋ ವೋsಧ್ವರೇ ವರಿವೋಧಾತಿ ದೇವಾಃ."** [ಋಕ್:- 4.55.1.] - "ಜ್ಞಾನಿಗಳೇ ! ದೇಹ ನಿವಾಸೀ ಜೀವರೇ ! ನಿಮ್ಮ ರಕ್ಷಕನಾವನು? ನಿಮ್ಮನ್ನು ತನ್ನವರಾಗಿ ವರಿಸುವವನಾವನು ? ನಿಮ್ಮ ಯಜ್ಞದಲ್ಲಿ ಸಂಪತ್ತನ್ನು ಎರೆಯು ವವನಾವನು ? ಯಾವನು ? ಯಾವನು ? ಯಾವನು ? ಅವನೇ; ಆ ಭಗವಂತನೇ ? **ಆ ತ್ರ್ಯಂಬಕನೇ,** [ಋಕ್:-7.59.12.] ಆ ಜ್ಞಾನಕ್ಕೂ ಕಣ್ಣಾದವನೇ. ಕರ್ಮಕ್ಕೂ ಕಣ್ಣಾದವನೇ. ಉಪಾಸನೆಗೂ ಕಣ್ಣಾದವನೇ,ಆ ಕೈಲಾಸನಾಥ ಹಣೆಗಣ್ಣನಲ್ಲ; ವಿದ್ಯಾತ್ರಯಕ್ಕೂ ನೇತ್ರವಾಗಿರುವವನೇ ವೇದವೇದ್ಯ. ಕೇವಲ **"ಶಬ್ದ ಸಮುದ್ರ"** –"ಶಾಸ್ತ್ರ-ವೇದ್ಯ ಸರ್ವೋ ದ್ಧಾರಕ ಆನಂದವರ್ಷಕ ಪ್ರಭು." – ಎಂಬ ಸಮಸ್ತಶಬ್ದದಿಂದ ಮನದಟ್ಟಾಗುವಂತೆ, ವೇದ-ವೇದ್ಯನನ್ನು ತೋರಿಸಿಕೊಟ್ಟ ಧೀರಸಂನ್ಯಾಸಿಗಳು ದಯಾನಂದರು.

ಶ್ರೀ॥ ಮಧ್ವರು 'ಮಹಃ **ಅರ್ಣಃ**'ವನ್ನೇ ಪರಬ್ರಹ್ಮವಾಗಿ, **'ಅರಂಣ:'(ಅರ್ಣಃ**- ಎಂಬ ಪದಕ್ಕೆ ಮಧ್ವರಿತ್ತ ರೂಪಾಂತರ)ನನ್ನೇ ''ನಿರತಿಶಯ ಆನಂದರೂಪ''ನನ್ನಾಗಿ ವೇದ ವೇದ್ಯನನ್ನಾಗಿ ತೋರಿಸಿಕೊಟ್ಟರೆ, ಮಹರ್ಷಿಗಳು 'ಮಹಾ ಸಮುದ್ರ'ದಂತೆ 'ಶಬ್ದಸಮುದ್ರ' ನನ್ನು, 'ಶಾಸ್ತ್ರಪ್ರತಿಪಾದಿತ ಸರ್ವೋದ್ಧಾರಕ ಆನಂದ ದಾತೃ'ವನ್ನು ವೇದವೇದ್ಯನನ್ನಾಗಿ ತೋರಿಸಿಕೊಟ್ಟರು. "ಜ್ಞಾನಮಯೀ ವಾಣಿ ಕರ್ಮ-ಜ್ಞಾನಗಳ ಮೂಲಕ ಭಗವಂತನನ್ನು, ವಿಶಿಷ್ಟಕ್ರಮದಲ್ಲಿ ತೋರಿಸಿಕೊಡುತ್ತದೆ. ಬುದ್ಧಿ–ಕರ್ಮಗಳೆಲ್ಲವನ್ನೂ ಅದೇ ವಾಣಿ ವಿಶೇ ಷತಃ ಪ್ರಕಾಶಪಡಿಸುತ್ತದೆ." – ಎಂಬ ತಾತ್ಪರ್ಯ ಅದೆಷ್ಟು ಸ್ಫೂರ್ತಿದಾಯಕವಾಗಿದೆ ? ಈ ಸರಸ್ವತಿಗೆ ಕಪೋಲಕಲ್ಪಿತವಾದ ಆಕಾರವನ್ನು ಕೊಡಬೇಕೆಂಬ ಉನ್ಮಾದ ಯಾರಿಗೂ ಬೇಡ; ಯಾವಕಾಲಕ್ಕೂ ಬೇಡ. ಜ್ಞಾನಾದಿಸಮಸ್ತ ಸದ್ಗುಣಗಳನ್ನೂ, ಸದ್ವ್ಯವಹಾರಗಳನ್ನೂ ಜೀವನಾಧಾರವಾದ ಅನ್ನಜಲಾದಿಗಳನ್ನೂ ಪಡೆದುಕೊಳ್ಳಲು ನೆರವಾಗುವ ಜ್ಞಾನಮಯೀ

ವಾಣಿಯಾಗಿಯೇ ಉಳಿದಿರಲಿ, ಈ ಸರಸ್ವತೀ ದೇವಿ. ಸರಸ್ವತೀ ದೇವತಾಕವಾದ ಈ ಮೂರು ಮಂತ್ರಗಳನ್ನು ಮುಗಿಸುವ ಮುನ್ನ ಈ ಶ್ರುತಿಯನ್ನಾಲಿಸಿ, ನಾಲ್ಕನೆಯ ಸೂಕ್ತಕ್ಕೆ ಕೈ ಹಾಕೋಣ:—

**ಆ ಭಾರತೀ ಭಾರತೀಭಿಃ ಸಜೋಷಾ ಇಳಾ ದೇವೈಃ ಮನುಷ್ಯೇಭಿರಗ್ನಿಃ।**
**ಸರಸ್ವತೀ ಸಾರಸ್ವತೇಭಿರರ್ವಾಕ್ ತಿಸ್ರೋ ದೇವೀರ್ಬರ್ಹಿರೇದಂ ಸದಂತು**

[ಋಗ್ವೇದ:- 3. 4. 8.

"[ಭಾರತಿ] **"ಬಿಭರ್ತಿ ವಿಶ್ವ" ಮಿತಿ ಭರತ ಈಶ್ವರಃ ; ತಸ್ಯೇದಮಿತಿ ಭಾರತಂ ಜೀವಜಾತಂ ವಾ ಮಾನವ ಮಾತ್ರಂ ವಾ। ತಸ್ಯ ಭಾರತಸ್ಯ, ಜೀವಜಾತಸ್ಯ, ಮಾನವಮಾತ್ರಸ್ಯವಾ ಧಾರಿಣೀ ಧಾರಿಕಾಶಕ್ತಿಃ ಧರ್ಮ ಏವ ಭಾರತಿ.** ವಿಶ್ವವನ್ನು ಎತ್ತಿಹಿಡಿಯುವ ಈಶ್ವರನೇ ಭರತನು. ಅವನ ಸಂತತಿಯಾದ ಜೀವಸಮೂಹವು, ಅಥವಾ ಮಾನವ ಮಾತ್ರರು 'ಭಾರತ'ರು. ಭಾರತರ ಧಾರಕಶಕ್ತಿಯೇ, **ಧರ್ಮವೇ ಭಾರತೀ.** ಈ ಭಾರತಿಯು, [ಭಾರತೀಭಿಃ] ತನ್ನ ಧಾರಣಾಶಕ್ತಿಗಳೊಂದಿಗೆ, [ಸಜೋಷಾಃ] ಸ್ಫೂರ್ತಿಯೊಂದಿಗೆ, [ಇಳಾ] ಈ ನಮ್ಮ ಭೂಮಿಯು, [ದೇವೈಃ] ದಿವ್ಯಗುಣ ಕರ್ಮಸ್ವಭಾವಗಳಿಂದ ಯುಕ್ತರಾದ ವಿದ್ವಾಂಸರುಗಳೊಂದಿಗೆ, [ಅಗ್ನಿಃ] ಪ್ರಜಾಮಾತ್ರರ ವಿದ್ವಾನ್ ನಾಯಕನು ತೇಜಸ್ವೀ ರಾಷ್ಟ್ರಶಾಸಕನು, [ಮನುಷ್ಯೇಭಿಃ] ಮನನ ಶೀಲರಾದ ಮಾನವರೊಂದಿಗೆ [ಸರಸ್ವತೀ] ಜ್ಞಾನಮಯೀ ವಾಣಿಯು, ಈಶ್ವರೀಯ ವಾಣಿಗಳಾದ ವೇದ ವಿದ್ಯೆಯು, [ಸಾರಸ್ವತೇಭಿಃ] ಸಾರಸ್ವತರೊಂದಿಗೆ, ಸರಸ್ವತೀ - ಪುತ್ರರೊಂದಿಗೆ. ಜ್ಞಾನ-ವಿಜ್ಞಾನ-ಸದ್ವೃತ್ತಿ-] ಸದ್ವ್ಯವಹಾರ ಮೊದಲಾದುವುಗಳಿಂದ ರಾರಾಜಿಸುವ, ರಾಷ್ಟ್ರಾಲಂಕಾರ ಪ್ರಾಯರಾದ ಪ್ರಬುದ್ಧ ಪ್ರಜೆಗಳೊಂದಿಗೆ, [ತಿಸ್ರಃ ದೇವೀಃ] ಅಗ್ನಿಸಂಯುಕ್ತರಾದ, ಭಾರತೀ, ಇಳಾ, ಸರಸ್ವತೀ – ಎಂಬ ಈ ಮೂವರು ದೇವಿಯರು, [ಆ] ಎಲ್ಲೆಡೆಯಿಂದಲೂ, [ಅರ್ವಾಕ್] ಮುಂದೆ ಬಂದು, [ಇದಂ ಬರ್ಹಿಃ] ಈ ವಿಶಾಲವಾದ ರಾಷ್ಟ್ರೀಯ ವೇದಿಕೆಯ ಮೇಲೆ [ಆ ಸದಂತು] ಸದಾ ವಿರಾಜಿಸುತ್ತಿರಲಿ."

**ಇತಿ ಋಗ್ವೇದೀಯ ಪ್ರಥಮ ಮಂಡಲಸ್ಯ**
**ತೃತೀಯಸ್ಯ ಸೂಕ್ತಸ್ಯ ಭಾಷ್ಯಂ ಸಮಾಪ್ತಂ.**

---

**ಈ ವೇದಭಾಷ್ಯದ ೧೪ ಪುಟಗಳ ಪೂರ್ಣವೆಚ್ಚ**
**ಶ್ರೀಮತಿ ಸತ್ಯಶೀಲಮ್ಮ ಬಿ. ವಿ. ರತ್ನಯ್ಯ ಸೆಟ್ಟಿ**
**ಮೈಸೂರು ಇವರ ಸೇವೆ.**

## ಪ್ರಥಮ ಮಂಡಲದ ಚತುರ್ಥ ಸೂಕ್ತ

ಈ ಸೂಕ್ತದಲ್ಲಿರುವ ಮಂತ್ರಗಳ ಸಂಖ್ಯೆ ೧೦

### ಸಂಹಿತಾ ವಿಭಾಗ

[ಮಧುಚ್ಛಂದಾ ಋಷಿಃ । ಇಂದ್ರೋ ದೇವತಾ ।]

[1, 2, 4, 9, ಗಾಯತ್ರೀ । 3. ವಿರಾಡ್ಗಾಯತ್ರೀ । 10. ನಿಚೃದ್ಗಾಯತ್ರೀ। ಷಡ್ಜಃ ಸ್ವರಃ]

**ಸುರೂಪಕೃತ್ನು ಮೂತಯೇ ಸುದುಘಾಮಿವ ಗೋದುಹೇ ।**

**ಜುಹೂಮಸಿ ದ್ಯವಿ ದ್ಯವಿ ॥೧॥**

**ಪದಪಾಠ:**– ಸುರೂಪಕೃತ್ನುಂ, ಊತಯೇ, ಸುದುಘಾಂ, ಇವ, ಗೋದುಹೇ, ಜುಹೂಮಸಿ, ದ್ಯವಿದ್ಯವಿ ॥೧॥

**ಅನ್ವಯ:**– ಸುರೂಪಕೃತ್ನುಂ (ಇಂದ್ರಂ) ಊತಯೇ, ಗೋದುಹೇ ಸುದುಘಾಂ, ಇವ, ದ್ಯವಿದ್ಯವಿ ಜುಹೂಮಸಿ.

**ಶಬ್ದಾರ್ಥ:**– [ಸುರೂಪಕೃತ್ನುಂ] ಬಾಹ್ಯ ಜ್ಞಾನೇಂದ್ರಿಯಗಳ ಹಾಗೂ ಆಭ್ಯಂತರೇಂದ್ರಿಯಗಳ, ಅಂತಃಕರಣಗಳ ಹಿಡಿತಕ್ಕೆ ಸಿಕ್ಕಿ, ಅನುಭವ ಗೋಚರವಾಗುವ ಪ್ರತಿಯೊಂದು ಕಾರ್ಯರೂಪಕ್ಕೆ ಬಂದು ವ್ಯಕ್ತವಾಗುವ ಭೌತಿಕ ಪದಾರ್ಥಕ್ಕೂ ಸೌಂದರ್ಯ-ಸಮ್ಮೇಳನದಿಂದ ಸುರೂಪವನ್ನೇ ಕರುಣಿಸಿ ಸುಂದರ ಸೃಜನದ ಸ್ಪಷ್ಟ ಸ್ವರೂಪದಿಂದ ವಿಶ್ವವನ್ನು ಮೆರೆಯಿಸುವ ಸರ್ವೇಶ್ವರ (ಇಂದ್ರ) ನನ್ನು, [ಊತಯೇ] ರಕ್ಷಣೆಗಾಗಿ, ಅಭೀಷ್ಟಸಿದ್ಧಿಗಾಗಿ, ದೈವಿಕ ತ್ರಾಣಕ್ಕಾಗಿ ಮತ್ತು ವಿದ್ಯಾ-ಸಂಪಾದನೆಗಾಗಿ, [ಗೋದುಹೇ] ನೊರೆಹಾಲನ್ನು ಕರೆಯುವುದಕ್ಕಾಗಿ, ಗೋವಿನಿಂದ ಮಾತ್ರವೇ ಲಭಿಸಬಲ್ಲ, ಪೂರ್ಣ-ಆಹಾರದ ಕಾಮನೆಯುಳ್ಳ ಮಾನವನಿಗಾಗಿ, [ಸುದುಘಾಂ] ಉತ್ತಮವಾದ ಹಾಲನ್ನು ಕೊಡುವ ಉತ್ಕೃಷ್ಟವಾದ ಗೋವನ್ನೇ, [ಇವ] ಸನಿಯಕ್ಕೆ ಕರೆಯುವಂತೆ, [ದ್ಯವಿದ್ಯವಿ] ದಿನ-ದಿನವೂ, [ಜುಹೂಮಸಿ] ಸ್ತುತಿಸುತ್ತೇವೆ; ಹೃದಯದ ಅತ್ಯಂತ ನಿಕಟದಿಂದಾಗುವ ನಿನ್ನ ಪ್ರಾಪ್ತಿಯ ಅನುಭೂತಿಯನ್ನು ಕೋರುತ್ತೇವೆ; ಅನುಭವಗಮ್ಯನಾಗೆಂದು ಪ್ರಾರ್ಥಿಸುತ್ತೇವೆ.

**ತಾತ್ಪರ್ಯ:**– ಸೃಷ್ಟಿ-ಸ್ಥಿತಿ-ಪ್ರಳಯ ನಿಮಿತ್ತನಾದ ಸರ್ವಜ್ಞನಾದ ಭಗವಂತನು ವಿಶಾಲ ಬ್ರಹ್ಮಾಂಡದ ಈ ಮಹಾಸೃಜನ ಕಾರ್ಯದಲ್ಲಿ, ಸೇಂದ್ರಿಯ ಜೀವರಾದ ನಮ್ಮ ಒಳಗಿನ-ಹೊರಗಿನ ಅರಿವಿನ ಪರಿಧಿಯಲ್ಲಿ ವ್ಯಕ್ತವಾಗುವ ಪ್ರತಿಯೊಂದು ಪದಾರ್ಥವನ್ನೂ ಸುಂದರವಾಗಿಯೇ ನಿರ್ಮಿಸಿದ್ದಾನೆ. ಕೇವಲ ಆಕಾರದ ಬಾಹ್ಯ-ಶೀಮೆಯಲ್ಲಿ ಅಲ್ಲ; ಪ್ರತಿ

ಯೊಂದು ಮಹಾಸಾಗರ, ಹಿಮವತ್ಪರ್ವತದ ಶೃಂಖಲಾ ಬದ್ಧ ಶ್ರೇಣಿಗಳು, ಜೀವನಾಧಾರ ವಾದ ಓಷಧಿ-ವನಸ್ಪತಿಗಳು, ದವಸ-ಧಾನ್ಯಗಳು, ಹಣ್ಣು-ಕಾಯಿಗಳು ಮತ್ತು ಪತ್ರ-ಪುಷ್ಪ-ಗಳು, ಮೊಗ್ಗು-ಚಿಗುರುಗಳು, ಎಲ್ಲಿಯವರೆಗೆ ಮಾನವೀಯ ಮಾನಸದ ಓಟ ಕಲ್ಪನೀಯವೋ. ಅಲ್ಲಿಯವರೆಗೆ, ಅಲ್ಲಿನಿಂದಾಚೆಗೂ ಕೂಡ. ಎಲ್ಲೆಗಳ ಸೊಲ್ಲಿಗೆ ಸ್ವಲ್ಪವಾದರೂ ಸ್ಥಾನವಿಲ್ಲದಂತೆ ಹರಡಿರುವ ಅಸಂಖ್ಯ ತಾರಾಗಣಗಳು, ಸೂರ್ಯ-ಚಂದ್ರ-ಮೊದಲಾದ ಮಹಾನ್‌ಲೋಕ-ಲೋಕಾಂತರಗಳು–ಯಾವುದನ್ನೇ ನೋಡಲೊಲ್ಲೆವೇಕೆ ? ಎಲ್ಲೆಡೆಗೂ ಅನ್ವಯಿಸುವ "ಸುಂದರ ಅತಿಸುಂದರ;. ಅತ್ಯಂತಸುಂದರ !!!" ಎಂಬ ಉದ್ಗಾರವೇ ಹೊರಟೀತು. ಆಸ್ತಿಕರಾದ, ಭಗವದಸ್ತಿತ್ವದಲ್ಲಿ ಪೂರ್ಣ ನಂಬಿಕೆಯುಳ್ಳ ಭಾಗ್ಯವಂತರು ಈ ಸೃಜನ-ಸೌಂದರ್ಯವನ್ನು ನೋಡಿದಾಗ,–"ಅಹೋ ಜಗತ್ಕರ್ತಾರ ! ನೀನು ನಿಜವಾಗಿಯೂ 'ಸುರೂಪಕೃತ್ನುವೇ' ಸೌಂದರ್ಯಸ್ಥಾನಗಳ ನಿರ್ಮಾಪಕನೇ ನೀನು. ನಿನಗೆ ಪ್ರಣಾಮಗಳು. ಶತ-ಶತ, ಸಹಸ್ರ! ಸಹಸ್ರ, ಲಕ್ಷ–ಲಕ್ಷ ಪ್ರಣಾಮಗಳು !" ಎಂದು ಗದ್ಗದಕಂಠರಾಗಿ, ಆನಂದ ತುಂದಿಲ ಹೃದಯರಾಗಿ, ಭಕ್ತಿ-ಭಾವನಾ-ಭಾರದಿಂದ ಬಾಗಿದ ಮಸ್ತಕಗಳನ್ನುಳ್ಳವರಾಗಿ, ಪ್ರಮೋದಾಶ್ರು ಧಾರಾ ಶ್ರವಣದಿಂದ ನೆನೆದ ಕೆನ್ನೆಗಳನ್ನುಳ್ಳವರಾಗಿ, ಉದ್ಗರಿಸುತ್ತಾರೆ. ಭಗವದಸ್ತಿತ್ವ ತಮ್ಮ ಒಪ್ಪಿಗೆಯ ಅನುಗ್ರಹವನ್ನೇ ಆಶ್ರಯಿಸಿದೆ–ಎಂದು ನಂಬಿರುವ, ಎಲ್ಲ ಜ್ಞಾನ-ನಿಯಮ-ರಚನಾಕೌಶಲ್ಯ 'ಢಿಡೀರ್ ದೇವನ,' 'ಭಗವಾನ್ ಛಾನ್ಸ್ ದೇವನ' ಮುಂದೆ ಮಾತ್ರ ಮಸ್ತಕ ಮಣಿಯುವ 'ನಾಸ್ತಿಕರು' "ಓಹೋ ! ಎಂತಹದೀ ಅಲೌಕಿಕ ಸೌಂದರ್ಯ ಪ್ರಕೃತಿ ಮಾತೆಯದು !" – ಎಂದು ನಾಸಿಕಾಗ್ರಕ್ಕೆ ಬೆರಳಿರಿಸಿ ಸೋಜಿಗ ಸೂಸುತ್ತಾರೆ. ಆದರೆ–ಈ ರಚನೆ ಸುಂದರವೆನ್ನುವಲ್ಲಿ ಮಾತ್ರ ಕಿಂಚಿತ್ತೂ ಭೇದವಿಲ್ಲ. ಪುಷ್ಟಿದಾಯಕವಾದ, ಪೂರ್ಣ–ಆಹಾರವಾದ ಕೆನೆಹಾಲನ್ನೂ, ಮೊಸರನ್ನೂ, ಬೆಣ್ಣೆ–ತುಪ್ಪಗಳ ಗಳಿಕೆಗಾಗಿ, ಆ ವಸ್ತುಗಳ ಕಾಮನಾನಿರತನಾದ ಮಾನವನ ಸಲುವಾಗಿ, ಉತ್ಕೃಷ್ಟವಾದ ಹಾಲನ್ನೇ ಎರೆದು ಕೊಡುವ, ಕರೆದು ಸುರಿಸುವ ಉನ್ನತತಳಿಯ ಗೋವನ್ನೇ ಆಶ್ರಯಿಸುವಂತೆ. ಆಧ್ಯಾತ್ಮಿಕ-ಮಾನಸಿಕ–ಬೌದ್ಧಿಕ–ದೈಹಿಕ-ಆರ್ಥಿಕ-ಸಾಮಾಜಿಕ-ರಾಷ್ಟ್ರೀಯ-ರಕ್ಷಣೆಗಾಗಿ, ನಾವು ದಿನದಿನವೂ ಆ ಸುಂದರ ಸೃಜನ-ಸಮರ್ಥ ಸರ್ವೇಶ್ವರನನ್ನೇ ಸ್ತುತಿಸುತ್ತೇವೆ; ಸ್ವಾತಿಕ ಜೀವನವಿಕಾಸಕ್ಕಾಗಿ ಅವನನ್ನೇ ಶ್ರದ್ಧಾ-ಶುದ್ಧ ಭಕ್ತಿ-ಭಾವನಾ ಭಾರದಿಂದ, ಬಾಗಿ-ಬಾಗಿ ಬೇಡುತ್ತೇವೆ.

**ಭಾಷ್ಯ:**–ಈ ಸೂಕ್ತದ 1, 2, 3, 7, 8 – ಈ ಮಂತ್ರಗಳಲ್ಲಿ ಇಂದ್ರ ಶಬ್ದ ವಿಲ್ಲ; 4, 5, 6, 9, ಹಾಗೂ 10 – ಈ ಮಂತ್ರಗಳಲ್ಲಿದೆ. ಆದರೂ, ಪ್ರಕರಣ, ಶಬ್ದ–ಸಂಯೋಜಕ, ಆಕಾಂಕ್ಷೆ ಮತ್ತು ದೇವತಾಸ್ವರೂಪ ಕಲ್ಪನೆಗಳ ಆಧಾರದ ಮೇಲೆ ಪೂರ್ಣ ಸೂಕ್ತದ ದೇವತಾ, ವಿವಕ್ಷಿತವಾದ (ಹೇಳಬಯಸುವ) ವಿಷಯ ಇಂದ್ರನೇ-ಎಂದು ನಿರ್ಧರಿಸಲು ಸ್ವಲ್ಪವೂ ಕಷ್ಟವಾಗದು.

ಸರಿ; ಸೂಕ್ತದ ವಿಷಯ 'ಇಂದ್ರ'ನೇ. ಆದರೆ, ಈ ಒಂದು ಇಂದ್ರಶಬ್ದದ ಅರ್ಥ-ವ್ಯಾಪ್ತಿ ಎಷ್ಟು ವಿಸ್ತೃತ ವಿಚಾರಕ್ಷೇತ್ರವನ್ನು ಒಳಗೊಂಡಿದೆ–ಎಂಬ ತಥ್ಯ ಮಹಾನ್ ವಿದ್ವಜ್ಜನರನ್ನೂ ಕೂಡ ಸ್ತಬ್ಧಗೊಳಿಸಲು ಸಾಕಾಗಿದೆ. ಈ ಇಂದ್ರಶಬ್ದ ಪರಮಾತ್ಮನಿಗೂ-

ಜೀವಾತ್ಮನಿಗೂ ಮತ್ತೂ ಹಲವಾರು ವಸ್ತುಗಳ ಹಾಗೂ ಗುಣಗಳ ಸಮೂಹಕ್ಕೂ ಅನ್ವಯಿಸುವುದೆಂದು ಈ ವರೆಗೆ ಓದುಗರು ಓದಿಯೇ ಇದ್ದಾರೆ. ಹೇಳಿದುದನ್ನೆಲ್ಲಾ ಪುನಃಪುನ ಹೇಳುವ ಆವಶ್ಯಕತೆಯಿಲ್ಲ. ಮಂತ್ರಗಳ ಶಬ್ದ-ಸಾಮರ್ಥ್ಯ "ಇಂದ್ರಿಯವಾನ್ ಜೀವ." – ಎಂಬರ್ಥವನ್ನು ಈ ಪ್ರಕರಣದಿಂದ ಹೊರಕ್ಕೇ ಇಟ್ಟು ಬಿಡುತ್ತದೆ. ವಿದ್ಯುತ್ತು. ಸೂರ್ಯ– ಮೊದಲಾದ ಜಡದ್ರವ್ಯಗಳ ಗ್ರಹಿಕೆಗೂ ಆದಿಯಿಂದ ಅಂತ್ಯದವರೆಗೆ ನಡೆದುಬರುವ ಚೈತನ್ಯ ಲಕ್ಷಣಗಳು ನಿಲೆಗೊಡುವುದಿಲ್ಲ. ಎಂದಮೇಲೆ **'ವಿರಾಡಚೇತನ'ನಾದ, 'ವಿಶ್ವ ಬ್ರಹ್ಮಾಂಡದ ಅಂತರಾತ್ಮ'ನಾದ ಭಗವಂತನನ್ನೊಬ್ಬನನ್ನೇ** ನಾವು ಈ ಸೂತ್ರದ ದೇವತೆಯಾಗಿ ಅಂಗೀಕರಿಸಬೇಕಾದೀತು.

ಯಾಸ್ಕರು ಇಂದ್ರ ಶಬ್ದದ ವುತ್ಪತ್ತಿಯನ್ನು ಹೇಳುವಾಗ, ಪ್ರಥಮತಃ 'ಇರಾ' ಶಬ್ದವನ್ನು ಹಿಡಿದಿದ್ದಾರೆ. "ಇರಾ ಅನ್ನನಾಮ" – ಎಂದು ನಿಘಂಟು [2.7.] ರಲ್ಲಿ ಹೇಳಿದೆ. ಇದಲ್ಲದೆ, ಭೂಮಿ, ವಾಕ್ಕು, ವಿದ್ಯಾ, ಜಲ ಮತ್ತು ಮದ್ಯ–ಎಂಬರ್ಥಗಳೂ ಇವೆ "ಕರ್ಮಸ್ಥಾನೀಯವಾಗಿ ಬಂದಿರುವ 'ಸಂಜ್ಞಾ' (Noun) ವಿನನ್ನು ಸೂಚಿಸುತ್ತದೆ ಮತ್ತು ವಕ್ತೃವಿನ ಆಕಾಂಕ್ಷೆ ಕ್ರಿಯಾ-ಪ್ರಯೋಗದಲ್ಲಿ ಏನಿದೆ ?" – ಎಂಬತ್ತ ಗಮನ ಕೊಡದೆ ಮನ ಬಂದಂತೆ ಭಾಷ್ಯಮಾಡಹತ್ತಿದರೆ, ವೇದ ಮಾನವ ಮಾತ್ರರ, ಆ ಮೂಲಕ ಜೀವಮಾತ್ರರ ಸರ್ವಮುಖೀ ಉತ್ಕರ್ಷಕ್ಕೆ ನಿಭ್ರಾಂತ ವೇದವಾನ ಮಾಡುವ ಬದಲು, ಸರ್ವತೋಮುಖಿ ವಾದ, ಅಪಕರ್ಷಕ್ಕೆ ದಾರಿಯನ್ನು ನೇರಪಡಿಸುವ ದುಃಸಹವೇದನಾ ದಾನವನ್ನೇ ಮಾಡೀತು **"ಇರಾಂ ದೃಣಾತೀತಿ"** [ನಿ:–10.8.] ಎಂದಿದ್ದಾರೆ. "ದ" ಧಾತುವಿಗೆ 'ಸೀಳಿಹಾಕು' ಎಂದರ್ಥವಿದೆ. ಈ ಸ್ಥಿತಿಯಲ್ಲಿ "ಅನ್ನವನ್ನು, ಭೂಮಿಯನ್ನು ಸೀಳಿ ಹಾಕುವವನು; ವಾಣಿ ಯನ್ನೂ, ವಿದ್ಯೆಯನ್ನೂ. ತುಂಡರಿಸಿ ಚೆಲ್ಲುವವನು, ಜಲ-ಮದ್ಯಗಳನ್ನು ಸಿಕ್ಕಾಪಟ್ಟೆ ಎರಚು ವವನು ಇಂದ್ರ." – ಎಂದರ್ಥ ಮಾಡಿದರೆ, ನಾವು ವರ್ಣಿಸುತ್ತಿರುವುದು ಭಗವಂತನನ್ನಲ್ಲ ಯಾವನೋ ರಕ್ಕಸನನ್ನು – ಎನ್ನಿಸುತ್ತದೆ. ಅದೇ ಯಾಸ್ಕರು **"ಇರಾಂ ದದಾತೀತಿ ವಾ ಇರಾಂ ದಧಾತೀ ವಾ."** [ನಿ:- 10.8.] — "ಅನ್ನ-ಭೂಮಿ-ವಾಗಾದಿಗಳನ್ನು ಕೊಡು ವುದರಿಂದ ಅಥವಾ ಧಾರಣೆ ಮಾಡಿಸುವುದರಿಂದ ಅವನು ಇಂದ್ರನು.": **'ಇರಾಂ ಧಾರಯತ ಇತಿ ವಾ.'** [ನಿ:–10 8.] – "ಅಹಾರಾದಿಗಳನ್ನು ಧರಿಸುವವನು; ಧಾರಣೆ ಮಾಡಿಸುವವನು ಇಂದ್ರನು." – ಎಂದಾಗ, ಆ ಕಥನ ಬುದ್ಧಿಗಮ್ಯವಾಗುತ್ತದೆ. ಇದೇ ಸಂದರ್ಭದಲ್ಲಿ–"ಇರಾಂ ದಾರಯತೀತಿ ವಾ."–"ಅನ್ನ-ಪೃಥಿವ್ಯಾದಿಗಳನ್ನು ತುಂಡು–ತುಂಡಾಗಿ ಮಾಡುವವನು ಇಂದ್ರನು." – ಎಂಬ ಹೇಳಿಕೆಯೂ ಇದೆ. ಪ್ರಾಯಶಃ ಪ್ರಳಯಾಂಕರನ ರೂಪದಲ್ಲಿ ಭಗವಂತನು ಈ ಬಗೆಯ ವಿಸರ್ಜನ ಕಾರ್ಯಗಳನ್ನು ಮಾಡುತ್ತಾನೆ-ಎಂದು ಭಾವಿಸಬಹುದೇನೋ; ಹಾಗೆ ಇಟ್ಟುಕೊಂಡಲ್ಲಿ, ಹೀಗೆಯೇ "ದೃಣಾತಿ" ಕ್ರಿಯೆಯನ್ನೂ ಪ್ರಳಯಾಂಕಾಲೀನ ಕರ್ಮವೆಂದೇ ಭಾವಿಸಬಹುದು.

ಇದೇ ಪ್ರಕರಣದಲ್ಲಿ ಯಾಸ್ಕರು **"ಇಂದವೇ ದ್ರವತೀತಿವಾ, ಇಂದೌ ರಮತ ಇತಿವಾ."** [ನಿ:- 10. 8.] - "ನೀರಸ ಕಾಯವನ್ನು ತನ್ನ ಅಸ್ತಿತ್ವದಿಂದ ಸರಸ

ವಾಗಿಸುವ ಜೀವನಿಗಾಗಿ ಕರಗಿ ಹರಿದು ಬರುವ ದಯಾರಸಮಯನು ಇಂದ್ರ; ಅಥವಾ ಆ ಜೀವನಲ್ಲಿ ಅಂತರ್ಯಾಮಿಯಾಗಿ ರಮಿಸುವವನು ಇಂದ್ರ." - ಎಂದಿದ್ದಾರೆ. ಮುಂದುವರಿದು, **"ಇಂಧೇ ಭೂತಾನೀತಿ ವಾ,"** - "ಅವ್ಯಕ್ತ ಪರಮಾಣು ರೂಪದಲ್ಲಿದ್ದ ಜಡಭೂತಗಳನ್ನು, ಜಡದೇಹಗಳೊಂದಿಗೆ ಸಂಯೋಜನವನ್ನು ರೂಪಿಸಿ ಪ್ರಾಣಿಗಳನ್ನೂ ಬೆಳಕಿಗೆ ತರುವವನು ಇಂದ್ರನು." - ಎಂದಿದ್ದಾರೆ. "ಇಂದುವೆಂದರೆ ಸೋಮವೆಂಬ ಲತಾರಸ ವಿಶೇಷ. ಯಜ್ಞ ಯಾಗಾದಿಗಳಲ್ಲಿ ಇಂದ್ರನೆಂಬ ವಿಶಿಷ್ಟ ಸ್ವರ್ಗವಾಸೀ ದೇವರಾಜನಿಗೆ ಅದರ ಮೇಲೆ ಅತಿ ಆಸೆ. ಅದರ ಪಾನಕ್ಕಾಗಿ ಹಾತೊರೆದು ಓಡಿ - ಓಡಿ ಬರುವ ದೇವನಾಥ ಆ ಇಂದ್ರ." ಎಂಬ ಪೌರಾಣಿಕ ಕಲ್ಪನಾ ಲೋಕವನ್ನು ಪೂರ್ಣತಃ ಮರೆತು, ಲೋಕ - ಲೋಕಾಂತರಗಳ ಏಕಮಾತ್ರ ಅಧಿನಾಯಕನಾದ ಪರಮಾತ್ಮನೇ ಇಂದ್ರನೆಂದರಿತು, ಅವನಲ್ಲಿ ನಿಜವಾದ ಭಕ್ತಿ ಭಾವನೆಯನ್ನು ವ್ಯಕ್ತಪಡಿಸದಲ್ಲದೆ. ನಮ್ಮ ಆತ್ಮೋದ್ಧಾರ ಮೂರು ಕಾಲಕ್ಕೂ ಸಾಧ್ಯವಿಲ್ಲ.

ಇಷ್ಟೇ ಅಲ್ಲದೆ, ಯಾಸ್ಕರು - **"ಇದಂ ಕರಣಾತ್; ಇಂದದರ್ಶನಾತ್. ಇಂದತೇರ್ವಾ ಐಶ್ವರ್ಯಕರ್ಮಣಃ"** [ನಿ: 10. 8] - "ಈ ವಿಶ್ವದ ಕರ್ತೃವಾದುದರಿಂದ, ಈ ಬ್ರಹ್ಮಾಂಡದ ದ್ರಷ್ಟ್ರವಾಗಿರುವುದರಿಂದ, ಅಥವಾ, **'ಇಂದತಿ - ಐಶ್ವರ್ಯಂ ಕರೋತಿ; ಐಶ್ವರ್ಯವಾನ್ ಭವತಿ,'** - "ಐಶ್ವರ್ಯ ಸಂಪನ್ನನಾದ ಕಾರಣದಿಂದ ಅವನು ಇಂದ್ರನು" - ಎಂದು ಹೇಳಿ, **"ಇಂದನ್ ಶತ್ರೂನ್ ದಾರಯಿತಾ ವಾ, ದ್ರಾವಯಿತಾ ವಾ; ಆದರಯಿತಾ ಚ ಯಜ್ವನಾಂ."** - "ಎರಗಿ, ಶತ್ರುಗಳನ್ನು ಛಿನ್ನ ಭಿನ್ನರನ್ನಾಗಿ ಮಾಡುವವನು ಅಥವಾ ಓಡಿಸುವವನು. ಯಜ್ಞ ಕರ್ತೃಗಳನ್ನು ಆದರಿಸುವವನು." - ಎಂದು ಕೊನೆ ಮುಟ್ಟಿಸುತ್ತಾರೆ. ಇದೆಲ್ಲಾ ನಿರುಕ್ತ [ದೈ. 4. 1. 9] ದ ಉದ್ಧರಣಗಳಾಗಿವೆ. ಇಲ್ಲಿಗೆ ಇಂದ್ರನ ಲಕ್ಷಣ ವರ್ಣನೆ ಮುಗಿದು ಹೋಯಿತೆಂದಲ್ಲ. ಶತಪಥ ಬ್ರಾಹ್ಮಣಾದಿಗಳಲ್ಲಿ ಸೂರ್ಯ, ವಾಯು, ವಾಕ್, ಪ್ರಾಣ, ಹೃದಯ, ಮನಸ್ಸು ಕ್ಷಾತ್ರಬಲ, ವಿದ್ಯುತ್ತು - ಮೊದಲಾದ ಅನೇಕಾರ್ಥಗಳನ್ನು ಕಾಣಬಹುದು. ಆದರೆ, ಈ ಮಂತ್ರ ಮತ್ತು ಸೂಕ್ತದ ವ್ಯಾಖ್ಯಾನಕ್ಕೆ, "ಇಂದ್ರ - ಎಂದರೆ ಜಗತ್ಕರ್ತೃ - ಧರ್ತೃ - ಸಂಹರ್ತೃವೂ, ಸರ್ವೇಶ್ವರನೂ, ಸರ್ವೈಶ್ವರ್ಯಸಂಪನ್ನನೂ ಆದ, ಜೀವನದ ಮೇಲೆ ಕರುಣಾ ವೃಷ್ಟಿಗೈಯುವ ಪರಮದಯಾಮಯ ಸರ್ವಾಂತರಾತ್ಮಾ ಭಗವಂತ." ಎಂದಿಷ್ಟು ಗ್ರಹಿಸಿದರೆ ಸಾಕಾದೀತು,

ಶ್ರೀ॥ ಮಧ್ವರು **'ಸುರೂಪಕೃತ್ನುಂ,** - ಎಂಬ ಶಬ್ದಕ್ಕೆ **"ವಿಷ್ಣು ಸುರೂಪ ಕರ್ತಾರಂ."** - "ಸುಂದರರೂಪ ನಿರ್ಮಾಪಕನಾದ ವಿಷ್ಣುವನ್ನು," - ಎಂದು ಅರ್ಥಮಾಡಿದ್ದಾರೆ. ಚತುರ್ಭುಜನೂ, ಶಂಖ - ಚಕ್ರ - ಗದಾ - ಪದ್ಮಾಧಾರಿಯೂ ಕಿರೀಟಶೋಭಿತನೂ, ತುಳಸಿ, ಮಾಲಾಧಾರಿಯೂ ಆದ ವೈಕುಂಠನಾಥನನ್ನು ಆ ಕಲ್ಪನಾಲೋಕದಲ್ಲಿಯೇ ಇರಲು ಬಿಟ್ಟು **'ವಿಷ್ಣ್ಲೃ ವ್ಯಾಪ್ತೌ'** - "ಸರ್ವವ್ಯಾಪಕನಾದುದರಿಂದ ಆ ವಿರಾಡಾತ್ಮನೇ ವಿಷ್ಣು" — ಎಂದಿಟ್ಟುಕೊಂಡಲ್ಲಿ, ವೈದಿಕ ಭಾವನೆ ಸ್ಪಷ್ಟವಾಗುತ್ತದೆ. ಇದೇ **'ಸುರೂಪ ಕೃತ್ನುಂ'**

ಎಂಬ ವಿಶೇಷಣ **"ಶೋಭನ ರೂಪೋಪೇತಸ್ಯ ಕರ್ಮಣಃ ಕರ್ತಾರಂ"** – "ಸುಂದರ ರೂಪಯುಕ್ತ ಕರ್ಮಗಳ ಕರ್ತೃವನ್ನು" – ಎಂದು ಶ್ರೀ॥ ಸಾಯಣರಿಂದ ವಿವರಿಸಲ್ಪಟ್ಟಿದೆ. **'ಊತಯೇ'** - ಎಂಬುದಕ್ಕೆ ಶ್ರೀ॥ ಮಧ್ವರಂ - **"ಅಭಿಪ್ರೇತಾರ್ಥ ಸಿದ್ಧಯೇ, ತ್ರಾಣಾಯವಾ.'** – "ವಾಂಛಿತವಾದುದರ ಸಿದ್ಧಿಗಾಗಿ ಅಥವಾ ರಕ್ಷಣೆಗಾಗಿ ಎಂದೂ, ಶ್ರೀ॥ ಸಾಯಣರು – **'ಅಸ್ಮದ್ರಕ್ಷಾರ್ಥಂ'** – "ನಮ್ಮ ರಕ್ಷಣೆಗಾಗಿ" ಎಂದೂ ಅರ್ಥ ಬರೆದಿದ್ದಾರೆ. 'ಅವ' ಧಾತುವಿನಿಂದ. ನಿಷ್ಪನ್ನವಾದ 'ಊತಿ'ಗೆ ಇಚ್ಛಾ ಇಷ್ಟ, ಕಾಮನಾ–ಮೊದಲಾದ ಅರ್ಥಗಳು ಇದ್ದೇ ಇರುವಾಗ, ಶ್ರೀ॥ ಮಧ್ವಕೃತ 'ಅಭಿ ಪ್ರೇತಾರ್ಥಸಿದ್ಧ' ಬುದ್ಧಿಸಂಗತವೇ ಸರಿ.

**"ಗೋದುಹೇ ಸುದುಘಾಮಿವ"** - ಎಂಬುದಕ್ಕೆ ಶ್ರೀ॥ ಮಧ್ವರು **"ಕಾಮ ಧೇನುಮಿವ ದೋಹಾಯ"**–"ಹಾಲನ್ನು ಕರೆಯಲು ಕಾಮಧೇನುವನ್ನು ಕರೆಯುವಂತೆ."- ಎಂದು ವಿವರಣವನ್ನು ಕೊಟ್ಟಿದ್ದಾರೆ. ಬೇಕಾದುದನ್ನೆಲ್ಲಾ ಕೊಟ್ಟುಬಿಡುವ ಕಾಮಧೇನು ಕಲ್ಪವೃಕ್ಷ–ಇತ್ಯಾದಿ ಪೌರಾಣಿಕ ಪ್ರಪಂಚದಲ್ಲಿ ಮಾತ್ರ ಲಭಿಸುವ ವಸ್ತುಗಳು ನೆನಪಾಗಿ ಗೌಃ - ಎಂದಾಗ ಕೇವಲ 'ಧೇನು' ನೆನಪಾಗದೆ, ಶ್ರೀ॥ ಮಧ್ವರಿಗೆ 'ಕಾಮಧೇನು' ನೆನಪಾದರೆ ಆಶ್ಚರ್ಯವಿಲ್ಲ. ಅಲ್ಲದೆ 'ಕಾಮಧೇನು' ವನ್ನು ವಿಶೇಷಣ ಪೂರ್ವಪದಕರ್ಮಧಾರಯ ಸಮಾಸ ಸ್ಥಿತವೆಂದು ಗ್ರಹಿಸಿ, **"ಕಾಮಂ, ಕಾಮ್ಯಂದುಗ್ಧಾದಿಕಂ"**–'ಬೇಕಾಗಿರುವಂತಹ ಹಾಲು ಮೊದಲಾದುದುವನ್ನು' ಎಂದು ತಿಳಿದಲ್ಲಿ, ಅದೂ ಸಾಧುವೇ. ಶ್ರೀ॥ ಸಾಯಣರು **"ಸುದು ಘಾಮಿವ ಗೋದುಹೇ"** – ಎಂಬುದಕ್ಕೆ 'ಗೋದುಗರ್ಥಂ ಸುದುಘಾಂ ಸುದೋಗ್ಧ್ರೀಂ ಗಾಮಿವ" - "ಹಾಲನ್ನು ಕರೆಯಲು, ಉತ್ಕೃಷ್ಟವಾದ ಹಾಲನ್ನು ಕೊಡುವ ಗೋವನ್ನು ಕರೆಯುವಂತೆ" - ಎಂದಿದ್ದಾರೆ. ಇಲ್ಲಿಯೂ ವಿವಾದಕ್ಕೆಡೆಯಿಲ್ಲ. ಶ್ರೀ॥ ಮಧ್ವರು **"ದ್ಯವಿ ದ್ಯವಿ ಜುಹೂಮಸಿ"** – ಎಂಬುದಕ್ಕೆ **"ದಿನೇದಿನೇ ಸ್ವಾಹ್ವಯಾಮಃ"** – "ದಿನ ದಿನವೂ ಉತ್ತಮ ರೂಪದಿಂದ ಆಹ್ವಾನಿಸುತ್ತೇವೆ." ಎಂದೂ, ಶ್ರೀ॥ ಸಾಯಣರು — **"ಪ್ರತಿದಿನಂ ಆಹ್ವಯಾಮಃ"** - "ಪ್ರತಿದಿನವೂ ಆಹ್ವಾನಿಸುತ್ತೇವೆ." ಎಂದೂ ಅರ್ಥ ಹೇಳಿದ್ದಾರೆ.

ಈಗ ಮಹರ್ಷಿದಯಾನಂದರ ದಿವ್ಯಲೇಖನಿಯಿಂದ ಸ್ರವಿಸಿ ಬಂದ ಗಂಭೀರಾರ್ಥ ವನ್ನು ಅವಲೋಕಿಸೋಣ. **"ಸುರೂಪಕೃತ್ನುಂ"** * - ಎಂಬುದಕ್ಕೆ **"ಯಃ ಇಂದ್ರಃ ಸರ್ವಾನ್ ಪದಾರ್ಥಾನ್ ಸ್ವಪ್ರಕಾಶೇನ ಸ್ವರೂಪಾನ್ ಕರೋತಿ"** "ಯಾವ ಸರ್ವೇಶ್ವರನು ಸರ್ವವಸ್ತುಗಳನ್ನೂ ಸ್ವಪ್ರಕಾಶದಿಂದ ಸ್ವರೂಪಯುಕ್ತವಾಗಿ ರಚಿಸುತ್ತಾನೋ ಅವನನ್ನು" – ಎಂದೂ. [ಊತಯೇ] - ಎಂಬುದಕ್ಕೆ "ವಿದ್ಯಾ-ಪ್ರಾಪ್ತಿಗಾಗಿ" - ಎಂದೂ ವಿವ ರಿಸುತ್ತಾರೆ. ಆ ಮಹರ್ಷಿ ಪ್ರವರರ ಮಾನಸದ ಮುಂದೆ ಮೆರೆಯುತ್ತಿದ್ದುದು ಆಧ್ಯಾತ್ಮಿಕ ಆಲೋಕದಿಂದ ಮಿರಮಿರನೆ ಮಿರುಗುತ್ತಿದ್ದ ಮಹಜ್ಜ್ಯೋತಿಃ ಸ್ವರೂಪನಾದ, ಸಮಸ್ತ

* ಮಹರ್ಷಿಗಳು ಇಂದ್ರಶಬ್ದದಿಂದ ಈಶ್ವರನೊಂದಿಗೆ ಸೂರ್ಯನನ್ನೂ ಗ್ರಹಿಸಿದ್ದಾರೆ.

ವಿದ್ಯಮಾನ ಚೇತನಶಕ್ತಿಯೇ ಹೊರತು, ಯಾವುದೇ ಮೂರ್ತರೂಪವಾದ, ವ್ಯಕ್ತಿವಿಶೇಷವಾದ, ಕೇವಲ ಕಾಲ್ಪನಿಕ ಸಾಂಪ್ರದಾಯಿಕ ದೇವರೂ ಅಲ್ಲ. ಇಂದ್ರನಲ್ಲವರು ಕಂಡುಂದು ಇದೇ ಅಮರಪ್ರಭಾ ಪ್ರಭಾವವನ್ನು. ಹೀಗಾಗಿ, ಅವರ ದೃಷ್ಟಿಯಲ್ಲಿ **'ಸುರೂಪಕೃತ್ನು'** ಕೇವಲ ಭೌತಿಕ ಭವ್ಯರೂಪದ ಭುವನ-ಭುವನಾಂತರಗಳ ರಚಯಿತೃವಾಗಿರದೆ, ತನ್ನಂತೆಯೇ ಜ್ಯೋತಿರ್ವಿರಾಜಮಾನವಾದ ವಿಚಿತ್ರವಿಶ್ವವನ್ನು ರೂಪಿಸುವ ಸೃಜನಕುಶಲ ಸರ್ವಜ್ಞಸವಿತೃ* ವನ್ನು. ಭಗವದ್ರಚಿತ ವಸ್ತು-ವಸ್ತುವಿನಲ್ಲಿಯೂ ಆ ದಿವ್ಯಚಕ್ಷುಷ್ಮಾನ್ ಮಹರ್ಷಿಗೆ ಕಾಣಿಸುತ್ತಿದ್ದುದು ಕೇವಲ ಆ ಅಮರಜ್ಯೋತಿ ಮಾತ್ರ! **"ಊತಯೇ"** - ಎಂಬ ಶಬ್ದಕ್ಕೆ - ಸಾಧಾರಣಾರ್ಥವೇನೋ 'ರಕ್ಷಣೆ' ಎಂದೇ. ಆದರೆ, ಸರ್ವೋತ್ತಮ ರಕ್ಷಣವಾವುದು ? ಧನ-ಕನಕ-ವಸ್ತು-ವಾಹನಾದಿಗಳಿಂದ, ಮನೆ-ಮಠಗಳಿಂದ, ಗುಡಿ-ಗೋಪುರಗಳಿಂದ, ರಾಜ್ಯಕೋಶ-ಸೈನ್ಯ-ಸಮುದಾಯಗಳಿಂದ. ಶಾಸನಾಧಿಕಾರ-ಪ್ರಕಾಶನ-ಪ್ರಸಾದಗಳಿಂದ ಲಭಿಸುವ ರಕ್ಷಣೆ ಲೌಕಿಕ ದೃಷ್ಟಿಯಲ್ಲಿ ಏನೋ ಮಹತ್ತ್ವಯುಕ್ತವೇ; ಆದರೆ, ಆರ್ಷದೃಷ್ಟಿಯಲ್ಲಿ ನಿಜವಾದ ರಕ್ಷಣೆ 'ವಿದ್ಯಾಪ್ರಾಪ್ತಿ'ಯ ರಕ್ಷಣೆಯೇ.

**"ಗೋದುಹೇ ಸುದುಘಾಮಿವ."** - ಎಂಬುದಕ್ಕೆ ಮಹರ್ಷಿಪ್ರವರರು **"ಗೋದೋಹನಾರ್ಥಂ ವಾ, ದುಗ್ಧೇಚ್ಛುಕಾಯ ಮನುಷ್ಯಾಯ ವಾ, ಬಹುದುಗ್ಧದಾತ್ರ್ಯಾಃ ಗೋಃ ಪ್ರಾಪ್ತಿಮಿವ."** - "ಹಾಲನ್ನು ಕರೆಯುವ ಸಲುವಾಗಿ, ಅಥವಾ ಹಾಲನ್ನು ಬಯಸುವ ಮಾನವನ ಸಲುವಾಗಿ ಅಧಿಕ ಹಾಲನ್ನೀಯುವ ಹಸುವನ್ನು ಗಳಿಸುವಂತೆ" ಎಂದು ಬರೆದಿದ್ದಾರೆ. ವಿದ್ಯಾಪ್ರಾಪ್ತಿಗೆ ಬುದ್ಧಿ ತೀಕ್ಷ್ಣತ್ವ ಬೇಕು. ಆದಕ್ಕಾಗಿ ಮಾನವನಿಗೆ ಶುದ್ಧವಾದ ಹಾಲೂ ಬೇಕು; ಹವನಾದಿಗಳಿಗೆ ಗೋಘೃತವೂ ಬೇಕು. ಮಹರ್ಷಿ ಈ ಪಕ್ಷವನ್ನೂ ದೃಕ್ಪಥದಲ್ಲಿಟ್ಟೇ ಮುಂದುವರಿದಿದ್ದಾರೆ.

**"ದ್ಯವಿದ್ಯವಿ ಜುಹೂಮಸಿ."** ಶ್ರೀ॥ ಮಧ್ವ-ಸಾಯಣರಂತೆಯೇ **"ಅಹರ್ನಾಮಸು ದ್ಯವಿದ್ಯವೀತಿ ಪಠಿತಂ."** [ನಿಘಂಟು:-1.9.] - "ದ್ಯವಿ-ದ್ಯವಿ - ಎಂಬುದು ಹಗಲು - ಎಂಬುದರ ಹೆಸರುಗಳಲ್ಲಿ ಒಂದು." - ಎಂಬ ಪ್ರಮಾಣವನ್ನೇ ಕೊಟ್ಟಿದ್ದಾರೆ. ಮತ್ತು 'ಜುಹೂಮಸಿ' ಶಬ್ದಕ್ಕೆ 'ಆಹ್ವಾನಿಸುತ್ತೇವೆ.' - ಎನ್ನದೆ, "ಸ್ತುಮಃ" ಎಂದು ಅರ್ಥ ಹೇಳಿದ್ದಾರೆ. ಆಹ್ವಾನವಲ್ಲ; ಸ್ತುತಿ; ಗುಣವರ್ಣನೆ. ಸುಂದರ ಸೃಷ್ಟಿಯ ಸರ್ವಜ್ಞ ಸೃಜನಕರ್ತೃವಿನ ಸಮಸ್ತ ವರದಾನಗಳಿಗಾಗಿ ಹೃದಯಾಂತರಾಳದಿಂದ ಅವನ ಔದಾರ್ಯ-ಕರುಣಾ-ಮಮತಾದಿ ಭವ್ಯಭಾವನಾ ಭಂಡಾರವನ್ನು ಭಕ್ತಿ-ಭಾವದಿಂದ ಬುದ್ಧಿಗಮ್ಯವಾಗಿಸಿಕೊಂಡಾಗ ಉದ್ಭವಿಸುವ ಹರ್ಷ ಆಹ್ವಾನದಲ್ಲೆಲ್ಲಿ ? ಎಂದ ಮಾತ್ರಕ್ಕೆ ವೇದಗಳಲ್ಲಿ 'ಹುವೇಮ, ಹೂಮಹೆ ಹವಾಮಹೇ' ಮೊದಲಾದ ಶಬ್ದಗಳೇ ಇಲ್ಲ - ಎಂದರ್ಥವಲ್ಲ. ಆದರೆ-ಎಲ್ಲೆಲ್ಲಿ ಯಾವ ಯಾವ ಭಾವನೆ ಕಾಮ್ಯವೋ, ಅದನ್ನೇ ಗ್ರಹಿಸುವುದು ವೇದಜ್ಞಾನ ಸಂಪಾದನಕ್ಕೆ ಸರಿಯಾದ ಮಾರ್ಗ. **'ಜುಹೂಮಸಿ'** ರೂಪಗೊಳ್ಳುವುದು 'ಹು' ಎಂಬ, 'ಸಮರ್ಪಣ' ಎಂಬ ಭಾವ

---

***"ಸವಿತಾ ಸರ್ವಸ್ಯ ಪ್ರಸವಿತಾ."** [ನಿರುಕ್ತ:-4.3.31.7.]

ವನ್ನೇ ಬಿಂಬಿಸುವ ಧಾತುವಿನಿಂದ, ಭಗವದ್ಗುಣಗಾನದಿಂದ ಚಿತ್ತವಾ ಕಡೆ ಹೊರಳಿ, ಆತ್ಮ ಸಮರ್ಪಣ ಸುಕರವಾದೀತು. ಆ ಸ್ಥಿತಿಯಲ್ಲಿ, ಆರಾಧಕನಿಗೆ ಸಿಕ್ಕದ ರಕ್ಷಣೆಯಾದರೂ ಯಾವುದು ? ಉತ್ತಮವಾದ ಗೋವು ಅಮೃತೋಪಮವಾದ ಹಾಲನ್ನೆರೆಯುವಾಗ ಸುರೂಪಕೃತ್ತು ದೇವ ವಿದ್ಯಾದಿ ಸುದೃಢ ರಕ್ಷಣೆಯನ್ನು ಕರುಣಿಸನೇ ?

**ಸಂಹಿತಾ ವಿಭಾಗ**

**ಉಪ ನಃ ಸವನಾಗಹಿ ಸೋಮಸ್ಯ ಸೋಮಪಾಃ ಪಿಬ ।**

**ಗೋದಾ ಇದ್ರೇವತೋ ಮದಃ ॥೨॥**

**ಪದಪಾಠ:**– ಉಪ, ನಃ, ಸವನಾ, ಆ, ಗಹಿ, ಸೋಮಸ್ಯ, ಸೋಮಪಾಃ, ಪಿಬ। ಗೋದಾ, ಇತ್, ರೇವತಃ, ಮದಃ ॥೨॥

**ಅನ್ವಯ:**– ಸೋಮಪಾಃ ! ನಃ ಸವನಾ ಉಪ ಆ ಗಹಿ. ಸೋಮಸ್ಯ ಪಿಬ. ರೇವತಃ ಮದಃ ಗೋದಾ ಇತ್.

**ಶಬ್ದಾರ್ಥ:**– [ಸೋಮಪಾಃ] ಜೀವಜಗತ್ತಿನ ಹಾಗೂ ಸೃಷ್ಟವಿಶ್ವದ ರಕ್ಷಕನೇ! [ನಃ ಸವನಾ] ನಮ್ಮ ಯಜ್ಞಗಳ ಬಳಿಗೆ, [ಆಗಹಿ] ಆಗಮಿಸು. [ಸೋಮಸ್ಯ] ಮಂಥನ ದಿಂದ ಹೊರಟ ಸಾರ ಭಾಗವನ್ನು, [ಪಿಬ] ಪಾಲಿಸು. [ರೇವತಃ ಮದಃ] ಧನವಂತನ ಹರ್ಷವು, [ಗೋದಾ ಇತ್] ಗೋವು, ವಾಣಿ, ಇಂದ್ರಿಯಗಳು ಹಾಗೂ ಭೂಮಿಯ ದಾನ ವನ್ನು ಕೊಡುವಂತಹುದೇ, ಕೊಡಿಸುವಂತಹುದೇ ಆಗಿರುತ್ತದೆ.

**ತಾತ್ಪರ್ಯ:**– ಓ ಸರ್ವೇಶ್ವರ ! ಓ ಚೇತನಾಚೇತನ ಜಗದ್ರಕ್ಷಕನೇ ! ಶಾಶ್ವತಾ ನಂದಮಯ ಪ್ರಭೋ ! ನಮ್ಮ ಸದಸದ್ವಿವೇಚನಾಕೃತಿಯನ್ನೊಳ್ಳ ಯಜ್ಞದ ಬಳಿಗೆ ಬಾ: ಜೀವಾತ್ಮನ ಪಾಲನೆಯನ್ನು ಮಾಡು. ಸಂಪದ್ಯುಕ್ತನಾದ ನಿನಗೆ, ಅಥವಾ ನಿನ್ನ ಉಪಾಸಕ ನಿಗೆ, ಆನಂದಾನುಭೂತಿಯಿಂದ ಹರ್ಷವಾದಾಗ, ಆ ಹರ್ಷ, ಗೋವು, ವಾಕ್ಕು, ಇಂದ್ರಿಯ ಗಳು, ಸೂರ್ಯ, ಕಿರಣಗಳು ಹಾಗೂ ಭೂಮಿ – ಎಲ್ಲದರ ದಾನಕ್ಕೂ ಪ್ರೇರಕ ತತ್ತ್ವವಾಗು ವುದರಲ್ಲಿ ಸಂಶಯವಾವುದೂ ಇಲ್ಲ.

**ಈ ಚತುರ್ಥ ಸೂಕ್ತ ಪ್ರಥಮ ಮಂತ್ರದ ಭಾಷ್ಯದ ಪೂರ್ಣವೆಚ್ಚ**
**ಶ್ರೀಮತಿ ಸುಶೀಲಾ ದೇವಿ ಕಾಮತ್**
**ಇವರ ಸೇವೆ.**

**ಭಾಷ್ಯ:–** ಈ ಮಂತ್ರದ ಭಾಷ್ಯವನ್ನು ಓದುವಾಗ ಪಾಠಕರು ಸ್ವಲ್ಪ ಅಧಿಕವಾಗಿಯೇ ಅಂತರ್ಮುಖರಾಗುವುದು ಆವಶ್ಯಕವೆಂದು ತೋರುತ್ತದೆ. ಏಕೆಂದರೆ, ಮಂತ್ರದಲ್ಲಿನ ಶಬ್ದಗಳನ್ನು ಮೇಲು-ಮೇಲಿನಿಂದ ನೋಡಿದರೆ, ಇಂದ್ರನೆಂಬವನಿಗೆ ಸೋಮರಸದ ಪ್ರಲೋಭವನ್ನಿತ್ತು, ಅವನನ್ನು ಹರ್ಷಗೊಳಿಸಿ, ಅವನಿಂದ ಏನೇನನ್ನೋ ಕಸಿದುಕೊಳ್ಳಬೇಕೆಂಬ ಭೌತಿಕವ್ಯವಹಾರಗಳ, ಲೇವಾದೇವಿಯ ವ್ಯಾಪಾರಗಳ ವರ್ಣನೆಯಿರುವಂತೆ ತೋರುತ್ತದೆ. ಓದುಗರು ಈಗಾಗಲೇ "ಪರಮಾತ್ಮನ ಗುಣಗಳಾಗಲಿ, ಕರ್ಮಗಳಾಗಲಿ, ಸ್ವಭಾವವೇ ಆಗಲಿ, ಬೇರೆ ಯಾರದೇ ಪ್ರಾರ್ಥನೆ - ಅವಹೇಳನೆಗಳಿಂದಾಗಲಿ, ಹೊಗಳಿಕೆ–ತೆಗಳಿಕೆಗಳಿಂದಾಗಲಿ ಕಿಂಚಿನ್ಮಾತ್ರವೂ ಹಿಗ್ಗದು-ಕುಗ್ಗದು." – ಎಂಬ ಮೌಲಿಕ ತಥ್ಯಾಂಶವನ್ನು ಓದಿಯೇ ಇದ್ದಾರೆ. ಹಿಗ್ಗು-ಕುಗ್ಗು ಎರಡೂ ವಿಕಾರಗಳೇ ಆದ ಕಾರಣ, ಪೂರ್ಣನಾದ ಭಗವಂತನಿಗೆ ಸರ್ವಥಾ ಅನ್ವಯಿಸುವುದಿಲ್ಲ. ವಿಕಾಸ-ಹ್ರಾಸ ಎರಡೂ ಅಪೂರ್ಣತತ್ತ್ವಗಳ ಲಕ್ಷಣಗಳೇ ಹೊರತು ಪೂರ್ಣತತ್ತ್ವಕ್ಕೆ ಆವೆರಡೂ ಎಂದೆಂದಿಗೂ ಹೊಂದವು. ಪೂರ್ಣತ್ವದಲ್ಲಿ ಸರ್ವಜ್ಞತ್ವ, ಪ್ರಾಪ್ತಸರ್ವಸ್ವತ್ವ, ನಿತ್ಯತೃಪ್ತತ್ವ, ಅಕ್ಷುಣ್ಣಾನಂದತ್ವ, ಅಸೀಮತ್ವ ಮತ್ತು ಅಪರಿವರ್ತನಶೀಲತ್ವ- ಇವೆಲ್ಲವೂ ಇದ್ದೇ ಇರುತ್ತವೆ. ಸ್ತುತಿ-ಪ್ರಾರ್ಥನೋಪಾಸನೆಗಳ ಅನುಷ್ಠಾನ ಭಗವದುದ್ಧಾರಕ್ಕಾಗಿ ಅಲ್ಲ; ಆ ಕೃತಿಗಳನ್ನು ಮಾಡುವವನ ಆತ್ಮನ ಉದ್ಧಾರಕ್ಕೆ ಮಾತ್ರ- ಎಂಬ ಶಾಶ್ವತ-ಸಾರ್ವಕಾಲಿಕ-ಸಾರ್ವಭೌಮ ನಿರ್ಭ್ರಾಂತ ಸಿದ್ಧಾಂತವನ್ನು ಮರೆತ ಕೂಡಲೇ, ಅಥರ್ವವೇದದ- **"ಉತ್ಕ್ರಾಮಾತಃ ಪುರುಷ ಮಾವಪತ್ಥಾಃ"** [8.1.4.] - "ಓ ದೇಹಧಾರೀ ಜೀವಾತ್ಮನ್! ಈಗಿನ ಸ್ತರದಿಂದ ಮೇಲಕ್ಕೇರು; ಕೆಳಕ್ಕೆ ಬೀಳಬೇಡ." **"ಉದ್ಯಾನಂ ತೇ ಪುರುಷ ನಾವಯಾನಂ."** [8.1.6.] - "ಓ ಶರೀರವಾನ್ ಜೀವಾತ್ಮನ್! ನಿನ್ನ ಗಮನ ಮೇಲಕ್ಕೆ ಮಾತ್ರ; ಕೆಳಕ್ಕೆ ಇಳಿಯುವುದು ಎಂದೆಂದಿಗೂ ಸಲ್ಲದು,"; **"ಉತ್ಕ್ರಾಮಾತಃ ಪರಿ ಚೇದತಪ್ತಃ"** [9.5.6.] - "ಇನ್ನೂ ಅತಪ್ತನೇ, ಅಪರಿಪಕ್ವನೇ ಆಗಿರುವೆಯಾದಲ್ಲಿ, ಜ್ಞಾನಕ್ಕಿನ್ನೂ ನಿರ್ಭ್ರಾಂತತತ್ವ ಕೂಡಿಬಂದಿಲ್ಲವಾದರೆ, ಈಗಿರುವ ಸ್ಥಿತಿಗಿಂತ ಮೇಲೇರಿ, ಪರಿಪಕ್ವನಾಗು."–ಈ ಮೊದಲಾದ ಆದೇಶಗಳೆಲ್ಲಾ ಅರ್ಥಹೀನವಾದ, ಆಡಂಬರಮಾತ್ರವಾದ ಧ್ವನಿಗಳಾಗಿ ಉಳಿದಾವು.

ಉಪಾಸ್ಯ ಭಗವತ್ಪೂರ್ಣತ್ವವನ್ನು ಅಂಗೀಕರಿಸದೆ ಮಾಡುವ ಆರಾಧನೆಗಳೆಲ್ಲವೂ ಅರ್ಥ–ಕಾಲ–ಶಕ್ತಿಎಲ್ಲದರ ದುರುಪಯೋಗ ಮಾತ್ರ. ಮೇಲೇರುವುದು–ಕೆಳಗಿಳಿಯುವುದು- ಎನ್ನುವಾಗ ನಾವು ಭೌತಿಕದೃಷ್ಟಿಯಿಂದಲ್ಲ; ಕೇವಲ ಆಧ್ಯಾತ್ಮಿಕ ದೃಷ್ಟಿಯಿಂದ ಮಾತನಾಡುತ್ತೇವೆ. ಘೋರಾತಿಘೋರ ನಾಸ್ತಿಕ-ಶಿರೋಮಣಿಗಳೂ, ಮಾನವಮಸ್ತಿಷ್ಕ ಮಹತ್ತಮ ಪ್ರಯತ್ನಗಳಿಂದ ಕಲ್ಪಿಸಿಕೊಳ್ಳಬಹುದಾದ ಸಮಸ್ತಪಾತಕಗಳನ್ನೂ ಮಾಡಿಮುಗಿಸಿ, "ನಾವು ಇನ್ನಾವ ಪಾತಕಗಳನ್ನು ಮಾಡಲು ಸಾಧ್ಯವಿದೆ ?" – ಎಂದು ಯೋಚಿಸುವ ನಿರತಿಶಯ ದುಷ್ಟಪಾಪಿಗಳೂ ಕೂಡ ಬಾಹ್ಯಾಂತರಿಕ್ಷದಲ್ಲಿ ವೈಜ್ಞಾನಿಕ ವಾಹನಗಳನ್ನು ನಿರ್ಮಿಸಿ, ಚಂದ್ರನ ವಕ್ಷಃಸ್ಥಳದ ಮೇಲೆ ಇಳಿದು ಓಡಾಡಬಹುದು; ಕೊರಳಿಗೆ ಕಗ್ಗಲ್ಲಿನ ಕಠೋರವಾದ ಹೊರೆಯನ್ನು ಬಿಗಿದುಕೊಂಡು ಪ್ರಶಾಂತ ಮಹಾಸಾಗರದ ತಳಮುಟ್ಟಿ, ತಿಮಿಗೋ, ತಿಮಿಂಗಿಲಕ್ಕೋ

ತುತ್ತಾಗಿ, ಆದಿರಹಿತ ಅತೀತದ ಅಸೀಮ ಅಂತರಾಳದಲ್ಲಿ ಇಲ್ಲದಂತಾಗಬಹುದು; ಕಗ್ಗಲ್ಲು ಕುತ್ತಿಗೆಗೆ ಒತ್ತುತ್ತದೆಂಬ ಅಂಜಿಕೆಯಿದ್ದರೆ, ಜಲಾಂತರ್ಗಾಮಿನೀ ನೌಕೆಯಲ್ಲಿ ಕುಳಿತೇ ಕರಾಳ ಕಾಲದ ಕೈಗೆ ಸಿಕ್ಕಿ, ಇಲ್ಲವಾಗಿ ಹೋಗಬಹುದು; ಆದರೆ, ಆಧ್ಯಾತ್ಮಿಕ-ಅವರೋಹಣ ಸಾಗರದ ತಳ ಸೇರುವಷ್ಟೇ ಸುಕರವಾದರೂ, ಏಕೆ, ಅದಕ್ಕಿಂತಲೂ ಬಹು ಸುಲಭವಾದರೂ, ಆಧ್ಯಾತ್ಮಿಕ -ಆರೋಹಣ ಮಾತ್ರ ಅಸಂಖ್ಯ ಜನ್ಮಗಳ ಸುಕೃತದ ಮೊತ್ತದಿಂದ ಹಾಗೂ ವರ್ತಮಾನ-ಭವಿಷ್ಯತ್ತುಗಳ ಸತ್ಕರ್ಮ ಸಂಕುಲದ ಸಂತುಲನ ಸಾಧನೆಯಿಂದ ಮಾತ್ರ ಮೂರ್ತರೂಪವಾದೀತು.

ಹೌದು; ವರ್ತಮಾನ ಹಾಗೂ ಆಗಾಮೀ ಜೀವನದ ಸುಧಾರಣದಿಂದಲ್ಲದೆ, ಜೀವಾತ್ಮನ ಆಧ್ಯಾತ್ಮಿಕ ಊರ್ಧ್ವಗತಿ ಸ್ವಪ್ನ ಪ್ರಾಯಮಾತ್ರವಾದೀತು. ವಿಶ್ಲೇಷಣೀಯವಾದ ಈ ಮಂತ್ರ ಅಂತಹ ಊರ್ಧ್ವಗತಿಯ ರಾಜಮಾರ್ಗವನ್ನು ಬೆರಳುಮಾಡಿ ತೋರಿಸುತ್ತದೆ. ಸರ್ವ ಶಬ್ದಗಳೂ ಸಮರ್ಥ-ಸಾಧನಗಳ ಲಕ್ಷಣವನ್ನು ತೋರಿಸುತ್ತಿದ್ದರೂ, ಸೋಮ, ಸೋಮಪಾಃ, ಗೋದಾಃ ಹಾಗೂ ಮದ- ಈ ನಾಲ್ಕು ಶಬ್ದಗಳ ಮೇಲೆಯೇ ಸಂಪೂರ್ಣಮಂತ್ರದ ಭಾರ ಬಿದ್ದಿದೆ. ಹಿಂದೆಯೂ ಸೋಮದ ಅಷ್ಟಿಷ್ಟು ವರ್ಣನೆ ಮಾಡಿಯೇ ಇದ್ದೇವೆ. ಆದರೆ, ಈ ಮಂತ್ರದ ಮಹಾದ್ವಾರದ ಬಲಿಷ್ಠವಾದ ಬೀಗ ಈ ಸೋಮ; ಆ ಬೀಗವನ್ನು ತೆರೆಯುವ ಬೀಗದ ಕೈ ನಮ್ಮ ಕೈಗೆ ಬಂದಾಗ ಮಾತ್ರ ನಾವು ಸಫಲರಾದೇವು.

ಸೋಮ ? ಸೋಮ ?? ಸೋಮ ??? ಅಹುದು: ಸೋಮವೇ ಸರಿ. ಈ ಸೋಮ – ಎಂಬುದು ಯಾವ ವಸ್ತು ? ಅದು ಕೇವಲ ಯಾವುದೋ ಒಂದು ನಿರ್ದಿಷ್ಟ ವಸ್ತುವಿನ ಹೆಸರಾಗಿದ್ದಿದ್ದರೆ, ಕಾರ್ಯ ಸುಲಭವಾಗುತ್ತಿತ್ತು. ಆದರೆ-ವಸ್ತುಸ್ಥಿತಿ ಹಾಗಿಲ್ಲ. ಸೋಮದ ವರ್ಣನೆಯನ್ನು ಪ್ರಾಸಂಗಿಕವಾಗಿ ಹಿಂದೆಯೂ ಮಾಡಿದ್ದೇವೆ; ಆದರೂ, ಬಹ್ವರ್ಥ ವ್ಯಾಪಕ ಶಬ್ದವಾದ 'ಸೋಮ' ಅಷ್ಟು ಸುಲಭವಾಗಿ ವರ್ಣಿಸಲಾಗುವಂತಹುದಲ್ಲ.

ಯಾಸ್ಕರು – **"ಸೋಮಃ ಸುನೋತೇಃ ಏನಮಭಿಷುಣ್ವಂತಿ."**[5, 1. 2.] ಎಂದು ಅದನ್ನು ಅಲ್ಲಿಗೆ ಕೈಬಿಡಲಿಲ್ಲ. **"ಸೋಮಃ ಆತ್ಮಾ"** [ಪರಿ:- 2. 11 ]_ "ಸೋಮವೆಂದರೆ ಆತ್ಮಾ."; **"ಸೋಮೋ ರೂಪ ವಿಶೇಷೈರೋಷಧಿಃ"** [5. 1. 5.] - ವಿಶಿಷ್ಟ ರೂಪದ ಓಷಧಿಯು ಸೋಮ."; **"ಸೋಮಃ ಸೂರ್ಯಃ"** [ಪರಿ:- 2. 12.] -"ಸೋಮವೆಂದರೆ ಸೂರ್ಯ": **"ಸೋಮಂ ಆತ್ಮಾನಂ."** [ಪರಿ:- 2. 15] – "ಸೋಮವನ್ನು ಎಂದರೆ ಆತ್ಮನನ್ನು"; - ಹೀಗೆ ಅನೇಕಾರ್ಥಗಳನ್ನು ಕೊಟ್ಟಿದ್ದಾರೆ.

**"ಸೋಮವು ಒಂದು ಬಳ್ಳಿಯ ರಸ."** – ಎಂಬರ್ಥ ತಪ್ಪಲ್ಲ. ಸ್ವತಃ ಋಗ್ವೇದವೇ **"ಸೋಮಂ ಮನ್ಯತೇ ಪಪಿವಾನ್ ಯತ್ಸಂಪಿಷಂತ್ಯೋಷಧಿಂ"** [ಋಗ್ವೇದ:-10 85. 3. ] - "ಪಾನಾಸಕ್ತನು ಅರೆಯಲ್ಪಡುವ ಓಷಧಿಯನ್ನೇ ಸೋಮವೆಂದು ತಿಳಿಯುತ್ತಾನೆ." ಎಂದಿದೆ. ಆದರೆ, ಅದೊಂದೇ ಸೋಮ – ಎಂಬ ತಪ್ಪುಗ್ರಹಿಕೆಗೆ ಅಧ್ಯಯನಶೀಲರು ಈಡಾಗದಿರಲೆಂದು, ಅದೇ ಮಂತ್ರದ ಉತ್ತರಾರ್ಧ ಓದುಗರ ಗಮನಕ್ಕೆ

ತರುತ್ತದೆ. **"ಸೋಮಂ ಯಂ ಬ್ರಹ್ಮಾಣೋವಿದುರ್ನ ತಸ್ಯಾಶ್ನಾತಿ ಕಶ್ಚನ."**. ಬ್ರಹ್ಮಜ್ಞರು ಯಾವ ಸೋಮವನ್ನು ಬಲ್ಲರೋ, ಅದನ್ನಾವನೂ ಸೇವಿಸನು." – ಎಂದು, ಲತಾರಸಮಾತ್ರವಲ್ಲ; ಬೇರೆ ರಸವೂ ಇದೆ." - ಎಂದು, ಸೂಚ್ಯದತ್ತ ಪಾಠಕರನ್ನಾ ಕರ್ಷಿಸುತ್ತದೆ. **"ರಸೋವೈಸಃ। ರಸಂಹ್ಯೇವಾಯಂ ಲಬ್ಧ್ವಾऽऽನಂದೀ ಭವತಿ."** – "ನಿಜವಾಗಿ ಪರಮಾತ್ಮನು ರಸವೇ ಆಗಿದ್ದಾನ. ಈ ಜೀವ ರಸವನ್ನು ಪಡೆದೇ ಆನಂದವಂತ ನಾಗುತ್ತಾನೆ." – ಎಂಬ ಉಪನಿಷದ್ವಾಕ್ಯ ವಿಷಯದ ಸ್ಪಷ್ಟೀಕರಣವನ್ನು ಸುಗಮಗೊಳಿಸಿದೆ. "ರಸಲಾಭದಿಂದ ಆನಂದವಂತನಾಗುತ್ತಾನೆ." - ಎಂಬ ವಾಕ್ಯಕ್ಕೆ, "ರಸವು ಆನಂದವನ್ನು ತರುತ್ತದೆ." – ಎಂದರ್ಥವಾದರೆ, ರಸ ಸ್ವತಃ ಆನಂದವಾಗಿರಬೇಕು. ಧನವಿಲ್ಲದೆ ಧನವಂತ ನಾಗುವುದು, ವಿದ್ಯೆಯಿಲ್ಲದೆ ವಿದ್ಯಾವಂತನಾಗುವುದು, ಗೃಹವಿಲ್ಲದೆ ಗೃಹವಂತನಾಗುವುದು ಹೇಗೆ ಸಾಧ್ಯವಿಲ್ಲವೋ, ರಸವಿಲ್ಲದೆ ಆನಂದವಂತನಾಗುವುದು ಹಾಗೆಯೇ ಸಾಧ್ಯವಿಲ್ಲ – ಎಂದೊಡನೆ, **'ರಸ'** ಎಂಬುದು **'ಆನಂದ'**ದ ಪರ್ಯಾಯವಾಚಕವೆನ್ನುವುದು ಅಸಂದಿಗ್ಧವೆ ಸರಿ. **"ಆಪೋಜ್ಯೋತೀ ರಸೋಽಮೃತಂ ಬ್ರಹ್ಮ."** - "ಅಪ್, ಜ್ಯೋತಿ ರಸ, ಅಮೃತ ಬ್ರಹ್ಮ" - ಎಂದು ದಿನ - ದಿನ ಉಚ್ಚರಿಸುವ ವೈದಿಕರಿಗೆ, ಈ 'ರಸ'ದ ಪರಿಚಯವಿದ್ದೇ ಇದೆ.

ಗುಣ-ಗುಣಿಗಳ ಏಕೀಭಾವ ಸಿದ್ಧಾಂತವನ್ನು ಹಿಂದೆಯೇ ಹೇಳಿದ್ದೇವಷ್ಟೆ? ಮತ್ತೆ ಅದರ ಪುನರುಕ್ತಿ ಅನಾವಶ್ಯಕ. ಪರಮಾತ್ಮನ ಆನಂದ ಮಾತ್ರ ರಸವಲ್ಲ; ಸ್ವತಃ ಪರ ಮಾತ್ಮನೇ ರಸರೂಪ-ಎಂಬ ಮೂಲತತ್ತ್ವ ಸ್ಮೃತಿಪಥದಿಂದ ಜಾರಿ ಹೋಗದಿದ್ದರೆ ಸಾಕು· ಭಗವಂತನ ಸ್ವಾಭಾವಿಕ ಗುಣ ಆನಂದ; ಅದು ನೈಮಿತ್ತಿಕವಲ್ಲವುದರಿಂದ, ಆನಂದವನ್ನು ಕಳೆದುಕೊಂಡು ಶೋಕ - ಸಂತಪ್ತನಾಗುವ ದುರವಸ್ಥೆ ಪರಮಾತ್ಮನಿಗೆ ಎಂದೂ ಬಂದಿಲ್ಲ; ಈಗಿಲ್ಲ; ಭವಿಷ್ಯದಲ್ಲಿ ಇಂತಹ ದುಃಸ್ಥಿತಿ ಭಗವಂತನಿಗೆ ಬರುವುದೂ ಇಲ್ಲ. ತೈತ್ತಿರೀಯದ **"ಆನಂದೋ ಬ್ರಹ್ಮೇತಿ ವ್ಯಜನಾತ್."** – "ಆನಂದವೇ ಬ್ರಹ್ಮವೆಂದರಿತನು." - ಎಂಬ ವಾಕ್ಯವೂ, **"ಆನಂದ ಮಯೋಽಭ್ಯಾಸಾತ್."** - "ಪುನಃ ಪುನಃ ಆನಂದಮಯನೆಂದು ಹೇಳಿರುವುದರಿಂದ" - ಎಂಬ ಬ್ರಹ್ಮಸೂತ್ರವೂ ನೆನಪಿರಲಿ. "ಭಗವಂತನು ಆನಂದವೂ ಅಹುದು; ಆನಂದಮಯನೂ ಅಹುದು." - ಎಂಬ ಸರ್ವಮಾನ್ಯ ಸಿದ್ಧಾಂತ, 'ಸ್ವ-ಭಾವ ದತ್ತ ನಮ್ಮನ್ನು ಕರೆಯುತ್ತಲಿದೆ.

**ಸ್ವತಃ ಭಗವಂತನೂ ಸೋಮನೇ.**

ಸೋಮದ ಕಥೆ ಆನಂದದ ಕಥೆಯೂ ಆಗಿದೆ. ಓದೋಣ:—

**ವಿಶ್ವಾ ಧಾಮಾನಿ ವಿಶ್ವಚಕ್ಷ ಋಭ್ವಸಃ ಪ್ರಭೋಸ್ತೇಸತಃ ಪರಿಯಂತಿ ಕೇತವಃ।**
**ವ್ಯಾನಶಿಃ ಪವಸೇ ಸೋಮ ಧರ್ಮಭಿಃ ಪತಿರ್ವಿಶ್ವಸ್ಯ ಭುವನಸ್ಯ ರಾಜಸಿ ॥**

[ಋಕ್:- 9. 86. 5.]

"[ವಿಶ್ವ ಚಕ್ಷಃ] ಓ ಸರ್ವದ್ರಷ್ಟಾ, [ಋಭ್ವಸಃ] ಸರ್ವೋಚ್ಚ ಚೇತನನೇ! [ಸೋಮ,] ಸೋಮನೇ! [ಸತಃ ತೇ ಪ್ರಭೋಃ] ಸತ್ಯ ಸ್ವರೂಪ ಪ್ರಭುವಾದ ನಿನ್ನ [ಕೇತವಃ] ನಿರ್ದಿಷ್ಟವೂ, ಸ್ಪಷ್ಟವೂ ಆದ ಜ್ಞಾನ-ವಿಜ್ಞಾನಗಳು, [ಪರಿಯಂತಿ] ಸರ್ವೋನ್ನತಸ್ತರದಲ್ಲಿ ವಿರಾಜಿಸುತ್ತಿವೆ. [ವ್ಯಾನಶಿಃ] ಸರ್ವವ್ಯಾಪಕನಾಗಿ, [ಧರ್ಮಭಿ] ಧರ್ಮಗಳಿಂದ, ಧಾರಣ ಶಕ್ತಿಗಳಿಂದ [ಪವಸೇ] ಪಾವನಗೊಳಿಸುತ್ತಿರುವೆ. [ವಿಶ್ವಸ್ಯ ಭುವನಸ್ಯ] ಅಖಿಲ ಬ್ರಹ್ಮಾಂಡದ, [ಪತಿಃ] ಪಾಲಕನೂ, ಒಡೆಯನೂ ಆಗಿ, [ರಾಜಸಿ] ಪ್ರಕಾಶಿಸುತ್ತಿರುವೆ." ಚೇತನ ಯೋಗ್ಯವಾದ ಲಕ್ಷಣಗಳನ್ನು ಸಾರಿ ಸಾರಿ ಉದ್ಘೋಷಿಸಿ, ಈ ಮಂತ್ರ "ವಿಶ್ವ ಬ್ರಹ್ಮಾಂಡದ ಪ್ರಭು" ಎಂದು ವರ್ಣಿಸಿ, ಸಾಕ್ಷಾತ್ ಈಶ್ವರನಿಗೂ 'ಸೋಮ ಎಂಬ ಹೆಸರಿದೆ - ಎಂದು ವರ್ಣಿಸುತ್ತಿದೆ. ಈ ಮಂತ್ರವನ್ನು ಆಲಿಸಿರಿ.

**ತ್ವಂ ವಿಪ್ರಸ್ತ್ವಂ ಕವಿರ್ಮಧು ಪ್ರಜಾತಮಂಧಸಃ ।**
**ಮದೇಷು ಸರ್ವಧಾ ಅಸಿ ॥** [ಋಕ್:– 9. 18. 2.]

"ಓ ಸೋಮ! [ತ್ವಂ ವಿಪ್ರ:] ನೀನು ಮೇಧಾವಿ. [ತ್ವಂ ಕವಿಃ] ನೀನು ಕ್ರಾಂತದರ್ಶನನು; ವಿಜ್ಞಾತಸತ್ಯೋಪದೇಶಕನು. [ಅಂಧಸಃ] ದಿವ್ಯಭೋಜನದಿಂದ, [ಪ್ರಜಾತಂ] ಪ್ರಸಿದ್ಧಿಗೆ ಬರುವ, [ಮಧು] ವಿರಾಡಾತ್ಮನು, ವಿಶ್ವಜ್ಞಾನವು ನೀನು. [ಮದೇಷು] ಅವ್ಯಾಹತವಾಗಿ, ತರಂಗತರಂಗವಾಗಿ ಮೂಡಿ ಬರುವ ಸ್ವಾಭಾವಿಕ ಆನಂದದಲ್ಲಿ ಸ್ಥಿತನಾಗಿ, [ಸರ್ವಧಾ ಅಸಿ] ಸರ್ವಧಾರಕನು, ಸರ್ವಾಧಾರನು, [ಅಸಿ] ಆಗಿದ್ದೀಯೆ." ಮಂತ್ರದಲ್ಲಿ ಸೋಮ ಶಬ್ದವಿಲ್ಲವಾದರೂ, ಮಂತ್ರದ ದೇವತಾ 'ಸೋಮನೇ.' **"ವಿಪ್ರ ಇತಿ ಮೇಧಾವಿ ನಾಮಸು ಪಠಿತಂ.'** "[ನಿ:– 3. 15.]; **"ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ.'** [ನಿರು:- 12. 13. ]; "ಮೇಧಾವಿಯ ಹೆಸರುಗಳಲ್ಲಿ 'ವಿಪ್ರ' ಎಂಬುದೂ ಇದೆ. "ಶಬ್ದೋಪದೇಶಕನು ಕವಿ." – ಎಂಬ ಬಲಿಷ್ಠ ಪ್ರಮಾಣಗಳನ್ನು ಮೊದಲೇ ಕೊಟ್ಟಿದ್ದೇವೆ. ಜಡವಾದ ಲತಾರಸದಲ್ಲಿ ಈ ಚೇತನ ಸಾಮರ್ಥ್ಯವೆತ್ತ? **'ಸರ್ವಧಾ'** ಎಂದ ಮೇಲೆ, ಈ ಮಂತ್ರ ಬಣ್ಣಿಸಿರುವುದು ವಿರಾಡಾತ್ಮನನ್ನೇ ಹೊರತು ಯಾವ ಓಷಧೀರಸವನ್ನೂ ಅಲ್ಲ - ಎಂಬುದು ಸ್ವತಃ ಸಿದ್ಧವೇ ಆಗಿದೆ, ಮೇಧಾವಿತ್ವ, ಕವಿತ್ವ, ಸರ್ವಾಧಾರತ್ವ, ಆನಂದವತ್ತ್ವ - ಇವು ಜಡದಲ್ಲೆಂದಿಗಾದರೂ ವ್ಯಕ್ತವಾಗಬಲ್ಲವೇ? ಆಯಿತು. ಕೆಳಗಿನ ಮಂತ್ರವನ್ನೂ ಕೇಳೋಣ:–

**ಏಷ ಸೂರ್ಯಮರೋಚಯತ್ ಪವಮಾನೋ ವಿಚರ್ಷಣಿಃ ।**
**ವಿಶ್ವಾ ಧಾಮಾನಿ ವಿಶ್ವವಿತ್ ॥** [ಋಕ್ :– 9. 28. 5.]

"[ಏಷಃ] ಈ, [ಪವಮಾನಃ] ಪಾವನಗೊಳಿಸುವ, [ವಿಚರ್ಷಣಿಃ] ಸರ್ವವನ್ನೂ ಯಥಾವತ್ತಾಗಿಯೇ ನೋಡುವವನಾದ, [ವಿಶ್ವವಿತ್] ವಿಶ್ವಜ್ಞನಾದ ಭಗವಂತನು, [ಸೂರ್ಯಂ] ಸೂರ್ಯನನ್ನೂ, [ವಿಶ್ವಾಧಾಮಾನಿ] ಸಮಸ್ತಲೋಕ-ಲೋಕಾಂತರಗಳನ್ನೂ

[ಅರೋಚಯತ್] ಪ್ರಕಾಶಪಡಿಸಿದ್ದಾನೆ." ಈ **ಸೋಮ** ವಿಶ್ವಬ್ರಹ್ಮಾಂಡಪ್ರಕಾಶನೂ, ಸರ್ವದ್ರಷ್ಟೃವೂ ಆದ ಪರಮಾತ್ಮನಲ್ಲದೆ, ಮತ್ತಾರಾಗಿರಲು ಸಾಧ್ಯ ? ಹಲವರಿಗೆ ಮಂತ್ರ ದಲ್ಲಿಯೇ 'ಸೋಮ' ಶಬ್ದ ಬಂದು, ನೇರವಾಗಿಯೇ ಸೋಮ-ಎಂಬ ಪದ ಈಶ್ವರನಿಗೇ ಅನ್ವಯಿಸುವುದನ್ನು ಕಾಣುವ ತವಕವಿರಬಹುದು. '**ಸೋಮೋವಾ ಇಂದುಃ**" [ಐ.1.29] "ಸೋಮನೇ ಇಂದುವು".; "**ಇಂದುರಿಂಧೇರುನತ್ತೇರ್ವಾ**" [ಶತ:– 2. 2. 3. 23] "ಪ್ರಕಾಶ ಬೀರುವುದರಿಂದ ಅಥವಾ ನೆನೆಸುವುದರಿಂದ ಇಂದುವೆನಿಸುತ್ತಾನೆ." – ಮೊದಲಾದ ಪರ್ಯಾಯಶಬ್ದಗಳಿಂದ ಅವರಿಗೆ ತೃಪ್ತಿಬಾರದು. ಆದಕಾರಣ, ಈ ಕೆಳಗಿನ ಮಂತ್ರಗಳನ್ನೇ ನೋಡೋಣ:–

**ಅಯಂ ಸ ಯೋ ವರಿಮಾಣಂ ಪೃಥಿವ್ಯಾ ವರ್ಷ್ಮಾಣಂ**
**ದಿವೋ ಅಕೃಣೋದಯಂ ಸಃ**
**ಅಯಂ ಪೀಯೂಷಂ ತಿಸೃಷು ಪ್ರವತ್ಸು ಸೋಮೋ**
**ದಾಧಾರೋರ್ವಂತರಿಕ್ಷಂ ॥**
[ಋಕ್:- 6. 47. 4.]

"[ಯಃ] ಯಾವನು, [ಪೃಥಿವ್ಯಾವರಿಮಾಣಂ] ಭೂಮಿಯ ಉನ್ನತ ಸ್ತರವನ್ನು [ಅಕೃಣೋತ್] ಮಾಡಿದ್ದಾನೋ, [ಸಃ ಅಯಂ] ಅವನು ಇವನೇ. [ಯಃ] ಯಾವನು, [ದಿವಃ ವರ್ಷ್ಮಾಣಂ] ದ್ಯುಲೋಕದ ಮೇಘರಾಜಿಯನ್ನು [ಅಕೃಣೋತ್] ನಿರ್ಮಿಸಿದ್ದಾನೋ [ಸಃ ಅಯಂ] ಅವನು ಇವನೇ. [ಅಯಂ ಸೋಮಃ] ಈ ಸೋಮನೇ, [ತಿಸೃಷು] ತಗ್ಗಾದ ಸಮತಲವಾದ ಹಾಗೂ ಎತ್ತರವಾದ–ಮೂರು ಬಗೆಯ ಭೂಮಿಯಲ್ಲಿಯೂ, [ಪೀಯೂಷಂ] ಅಮೃತ ಪ್ರಾಯವಾದ ಖಾದ್ಯ–ಪೇಯ ವಸ್ತುವನ್ನು, [ಅಕೃಣೋತ್] ಸೃಜಿಸಿರುತ್ತಾನೆ ಅವನೇ, [ಉರು] ವಿಶಾಲವಾದ, [ಅಂತರಿಕ್ಷಂ] ವಾಯುಮಂಡಲವನ್ನು, [ದಾಧಾರ] ರಚಿಸಿದ್ದಾನೆ." ಇಂತಹ ಸ್ಪಷ್ಟೋಕ್ತಿ ಜಗದಾಧಾರನಾದ, ವಿಶ್ವಸ್ರಷ್ಟಾರನಾದ ಪರಮೇಶ್ವರನೇ ಸೋಮನೆನ್ನಲು ಸಾಲದೇ? ಮತ್ತೂ ಆಲಿಸೋಣ:–

**ಅಯಂ ವಿದಚ್ಚಿತ್ರದೃಶೀಕಮರ್ಣಃ ಶುಕ್ರಸದ್ಮನಾಮುಷಸಾಮನೀಕೇ।**
**ಅಯಂ ಮಹಾನ್ ಮಹತಾ ಸ್ಕಂಭನೇನೋದ್ದ್ಯಾಮಸ್ತಭ್ನಾದ್ವೃಷ**
**ಭೋ ಮರುತ್ವಾನ್ ॥**

[ಋಕ್ :- 6. 47. 4]

ಮೇಲಿನ ಮಂತ್ರದಿಂದ 'ಸೋಮ' ಶಬ್ದದ ಅಧ್ಯಾಹಾರ ಮಾಡಿಕೊಳ್ಳಬೇಕು. [ಅಯಂ] ಈ ಸೋಮನು, [ಚಿತ್ರದೃಶೀಕಂ] ಅದ್ಭುತವಾಗಿ ಕಾಣುವ, [ಅರ್ಣಃ] ಸೀಮಾ ರಹಿತ ಸಮುದ್ರ–ಸಾಗರ ಮೇಘರಾಜಿಯನ್ನು, [ವಿದತ್] ತಿಳಿದಿದ್ದಾನೆ; [ಶುಕ್ರಸದ್ಮನಾಂ] ತೇಜೋವಿರಾಜಮಾನ ಪ್ರಾಸಾದಗಳಲ್ಲಿರುವ, [ಉಷಸಾಂ] ಉನ್ನತ-ಉನ್ನಾಯಕ ಅಭಿಲಾಷೆ ಗಳನ್ನುಳ್ಳ ಜನತೆಯನ್ನು, [ವಿದತ್] ತಿಳಿದಿದ್ದಾನೆ. [ಅಯಂ] ಈ, [ವೃಷಭಃ] ಧರ್ಮೋ

ತ್ಥಾನಕರನಾದ, [ಮರುತ್ವಾನ್] ಹಿತ-ಮಿತ-ಶಿತವಾದ ಸಂಯುತಾಚಾರ-ವಿಚಾರ-ವಿಹಾರಿಗಳಾದ ಮಾನವಮಾತ್ರರ ಅಮರನಿಧಿಯಾದ ಸೋಮದೇವನೇ, [ಮಹಾನ್] ಸ್ವತಃ ಮಹಾಮಹಿಮಾನಾಗಿ[ಮಹತಾ ಸ್ಕಂಭನೇನ] ಮಹಾನ್ ಸ್ತಂಭದಿಂದ, ವಿಶ್ವಾಧಾರಸ್ವ ರೂಪವಾದ ತನ್ನ ಶಕ್ತಿಯಿಂದ, [ದ್ಯಾಂ] ದ್ಯುಲೋಕವನ್ನು, [ಉತ್ ಅಸ್ತಭ್ನಾತ್] ಎತ್ತಿ ಹಿಡಿದಿದ್ದಾನೆ." ಸರ್ವಜ್ಞ-ಸರ್ವಶಕ್ತನಾಗಿದ್ದು ಈ ಬೃಹದ್ಬ್ರಹ್ಮಾಂಡವನ್ನು ಎತ್ತಿ ಹಿಡಿಯುವುದು ಲತಾ-ರಸ ವಿಶೇಷದ ಕಾರ್ಯವೆಂದು ನಂಬುವ ಮಾನವರೂ ಇದ್ದಾರೆಯೇ ? ಇದೊಂದೇ ಸಾಕು:—

**ಸೋಮಃ ಪವತೇ ಜನಿತಾ ಮತೀನಾಂ ಜನಿತಾದಿವೋ ಜನಿತಾ ಪೃಥಿವ್ಯಾಃ।**
**ಜನಿತಾಽಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ॥**

[ಋಕ್:- 9. 96. 5]

"[ಸೋಮಃ] ಸಮಸ್ತ ಸಚರಾಚರ ವಿಶ್ವದ ಸಾರ-ಸರ್ವಸ್ವನಾದ*ಭಗವಂತನು [ಮತೀನಾಂ ಜನಿತಾ] ವೇದೋದ್ಭಾಸನದ ಮೂಲಕ ಧರ್ಮಾಧಿಕಾರಿಗಳಾದ ಮಾನವ ಮಾತ್ರರಿಗೆ ಜ್ಞಾನವನ್ನುಂಟುಮಾಡುವವನು; [ದಿವಃ ಜನಿತಾ] ದ್ಯುಲೋಕದ ಉತ್ಪಾದಕನು; [ಪೃಥಿವ್ಯಾಃ ಜನಿತಾ] ಭೂಲೋಕದ ಉತ್ಪಾದಕನು; ಅಗ್ನೇಃ ಜನಿತಾ] ಅಗ್ನಿಯ ಉತ್ಪಾದಕನು [ಸೂರ್ಯಸ್ಯ ಜನಿತಾ] ಸೂರ್ಯನ ಉತ್ಪಾದಕನು; [ಇಂದ್ರಸ್ಯ ಜನಿತಾ] ವಾಣಿ-ಪ್ರಾಣ-ಮನಸ್ಸು ಬಲಗಳ ಉತ್ಪಾದಕನು; [ಉತ] ಮತ್ತು, [ವಿಷ್ಣೋಃ] ಶುಭತಮ ಕರ್ಮದ, ಸರ್ವತ್ರ ವ್ಯಾಪಕವಾದ ಯಜ್ಞದ [ಜನಿತಾ] ಉತ್ಪಾದಕನು. [ಪವತೇ] ಹೀಗೆ ಅವನು ಎಲ್ಲವನ್ನೂ ನಿರ್ಮಲೀಕರಿಸುತ್ತಾನೆ." ಯಾವುದಾದರೂ ಜಡದ್ರವ್ಯದಲ್ಲಿ ಈ ಗ್ರಹೋಪಗ್ರಹಗಳ ಮನ-ಹೃದಯ-ಪ್ರಾಣಗಳ ಸೃಜನಸಾಮರ್ಥ್ಯ ಕಂಡುಬಂದಿತೇ?

ಈ ಉದ್ಧರಣಗಳಿಂದ ಸೋಮ ಶಬ್ದದ ಪ್ರಧಾನಾರ್ಥವಾದ ಭಗವಂತನ ಗ್ರಹಿಕೆ ಹೇಗೆಂಬುದು ಅರ್ಥವಾಗಿಯೇ ತೀರುತ್ತದೆ. ಆದರೆ, ಭಗವಂತ ಮಾತ್ರವಲ್ಲ; ಭಗವದಾನಂದ ರಸವೂ ಸೋಮವೆನಿಸುತ್ತದೆ - ಎಂದು ಹೇಳಿದ್ದೇವಷ್ಟೇ? ಈಗ ಅದರ ಕಡೆಗೆ ಗಮನಕೊಡೋಣ. ವೇದ ಮೊಳಗುತ್ತಿದೆ ಸ್ಪಷ್ಟವಾಗಿಯೇ:—

**ಭಗವದಾನಂದವೂ ಸೋಮವೇ.**

**ಜ್ಯೋತಿರ್ಯಜ್ಞಸ್ಯ ಪವತೇ ಮಧು ಪ್ರಿಯಂ ಪಿತಾ ದೇವಾನಾಂ**
**ಜನಿತಾ ವಿಭೂವಸುಃ।**

---

* ಸೋಮನು ವಿಶ್ವದ ಸಾರಸರ್ವಸ್ವವೆಂದರೆ, ಈಶ್ವರನು ವಿಶ್ವದ ಉಪಾದಾನ ಕಾರಣವಾಗಿದ್ದು, ಸ್ವರ್ಣವು ಸ್ವರ್ಣ ಪಾತ್ರದ, ರಜತವು ರಜತ ಪಾತ್ರದ, ಮೃತ್ತಿಕೆ ಘಟದ ಸಾರಭೂತನೆಂದರಿತು ಭ್ರಾಂತರಾಗಬಾರದು. ಅಖಿಲ ಬ್ರಹ್ಮಾಂಡದಲ್ಲಿ ಸರ್ವೋತ್ತಮ, ಸ್ವೀಕರಣೀಯ ತತ್ತ್ವವೆಂದು ಮಾತ್ರ ಗ್ರಹಿಸಬೇಕು.

**ದಧಾತಿ ರತ್ನಂ ಸ್ವಧಯೋರಪೀಚ್ಯಂ ಮದಿಂತಮೋ ಮತ್ಸರ ಇಂದ್ರಿಯೋ ರಸಃ||**

[ಋಕ್:- 9. 86. 10]

"[ಯಜ್ಞಸ್ಯ] ಯಜ್ಞದ, ಶ್ರೇಷ್ಠತಮ ಕರ್ಮದ, [ಜ್ಯೋತಿಃ] ಬೆಳಕಾಗಿ, [ಪ್ರಿಯಂ] ಸರ್ವರಿಗೂ ಪ್ರಿಯವಾದ, [ಮಧು] ಮಧುರ ಜ್ಞಾನವಾಗಿ, [ದೇವಾನಾಂ] ಸತ್ಯಾಚಾರ ವಿಚಾರ - ಪ್ರಚಾರಗಳಲ್ಲಿ ನಿಷ್ಠಾವಂತರಾದ ಜ್ಞಾನಿಗಳ, [ಪಿತಾ] ಪಾಲಕವೂ, [ಜನಿತಾ] ಉತ್ಪಾದಕವೂ ಆಗಿ [ವಿಭೂವಸುಃ] ಸರ್ವತ್ರ ಸಂಪ್ರಾಪ್ತವಾಗುವ ಆಧ್ಯಾತ್ಮಿಕ ಸಂಪತ್ತಾಗಿ, [ಮದಿಂತಮಃ] ಅತ್ಯಂತ ಹರ್ಷಪ್ರದವಾಗಿ, [ಇಂದ್ರಿಯಃ ರಸಃ] ಸರ್ವೇಶ್ವರನ ಸ್ವಾಭಾವಿಕ ರಸವಾದ, [ಮತ್ಸರಃ] ಸೋಮವು, ತೃಪ್ತಿದಾಯಕವಾದ ಆನಂದರಸವು, [ಪವತೇ] ಪಾವನಗೊಳಿಸುತ್ತದೆ. [ಸ್ವಧಯೋಃ] ಅನ್ನಜಲಗಳಿಗೆ, ಜ್ಞಾನ - ಕರ್ಮಗಳಿಗೆ, [ಅಪಿಚ್ಯಂ] ಗೂಢವಾಗಿಯೇ ಉಳಿದುಹೋಗುವ, [ರತ್ನಂ] ರಮ್ಯವಾದ, ರಮಣೀಯವಾದ ತತ್ತ್ವವನ್ನು, [ದಧಾತಿ] ಧಾರಣ ಮಾಡಿಸುತ್ತದೆ." ಸೋಮರಸ, ಭಗವದಾನಂದರಸ, ಕರ್ಮಕ್ಕೂ ಅಂದದ! ಜ್ಞಾನದ ಪರಿಧಿಯಲ್ಲಿಯೂ ಬಾರದ, ಶಾಂತಿ-ಎಂಬ, ತೃಪ್ತಿಯೆಂಬ, ಸ್ಫೂರ್ತಿ-ಎಂಬ ರತ್ನವನ್ನು ಕೇವಲ ಸೋಮರಸ, ಈಶ್ವರೀಯಾನಂದ ರಸ, ಆರಾಧಕನ ಜೀವನಕ್ಕೆ ಒದಗಿಸಿಕೊಡುತ್ತದೆ.

ಸೋಮದೇವ ಸೀಮಾತೀತ ಸಾಮರ್ಥ್ಯ - ಸಂಪನ್ನನಾಗಿರುವಾಗ, ಸೋಮರಸ ಸತ್ತ್ವಹೀನವಾಗಿರಲು ಸಾಧ್ಯವೇ? ಈ ಸ್ಥಿತಿ ಸ್ವಪ್ನದಲ್ಲಿಯೂ ಕೂಡ ಸಂಭವವಲ್ಲ. ವೇದ ಸಾರಿ ಹೇಳುತ್ತಲಿದೆ:-

**ಅಪಾಮ ಸೋಮಮಮೃತಾ ಅಭೂಮ ಆಗನ್ಮ ಜ್ಯೋತಿರವಿದಾಮದೇವಾನ್ ಕಿಂ ನೂನಮಸ್ಮಾನ್ ಕೃಣವದರಾತಿಃ ಕಿಮುಧೂರ್ತಿರಮೃತ ಮರ್ತ್ಯಸ್ಯ||**

[ಋಕ್:-8. 48 .3.]

"[ಸೋಮಂ] ಸೋಮವನ್ನು, ಈಶ್ವರೀಯಾನಂದರಸವನ್ನು, [ಅಪಾಮ] ಕುಡಿದಿದ್ದೇವೆ; [ಅಮೃತಾ;ಅಭೂಮ] ಅಮರರಾಗಿ ಹೋಗಿದ್ದೇವೆ. [ಜ್ಯೋತಿಃ] ದೈವೀ ದ್ಯುತಿಯನ್ನು. [ಆಗನ್ಮ] ಗಳಿಸಿಕೊಂಡಿದ್ದೇವೆ [ದೇವಾನ್] ಜ್ಞಾನೇಂದ್ರಿಯಗಳು, ಅಂತಃಕರಣಗಳು - ಎಂಬ ಶರೀರಸ್ಥಿತ ದಿವ್ಯಸಾಧನಗಳನ್ನೂ, ಸದಸದ್ವಿಚಾರ - ಸದಾಚಾರಗಳನ್ನೇ ಮಾಡುತ್ತಿರುವ ನಿರ್ಭ್ರಾಂತ ಜ್ಞಾನ – ಸಂಪನ್ನ ವಿದ್ವಜ್ಜನರನ್ನೂ. [ಅವಿದಾಮ] ಗಳಿಸಿಕೊಂಡಿದ್ದೇವೆ; ಬಳಸಿಕೊಂಡಿದ್ದೇವೆ. [ಅರಾತಿಃ] ಅದಾನಶೀಲತ್ವವಾಗಲಿ, ಆಭ್ಯಂತರ – ಬಾಹ್ಯಶತ್ರುಗಳೇ ಆಗಲಿ, [ಅಸ್ಮಾನ್] ನಮಗೆ, [ಕಿಂನೂನಂ]ಏನನ್ನು ತಾನೇ, [ಕೃಣವತ್] ಮಾಡಬಲ್ಲರು? [ಅಮೃತ] ಓ ಅಮರದೇವ! [ಮರ್ತ್ಯಸ್ಯ] ಸಾವಿನ ದವಡೆಗೆ ಸಿಕ್ಕಿ ನುಚ್ಚುನೂರಾಗುವ ಹುಲುಮಾನವನ, [ಧೂರ್ತಿಃ]ಧೂರ್ತತ್ವ, [ಕಿಂ ಉ]ಮಾಡುತ್ತದಾದರೂ ಏನು?"

ಈ ಹೆಚ್ಚು, ಈ ನೆಚ್ಚು ಈ ಮೆಚ್ಚು, ಉಚ್ಚಸ್ತರದಲ್ಲಿ, ಬೆಚ್ಚಗೇ ಕಿಚ್ಚಿಡುವ ಹುಚ್ಚಲ್ಲದ ಹುಚ್ಚು, ಹೃದಯಕ್ಕೆ ಅಚ್ಚು - ಮೆಚ್ಚಾಗಿ, ನಿಚ್ಚಳವಾಗಿ ನಿಂತಾಗ, ಭಗವದಾರಾಧಕ ಭಕ್ತಿ - ಭಾವದಿಂದ ಸ್ಫೂರ್ತಿಗೊಳ್ಳುತ್ತಾನೆ. ಸರ್ವರಕ್ಷಕನ ಎಂದಿಗೂ ದೂರವಾಗದ ರಕ್ಷಣೆ ಎಂದಿಗೂ ಕುಂದದ, ನಂದದ, ಮಂದವಾಗದ ಆನಂದರಸ ಹೃದಯಾಂತರಾಳದಿಂದ ಉಕ್ಕಿ - ಉಕ್ಕಿ ಬರುತ್ತಿರುವಾಗ, ಅವನಿಗೆ ಭಯವೆಲ್ಲಿಯದು? ಸಂಶಯವೆಲ್ಲಿಯದು? ಮೃತ್ಯು ಭಯಕ್ಕೆ, ಸಂಶಯಕ್ಕೆ, ತನಗೇನಾದರೂ ಅಪಾಯವಾಗಬಹುದೆಂಬ ಶಂಕಾತಿಶಯಕ್ಕೆ ಮೂಲ ಕಾರಣವಾದರೂ ಏನು? ಅನೇಕ ಸಾರಿ ಅರ್ಥವಾಗುವ, ಮತ್ತೆ ಅನೇಕ ಸಾರಿ ಅರ್ಥವಾಗದ ದ್ವೇಷಭಾವನೆ; ವೈರಭಾವನೆ. ಈಶ್ವರೀಯ ಆನಂದ ಅವಿಚ್ಛಿನ್ನವಾಗಿ ಜೀವನಕ್ಕೆ ಇಳಿದು-ಇಳಿದು, ಒಸರಿ - ಒಸರಿ ಬರುತ್ತಿರುವಾಗ, ಯಾರ ಕಡೆಗಾದರೂ ಶತ್ರುತ್ವದ ದೃಷ್ಟಿಯಿಂದ ನೋಡುವ ಪರಿಸ್ಥಿತಿಯೇ ಇಲ್ಲವಾದಾಗ, ಯಾರಿಂದ ಭೀತಿ? ಯಾರಿಂದ ಸಂಶೀತಿ?

ವೈದಿಕಧರ್ಮದ ಭವ್ಯ - ಪ್ರಾಸಾದದ ದೃಢವಾದ ಆಧಾರ ಶಿಲೆ ಮೈತ್ರಿ ಆಗಿರುವಾಗ ಶತ್ರುವಾದರೂ ಯಾರು? ಹಿಂದೆಯೇ ಓದುಗರು ಕೇಳಿರಬಹುದಲ್ಲ ಈ ಋಗಾ ದೇಶವನ್ನು? ಮತ್ತೆ ಆಲಿಸೋಣ:—

**ತ್ವಂ ಹ ತ್ಯತ್ ಸಪ್ತಭ್ಯೋऽ ಜಾಯಮಾನೋऽ ಶತ್ರುಭ್ಯೋ ಅಭವಃ ಶತ್ರುರಿಂದ್ರ,**
**ಗೂಳ್ಹೇ ದ್ಯಾವಾ ಪೃಥಿವೀ ಅನ್ವವಿಂದೋ ವಿಭುಮದ್ಭ್ಯೋ ಭುವನೇಭ್ಯೋ ರಣಂಧಾಃ।**

[ಋಗ್ವೇದ:— 8. 96. 16.]

"[ಇಂದ್ರ] ಓ ಇಂದ್ರಿಯಾಧೀಶ ಜೀವ! [ತ್ವಂಹ] ನೀನೇನೋ ನಿಜವಾಗಿ [ತ್ಯತ್] ಅವನೇ ಆಗಿದ್ದೀಯೇ. [ಸಪ್ತಭ್ಯಃ] ಕಣ್ಣು - ಕಿವಿ - ಮೂಗು - ನಾಲಗೆ - ಚರ್ಮ - ಮನಸ್ಸು ಹಾಗೂ ಬುದ್ಧಿಯೆಂಬ ಏಳು ಸಾಧನಗಳೊಂದಿಗೆ. [ಜಾಯಮಾನಃ] ಜನ್ಮತಾಳಿ ಬರುತ್ತಾ, [ಅಶತ್ರುಭ್ಯಃ] ಶತ್ರುಗಳಲ್ಲದವರಿಗೂ, [ಶತ್ರುಃ ಅಭವಃ] ಶತ್ರುವಾಗಿ ಕುಳಿತಿದ್ದೀಯೇ [ಗೂಳ್ಹೇ=ಗೂಢೇ] ಗೂಢವಾದ, ಅವುಗಳ ನಿಜಸ್ವರೂಪವೇನೆಂದು ತಿಳಿಯದ, [ದ್ಯಾವಾ ಪೃಥಿವೀ] ದ್ಯುಲೋಕ - ಭೂಲೋಕಗಳನ್ನು, [ಅನು ಅವಿಂದಃ] ಅಟ್ಟಿಕೊಂಡು ಹೋಗುತ್ತಿದ್ದೀಯೆ. [ವಿಭು ಮದ್ಭ್ಯಃ] ಸರ್ವವ್ಯಾಪಕನಾದ ಈಶ್ವರನಿಂದ ಯುಕ್ತವಾದ, [ಭುವನೇಭ್ಯಃ] ಲೋಕಗಳಿಗಾಗಿ, ಆಸ್ತಿಕ್ಯಭಾವನಾಸಮನ್ವಿತ ಲೋಕಗಳಿಗಾಗಿ, [ರಣಂಧಾಃ] ಹೋರಾಡು."

ಇದು ಸತ್ಯ; ಇದೇ ಸತ್ಯ. ಸ್ವರೂಪತಃ ಪರಿಚ್ಛಿನ್ನರೂ, ತತ್ಪರಿಣಾಮವಾಗಿ ಅಲ್ಪಶಕ್ತ - ಅಲ್ಪಜ್ಞರೂ ಆದ ಜೀವಾತ್ಮರ ಕರ್ಮರಂಗವಾದ ಈ ಜಗತ್ತು ಶಾಂತಿವೇದಿಯಾಗುವುದಕ್ಕಿಂತ, ಭ್ರಾಂತಿಜಾತ ಸಂಗ್ರಾಮರಂಗವಾಗುವ ಸಂಭವವೇ ಅಧಿಕ. ಹೋರಾಡ

ಬೇಕಾದೀತು: ಎಂದಮೇಲೆ, ಕ್ಷುದ್ರವಾದ ಭೌತಿಕ ಭೋಗವಿಲಾಸಗಳ ಸಲಕರಣೆಗಳನ್ನು ಸಂಕಲನ ಮಾಡುವುದಕ್ಕಲ್ಲ; ಆಧ್ಯಾತ್ಮಿಕ ಉತ್ಕರ್ಷದ ಉದ್ಘಾಟನಕ್ಕಾಗಿ, ಈಶ್ವರಾಸ್ತಿತ್ವದ ದೃಢ ವಿಶ್ವಾಸದ ತಳಹದಿಯ ಮೇಲೆ ನಿಲ್ಲುವ ಲೋಕಗಳನ್ನು ರೂಪಿಸುವುದಕ್ಕಾಗಿ ಹೋರಾಡುವುದೇ. ಶತ್ರುಗಳೆಂದು ಮೇಲ್ನೋಟಕ್ಕೆ ಕಾಣುವ, ಆದರೆ ವಸ್ತುತಃ ಶತ್ರುಗಳಲ್ಲದ ಜೀವ ಮಾತ್ರರ ಮೇಲೆ ಮೃದು-ಮಧುರ-ಮಮತಾಭಾವನೆಯನ್ನಿಟ್ಟುಕೊಂಡು, ಕಷ್ಟವೆಂದು ತೋರಿದರೂ ನಷ್ಟವನ್ನುಂಟುಮಾಡದ. ತಾನು ನೊಂದರೂ ಅನ್ಯರು ನೋವಿಗೆ ಈಡಾಗದಂತೆ ಮಾಡುವ ಧರ್ಮ - ಸಂಗ್ರಾಮಕ್ಕೆ ಬದ್ಧಪರಿಕರರಾಗಿ ಇಳಿಯಲೇಬೇಕಾದೀತು, ಆದರೆ, ಭ್ರಾಂತಿಗೆ. ಬುದ್ಧಿಯನ್ನು ಬಲಿಕೊಡದಿರೋಣ. ಯುರೋಪಿನಲ್ಲಿ ೧೦೦ ವರ್ಷಗಳ ಕಾಲ ಕ್ರೂಸೇಟ್ ವಾರ್' ಶಾಂತಿದೂತ ಏಸುವಿನ ಹೆಸರಿನಲ್ಲಿಯೇ ನಡೆಯಿತು; ನೆತ್ತರಿನ ನದಿಗಳೇ ಹರಿದವು. ಶಾಂತಿ'-ಎಂಬರ್ಥವನ್ನುಳ್ಳ 'ಇಸ್ಲಾಂ' ಮತದ 'ಜಿಹಾದ್' ವಿಶ್ವ-ವಿಖ್ಯಾತ. ಆದರೆ; ವೇದಾನುಯಾಯಿಗಳು ಪಣತೊಟ್ಟು ಹೋರಾಡಬೇಕಾಗಿರುವ ಯುದ್ಧ ರಕ್ತಮಯವಲ್ಲ. ಅವ್ಯಕ್ತರಾಗಿ ಒಳಗಿನಿಂದಲೇ ಮಾನವತ್ವವನ್ನು ಕುಕ್ಕಿ-ಕುಕ್ಕಿ ತಿನ್ನುತ್ತಿರುವ ಆಂತರಿಕ ಶತ್ರುಗಳ ಮೇಲೆ, ಆತ್ಮಿಕ ತಪಸ್ಸಿನಿಂದ ಶಕ್ತನಾದ ಜೀವ ಘೋಷಿಸಬೇಕಾದ ಸಂಘರ್ಷವದು. ಮತ್ತು ಆ ಸಂಘರ್ಷರಂಗ ಹೊರಗಲ್ಲ; ಅಂತರಂಗದಲ್ಲಿದೆ. ವೈಚಿತ್ರ್ಯವೆಂದರೆ - ಈ ಸಂಘರ್ಷದ ಅಸ್ತ್ರ - ಶಸ್ತ್ರಗಳು ಕತ್ತಿ - ಗುರಾಣಿಗಳಲ್ಲ; ಮದ್ದು - ಗುಂಡುಗಳಲ್ಲ; ಅಣುಸ್ಫೋಟಗೋಲಕ – ಉದ್ಜಜನಸ್ಫೋಟ – ಗೋಲಕಗಳೂ ಅಲ್ಲ; ಆದರೆ – ಅವಿಚ್ಛಿನ್ನವಾದ ಮೈತ್ರೀ ಹಾಗೂ ನಿಃಸ್ವಾರ್ಥ ಯಜ್ಞಗಳು ಮಾತ್ರ. **"ದೃತೇ ದೃಗ್ಂಹ ಮಾ ಮಿತ್ರಸ್ಯ ಮಾ ಚಕ್ಷುಷಾ ಸರ್ವಾಣಿ ಭೂತಾನಿ ಸಮೀಕ್ಷಂತಾಂ। ಮಿತ್ರಸ್ಯಾಹಂ ಚಕ್ಷುಷಾ ಸರ್ವಾಣಿ ಭೂತಾನಿ ಸಮೀಕ್ಷೇ। ಮಿತ್ರಸ್ಯ ಚಕ್ಷುಷಾ ಸಮೀಕ್ಷಾಮಹೇ॥"** [ಯಜು;– 36. 18.]

"ಓ ದೃಢತೆಯ ದೇವ! ನನ್ನನ್ನು ದೃಢನನ್ನಾಗಿ ಮಾಡು. ಸಮಸ್ತ ಜೀವರೂ ನನ್ನನ್ನು ಮಿತ್ರದೃಷ್ಟಿಯಿಂದ ನೋಡಲಿ. ನಾನು ಜೀವರೆಲ್ಲರನ್ನೂ ಮಿತ್ರದೃಷ್ಟಿಯಿಂದ ನೋಡುವೆ. ನಾವು ಪರಸ್ಪರ ಒಬ್ಬರನ್ನೊಬ್ಬರು ಮಿತ್ರದೃಷ್ಟಿಯಿಂದಲೇ ನೋಡೋಣ." - ಎಂಬ ಸೈನಿಕರ ಯುದ್ಧಘೋಷದ ಗೀತವನ್ನು ಹಾಡುತ್ತಾ ಹೋರಾಟದ ಹಾದಿಯಲ್ಲಿ ಹೆಜ್ಜೆಹಾಕುತ್ತಾ ಹೋಗುತ್ತಾನೆ. ಈ ವಿಚಿತ್ರ ಸಂಗ್ರಾಮಯೋಧ! ಏಕೆಂದರೆ - ಈ ಹೋರಾಟ ಎರಡು ಪರಸ್ಪರ ವಿರೋಧೀ ಸಿದ್ಧಾಂತಗಳ ನಡುವಣ ತಿಕ್ಕಾಟವೇ ಹೊರತು, ವ್ಯಕ್ತಿ - ವ್ಯಕ್ತಿಗಳ, ರಾಷ್ಟ್ರ - ರಾಷ್ಟ್ರಗಳ, ಜಾತಿ - ಜಾತಿಗಳ ಅಥವಾ ಬಣ್ಣ – ಬಣ್ಣಗಳ ನಡುವೆ ನಡೆಯುವ 'ಪ್ರತಿಶೋಧಭಾವನಾ' ಪ್ರೇರಿತವಾದ, 'ಆಕ್ರಮಣಶೀಲಮನೋಭಾವದಿಂದ ಆಕಾರ ತಳೆದು ಹೊರಬರುವ ಕದನವಲ್ಲವಿದು. ವೇದಾನುಯಾಯಿಗಳು ವೈರದಿಂದ ವೈರ ವಿಸ್ತೃತವಾಗುವುದೇ ಹೊರತು. ಪ್ರೇಮಭಾವ ಪ್ರಸಾರ ಅದರಿಂದ ಎಂದಿಗೂ ಆಗ, ದೆಂದು ಚೆನ್ನಾಗಿಯೇ ಬಲ್ಲರು. ಅವರ ವೇದಗಳು ಅವರಿಗೆ ಕಲಿಸುವುದು **'ಕಡಿ, ಬಡಿ' ಹೊಡೆ, ಕಬಳಿಸು, ಕಟ್ಟಿಹಾಕು,ಕೊಂದೆಸೆ.'** - ಎಂಬ ಪಾಠವನ್ನಲ್ಲ. ಆದರೆ:–

**ಅಜಾತ ಶತ್ರುಮಜರಾ ಸ್ವರ್ವತ್ಯನು ಸ್ವಧಾಮಿತಾ ದಸ್ಮಮೀಯತೇ।**
**ಸುನೋತನ ಪಚತ ಬ್ರಹ್ಮವಾಹಸೇ ಪುರುಷ್ಟುತಾಯ ಪ್ರತರಂದ ಧಾತನ॥**

[ಋಗ್ವೇದ:– 5. 34. 1]

"[ಅಜರಾ] ಎಂದಿಗೂ ಜೀರ್ಣ-ವಿದೀರ್ಣವಾಗದ, [ಸ್ವರ್ವತೀ] ಆನಂದಮಯೀ ಮುಕ್ತಿ. [ಅಜಾತ ಶತ್ರುಂ] ಪೂರ್ಣವೈರಿರಹಿತನೂ, [ದಸ್ಮಂ] ತನ್ನ ಆಂತರಿಕ ದುರ್ವೃತ್ತಿಗಳ ತಲೆಮೆಟ್ಟಿ ನಿಲ್ಲುವ ಆತ್ಮ-ನಿಗ್ರಹಿಯೂ ಆದ ಮಾನವನಿಗೆ, [ಸ್ವಧಾಂ ಅನು ಇತಾ] ಅವನ ಅನ್ನ-ಜಲಗಳಿಗನುಸಾರ, ಅವನ ಆತ್ಮ-ಧಾರಕ ಶಕ್ತಿಯನ್ನನುಸರಿಸಿ, [ಈಯತೇ] ಲಭಿಸುತ್ತದೆ. ಮಾನವರೇ! [ಬ್ರಹ್ಮವಾಹಸೇ] ವೇದಜ್ಞಾನ ನಿರ್ವಾಹಕನಾದ ಭಗವಂತನಿಗಾಗಿ. [ಸುನೋತನ] ಸಾರಾಸಾರ ವಿಚಾರಮಾಡಿ, ರಸವನ್ನು ಹಿಂಡಿರಿ. [ಪಚತ] ಸ್ವತಃ ತಪಶ್ಚರ್ಯೆಯಿಂದ ನಿಮ್ಮನ್ನು ನೀವೇ ಪರಿಪಕ್ವಮಾಡಿಕೊಳ್ಳಿರಿ. [ಪುರುಷ್ಟುತಾಯ = ಪುರುಸ್ತುತಾಯ, ಪುರುಭಿಃ ಸ್ತುತಾಯ, ಪುರುಧಾ ಸ್ತುತಾಯ] ಬಹು ಸ್ತುತನಾದ, ಬಹುಜನರಿಂದ ಸ್ತುತನಾದ. ಬಹುವಿಧದಲ್ಲಿ, ಬಹುಸಾರಿ ಸ್ತುತನಾದ ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ, [ಪ್ರತರಂ] ಕೇವಲ ಶ್ರೇಷ್ಠವಾದುದನ್ನೇ, [ದಧಾತನ] ಜೀವನದಲ್ಲಿ ಧರಿಸಿರಿ."

ಇಂತಹ ದಿವ್ಯ ಶಾಸ್ತ್ರ ಲಭಿಸುವುದಕ್ಕೂ ಜನ್ಮ - ಜನ್ಮಾಂತರಗಳ ಪುಣ್ಯ ಸಂಚಯ ಬೇಕು. ಶತ್ರುಭಾವನೆ, ಪರಪೀಡನ, ಪ್ರಮಾದಾಲಸ್ಯಗಳು, ವಿವೇಚನಾರಾಹಿತ್ಯ ಭೋಗ - ವಿಲಾಸಮಯೀವೃತ್ತಿ - ಈ ಹೊಲಸುಗಳನ್ನೆಲ್ಲಾ ಹೃದಯದಿಂದ ತುಂಬಾ ಹೊತ್ತು, ವೇದೋಪದೇಶಕ - ಅತಿಪ್ರಶಂಸನೀಯ ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳುವುದು, ಮೋಕ್ಷಾನಂದವನ್ನು ಸಾಧಿಸುವುದು ಸರ್ವಥಾ ಅಸಂಭವ.

ಅಹುದು. ಈ ದುರ್ವೃತ್ತಿಗಳೆಲ್ಲಾ ಶೂನ್ಯ ವಿಲೀನವಾಗಿ, ಸದ್ವೃತ್ತಿಗಳ ಸಮುದಾಯವಾಗುವುದೆಂತು? ಮಾರ್ಗವಿದೆ; ಉಪಾಯವಿದೆ. ಭಗವದಾನಂದರಸ ಹೃದಯದ ತುಂಬ ತುಂಬಿ ಬಂದಾಗ, ಯಾವುದೇ ದುರ್ಭಾವನೆ-ದುಷ್ಕಾಮನೆ-ದುರ್ವರ್ತನೆಗಳು ಹೃದಯದಲ್ಲಿ ನಾಮ–ಮಾತ್ರಕ್ಕೂ ಉಳಿಯವು. ಎಂದರೆ–ಸೋಮಪಾನವಾಗಬೇಕು; ಕಾಮ ದಾನವಾಗಬೇಕು. ಕೇಳೋಣ:–

**ವಿ ವಾ ತ ಇಂದೋ ಸುಭ್ವಂ ಸುವೇಶಸಂ ರಸಂ ತುಂಜಂತಿ**
**ಪ್ರಥಮಾ ಅಭಿಶ್ರಿಯಃ।**

**ನಿದಂ ನಿದಂ ಪವಮಾನ ನಿತಾರಿಷ ಆವಿಸ್ತೇ ಶುಷ್ಮೋ**
**ಭವತು ಪ್ರಿಯೋಮದಃ॥**

[ಋಗ್ವೇದ:– 9. 79. 5]

ಮಾಡಿದ್ದಾರೆ. ಆದರೆ, ಶಬ್ದಾರ್ಥಗಳಲ್ಲಿ ಭೇದವಿಲ್ಲ. **"ನಃ ಸವನಾ ಅಸ್ಮಾಕಂ ಐಶ್ವರ್ಯೋಯುಕ್ತಾನಿ ವಸ್ತೂನಿ ಪ್ರಕಾಶಯಿತುಂ ಆಗಹಿ-"** - ಎಂದೂ "ನಮ್ಮ ಐಶ್ವರ್ಯಯುಕ್ತ ವಸ್ತುಗಳನ್ನು ಬೆಳಗಿಸಲು ಆಗಮಿಸು." - ಎಂದು ವಿವರಿಸಿದ್ದಾರೆ ಮಹರ್ಷಿಗಳು. ಶ್ರೀ॥ ಮಧ್ವ – ಸಾಯಣರು **'ಸವನಾ'** ಎಂಬುದಕ್ಕೆ 'ಸೋಮರಸ ಹಿಂಡಲ್ಪಡುವ ಯಜ್ಞ' - ಎಂದರ್ಥಗಳನ್ನು ಮಾಡಿದ್ದಾರೆ.

• ಅರ್ಥಮಾಡಿಕೊಳ್ಳಲು ಸ್ವಲ್ಪ ಕಷ್ಟವೆಂದು ತೋರುವ ವಾಕ್ಯ - **"ಸೋಮಸ್ಯ ಪಿಬ."** - ಎಂಬುದೇ. ಪರಮೈಶ್ವರ್ಯವಾನ್ ಸರ್ವೇಶ್ವರನು, ಕುಡಿಯದೇ ಬಿಟ್ಟಿರುವುದು ಕುಡಿಯಬೇಕಾಗಿ ಉಳಿದುಕೊಂಡಿರುವುದು ಏನು? 'ಕ್ಷುತ್ಪಿಪಾಸೆಗಳು' ದೇಹವಿರುವವರಿಗೆ ಮಾತ್ರ; ಅಶರೀರನಾದ, ಸರ್ವಶಕ್ತಿಮಾನ್, ಪ್ರಾಪ್ತಸರ್ವಸ್ವ ಸರ್ವದಾನಂದ ಸ್ವರೂಪ ಆ ಸರ್ವೇಶ್ವರನಿಗೆ ಬಾಯಾರಿಕೆಯಿದೆಯೇ? ತನ್ನಿಂದಲೇ ಉತ್ಪನ್ನವಾದ ಈ ವಿಶಾಲ ಬ್ರಹ್ಮಾಂಡದಲ್ಲಿ ಮೊಳೆಯುವ, ಬೆಳೆಯುವ ಸೋಮಲತೆಯ ರಸವಿಲ್ಲದಿದ್ದರೆ, ಪಿಪಾಸೆಯಿಂದ ಬಾಯಾರಿ ನೋಯುವವನೇ ಆ ಸಚ್ಚಿದಾನಂದ ಸ್ವರೂಪ ಭಗವಂತ? ಬಾಹ್ಯದೃಷ್ಟಿಯಿಂದ ಸೋಮಪಾಃ ಸೋಮಸ್ಯ ಪಿಬ - ಎಂಬೀ ಶಬ್ದಗಳು ಸ್ವಲ್ಪ ವಿಚಿತ್ರವಾಗಿಯೇ ತೋರುತ್ತವೆ. ತನ್ನ ಅಸ್ತಿತ್ವವನ್ನುಳಿಸಿಕೊಳ್ಳಲು ಅನ್ಯ ವಸ್ತುಗಳ ಆವಶ್ಯಕತೆಯುಳ್ಳವನು, ಪೂರ್ಣನಾಗಿರಲಾರನು; ಪ್ರಾಪ್ತಸರ್ವಸ್ವ - ನಿತ್ಯತೃಪ್ತನೂ ಆಗಿರಲಾರನು. ಹಾಗಾದರೆ, 'ಸೋಮಪಾಃ,' 'ಸೋಮಪಾನಮಾಡುವವನೇ!' - ಎಂದು ಹೇಳುವುದರ ಅರ್ಥವಾದರೂ ಏನು? 'ಪಾ' ಧಾತುವಿಗೆ 'ರಕ್ಷಿಸು, ಕುಡಿ' - ಎಂಬ ಎರಡರ್ಥಗಳೂ ಇವೆ. 'ಸೋಮ' - ಎಂಬುದಕ್ಕೆ ಜೀವಾತ್ಮನೆಂಬರ್ಥ ಗ್ರಹಿಸಿದರೆ 'ಸೋಮಪಾ' ಎಂಬುದಕ್ಕೆ' 'ಜೀವಾತ್ಮನ ರಕ್ಷಕನು' ಎಂಬರ್ಥ ನಿಷ್ಪನ್ನವಾಗುತ್ತದೆ. ಸೊಗಸಾದ ಅರ್ಥವಿದು. ಇನ್ನೂ 'ಸೋಮಸ್ಯ ಪಿಬ.'; ಇದಕ್ಕೆ, "ಈಶ್ವರ! ನಿನ್ನ ಸ್ವಂತ ಆನಂದವನ್ನೇ ಸವಿಯುತ್ತಿರು; ಸರ್ವದಾನಂದ ಸ್ಥಿತಿಯಲ್ಲೇ ವಿರಾಜಿಸುತ್ತಿರು". – ಎಂದೂ, "ಸೂರ್ಯ – ಚಂದ್ರ – ನಕ್ಷತ್ರ – ಗ್ರಹೋಪಗ್ರಹಗಳ ಅಸಂಖ್ಯರಚನೆಗಳಿಂದ ಪ್ರಕಾಶಿಸುತ್ತಿರುವ ಈ ಬ್ರಹ್ಮಾಂಡವನ್ನು ಪರಿರಕ್ಷಿಸು; ಭೋಕ್ತೃಜೀವರಿಗೆ ಬ್ರಹ್ಮಾಂಡದಲ್ಲಿ ಸಿಕ್ಕಬಹುದಾದ ಭೋಗಸುಖವನ್ನು ಸವಿಯಿಸು.". - ಎಂದೂ ಅರ್ಥಮಾಡಬಹುದು. ಎರಡು ಅರ್ಥಗಳಲ್ಲಿಯೂ 'ವಿಧಿ' ಅಥವಾ ಆಜ್ಞೆ' - ಇಲ್ಲ ಪರಮಾತ್ಮನಿಗೆ 'ಹಾಗೆ ಮಾಡು; ಹೀಗೆ ಮಾಡು.' - ಎಂದು ಆಜ್ಞಾಪಿಸಬಲ್ಲ ಧೀರ ಹುಟ್ಟಿಲ್ಲ; ಈಗಿಲ್ಲ; ಮುಂದೆಯೂ ಹುಟ್ಟುವುದಿಲ್ಲ. 'ಭಕ್ತಪರಾಧೀನ' - ಎಂದು ಮೊದಲಾಗಿ, ಅಲ್ಲದ - ಸಲ್ಲದ ಕಂದಾಚಾರದ, ಬುಡ - ಕಡೆಗಳಿಲ್ಲದ ಬರಡು - ಬುರುಡೆಗಳನ್ನು ಹೊಡೆದು, ಪಾಮರವೃಂದದ ತಲೆದೂಗಿಸುವ, ಚಪ್ಪಾಳೆ ತಟ್ಟಿಸುವ ಹರಿಕಥಾದಾಸರುಗಳ ಕಲ್ಪನಾಲೋಕದಲ್ಲಿ, ಕೇವಲ ಕಪೋಲಕಲ್ಪಿತವಾದ ಇಂತಹ ಘಟನೆಗಳು ನಡೆಯಬಹುದೇನೋ; ಯಥಾರ್ಥವಾದ ಅರ್ಥದಲ್ಲಿ, ಈ ಬಗೆಯ ಮಾತುಗಳು ಭಗವದ್ಭಕ್ತರ ಬಾಯಿಗಳಿಂದ ಬರಬಹುದಾದಂತಹವೇ ಅಲ್ಲ. ದ್ವಂದ್ವಾತೀತನಾದ, ಮಾನಾಪಮಾನಗಳ ವೈಥಕ್ಕೆಂದೂ ಸಿಕ್ಕದ ಭಗವಂತನನ್ನು, ವಾದಿತೋಷನ್ಯಾಯದಿಂದ ಕ್ಷಣಕಾಲಕ್ಕೆ

**ಮಂದತೇಃ ತೃಪ್ತಿಕರ್ಮಣಃ** = ಹರ್ಷವಿತ್ತು, ತೃಪ್ತಿಕೊಡುವ ಕಾರಣ ಸೋಮವನ್ನು ಮತ್ಸರವೆನ್ನುತ್ತಾರೆ. [ನಿರುಕ್ತ:– 2. 2. 5.] [ಕನಿಕ್ರದತ್] ಬಾಳನ್ನಾಳಲಿ, [ವಿಶ್ವಾ ದ್ವಿಷಃ] ಸರ್ವದ್ವೇಷಗಳನ್ನೂ, [ಅಪಜಹಿ] ಧ್ವಂಸ ಮಾಡಿಬಿಡು." ಈ ಸರ್ವವಿಧ ದ್ವೇಷ ನಿವೃತ್ತಿಯೇ ಸಾಧಕನನ್ನು ಅಜಾತಶತ್ರುಗಳನ್ನಾಗಿ ಮಾಡಿ, ಕೊನೆಗೆ ಮೋಕ್ಷಾಧಿಕಾರಿಗಳನ್ನಾಗಿಯೂ ಮಾಡಿಬಿಡುತ್ತದೆ. ಸೋಮರಸ ಪಾನವೇ, ಭಗವದಾನಂದರಸ ಸೇವನೆಯೇ ಸರ್ವರೀತಿಯ ವೈರ-ವಿರೋಧ-ವಿರಸ-ವೈಮನಸ್ಯ-ವೈಷಮ್ಯ – ಅಸೂಯಾದಿ ಆಧ್ಯಾತ್ಮಿಕ ವ್ಯಾಧಿಯ ನಿವಾರಣಕ್ಕಿರುವ ಏಕಮಾತ್ರ ಔಷಧ.

ಭಗವಂತನೂ ಸೋಮ; ಭಗವದಾನಂದವೂ ಸೋಮ - ಎಂದರಿತೆವು. ಈಗ ಕೇವಲ ಒಂದೇ ಒಂದು ಪ್ರಧಾನಾರ್ಥ ಉಳಿದಿದೆ. ವಿರಾಡಾತ್ಮನು ವಿಶ್ವದ ಸಾರಭೂತನಾದ ಕಾರಣ, ವಿಶ್ವದೃಷ್ಟಿಯಿಂದ, ಸಮಷ್ಟಿ-ದೃಷ್ಟಿಯಿಂದ ಸೋಮ: ಸಮಸ್ತ ಶಾರೀರಿಕ-ಮಾನಸಿಕ-ಆಧ್ಯಾತ್ಮಿಕ ಆಧಿ-ವ್ಯಾಧಿಗಳಿಗೆ, ರೋಗ-ರುಜಿನಗಳಿಗೆ ಗುರಿತಪ್ಪದ, ನಿಷ್ಫಲ ವಾಗದ, ನಿಶ್ಚಿತ ಚಿಕಿತ್ಸೆಯಾದ ಕಾರಣ ಭಗವದಾನಂದವೂ ಸೋಮವೇ. ಈಗ ವೈಯಕ್ತಿಕ ದೃಷ್ಟಿಯಿಂದ ವಿಶ್ಲೇಷಿಸುವುದು ಮಾತ್ರ ಶೇಷನಾಗಿ ಉಳಿದಿದೆ. ವ್ಯಷ್ಟಿ-ದೃಷ್ಟಿಯಿಂದ, ಜೀವಾತ್ಮ ವೈಯಕ್ತಿಕ ಜೀವನದ ಸಾರಸ್ವರೂಪನಾಗಿದ್ದಾನೆ. ಆದಕಾರಣ, ವೇದಗಳು ಸ್ಫುಟವಾದ ಶಬ್ದಗಳಿಂದ ಹೇಳುತ್ತವೆ:–

**ಜೀವಾತ್ಮನೂ ಸೋಮನೇ.**

**ಸೋಮಾಃ ಅಸೃಗ್ರಮಿಂದವಃ ಸುತಾ ಋತಸ್ಯ ಸಾದನೇ ।**
**ಇಂದ್ರಾಯ ಮಧುಮತ್ತಮಾಃ ॥** [ಋಕ್:–9.12.1.]

"[ಇಂದವಃ] ನೀರಸ ಜೀವನವನ್ನು ಸರಸಗೊಳಿಸುವ, [ಸುತಾಃ] ಈಶ್ವರಪುತ್ರರಾದ ಮಹದ್ಗುಣಯುಕ್ತನಾದ ಆದರಣೀಯರಲ್ಲಿ ವಿವೇಚನಾ ನಂತರ ಸಮಾಜ ಸದಸ್ಯರ ನಡುವೆ 'ಸಾರ' ರೂಪರೆಂದು ನಿರ್ಧರಿಸಲ್ಪಟ್ಟ, [ಮಧು ಮತ್ತಮಾಃ] ಮಾಧುರ್ಯಯುಕ್ತರಲ್ಲಿ ಶ್ರೇಷ್ಠರಾದ, [ಸೋಮಾಃ] ಸೋಮರುಗಳು, [ಋತಸ್ಯ] ಸತ್ಯದ, ಯಜ್ಞದ, ವೇದದ, ಧರ್ಮದ, ನ್ಯಾಯದ, [ಸಾದನೇ] ಗೃಹದಲ್ಲಿ, ಆಶ್ರಯದಲ್ಲಿ ಅಥವಾ, ಮನಸ್ಸಿನ ಸದನವಾಗಿರುವ ದೇಹದಲ್ಲಿಯೇ, [ಇಂದ್ರಾಯ] ಸರ್ವೇಶ್ವರನ ಅನುಭೂತಿಗಾಗಿ, [ಅಸೃಗ್ರಂ] ಮುಂದಕ್ಕೆ ನಡೆಯುತ್ತಾರೆ." ಮಂತ್ರದಲ್ಲಿ ಆದ್ಯೋಪಾಂತ ಸೂಚಿತವಾಗಿರುವ ಚೈತನ್ಯದ ಲಕ್ಷಣಗಳನ್ನೂ 'ಸೋಮ'ದ ಬಹುವಚನ ಪ್ರಯೋಗವನ್ನೂ ಗಮನಿಸಿದಾಗ, ಈ ಸೋಮರುಗಳು ಜೀವಾತ್ಮರೇ ಎಂಬ ಬಗೆಗೆ ಸಂದೇಹಕ್ಕೆ ಆಸ್ಪದವೇ ಇಲ್ಲ. ಪುನಃ —

**ಏತೇ ಧಾವಂತೀಂದವಃ ಸೋಮಾ ಇಂದ್ರಾಯ ಘೃಷ್ವಯಃ ।**
**ಮತ್ಸರಾಸಃ ಸ್ವರ್ವಿದಃ ॥** [ಋಕ್:–9.21.1]

"[ಏತೇ] ಈ, [ಇಂದವಃ] ಜೀವಿತವನ್ನು ರಸಭರಿತವನ್ನಾಗಿಮಾಡುವ, [ಘೃಷ್ವಯಃ] ತಮ್ಮತಮ್ಮ ಕರ್ಮಕ್ಷೇತ್ರಗಳಲ್ಲಿ ವಿವಿಧ ಪರಿವರ್ತನೆಗಳನ್ನೂ, ವೈಜ್ಞಾನಿಕರಾದಾಗ ಪ್ರಕೃತಿಯ ಪರಮಾಣುಗಳಲ್ಲಿ ಪ್ರಚಂಡವಾದ ಗತಿ ಸಂಚಾಲನ-ಸಂಯೋಜನ-ವಿಭಾಜನ-ಛೇದ-ಭೇದಗಳನ್ನುಂಟು ಮಾಡುವ, [ಮತ್ಸರಾಸಃ] ಹರ್ಷ-ತೃಪ್ತಿಗಳನ್ನು ಜನತೆಗೆ ಎರೆದುಕೊಡುವ, [ಸ್ವರ್ವಿದಃ] ಭೌತಿಕಸುಖದ ಹಾಗೂ ಆಧ್ಯಾತ್ಮಿಕ ಆನಂದದ ಪರಿಜ್ಞಾನವನ್ನುಳ್ಳ, [ಸೋಮಾಃ] ಸೋಮರುಗಳು, [ಇಂದ್ರಾಯ] ಸರ್ವಶಕ್ತಿಮಾನ್-ಸರ್ವೈಶ್ವರ್ಯವಾನ್ ಸರ್ವೇಶ್ವರನ ಸಲುವಾಗಿ, [ಧಾವಂತಿ] ಓಡುತ್ತಾರೆ; ತಮ್ಮನ್ನು ತಾವೇ ಪವಿತ್ರೀಕರಿಸಿಕೊಳ್ಳುತ್ತಾರೆ." ಚೈತನ್ಯ ವಿಶಿಷ್ಟರಾಗಿದ್ದು, ಪರಮೇಶ್ವರನ ಪ್ರಾಪ್ತಿಗಾಗಿ, ಆತುರದಿಂದ ಕಾತರರಾಗಿ ಧಾವಿಸುವ ಹಾಗೂ ಶುಚಿರ್ಭೂತರಾಗುವ ಈ ಸೋಮರುಗಳು ಜೀವಾತ್ಮರಲ್ಲವಾದರೆ, ಮತ್ತಾರಿರಬಹುದೋ ? ಮತ್ತಾರಾಗಲೂ ಸಾಧ್ಯವಿಲ್ಲ; ಈ ಸೋಮರುಗಳು ಜೀವಾತ್ಮರುಗಳೇ—ಎನ್ನುವುದರಲ್ಲಿ ಶಂಕೆಗೆ ಎಡೆಯೇ ಇಲ್ಲ. ಇನ್ನು ಮೂರೇ ಉದ್ಧರಣಗಳು ಸಾಕು. ಆಲಿಸಿರಿ:—

**ಏತೇ ಅಸೃಗ್ರಮಾಶವೋಽತಿ ಹ್ವರಾಂಸಿ ಬಭ್ರವಃ ।**
**ಸೋಮಾ ಋತಸ್ಯ ಧಾರಯಾ ॥** [ಋಕ್:— 9.63.4.]

" [ಆಶವ:] ತೀವ್ರಗಾಮಿಗಳೂ ವೇಗಶಾಲಿಗಳೂ, [ಬಭ್ರವ:] ನಿಷ್ಕಲ್ಮಷ ಚಾರಿತ್ರರೂ ಆದ [ಏತೇ ಸೋಮಾ:] ಈ ಸೋಮರುಗಳು, [ಋತಸ್ಯ ಧಾರಯಾ] ವೇದೋಕ್ತ ಧರ್ಮದ ಜೀವನ—ಪ್ರವಾಹದಲ್ಲಿ, [ಹ್ವರಾಂಸಿ ಅತಿ] ಕುಟಿಲತನದ, ಕೊಂಕು ನಡೆಯ, ವಕ್ರವಾದ ಆಚಾರಗಳನ್ನೆಲ್ಲಾ ದಾಟಿ, (ಅಸೃಗ್ರಂ) ಮುಂದು ಮುಂದಕ್ಕೆ ಸಾಗಿ ಹೋಗುತ್ತಾರೆ."

**ಇಂದ್ರಂ ವರ್ಧಂತೋ ಅಪ್ತುರಃ ಕೃಣ್ವಂತೋ ವಿಶ್ವಮಾರ್ಯಂ।**
**ಅಪ ಘ್ನಂತೋ ಅರಾವ್ಣ:** [ಋಕ್:-9. 63. 5.]
**ಸುತಾ ಅನು ಸ್ವಮಾ ರಜೋಽಭ್ಯರ್ಷಂತಿ ಬಭ್ರವಃ।**
**ಇಂದ್ರಂ ಗಚ್ಛಂತ ಇಂದವಃ॥** [ಋಕ್.-9. 63. 6.]

"[ಅಪ್ತುರಃ] ಕರ್ಮಾನುಷ್ಠಾನದಲ್ಲಿ ವೇಗವಂತರೂ, [ಬಭ್ರವಃ] ಸ್ವಚ್ಛವಾದ ಶುಭ್ರವಾದ, ಆಚಾರ-ವಿಚಾರ-ಸಂಪನ್ನರೂ, [ಇಂದವಃ] ಶುಷ್ಕಜೀವನವನ್ನು ಮಾಡುವವರೂ ಆದ, [ಸುತಾಃ] ಸ್ವತಃ ಮಾನವೀಯತೆಯ ಕೆನೆಯಂತೆ, ಮಾನವ ಸಮಾಜದ ಸಾರವಾಗಿರುವ ಭದ್ರಪುರುಷರು, ಅಥವಾ [ಸುತಾಃ] ಭಗವಂತನ ಮಕ್ಕಳಾದ ಜೀವಾತ್ಮರುಗಳು, [ಇಂದ್ರಂ ಗಚ್ಛಂತಃ] ಸರ್ವೇಶ್ವರನ ಸಾಕ್ಷಾತ್ಕೃತಿಗಾಗಿ ಮುನ್ನಡೆಯುತ್ತಾ, [ಇಂದ್ರಂ ವರ್ಧಂತಃ] ಇಂದ್ರಿಯವಾನ್ ಜೀವನನ್ನು ವಿಕಾಸಪಡಿಸಿಕೊಳ್ಳುತ್ತಾ, [ವಿಶ್ವಂ] ವಿಶ್ವವನ್ನು [ಆರ್ಯಂ ಕೃಣ್ವಂತಃ] ಶ್ರೇಷ್ಠವನ್ನಾಗಿ ಮಾಡುತ್ತಾ, [ಅರಾವ್ಣಃ] ಅನುದಾರವಾದ, ಅದಾನದ ಸ್ವಾರ್ಥದ ವೃತ್ತಿಯನ್ನು, [ಅಪಘ್ನಂತಃ] ತುಂಡರಿಸಿ ಚೆಲ್ಲುತ್ತಾ, [ಸ್ವಂ ರಜಃ ಅನು] ತಮ್ಮ ತಮ್ಮ ಕ್ರಿಯಾಸಾಮರ್ಥ್ಯಕ್ಕೆ ಅನುಸಾರವಾಗಿ, [ಆ] ಸತತವು, [ಅಭ್ಯರ್ಷಂತಿ], ಮುಂದುವರಿಯುತ್ತಾರೆ."

ಇಷ್ಟು ಸ್ಪಷ್ಟವಾದ, ಯಾವುದೇ ಎಳೆದಾಟಕ್ಕೂ, ತಿರುಗು-ಮುರುಗು ಮಾಡು ವುದಕ್ಕೂ ಅವಕಾಶವನ್ನೇ ಕೊಡದ ಶ್ರುತಿವಾಕ್ಯಗಳಿರುವಲ್ಲಿ, ಭಗವದಾನಂದವೂ ಸೋಮ; ಭಗವಂತನೂ ಸೋಮ ಜೀವಾತ್ಮರುಗಳೂ ಸೋಮರೇ - ಎಂಬ ತಥ್ಯ ಹಗಲುಬೆಳಕಿನಷ್ಟೇ ಸ್ಪಷ್ಟ. ಸಮಷ್ಟಿಯ ದೃಷ್ಟಿಯಿಂದ ವಿರಾಡಾತ್ಮ ಸಾರಸರ್ವಸ್ವ; ಆದುದರಿಂದ ಅವನು ಸೋಮ. ವ್ಯಷ್ಟಿದೃಷ್ಟಿಯಿಂದ ದೇಹವಾನ್ ಜೀವಾತ್ಮ ಸಾರಸರ್ವಸ್ವ; ಆದುದರಿಂದ ಅವನು ಸೋಮ ಸುಖ-ದುಃಖಗಳ, ಪ್ರಕಾಶಾಂಧಕಾರಗಳ, ಜನನ-ಮರಣಗಳ, ಜಯಾಪಜಯಗಳ. ಲಾಭ-ಹಾನಿಗಳ ವಿಕಾಸ-ಹ್ರಾಸಗಳ, ತ್ಯಾಗ-ಭೋಗಗಳ, ರಾಗ-ದ್ವೇಷಗಳ, ಒಟ್ಟಿನಲ್ಲಿ ಬೇಕು-ಬೇಡಗಳ ದ್ವಂದ್ವ - ಈ ದ್ವಂದ್ವಗಳ ರೂಪ, ಬಣ್ಣ, ಪ್ರಭಾವ - ಎಲ್ಲವೂ ತಮ್ಮ-ತಮ್ಮದೇ ಆದ ರೂಪಗಳಲ್ಲಿ ಕಾಣಿಸಿಕೊಳ್ಳುತ್ತವೆ - ತಿಕ್ಕಾಟದಿಂದ ನರನಿಗ ನಕ್ಕ; ಅದೇ ನರನಿವೋ ಈಗ ಅತ್ತ ಈ ಅಳು -ನಗುಗಳ ಮೊದಲಾದುದೆಂದೋ, ತುದಿ ಕಾಣುವುದೆಂದೋ - ದಾರ್ಶನಿಕರ ಮುಂದಿರುವ ಜಟಿಲ ಸಮಸ್ಯೆಯಿದು. ಋಷಿ - ಮುನಿಗಳ ರಚನಾ ವೈಖರಿಯೇ ಬೇರೆ ಭಗವದ್ವಾಣೀ ವೇದಗಳ ಆಧಾರದ ಮೇಲೆ ನಿಂತ ಆರ್ಷಸಾಹಿತ್ಯದ ಬಗೆಗೆ ಹೇಳುವುದಾದರೂ ಏನು? ಸುಖಬೇಕೆಂಬಾಸೆ ಸಹಜವಾದರೂ, ಅದರ ಅಂತ ದುಃಖವೆಂಬುದನ್ನು ಮಾನವ ಬಲ್ಲ. ಪ್ರಕೃತಿಯಿಂದ ಸಿಕ್ಕಬಹುದಾದ ಸುಖವೂ, ದುಃಖದಂತೆಯೇ ಆಗಮಾಪಾಯಿ - ಬಂದುಹೋಗುವಂತಹುದು ಎಂಬುದನ್ನು ಬಲ್ಲಮಾನವ-ದುಃಖವಲ್ಲದ, ಸುಖದ ಮಟ್ಟವನ್ನು ದಾಟಿದ ಅದಾವುದೋ ಒಂದು ಆಧ್ಯಾತ್ಮಿಕ ಪ್ರಸಾದ ವನ್ನು ಪರಮಾತ್ಮನ ಪ್ರೀತಿಯುಕ್ತ ಆಶ್ರಯದಲ್ಲಿ ಪಡೆಯಬಯಸುತ್ತಾನೆ. ಎಲ್ಲ ದ್ವಂದ್ವಗಳ ತಲೆ ಮೆಟ್ಟಿ ನಿಲ್ಲ ಬಯಸುತ್ತಾನೆ. ಯೋಗೇಶ್ವರ ಶ್ರೀ ಕೃಷ್ಣನ ಮಾತುಗಳಲ್ಲಿ:—

**ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತ ಕಾಮಾಃ।**
**ದ್ವಂದ್ವೈರ್ವಿಮುಕ್ತಾಃ ಸುಖ–ದುಃಖ ಸಂಜ್ಞೈರ್ಗಚ್ಛಂತ್ಯಮೂಢಾಃ ಪದ ಮವ್ಯಯಂತತ್**

(ಗೀತಾ:– 15. 5]

"(ನಿರ್ಮಾನಮೋಹಾಃ)ಮಾನಮೋಹ ತ್ಯಾಗಮಾಡಿದವರೂ, (ಜಿತಸಂಗದೋಷಾಃ) ಅನ್ಯರ ಕಾಮ್ಯಾಕಾಮ್ಯ ಸಂಗಗಳಿಂದ ಉದ್ಭವಿಸುವ ದೋಷಗಳನ್ನು ಬಿಟ್ಟವರೂ, (ಅಧ್ಯಾತ್ಮ ನಿತ್ಯಾಃ) ಸದಾ, ಶುಭಾಶುಭ ಘಟನೆಗಳು ಸಂಭವಿಸಿದಾಗಲೂ ಕೂಡ, ಈಶ್ವರನ ಸರ್ವ ರಕ್ಷಕತ್ವ ಹಾಗೂ ಜೀವಾತ್ಮನ ನಿತ್ಯತ್ವವನ್ನು ಕ್ಷಣದ ಕೋಟ್ಯಂಶದಷ್ಟು ಕಾಲಕ್ಕೂ ಮರೆಯದೆ, ಆಧ್ಯಾತ್ಮಿಕ ಸ್ತರದಲ್ಲಿ ದೃಢರಾಗಿ ನಿಂತು ಲೌಕಿಕ-ಸಂಘರ್ಷಗಳನ್ನೆಲ್ಲಾ ದಿಟ್ಟತನ ದಿಂದ, ನೆಟ್ಟಗೆ ನಿಂತು ಎದುರಿಸಿ ಹಿಮ್ಮೆಟ್ಟಿಸುವವರೂ, (ವಿನಿವೃತ್ತ ಕಾಮಾಃ) ಭೌತಿಕ ಕಾಮನಾಜಾಲದಿಂದ ಹೊರಬಂದು ನಿಷ್ಕಾಮರಾಗಿ, ಕರ್ತವ್ಯಮಾತ್ರ ದೃಷ್ಟಿಯುಳ್ಳವರಾಗಿ ಜೀವನ ನಡೆಸುವವರೂ,(ಸುಖ-ದುಃಖ ಸಂಜ್ಞೈಃ)ಸುಖ-ದುಃಖಗಳೆಂದು ನಿರ್ದೇಶಿಸಲ್ಪಡುವ (ದ್ವಂದ್ವೈಃ) ದ್ವಂದ್ವಗಳಿಂದ, ಪರಸ್ಪರ ವಿರೋಧಿ ತತ್ತ್ವಗಳ ಹಿಡಿತದಿಂದ (ವಿಮುಕ್ತಾಃ)

ಬಿಡುಗಡೆಹೊಂದಿದವರೂ, (ಅಮೂಢಾಃ) ನಿರ್ಭ್ರಾಂತರಾದವರೂ, (ತತ್ ಅವ್ಯಯಂ ಪದಂ ಆ ಕ್ಷೀಣವಾಗದ ನೆಲೆಯನ್ನು, (ಗಚ್ಛಂತಿ) ನೇರುತ್ತಾರೆ."

ಕಾಗದದ ಮೇಲೆ ಅಚ್ಚಾದ ಈ ಶಬ್ದಗಳನ್ನು ಓದುವುದು, ಪ್ರಾಯಶಃ ಭಾಷಾ ಜ್ಞಾನದಿಂದ ಶಬ್ದಾರ್ಥಗಳನ್ನು ತಿಳಿದುಕೊಳ್ಳುವುದು ಕೂಡ ಸುಲಭ. ಆದರೆ.–ನಿರ್ದಿಷ್ಟವಾದ ಬಾಳ್ಗಟ್ಟಿನಲ್ಲಿ (Culture of the life) ತನ್ನ ವ್ಯಕ್ತಿತ್ವವನ್ನಳವಡಿಸಿಕೊಳ್ಳುವುದು ನಿಜವಾಗಿ ಮಹಾತಪಶ್ಚರ್ಯೆ. ಸುಖವನ್ನು ದಾಟಿದ, ಜೀವೇಶ್ವರರ ನೇರವಾದ ಸಂಪರ್ಕ ಮಾತ್ರದಿಂದ ಸಾಧಿಸಬಹುದಾದ ಮನೋಭಾವ, ಚಿತ್ತಭಾವನಾತರಂಗ, ಸ್ಫೂರ್ತಿ, ಅಲೌಕಿಕವಾದ ಹುಮ್ಮಸ್ಸು ಇದೇ ಆನಂದ; ಇದು ಭಗವದಾನಂದ ಪ್ರವಾಹದಲ್ಲಿ ತನ್ನನ್ನು ತಾನೇ ತೇಲಿ ಬಿಡಬಲ್ಲ ಭಾಗ್ಯವಾನ್ ಜೀವಾತ್ಮನ ಭಾಗಕ್ಕೆ ಮಾತ್ರ ಬೀಳುವ ದೈವೀ ಸ್ಫೂರ್ತಿ. ಇದನ್ನೂ ಕೂಡ 'ಸೋಮ'ವೆನ್ನುತ್ತಾರೆ. ಈ ಸೋಮರಸದ ವರ್ಣನೆಯನ್ನು ಇನ್ನೊಂದು ಮಂತ್ರದಿಂದ ಮುಗಿಸಬಹುದು:–

**ಸ್ವಾದುಷ್ಕಿಲಾಯಂ ಮಧುಮಾನುತಾಯಂ ತೀವ್ರಃಷ್ಕಿಲಾಯಂ ರಸವಾನುತಾಯಂ ।**
**ಉತೋ ನ್ವಸ್ಯ ಪಪಿವಾಂಸಮಿಂದ್ರಂ ನ ಕಶ್ಚನ ಸಹತ ಆಹವೇಷು ॥**

[ಋಗ್ವೇದ:– 6. 47. 3]

" [ಅಯಂ] ಈ ಸೋಮರಸ, [ಸ್ವಾದುಃಕಿಲ] ರುಚಿಕರವಾಗಿದೆಯಲ್ಲ! (ಉತ) ಮತ್ತು, (ಅಯಂ ಮಧುಮಾನ್) ಇದು ಮಧು ಸಂಯುಕ್ತವಾಗಿದೆ (ಅಯಂ) ಇದು, (ತೀವ್ರ:ಕಿಲ)ತೀವ್ರಗತಿದಾಯಕವೂ ಆಗಿದೆ. (ಉತ) ಹಾಗೆಯೇ, (ಅಯಂ ರಸವಾನ್) ಇದು ರಸಭರಿತವೂ ಆಗಿದೆ (ಉತ) ಮತ್ತು, (ಉ ನು) ನಿಜವಾಗಿಯೂ, (ಅಸ್ಯ ಪಪಿವಾಂಸಂ) ಇದರ ಪಾನ ಮಾಡುವ, (ಇಂದ್ರಂ) ಇಂದ್ರಿಯವಾನ್ ಜೀವನನ್ನು, (ಆಹವೇಷು) ಜೀವನದ ಸಂಘರ್ಷಗಳಲ್ಲಿ, ಮತ್ತೆ ಮತ್ತೆ ಮುಂದೆ ಬಂದು ಅಡ್ಡ ನಿಲ್ಲುವ ಸಿಕ್ಕುಗಟ್ಟಿದ ತಿಕ್ಕಾಟಗಳಲ್ಲಿ, (ಕಃ ಚನ) ಯಾವನೂ ಕೂಡ, (ನ ಸಹತೇ) ಎದುರಿಸಿ ನಿಲ್ಲಲಾರನು!"

ಇದು ಮದ್ಯವಲ್ಲ: ಬುದ್ಧಿಯನ್ನು ಮೊದ್ದಾಗಿ ಮಾಡುವ ಮದಿರೆಯಲ್ಲ; ಮಾನವನನ್ನು ದಾನವನನ್ನಾಗಿ ಮಾಡಿ, ಮನೆಯನ್ನು ಮುರಿದು ಹಾಕುವ ಮಾದಕ ದ್ರವ್ಯವಲ್ಲ; ಸುರೆಯಲ್ಲ. ವೇದೋಕ್ತವಾದ ಈಶ್ವರೀಯ ಆನಂದದಲ್ಲಿ ಸ್ವೈರವಾಗಿ ಮೂಡಿಬರುವ ಹರ್ಷೋತ್ಕರ್ಷ. ಭೌತಿಕ ಮದಿರೆ ಆತ್ಮನಿಗೆ ಪತನಕಾರಿ; ಆದರೆ - ಈ ಸೋಮಪಾನದಿಂದ ಪ್ರಾಪ್ತವಾಗುವ ದೈವೀ ಸ್ಫೂರ್ತಿ ಆತ್ಮನಿಗೆ ಉತ್ಥಾನಕಾರಿ. ಓಷಧಿ–ವಿಶೇಷದ ರಸಕ್ಕೂ 'ಸೋಮ' ಎಂಬ ಹೆಸರಿದ್ದರೂ, ಅದು ಮದಿರಾಪ್ರಿಯರ ಪ್ರೇಯಸಿಯಾದ ಸುರಾದೇವಿಯಲ್ಲ ವೇದಗಳ ಪ್ರಮಾಣಗಳಿಂದಲೇ ನಮ್ಮ ನಿಲುವನ್ನು ಸ್ಪಷ್ಟಪಡಿಸಿದ್ದೇವೆ ವೈಶೇಷಿಕ ದರ್ಶನಕಾರರು **"ಬುದ್ಧಿಪೂರ್ವಾ ವಾಕ್ಯಕೃತಿರ್ವೇದೇ."** (6. 1 1.) - "ವೇದದಲ್ಲಿ ವಾಕ್ಯ ರಚನೆ ಬುದ್ಧಿ ಪೂರ್ವಕವಾಗಿ" - ಎಂದು ಹೇಳಿ, "ವೇದಗಳು ವಿಚಾರ ಶೀಲರ ಬುದ್ಧಿಗೆ ಬೀಗ

ಒಡೆಯುಂವ, ಕುರುಡು ನಂಬಿಕೆಗಳ ಕಂತೆಯಲ್ಲ." – ಎಂದು ಸಾರಿದ್ದಾರೆ. ವೇದಗಳು ತರ್ಕ - ವಿರೋಧಿಗಳಲ್ಲ ಆದರೆ, ಆ ತರ್ಕ ಕೇವಲ ಕುತರ್ಕವಾಗಿರದೆ, ಜಿಜ್ಞಾಸಾ ಭಾವನೆಯಿಂದ ಸತ್ಯಾವಲೋಕನದ ದೃಷ್ಟಿಯಿಂದ ಮಾಡಲ್ಪಡಬೇಕು. ಮಹರ್ಷಿ ಕಪಿಲರು ತಮ್ಮ ಸಾಂಖ್ಯ ದರ್ಶನದಲ್ಲಿ - **"ಶ್ರುತಿ ವಿರೋಧಾತ್ ನ ಕುತರ್ಕಾಪಸದಸ್ಯಾತ್ಮ ಲಾಭಃ"** = (6. 34) - "ಶ್ರುತಿ ವಿರೋಧದಿಂದ ಕುತರ್ಕದ ಮೇಲೆ ನೆಲೆನಿಂತ ಮುಗ್ಧನಿಗೆ ಆತ್ಮಪ್ರಾಪ್ತಿಯಾಗದು." - ಎಂದಿದ್ದಾರೆ.

ವಿಮತೀಯರ ಅಪಲಾಪಗಳಂತಿರಲಿ. ತಮ್ಮನ್ನು ತಾವೇ ವೈದಿಕಧರ್ಮೀಯರು, ವೇದಾಧಿಕಾರಿಗಳು - ಎಂದೆಲ್ಲಾ ಕರೆದುಕೊಳ್ಳುವ ವೇದಭಕ್ತರಿಂದಲೇ ವೇದಗಳಿಗೆ ಮಿತಿ ಮೀರಿದ ಅಪಚಾರವಾಗುತ್ತಿದೆ. ಸ್ತ್ರೀಶೂದ್ರರಿಗೆ ವೇದಾಧಿಕಾರವಿಲ್ಲ - ಎಂದು ಸಾರಿ, ವೇದಾ ಸಂಯಾಯಿಗಳಲ್ಲಿ ಬಹುಸಂಖ್ಯಾತರನ್ನು ವೇದಸ್ಥಾನ ಬಾಹಿರರನ್ನಾಗಿ ಮಾಡಿ ಕೂಡಿಸಿದರು. ವೈದಿಕಧರ್ಮೀಯರೆಲ್ಲರಿಗೂ ವೇದಾಧಿಕಾರವಿದ್ದಿದ್ದರೆ, ಇಂದು ಕ್ರೈಸ್ತರು - ಮುಸ್ಲಿಮರು ಧೈರ್ಯದಿಂದ ಬೈಬಲ್ - ಕುರಾನ್‌ಗಳಿಗಾಗಿ ಪ್ರಾಣಾರ್ಪಣಕ್ಕೂ ಸಿದ್ಧರಾಗಿರುವಂತೆ, ವೈದಿಕ ಧರ್ಮೀಯರೆಲ್ಲರೂ ವೇದಗಳಿಗಾಗಿ ಆತ್ಮಬಲಿದಾನಕ್ಕೂ ಸಹ ಸಿದ್ಧರೇ ಆಗಿರುತ್ತಿದ್ದರು. ಯಾವ ವಿಷ್ಣುಧರ್ಮಸೂತ್ರವೋ, ಅದಾವ ಗೌತಮ ಸ್ಮೃತಿಯೋ, "ಶೂದ್ರರು ವೇದಗಳನ್ನಾಲಿಸಿದರೆ, ಅವರ ಕಿವಿಗಳಿಗೆ ಸೀಸ - ತವರ ಕಾಯಿಸಿ ಸುರಿಯಬೇಕು; ಉಚ್ಚರಿಸಿದರೆ, ನಾಲಗೆ ಕತ್ತರಿಸಬೇಕು; ಅನುಷ್ಠಾನಮಾಡಿದರೆ, ದೇಹವನ್ನೇ ತುಂಡರಿಸಿ ಚೆಲ್ಲಬೇಕು." – ಎಂಬಂತಹ ನಾರಕೀಯ ಸಂದೇಶವಿತ್ತು, ಸ್ವತಃ ವೇದವಾಣಿಗೆಯೇ ಘೋರ ದ್ರೋಹ ಮಾಡಿ ಹೋಗಿದ್ದಾರೆ. **"ಯಥೇಮಾಂ ವಾಚಂ ಕಲ್ಯಾಣೀಮಾ ವದಾನಿ ಜನೇಭ್ಯಃ। ಬ್ರಹ್ಮರಾಜನ್ಯಾಭ್ಯಾಂ ಶೂದ್ರಾಯ ಚಾರ್ಯಾಯ"** (ಯಜುಃ-26. 2.)-"ಸರ್ವರ ಸರ್ವ ವಿಧಮಂಗಳ ಸಿದ್ಧಿಸಲಿ. ಸರ್ವರ ಬಗೆಗೆ ನನಗಿರುವ ಮಂಗಳಕಾಮನೆ ಪೂರ್ಣವಾಗಲಿ. ಜಗತ್ತು ನಮ್ರವಾಗಿ ನನ್ನ ಬಳಿ ಸಾರಲಿ - ಎಂದು ನಾನು ಜನರೆಲ್ಲರಿಗಾಗಿ, ಬ್ರಾಹ್ಮಣ - ಕ್ಷತ್ರಿಯರಿಗಾಗಿ, ಶೂದ್ರ - ವೈಶ್ಯರಿಗಾಗಿ ಈ ಕಲ್ಯಾಣಕಾರಿಣೀ ವೇದವಾಣಿಯನ್ನು ಉಪದೇಶಿಸುತ್ತಿದ್ದೇನೆ" - ಎಂಬ ಈಶ್ವರೀವಾಣಿಯೇ ಇರುವಾಗ, ಅಧಿಕಾರಾನಧಿಕಾರದ ಪ್ರಶ್ನೆಯನ್ನೆತ್ತುವ ಹಕ್ಕಾದರೂ ಯಾರಿಗಿದೆ? ಭಗವಂತನಿಗಿಂತ ದೊಡ್ಡವರು ಇದ್ದಾರೆಯಾದರೂ ಯಾರು?

ಈ ಅಪಚಾರ ಸಾಲದೆಂದು, **''ಅನಂತಾ ವೈ ವೇದಾಃ''** :– ಎಂಬ ಮೂರು ಮಾತುಗಳನ್ನು ಹಿಡಿದರು. "ಅಯ್ಯೋ! ಇಷ್ಟೇ ಅಲ್ಲ ವೇದಗಳು. ಸಿಕ್ಕಿರುವ ಅಂಶ ಬಹು ಕಡಿಮೆ; ಲುಪ್ತವಾಗಿ ಹೋಗಿರುವ ವೇದಾಂಶಗಳೇ ಹೆಚ್ಚು. ನಾವು ಏನೇನು ಹೇಳುತ್ತೇವೋ, ಅವಕ್ಕೆಲ್ಲಾ ವೇದಗಳ ಲುಪ್ತಭಾಗಗಳಲ್ಲಿ ಪ್ರಮಾಣವಿತ್ತು." - ಎಂದರು! ಈ ಬಗೆಯ ಮಾತುಗಳನ್ನು ಯಾರು ಬೇಕಾದರೂ, ತಮಗೇನು ಬೇಕೋ, ಅದರ ಸಮರ್ಥನೆಗಾಗಿ ರಾಜಾರೋಷವಾಗಿ ಹೇಳಬಹುದೆಂಬ ಆಲೋಚನೆ ಕೂಡ ಬಾರಲಿಲ್ಲ! "ಯಾವುದು ತಮ್ಮ

ಧರ್ಮದ ಈಶ್ವರೋಕ್ತ ಸಾಧನವೋ, ಅದೇ ಪೂರ್ಣವಾಗಿಲ್ಲ." – ಎಂಬ ನಿಲುವು **'ಇದಮಿತ್ಥಮೇವ'** - 'ಇದು ಹೀಗೆಯೇ ಸರಿ' - ಎಂದು ಹೇಳುವ ಶಕ್ತಿಯನ್ನೇ ಕಿತ್ತು ಕೊಳ್ಳುತ್ತದೆಂಬ ಕಲ್ಪನೆ ಕೂಡ ಉಂಟಾಗಲಿಲ್ಲ ಇವರಿಗೆ!

"**ಅನಂತಾ ವೈ ವೇದಾ**;-ಎಂಬುದು ಮಂತ್ರ ಸಂಖ್ಯಾದೃಷ್ಟಿಯಿಂದಲ್ಲ; ಅರ್ಥದ ದೃಷ್ಟಿಯಿಂದ." - ಎಂದರೂ, ತಲೆನೋವು ತಪ್ಪಿದ್ದಲ್ಲ. ಏಕೆಂದರೆ, ಯಾರು ಏನು ಅರ್ಥ ಹೇಳಿದರೂ, ಅದು 'ಅನಂತವಾದ ಅರ್ಥಗಳ ಬುಟ್ಟಿಯಿಂದ ಹೆಕ್ಕಿ ತೆಗೆದುದೇ,' ಹೀಗೂ ತೀರ್ಮಾನ ತೀರ ಮಾನವಿಲ್ಲದುದೇ ಆಗಿ ಕುಳಿತೀತು! "ನನ್ನ ನುಡಿ ನನಗೆ ನಚ್ಚು; ನಿನ್ನ ಮಾತು ನಿನಗೆ ಮೆಚ್ಚು!" ತಪ್ಪು-ಒಪ್ಪುಗಳ ಪರೀಕ್ಷೆಗೆ ಯಾವುದೇ ಸ್ಥಾನವೂ ಇಲ್ಲ.

"ಅಯ್ಯೋ! ವೇದಾರ್ಥ ಗೊತ್ತಾಗುವುದು ಬ್ರಹ್ಮದೇವರಿಗೆ ಮಾತ್ರ. ಮಾನವರಿಗದಂ ತಿಳಿಯಲು ಸಾಧ್ಯವೇ ಇಲ್ಲ."-ಎಂಬ ಅಪಸ್ವರ ಬೇರೆ ಅಲ್ಲಲ್ಲಿ ಕೇಳಿಸುತ್ತದೆ. ಮಾನವರ ಮಸ್ತಿಷ್ಕದ ಮಧ್ಯೆ ಮನೆಮಾಡಿ, ಮಾನವತ್ವದ ವಿಕಾಸಕ್ಕೆ ಮಾರ್ಗದರ್ಶನಮಾಡಲಾರದ, ಮಾನವಮತಿಯ ಮಿತಿಯಲ್ಲಿ ಮೂಡಲಾರದ ವೇದಗಳನ್ನು ಪರಮಾತ್ಮ ಅದೇಕೆ ಮಾನವರಿಗಾಗಿ ಉಪದೇಶಿಸಿದನೋ, ಅವನಿಗೇ ಗೊತ್ತಿರಬೇಕೇನೋ?

ಈ ತರ್ಕದ ತೀಕ್ಷ್ಣವಾದ ತಾಡನದಿಂದ ತಪ್ಪಿಸಿಕೊಳ್ಳಲು, ತಲೆಕೆಳಗೆ ಮಾಡಿಯೋ ತಲೆಯನ್ನು ತುರಿಸಿ-ತುರಿಸಿಕೊಂಡೋ **'ಅಪರೋಕ್ಷ ಜ್ಞಾನಿಗಳು'** ಎಂಬ ವಿಶಿಷ್ಟ ಜಾತಿಯ ಮಾನವರನ್ನು ಬೇರೆ ತಮ್ಮ ಮೆದುಳಿನಲ್ಲಿಯೇ ಮೂಡಿಸಿಕೊಂಡರು. ಯಾರಿಗೂ ತಿಳಿಯದುದೂ ಅವರಿಗೆ ತಿಳಿಯುತ್ತದಂತೆ! ಆದಕಾರಣ ಅವರ ಕಥನ ಅಂತಿಮ ನಿರ್ಣಯವಂತೆ! ಅವರಿಗೆ ಅಪರೋಕ್ಷ ಜ್ಞಾನಿಗಳೆಂಬ ಹಣೆಪಟ್ಟಿ ಕಟ್ಟಿದವರೂ ನಾವೇ! ಪ್ರತಿಯೊಂದು ಮತೀಯರೂ ತಮ್ಮ ನಂಬಿಕೆಗಳನ್ನು ಸತ್ಯವೆಂದು ಸಾಧಿಸಲು, ಇಂತಹ ಅಪರೋಕ್ಷ ಜ್ಞಾನಿಗಳನ್ನು ಸೃಜಿಸಿಕೊಳ್ಳಬಹುದು.

ಆದರೆ, ಈ ವ್ಯರ್ಥವಾದ ವಾದ-ವಿವಾದಗಳೇಕೆ? ವೇದಗಳಿವೆ; ಪೂರ್ಣವಾಗಿವೆ. ಜಿಜ್ಞಾಸೆ, ಶ್ರಮಸಹಿಷ್ಣುತೆ, ಸರಳಜೀವನ. ಸಾತ್ವಿಕಾಹಾರ–ವಿಹಾರಗಳು, ಸಾತ್ವಿಕಾಚಾರ–ವಿಚಾರಗಳು, ಶ್ರದ್ಧೆ ಹಾಗೂ ತ್ಯಾಗಭಾವನೆ ಬಾಳಿನಲ್ಲಿ ಬೇರು ಬಿಟ್ಟಿದ್ದರೆ ಸಾಕು; ಹುಟ್ಟಿದ ಕುಲ-ಗೋತ್ರಗಳ, ಜಾತಿ-ಮತಗಳ, ಸಂಪ್ರದಾಯ-ಸಿದ್ಧಾಂತಗಳ, ದೇಶ-ಭಾಷೆಗಳ, ನಾರೀ.-ನರರ ಭೇದಗಳ ಕಡೆ ತಿರುಗಿಯೂ ನೋಡಬೇಕಾಗಿಲ್ಲ. ಮಾನವರಾದ ನಮಗೇ ತಿಳಿಯದ ಶಾಸ್ತ್ರವನ್ನು ಬೋಧಿಸುವಷ್ಟು ವಿವೇಕವಿಹೀನನಲ್ಲ ಆ ಸರ್ವಜ್ಞನಾದ ಭಗವಂತ.

'ಸೋಮ'ದ ಬಗೆಗೆ ತಿಳಿದಿರಲೇಬೇಕಾದ ಮೌಲಿಕವಾದ ವಿಷಯವಿದು, ವೈದಿಕ ಸಾಹಿತ್ಯದಲ್ಲಿ ಈ ಶಬ್ದವನ್ನು, ಇದರ ಧಾತುವನ್ನು ಆಧಾರವಾಗಿಟ್ಟುಕೊಂಡು, ಇನ್ನೂ ಹಲವಾರು ಅರ್ಥಗಳನ್ನು ಮಾಡಿದ್ದಾರೆ. 'ಸು' ಧಾತುಜವಾದ ಶಬ್ದ 'ಸೋಮ'. ಯಾಸ್ಕರು ಹೇಳಿರುವಂತೆ-"**ಸೋಮಃ ಸುನೋತೇರ್ಯದೇನಂ ಅಭಿಷುಣ್ವಂತಿ.**"

[5. 1. 2] - "ಸು-ಧಾತುಜ: ಸೋಮ: ಯಂ ಸುನೋತಿ ಸ ಏವ ಸೋಮ:"-"ಹಿಂಡಿ ತೆಗೆಯಲ್ಪಡುವುದಾವುದೋ ಅದು ಸೋಮ."-ಎಂಬ ಕಥನವನ್ನು ಕೇವಲ **ಭೌತಿಕವಾಗಿ** ಗ್ರಹಿಸದೆ, ಆಧ್ಯಾತ್ಮಿಕವಾಗಿ ಗ್ರಹಿಸಿದಾಗ 'ಸೋಮ'ದ ವ್ಯಾಪ್ತಿಯು ಪರಿಚಯವಾದೀತು. 'ಸು' ಧಾತು ನಡೆ, ಚಲಿಸು, ಬಲದ ಅಥವಾ ಅಧಿಕಾರದ ಸ್ವಾಮಿಯಾಗು, ಹಿಂಡು, ರಸ ಹೊರಡಿಸು, ಶುದ್ಧಿಗೊಳಿಸು, ಚಿಮುಕಿಸು, ಆಹುತಿಕೊಡು, ಹೋಮಮಾಡು, **ಸ್ನಾನಮಾಡು**" -ಎಂದು ಹತ್ತಾರು ಅರ್ಥಗಳನ್ನು ಹೊಂದಿದೆ. ಹೀಗೆ 'ಸೋಮ' **ಎಂದಾಗ ಹಿಂಡಲ್ಪಟ್ಟುದು** ಗತವಾದುದು, ಚಲಿತವಾದುದು, ಸ್ವಾಮ್ಯಪಡೆದುದು. **ನಿಷ್ಕಾಸಿತವಾದುದು** (ಹೊರಡಿಸ ಲ್ಪಟ್ಟುದು), ಶುದ್ಧಿಕೃತವಾದುದು, ಪ್ರೋಕ್ಷಿತವಾದುದು, **ಅರ್ಪಿತವಾದುದು. ಸ್ನಾತವಾದುದು** ಸೋಮ-ಎಂಬರ್ಥಗಳು ಬುದ್ಧಿಗಮ್ಯವಾದಾವು. '**ಸುತ**'ವೆಂಬುದಕ್ಕಿರುವ **ಅರ್ಥಗಳೆಲ್ಲಾ** '**ಸೋಮ**'ಕ್ಕೂ ಇವೆ. ಇದೇ ಕಾರಣದಿಂದ ಮಹರ್ಷಿ ದಯಾನಂದರು –"**ಸುತಾನಾಂ**" ಎಂಬುದಕ್ಕೆ 'ನಿನ್ನಿಂದ ಉತ್ಪಾದಿತ ವಸ್ತುಗಳ' (1. 2. 5.); "**ಸುನ್ವತಃ**"-ಎಂಬುದಕ್ಕೆ 'ಉತ್ಪನ್ನಮಾಡುವವರನ್ನು' (1. 2. 6.); "**ಸುತಾಃ**" - ಎಂಬುದಕ್ಕೆ 'ಉತ್ಪನ್ನವಾದ (1. 3. 4.); "**ಸುತಾವತಃ**" - ಎಂಬುದಕ್ಕೆ - 'ಪ್ರಾಪ್ತ ಪದಾರ್ಥವಿದ್ಯರನ್ನು'; (1. 3. 5) "**ಸುತೇ**" (1. 3. 6.) ಎಂಬುದಕ್ಕೆ 'ಉತ್ಪನ್ನವಾದ ವಾಕ್ ಹಾಗೂ ವ್ಯವಹಾರ' ಮತ್ತು "**ಸುತಂ**" (1. 3. 8.)ಎಂಬುದಕ್ಕೆ 'ಅಂತಃಕರಣಾಭಿಗತ ವಿಜ್ಞಾನ' - ಎಂದೂ' ಅರ್ಥಮಾಡಿದ್ದಾರೆ. ಉದಾಹರಣಕ್ಕಾಗಿ ಮಹರ್ಷಿಗಳ ಋಗ್ವೇದದ ಪ್ರಥಮ ಮಂಡಲದ 2ನೆಯ ಹಾಗೂ 3ನೆಯ ಸೂಕ್ತಗಳಿಂದ ಹೆಕ್ಕಿ ತೆಗೆದಿದ್ದೇವೆ. ಒಟ್ಟಿನಲ್ಲಿ ಕಾರಣರೂಪದಿಂದ (from the form of cause) ಕಾರ್ಯ ರೂಪಕ್ಕೆ ಬರುವ (to the form of effect) ಪ್ರತಿಯೊಂದು ವಸ್ತುವನ್ನು 'ಸುತ'ವೆಂದಾಗಲಿ, 'ಸೋಮ' ವೆಂದಾಗಲಿ ಹೇಳಲ್ಪ ಟ್ಟಿದೆ. ಇದು ಸಾಧಾರಣ ಸ್ಥಿತಿ(generality); ವಿಶಿಷ್ಟ ಸ್ಥಿತಿಯಲ್ಲ.(particulararality.)

'ಸು'ಧಾತುವಿನ ಆಧ್ಯಾತ್ಮಿಕಾರ್ಥದ ಕಡೆ ಪಾಠಕರ ಗಮನವನ್ನೆಳೆದಿದ್ದೇವೆ, ವಿವೇಚನೆಮಾಡದೆ, ಯಾವುದನ್ನೂ ಕಣ್ಮುಚ್ಚಿನಂಬಬೇಕೆಂಬ ಸಿದ್ಧಾಂತ ವೇದಗಳಿಗೆ ಶತ - ಪ್ರತಿಶತ ವಿರುದ್ಧ. ಅನ್ಯವಿಷಯಗಳು ಅತ್ತ ಇರಲಿ. ಪರಮಾತ್ಮನ ಬಗೆಗೆಯೇ ವೇದ ಉದ್ಘೋಷಿಸುತ್ತಿದೆ:–

**ಮಂಥತಾ ನರಃ ಕವಿಮದ್ವಯಂತಂ**
**ಪ್ರಚೇತಸಮಮೃತಂ ಸುಪ್ರತೀಕಂ॥** (ಋಕ್:–3. 29. 5.)

"(ನರಃ) ಮಾನವರೇ! (ಕವಿಂ) ವೇದಶಬ್ದೋಚ್ಚಾರಕ ತಥ್ಯದರ್ಶಿಯೂ. (ಅದ್ವಯಂತಂ) ಜೀವರನ್ನು ಉನ್ನತಸ್ತರಕ್ಕೇರಿಸುವವನೂ, (ಪ್ರಚೇತಸಂ) ಸರ್ವರನ್ನೂ ಜಾಗೃತಗೊಳಿಸುವವನೂ, (ಅಮೃತಂ) ಅಮರನೂ ಆದ, (ಸುಪ್ರತೀಕಂ) ಸತ್ಯ-ಸತ್ಯವಾದ, ಶುದ್ಧ-ಶುದ್ಧವಾದ, ಧರ್ಮಾವಿರುದ್ಧವಾದ ಸತ್ಪುರುಷರಿಗೆ ಸುಖಕರವಾಗಿ ವ್ಯಕ್ತನಾಗುವ ಭಗವಂತನ ಬಗೆಗೆ, (ಮಂಥತಾ) ಮಂಥನ ಮಾಡಿರಿ; ಸತ್ಯಾಸತ್ಯವಿವೇಚನೆ ಮಾಡಿರಿ." **ಮತ್ತೆ ಜೀವಾತ್ಮನ** ಬಗೆಗೆ? **ಕೇಳಿರಿ:–**

**ಇನೋತ ಪೃಚ್ಛ ಜನಿಮಾ ಕವೀನಾಂ ಮನೋಧೃತ:**
**ಸುಕೃತಸ್ತಕ್ಷತ ದ್ಯಾಂ।**
**ಇಮಾ ಉ ತೇ ಪ್ರಣ್ಯೋ ವರ್ಧಮಾನಾ ಮನೋವಾತಾ**
**ಅಧನು ಧರ್ಮಣಿಗ್ಮನ್॥**
(ಋಕ್:-3. 38. 2.)

"ಓ ಮಾನವ! (ಇನಾ=ಇನಂ) ವಿಶ್ವದ ಸ್ವಾಮಿಯಾದ ಭಗವಂತನಲ್ಲಿಯೇ. (ಪೃಚ್ಛ) ಕೇಳಿಬಿಡು. (ಕವೀನಾಂ) ಕ್ರಾಂತದರ್ಶನರಾದ ಜ್ಞಾನೀಜನರ, (ಜನಿಮಾ) ಉದ್ಭವವನ್ನು ಕುರಿತು, (ಪೃಚ್ಛ) ಪ್ರಶ್ನಿಸಿಬಿಡು. (ಮನೋಧೃತಃ=ಮನಸಾ ಧೃತಃ) ಮನಸ್ಸಿನಿಂದ ಧೃತಿಹೊಂದಿರುವವರು, ಅಥವಾ, (ಮನಃ+ಧೃತಃ) ಮನಸ್ಸನ್ನು ವಶೀಕರಿಸಿ ಕೊಂಡಿರುವವರು, (ಸುಕೃತಃ) ಸತ್ಕರ್ಮನಿಷ್ಠರು, (ದ್ಯಾಂ) ಜ್ಯೋತಿರ್ಮಯ ಆಧ್ಯಾತ್ಮಿಕ. ಲೋಕವನ್ನು, (ತಕ್ಷತ) ರೂಪಿಸಿಕೊಳ್ಳುತ್ತಾರೆ. (ಇಮಾ ತೇ) ಈ ನಿನ್ನ, (ಪ್ರಣ್ಯಃ=ಪ್ರಣಿಯಃ) ಸತ್ಪಥಾನುಗಾಮಿಗಳು, (ಉ) ನಿಜವಾಗಿ, (ವರ್ಧಮಾನಾಃ) ಅಭಿವೃದ್ಧಿ ಹೊಂದುವವರಾಗಿದ್ದಾರೆ, (ಮನೋವಾತಾಃ) ಮನೋಬಲದಿಂದ ಮುನ್ನಡೆಯುವ ಧೀರರೇ, (ಅಧನು) ಆ ಸ್ಥಿತಿಹೊಂದಿದ ಮೇಲೆ, (ಧರ್ಮಣಿಗ್ಮನ್) ಧರ್ಮಮಾರ್ಗಾಗ್ರಸರ ರಾಗುತ್ತಾರೆ." ಸರ್ವಜ್ಞ ಪರಮಾತ್ಮನಲ್ಲಿ ಚಿತ್ತನಿಲ್ಲಿಸಿ, ಅವನನ್ನೇ ಪ್ರಶ್ನಿಸಬೇಕು. ಈ ಜಿಜ್ಞಾಸಾಭಾವನೆಯೇ-ಸೋಮಸೇವನದ ಪರಿಣಾಮವದು-ಧಾರ್ಮಿಕರ, ಧರ್ಮದ, ಸ್ವರೂಪ ವನ್ನು ಸ್ಪಷ್ಟವಾಗಿ ಮಾಡಿಸುತ್ತದೆ.

**ಕೋ ದದರ್ಶ ಪ್ರಥಮಂ ಜಾಯಮಾನಂ?**
**ಭೂಮ್ಯಾ ಅಸುರಸೃಗಾತ್ಮಾ ಕ್ವಸ್ವಿತ್?**

(ಋಗ್ವೇದ:-1. 164. 4.)

"ಸರ್ವಪ್ರಥಮ ಜನ್ಮತಾಳಿ ಬಂದವನನ್ನು ನೋಡಿರುವವನಾದರೂ ಯಾವನು? ಮಣ್ಣಿನಿಂದ ಪಂಚಭೂತಗಡಣದಿಂದ ಪ್ರಾಣ, ರಕ್ತ, ಮಾಂಸಾದಿಗಳಾದುವು, ಸರಿ. ಆತ್ಮನು ಅದಾವು ದರಿಂದಾದನು? ಎಲ್ಲಿಂದಾದನು? ಎಲ್ಲಿ ಆದನು?" - ಇಂತಹ ಪ್ರಶ್ನೆ - ಪರಂಪರೆಗಳಿಂದ ಭೀತರಾಗರು ವೇದಾನುಯಾಯಿಗಳು. ಏಕೆಂದರೆ, ಸೋಮ ತತ್ತ್ವಾತತ್ತ್ವ - ವಿಚಾರದ, ಸಾರ. ಸಾರ ಬೇಡವೆಂದರೆ, ರಸ ಬೇಡವೆಂದರೆ, ಈಶ್ವರ ಬೇಡವೆಂದರೆ, ಜೀವನೂ ಬೇಡ ವೆಂದರೆ, ಆನಂದವೂ ಬೇಡವೆಂದರೆ, ವಿಶ್ವಬ್ರಹ್ಮಾಂಡದಲ್ಲಿ ಸಾರಭೂತವಾದ ಜೀವನಾಧಾರ ತತ್ತ್ವಗಳೂ ಬೇಡವೆಂದರೆ, ಬೇಕಾದುದು ಮತ್ತೇನಿದೆ? **"ನೇಚ್ಛಾಮಿ ಕಿಂಚಿತ್, ನ ಕಾಂಕ್ಷೇ ಕಿಂಚಿತ್, ನಾಭಿಲಷೇ ಕಿಂಚಿತ್."** - "ನಾನು ನೀರಿಚ್ಛ; ನಿರೀಹ; ನಿರಭಿ ಲಾಷ."-ಎಂಬ ಮಾನವ ಹತಭಾಗ್ಯ ಮಾತ್ರ. ಮಾನವೇತರ ಜೀವರಿಗೆ ಲಭಿಸದ ವಿವೇಚನಾ

ಶಕ್ತಿ ಭಗವದ್ದತ್ತವಾಗಿಯೇ ಸಿಕ್ಕಿರುವಾಗ, ಉತ್ಕರ್ಷಾಭಿಲಾಷೆಯೂ ಇಲ್ಲದವನು ಹತಭಾಗ್ಯನಲ್ಲವಾದರೆ, ಹತಭಾಗ್ಯರನ್ನೆಲ್ಲಿ ಹುಡುಕಬೇಕು?

ಭಾಷ್ಯಕ್ಕಾಗಿ ಗ್ರಹಿಸಿದ ಮಂತ್ರದಲ್ಲಿನ ಸೋಮಸ್ಯ, ಸೋಮಪಾ: - ಈ ಶಬ್ದಗಳ ಪೂರ್ಣಭಾವನೆ ವ್ಯಕ್ತವಾಗಬೇಕಾದರೆ, ಇಷ್ಟು ವಿಚಾರ - ಸಾಮಗ್ರಿ ಅವಶ್ಯಕವೇ. ಈಗ ಓದುಗರು ಸುಲಭವಾಗಿ ಮಂತ್ರದ ಪೂರ್ಣಭಾವನೆಯನ್ನು ತಿಳಿದುಕೊಳ್ಳಬಲ್ಲರು.

ಶ್ರೀ॥ ಮಧ್ವರು ತಮ್ಮ ಭಾಷ್ಯದಲ್ಲಿ ಆಧ್ಯಾತ್ಮಿಕ ದೃಷ್ಟಿಯತ್ತ ಗಮನವಿತ್ತಂತೆ ತೋರುತ್ತಿಲ್ಲ. ಆದರೂ, 'ರೇವತ:' ಎಂಬುದಕ್ಕೆ ಕೇವಲ 'ಧನವತ:' ಎನ್ನದೆ, **"ಜ್ಞಾನೈಶ್ವರ್ಯಯುಕ್ತಸ್ಯ ಹಿರಣ್ಯಾದಿಮತೋಽಪಿ ಸುಖಕಾರೀ ಭವಾನ್"** "ಓ ಇಂದ್ರ! (ಅವರ ಪೌರಾಣಿಕ ಸರಣಿಯಲ್ಲಿ ಇಂದ್ರನೊಬ್ಬ ವಿಶಿಷ್ಟ ದೇವತೆ ತಾನೇ? ಪಕ್ಕಾ ವ್ಯಾವಹಾರಿಕ ದೇವತೆ; ತನಗೆ ಬೇಕಾದುದು ಸಿಕ್ಕಿದ ಮೇಲೆಯೇ ಭಕ್ತರಿಗೆ ಏನಾದರೂ ಕೊಡುವುದು ಅವನ ರೂಢಿ) ಜ್ಞಾನವೆಂಬ ಐಶ್ವರ್ಯವನ್ನುಳ್ಳವನಿಗೆ, ಅಥವಾ ಚಿನ್ನ ಮೊದಲಾದು ವಸ್ತುಳ್ಳವನಿಗೆ ನೀನು ಹೆಚ್ಚು ಸುಖಪ್ರದನಾಗುವೆ." - ಎಂದು ಬರೆದಿದ್ದಾರೆ. ಈ ಲೇವಾದೇವೀ ದೇವೀ - ದೇವತೆಯರಲ್ಲಿ ನಂಬಿಕೆಯಿರುವವರೆಗೆ, ಬುದ್ಧಿ - ಸ್ವಾಸ್ಥ್ಯ, ಮನಃ-ಸ್ವಾಸ್ಥ್ಯ, ಅಂತ:ಕರಣಶುದ್ಧಿ ಸಿದ್ಧಿಸಲಾರದು. ಇನ್ನು ದೇವರು, ಧರ್ಮ, ಮುಕ್ತಿ – ಇವೆಲ್ಲಾ ಯಾವ ರೀತಿ ತಾನೇ ಸಾರ್ಥಕ ತತ್ತ್ವಗಳಾಗಿ ಆತ್ಮೋದ್ಧಾರಕ್ಕೆ ಸಹಾಯಕವಾಗಬಲ್ಲವು?

ಶ್ರೀ॥ ಸಾಯಣರದೂ ಅದೇ ಪೌರಾಣಿಕ ಪರಂಪರೆಯೇ. ಅವರೂ, "ಸೋಮಪಾ:"–ಎಂಬುದಕ್ಕೆ 'ಸೋಮಪಾತ:'–'ಸೋಮಪಾನ ಮಾಡುವವನೇ!' ಎಂದು ಬರೆವರು.- "ರೇವತೋ ಮದ: ಧನವತೋ ಹರ್ಷ: ಗೋದಾ ಇತ್ ಗೋ ಪ್ರದಏವ." - "ಧನವಂತನಾದ ನಿನ್ನ ಹರ್ಷ ಗೋದಾನ ಮಾಡಿಸುವಂತಹುದೇ ಆಗಿದೆ." ಎಂದರ್ಥ ಹೇಳಿದ್ದಾರೆ. "ಸೂಯತೇ ಸೋಮ ಏಷ್ವಿತಿ ಸವನಾನಿ".- "ಇವುಗಳಲ್ಲಿ ಸೋಮ ಹಿಂಡಲ್ಪಡುವ ಕಾರಣ ಇವು (ಯಜ್ಞಗಳು) ಸವನಗಳು" – ಎಂದು ಭಾಷ್ಯ ಮುಗಿಸಿದ್ದಾರೆ.

ಭಾಗ್ಯವಾನ್ ಪಾಠಕರೀಗ ಸೋಮದ ವಿಶಿಷ್ಟವಾದ, ನಿರ್ದಿಷ್ಟವಾದ ಹಾಗೂ ವಿವಿಧವಾದ ಸ್ವರೂಪವನ್ನು ಕಂಡು ಕೊಂಡಿದ್ದಾರೆ. ಆದುದರಿಂದ, **'ಸೋಮಪಾ:'** – ಎಂಬುದಕ್ಕೆ - **"ಸೋಮಂ ಸ್ವಕಂ ಆನಂದಂ ನಿರಂತರಂ ಸೇವತೇ ಇತಿ ಮಂ ಜೀವಾತ್ಮಾನಂ ಪಾತಿ ರಕ್ಷತೀತಿ."**; ಅಥವಾ **"ಸೋಮಂ ಸೂರ್ಯಂ ಉತ್ಪದ್ಯ ಮಾನಾನ್ವಾ ಉತ್ಪನ್ನಾನಾಂ ವಾ ಪದಾರ್ಥಾನ್ ಪಾತೀಷಿತಿ"** - "ಸೋಮವನ್ನು ಎಂದರೆ ತನ್ನ ಆನಂದವನ್ನು ಸರ್ವದಾ ಅನುಭವಿಸುವವನು."; "ಸೋಮವನ್ನು - ಎಂದರೆ ಜೀವಾತ್ಮನನ್ನು ರಕ್ಷಿಸುವವನು."; "ಸೋಮವನ್ನು, ಸೋಮಗಳನ್ನು - ಎಂದರೆ ಸೂರ್ಯಾದಿ- ಉತ್ಪನ್ನವಾಗುತ್ತಿರುವ, ಆಗಿರುವ ಪದಾರ್ಥಗಳನ್ನು ರಕ್ಷಿಸುವವನು." ಎಂಬರ್ಥಗಳನ್ನು ಸುಲಭವಾಗಿಯೇ ಗ್ರಹಿಸಬಲ್ಲರು. ಮಹರ್ಷಿಗಳು ಈ ಮಂತ್ರಕ್ಕೆ ಸೂರ್ಯಪರಕಾರ್ಥ

ಮಾಡಿದ್ದಾರೆ. ಆದರೆ, ಶಬ್ದಾರ್ಥಗಳಲ್ಲಿ ಭೇದವಿಲ್ಲ. **"ನಃ ಸವನಾ ಅಸ್ಮಾಕಂ ಐಶ್ವರ್ಯೋಪಯುಕ್ತಾನಿ ವಸ್ತೂನಿ ಪ್ರಕಾಶಯಿತುಂ ಆಗಹಿ-"** - ಎಂದೂ "ನಮ್ಮ ಐಶ್ವರ್ಯಯುಕ್ತ ವಸ್ತುಗಳನ್ನು ಬೆಳಗಿಸಲು ಆಗಮಿಸು." - ಎಂದು ವಿವರಿಸಿದ್ದಾರೆ ಮಹರ್ಷಿಗಳು. ಶ್ರೀ॥ ಮಧ್ವ – ಸಾಯಣರು **'ಸವನಾ'** ಎಂಬುದಕ್ಕೆ 'ಸೋಮರಸ ಹಿಂಡಲ್ಪಡುವ ಯಜ್ಞ' - ಎಂದರ್ಥಗಳನ್ನು ಮಾಡಿದ್ದಾರೆ.

• ಅರ್ಥಮಾಡಿಕೊಳ್ಳಲು ಸ್ವಲ್ಪ ಕಷ್ಟವೆಂದು ತೋರುವ ವಾಕ್ಯ - **"ಸೋಮಸ್ಯ ಪಿಬ."** - ಎಂಬುದೇ. ಪರಮೈಶ್ವರ್ಯವಾನ್ ಸರ್ವೇಶ್ವರನು, ಕುಡಿಯದೇ ಬಿಟ್ಟಿರುವುದು ಕುಡಿಯಬೇಕಾಗಿ ಉಳಿದುಕೊಂಡಿರುವುದು ಏನು? 'ಕ್ಷುತ್ಪಿಪಾಸೆಗಳು' ದೇಹವಿರುವವರಿಗೆ ಮಾತ್ರ; ಅಶರೀರನಾದ, ಸರ್ವಶಕ್ತಿವಾನ್, ಪ್ರಾಪ್ತಸರ್ವಸ್ವ ಸರ್ವದಾನಂದ ಸ್ವರೂಪ ಆ ಸರ್ವೇಶ್ವರನಿಗೆ ಬಾಯಾರಿಕೆಯಿದೆಯೇ? ತನ್ನಿಂದಲೇ ಉತ್ಪನ್ನವಾದ ಈ ವಿಶಾಲ ಬ್ರಹ್ಮಾಂಡದಲ್ಲಿ ಮೊಳೆಯುವ, ಬೆಳೆಯುವ ಸೋಮಲತೆಯ ರಸವಿಲ್ಲದಿದ್ದರೆ, ಪಿಪಾಸೆಯಿಂದ ಬಾಯಾರಿ ನೋಯುವವನೇ ಆ ಸಚ್ಚಿದಾನಂದ ಸ್ವರೂಪ ಭಗವಂತ? ಬಾಹ್ಯದೃಷ್ಟಿಯಿಂದ ಸೋಮಪಾಃ ಸೋಮಸ್ಯ ಪಿಬ - ಎಂಬೀ ಶಬ್ದಗಳು ಸ್ವಲ್ಪ ವಿಚಿತ್ರವಾಗಿಯೇ ತೋರುತ್ತವೆ. ತನ್ನ ಅಸ್ತಿತ್ವವನ್ನುಳಿಸಿಕೊಳ್ಳಲು ಅನ್ಯ ವಸ್ತುಗಳ ಆವಶ್ಯಕತೆಯುಳ್ಳವನು, ಪೂರ್ಣನಾಗಿರಲಾರನು; ಪ್ರಾಪ್ತಸರ್ವಸ್ವ - ನಿತ್ಯತೃಪ್ತನೂ ಆಗಿರಲಾರನು. ಹಾಗಾದರೆ, 'ಸೋಮಪಾಃ,' 'ಸೋಮಪಾನಮಾಡುವವನೇ!' - ಎಂದು ಹೇಳುವುದರ ಅರ್ಥವಾದರೂ ಏನು? 'ಪಾ' ಧಾತುವಿಗೆ 'ರಕ್ಷಿಸು, ಕುಡಿ' - ಎಂಬ ಎರಡರ್ಥಗಳೂ ಇವೆ. 'ಸೋಮ' - ಎಂಬುದಕ್ಕೆ ಜೀವಾತ್ಮನೆಂಬರ್ಥ ಗ್ರಹಿಸಿದರೆ 'ಸೋಮಪಾ' ಎಂಬುದಕ್ಕೆ' 'ಜೀವಾತ್ಮನ ರಕ್ಷಕನು' ಎಂಬರ್ಥ ನಿಷ್ಪನ್ನವಾಗುತ್ತದೆ. ಸೊಗಸಾದ ಅರ್ಥವಿದು. ಇನ್ನೂ 'ಸೋಮಸ್ಯ ಪಿಬ.' ; ಇದಕ್ಕೆ, "ಈಶ್ವರ! ನಿನ್ನ ಸ್ವಂತ ಆನಂದವನ್ನೇ ಸವಿಯುತ್ತಿರು; ಸರ್ವದಾನಂದ ಸ್ಥಿತಿಯಲ್ಲೇ ವಿರಾಜಿಸುತ್ತಿರು". – ಎಂದೂ, "ಸೂರ್ಯ – ಚಂದ್ರ – ನಕ್ಷತ್ರ – ಗ್ರಹೋಪಗ್ರಹಗಳ ಅಸಂಖ್ಯರಚನೆಗಳಿಂದ ಪ್ರಕಾಶಿಸುತ್ತಿರುವ ಈ ಬ್ರಹ್ಮಾಂಡವನ್ನು ಪರಿರಕ್ಷಿಸು; ಭೋಕ್ತೃಜೀವರಿಗೆ ಬ್ರಹ್ಮಾಂಡದಲ್ಲಿ ಸಿಕ್ಕಬಹುದಾದ ಭೋಗಸುಖವನ್ನು ಸವಿಯಿಸು.". - ಎಂದೂ ಅರ್ಥಮಾಡಬಹುದು. ಎರಡು ಅರ್ಥಗಳಲ್ಲಿಯೂ 'ವಿಧಿ' ಅಥವಾ ಆಜ್ಞೆ' - ಇಲ್ಲ ಪರಮಾತ್ಮನಿಗೆ 'ಹಾಗೆ ಮಾಡು; ಹೀಗೆ ಮಾಡು.' - ಎಂದು ಆಜ್ಞಾಪಿಸಬಲ್ಲ ಧೀರ ಹುಟ್ಟಿಲ್ಲ; ಈಗಿಲ್ಲ; ಮುಂದೆಯೂ ಹುಟ್ಟುವುದಿಲ್ಲ. 'ಭಕ್ತಪರಾಧೀನ' - ಎಂದು ಮೊದಲಾಗಿ, ಅಲ್ಲದ - ಸಲ್ಲದ ಕಂದಾಚಾರದ, ಬುಡ - ಕಡೆಗಳಿಲ್ಲದ ಬರಡು - ಬುರುಡೆಗಳನ್ನು ಹೊಡೆದು, ಪಾಮರವೃಂದದ ತಲೆದೂಗಿಸುವ, ಚಪ್ಪಾಳೆ ತಟ್ಟಿಸುವ ಹರಿಕಥಾದಾಸರುಗಳ ಕಲ್ಪನಾಲೋಕದಲ್ಲಿ, ಕೇವಲ ಕಪೋಲಕಲ್ಪಿತವಾದ ಇಂತಹ ಘಟನೆಗಳು ನಡೆಯಬಹುದೇನೋ; ಯಥಾರ್ಥವಾದ ಅರ್ಥದಲ್ಲಿ, ಈ ಬಗೆಯ ಮಾತುಗಳು ಭಗವದ್ಭಕ್ತರ ಬಾಯಿಗಳಿಂದ ಬರಬಹುದಾದಂತಹವೇ ಅಲ್ಲ. ದ್ವಂದ್ವಾತೀತನಾದ, ಮಾನಾಪಮಾನಗಳ ವೈಯ್ಯರ್ಥಕ್ಕೆಂದೂ ಸಿಕ್ಕದ ಭಗವಂತನನ್ನು, ವಾದಿತೋಷನ್ಯಾಯದಿಂದ ಕ್ಷಣಕಾಲಕ್ಕೆ

ಮಾನಕ್ಕೂ ಅಪಮಾನಕ್ಕೂ ಈಡಾಗುವವನು.' - ಎಂದಿಟ್ಟುಕೊಂಡರೆ, 'ಭಕ್ತ ಪರಾಧೀನನು ಭಕ್ತರ ಉದ್ಧಾರಕ್ಕಾಗಿ ಅವತಾರವೆತ್ತಿ ಬರುವವನು.' - ಎಂದೆಲ್ಲಾ ಹೇಳುವುದು ಈಶ್ವರ-ಭಕ್ತಿಯಲ್ಲ; ಈಶ್ವರಾನುರಕ್ತಿಯಲ್ಲ; ಸಾಂಸಾರಿಕ ಭೋಗವಿಲಾಸ ವಿರಕ್ತಿಯೂ ಇಲ್ಲ; ಅದು ಕೇವಲ ಈಶ್ವರಾಪಮಾನಮಾತ್ರ; ಜಗತ್ತಿನಲ್ಲಿ ಮತ್ತೂ ಹೆಚ್ಚು ಅಜ್ಞಾನಾಂಧಕಾರವನ್ನು ಹರಡುವ ಈಶ್ವರದ್ರೋಹ ಮಾತ್ರ; ಮಾನವರ ಬಗೆಗೆ ಮಹಾಘೋರವಾದ ವಂಚನೆ ಮಾತ್ರ.

ಈಶ್ವರ ಸರ್ವತಂತ್ರ ಸ್ವತಂತ್ರ; ಆದರೆ ತನ್ನ ನಿಜಸ್ವಭಾವವಾದ ನ್ಯಾಯಕಾರಿತ್ವ ದಯಾಳುತ್ವ ಮೊದಲಾದ ಸಹಜ ಗುಣಗಳಿಗೆ ವಿರುದ್ಧವಾಗಿ ಮಾತ್ರ ಎಂದೆಂದಿಗೂ ವರ್ತಿಸನು - ಎನ್ನುವುದೂ ಅಷ್ಟೇ ಸತ್ಯ. 'ಸೋಮಪಾ' – ಜೀವಾತ್ಮಾದಿಗಳ ರಕ್ಷಕ 'ಸೋಮಸ್ಯ ಪಿಬ' - ಎಂದಾಗ - "ಸಾರಭೂತವಾದ ಬ್ರಹ್ಮಾಂಡವನ್ನು ರಕ್ಷಿಸು; ಭೋಕ್ತೃ ಜೀವರಿಗೆ ಭೋಗದಾನಮಾಡು." – ಎಂಬ ಆಂತರಿಕ ಆತ್ಮನಿವೇದನದ ಅಭಿವ್ಯಂಜನ ಮಾತ್ರ ಗ್ರಾಹ್ಯ.

ಮತ್ತೊಂದು ಗುಪ್ತ ಸಂದರ್ಭ ಮುಂದೆ ಬರುವುದು 'ರೇವತಃ' ಎಂಬ ಶಬ್ದ ಮುಂದೆ ಬಂದಾಗ, '**ರೇವತ:**'-ಎಂಬುದರ ಶಬ್ದಾರ್ಥ 'ಐಶ್ವರ್ಯವಂತನ,'-ಎಂದು. ಈ '**ರೇವಾನ್** ಐಶ್ವರ್ಯವಾನ್ ಯಾವನು? ಮೊದಲ ನೋಟಕ್ಕೇನೋ, ಈ ಮಂತ್ರದಲ್ಲಿ ಸ್ವತಃ ಇಲ್ಲವಾದರೂ, ಮೇಲಿನ ಮಂತ್ರದಿಂದ ಅಧ್ಯಾಹೃತವಾಗಿ ಬಂದ 'ಇಂದ್ರ' ಶಬ್ದ, '**ಸೋಮಪಾ:**' ಎಂಬ ಗುಣವಾಚಕ ಪದ ಸಂಬೋಧನಾ ವಿಭಕ್ತಿಯಲ್ಲಿರುವುದರಿಂದ, ಇಂದ್ರನನ್ನೇ ಆಹ್ವಾನಿಸುತ್ತಾ, '**ರೇವತ:**' – "ಧನವಂತನ" ಎನ್ನುವಾಗ, ಸಾಯಣರು ಮಾಡಿರುವ 'ರೇವತ: ಧನವಂತ: ತವ' – "ರೇವತ:, ಎಂದರೆ ಧನವಂತನಾದ ನಿನ್ನ' – ಎಂಬರ್ಥವೇ ಗ್ರಾಹ್ಯವೆನಿಸುತ್ತದೆ. ''**ಧನವಂತ: ತವ ಹರ್ಷ:**" – "ಧನವಂತನಾದ ನಿನ್ನ ಹರ್ಷ"- ಎಂಬ ಸಾಯಣೋಕ್ತಿ ಬುದ್ಧಿಸಂಗತವೇ ಎನಿಸುತ್ತದೆ. ಶ್ರೀ॥ ಮಧ್ವರು – ''**ಜ್ಞಾನಾಖ್ಯ ರಯಿಯುಕ್ತಸ್ಯ ಹಿರಣ್ಯಾದಿಮತೋಽಸಿವಾ। ಸುಖಕಾರೀಭವಾನ್**" – "ಜ್ಞಾನವೆಂಬ ಐಶ್ವರ್ಯವನ್ನುಳ್ಳ, ಅಥವಾ ಸ್ವರ್ಣಾದಿಗಳಿಂದ ಸಂಪನ್ನನಾದ ಮಾನವನಿಗೆ ನೀನು ಸುಖಕಾರಿಯಾಗಿರುವೆ." – ಎಂದು ಭಾಷ್ಯಬರೆದಿರುವಾಗ, ಅವರು ಇಂದ್ರನನ್ನು ಅಥವಾ ಭಗವಂತನನ್ನಲ್ಲ; ಆದರೆ ಜ್ಞಾನ - ಸುವರ್ಣಾದಿ ಸಂಪನ್ನನಾದ ಯಜಮಾನನ್ನೇ '**ರೇವಾನ್**'' ಎಂದು ಗ್ರಹಿಸಿದ್ದಾರೆಂಬುದು ಸ್ಪಷ್ಟ.

'ರೇವಾನ್' ಈಶ್ವರನೇ ಆಗಿರಲಿ; ಯಜ್ಞಕರ್ತೃವೇ ಆಗಿರಲಿ. ಉಭಯ ಪಕ್ಷಗಳಿಗೂ ತಮ್ಮ ತಮ್ಮದೇ ಆದ ದೃಢವಾದ ಆಧಾರಶಿಲೆಯಿದೆ. ಸಾಯಣೋಕ್ತ ರೀತಿಯಲ್ಲಿ '**ರೇವಾನ್**' ಸ್ವತ: ದೇವ ದೇವನೇ ಆಗಿದ್ದಲ್ಲಿ, ಐಶ್ವರ್ಯವಾನ್ ಭಗವಂತನ ಹರ್ಷ, ಸಾಧಕನಾದ ಯಾಜಕನ ಬಾಳಿಗಿಳಿದು ಬಂದರೆ, ಆ ಭಾಗ್ಯವಾನ್ ಆನಂದಮಯ ಜೀವನಿಗೆ ಸಿಕ್ಕದವಸ್ತುವಾದರೂ ಏನಿದೆ? ಅಥವಾ ಶ್ರೀ॥ಮಧ್ವರೆಂದಿರುವಂತೆ, 'ರೇವಾನ್', ಜ್ಞಾನವೆಂಬ ಐಶ್ವರ್ಯ

ವನ್ನೂ, ಚಿನ್ನ – ಬೆಳ್ಳಿ – ವಜ್ರ – ವೈಡೂರ್ಯಾದಿ ಭೌತಿಕೀ ಸಂಪತ್ತನ್ನೂ ಪಡೆದು ಸಮೃದ್ಧ, ನಾದಾಗ, ಅವನಿಗೆ ಸಿಕ್ಕುವ ಹರ್ಷ, ಅವನನ್ನು ಅನ್ಯರಿಗೆ ಗೋದಾನಾದಿಗಳನ್ನು ಮಾಡು ವಂತೆ ಪ್ರೋತ್ಸಾಹಿಸಿದರೆ, ಸೋಜಿಗವೇನು? ಒಟ್ಟಿನಲ್ಲಿ, ಈ ಮಂತ್ರೋಕ್ತ ದಾನಪ್ರೇರಕ ತತ್ತ್ವ ಈಶ್ವರೀಯ ಆನಂದವೇ, ಉಪಾಸ್ಯನ ಆನಂದ, ಉಪಾಸಕನಿಗೆ ಉಪಲಬ್ಧವಾಗಿ ಅದರ ಪ್ರೇರಣೆಯಿಂದ ಉಪಾಸಕನು ಗವಾದಿಗಳ (ಗೋವು - ಮೊದಲಾದುವುಗಳ ದಾನಿಯಾದರೂ ವಿಸ್ಮಯವೇನು? ವಸ್ತುತಃ ಈ ಸ್ಥಳದಲ್ಲಿ 'ರೆ' ತಲೆಹಾಕಲು ಎಡೆಯೇ ಇಲ್ಲ. "ರೇವತೋ ಮದಃ ಗೋಧಾ ಇತ್." - "ಐಶ್ವರ್ಯಶಾಲಿಯ ಹರ್ಷ 'ಗೋದಾ'=ಗೋಪ್ರದನೇ ಆಗುತ್ತದೆ - ಎಂಬ ನಿಶ್ಚಯಾತ್ಮಕ ಘೋಷಣೆಯಿದೆಯೇ, ಹೊರತು, 'ಯದಿ ರೇವಾನ್' ಸ್ಯಾತ್, ಸಂಭವತಃ ಗೋದಾಃ ಭವೇತ್." - "ಐಶ್ವರ್ಯಶಾಲಿಯಾದರೆ, ಸಂಭವತ ಗೋಪ್ರದನಾದಾನು. - ಎಂಬ ಸಂದೇಹಾತ್ಮಕವಾದ ಪ್ರಕಟನೆಯಿಲ್ಲ. ವ್ಯತ್ಯಾಸ ಕೇವಲ ಇಷ್ಟೇ; ಭಗವಂತ 'ರೇವಾನ್' – ಐಶ್ವರ್ಯಸಂಪನ್ನನಾಗಿ, ಆನಂದದಿಂದ ಗೋವೇ ಆದಿಗಳ ದಾನ ಮಾಡಿಯೇ ಮಾಡುತ್ತಾನೆ; ಸಾಧಕವಾದ ಜೀವನಿಗೆ, ಸ್ವಾತ್ಮಸಮರ್ಪಣದ ಪರಿಣಾಮ ವಾಗಿ ಭಗವದಾನಂದ ಸಿಕ್ಕಿದರೆ, ಅವನೂ ಗವಾದಿಗಳ ದಾತೃವೇ ಆಗುತ್ತಾನೆ. 'ಇದಿ ಪರಮೈಶ್ವರ್ಯೇ'-ಈ ಧಾತುವಿನಿಂದ ರೂಪಗೊಂಡ 'ಇಂದ್ರ' ಶಬ್ದ, ಅವನು ಪರಮೈಶ್ವರ್ಯ ವಂತನೂ, ಆನಂದಮಯನೂ ಆಗಿಯೇ ಇರುತ್ತಾನೆ. ಹೀಗಾಗಿ, ಈಶ್ವರನು, 'ಧನವಂತನೂ ಆನಂದಮಯನೂ, 'ಆಗಬೇಕಾದ' ಪರಿಸ್ಥಿತಿಯೇ ಇಲ್ಲ. ಆಗುವವನು ನೀಗಿಯೂ ಹೋಗಲೇ ಬೇಕಷ್ಟೇ? ಈ ಆಗು-ಹೋಗುಗಳ ಸಂಬಂಧ ಸ್ವಯಂಭೂವಾಗಿರುವ ಈಶ್ವರ ನಿಗೆ ಎಂದೆಂದಿಗೂ ಇಲ್ಲ. ಆದರೆ, ಪರಿಚ್ಛಿನ್ನನೂ, ಅಲ್ಪಶಕ್ತನೂ, ಅಲ್ಪಜ್ಞನೂ, ಆದ ಜೀವಾತ್ಮನ ಕಥೆ ಇದಲ್ಲ. ಅವನು, ಅವಿಶ್ರಾಂತ ಹಾಗೂ ಅವ್ಯವಚ್ಛಿನ್ನ (ಎಂದಿಗೂ ಭಗ್ನವಾಗದ) ಕಠೋರ ಸಾಧನೆಯಿಂದ 'ಆನಂದ'ವನ್ನು ಆ ಆನಂದಮಯನಿಂದ ಅಲ್ಪ ಪ್ರಮಾಣದಲ್ಲಿಯೇ ಆಗಲೊಲ್ಲದೇಕೆ-ಅನುಗೊಳಿಸಿಕೊಂಡು ಗೋವು ಆದಿಗಳ ದಾನ ಮಾಡು ತ್ತಾನೆ. **"ಸ್ವಾನಂದೇನ ದದಾತ್ಯನ್ಯಃ; ಇತರತತ್ತ್ವಾತ್ ಗೃಹೀತಾನಂದವುಸ್ವ ಕಂ ಪದಾತ್ಯನ್ಯಃ-"**-"ಒಬ್ಬನು (ಈಶ್ವರನು) ತನ್ನ ಆನಂದದಿಂದಲೇ ಕೊಡುತ್ತಾನೆ; ಮತ್ತೊಬ್ಬನು (ಜೀವನು) ಇತರ (ಈಶ್ವರನು) ನಿಂದ ಪಡೆದ ತನ್ನದಲ್ಲದ (ನೈಮಿತ್ತಿಕ) ಆನಂದದಿಂದ ಕೊಡುತ್ತಾನೆ." ಕೊಡುಗೆ ಸಾಮಾನ್ಯ; ಕೊಡುಗೆಯ ಪ್ರೇರಕತತ್ತ್ವ (ಹರ್ಷ) ವೂ ಸಾಮಾನ್ಯವೇ ಆದರೆ, ಈಶ್ವರ ಕೊಡುವುದು ತನ್ನ ಸ್ವಾಭಾವಿಕ ಆನಂದದಿಂದ ಜೀವನು ಕೊಡುವುದು ಈಶ್ವರನಿಂದ ಕಡವಾಗಿ ಪಡೆದ ಆನಂದದಿಂದ. ಮತ್ತು ಜೀವನು ಕೊಡುವುದಾದರೂ, ಅನ್ಯನಿಂದ (ಈಶ್ವರನಿಂದ) ಪಡೆದ ಭೋಗ-ದ್ರವ್ಯಗಳನ್ನೇ.

**"ಗೋದಾ ಇದ್ರೇವತೋ ಮದಃ"** – ಕೊನೆಯ ವಾಕ್ಯವಿದು. 'ರೇವಾನ್ ಮದ'ಗಳ ವರ್ಣನೆ ಸಾಕಷ್ಟಾಗಿದೆ. ಉಳಿದುದು **'ಗೋದಾ'** ಮಾತ್ರ. ಈ ಗೌ ಶಬ್ದ ವಿವಿಧಾರ್ಥಯುಕ್ತ. ಯಾಸ್ಕರು:- **"ಗಾವೋ'ಗಮನಾತ್"** [ನಿ. 6, 1.7.] -" ಗಮನ ಶೀಲವಾದುವು ಗೋವುಗಳು,"; **"ಗಾವೋ ಧೇನವ:"** "ಹಸುಗಳೇ ಗೋವುಗಳು,"

ನಿರುಕ್ತ:-2. 15. ] ;'**ಗೌರಿತಿ ಪೃಥಿವ್ಯಾ ನಾಮ.**" [2. 2.5.1.] – "ಗೋವೆಂದರೆ, ಪೃಥಿವೀ."; "**ಜ್ಯಾಪಿ ಗೌರುಚ್ಯತೇ.**" [ನಿರುಕ್ತ:– 2. 2. 5. 1. ] "**ರಶ್ಮಯೋऽಪಿ ಗಾವ ಉಚ್ಯಂತೇ.**" [ನಿ. 2. 2. 6. 2. ];"**ಆದಿತ್ಯೋऽಪಿ ಗೌರುಚ್ಯತೇ.**" [ನಿ. 2. 2 [೦. 2.] – "ಸೂರ್ಯನೂ ಗೋವೆನಿಸುತ್ತಾನೆ"; "**ಗಾವೋ ಧೇನವ ಇಂದ್ರಿಯಾಣಿ.**" [ಪರಿ. 2. 15 ] "ಇಂದ್ರಿಯಗಳೇ ಇಂದ್ರಿಯಗಳು." "**ವಾಗಪಿ ಗೌ:**" [2. 15.] – [2. 15 ]-"ವಾಣಿಯೂ ಕೂಡ ಗೌಃ".

ಹೀಗೆ, ಆನಂದತುಂದಿಲ ಹೃದಯನಾದ ಮಾನವನು "ಗೋದಾ ಇತ್"–"ಗೋದಾತೃವೇ ಆಗುತ್ತಾನೆ-ಎಂದಾಗ, ಕೇವಲ ಒಂದು ಹಸುವನ್ನಲ್ಲ. "ತೀವ್ರಗಾಮೀ ಕುದುರೆ, ಹಸು, ಪೃಥಿವೀ, ಬಿಲ್ಲಿನ ದಾರ, ಕಿರಣಗಳು, ಸೂರ್ಯ, ಇಂದ್ರಿಯಗಳು ಹಾಗೂ ವಾಣಿ"- ಇವುಗಳನ್ನು ದಾನಮಾಡುವವನಾಗಿರುತ್ತಾನೆ. ಇವೆಲ್ಲವನ್ನೂ ಕೊಡುವವನೇ ಗೋದಾ- ಎಂಬ ಭ್ರಾಂತ ಕಲ್ಪನೆಯೂ ಬೇಡ. ಇವುಗಳಲ್ಲಿ ಎಷ್ಟನ್ನು ಏನನ್ನು ಕೊಡಬಲ್ಲನೋ ಅವನು 'ಗೋದಾಃ'-ಗೋಪ್ರದನೇ ಆಗುತ್ತಾನೆ.

ಏನಿದು ರಹಸ್ಯ? "**ಉಪ ನ: ಸವನಾಗಹಿ ಸೋಮಸ್ಯ ಸೋಮಪಾ ಪಿಬ ಗೋದಾ ಇದ್ರೇವತೋ ಮದ:॥**" - "ಓ ಇಂದ್ರ! ನಮ್ಮ ಯಜ್ಞದ ಬಳಿ ಸಾರು. ಜೀವರಕ್ಷಕನೇ! **ಸೋಮ**ಪಾನ ಮಾಡು. ಐಶ್ವರ್ಯ-ಶಾಲಿಯ ಆನಂದ ಗೋಪ್ರದವಾಗಿಯೇ ತೀರುವುದು." - ಎನ್ನುವುದು! ಇಂದ್ರನ ಸೋಮಪಾನಕ್ಕೂ, ಗೋವು ಆದಿಗಳ ದಾನಕ್ಕೂ ಇರುವ ಸಂಬಂಧವಾದರೂ ಏನು?" – ಎಂಬ ಸಂಶಯ ವಿಸ್ಮಯಕಾರಕವೇನಲ್ಲ, ಒಂದು ಮೂಲತತ್ತ್ವ ಬುದ್ಧಿಗಮ್ಯವಾದರೆ; ಸಂಶಯ ಸ್ವಯಂ ಭಯ ಭೀತವಾಗಿ, ಶೂನ್ಯದಲ್ಲಿ ಸೇರಿಹೋಗುವುದು ಸತ್ಯ. ಮಾನವ ಮಹೇಶ್ವರನ ಮುಂದೆ ಮಂಡಿ ಹಿಡಿದು ಸೆರಗೊಡ್ಡಿ, ಮಹಾವಿನಯದಿಂದ ಕೋರಿಕೊಳ್ಳಬಹುದಾದ ವಸ್ತುವಾವುದಿದೆ? ಸರ್ವಶ್ರೇಷ್ಠ – ಸರ್ವಜ್ಯೇಷ್ಠ ಸದ್ಧಾನವಾವುದು? ಆನಂದತಾನೆ? ಆ ಅಲೌಕಿಕವಾದ, ಅಭೌತಿಕವಾದ, ಅನ್ಯತ್ರ, ಅನ್ಯರಾರಿಂದಲೂ, ಎಂದೆಂದಿಗೂ ಅಂದದ ಅಮೂಲ್ಯ ಅಪಾರ ಸಂಪತ್ತಾವುದು? ಆನಂದ! ಅದರ ಮುಂದೆ, ಅಶ್ವ - ಆಕಳುಗಳಿಗೆ, ಕುರಿ - ಮೇಕೆಗಳಿಗೆ, ದಾಸಗಳಿಗೆ, ಮನೆ - ಮರಗಳಿಗೆ, ಹೆಣ್ಣು - ಹೊನ್ನುಗಳಿಗೆ, ನೆಲ - ನಭಸ್ಸು (ಆಕಾಶ)ಗಳಿಗೆ ಇರುವ ಬೆಲೆಯಾದರೂ ಏನು? ಆನಂದ ಆತ್ಮಗತವಾದಾಗ. ಈ ಸಾಂಸಾರಿಕ ಸಂಖಸಾಧನ - ಸಂಪತ್ತು - ಸೌಧಗಳ ಗಣನೆಯಾದರೂ ಏನು? ಇಲ್ಲ; ಏನೇನೂ ಬೆಲೆಯಿಲ್ಲ. ಮತ್ತೇಕೆ ಸಂಕೋಚ? ನಡೆಯಿರಿ ಸಂಧಿಸೋಣ. ಆ ಸೃಜನಕಾರೀ ವಿರಾಡಾತ್ಮನನ್ನು. ಮಕ್ಕಳಾದ ನಮಗೆ ತಂದೆ ಮಾತ್ರವಲ್ಲ: ತಾಯಿಯೂ ಆಗಿರುವ ಆ ಪರಮಾತ್ಮ ಎಂದೆಂದಿಗೂ 'ಮುಂದೆ ಹೋಗಿ'. - ಎನ್ನಲಾರ. "ಮುನ್ನಡೆಯಿರಿ." ಎನ್ನಲೂ ಬಹುದೇನೋ; ಆದರೆ,

ಅದು - "ನಿಮಗೇನೂ ದಕ್ಕದು". - ಎಂಬರ್ಥದಲ್ಲಲ್ಲ; "ಪ್ರಗತಿಪಥದಲ್ಲಿ ಪ್ರಥಮ ಪಂಕ್ತಿಯು ಪ್ರಧಾನ ಪುರಂಷರಂತೆ." - ಎಂಬರ್ಥದಲ್ಲಿ ಮಾತ್ರ.

### ಸಂಹಿತಾ ವಿಭಾಗ

**ಅಥಾ ತೇ ಅಂತಮಾನಾಂ ವಿದ್ಯಾಮ ಸುಮತೀನಾಂ।**

**ಮಾ ನೋ ಅತಿಖ್ಯ ಆಗಹಿ॥೩॥**

**ಪದಪಾಠ:**– ಅಥ, ತೆ, ಅಂತಮಾನಾಂ, ವಿದ್ಯಾಮ. ಸುಮತೀನಾಂ, ಮಾ, ನಃ. ಅತಿಖ್ಯಃ, ಆ, ಗಹಿ.॥೩॥

**ಅನ್ವಯ:**– (ಓ ಇಂದ್ರ) ಅಥ ತೇ ಅಂತಮಾನಾಂ ಸುಮತೀನಾಂ ವಿದ್ಯಾಮ, ನಃ ಮಾ ಅತಿಖ್ಯಃ, ಆಗಹಿ॥೩॥

**ಶಬ್ದಾರ್ಥ:**– [ಓ ಸರ್ವೇಶ್ವರ! [ಅಥ] ಆಮೇಲೆ. [ತೇ] ನಿನ್ನ, [ಅಂತಮಾನಾಂ] ಅತಿ ಸಮೀಪದಲ್ಲಿರುವ, [ಸುಮತೀನಾಂ] ಒಳ್ಳೆಯ ಜ್ಞಾನಗಳಿಂದ ಯುಕ್ತರಾದ, ಸತ್ಪುರುಷರಿಂದ, [ವಿದ್ಯಾಮ] ಜ್ಞಾನಾರ್ಜನೆಯನ್ನು ಮಾಡಿಕೊಳ್ಳೋಣ. [ನಃ] ನಮ್ಮನ್ನು. [ಮಾ ಅತಿಖ್ಯ] ಉಪದೇಶ ಬಾಹಿರರನ್ನಾಗಿ ಮಾಡಬೇಡ. ಅಥವಾ, [ತೇ] [ಅಂತಮಾನಾಂ=ಅಂತರತಮಾನಾಂ] ಹೃದಯದ ಅತ್ಯಂತ ಆಳಕ್ಕಿಳಿದಿರುವ, [ಸುಮತೀನಾಂ] ಶ್ರೇಷ್ಠವಾದ ಮತಿಗಳನ್ನು, ಉತ್ತಮ ಬುದ್ಧಿಗಳನ್ನು. [ವಿದ್ಯಾಮ] ತಿಳಿದು ಕೊಳ್ಳೋಣ. [ನಃ] ನಮ್ಮನ್ನು, [ಮಾ ಅತಿಖ್ಯಃ] ದಾಟಿಹೋಗಿ, ದೂರೀಕರಿಸಿ, ಉಪದೇಶಮಾಡಬೇಡ.

**ತಾತ್ಪರ್ಯ:**– ಓ ಸರ್ವೈಶ್ವರ್ಯಸಂಪನ್ನ. ಸರ್ವಶಕ್ತಿಮಾನ್ ವಿಶ್ವೇಶ್ವರ! ನಿನಗೆ ಅತ್ಯಂತ ನಿಕಟವರ್ತಿಗಳೂ, ಸುವಿಜ್ಞಾನಸಂಯುಕ್ತರೂ ಆದ ಸಜ್ಜನರಿದ್ದಾರೆ. ಹಾಗೆಯೇ, ಜಿಜ್ಞಾಸುವಿನ ಹೃದಯಾಂತರಾಳವನ್ನು ಸ್ಪರ್ಶಿಸುವ ಉತ್ತಮೋತ್ತಮ ಜ್ಞಾನ-ವಿಜ್ಞಾನಗಳೂ ಇವೆ, ಈ ಸಜ್ಜನರ ಸಹವಾಸದಿಂದಲೂ, ಉನ್ನತಸ್ತರದ ಪ್ರಜ್ಞಾನದಿಂದಲೂ ನಾವು ಜ್ಞೇಯದ ಪರಿಜ್ಞಾನವನ್ನು ಗಳಿಸಿಕೊಳ್ಳೋಣ. ಓ ಕರುಣಾಮಯ! ನಮ್ಮನ್ನು ದೂರೀಕರಿಸಬೇಡ. ನಮ್ಮನ್ನು ಕಡೆಗಣಿಸಿ, ಜ್ಞಾನ-ವಿಜ್ಞಾನಗಳ ಪ್ರಸಾರವನ್ನು ಮಾಡಬೇಡ.

**ಈ ಚತುರ್ಥ ಸೂಕ್ತ ದ್ವಿತೀಯ ಮಂತ್ರದ ಭಾಷ್ಯದ ಪೂರ್ಣವೆಚ್ಚ**
**ಶ್ರೀಮತಿ ಅರುಣಾ ದೇವಿ ಎಂ. ನಿತ್ಯಾನಂದ ಕಿಣಿ**
**ಮಾಬುಕಳ ಹಾಲೀ-ರಾಣಿಪೇಟೆ ಇವರ ಸೇವೆ.**

**ಭಾಷ್ಯ**:— ಈ ಮಂತ್ರದ ದೇವತೆಯೂ ಇಂದ್ರನೇ. ಅವನ ವಿಷಯದಲ್ಲಿ ವಾಚಕರು ಈಗಾಗಲೇ ಸಾಕಷ್ಟು ಸಂಜ್ಞಾನವನ್ನು ಸಂಪಾದಿಸಿಕೊಂಡಿದ್ದಾರೆ. ಇಂದ್ರನ ಅತಿ ವಿಸ್ತೃತಾರ್ಥ ಈಗ ಅನಗತ್ಯ. ಈಶ್ವರ ಭಕ್ತರು, ಉಪಾಸಕರು ಈ ಮಂತ್ರದ ಮೂಲಕ ಹೃದಯಾಂತರಾಳದ ಹಂಬಲವನ್ನು ತೋಡಿಕೊಂಡಿದ್ದಾರೆ. ಇಂದ್ರನ ಕರುಣೆಗಾಗಿ ಯಾಚಿಸುತ್ತಿದ್ದಾರೆ. ಆದಕಾರಣ, "**ಇಂದನೇ ದ್ರವತೀತಿ ವಾ, ಇಂದೌರಮತ ಇತಿವಾ**" "ನೀರಸ ಶರೀರಕ್ಕೆ ಜೀವನರಸವನ್ನೆರೆಯುವ ಜೀವನಿಗಾಗಿ ಕರುಣಾರ್ದನಾಗುವ, ಆ ಜೀವನಲ್ಲಿ ಅಂತರ್ನಿಹಿತನಾಗಿ ರಮಿಸುವ" ಇಂದ್ರನ ರೂಪವನ್ನು ಸ್ಮರಣೆಗೆ ತಂದು ಕೊಂಡರೆ ಸಾಕು. ಮತ್ತು, ಶಬ್ದಗಳೂ ಅಷ್ಟು ಜಟಿಲವಾಗಿಲ್ಲ. ಮಂತ್ರದ ಆಕಾಂಕ್ಷೆ ನಿಭ್ರಾಂತ ಜ್ಞಾನದ ಪ್ರಾಪ್ತಿ. ಭಗವಂತ ತಮ್ಮನ್ನು ಕಡೆಗಾಣಿಸದಿರಲಿ-ಎಂದು ಬೇಡಿಕೆಯ ಎರಡನೆಯ ಅಂಶ.

ಜ್ಞಾನವನ್ನು ಯಾರಿಂದ ಗಳಿಸಬೇಕು? ಈ ಮಂತ್ರ "ಅಂತಮಾಃ" ಹಾಗೂ "ಸುಮತಯಃ"-ಎಂದು ಎರಡು ಬಗೆಯ ಜನರನ್ನು ವರ್ಣಿಸುತ್ತಿದೆ. ಶ್ರೀ|| ಮಧ್ವರು ಹೀಗೆ ವ್ಯಾಖ್ಯಾನ ಮಾಡಿದ್ದಾರೆ. :—

**ಸುಖಕಾರೀ ಭವಾನ್ ತಸ್ಮಾತ್ ಲಭೇಮ ಸುಮತೀಸ್ತವ।**
**ಅಂತೇ ಮಿತಾಸ್ತ್ವದ್ವಿಷಯಾ ಮತಯೋ ಹ್ಯುತ್ತಮೋತ್ತಮಾಃ।**
**ಅಸ್ಮಾನತೀತ್ಯ ಮಾ ಪಶ್ಯ ಕರುಣಾದ್ರ್ರ ದೃಶಾ ಸದಾ||**

"ನೀನು ಜ್ಞಾನವೆಂಬ ಸಂಪತ್ತನ್ನುಳ್ಳವನಿಗೂ, ಸ್ವರ್ಣಾದಿಗಳಿಂದ ಯುಕ್ತನಾಗಿರುವವನಿಗೂ ಸುಖಕಾರಿಯಾಗಿರುವೆ.) - ಎಂಬ ಹಿಂದಿನ ಶ್ಲೋಕದ ಅರ್ಥವನ್ನು ಸ್ಮರಿಸಿಕೊಂಡೇ ಮುಂದಕ್ಕೋದಿರಿ:- "**ಅವನ ಕಡೆಯಿಂದ ನಿನ್ನ ಸುಮತಿಗಳನ್ನು ಹೊಂದೋಣ. ನಿನ್ನ ವಿಷಯದ ಉತ್ತಮೋತ್ತಮವಾದ ಮತಿಗಳು ಅಂತತಃ ಅಳತೆಗೆ ಅಂದುತ್ತವೆ. ನಮ್ಮನ್ನು ಪಕ್ಕಕ್ಕೆ ಸರಿಸಿ, ಕರುಣಾರಸದಿಂದ ನೆನೆದ ನಿನ್ನ ದೃಷ್ಟಿಯಿಂದ ಸದಾ (ಎಂದೆಂದಿಗೂ?) ನೋಡಬೇಡ.**" ಮನನ ಮಾಡುತ್ತಾ-ಮಾಡುತ್ತಾ ಜ್ಞಾನಪರಿಪಕ್ವಾವಸ್ಥೆಯನ್ನು ಮುಟ್ಟಿ, ಭಗವತ್ಸಂಬಂಧದ ಉತ್ತಮೋತ್ತಮ ಮತಿಗಳು ಅಂತಃಕರಣದ ಹಿಡಿತಕ್ಕೆ ಸಿಕ್ಕಿದರೆ, ಅದು ವಿಸ್ಮಯಕರವಲ್ಲ. ಮಂತ್ರದಲ್ಲಿನ '**ಅಂತಮಾನಾಂ ಸುಮತೀನಾಂ**' - ಎಂಬ ಶಬ್ದಗಳ ಭಾವನೆ ಈ ಶ್ಲೋಕಗಳಿಂದ ವ್ಯಕ್ತವಾಗುತ್ತಿಲ್ಲ. ಮತ್ತು "ನಮ್ಮನ್ನುಳಿದು (ಅನ್ಯರ ಕಡೆಗೆ) ನಿನ್ನ ದಯಾದ್ರ್ರ ದೃಷ್ಟಿ ಬೀಳದಿರಲಿ." - ಎಂಬ ಪ್ರಾರ್ಥನೆ ಯಾವ ಮಟ್ಟದ್ದು ಎಂದು ವಿಚಾರಶೀಲರೇ ನಿರ್ಧರಿಸಿಕೊಳ್ಳಲಿ. ವೇದಗಳಂತಹ ದಿವ್ಯಶಾಸ್ತ್ರಗಳನ್ನು ನಂಬುವವರ ಬಾಯಿಯಿಂದ ಬರಬಹುದಾದ ನುಡಿಗಳೇ ಇವು?

ಇನ್ನು ಶ್ರೀ|| ಸಾಯಣರ ಭಾಷ್ಯದತ್ತ ನೋಡೋಣ:- **"ಅಥ ಸೋಮಪಾನಾನಂತರಂ ತವ ಅಂತಮಾನಂ ಅಂತಿಕತಮಾನಾಂ ಅತಿಶಯೇನ ಸಮೀಪವರ್ತಿನಾಂ ಸುಮತೀನಾಂ ಶೋಭನಮತಿಯುಕ್ತಾನಾಂ ಶೋಭನಪ್ರಜ್ಞಾನಾಂ ಪುರುಷಾಣಾಂ ಮಧ್ಯೇ ಸ್ಥಿತ್ವಾ ವಿದ್ಯಾಮ."** ಸೋಮಪಾನಕ್ಕಾಗಿ **ಯಜ್ಞದ** ಸಮೀಪಕ್ಕೆ ಧಾವಿಸಿ ಬರುವ, ಬಹು ಬಾಯಾರಿದ ಇಂದ್ರನೆಂಬ ವಿಶಿಷ್ಟ ಪ್ರಕಾರದ **ಕಲ್ಪಿತ** ದೇವತೆಯೊಬ್ಬನನ್ನು ಅವನ ಪಾಡಿಗೆ ಅವನನ್ನು ಬಿಟ್ಟು, ಮಂತ್ರದಲ್ಲಿನ **ಶಬ್ದ-ಶಬ್ದಕ್ಕೂ** ಸಾಯಣರು ಮಾಡಿರುವ ಅರ್ಥದ ಮೇಲೆ ಆಕ್ಷೇಪವೆತ್ತುವಂತಿಲ್ಲ. "ಅಥ, ಎಂದರೆ ಸೋಮಪಾನಾನಂತರ, ನಿನಗೆ ಹತ್ತಿರದವರಾದ, ಅತ್ಯಂತ ಸಮೀಪವಿರುವ, **ಅತಿಶಯ** ನಿಕಟಸ್ಥರಾದ ಸುಮತಿಗಳ, ಎಂದರೆ, **ಅಂದವಾದ** ಮತಿಯನ್ನುಳ್ಳ ಪುರುಷರ ನಡುವೆ ನೆಲೆಸಿ ಜ್ಞಾನ ಗಳಿಸೋಣ." ಸಾಯಣರು **'ಅಂತಮಾನಾಂ, ಸುಮತೀನಾಂ'** - ಎಂಬೀ ಶಬ್ದಗಳಿಗೆ ಮಾಡಿರುವ ಅರ್ಥ ಬುದ್ಧಿಸಂಗತವಾಗಿದೆ. ಈ ಶಬ್ದಗಳನ್ನು ಅವರು ವ್ಯಕ್ತಿಗಳಿಗೇ ಅನ್ವಯಿಸಿ ಅರ್ಥ ಮಾಡಿರುವುದು ತರ್ಕಕ್ಕೂ ಅನುಕೂಲವೇ. ಮೇಲೆ ಉಕ್ತರಾಗಿರುವ ಪುರುಷರ ಮಧ್ಯೆ ನೆಲಸಿ, 'ಜ್ಞಾನ ಗಳಿಸೋಣ', ಎಂದಾಗ "ಯಾರ ಜ್ಞಾನ ?" ಎಂಬ ಕರ್ಮಾಪೇಕ್ಷ ಪ್ರಶ್ನೆ ಉದಿಸುವುದು ಸಹಜ. **"ವಯಂ ತ್ವಾಂ ಜಾನೀಯಾಮ"**-ಎಂದರೆ, 'ನಾವು ನಿನ್ನನ್ನು ಅರಿಯೋಣ.' - ಎಂದು ತಾವೇ ಉತ್ತರಕೊಟ್ಟಿದ್ದಾರೆ. ಸುಮತಿಗಳ ಆಶ್ರಯವೇ? ಈ ಪ್ರಶ್ನೆಗೆ ಉತ್ತರಕೊಡುವಾಗ 'ಸುಮತಿ' ಶಬ್ದವನ್ನು ಬಹುವ್ರೀಹಿ ಸಮಾಸದಿಂದ ಬಿಡಿಸಿ, ಕರ್ಮಧಾರಯಕ್ಕೆ ಹಚ್ಚಿದರು. **"ಯದ್ವಾ ಸುಮತೀನಾಂ ಶೋಭನ ಬುದ್ಧೀನಾಂ ಕರ್ಮಾನುಷ್ಠಾನ ವಿಷಯಾಣಾಂ ಲಾಭಾರ್ಥಂ"** "ಕರ್ಮಾನುಷ್ಠಾನದ ವಿಷಯಕ್ಕೆ ಸಂಬಂಧಿಸಿದ ಸುಮತಿಗಳ(ಉತ್ತಮವಾದ ಮತಿಗಳ) ಚೆಂದವಾದ ಬುದ್ಧಿಗಳ ಪ್ರಾಪ್ತಿಗೋಸ್ಕರ." - ಎಂದು ಉತ್ತರವನ್ನು ಕೊಟ್ಟರು. 'ಸುಮತಿಗಳಾದ **ಪುರುಷರು'** - ಎನ್ನಿರಿ; ಸುಂದರವಾದ ಮತಿಗಳು' - ಎನ್ನಿರಿ, ಭಾವ ತಲೆಕೆಳಗಾಗುವ ಸಂಭವವಿಲ್ಲ, ಆದರೆ, **"ಮಾ ನೋ ಅತಿಖ್ಯಃ"** - ಎಂಬಂಶದ ಭಾಷ್ಯದಲ್ಲಿ ಸಾಯಣರು ತೋರಿಸಿರುವ ಭಾವನೆ, ಮೇಲೆ ಹೇಳಿದ ಶ್ರೀ|| ಮಧ್ವರ ಭಾವನೆಗಿಂತ ಉತ್ತಮವಾಗುವುದಂತಿರಲಿ; ಮತೀಯ ಉನ್ಮಾದ ಮಿತಿ ಮೀರಿದಂತೆಯೇ ತೋರುತ್ತದೆ. ಇಂದ್ರನ - ಅವನು ಕೇವಲ ಕಲ್ಪನಾ ಲೋಕ ನಿವಾಸಿಗಳಾದವರ, ಕಲ್ಪನಾತೀತವೇಬಹುಷ್ಟು ಕಠಿಯಾದ ಕೃತಿಯೇ ಆಗಿರಲೊಲ್ಲನೇಕೆ?– ಮೇಲೆ ಪೂರ್ಣಸ್ವಾಮಿತ್ವವನ್ನು ಏಕಸ್ವಾಮ್ಯವನ್ನು ಸ್ಥಾಪಿಸಿದಂತೆ ಕಾಣುತ್ತದೆ. "whole and sole, indisputable and total monopoly over Indra.) ಅನ್ಯಥಾ, ಈ ಕೀಳ್ಗಿನದರಂತಹ ಭಾಷ್ಯ ಬರೆಯಲು ಧೈರ್ಯವಾದರೂ ಬಂದಿತೇ? **'ತ್ವಮಪಿ ನೋಽತಿ ಮಾಖ್ಯಃ. ಅಸ್ಮಾನತಿಕ್ರಮ್ಯ ಅನ್ಯೇಷಾಂ ತ್ವತ್ಸ್ವರೂಪಂ, ಮಾ ಪ್ರಕಥಯ ಕಿಂತು, ಆಗಹ್ಯಸ್ಮಾನೇವ ಆಗಚ್ಛ."** "ನೀನೂ ಕೂಡ ನಮ್ಮನ್ನು ಅತಿವರ್ತಿಸಬೇಡ ನಮ್ಮನ್ನು ಅತಿಕ್ರಮಿಸಿ, (trespass) ಅನ್ಯರಿಗೆ ನಿನ್ನ ಸ್ವರೂಪವನ್ನು ವರ್ಣಿಸಬೇಡ. ಆದರೆ, ನಮ್ಮ ಬಳಿಗೇ ಬಂದುಬಿಡು.'' ಭಕ್ತಪರಾಧೀನತ್ವದ (ಅದೇ ಅಪಸಿದ್ಧಾಂತವೆಂದು ಹೇಳಿಯೇ ಇದ್ದೇವೆ) ಪರಾಕಾಷ್ಠೆಯಾಯಿತಿದು. ದೀನಬಂಧು

ಆಂಡ್ರೂಸರು, ಈ ಇಂದ್ರನ ವಿಷಯದಲ್ಲಿ ಅಲ್ಲ; ಆದರೆ, ಪೋಪರ "Trans substantiation" - ಎಂದರೆ, ರೊಟ್ಟಿಯು ಏಸುವಿನ ಮಾಂಸವಾಗಿಯೂ ದ್ರಾಕ್ಷಾರಸವು ಏಸುವಿನ ರಕ್ತವಾಗಿಯೂ ಪೂರ್ಪಾಂತರವಾವುದು. - ಎಂಬ ತತ್ತ್ವವನ್ನೂ, ಪೋಪನಲ್ಲಿ ಏಸುವಿನ ಮೈ ತುಂಬುವುದು: ಯಾವನೋ ಪಾದರಿ, ಬಿಷಪ್ ಅಥವಾ ವಿಶಿಷ್ಟ ವ್ಯಕ್ತಿ ತೀರಿಹೋದ ಮೇಲೆ ಅವನಿಗೆ ಅಥವಾ ಅವಳಿಗೆ 'ಸಂತ, ಸಾಧ್ವೀ' ಆದ ಪದವಿಗಳನ್ನೀಯುವುದು: ಮುಂಚೆ ಇತ್ತಿದ್ದ ಪದವಿಯನ್ನು ಕಸಿದುಕೊಳ್ಳುವುದು, (canonisation and de-canonisation) - ಈ ತತ್ತ್ವಗಳನ್ನೂ ಹಗುರಮನೋಭಾವದಿಂದ ಟೀಕಿಸುತ್ತಾ - "What a poor God? What a poor Christ? Poor things? They are mercilessly ordered about!" - 'ಎಂತಹ ಬಡಪಾಯಿ ದೇವರು! ಎಂತಹ ದೀನ ಕ್ರಿಸ್ತ! ಪಾಪದ ಜಂತುಗಳು!' "ಅದು ಮಾಡು; ಇದು ಬೇಡ!' – ಎಂದು ನಿಷ್ಕರುಣೆಯಿಂದ ಆಜ್ಞಾಪಿಸಲ್ಪಡುತ್ತಾರೆ!"- ಎಂದಿದ್ದರು. ಶ್ರೀ॥ ಮಧ್ವ-ಸಾಯಣರ ಕೈಯಿಗೆ ಸಿಕ್ಕಿದ ಇಂದ್ರನ ಗತಿ ಅದಕ್ಕಿಂತ ಉತ್ತಮವಾಗಿಲ್ಲ!

ಈಗ ಮಹರ್ಷಿ ದಯಾನಂದರ ನೇರವಾದ ಭಾಷ್ಯದತ್ತ ಗಮನ ಹರಿಸೋಣ. ಜ್ಞಾನಕ್ಕಿಂತ ಹಿರಿದಾದ ಸಿರಿಯನ್ನು ಯಾರೂ ಕಂಡಿಲ್ಲ. ಮಾನವ ಮಾನವಂತನಾಗಿ ಬಾಳ ಬೇಕಾದ್ದರೆ ಅವನಿಗೆ ನಿಭ್ರಾಂತವಾದ ಜ್ಞಾನ ಬೇಕೇ ಬೇಕು. ಇಂತಹ ಜ್ಞಾನ ಕೇವಲ ಅಕ್ಷರ ಜ್ಞಾನವಂತರಿಂದಾಗಲಿ, ಲೋಕ ವ್ಯವಹಾರವನ್ನರಿತ ಸಾಧಾರಣರಿಂದಾಗಲಿ ಪ್ರಾಪ್ತವಾಗದು. ಈ ಮಂತ್ರ 'ಅಂತಮರು' ಮತ್ತು 'ಸುಮತಿಗಳು' – ಇವರಿಂದ ಜ್ಞಾನ ಗ್ರಹಿಸ ಬೇಕೆನ್ನುತ್ತಿದೆ. ಯಾರು ಅಂತಮರು? ಮಹರ್ಷಿ ದಯಾನಂದರು ಹೇಳಿದ್ದಾರೆ – [ತೇ] ತವ, [**ಅಂತಮಾನಾಂ**] **ಅಂತಃ ಸ್ವಾಮೀಪ್ಯಂ, ಏಷಾಮಸ್ತಿ ತೇ ಅಂತಿಕಾಃ । ಅತಿಶಯೇನಾಂತಿಕಾ ಅಂತಮಾಃ । ತತ್ಸಮಾಗಮೇನ."** – "ಓ ಇಂದ್ರ! ನಿನ್ನ ನಿಕಟ ಸಂಬಂಧವಾರಿಗಿದೆಯೋ ಅವರು ಅಂತಿಕರುಗಳು. ಅತಿಶಯವಾಗಿ ಅಂತಿಕರಾದವರು, ಸಮೀಪಸ್ಥರಾದವರು **ಅಂತಮರು** ಅವರ ಸಂಗದಿಂದ (ನಮಗೆ ಬೋಧವಾಗಲಿ". " **(ಸುಮತೀನಾಂ) ವೇದಾದಿಶಾಸ್ತ್ರೇ, ಪರೋಪಕಾರೇ ಧರ್ಮಾಚರಣೇಚ ಶ್ರೇಷ್ಠಾ ಮತಿರ್ಯೇಷಾಂ, (ತೇಭ್ಯಃ) (ವಿದ್ಯಾಮ) ಜಾನೀಯಾಮ"** – "ವೇದಾದಿ ಶಾಸ್ತ್ರಗಳಲ್ಲಿ, ಪರೋಪಕಾರದಲ್ಲಿ ಮತ್ತು ಧರ್ಮಾಚರಣದಲ್ಲಿ ಯಾವ ಮಾನವರ ಮತಿ ಶ್ರೇಷ್ಠವಾಗಿರುತ್ತದೋ, ಅವರಿಂದ ತಿಳಿದುಕೊಳ್ಳೋಣ." ಈ ಪ್ರಕರಣದಲ್ಲಿ ಮಹರ್ಷಿಗಳು-"**ಅಂತಮಾನಾಮಿತ್ಯಂತಿಕನಾಮಸು ಪಠಿತಂ**" [ನಿಘಂಟು: 2. 16]; "**ಮತಯ ಇತಿ ಮನುಷ್ಯನಾಮಸು ಪಠಿತಂ.**" [ನಿಘಂಟು: 2. 3.] – ಅಂತಿಕರು ಎಂಬ ಪರ್ಯಾಯ ವಾಚಕಗಳಲ್ಲಿ 'ಅಂತಮಾನಾಂ' ಎಂಬುದು ಗಣಿಸಲ್ಪಟ್ಟಿದೆ.; "ಮತಯಃ – ಎಂದು ಮನುಷ್ಯರ ಹೆಸರುಗಳಲ್ಲಿ ಹೇಳಲ್ಪಟ್ಟಿದೆ." – ಈ ಎರಡು ಪ್ರಮಾಣಗಳನ್ನು ಕೊಟ್ಟಿದ್ದಾರೆ. ಶಾಸ್ತ್ರ-ಜ್ಞಾನ ಸಾಕ್ಷಾತ್ಕಾರವಲ್ಲ. ಆದಕಾರಣ, ಕೇವಲ ಶಾಸ್ತ್ರ, ಬಲ್ಲವರಿಂದ ಈಶ್ವರ ಸಾಕ್ಷಾತ್ಕಾರ ಲಭಿಸುತ್ತದೆ – ಎಂಬ ಭ್ರಾಂತಿಗೆ ಸಿಕ್ಕಬಾರದು. ಶಾಸ್ತ್ರ – ವಾಕ್ಯೋದ್ಯೋಷಕ್ಕೆ ಭಗವದನುಭೂತಿ ಏನೂ ಬೇಕಾಗಿಲ್ಲ. ಸ್ವಯಂವೇದ ಹೇಳುತ್ತಿದೆ.

**ನ ತಂ ವಿದಾಥಯ ಇಮಾ ಜಜಾನಾನ್ಯದ್ಯುಷ್ಮಾಕಮಂತರಂ ಬಭೂವ।**
**ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಸುತೃಪ ಉಕ್ಥಶಾಸಶ್ಚರಂತಿ॥**

[ಯಜು:- 17.31]

"[ಯಃ] ಯಾವನು, [ಇಮಾಃ[ ಈ ರಚನೆಗಳನ್ನು, [ಜಜಾನ] ಸೃಜಿಸಿದ್ದಾನೋ ತಿಳಿದಿದ್ದಾನೋ, [ತಂ] ಅವನನ್ನು, [ನ ವಿದಾಥ] ನೀವು ತಿಳಿದಿಲ್ಲ. [ಅನ್ಯತ್] ಆ ಅನ್ಯ ತತ್ತ್ವ ವಿಶ್ವ ಸೃಜನ ಕರ್ತಾ ಪರಮಾತ್ಮನು, [ಯುಷ್ಮಾಕಂ ಅಂತರಂ] ನಿಮ್ಮೆಲ್ಲರ ಒಳಗೆಯೇ [ಬಭೂವ] ನೆಲೆಗೊಂಡಿದ್ದಾನೆ. [ನೀಹಾರೇಣ] ಇಬ್ಬನಿಯಂತಹ ಅಜ್ಞಾನದ ಮೊಬ್ಬಿನಿಂದ [ಪ್ರಾವೃತಾಃ] ಆವರಿಸಲ್ಪಟ್ಟವರಾಗಿ, [ಜುಲ್ಪ್ಯಾಃ] ಅಲ್ಲ-ಸಲ್ಲದುದನ್ನು ಒದರುತ್ತಾ, [ಅಸಂ ತೃಪಃ] ಕೇವಲ ಭೌತಿಕಾಸ್ತಿತ್ವದಿಂದ ತೃಪ್ತರಾಗಿ, [ಉಕ್ಥಶಾಸಃ] ಅನ್ಯರಿಂದ ಆಲಿಸಿದುದನ್ನೇ ಅಧಿಕಾರ ವಾಣಿಯಿಂದ ಪುನಃ ಪುನಃ ಉಚ್ಚರಿಸುತ್ತಾ, [ಚರಂತಿ] ಓಡಾಡುತ್ತಾರೆ." ಇಂತಹ ಕರ್ಣ-ಚಪಲರಿಗೆ, ಶಬ್ದ-ಘೋಷಕರಿಗೆ, ಸ್ವತಃ ಈಶ್ವರ ಜ್ಞಾನವಿಲ್ಲ. ಅವರ ನೆರವಿನಿಂದ ಭಗ ವಂತನ ಇರುವಿನ ಅರಿವು ತಮಗಾಗಬಹುದೆಂಬ ಆಸೆ ಹೊತ್ತ ಭ್ರಾಂತರು ಕಂಡುಕೊಳ್ಳಲಾರರು ಈಶ್ವರನನ್ನು. ಈಶ್ವರ ಸಾಕ್ಷಾತ್ಕಾರವನ್ನು ಸಾಧಿಸಲು ಬೇಕಾದ ಸ್ವಾನುಭವ ಸಾಕ್ಷಾತ್ಕೃತೇಶ್ವರ ರಿಗೆ ಮಾತ್ರ ಇರುತ್ತದೆ. ಅಥರ್ವವೇದ ಹೇಳುತ್ತದೆ.

**ತಸ್ಮಿನ್ ಹಿರಣ್ಮಯೇ ಕೋಶೇ ತ್ರ್ಯರೇ ತ್ರಿಃಪ್ರತಿಷ್ಠಿತೇ।**
**ತಸ್ಮಿನ್ ಯದ್ಯಕ್ಷಮಾತ್ಮನ್ವತ್ ತದ್ವೈ ಬ್ರಹ್ಮವಿದೋ ವಿದುಃ॥**

[ಅಥರ್ವ:– 10, 2. 38]

"[ತ್ರ್ಯರೇ=ತ್ರಿ+ಅರೇ] ಜ್ಞಾನ-ಕರ್ಮ-ಉಪಾಸನಾ-ಎಂಬ ಮೂರು ಆಧಾರ ಗಳಿಂದ ನೆಲೆಸಿರುವ, [ತ್ರಿಃ ಪ್ರತಿಷ್ಠಿತೇ] ಮನೋವಾಕ್ಕಾಯಗಳೆಂಬ ಮೂರು ಕರಣಗಳಿಗೂ ಪ್ರತಿಷ್ಠಾ-ಎಂದರೆ ಸ್ಥೈರ್ಯದಾಯಕ ಕೇಂದ್ರವಾಗಿರುವ*, [ತಸ್ಮಿನ್ ಹಿರಣ್ಮಯೇ ಕೋಶೇ **ಆ ಹಿತ, ರಮ್ಯತೆ ಹಾಗೂ ಪ್ರಗತಿಗೆ ಅನಿವಾರ್ಯವಾದ** ಕೋಶದಲ್ಲಿ [ತಸ್ಮಿನ್] ವಸ್ತುತಃ ಅದರಲ್ಲಿಯೇ, [ಯತ್ ಆತ್ಮನ್ವತ್] ಯಾವ ಜೀವಾತ್ಮ ಸಮೇತನಾದ [ಯಕ್ಷಂ] ಪೂಜನೀಯ ಭಗವಂತನಿದ್ದಾನೋ, [ತತ್ ವೈ] ಅದನ್ನೇ, [ಬ್ರಹ್ಮ ವಿದಃ] ಬ್ರಹ್ಮ ಜ್ಞರು. [ವಿದುಃ] ತಿಳಿಯುತ್ತಾರೆ." ಅದೆಷ್ಟು ಕೋಟಿಗಳಿಗೊಬ್ಬ ಸಿಕ್ಕಬಹುದೋ ಇಂತಹ ಭಾಗ್ಯವಾನ್, ಭಗವಜ್ಜ್ಞಾನವಾನ್ ಪುಣ್ಯಾತ್ಮ!

**ಯೋ ವಿದ್ಯಾತ್ಸೂತ್ರಂ ವಿತತಂ ಯಸ್ಮಿನ್ನೋತಾಃ ಪ್ರಜಾ ಇಮಾಃ।**
**ಸೂತ್ರಂ ಸೂತ್ರಸ್ಯ ಯೋ ವಿದ್ಯಾತ್ಸ ವಿದ್ಯಾದ್ಬ್ರಾಹ್ಮಣಂ ಮಹತ್॥**

---

* ಜ್ಞಾನ ಕರ್ಮೋಪಾಸನಾತ್ರಯದ ಸಿದ್ಧಿಗೆ ಮೂಲಕೇಂದ್ರ ಹೃದಯ; ಮನ, ವಚನ, ತನು ಈ ಮೂರಕ್ಕೂ ಪ್ರತಿಷ್ಠಾ, ಸ್ಥಿರವಾದ, ಗೌರವಮಯವಾದ ವೇದಿಕೆಯೂ ಹೃದಯವೇ. ಸ್ವಸ್ಥಶರೀರ ಸ್ವಸ್ಥವಾದ ಹೃದಯದ ಅಮೂಲ್ಯ ವರದಾನ, ಜೀವಿತದ ಕೇಂದ್ರ ಬಿಂದು ಹೃದಯ. ಅದು ನಿಂತಲ್ಲಿ, ಎಲ್ಲವೂ ನಿಂತಂತೆಯೇ.

[ಯಸ್ಮಿನ್] ಯಾವುದರಲ್ಲಿ, [ಇಮಾಃ ಪ್ರಜಾಃ] ಈ ಪ್ರಜೆಗಳು, [ಓತಾಃ] ಒಂದುಗೂಡಿಸಲ್ಪಟ್ಟಿದ್ದಾರೋ, [ವಿತತಂ ಸೂತ್ರಂ] ಆ ವಿಸ್ತೃತವಾಗಿ ಹರಡಿರುವ ವಿಶ್ವ-ಸಂಚಾಲಕ ಶಾಸನ ಸೂತ್ರವನ್ನು [ಯಃ ವಿದ್ಯಾತ್] ಯಾವನು ಬಲ್ಲನೋ, [ಸೂತ್ರಸ್ಯ] ಆ ಶಾಸನ ಸೂತ್ರಕ್ಕೂ [ಸೂತ್ರಂ] ಮೂಲ ಶಾಸಕ ಸೂತ್ರನಾದ ಭಗವಂತನನ್ನು [ಯಃ ವಿದ್ಯಾತ್] ಯಾವನು ತಿಳಿದುಕೊಂಡಿದ್ದಾನೋ. [ಸಃ] ಆ ಭಾಗ್ಯಶಾಲಿಯೇ, [ಮಹತ್] ಸರ್ವಜ್ಯೇಷ್ಠನಾದ, [ಬ್ರಾಹ್ಮಣಂ] * ಭಗವಂತನನ್ನು ಬಲ್ಲರು."

ತಾತ್ಪರ್ಯವೇನು? ಕೇವಲ ಅನುಮಾನಾಗಮಗಳಿಂದ, ಉಪಮಾನೈತಿಹ್ಯಗಳಿಂದ ಸಂಭವಾಭಾವಾರ್ಥಾಪತ್ತಿಗಳಿಂದಲ್ಲ: ಸ್ವತಃ ಪ್ರತ್ಯಕ್ಷದಿಂದಲೇ ಈಶ್ವರಾನುಭೂತಿಯನ್ನು ಹೊಂದಿದವನು ಮಾತ್ರ ಈಶ್ವರಸಾಕ್ಷಾತ್ಕಾರ ಪಡೆದವನು. ನಾವೀಗ ಭಾಷ್ಯಮಾಡುತ್ತಿರುವ ಮಂತ್ರ ಈ ಬಗೆಯ ಕೃತಕೃತ್ಯಾತ್ಮನನ್ನು, ಸಾಕ್ಷಾತ್ಕೃತೇಶ್ವರನನ್ನು 'ಅಂತಮ' ಎನ್ನುತ್ತಿದೆ. **'ಅತಿಶಯೇನಾಂತಿಕಾಃ ಅಂತಮಾಃ'** - **'ಅತ್ಯಂತ ಸಾಮೀಪ್ಯಸ್ಥರೇ ಅಂತಮರು.'**- ಎಂದಾಗ, ಮಹರ್ಷಿಗಳ ಮಹಿಮಾವಾನ್ ಮನಸ್ಸು ಈ ತಥ್ಯವನ್ನೇ ಗುರುತಿಸುತ್ತಿದ್ದಿತು. ಕಾಲಗತ-ದೇಶಗತ ದೂರ ವಿರಾಡಾತ್ಮ-ಜೀವಾತ್ಮರ ಮಧ್ಯೆ ವಿರಾಡಾತ್ಮನ ಸರ್ವವ್ಯಾಪಕತ್ವ ಹಾಗೂ ಇಬ್ಬರ ಅನಾದಿತ್ವಾನಂತತ್ವಗಳಿಂದಾಗಿ ಇಲ್ಲವೇ ಇಲ್ಲ ಇರುವುದು ಕೇವಲ ಜ್ಞಾನ-ಸಂಬಂಧೀ ದೂರ ಮಾತ್ರ. ಆ ದೂರವು ದೂರವಾಗಬೇಕಾದರೇ, ಅದನ್ನು ದೂರೀಕರಿಸಿದ 'ಅಂತಮ'ರೇ ಪಥಪ್ರದರ್ಶಕರಾಗಬೇಕು. **"ಅಂತಮಾ ಅಂತರತಮಾಃ; ಸುತರಾಂ ಸಂಸಿದ್ಧ ಚಿತ್ತೈಕಾಗ್ರ್ಯಾಃ ಉಭಯೋಃ ಬ್ರಹ್ಮಜೀವಯೋಃ ನಿಃಸಂದೇಹ ಸ್ವರೂಪಯೋಃ ಜ್ಞಾತಾರಃ ಅಂತಮಾಃ"** – "ಪೂರ್ಣತಃ ಚಿತ್ತದ ಏಕಾಗ್ರತೆಯನ್ನು ಸಾಧಿಸಿಕೊಂಡವರು. ಬ್ರಹ್ಮ-ಜೀವರ ನಿರ್ಭ್ರಾಂತ ಸ್ವರೂಪ ಜ್ಞಾನಯುಕ್ತರು ಅಂತಮರು."-ಎಂಬ ಅರಿವು ಹೃದಯಾಂತರಾಳಕ್ಕಿಳಿದಾಗ, ಈಶ್ವರ-ಸಾಕ್ಷಾತ್ಕಾರಕ್ಕೆ ಸಹಾಯಕರಾಗಬಲ್ಲ ಸಹೃದಯ ಸಜ್ಜನರನ್ನು ಗುರುತಿಸಿಕೊಂಡಂತೆಯೇ ಸರಿ. ಆಮೇಲೆ, ಸಾಕ್ಷಾತ್ಕಾರ ಸರ್ವಥಾ ಸಂಭವ-ಎಂಬ ಸತ್ಯಸಂಕಲ್ಪ ಅತ್ಯಂತ **ಸುಲಭ**

ಈಗ ಎರಡನೆಯ ಶಬ್ದ **'ಸುಮತೀನಾಂ'** – ಎನ್ನುವುದೇ ಇದನ್ನು **"ಉತ್ತಮ ಜ್ಞಾನವನ್ನುಳ್ಳವರ"** - ಎಂದಾದರೂ ಗ್ರಹಿಸಿರಿ.; **"ಉತ್ತಮವಾದ ಜ್ಞಾನಗಳ"** – ಎಂದಾದರೂ ಗ್ರಹಿಸಿರಿ. ಉತ್ತಮ ಜ್ಞಾನವನ್ನುಳ್ಳವರು ಇಲ್ಲದೆ ಉತ್ತಮ ಜ್ಞಾನವಿಲ್ಲ; ಉತ್ತಮ ಜ್ಞಾನವೇ ಇಲ್ಲವಾದರೆ, ಉತ್ತಮ ಜ್ಞಾನಯುಳ್ಳವರೂ ಇಲ್ಲ. 'ಅದೇ ಇದು ಇದೇ ಅದು.' - ಎಂಬ ತಾದಾತ್ಮ್ಯ ಭಾವ ಬುದ್ಧಿಯನ್ನು ಶುದ್ಧೀಕರಿಸಿಕೊಂಡು, ಭ್ರಾಂತಿಯನ್ನು ಬಹುದೂರ ಭ್ರಾಂತಭುವನಕ್ಕೇ ಬಡಿದಟ್ಟಿದಾಗ ಅರ್ಥವಾದೀತು.

---

* "ಬ್ರಹ್ಮೇತಿ ವೇದನಾಮ, ತಸ್ಯಾಸಾವಿತಿ ಬ್ರಾಹ್ಮಣಂ ವಿರಾಡಾತ್ಮಾ."-"ಬ್ರಹ್ಮವೆಂದರೆ ವೇದ. ಆ ವೇದದಿಂದಲೇ ಜ್ಞಾನಿಗಳಿಗೆ ಒಪ್ಪುವಂತೆ ವಿಶದೀಕೃತವಾದುದೇ ಬ್ರಾಹ್ಮಣ; ಅದೇ ವಿರಾಡಾತ್ಮ.

ಕೇವಲ ಸಾಮಾನ್ಯರ ದೃಷ್ಟಿಗೂ ಋಷಿದೃಷ್ಟಿಗೂ ಇರುವ ವ್ಯತ್ಯಾಸವನ್ನು 'ಸುಮತೀನಾಂ' - ಎಂಬ ಮಾತು ಮೇಲೆತ್ತಿ, ಮುಂದೊತ್ತಿ, ಮುಗ್ಧಮಾನವರ ಮಂದಗಾಮೀ ಮನಸ್ಸಿಗೂ ಕೂಡ ಅರಿವಾಗುವಂತೆ ಮಾಡುತ್ತಿದೆ. 'ಸುಮತಿ' ಎಂದಾಗ ಶ್ರೀ॥ ಮಾಧ್ವರಿಗೆ ತೋರಿದುದು '**ಮತಯೋ ಹ್ಯುತ್ತಮೋತ್ತಮಾಃ**'-ಎಂದರೆ, "ಮತಿಗಳು ಉತ್ತಮೋತ್ತಮಗಳು"-ಎಂದಿಷ್ಟೇ. ಅದೇ ಮಾತು ಮುಂದೆ ಬಂದಾಗ, ಶ್ರೀ॥ ಸಾಯಣರಿಗೆ ತೋರಿದುದು –"**ಸುಮತೀನಾಂ ಶೋಭನಮತಿಯುಕ್ತಾನಾಂ ಶೋಭನ ಪ್ರಜ್ಞಾನಾಂ ಪುರುಷಾಣಾಂ**"-"ಸುಮತಿಗಳ-ಎಂದರೆ ಸುಂದರಮತಿಯುಕ್ತದ, ಮನೋಜ್ಞ ಪ್ರಜ್ಞೆಯುಳ್ಳ ಪುರುಷರ."-ಎಂದಿಷ್ಟು; ಕೂಸರಿಗೊಂದಷ್ಟು, ಕೆಸರನ್ನು ತೊಳೆಯಲಿನ್ನಷ್ಟು–ಎಂಬಂತೆ – "**ಶೋಭನಾ ಮತಯಃ ಸುಮತಯಃ**" - "ಸುಂದರವಾದ ಮತಿಗಳು ಸುಮತಿಗಳು."– ಎಂಬ ಮೂರು ಮಾತುಗಳು. ಅಲ್ಲಿಗಾಯಿತು ಸುಮತಿಗಳ ಕತೆ. ಆದರೆ, ಮಹರ್ಷಿ ದೃಷ್ಟಿಯ ಆ ಮನೋವೈಶಾಲ್ಯ, ಬುದ್ಧಿಯ ಬಲಿಷ್ಠತ್ವ ಹಾಗೂ ಹೃದಯ ವೈಶದ್ಯ (ವಿಸ್ತಾರ) ಎಲ್ಲರಿಗೂ ಬಂದೀತೇ? ಶಬ್ದ ಅದೇ-ಸುಮತಿ. "**(ಸುಮತೀನಾಂ) ವೇದಾದಿಶಾಸ್ತ್ರೇ ಪರೋಪಕಾರೇ ಧರ್ಮಾಚರಣೇ ಚ ಶ್ರೇಷ್ಠಾ ಮತಿರ್ಯೇಷಾಂ ಮನುಷ್ಯಾಣಾಂ**"–"ಸುಮತಿಗಳ–ಎಂದರೆ ವೇದಾದಿಶಾಸ್ತ್ರಗಳಲ್ಲಿ. ಪರೋಪಕಾರ ಮತ್ತು ಧರ್ಮಾಚರಣದಲ್ಲಿ ಯಾವ ಮಾನವರ ಮತಿ ಶ್ರೇಷ್ಠವೋ......" ಎಂದು ವಿಶದೀಕರಿಸಿದ್ದಾರೆ. ಈ ಆರ್ಷದೃಷ್ಟಿ ಸಂಪ್ರದಾಯ ಪ್ರವರ್ತಕರಿಗೆಲ್ಲಾ ಇದ್ದಿದ್ದರೆ, ಹೀಗಿರುತ್ತಿತ್ತೆ ಮಾನವ ಸಮಾಜದ ಸ್ಥಿತಿ.

ವೈದಿಕಧರ್ಮದ ತುಷಾರಶುಭ್ರ ಯಶಸ್ಸಿನ ನಿರ್ಮಲವಸ್ತ್ರಕ್ಕೆ ಆಯಾ ಮತಾಚಾರ್ಯರೇ ಸಂಕುಚಿತ ಮನೋಭಾವದ, ಹೃದಯದ ಅಲ್ಪತನದ, ಮಾನವೀಯತೆಯೇ ಮಸಿ ಬಳಿಯುವ ಮತೀಯ ಭ್ರಾಂತಿಗೆ ಉದಾಹರಣವನ್ನು, ಇದೇ ಮಂತ್ರದ ಉತ್ತರಾರ್ಧವಾದ "**ಮಾ ನೋ ಅತಿ ಖ್ಯಃ ಆಗಹಿ.**" - ಎಂಬುದಕ್ಕೆ ಅರ್ಥ ಮಾಡುವಾಗ ಶ್ರೀ॥ ಮಧ್ವ ಸಾಯಣರು ಕೊಟ್ಟುಹೋಗಿದ್ದಾರೆ. ಶ್ರೀ॥ ಮಧ್ವರು ಇದಕ್ಕೆ '**ಅಸ್ಮಾನತೀತ್ಯ ಮಾ ಪಶ್ಯ ಕರುಣಾರ್ದ್ರದೃಶಾ ಸದಾ.**'-"ನಮ್ಮನ್ನುಳಿದು ಅನ್ಯರಕಡೆ ಎಂದಿಗೂ ಕರುಣಾರ್ದ್ರ ದೃಷ್ಟಿಯಿಂದ ನೋಡಬೇಡ." - ಎಂಬುದು ಸೋಮಪಾನಪ್ರಿಯ, ನಿತ್ಯಪಿಪಾಸು ಇಂದ್ರನಿಗೆ ಸಲಹೆಯನ್ನಿತ್ತರೆ, ಶ್ರೀ॥ ಸಾಯಣರು "**ಅಸ್ಮಾನತೀತ್ಯ ಅನ್ಯೇಷಾಂ ತ್ವತ್ಸ್ವರೂಪಂ ಮಾ ಪ್ರಕಥಯ.**" – ನಮ್ಮನ್ನುಳಿದು ಬೇರೆ ಯಾರಿಗೂ ನಿನ್ನ ಸ್ವರೂಪದ ಕತೆಯನ್ನು ಹೇಳಬೇಡ."–ಎಂದು ಅದೇ ಇಂದ್ರನಿಗೆ ಸೂಚನೆಯನ್ನು ಕೊಟ್ಟರು. ಕಲ್ಪಿತಸ್ವರ್ಗದ, ಜರಾ-ಮರಣ ರಹಿತವೂ, ರೋಗ-ಶೋಕವಿಹೀನವೂ ಆದ ಜೀವನವನ್ನು ಸವಿಯುವ ದೇವತೆಗಳ ದೊರೆಗೂ ಮರ್ತ್ಯರ ಸಲಹೆ ಬೇಕೇ ಆಯಿತಲ್ಲ! ಹೋಗಲಿ; ಮಹರ್ಷಿಗಳೇನೆನ್ನುವರೂ ನೋಡೋಣ. ಅನ್ಯರ ಮನೆಮುರಿದು, ತನ್ನ ಪ್ರಾಸಾದ ನಿರ್ಮಾಣ ಮಾಡುವ, ಅಥವಾ-"ಒಳಿತೇನಿದ್ದರೂ ನನ್ನ ಪಾಲಿಗೆ ಬರಲಿ. ಅನ್ಯರ ಮೇಲೆ ಕೃಪಾ ದೃಷ್ಟಿ ಬೇಡ." – ಎಂಬ ಹೊಲಸು ಹೃದಯದ, ಮಲಿನ ಮನದ. ಬರಡು ಬುದ್ಧಿಯ ಮಾನವನನ್ನು ಮಾನವನೆಂದೇ ಕರೆಯುವುದಾದರೆ.

ದಾನವನೆಂಬ ದುರ್ದಾಂತ ಧೈರ್ಯ ಶಾಲಿಗೆ ಮತ್ತಾವ ಹೆಸರಿಡಬೇಕು? ವೀತ - ರಾಗರೂ, ಗತದ್ವೇಷರೂ ಆದ ಆ ಧೀರ - ವೀರ ಸಂನ್ಯಾಸೀ ಪೂರ್ಣ ಮಂತ್ರಕ್ಕೇ ಅಲೌಕಿಕ ಆಭಾ ಲಾಭ*ವಾಗುವಂತೆ ಬರೆದಿದ್ದಾರೆ:- ''**ಹೇ ಪರಮೈಶ್ವರ್ಯವನ್ ಪರಮೇಶ್ವರ! ವಯಂ (ತೇ) ತವ ಅಂತಮಾನಾಂ, ಅರ್ಥಾತ್ ತ್ವಾಂ ಜ್ಞಾತ್ವಾ ತ್ವನ್ನಿಕಟೇ ತ್ವದಾಜ್ಞಾಯಾಂ ಚ ಸ್ಥಿತಾನಾಂ ಸುಮತೀನಾಮಾಪ್ತಾನಾಂ ವಿದುಷಾಂ ಸಮಾಗಮೇನ ತ್ವಾಂ ವಿಜಾನಿಯಾಮ ತ್ವಂ ನೋಽಸ್ಮಾನಾಗಚ್ಛ ಅಸ್ಮದಾತ್ಮನಿ ಪ್ರಕಾಶಿತೋ ಭವ ಅಥಾಂತರ್ಯಾಮಿತಯಾ ಸ್ಥಿತಃ ಸನ್ ಸತ್ಯಮುಪದೇಶಂ ಮಾ ಅತಿಖ್ಯಃ ಕದಾಚಿದಸ್ಯೋಲ್ಲಂಘನಂ ಮಾ ಕುರ್ಯಾಃ**"-"ಓ ಪರಮೈಶ್ವರ್ಯವನ್ ಪರಮೇಶ್ವರ! ನಾವು ನಿನ್ನ ಅಂತಮರ*, ಎಂದರೆ, ನಿನ್ನರಿತು, ನಿನ್ನ ಬಳಿಯಲ್ಲಿ, ನಿನ್ನ ಆಜ್ಞಾಕಾರಿಗಳಾಗಿ ನೆಲೆಸಿದ, ಸುಮತಿಗಳೂ, ಆಪ್ತರೂ ಆದ ವಿದ್ವಾಂಸರ ಸಂಗದಿಂದ ನಿನ್ನನ್ನು ತಿಳಿದುಕೊಳ್ಳೋಣ. ನೀನು ನಮ್ಮ ಬಳಿ ಸಾರು. ನಮ್ಮ ಆತ್ಮಗಳಲ್ಲಿ ಪ್ರಕಾಶಿತನಾಗು. ನಮ್ಮ ಅಂತರ್ಯಾಮಿತ್ವದಿಂದ ಸ್ಥಿತನಾಗಿ, ನಮಗೆ ಪ್ರೇರಕವಾದ ಉಪದೇಶ ಕೊಡುವುದರಲ್ಲಿ ನಮ್ಮನ್ನು ಅತಿಕ್ರಮಿಸಬೇಡ. ಎಂದಿಗೂ ಈ ಉಪದೇಶ ಕಾರ್ಯದಲ್ಲಿ ವಿಚ್ಛಿತ್ತಿಯಾಗದಂತೆ ನೋಡಿಕೊಳ್ಳು'' "ಅನ್ಯರಿಗೆ ಸನ್ಮಾರ್ಗ ತೋರ ಬೇಡ; ಅನ್ಯರ ಕಡೆಗೆಂದೂ ದಯಾರ್ದ್ರದೃಷ್ಟಿಯಿಂದ ನೋಡಲೇ ಬೇಡ.'' - ಎಂಬ ಮತಾಂಧತಾ ಸೂಚಕವಾದ ಒಂದೇ ಒಂದು ಕೆಟ್ಟ ಅಕ್ಷರವೂ ಮಹರ್ಷಿಗಳ ಲೇಖನಿಯಿಂದ ಹರಿದು ಬಂದಿಲ್ಲ. ಮೂಲದಲ್ಲಿದ್ದರೆ ತಾನೇ ಭಾಷ್ಯಕಾರನು ಅಂತಹ ಅಪಸ್ವರವೆಳೆಯುವುದು? ಪಾವನ ವೇದಗಳಲ್ಲಿ ಎಲ್ಲಿಯೂ ಯಾರಿಗಾದರೂ ಕೇಡಾಗಬೇಕೆಂಬ ಪ್ರಾರ್ಥನಾ ಮಂತ್ರವಿಲ್ಲ. ಪ್ರತಿಯಾಗಿ-"**ಅದ್ಯಾಮುರೀಯ ಯದಿ ಯಾತುಧಾನೋ ಅಸ್ಮಿ ಯದಿ ವಾಯುಸ್ತತಪ ಪೂರುಷಸ್ಯ.**" (ಋಕ್:-104. 15.) " ಓ ಸ್ವಾಮಿನ್! ನಾನು ಹಾದಿಗಳ್ಳನಾಗಿದ್ದರೆ, ಅಥವಾ ಯಾವನಾದರೂ ಪುರುಷನ ಬಾಳಿಗೆ ನೋವನ್ನು ತಂದಿದ್ದರೆ. ನನಗಿಂದೇ ಸಾವು ಬರಲಿ.": **ಅಪ ಇವ ಕಾಶಿನಾ ಸಂಗೃಭೀತಾ ಅಸನ್ನಸ್ತ್ವಾಸತ ಇಂದ್ರ ವಕ್ತಾ**" (ಋಕ್:-7. 104. 8.)-"ಓ ಇಂದ್ರ! ಸೂರ್ಯ ಕಿರಣಗಳಿಂದ ಆಕರ್ಷಿಸಲ್ಪಟ್ಟ ಜಲದಂತೆ, ಅಸತ್ಯವಾದಿ ಸತ್ವಃ ಅಸತ್ಯವಾಗಿ ಹೋಗಲಿ." [ಕೊಳೆನೀರು ಮೇಲೇರಿ, ಮೋಡವಾಗಿ, ಶುದ್ಧವೃಷ್ಟಿಯಾಗಿ ಇಳಿದು ಬರುವಂತೆ ಅಸತ್ಯವಾದಿಯು ಉತ್ಕೃಷ್ಟನಾಗಿ. ಅಸತ್ಯವಾದಿಯೇ ಇಲ್ಲದಂತಾಗಿ ಹೋಗಲಿ.]-ಇಂತಹ ದಿವ್ಯ ಯಾಚನೆಗಳೇ ತುಂಬಿದೆ. ಮತ್ತೆ ಪರನಾಶಕ್ಕಾಗಿ ಪರಮೇಶ್ವರನ ಮುಂದೆ ಸೆರಗೊಡ್ಡಿ ಮೊರೆಯಿಡುವ ಪರಿಯಾದರೂ ಎತ್ತ?

---

* ಆಭಾ – ಎಂದರೆ ಜ್ಯೋತಿ. ಜ್ಞಾನ ಪ್ರಕರಣವಿರುವುದರಿಂದ, ಈ ಆಭಾ ಜ್ಞಾನವೇ ಸರಿ. ಆಭಾ - ಲಾಭವೆಂದರೆ ಜ್ಞಾನದ್ಯುತಿಯ ಪ್ರಾಪ್ತಿ.

---

* ಶ್ರೀ॥ ಮಧ್ವರು "ಅಂತಮಾನಾಂ" – ಎಂಬುದಕ್ಕೆ 'ಅಂತೇ ಮಿತಾನಾಂ' – 'ಕೊನೆಗೆ ಅಳತೆಗೆ ಅಂದುವವರ" – ಎಂದೂ, 'ಅಂತೇ ಮಿತಾಃ ತ್ವದ್ವಿಷಯಾಃ' 'ಕೊನೆಯಲ್ಲಿ ನಿನ್ನ ವಿಷಯಗಳು ಅಳತೆಗೆ ಅಂದತಕ್ಕವು' - ಎಂದೂ ಹೇಳಿದ್ದಾರೆ.

ಹೀಗೆ ಈ ಮಂತ್ರದ ಭಾಷ್ಯ ತೀರುತ್ತಲಿದೆ. ಅಂತಮಾರ-ಎಂದರೆ ಭಗವಂತನ ಅತಿಸಮೀಪವಿದ್ದು, ಅವನ ಸಾಕ್ಷಾತ್ಕಾರ ಮಾಡಿಕೊಂಡ, ಉತ್ತಮ ಮತಿಮಂತರ ಸಂಗದಿಂದ ಉತ್ಕೃಷ್ಟ ಬುದ್ಧಿಗಳ ಪ್ರಾಪ್ತಿಯಿಂದ ನಾವು ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಆ ಪರಮಾತ್ಮನೇ ನಮ್ಮನ್ನು ವರ್ಜಿಸದೆ, ಸದಾ ಅಂತ:ಪ್ರೇರಣೆಯನ್ನು ನೀಡುತ್ತಿರಬೇಕು. ನಮ್ಮ ಹಾರ್ದಿಕಾನುಭವಕ್ಕೆ ಪರಮಾತ್ಮ ಬರುತ್ತಿರಬೇಕು. ಇಷ್ಟು ನೆನಪಿದ್ದರೆ, ವೇದಗಳ ಹಿರಿಮೆಯನ್ನರಿಯಲು ಕಷ್ಟವಾಗದು.

ಸಂಹಿತಾ ವಿಭಾಗ

**ಪರೇಹಿ ವಿಗ್ರ ಮಸ್ತೃತ ಮಿಂದ್ರಂ ಪೃಚ್ಛಾ ವಿಪಶ್ಚಿತಂ ।**

**ಯಸ್ತೇ ಸಖಿಭ್ಯ ಆ ವರಂ ॥೪॥**

**ಪದಪಾಠ:–** ಪರಾ, ಇಹಿ, ವಿಗ್ರಂ, ಅಸ್ತೃತಂ ಇಂದ್ರಂ, ಪೃಚ್ಛ, ವಿಪಶ್ಚಿತಂ, ಯಃ, ತೇ, ಸಖಿಭ್ಯಃ, ಆ, ವರಂ ॥೪॥

**ಅನ್ವಯ:–** ಪರಾ ಇಹಿ, ಯಃ ತೇ ಸಖಿಭ್ಯಃ ಆ ವರಂ, (ತಂ) ವಿಗ್ರಂ. ಅಸ್ತೃತಂ ವಿಪಶ್ಚಿತಂ ಇಂದ್ರಂ ಪೃಚ್ಛ ।

**ಶಬ್ದಾರ್ಥ:–** ಓ ಮಾನವ! [ಪರಾ ಇಹಿ] ದೂರಕ್ಕಾದರೂ ತೆರಳು. [ಯಃ] ಯಾವನು, [ತೇ] ನಿನ್ನ, (ಹಾಗೂ) [ಸಖಿಭ್ಯಃ] ಸ್ನೇಹಿತರ, ಋತ್ವಿಕ್ಕುಗಳ ಸಾಲಿಗೆ, [ಆ] ನಿರಂತರವೂ, ಸತತವಾಗಿ, [ವರಂ] ಉಳಿದ ಎಲ್ಲಕ್ಕಿಂತಲೂ ಅಧಿಕ ಅಪೇಕ್ಷಣೀಯ ತತ್ತ್ವವಾಗಿದ್ದಾನೋ [ತಂ ವಿಗ್ರಂ] ಆ ಮೇಧಾವಿಯೂ. [ಅಸ್ತೃತಂ] ಅಹಿಂಸಕನೂ, ಅಹಿಂಸಿತನೂ, [ವಿಪಶ್ಚಿತಂ] ಚೇತನನೂ, ವಿದ್ವಾಂಸನೂ, ಆಪ್ತನೂ ಆದ, [ಇಂದ್ರಂ] ಜೀವಮಾತ್ರರ ಮೇಲೆ ದಯೆಯನ್ನು ತೋರಿಸುವವನೂ, ಜೀವರ ಅಂತರ್ಯಾಮಿಯಾಗಿ ರಮಿಸುವವನೂ, ಆಗಿರುವ ಸರ್ವೇಶ್ವರನ ಹತ್ತಿರಕ್ಕೆ, [ಇಹಿ] ಹೋಗು. [ಪೃಚ್ಛ] ಪ್ರಶ್ನಿಸು."

**ತಾತ್ಪರ್ಯ:–** ಜಿಜ್ಞಾಸುವಾದ ಮಾನವ ಕೇವಲ ಆಹಾರ - ಪಾನೀಯಗಳಿಂದ, ಆಸ್ತಿ - ಪಾಸ್ತಿಗಳಿಂದ, ಮನೆ - ಮಠಗಳಿಂದ ಹಾಗೂ ಅಕ್ಷರವಿದ್ಯಾ ವಿಜೃಂಭಣೆದಿಂದ ತೃಪ್ತನಾಗನು. ಅವನ, ಹಾಗೂ, ಅವನ ಸ್ನೇಹಿತರಾದ ಋತ್ವಿಕ್ಕುಗಳ ಲಾಭಮಾತ್ರದಿಂದ ಅವನು ಶಾಂತಿಯ ಉಸಿರನ್ನು ಎಳೆಯಲಾರನು. ಆದಕಾರಣ, ವೇದಗಳು ಅಸದೃಶವಾದ

**ಈ ಚತುರ್ಥ ಸೂಕ್ತ ತೃತೀಯ ಮಂತ್ರದ ಭಾಷ್ಯದ ಪೂರ್ಣವೆಚ್ಚ**
**ಶ್ರೀಮತಿ ಕಸ್ತೂರಿ ದೇವಿ ಎಂ. ಸದಾನಂದ ಕಿಣಿ**
**ಬಹದೂರ ಗಢ್, ಹರಿಯಾಣ ಇವರ ಸೇವೆ.**

ಆಶ್ಚರ್ಯಕರವೆನ್ನಿಸಿಕೊಳ್ಳಬಹುದಾದ ಉಪಾಯ ಒಂದನ್ನು ಮಾನವ ಮಾತ್ರರ ಮುಂದೆ ಮುಚ್ಚು - ಮರೆಯಿಲ್ಲದ ಮಾತುಗಳ ಮೂಲಕ ಮಂಡಿಸುತ್ತಿದೆ. ಮಾನವ ತನ್ನ ಬಲ್ಮೆ-ಬಲಗಳ ಬಗೆಗೆ ಬಲ್ಲನು; ತಾನು ಸರ್ವಜ್ಞನಲ್ಲದ ಕಾರಣ, ತಾನು ಆರಿಸಿಕೊಳ್ಳಬಹುದಾದ ಪಥ ಪ್ರಶಸ್ತವೇ ಆಗಿರುವುದು ಸಂಭವವಲ್ಲ - ಎಂದು ಬಲ್ಲ, ಅದಕ್ಕಾಗಿಯೇ ಆರಾಧಕ ಆರಾಧ್ಯನಲ್ಲಿ ಅತ್ಯಂತ ಆಳವಾದ ವಿನಯದಿಂದ ಮೊರೆಯಿಡುತ್ತಾನೆ:-

**ಮೂರಾ ಅಮೂರ ನ ವಯಂ ಚಿಕಿತ್ವೋ**
**ಮಹಿತ್ವಮಗ್ನೇ ತ್ವಮಂಗ ವಿತ್ಸೇ** ॥ [ಋಕ್:- 10. 4. 4.]

"[ಅಮೂರ = ಅಮೂಢ] ಓ ನಿರ್ಮೋಹನಾದ, ನಿರ್ಭ್ರಮನಾದ - ಸರ್ವಜ್ಞನೇ! [ಮೂರಾ: ವಯಂ] ಮೂಢರಾದ ನಾವು, [ನ] ತಿಳಿಯೆವು, [ಚಿಕಿತ್ವಃ] ಓ ಪ್ರಜ್ಞಾನ ಸ್ವರೂಪ! [ಅಂಗ] ಪ್ರಿಯನೇ! ಜೀವನದ ಅಭಿನ್ನವಾದ ಅಂಗವೇ ಆದ, [ಅಗ್ನೇ] ಜ್ಯೋತಿರ್ಮಯ! [ತ್ವಂ] ನೀನು, [ಮಹಿತ್ವಂ] ಮಹಿಮೆಯನ್ನು [ವಿತ್ಸೇ] ತಿಳಿದಿರುವೆ." ಮಾತ್ರವಲ್ಲ:-

**ತ್ವಂ ಹಿ ನಸ್ತನ್ವ: ದೇವ ಗೋಪಾ**
**ಗಾತ್ರೇ ಗಾತ್ರೇ ನಿಷಸತ್ಥ ನೃಚಕ್ಷಾಃ॥** [ಋಕ್:- 8, 48. 9.]

"[ದೇವ] ಓ ಉದಾರಾಶಯನಾದ ಪ್ರಕಾಶವಾನ್ ಈಶ್ವರ! [ತ್ವಂ ಹಿ] ನೀನೇ, [ನಃ ತನ್ವಃ] ನಮ್ಮ ದೇಹಗಳ, [ಗೋಪಾಃ] ರಕ್ಷಕನಾಗಿದ್ದೀಯೇ. [ನಚಕ್ಷಾಃ] ಮಾನವೀಯ ದೃಷ್ಟಿಯುಳ್ಳವನಾಗಿ, [ಗಾತ್ರೇ ಗಾತ್ರೇ] ಅಂಗ-ಅಂಗದಲ್ಲಿಯೂ [ನಿಷಸತ್ಥ] ವ್ಯಾಪಕನಾಗಿದ್ದೀಯೇ." ವ್ಯಕ್ತಿ ವ್ಯಕ್ತಿಯ ಅಂಗ ಅಂಗದಲ್ಲಿಯೂ ವ್ಯಾಪಕನಾಗಿದ್ದು, ಆ ಪರಂಜ್ಯೋತಿಃ ಸ್ವರೂಪನು ನಮ್ಮನ್ನೆಲ್ಲಾ ರಕ್ಷಿಸುತ್ತಾ ಇರುತ್ತಾನೆ. ಆ ಜ್ಞಾನಸ್ವರೂಪನನ್ನೇ ಗುರುವಾಗಿ ಆರಿಸಿಕೊಂಡಾಗ, ಮಾನವನ ಜೀವನದ ವೈಖರಿಯೇ ಬೇರೆಯಾಗಿ ಹೋಗುತ್ತದೆ. ಸರ್ವಜ್ಞನಲ್ಲಿ ನಮ್ಮ ನಿವೇದನವಾದರೂ ಏನು? ಇದೇ;-

**ಅದಿತೇ ಮಿತ್ರ ವರುಣೋತಮೃಳ ಯದ್ವೋವಯಂ ಚಕೃಮಾ ಕಚ್ಚಿದಾಗಃ।**
**ಉರ್ವಶ್ಯಾಮಭಯಂ ಜ್ಯೋತಿರಿಂದ್ರ ಮಾ ನೋ ದೀರ್ಘಾ ಅಭಿನಶನ್**
**ತಮಿಸ್ರಾಃ॥**
[ಋಗ್ವೇದ:- 2. 27. 14.]

"[ಅದಿತೇ] ಪ್ರಾಮಾಣಿಕನಾದ ಸಜ್ಜನನೇ! [ಮಿತ್ರ] ಸ್ನೇಹಭಾವನಾ ಪ್ರೇರಿತ ಭದ್ರಪುರುಷನೇ! [ಉತ] ಮತ್ತು, [ವರುಣ] ಪರದುಃಖಾಪಹಾರಕನಾದ, ವರಣೀಯ ಮಾನವೋತ್ತಮನೇ! [ವಯಂ] ನಾವು, [ಕಚ್ಚಿತ್] ಯಾವಾಗಲಾದರೂ, [ವಃ] ನಿಮ್ಮಗಳಿಗೆ [ಯತ್ ಆಗಃ ಚಕೃಮಃ] ಏನಾದರೂ ಅಪರಾಧ ಮಾಡಿದ್ದಲ್ಲಿ, [ಮೃಳ] ಅದಿತೇ! ಕ್ಷಮಿಸು. [ಮೃಳ] ಮಿತ್ರನೇ! ಕ್ಷಮಿಸು. [ವರುಣ! ಮೃಳ] ವರುಣನೇ ಕ್ಷಮಿಸು

[ಇಂದ್ರ] ಸಂಯಂತೇಂದ್ರಿಯನಾದ ಜೀವನೇ! ಸರ್ವೈಶ್ವರ್ಯ ಸಂಪನ್ನನಾದ ಈಶ್ವರನೇ, [ಅಭಯಂ] ಭಯರಹಿತವಾದ, [ಉರುಜ್ಯೋತಿಃ] ವಿಶಾಲವಾದ ಜ್ಞಾನದ್ಯುತಿಯನ್ನು, [ಅಶ್ಯಾಂ] ಅನುಭವಿಸುವೆ, [ದೀರ್ಘಾಃ ತಮಿಸ್ರಾಃ] ದೀರ್ಘವಾದ ಅಜ್ಞಾನಾಂಧಕಾರಗಳು, [ನಃ] ನಮ್ಮನ್ನು [ಮಾ ಅಭಿನಶನ್] ಮುತ್ತಿಕೊಳ್ಳದಿರಲಿ." ಗೀತದ ಪಲ್ಲವಿಯೊಂದೇ. ಜ್ಞಾನವಿಲ್ಲದ ಮಾನವ ಬೇರೆ ಏನು ಬೇಕಾದರೂ ಆದಾನು; ಮಾನವ ಮಾತ್ರ, ಮನುಷ್ಯ ಮಾತ್ರ ಆಗಲಾರನು. ಬೇರೆ ಮತ-ಮತಾಂತರಗಳ ಉಪದೇಶದ ಅಪಶ್ರುತಿ ಏನಾದರೂ ಆಗಿರಲಿ; ವೇದಧರ್ಮದ ಅಲೌಕಿಕ, ಆಧ್ಯಾತ್ಮಿಕ ರಾಗಾಲಾಪನೆ ಮಾತ್ರ ಸರ್ವದಾ, ಸರ್ವಥಾ, ಸರ್ವತ್ರ, ಸರ್ವರಿಗೂ ಒಂದೇ ಒಂದು. **ಜ್ಯೋತಿಷ್ಮತ: ಪಥೋರಕ್ಷ ಧಿಯಾ ಕೃತಾನ್."** [ಋಕ್:-10,53.6.] **"ಮನುರ್ಭವ ಜನಯಾ ದೈವ್ಯಂಜನಂ."** [ಋಕ್ 10. 53. 6.] "ಓ ಮಾನವ! ಬುದ್ಧಿಪೂರ್ವಕವಾಗಿ ನಿರ್ಮಿಸಲ್ಪಟ್ಟ, ಜ್ಯೋತಿರ್ಮಯವಾದ ಮಾರ್ಗಗಳನ್ನು ರಕ್ಷಿಸಿಕೊಂಡು ಹೋಗು."; "ಸ್ವತಃ ಮನನ ಶೀಲನಾಗು; ದಿವ್ಯಗುಣ-ಕರ್ಮ-ಸ್ವಭಾವಗಳಿಂದ ವಿಭ್ರಾಜಮಾನರಾನ ಜನರನ್ನು ರೂಪಿಸು." ಕೊನೆಗೆ, **"ನಭೋ ನ ರೂಪಂ ಜರಿಮಾ ಮಿನಾತಿ ಪುರಾ ತಸ್ಯಾ ಅಭಿಶಸ್ತೇರಧೀಹಿ."** [ಋಕ್:- 1 71. 10,] "ಓ ಆಚಾರ್ಯತಮ ದೇವ ದೇವ: ಓ ಗುರುಗಳ ಗುರುವೇ! ಮುಪ್ಪು ರೂಪವನ್ನು ಆಗಸದಂತೆ ಶೂನ್ಯಗೊಳಿಸುತ್ತದೆ. ಆ ವೃದ್ಧಾಪ್ಯವೆಂಬ ಅಭಿಶಾಪ ನಮ್ಮ ಮೇಲೆರಗುವ ಮುನ್ನವೇ, ನಮಗೆ ಜ್ಞಾನ-ಪ್ರದಾನಮಾಡು."

ವೇದ-ಎಂದರೇ ಜ್ಞಾನ; ಜ್ಞಾನವಿಲ್ಲದ ವೇದಧರ್ಮ, ಮೂಕನಾದವನ ಸಂಗೀತ ಸಮಾರಂಭದಂತೆ, ಕುರುಡನ ಸೌಂದರ್ಯಾವಲೋಕನದಂತೆ, ನಿಷ್ಕರುಣನಾದ ದಯಾಮಯನಂತೆ ಅಸಭ್ಯನಾದ ಸಭ್ಯನಂತೆ, ಕೇವಲ ಕಪೋಲಕಂಪನ ಮಾತ್ರ, ಅರ್ಥವಿಲ್ಲದ ಒಡಕು ಶಬ್ದಗಳ ಸದ್ದು ಮಾತ್ರ!

ಗುರು ಬೇಕು; ಆಚಾರ್ಯ ಬೇಕು, ಎಂತಹ ಸಿಕ್ಕುಗಟ್ಟಿದ ಸಮಸ್ಯೆಗೂ ಸಮಂಜಸವಾದ ಸಮಾಧಾನ ಪ್ರದಾನಮಾಡಬಲ್ಲ ಪಥಪ್ರದರ್ಶಕ ಬೇಕು. ಯಾರಿದ್ದಾರೆ ಈ ಬಗೆಯ ನಿರ್ಭ್ರಾಂತ ವಿಜ್ಞಾನಸಂಪನ್ನ ಗುರುಗಳು? ಬಹುವಚನ ಪ್ರಯೋಗ ಗೌರವ ಪ್ರದರ್ಶನಕ್ಕೆ ಎಂಬ ಅಂಶವನ್ನುಳಿದರೆ, 'ಗುರುಗಳು,' – ಎಂಬ ಪ್ರಯೋಗಕ್ಕೆಡೆಯಿಲ್ಲ. ಏಕೆಂದರೆ - ಆಧ್ಯಾತ್ಮಿಕೋತ್ಕರ್ಷಕ್ಕೆ, ಅಂತಹ ಬಿಡುಗಡೆಗೆ ನೆರವಾಗಬಲ್ಲನೊಬ್ಬನೇ ಒಬ್ಬನಿದ್ದಾನೆ. ಭಗವಂತ, ದೇವರು, ಈಶ್ವರ, ಪರಮಾತ್ಮ, ನಾರಾಯಣ, ಶಿವ, ವಿಷ್ಣು, ಖುದಾ, ಅಲ್ಲಾಹ್ ಅರ್ಹಂತ, ಬುದ್ಧ, ಗಾಡ್, ಲಾರ್ಡ, ಜೆಹೋವಾ, ಅಹುರಮಜದಾ ಈ ಎಲ್ಲಾ ಹೆಸರುಗಳಿಂದ ಸೂಚಿತನಾಗುವ ವಿರಾಡಾತ್ಮನೇ ಆ ಸರ್ವಜ್ಞ ಆಚಾರ್ಯ. ಈ ಹೆಸರುಗಳಿಂದ ನಿರ್ದೇಶಿಸಲ್ಪಡುವ ದೇವರುಗಳಿಗೆ - ಆಯಾ ಆಕಾರದ ದೇವರುಗಳು ಸ್ವಯಂ ಕಪೋಲಕಲ್ಪಿತರೇ ಆಗಿದ್ದಾರೆ. ಭಕ್ತಾಗ್ರಗಣ್ಯರು ತಮ್ಮ ಕಲ್ಪನಾಲೋಕದ ದೇವರುಗಳಿಗೆ ಚಿತ್ರ-ವಿಚಿತ್ರವಾದ ಆಕೃತಿಗಳನ್ನಿತ್ತರೆ, ಅದು ಆ ಭಗವಂತನ, ಭಗವಂತರುಗಳ ಎನ್ನೋಣವೋ ತಪ್ಪಲ್ಲ.

ಅಂತಹ, ದಾರಿತಪ್ಪಿಸದ, ಉದ್ದಿಷ್ಟ ಸ್ಥಿತಿಯ ಕಡೆಗೇ ಕರದೊಯ್ಯುವ ಪಥವನ್ನು ತೋರಿಸಬಲ್ಲವನು ಆ ಭಗವಂತನೊಬ್ಬನೇ. **"ಅಗ್ನೇ ನಯ ಸುಪಥಾ"** [ಯಜು: 40 16.] - "ಓ ಸರ್ವಾಗ್ರಣಿ! ಸನ್ಮಾರ್ಗದಿಂದ ನಮ್ಮನ್ನು ಕರೆದೊಯ್ಯು." - ಎಂದು ಮುಮುಕ್ಷು ಬೇಡಿಕೊಳ್ಳುವುದು ಅದೇ ದೇವಾಧಿದೇವನನ್ನೇ. **"ಶಿಕ್ಷಾಣೋ ಇಂದ್ರ ರಾಯೇ."** [ಋಕ್:– 8. 92. 9.] - "ಓ ಸರ್ವಸಂಪತ್ಸಂಪನ್ನ ಅಂತರಾತ್ಮನ್! ಸತ್ಸಂಪಾದನೆಗಾಗಿ ನಮಗೆ ಶಿಕ್ಷಣಕೊಡು." ಮತ್ತು:–

**ಶಿಕ್ಷೇಯಮಸ್ಮೈ ದಿತ್ಸೇಯಂ ಶಚೀಪತೇ ಮನೀಷಿಣೇ।**
**ಯದಹಂ ಗೋಪತಿಃ ಸ್ಯಾಮ್॥** [ಋ.ಕ್:– 8. 14. 2.]

"[ಶಚಿಪತೇ] ಪ್ರತಿಭಾ–ಪ್ರಜ್ಞಾನ–ವಿಜ್ಞಾನಯುಕ್ತ ವಿದ್ಯೆಯ ಸ್ವಾಮಿಯೇ! [ಅಹಂ] ನಾನು, [ಯತ್ ಗೋಪತಿಃ ಸ್ಯಾಮ] ವೇದಜ್ಞಾನದ ಒಡೆಯನೂ, ವಾಕ್ಶಕ್ತಿಯ ಮೇಲೆ ಅಧಿಕಾರವನ್ನುಳ್ಳವನೂ ಆದರೆ, ಜಿತೇಂದ್ರಿಯನಾಗಿ ವೇದ ವಿಹಾರಿಯಾದರೆ [ಮನೀಷಿಣೇ] ಮನಃಪ್ರೇರಕನಿಗೆ, [ಶಿಕ್ಷೇಯಂ] ಶಿಕ್ಷಣ ಕೊಡುವೆನು: [ಅಸ್ಮೈ] ಅಂತಹ ಮನೀಷಿಗೆ, ಅಥವಾ ಮನೋಜಾಗೃತಿಗೆ, [ದಿತ್ಸೇಯಂ] ಕೊಡಲಿಚ್ಛಿಸುವೆನು." ಕಲಿಯುವುದು ಪರಮೋತ್ತಮಾಚಾರ್ಯನಾದ ಸರ್ವಜ್ಞನಿಂದ; ಕಲಿಸುವುದು ತನಗಿಂತ ಕಡಿಮೆ ತಿಳಿದವರಾದ ಮಾನವರಿಗೆ. **"ಶಿಕ್ಷಾ ಚನೋ ಅಧಿ ಚ ಬ್ರೂಹಿ ದೇವ."** - "ಓ ದೇವದೇವ! ನಮಗೆ ಶಿಕ್ಷಣ ಕೊಡು; ಉಪದೇಶ ಮಾಡು." - ಎಂಬ ಋಗಭ್ಯರ್ಥನೆ (ಋಗ್ವೇದೀಯ ಪ್ರಾರ್ಥನೆ), ಯಾವ ವಿದ್ವಾಂಸನ ದೃಷ್ಟಿಯಿಂದ ನುಣುಚಿಕೊಳ್ಳಲು ಸಾಧ್ಯ?

ಅಹುದು. ಎಡಹಿ-ಎಡಹಿ, ಪ್ರೌಢಮಿಯ ಕಡೆಗುರುಳಿ, ಹುಡಿಯ ಸವಿಯನ್ನು ಸವಿಯುವುದೂ ಉಂಟುಮಾನವ; ಸಟೆಯನ್ನೇ ದಿಟವೆಂದೂ, ಮಿಥ್ಯೆಯನ್ನೇ ತಥ್ಯವೆಂದೂ ತಿಳಿದು ಮುಗ್ಗರಿಸುವುದೂ ಉಂಟು. ಈ ಪ್ರತಿಕೂಲ ಪರಿಸ್ಥಿತಿಯಿಂದಾಗಿ. ಅಲ್ಪಜ್ಞ,-ಅಲ್ಪಶಕ್ತಿ ಜೀವ ಪಥಭ್ರಷ್ಟನಾಗಿ, ಇತ್ತ ಐಹಿಕಸುಖವೂ ಇಲ್ಲ; ಅತ್ತ ಆಮುಷ್ಮಿಕ ಸುಖವೂ ಇಲ್ಲ. ಆದಕಾರಣ, ವೇದಗಳು ಮಾನವನ ಮನಸ್ಸಿನ ಅದಾವುದೋ ತಳಕಾಣದ, ಬೆಳಕಿಲ್ಲದ ಕಮರಿಗೆ ಉರುಳಿ, ಪರಿತಪಿಸಿ, ಸರಿಯಾದ ಗುರಿಯರಿಯುವ. ಅರಿತುದನ್ನು ಅರುಹಿ ಅರುಹಿ, ಅನ್ಯರನ್ನೂ ಧನ್ಯರೆನಿಸುವಂತಹ ಆ ಸಿಹಿಯಾದ ಸಾರ್ವಭೌಮ-ಸಾರ್ವಕಾಲಿಕ ಸದ್ಧರ್ಮದ ಸುಖಮಯವಾದ ಸುಪಥಕ್ಕೆ ಸರಿಹೊಂದಿಸುವ ಸತ್ಕರ್ಮವನ್ನು ಸಾಫಲ್ಯ ಸಮೇತ ಸಾಧಿಸಬಲ್ಲ ಸದ್ಗುರುವಿನ ದರ್ಶನ ಸರ್ವರಿಗೂ ಸಿಕ್ಕೀತೇ? ಸರ್ವತ್ರ ಸಿಕ್ಕಿಯಾರೇ? ಎಂಬ-ಕಳವಳದ ತಳಮಳದ, ತೆರೆಸರಿಸಿ. ಬೆಳಕನ್ನೆರಚಿ, ಈ ನೆಲವನ್ನೇ ಸಗ್ಗದ (ಸ್ವರ್ಗದ) ಸುಂದರ-ಬಂಧುರ ಸ್ಥಳವಾಗಿ ಮಾರ್ಪಡಿಸಬಲ್ಲ ಸದ್ಗುರುಗಳು ಇದ್ದಾರೆಯೇ?-ಎಂಬ ಪ್ರಶೆ ಮೂಡುವುದು ಪರಮಸಹಜ. ಉತ್ತರ ಲಭಿಸುವುದೂ ಅಷ್ಟೇ ಸಹಜ. ಆದರೆ, ಅಂತಹ ಗುರುಗಳನ್ನು ನರಸಮಾಜದಲ್ಲಿ ಅಲ್ಲ; ಪರಮೇಶ್ವರನಲ್ಲಿ ಮಾತ್ರ ಗುರುತಿಸಬಹುದು.

**ಮಾನವ** ಮುಂಗ್ಗರಿಸುವನೆಂಬ ವಾಸ್ತವಿಕತೆ ಸರ್ವಜ್ಞನರಿಯನೇನು? ಬಲ್ಲ; **ಬಲಿಷ್ಠವಾದ ಪ್ರಮಾಣಗಳಿಂದಲೇ** ಬಲ್ಲ: ಅಗ್ರಣಿ ಬೇಕು; ಉಗ್ರನಾಗಿ, ವ್ಯಗ್ರನಾಗಿ ದಾರಿ **ಯನ್ನೇ** ಮರೆಯುವ. ಕೊರಗುವ.-ಮರುಗುವ ಮಾನವ, ಅಂತಹ ವಿಶ್ವಾಸಾರ್ಹನಾದ ಗುರು **ವಾಗಲಾರನು.** ಆದಕಾರಣ, ಸತ್ಯದ ಮಾರ್ಗವನ್ನು ಮರೆಯುವ ಮಾನವನ ಮಾರ್ಗ ದರ್ಶನ ದಿಕ್ಸಂಕೇತ, ಕೇವಲ ಕತ್ತಲೆಯ 'ಕಸದ ಗುಂಡಿಗೆ' ಎಸೆಯಬೇಕಾದ ಹುಸಿ-ಬಗೆಯ ಹುಸಿ-ನುಡಿಯ ಹಾಗೂ ಹುಸಿ-ಕೃತಿಯು ಹೊಲಸಿನ ಕುಪ್ಪೆ (ಗುಪ್ಪೆ?)ಯೇ ಆಗಿರಬೇಕು. ಮಾನವನ ದಿಕ್ಸೂಚಿದರ್ಶನ-ಎಂಬ ನುಡಿ ಸದಾಕಾಲಕ್ಕೂ ಸತ್ಯವೇ-ಎಂಬ ತೀರ್ಮಾನಕ್ಕೂ ಬರಬಾರದು, ನೂರಾರು ಜನ ಉಪಾಸನೀಬಾಬಾಗಳ, ಶಿರಡಿಯ ಸಾಯೀಬಾಬಾಗಳ, ಪುಟ್ಟ **ಪರ್ತಿಯ** ಸತ್ಯಸಾಯೀಬಾಬಾಗಳ ನಡುವೆ, ಒಬ್ಬ ದಯಾನಂದ ಇರಬಹುದು: ಒಬ್ಬ ಮಧುರಾದಾಸನೂ ಇರಬಹುದು. ಆದುದರಿಂದ, ದೀಕ್ಷಾ ನಿರ್ಣಯ ಮಾಡುವ ಮುನ್ನ, ಈ ಬಾಬಾ ಒಂದು ಮಿಡತೆಯೋ ಅಥವಾ ಪಿಡುಗೋ ಎಂಬಂಶವನ್ನೂ ಗಂಭೀರವಾಗಿ ಆಲೋಚಿಸಬೇಕಾದೀತು, ಈಶ್ವರೀಯವಾಣಿಯ ಪರಿಧಿಯೊಳಕ್ಕೇ ಬೀಳುವ ಈ ಸಮಸ್ಯೆಗೆ ಸಮರ್ಪಕವೇ ಆದ ಪರಿಹಾರವನ್ನು ಪ್ರತ್ಯಕ್ಷವಾಗಿಯೇ ಪ್ರಕಾಶಪಡಿಸುತ್ತಿದೆ **ಈ ಮಂತ್ರ:-**

**ಅಪಕ್ರಾಮನ್ ಪೌರುಷೇಯಾದ್ವೃಣಾನೋ ದೈವ್ಯಂ ವಚಃ।**
**ಪ್ರಣೀತೀರಭ್ಯಾವರ್ತಸ್ವ ವಿಶ್ವೇಭಿಃ ಸಖಿಭಿಃ ಸಹ॥**

[ಅಥರ್ವ:- 7. 105. 1.]

"ಓ ಮಾನವ! [ಪೌರುಷೇಯಾತ್] ಮಾನವಪ್ರೋಕ್ತವಾದ, [ವಚಃ] ಮಾತನ್ನು [ಅಪಕ್ರಾಮನ್] ಬದಿಗೆ ಒತ್ತರಿಸುತ್ತಾ, [ದೈವ್ಯಂ ವಚಃ] ದೈವೀವಾಣಿಯಾದ. ಈಶ್ವರೋಕ್ತ ವಾದ ನುಡಿಯನ್ನು, [ವೃಣಾನಃ] ಅಂಗೀಕರಿಸುತ್ತಾ, [ವಿಶ್ವೇಭಿಃ ಸಖಿಭಿಃ ಸಹ] ಸಮಸ್ತ ಸ್ನೇಹಿತರೊಂದಿಗೂ, [ಪ್ರಣೀತೀಃ] ಉತ್ತಮವಾದ ನೀತಿಗಳನ್ನು, [ಅಭಿ ಆ ವರ್ತಸ್ವ] ಎಲ್ಲೆಡೆ ಯಿಂದಲೂ, ಅವಿಚ್ಛಿನ್ನವಾಗಿ, ವ್ಯವಹರಿಸುತ್ತಾ ನಡೆ."

ಇನ್ನೇಕೆ ಸಂದೇಹ? ಇನ್ನೇಕೆ ಸದೇಹ-ವಿದೇಹ **ಅಸ್ತಿತ್ವದ** ಚರ್ಚೆ? ಮಾರ್ಗ ದರ್ಶಕ ಬೇಕು; ಎಂದಿಗೂ ತಾನೇ ದಾರಿತಪ್ಪದ, ಯಾರಿಗೂ ದಾರಿತಪ್ಪಿಸದ ಆಚಾರ್ಯ ಪ್ರವರರ ಪ್ರಸಾದ-ದಾನಕ್ಕಾಗಿ ಚಾಚಿದ ಕೈ, ಆಶೀರ್ವಾದದ ಕೃಪಾ-ಛತ್ರವಾಗಿ ಮುನ್ನಡೆ ಯಿಸಲೇಬೇಕು, ಮತ್ತೆ ಮರುಳಾಗುವ, ಗುರುವಲ್ಲದವನನ್ನು ಹಿರಿಯನೆಂದರಿತು ಮುಗ್ಗರಿ ಸುವ ಸ್ಥಿತಿ ಬೇಡವೇ ಬೇಡ. ಮಾರ್ಗವನ್ನು ಮರೆಯಿಸುವ, ಮಾನವನ ಬೆನ್ನಿಗಂಟಿಕೊಂಡು ಮತ್ತೆ ಮರುಗುವ ಮೌಢ್ಯ ಮೂರ್ಖಾತಿಮೂರ್ಖನಿಗೂ ಬೇಡ. ಹಾಗಾದರೆ, ಅಂತಹ ಧೀರ-ವೀರನಾದ, ಹೆದರಿಕೆ ಬೆದರಿಕೆಗಳಿಗೆ, ಹೊಗಳಿಕೆ-ತೆಗಳಿಕೆಗಳಿಗೆ, ವಿಕಾಸ-ಹ್ರಾಸಗಳಿಗೆ ಬಾಳಿನ ಸಿಹಿ-ಕಹಿಗಳಿಗೆ ಅಂಜದೆ ಮುಂದುಮುಂದಕ್ಕೆಯೇ ಗಜ-ಗಂಭೀರ-ಗತಿಯಿಂದ, ಸ್ವ ಸಾಮರ್ಥ್ಯವ ಒಗ್ಗನ್ನರಿತ ಕುಮಾರ-ಕಂಠೀರವನಂತೆ, ಆಧ್ಯಾತ್ಮಿಕ-ಔನ್ನತ್ಯದ ಉತ್ತುಂಗ

**ಶಿಖರಕ್ಕೆ** ಆರೋಹಣಗೈಯುವ ಅವಿಕೃತವಾದ ವೈಮೇಸ್ಫೂರ್ತಿಯಿಂದ ಮುನ್ನಡೆಯುವ **ಅವಿಚ್ಛಿನ್ನ**ಗತಿಯುಂ ಗುರು ಮಾನವ ಸಮಾಜದಲ್ಲಿ ಸಿಕ್ಕುವುದಿಲ್ಲವೆಂದ ಮೇಲೆ, ಮತ್ತಾರು ಗತಿ?

ಭಗವದ್ವಾಣಿಗಳಾದ ಚತುರ್ವೇದಗಳಲ್ಲಿ ಮೊದಲನೆಯದು ಋಗ್ವೇದ. ಋಗ್ವೇದದ ಪ್ರಥಮಮಂಡಲದ, ಪ್ರಥಮಸೂಕ್ತದ ಪ್ರಥಮಮಂತ್ರದ ಪ್ರಥಮ ಶಬ್ದವೇ ಅಗ್ನಿ. ಅಹುದು ಅಗ್ನಿ. ಆದರೆ, ಈ ಅಗ್ನಿ ಬೆಂಕಿಯೇ? ಯಜ್ಞಯಾಗಾದಿಗಳಿಗೆ ಬೇಕಾದ ಕೆಂಡವೇ ಈ **ಅಗ್ನಿ**? ಲೌಕಿಕ-ಸಂಸ್ಕೃತದ ಅಷ್ಟಿಷ್ಟು ಅರಿವನ್ನು ಗಳಿಸಿದವರು, ಅಥವಾ ಗಳಿಸಿದವರ ಹಿಂಬಾಲಕರು ತಾವು ಎಂದುಕೊಳ್ಳುವ. ಆತ್ಮವಿದ್ವತ್ತ್ವದಲ್ಲಿ ಆವಶ್ಯಕತೆಗಿಂತ ಹೆಚ್ಚು ನಂಬಿಕೆಯುಳ್ಳ, ಗೌರ ವರ್ಣೀಯರ ಕೃಷ್ಣವರ್ಣೀಯ **ಶಿಷ್ಯರು** – ಎಂದು ತೋಡಿಕೊಳ್ಳುವುದೇ ಸರ್ವಜ್ಞತ್ವದ ನಿರ್ವಿವಾದವಾದ ಪ್ರಮಾಣಪತ್ರವೆಂದು ಭಾವಿಸಿರುವ ಭಾರತೀಯರೇನೋ ಅಗ್ನಿ ಎಂದರೆ ಬೆಂಕಿ - ಎಂದೇ ಹೇಳಿಬಿಡುತ್ತಾರೆ. ಸ್ವತಃ ವೈದಿಕಸಾಹಿತ್ಯ ಈ ಮಾತನ್ನು ಪೋಷಿಸಲು ಸಾಕಷ್ಟು ಬಲಿಷ್ಠವಾದ ಪ್ರಮಾಣಗಳನ್ನು ಹೊಂದಿಲ್ಲ. ನಿರುಕ್ತಕಾರರು – **"ಅಗ್ನಿಃ ಕಸ್ಮಾತ್?** ಅಗ್ರಣೀರ್ಭವತಿ। ಅಗ್ರಂ **ಯಜ್ಞೇಷು ಪ್ರಣೀಯತೇ।** ಅಂಗಂ **ನಯತಿ ಸನ್ನಮಮಾನಃ।** ಅಕ್ನೋಪನೋ ಭವತೀತಿ ಸ್ಥೌಲಾಷ್ಠೀವಿಃ। ನ **ಕ್ನೋಪಯತಿ** ನ ಸ್ನೇಹಯತಿ। ತ್ರಿಭ್ಯಃ ಆಖ್ಯಾತೇಭ್ಯಃ ಜಾಯತೇ ಇತಿ। ಶಾಕಪೂಣಿಃ। **ಇತಾತ್** ಅಕ್ತಾತ್ ದಗ್ಧಾತ್ ವಾ ನೀತಾತ್। ಸ ಖಲು ಏತೇರಕಾರಮಾದತ್ತೇ, **ಗಕಾರ** ಮನಕ್ತೇರ್ವಾ ದಹತೇರ್ವಾ, ನೀಃ ಪರಃ। [1. 4. 14. 1.] – "ಅಗ್ನಿ-ಎಂದೇಕೆ? ಅಗ್ರಣೀಃ' ಆಗಿರುವುದರಿಂದ. ಯಜ್ಞದಲ್ಲಿ ಅಗ್ರತಃ ಒಯ್ಯಲ್ಪಡುತ್ತದೆ. ಬಾಗಿದವನಾಗಿ ತನ್ನ ದೇಹವನ್ನು, ನಮ್ರನಾಗಿ ಬಾಗಿಸಿಯೇ ತರುತ್ತಾನೆ. ಅಕ್ನೋಪನಾಗಿರುತ್ತಾನೆ - ಅಂಟಿ ಕೊಳ್ಳುವುದಿಲ್ಲ; ಜಿಡ್ಡನ್ನುಂಟುಮಾಡುವುದಿಲ್ಲ – ಎನ್ನುತ್ತಾರೆ ಸ್ಥೌಲಾಷ್ಠೀವಿಗಳು' ಮೂರು ಆಖ್ಯಾತಗಳಿಂದ - ಇತ, ಅಕ್ತ, ದಗ್ಧ ಅಥವಾ ನೀತ – ಎಂಬ ಈ ಮೂರು ಆಖ್ಯಾತಗಳಿಂದ * (ಈ ಶಬ್ದ) ಉತ್ಪನ್ನವಾಗುತ್ತದೆ – ಎಂದು ಮಹರ್ಷಿ ಶಾಕಪೂಣಿ ಹೇಳುತ್ತಾರೆ. ಅಕ್ತದಿಂದ **ಅ**, ದಗ್ಧದಿಂದ **ಗ** ಮತ್ತು ನೀತದಿಂದ ನೀಃ. ಹೀಗೆ **ಅ + ಗ್ + ನೀಃ = "ಅಗ್ನಿಃ"** ಎಂದಾಗುತ್ತದೆ." ಈ ಅಗ್ನಿಶಬ್ದ, ಬ್ರಹ್ಮಾಂಡಕ್ಕೆ ಅನ್ವಯಿಸಿದಾಗ ಈಶ್ವರನನ್ನೂ, ವ್ಯಕ್ತಿಗೆ ಅನ್ವಯಿಸಿದಾಗ ಜೀವಾತ್ಮನನ್ನೂ, ಭೌತಿಕಕ್ರಿಯಾಕಾಂಡದಲ್ಲಿ ಜಡವಾದ ತೇಜಸ್ತತ್ತ್ವವನ್ನೂ ನಿರ್ದೇಶಿಸುತ್ತದೆ.

---

* ಆಖ್ಯಾತಪ್ರತ್ಯಯಗಳೆಂದರೆ, ಕಾಲ, ವಚನ, ಲಿಂಗಾದಿಗಳ ಭಿನ್ನ-ಭಿನ್ನ ರೂಪಗಳನ್ನು ತೋರಿಸಲು ಧಾತುವಿಗೆ ಹಚ್ಚುವ ಪ್ರತ್ಯಯಗಳು. ಉದಾಹರಣೆಗೆ, 'ಓದು' ಎಂಬ ಧಾತು ವನ್ನೇ ಹಿಡಿಯಿರಿ. ಕರ್ತೃ ಪುಲ್ಲಿಂಗ ಭೂತಕಾಲೀನ, ಏಕವಚನಯುಕ್ತ ರೂಪವನ್ನು ತಿಳಿಸ ಬೇಕಾದರೆ - ರಾಮನು ಓದು + ಉತ್ತ + ಆನೆ – ಹೀಗೆ ಆಖ್ಯಾತ ಹಚ್ಚಿ ರಾಮನು ಓದು ತ್ತಾನೆ' – ಎನ್ನುತ್ತೇವೆ. ಈ **'ಉತ್ತ, ಆನೆ'** ಆಖ್ಯಾತಪ್ರತ್ಯಯಗಳು:

ಬೇರೆ ನಾಯಕರು-ಅವರು ಹಿಟ್ಲರ್-ಮುಸ್ಸೋಲಿನೀ, ಸ್ಟಾಲಿನ್, ರೂಸ್‌ವೆಲ್ಟ್, ಚರ್ಚಿಲ್, ಬಿಸ್ಮಾರ್ಕ್, ಫ್ರೆಡರಿಕ್ ಮಹಾನ್, ಸಂತ ಪೀಟರ್, ನೆಪೋಲಿಯನ್, ಹಾಗೂ ಸ್ವಾರ್ಥದಲ್ಲಿ 'ನೇತೃ'ವೆನಿಸಲು ಪೂರ್ಣಯೋಗ್ಯತಾ ಸಂಪನ್ನ ಸುಭಾಸರೇ ಆಗಿರಲೊಲ್ಲರೇಕೆ; ಎಲ್ಲರ ಕಡೆಯು ಅಂತವೂ ಒಂದು; ಒಂದೇ ಬಗೆಯದು. ವೇದವೆನ್ನುವ ಹಾಗೆ- "ಅದ್ಯಾ ಮಮಾರ ಸಹ್ಯಃ ಸಮಾನ." [ಋಕ್:– 10. 55. 5.]-"ಇಂದೀತ ಕಣ್ಮುಚ್ಚಿಬಿಟ್ಟ; ನಿನ್ನೆ ಅವನೇ ಉಸಿರಾಡುತ್ತಿದ್ದ!"-ಎನ್ನಬೇಕಾದ ವಿಷಗಳಿಗೆಯೋ, ವಿಷಮಗಳಿಗೆಯೋ ಬಲ್ಲವನಾರು?"-ಎನ್ನಲೇ ಬೇಕಾಯಿತು. ೧೯ನೆಯ ಶತಮಾನದ ಮಹರ್ಷಿ ದಯಾನಂದರು ಇಂದು ಕಣ್ಣುಗಳ ರೆಪ್ಪೆಯನ್ನಾಡಿಸರು; ನಿನ್ನೆ ಇದ್ದರು; ಇಂದು ಎಲ್ಲಿಯೋ? ಹೇಗೆಯೋ?" -ಎನ್ನುವುದನ್ನುಳಿದರೆ, ನಮ್ಮ ಬಳಿ ಮತ್ತಾವ ಸಾಮರ್ಥ್ಯವಿದೆ? ೨೧ನೆಯ ಶತಮಾನದ ಮಹಾತ್ಮಾ ಮೋಹನದಾಸರು ತಮ್ಮ ಬೊಕ್ಕು ಬಾಯಿತೆರೆದು ಹಸುಗೂಸಿನಂತೆ ಕಿಲಕಿಲನೆ ನಗುತ್ತಿದ್ದರು; ಇಂದದೆಲ್ಲಿದ್ದಾರೋ? ಎನ್ನುವುದೊಂದನ್ನು ಬಿಟ್ಟರೆ, ನಾವು ಮತ್ತೇನಾದ ಬಲ್ಲೆವೋ?

ಇದು ಸಾಂಸಾರಿಕ ಜೀವನ ಸಂಗ್ರಾಮದ ವಿಶಾಲ ಬಯಲು. ಅಲ್ಲಿ ಹೋದವರ ಸಂಖ್ಯೆ ನಮ್ಮ ದಾಖಲೆಗಳಲ್ಲಿವೆ. ಆದರೆ - ಎಷ್ಟು ಮಂದಿ ಅಕ್ಷತರಾಗಿ ಹಿಂದಿರುಗುವರೋ ಎಷ್ಟು ಮಂದಿ ಕ್ಷತ-ವಿಕ್ಷತರಾಗಿ ಚಕ್ರದ ಹಾಸುಗಳ ಮೇಲೆ ಮಲಗಿ - "ಓ ದೇವ ! ಸಾಕು ನಿನ್ನ ಈ ವ್ಯಾಪಾರ. ಇನ್ನಾದರೂ ಕಣ್ಣೀರಿನ ಹೊನಲಿನ ಹರಿವನ್ನು ನಿಲ್ಲಿಸು." ಎಂದು ಚೀತ್ಕರಿಸುತ್ತಾ ಹಿಂದಿರುಗುವರೋ, ಬಲ್ಲವರಾರು ?

ಪ್ರಾಯಶಃ ಈ ಜೀವನ-ಸಂಗ್ರಾಮ ಕೊನೆಯಾಗುವ ಕ್ಷಣವನ್ನು ನಾವರಿಯೆವು. ನಮ್ಮ ಈ ಜೀವಿತದಲ್ಲಿಯಂತೂ ಸಂಗ್ರಾಮ-ವಿರಾಮದ ವಚನ ಉನ್ಮತ್ತ ಪ್ರಲಾಪವಷ್ಟೇ; ಆದರೆ, ವೇದಾನುಯಾಯಿಗಳು ಹತಾಶರಾಗಿ, ಹಸ್ತವನ್ನುಳಿಬಿಟ್ಟು ಕೂಡುವಂತೆ ಇಲ್ಲವಲ್ಲ: ಸ್ವಯಂ ಆದಿ ಭಗವದ್ವಾಣಿ, ನಮಗೆಲ್ಲಾ ಅಕ್ಷುಣ್ಣನೂ, ಅನಾಹತನೂ, ಶಾಶ್ವತನೂ ಆದ ನಾಯಕನನ್ನೇ ತೋರಿಸುತ್ತಿದೆ. ಅಗ್ನಿ, ಬ್ರಹ್ಮಾಂಡಾಧಿನಾಯಕ, ಸರ್ವಥಾ ಅಜೇಯನೇ ಆದ, ನಾಯಕನನ್ನು ನಮಗೆ ಕರುಣಿಸುತ್ತಿದೆ. 'ಅಗ್ನಿ' ಆ ಮಹಾನಾಯಕ. ಶ್ರೀ ಮಧ್ವರೂ ಅಗ್ನಿ ಶಬ್ದಕ್ಕೆ **"ಅಗ್ರಣೀತ್ವಂ ಯದಗ್ನಿತ್ವಮಿತ್ಯಗ್ರೆ ನಾಮ ತದ್ಭವೇತ್॥"**– **ಅಗ್ನಿತ್ವವೇ ಅಗ್ರಣೀತ್ವ**ವಾಗಿರುವುದರಿಂದ, ಮೊಟ್ಟಮೊದಲ ಹೆಸರೇ ಅಗ್ನಿ–ಎಂದಾಗಿರುತ್ತದೆ." - ಎಂದೇ ಹೇಳಿದ್ದಾರೆ.

ಈ ಶಾಶ್ವತ ಗುರು ಎಲ್ಲರಂತಲ್ಲ. ನಾಯಕನಹುದು; ಆದರೆ, ನಾಯಕನ ಬಾಲ ಬಡಿದು, ಮಾನ-ಮರ್ಯಾದೆಗಳಿಗೆ, ಮಾನವೀಯತ್ವ-ಆತ್ಮಗೌರವಗಳಿಗೆ ನಮಸ್ಕಾರ ಹೊಡೆದು ಸ್ವಾರ್ಥ ಸಾಧಿಸಿಕೊಳ್ಳುವ ಅನುಯಾಯಿಗಳನ್ನುಳ್ಳ ನಾಯಕನಲ್ಲ. ಉದ್ಧೃತಮಂತ್ರ ಈ ಅಗ್ನಿಗೆ ಅನ್ವಯಿಸಿರುವ ವಿಗ್ರ, ವಸ್ಸೃತ, ವಿಪಶ್ಚಿತ್ ಈ ಮೂರರ ಅಂತರಾರ್ಥ ಹೃದಯಾಂತರಾಳಕ್ಕಿಳಿದರೆ, ರಾಷ್ಟ್ರೀಯ, ರಾಜಕೀಯ, ಸಾಮಾಜಿಕ, ಆರ್ಥಿಕ, ಔದ್ಯೋಗಿಕ ಕ್ಷೇತ್ರಗಳಲ್ಲಿ ಇಂದು

ಭಾರತದಾದ್ಯಂತವಲ್ಲ; ಜಗದಾದ್ಯಂತ ನಿರ್ಲಜ್ಜವಾಗಿ ನಡೆಯುತ್ತಿರುವ, ನೀತಿಯ ನೃಶಂಸ ಹತ್ಯೆಮಾಡಿ. ಅದರ ಶವದ ಮೇಲೆಯೇ ನಡೆಯಿಸುತ್ತಿರುವ ರಾಕ್ಷಸನೃತ್ಯ ಶೂನ್ಯ-ವಿಲೀನ ವಾಗಲು ಹೆಚ್ಚುಕಾಲ ಬೇಕಾಗಿಯೇ ಇಲ್ಲ. ಶಾಶ್ವತ ನಾಯಕನಾದ ಅಗ್ನಿದೇವನಿಗೆ ಸಲ್ಲು ವಂತೆ, ಮೂರು ಗುಣವಾಚಕ ಶಬ್ದಗಳನ್ನು ಕಾಣುತ್ತೇವೆ. ಮೊದಲನೆಯದು **"ವಿಗ್ರ ಇತಿ ಮೇಧಾವಿನಾಮಸು ಪಠಿತಂ."** [ನಿ. 3 15] **'ಅಸ್ತೃತಂ ಅಹಿಂಸಕಂ, ಅಹಿಂ ಸಿತಂ ವಾ.' – "ವಿಗ್ರನೆಂದರೆ ಮೇಧಾವೀ ಶಬ್ದದ ಪರ್ಯಾಯ ವಾಚಕ." 'ಅಸ್ತೃತನೆಂದರೆ ಅಹಿಂಸಕ ಹಾಗೂ ಅಹಿಂಸಿತ.'** – ಎಂದಿದ್ದಾರೆ. **'ವಿಪಶ್ಚಿದಿತಿ ಮೇಧಾವೀನಾಮಸು ಪಠಿತಂ.'** [ನಿ. 3.15] - ವಿಪಶ್ಚಿತ್-ಎಂಬುದೂ ಮೇಧಾವೀ - ಎಂಬ ಶಬ್ದದ ಅರ್ಥಗಳಲ್ಲಿ ಒಂದಾಗಿದೆ." - ಎಂಬ ಪ್ರಮಾಣವೂ ಇದೆ.

ಮೇಲು ಮೇಲಿನಿಂದ ನೋಡಿದಾಗ, "ವಿಗ್ರ" ಹಾಗೂ "ವಿಪಶ್ಚಿತ" ಎಂದೂ ಸಮಾನಾರ್ಥಕ ಶಬ್ದಗಳಂತೆಯೇ ತೋರಿದರೂ, ಈಶ್ವರೀಯೋಕ್ತಿ ನಿರರ್ಥಕವಾಗಿ ಏಕಾರ್ಥ ವಾಚಕಶಬ್ದಗಳೆರಡನ್ನು ಬಳಸುವ ಸ್ಥಿತಿ ಮೂರು ಕಾಲಕ್ಕೂ ಇಲ್ಲ. ವಿಗ್ರನೆಂದರೆ - ಮೇಧಾವಿಯಹುದು; ಆದರೆ, ಬಿಚ್ಚಿ ತರ್ಕದ ಒರೆಗಲ್ಲಿಗೆ ಹಚ್ಚಿ ನೋಡಿರಿ. **ವಿ+ಗ್ರ= ವಿಗ್ರ. "ವಿಶಿಷ್ಟೇನ ಕ್ರಮೇಣ ಗೃಹ್ಣಾತಿ ಜ್ಞಾನಮಿತಿ ವಿಗ್ರಃ."** ಹಾಗೆಯೇ **ವಿಪ ಶ್ಚಿತ್** ಶಬ್ದದತ್ತ ನೋಡೋಣ. ಶ್ರೀಮಧ್ವಗುರುರಾಯರು **"ವ್ಯಾಪ್ತಮನಾ ವಾ ವ್ಯಾಪ್ತಿಶೀಲಾ ಬುದ್ಧಿರ್ಯೇಷಾಂತೇ ವಾ."**-"ಯಾರಮನಸ್ಸುಗಳು ಬಹುವಿಧವಸ್ತು ಗಳ ಜ್ಞಾನಾರ್ಜನಕ್ಕಾಗಿ ಹರಡಿಕೊಳ್ಳುತ್ತವೋ ಅವರು ಬುದ್ಧಿಶಾಲಿಗಳು: ವಿಪಶ್ಚಿತ್‌ಗಳು" ಎಂದಿದ್ದಾರೆ. ಈ ನಿಟ್ಟಿನಿಂದ ನೋಡಿದಾಗ, ಎರಡೂ ಶಬ್ದಗಳೂ ಪೂರ್ಣತಃ ದೋಷ ರಹಿತವೆಂದೇ ಕಾಣುತ್ತವೆ. ವಿಗ್ರಗೂ ಮೇಧಾವಿ: ವಿಪಶ್ಚಿತ್‌ಗಳು ಕೂಡ ಮೇಧಾವಿಯೇ ಆದರೆ, ವ್ಯತ್ಯಾಸವಿಷ್ಟೇ; ವಿಗ್ರನು ವಿಶೇಷಜ್ಞ; ವಿಪಶ್ಚಿತ್ ಸಾಧಾರಣವಾಗಿ ಎಲ್ಲ ವ್ಯಾವ ಹಾರಿಕ ನಡೆ-ನುಡಿಗಳ ಪರಿಚಯವನ್ನೂ ಉಳ್ಳ ಕಂಠಾಗ್ರಮತಿ. ಅಲ್ಲದೆ, ವಿಪಃ– ಎಂದರೆ ಚೇತನನೂ, ಪಾಲನಶಕ್ತನೂ ಆದ ಜೀವಾತ್ಮ. 'ಚಿತ್' - ಎಂದರೆ, ಮೇಧಾವಿ ಸಚ್ಛಾಸ್ತ್ರ ಗಳ ಪರಿಪುಷ್ಟ ಪ್ರಮಾಣಗಳಿಂದ ಹಾಗೂ ತನ್ನ ವೈಯುಕ್ತಿಕ ಆಚಾರ ಶ್ರೇಷ್ಠತ್ವದಿಂದ, ಆ ಬಗೆಯ ಚೇತನರನ್ನು ಎಚ್ಚರಿಸುವ ಉದಾರಚರಿತನೂ 'ವಿಪಶ್ಚಿತ್' ಎಂದೇ ಗ್ರಹಿಸಲ್ಪಡು ತ್ತಾನೆ.

ನಮಗೆ ನಾಯಕರು ಬೇಕಷ್ಟೇ? ಅವರು ವಿಶೇಷಜ್ಞರಾಗಿದ್ದರೆ ಸಮ್ಮ ಪುಣ್ಯ ಆಷ್ಟು ಪುಣ್ಯ ನಮ್ಮದಲ್ಲ-ಎಂದಾದರೆ, ವ್ಯವಹಾರಕ್ಕೆ ಬೇಕಾದಷ್ಟು ಅರಿವಾದರೂ ಬೇಕೇ ಬೇಕು. ಅಲ್ಲದೆ, ಅಂತಹವರು 'ಅಸ್ತೃತರು'-ಎಂದರೆ ಅಹಿಂಸಕರಾಗಿರಬೇಕು. ಹಿಂಸೆ ಕೇವಲ ಕೊಲೆ, ರಕ್ತಪಾತ, ಆಂತರಿಕ ಕೂಟ ಕಲಹಗಳು ಮಾತ್ರವಲ್ಲ; ಅನ್ಯರಿಗೆ, ಅಧಿಕಾರಿಗಳಾದ ವರಿಗೆ ದಕ್ಕಬೇಕಾದುದನ್ನು ವಕ್ರ ವ್ಯವಹಾರಗಳಿಂದ ತಮ್ಮ ತೆಕ್ಕೆಗೆ ಸಿಕ್ಕುವಂತೆ ನಡೆದು ಕೊಳ್ಳುವುದೂ ಹಿಂಸೆಯೇ! ಅನ್ಯರ ಗೌರವ, ಆತ್ಮಸಮ್ಮಾನ, ಸ್ವಾಭಿಮಾನಾಧಿಕಾರ, ಯಶಸ್ಸ

ಪದ, ಸ್ಥಾನಮಾನಗಳನ್ನು ಅಪಹರಿಸುವುದೂ, ನಾಲಗೆಯಿಂದ ಆತ್ಮ ಗೌರವದ ಮೂಲಕ್ಕೆಯೇ ಬೆಂಕಿ ಬೀಳುವಂತಹ, ಪರಸ್ಪರ ಪ್ರೇಮ-ಮಮತಾ, ಸಮಾನತ್ವ ಮೊದಲಾದುದಕ್ಕೆ ಕುಠಾರಾಘಾತಮಾಡುವಂತಹ ಹೊಲಸು-ಹೊಲಸಾದ ಮಾತುಗಳನ್ನಾಡುವುದು-ಇದೂ ಕೂಡಾ ಹಿಂಸಾ ಕರ್ಮವೇ. ನಿಜವಾದ ನಾಯಕನ ಹೆಗಲಮೇಲೆ ಬೀಳುವ ಈ ಭಾರೀ ಉತ್ತರದಾಯಿತ್ವ ಸಾಮಾನ್ಯ ದರ್ಜೆಯದಲ್ಲ. ಇದಕ್ಕೆ, ಇದರ ನಿರ್ವಾಹಕ್ಕೆ, ಅಲೌಕಿಕವಾದ ನೈತಿಕ ಧೈರ್ಯದ ಆವಶ್ಯಕತೆಯಿರುತ್ತದೆ.

ನಾಯಕ. ಮಾನವೀಯ ನಾಯಕ ಎಷ್ಟೇ ಧೈರ್ಯಶಾಲಿಯೂ, ನೈತಿಕಬಲ ಯುಕ್ತನೂ, ವಿದ್ವಾಂಸನೂ ಆಗಿರಲೊಲ್ಲನೇಕೆ? ಮರ್ತ್ಯ ಮರ್ತ್ಯನೇ. ಅವನ ಪತನ ಅವನ ಅಭ್ಯುದಯಕ್ಕಿಂತ ಅಧಿಕ ಸಂಭವನೀಯವೇ. ರಾಷ್ಟ್ರದ ಸರ್ವತೋಮುಖವಾದ ಏಳಿಗೆಗೆ ಮಾನವೀಯ ನಾಯಕರಂತೂ ಬೇಕೇ ಬೇಕಲ್ಲ. ಆದರೆ, ವಿಗ್ರರೂ, ಅಹಿಂಸಕರೂ, ವಿಪಶ್ಚಿತ್ ಗಳೂ ಆಗಿರಬೇಕು. ಮತ್ತು ಅಂತಹ ನಾಯಕರು-'ತಮ್ಮ ಸಮಾನರಿಲ್ಲ. ತಾವಾಡಿದುದೇ ಸತ್ಯ; ತಾವು ಆಚರಿಸುತ್ತಿರುವುದೇ ಸತ್ಯ. ತಮ್ಮ ಮೆದುಳಿನ ಅದಾವುದೋ ಒಂದು ಗ್ರಹಿಸ ಲಾಗದಂತಹ ಕತ್ತಲೆಯಿಂದ ಆವೃತವಾದ ಮೂಲೆಯಲ್ಲಿ ಗುದುಗುಟ್ಟುತ್ತಿರುವ ದುರಾ ಲೋಚನೆಯೇ ಸದಾಲೋಚನವೆಂಬ ನಂಬಿಕೆ ಬುದ್ಧಿಯ ವಿಶ್ಲೇಷಣಾ ಶಕ್ತಿಯನ್ನೇ ತಿಂಡಿ, ಹಾಕಿದಾಗ, ಆ ರಾಷ್ಟ್ರದ ವಿಧ್ವಂಸನ ಬಹುದೂರವಿರದು.

ಅಂತಹ ಮಾನವೀಯ ನಾಯಕರಲ್ಲಿ ವಿಶೇಷ ಗ್ರಹಣ ಶಕ್ತಿ ಮತ್ತು ಎಲ್ಲ ವಿಷ ಯಗಳಲ್ಲಿಯೂ ಕಾರ್ಯನಿರ್ವಹಣಕ್ಕೆ ಸಾಕಾದಷ್ಟು ಜ್ಞಾನವಿರಲೇ ಬೇಕು. ಇವೆರಡರನಡುವೆ ವೇದ 'ಅಸ್ತೃತ' ಎಂಬ ಶಬ್ದ ಒಂದನ್ನು ಸೇರಿಸಿದೆ. ಸಾಧಾರಣತಃ, 'ಅಸ್ತೃತ' - ಎಂದೊಡನೆಯೇ ಅಹಿಂಸಕನೆಂಬರ್ಥ ಮೂಡುತ್ತದೆ. ಅಹಿಂಸಕನಹುದು; ಆದರೆ, **'ಯುಗಪತ್'** ಎಂದರೆ, ಏಕಕಾಲದಲ್ಲೇ ಅವರು ಕೇವಲ ಅಹಿಂಸಕರಲ್ಲ; ಅಹಿಂಸಿತರೂ ಆಗಿರಬೇಕು. ತಾನು ಹಿಂಸಕನಾಗಬಾರದು - ಇದು ಸತ್ಯ; ಹಾಗೆಯೇ, ತನಗೆ ಹಿಂಸೆಕೊಡಲು ಅವಕಾಶ ವಿಲ್ಲದಂತೆ ನೋಡಿಕೊಳ್ಳಬೇಕು. ಹಿಂಸಾಕೃತ್ಯಕ್ಕೀಡಾದ ನಾಯಕ, ಅನ್ಯರ ಮೇಲೆ ಬೀಳುವ ಹಿಂಸಾಪ್ರಹಾರವನ್ನು ನಿರೋಧಿಸಬಲ್ಲನಾದರೂ ಹೇಗೆ?

ಹೀಗೆ, ಮಾನವ ಮಾನವನೇ ಸರಿ.. ಅವನ ನಾಯಕತ್ವ ಮಾನವೀಯ - ಸೌಂದರ್ಯ – ಮಂದತ್ವಗಳಿಂದ ಯುಕ್ತವಾಗಿರುವುದು ಪರಮ ಸಾಧಾರಣವೇ! ಆದಕಾರಣ- ಎಂದಿಗೂ ಅಂದಕೆಡದ, ಎಂದಿಗೂ ಮಂದವಾಗದ, ಎಂದಿಗೂ ಆಶಾ–ನಿರಾಶಾಯುಕ್ತ ಉಯ್ಯಾಲೆಯ ಮೇಲೇರಿ, ಹತ್ತುವ–ಇಳಿಯುವ, ಇಳಿಯುವ ಹತ್ತುವ ಏರುಪೇರುಗಳಿಗೆ ಸಿಕ್ಕಿಕೊಳ್ಳದ ನಾಯಕ ಅದಾವನಿದ್ದಾನೋ? ಇದ್ದಾನೆ - ಎನ್ನುವುದು ಭಾವಾವೇಶ ಮಾತ್ರ. ಏಳುವ - ಬೀಳುವ, ಗೆಲ್ಲುವ - ಸೋಲುವ, ಅಳುವ - ನಗುವ ನಾಯಕರಿಗೇನೂ ಕೊರತೆ ಯಿಲ್ಲ. ಒಬ್ಬ ಅನುಯಾಯಿಗೆ ಸರಾಸರಿ ಹತ್ತು ಜನ - ಗುರುಪ್ರವರರು ಗಂಟುಬೀಳು ತ್ತಾರೆ. ನಾಯಿ ಕೊಡೆಗಳಂತೆ ಸಿಕ್ಕಾಬಟ್ಟೆ ಸಂಪ್ರದಾಯಗಳನ್ನು ಕಟ್ಟಿ, ಒಂದಾಗಿರಬೇಕಾದ

ಮಾನವ ಜಾತಿಯನ್ನು ನೂರಾಗಿ, ಸಾವಿರವಾಗಿ, ಸೀಳಿಹಾಕುವ ನೊಟ್ಟಾದ ಕಾರ್ಯವನ್ನುಳಿದರೆ, ನಾನಾ ರೀತಿ - ನೀತಿಯ, ಉಡುಗೆ ತೊಡಿಗೆಗಳನ್ನೂ, ನೂತನಾಲಂಕಾರರಗಳನ್ನೂ ಮೊದಲೇ ಕುಲಗೆಟ್ಟ ಮಾನವೀಯ ಗೌರವದ ಮಟ್ಟವನ್ನು - ಮತ್ತೂ ಕೂಡ ಮರ್ದನ ಮಾಡಿ ಮಣ್ಣಿನ ಹುಡಿಯಾಗಿ ಮಾರ್ಪಡಿಸುವುದನ್ನೂ ಬಿಟ್ಟರೆ. ಮತ್ತೇನನೂ ಸಾಧಿಸುವುದಿಲ್ಲ. ಈ ಉಪಾಸನೀ ಬಾಬಾ, ಶಿರಡಿಯ ಸಾಯೀಬಾಬಾ, ಮೆಹರ್ ಬಾಬಾ, ಸತ್ಯಸಾಯೀ ಬಾಬಾ - ಇತ್ಯಾದಿ ಬಾಬಾಗಳಿಂದ, ಮೊದಲೇ ಮೇಲಣಸ್ತರದುದೆಲ್ಲವನ್ನೂ ಮೂಲೆಗುಂಪಾಗಿಸಿ, ಮೂರು ಕಾಸಿಗೂ ಮಾರಲಾಗದಂತಹ ಮಾನವನ್ನುಳಿಸಿಕೊಂಡಿರುವ ಹತಭಾಗ್ಯ ಮಾನವಕುಲ ಮತ್ತಿನ್ನಾವ ಮೋರಿಗಿಳಿಯಬೇಕಾಗಿದೆಯೋ? ಹೌದು; ನಮ್ಮ ಪ್ರಾಚೀನ ಋಷಿ- ಮುನಿಗಳ ಜ್ಞಾನ - ವಿಜ್ಞಾನ ಪ್ರೌಢಿಮೆ ಹಾಗೂ ಸಾಕ್ಷಾತ್ಕೃತಸತ್ಯರಾದ ಅವರ ಜೀವನ ವೈಖರಿ ಮೂರುಕಾಲಕ್ಕೂ ಅಭಿಮಾನಾಸ್ಪದವೇ; ಸಮಸ್ತಮನುಜ ಸಂತತಿಗೇ ಗೌರವಾಸ್ಪದ. ಅತೀತದ ಅನುಭವ ಅಮೂಲ್ಯ ನಿಧಿಯೇ ಸರಿ. ಆದರೆ, ಅದನ್ನು ಹೊಗಳುತ್ತಾ ಕುಳಿತರೆ, ವರ್ತಮಾನದ ನಿರ್ಮಾಣವಾದೀತೇ? ಆ ಗಾಮಿಗೆ ಭವ್ಯತ್ವ ಬಂದಿತೇ?

ಪುರುಷಾರ್ಥ ಹೀನರ ಮಿತ್ರನಲ್ಲ ಭಗವಂತ. **'ಅಸುನ್ವತೋ ವಿಷುಣಃ ಸುನ್ವತಃ ಸಖಾ.'** [ಋಕ್:-5.34.6] - "ಭಗವಂತನು ವಿವೇಚನಾ ಹೀನನ, ವಿಚಾರಶೂನ್ಯ ಆಲಸಿಯ ಮಿತ್ರನಲ್ಲ; ಆದರೆ - ವಿಚ್ಛೇದಕ, ವಿವೇಕಿಯೂ, ಉದ್ಯಮಿಯೂ ಆದವನ ಮಿತ್ರ." -ಎನ್ನುತ್ತಿದೆ ಋಗ್ವೇದ. "**ಸ್ವಯಂ ಯಜಸ್ವ ಸ್ವಯಂ ಜುಷಸ್ವ.**" [ಯ:–23. 15.] -"ಓ ಮಾನವ! ಸ್ವತಃ ಸತ್ಕರ್ಮ ಮಾಡು. ಸ್ವತ: ಸುಖಿಸು."; "**ಮಹಿಮಾ ತ್ಯೇಽನ್ಯೇನ ನ ಸನ್ನಶೇ.**" [ಯಜು:–23. 15.]-"ಬೇರೆಯವರಿಂದ ನಿನಗೆ ಹಿರಿಮೆ ಸಿಕ್ಕದು."-ಎನ್ನುತ್ತದೆ ಯಜುರ್ವೇದ, ಅತೀತದ ಸ್ಮರಣೆ. ಅದು ಅಭಿಮಾನಾಸ್ಪದವಾಗಿದ್ದರೆ, ನಮಗೆ ಹುರುಪನ್ನು ಕೊಡಲಿ. ಕಹಿಯಾಗಿದ್ದರೆ, ಮತ್ತದೇ ತಪ್ಪನ್ನು ಮಾಡದಂತೆ ನಮಗೆ ಸಂಕಲ್ಪ ಸಾಮರ್ಥ್ಯ ಬೆಳೆದು ಬರಲಿ. ಆದರೆ, "**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ।**" [ಯಜು:–40. 2.]-"ಮಾನವನು ಶುಭಕರ್ಮ ಮಾಡುತ್ತಲೇ ಶತವರ್ಷಗಳ ಕಾಲ, ಬಾಳಬಯಸಬೇಕು." ಎಂಬ ಯಾಜುಷಾದೇಶಕ್ಕೆ ಬೆಂದೋರಿದರೆ ಮಾತ್ರ ಪತನ ಅನಿವಾರ್ಯವೇ. ಆಧುನಿಕ ವೈದಿಕಧರ್ಮದ ದಯನೀಯ ದುರ್ದಶೆ ಇದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದೆ.

ಹೀಗೆ, ಪಥಪ್ರದರ್ಶಕನಲ್ಲಿ ಇರಲೇಬೇಕಾದ ವಿಪ್ರತ್ವ (ವಿಶೇಷಜ್ಞತೆ), ಅಸ್ತೃತತ್ವ (ಅಹಿಂಸಕತ್ವ ಹಾಗೂ ಅಹಿಂಸಿತತ್ವ) ವಿಪಶ್ಚಿತ್ತ್ವ (ಸರ್ವವಿಷಯಕ, ಕಾರ್ಯನಿರ್ವಹಣ ಸಮರ್ಥವಾದ ಜ್ಞಾನದ ಇರುವಿಕೆ-ಈ ಗುಣಗಳನ್ನರಿತೆವು. ಇವೆಲ್ಲಾ ಕಾಮ್ಯವೇ ಸರಿ. ಆದರೆ, ಈ ಎಲ್ಲಗುಣವೈಶಿಷ್ಟ್ಯಗಳಿಂದಲೂ ಜನತೆಗೆ ಪೂರ್ಣಲಾಭ ಆಗಬೇಕಾಗಿದ್ದರೆ, ಅನುಯಾಯಿಗಳ ಹೃದಯಗಳಲ್ಲಿ ತಮ್ಮ ನಾಯಕನಲ್ಲಿ ನಿಶ್ಚಲವಾದ ನಂಬಿಕೆಯೂ ಇರಲೇ ಬೇಕು. ನಾಯಕ ಜನತೆಗಾಗಿ ಸರ್ವಸ್ವ ತ್ಯಾಗಕ್ಕೆ ಸದಾ ಸಿದ್ಧನೇ ಆಗಿರುವಂತೆ. ಜನತೆಯೂ ನಾಯಕ

ನಾಗಿ ಸರ್ವಸ್ವ ಬಲಿದಾನಕ್ಕೂ ಸಿದ್ಧವಾಗಿರಬೇಕು. ವೇದೋಕ್ತನಾದ ನಾಯಕನ ಹಿರಿಮೆಯನ್ನು ವೇದಗಳಿಂದ ಮಾತ್ರ ತಿಳಿಯಲು ಸಾಧ್ಯವಾದೀತು, ನಾಯಕ ಅನುಯಾಯಿಗಳಿಗೆ ಹೇಳುತ್ತಾನೆ:-

**ಯೋ ವಃ ಶುಷ್ಮೋ ಹೃದಯೇಷ್ವಂತರಾಕೂತಿರ್ಯಾ ವೋ ಮನಸಿ ಪ್ರವಿಷ್ಟಃ ।**
**ತಾನ್ತ್ಸೀವಯಾಮಿ ಹವಿಷಾ ಘೃತೇನ ಮಯಿ ಸಜಾತಾ ರಮತಿರ್ವೋ ಅಸ್ತು ॥**

[ಅಥರ್ವ:- 6. 73. 2.]

"[ಸಜಾತಾಃ] ನನ್ನೊಡಹುಟ್ಟಿರುವ ಮಾನವ ಬಾಂಧವರೇ! [ವೋ ಹೃದಯೇಷು ಅಂತಃ] ನಿಮ್ಮ ಹೃದಯಗಳಲ್ಲಿ, [ಯಃ] ಯಾವ, [ಶುಷ್ಮಃ] ಕಾವು, ಬೇಗೆ ಉತ್ತೇಜನ ಉದ್ರೇಕವಿದೆಯೋ, [ಯಾ ಆಕೂತಿ] ಯಾವ ಆಲೋಚನೆ. [ವಃ ಮನಸಿ] ನಿಮ್ಮ ಮನಸ್ಸಿನಲ್ಲಿ [ಪ್ರವಿಷ್ಟಃ] ಹೊಕ್ಕಿದೆಯೋ, [ತಾನ್] ಅವನ್ನೆಲ್ಲವನ್ನೂ, [ಹವಿಷಾ] ಶುಚಿಯಾದ ಕೊಡುಗೆ-ಕೊಳುಗೆಗಳಿಂದ, [ಘೃತೇನ] ಘೃತದಿಂದ, ಅಸೀಮ ಸ್ನೇಹ ಸೌಹಾರ್ದದಿಂದ, [ಸೀವಯಾಮಿ] ಸರಿಪಡಿಸುತ್ತೇನೆ. [ವಃ] ನಿಮ್ಮ. [ರಮತಿಃ] ಈರ್ಷ್ಯಾ-ದ್ವೇಷಗಳಿಗೆ, ಅಧರ್ಮ-ಅನ್ಯಾಯಗಳಿಗೆ ಎಡೆಯೇ ಇಲ್ಲದ, ನಿಷ್ಕಳವಾದ ಪ್ರೇಮಭಾವನೆ, [ಮಯಿ ಅಸ್ತು] ನನ್ನಲ್ಲಿ ಮನೆಮಾಡಿರಲಿ." ಈ ಬಗೆಯ ನಾಯಕರ ದರ್ಶನ, ಮಹಾತ್ಮಾ ಮೋಹನದಾಸರಂತೆ, ಬಾಬೂ ರಾಜೇಂದ್ರ ಪ್ರಸಾದರಂತೆ, ಸರದಾರ ವಲ್ಲಭಭಾಯಿ ಝವೇರಭಾಯೀ ಪಟೇಲರಂತೆ, ಅದೆಷ್ಟೋ ಕೋಟಿಗೊಬ್ಬರು ಉದಯಿಸಿರಬಹುದು. ಆದರೆ, ರಾಷ್ಟ್ರ, ಜನಾಂಗ, ದೇಶ-ಇಂತಹ ಅತಿಮಾನವರ ಆಗಮನಕ್ಕಾಗಿ ಕಾದು ಕುಳಿತಿರಲಾರದು. ಬಾಪೂ ಹೇಳುತ್ತಿದ್ದಂತೆ, "We have to carry on with them, if they come, without them, if they do not and pushing them out of the arena, if they gather courage to oppose us." ಎರಡೆರಡು ಅರ್ಥಗಳನ್ನೂ ವ್ಯಕ್ತಪಡಿಸುವ ವಾಕ್ಯಗಳಿವು. ನಾಯಕರಾಗಿಯೂ ಅನ್ವಯಿಸಬಹುದು; ಅನುಯಾಯಿಗಳಿಗೂ ಅನ್ವಯಿಸಬಲ್ಲದು. ಅಥವಾ - ಭಾರತ ಸ್ವಾತಂತ್ರ್ಯ ವಿರೋಧಿಗಳಾದ ಆಂಗ್ಲರಿಗೂ ಮತ್ತು ಆಂಗ್ಲೋ-ಇಂಡಿಯರಿಗೂ ಅನ್ವಯಿಸಬಹುದು. ಸರಿ-ಸುಮಾರು ಅದೇ ಕಾಲದಲ್ಲಿ ಬ್ಯಾರಿಸ್ಟರ್ ವಿನಾಯಕ ದಾಮೋದರ ಸಾವರಕರರೂ, ಮುಸ್ಲಿಮರಿಗನ್ವಯಿಸಿ, ಸ್ವಲ್ಪ ಕಡಿಮೆ ಹೇಳಿದ್ದರು, ಇಂತಹ ಮಾತುಗಳನ್ನು.

ತಾತ್ಪರ್ಯ ಅತಿಸ್ಪಷ್ಟ. ದೇವ-ಕಲ್ಪ ನಾಯಕರು ಸಿಕ್ಕಿದರೆ ಸಂತೋಷ; ಸಿಕ್ಕದಿದ್ದರೂ, ಯಾವ ಸತ್ಸಾಧನೆಯೂ ನಿರರ್ಥಕವಾಗದು-ಎಂಬ ನಂಬಿಕೆ ಎದೆ ತುಂಬ ತುಂಬಿ ಹೊರಸೂಸಬೇಕು. ಆದರೆ, ಈಶ್ವರನಂತೂ ಇದ್ದೇ ಇದ್ದಾನಲ್ಲ. ನಮ್ಮ ಮಾನವರ ಮಧ್ಯೆಯೇ ಮಹಿಮಾವಾನ್ ಮಹಾನಾಯಕ ಉದಿಸಲಾರನೇನು? ಭೂಮಾತೆ ಬಂಜೆಯಲ್ಲ. ಭಾರತಾಂಬೆ ಯಾರ ಮುಂದೆಯೂ ಜೋಳಿಗೆ ಹಿಡಿದು ನಿಲ್ಲಬೇಕಾಗಿಲ್ಲ. ಹಿರಿಯರೆಂದು ಗ್ರಹಿಸಲ್ಪಟ್ಟರೆ, ಕಿರಿಯ ಜನಾಂಗದಲ್ಲಿಯೂ, ನಾಳೆ-ನಾಳೆಯಲ್ಲಿಯೂ ಹರಿಯುತ್ತಿರುವುದು

ಅದೇ ಅರ್ವಪ್ರಾಚೀನರ ಸಾಮರ್ಥ್ಯಸಂಪನ್ನ ನೇತ್ರರೇ-ಎಂದಿಷ್ಟು ನೆನಪಿದ್ದರೆ, ನೈರಾಶ್ಯ ಯೋಜನ-ಯೋಜನ ಪರ್ಯಂತ ನಾಗಾಲೋಟದಿಂದ ಓಡಿಹೋದೀತು.

ಅನುಯಾಯಿಗಳ ಯೋಗ್ಯತೆ ಹೇಗಿರಬೇಕು? ಸಂಶಯಕ್ಕೆಡೆಗುಡಂಯೇ ಇಲ್ಲ ಆಲಿಸಿರಿ:–

ಸ್ವಸ್ತಿ ಪಂಥಾ ಮನುಚರೇಮ ಸೂರ್ಯಾಚಂದ್ರಮಸಾವಿವ।
ಪುನರ್ದದತಾಘ್ನತಾ ಜಾನತಾ ಸಂಗಮೇಮಹಿ॥

[ಋಕ್:–5. 51. 15.]

"ಆತ್ಮಕಲ್ಯಾಣದ ಮಾರ್ಗದಲ್ಲಿ, ಚಾಚೂ ದಾರಿತಪ್ಪದಂತೆ ಸೂರ್ಯಚಂದ್ರರು ಚಲಿಸುತ್ತಿರುವಂತೆ. ನಡೆಯೋಣ, ಈ ಬೃಹದ್ಯೋಜನೆ ಸಫಲವಾಗುವ ಹಾಗೆ, ದಾನ ಶೀಲರೂ, ಅಹಿಂಸಕರೂ, ಜ್ಞಾನಿಗಳೂ ಆದವರ ಸಂಗವನ್ನೇ ಆಶ್ರಯಿಸೋಣ." ಈ ನಿಷ್ಠೆ ಅನುಯಾಯಿಗಳಿಗಿರಬೇಕು ಮತ್ತು ನಾಯಕರ ವರ್ಣನೆಯನ್ನು ಓದುಗರು ಓದಿಯೇ ಇದ್ದಾರೆ. ಎಂದ ಮೇಲೆ ಪ್ರತಿಪಾದ್ಯ ವಿಷಯ ಹೃದಯಾಂಕಿತವಾಗಲು ಕಷ್ಟವೇ ಇಲ್ಲ. ಈ ಚಿಕ್ಕಮಂತ್ರವನ್ನೇ ಓದಿರಿ:–

ತಂ ಹುವೇಮ ಯತಸ್ರುಚಃ ಸುಭಾಸಂ ಶುಕ್ರಶೋಚಿಷಂ।
ವಿಶಾಮಗ್ನಿಮಜರಂ ಪ್ರತ್ನಮೀಡ್ಯಂ॥

[ಋಕ್:– 8. 23. 20,]

"[ಯತಃ ಸ್ರುಚಃ] ಸಂಯತವಾದ ಇಂದ್ರಿಯಗಳನ್ನುಳ್ಳವರಾಗಿ, [ತಂ] ಆ [ಸುಭಾಸಂ] ಉತ್ತಮ ಜ್ಯೋತಿರ್ಮಯನೂ, [ಶುಕ್ರಶೋಚಿಷಂ] ಪಾಪದಾಹಕಪ್ರಕಾಶ ಯುಕ್ತನೂ, [ವಿಶಾಂ] ಪ್ರಜೆಗಳ, [ಅಗ್ನಿಂ] ನಾಯಕನೂ, [ಅಜರಂ] ವಾರ್ಧಕ್ಯದ ಜೀರ್ಣತ್ವ-ಶೀರ್ಣತ್ವಗಳ ಜಾಡ್ಯಕ್ಕೆ ಈಡಾಗದವನೂ, [ಪ್ರತ್ನಂ] ಅನಾದಿಯೂ, [ಈಡ್ಯಂ] ಉಪಾಸ್ಯನೂ ಆದ ಭಗವಂತನನ್ನು, [ಹುವೇಮ] ಆರಾಧಿಸೋಣ; ಸ್ತುತಿಸೋಣ."

ಉಪಾಸ್ಯನ ವರ್ಣನೆ ಸಾಕಷ್ಟಿದೆ; ಆದರೆ – ಉಪಾಸಕನ ವರ್ಣನೆಗೆ ಇಲ್ಲಿ ಸಿಕ್ಕಿ ರುವುದು ಒಂದೇ ಶಬ್ದ - "ಯತಸ್ರುಚಃ". ಬಹುವ್ರೀಹಿ ಸಮಾಸದಲ್ಲಿರುವ ಈ ಶಬ್ದಕ್ಕೆ - "[ಯತಸ್ರುಚಃ ಸಂಯತಾ ಯೇಷಾಮಿಂದ್ರಿಯಾಣಿ, ತೇ] ತಮ್ಮ ಸಟ್ಟುಗಗಳನ್ನು ಹಿಡಿತ ದಲ್ಲಿಟ್ಟುಕೊಂಡ ಜೀವರೇ **ಯತಸ್ರುಕ್**ಗಳು." ಈ ಒಂದೇ ಮಾತು ಭಕ್ತಜೀವನ ಸಮಸ್ತ ಇಂದ್ರಿಯಗಳೂ ವಶೀಕೃತವಾಗಲೇ ಬೇಕು. *ಆತ್ಮನಿಗ್ರಹಿಯಲ್ಲದವನು – ಅಜಾಮಿಳನವ ರಂತಹ ಕಗ್ಗಗಳು ಕಥಾವಾಚಕರಿಗೇ ಮೀಸಲಿರಲಿ. ಏಕೆಂದರೆ, ಈ ಕಗ್ಗಗಳಿಂದ ವೈದಿಕ ಧರ್ಮಕ್ಕಾಗಿರುವ ಅಪಚಾರ, ಅಗೌರವ ಅಕಿಂಚನತ್ವ ಕ್ರೈಸ್ತರಿಂದಲೂ ಆಗಿಲ್ಲ; ಮುಸಲ್ಮಾನ

* ಯಜ್ಞ-ಪ್ರಕ್ರಿಯೆಯಲ್ಲಿ ಆಚಮನೀಯ - ಅಂಗಸ್ಪರ್ಶಗಳ ವಿಧಿ-ಮೊದಲಾದವುದು ವಸನ್ನು ಶಾಕಲ್ಯ, ಸ್ಥಾಲೀಪಾಕ ಹವ್ಯದ್ರವ್ಯ ಮೊದಲಾದುವರ ಸಂರಕ್ಷೆಗಾಗಿ.

ರಿಂದಲೂ ಆಗಿಲ್ಲ. ಆರಾಧ್ಯನಾಗಲೂ ಬೇಕಾದ ಯೋಗ್ಯತೆಯು ಲವಲೇಶವೂ ಇಲ್ಲದೆ, ತನ್ನನ್ನು ತಾನೇ ಆರಾಧ್ಯನೆಂದೋ, ಆ ಆರಾಧ್ಯದೇವನ ಅಂಶಾವತಾರವೆಂದೋ, ಪೂರ್ಣಾವತಾರವೆಂದೋ ಹೇಳಿಕೊಂಡು, ಪಾಮರ ಕೋಟಿಯನ್ನು ಎಂದೆಂದಿಗೂ ತಲೆಯೆತ್ತಲಾಗದಂತಹ ಘೋರಾಂಧಕಾರದ ಕರಾಳಕೂಪಕ್ಕೆ ಕೆಡವುವ. ಶ್ರೀ॥ ಮಧ್ವರು ಬೇರೆಡೆ ಸಾರಿರುವಂತೆ "ಅಂಧೇತಮಸಿ ಮಗ್ನಸ್ಯ ತಸ್ಯ, ನೈವೋತ್ಥಿತಿಃ ಕ್ವಚಿತ್"–"ಆ ವಿಗ್ರಹಾರಾಧಕನು ಅಂಧತಮಿಸ್ರದಲ್ಲಿ ಮುಳುಗಿದ ಅವನು, ಎಂದೆಂದಿಗೂ ಮೇಲೇಳಲಾರನು." - ಎಂಬ ಘೋರಸ್ಥಿತಿಗೆ ಸಾಧಕರನ್ನು ಸಿಕ್ಕಿಸಿ ತಾನೂ ತುದಿ-ಮೊದಲಿಲ್ಲದ ನಿಕೃಷ್ಟ ಜನ್ಮಗಳಲ್ಲಿ ಕೊಳೆತು ನಾರುವ ಆ ಆಡಂಬರಪ್ರಿಯ, ಜ್ಞಾನ-ಭಕ್ತಿಗಳಿಗೆ ಎಡೆಯೇ ಇಲ್ಲದಂತಹ ಜೀವನವನ್ನು ನಡೆಯಿಸುವ ಆ ಹತಭಾಗ್ಯ ಎಂತಹ ಭೀಕರ ಹಾಗೂ ಭೀಭತ್ಸ ಭಾವಕ್ಕೆ ತುತ್ತಾಗಬಹುದೋ, ಹೇಳಬಲ್ಲವರಾರು ? "ಅಹಂ ಬ್ರಹ್ಮಾಸ್ಮಿ"ಗಳ ಬಗೆಪರಿಯದ ಬವಣೆ ಸಾಲದೇನೋ ?

ಆರಾಧ್ಯ ಬಡಪಾಯಿ ಅದೆಲ್ಲಿ ಅಡಗಿಕೊಂಡನೋ ? ಆರಾಧಕರೇ ಆರಾಧ್ಯರಾಗಿ ಮೈಮರೆತು ಮೆರೆಯುತ್ತಿರುವ ಈ ಕಾಲದಲ್ಲಿ, ವಿಚಾರಶೀಲರು ಧರ್ಮದ ಬಗೆಗೆಯೇ ಅನಾಸಕ್ತಿ ತಳೆದರೆ ಆಶ್ಚರ್ಯವೇನು ? ಮೌಂಟ್ ಅಬೂವಿನ ಮೇಲೆ, 'ಪ್ರೋಖರನ್' ಅರಮನೆಯ ರಾಜವೈಭವದಲ್ಲಿ ಮೆರೆದು, ಮಿತಿ ಮೀರಿದ ಮಹಿಳಾಮೋಹಕ್ಕೆ ಮೆದುಳನ್ನು-ಭಗವಂತ ಆ ವಸ್ತುವನ್ನು ಮೈ ಮರೆತು ಏನಾದರೂ ಅಲ್ಪಸ್ವಲ್ಪ-ಕೊಟ್ಟಿದ್ದರೆ-ಬಲಿಯಿತ್ತು, ಕ್ಷಯ ಪೀಡಿತರಾಗಿ ಸದಾಕಾಲಕ್ಕೂ ಸಂತೃಪ್ತಿಗೀಡಾಗಿ ಕೊನೆಯುಸಿರೆಳೆದು ಹೊರಟು ಹೋದ ದಾದಾ ಲೇಖರಾಜರು ತಾವೇ 'ಪ್ರಜಾಪಿತಾ' ಟೈಟಲ್ ತೆಗೆದುಕೊಂಡರು. ನಾರಿಯರನ್ನೇ ಪ್ರಚಾರಿಕೆಯರನ್ನಾಗಿ ಹೊಂದಿರುವ "ಬ್ರಹ್ಮಾಕುಮಾರೀ ಆಂದೋಳನ" ನಡೆಯಿಸಿದರು. ಕೇವಲ ಏಳೇ ದಿನಗಳ ಅವಧಿಯಲ್ಲಿ 'ಜ್ಯೋತಿರ್ಲಿಂಗ ಶಿವ'ನ ಸಾಕ್ಷಾತ್ಕಾರದ ಪ್ರಲೋಭನ ಜಾಲ ಬೀಸಿದರು. ನರರಿಗಿಂತ ಕುರಿಗಳೇ ಅಧಿಕವಾಗಿರುವ ಈ ದೇಶದಲ್ಲಿ ಯಾರಿಗಾದರೂ ಅನುಯಾಯಿಗಳು ಸಿಕ್ಕುತ್ತಾರೆ: ವಾಗ್ಬಲ, ಸುಲಭ ಮೋಕ್ಷೋಪಾಯದ ಪ್ರತಿಜ್ಞೆ-ಇಷ್ಟೇ ಸಾಕು ಬಂಡವಾಳ. ಲೇಖರಾಜರ ಸ್ವಂತ ಜೀವನದೊಂದಿಗೆಯೇ ಭಗವಂತನ ಆತ್ಮ ಬೇರೆ ತೂರಿಕೊಂಡಿದ್ದಿತಂತೆ ಈ ಮಹಾಮಹಿಮರ ಮೈಯಲ್ಲಿ! ಈಶ್ವರ ಸರ್ವವ್ಯಾಪಕನಲ್ಲ-ವೆನ್ನುವ ಈ ಜನ, ಲೇಖರಾಜರ ಆತ್ಮನೊಂದಿಗಿರಲು ಬಂದ ಭಗವಂತ ಪೂರ್ಣತಃ ಬಂದು ಸೇರಿಕೊಂಡಿದ್ದನೋ, ತನ್ನ ಒಂದಿಷ್ಟು ಚೂರನ್ನೇನಾದರೂ ಕಳುಹಿಸಿಕೊಟ್ಟಿದ್ದನೋ, ಏನೋ? ಬಲ್ಲ ಮಂದಿ ಯಾರು?

ಈ ಒಂದು ಹೊಲಸು ಮತವಲ್ಲ: ರಾಧಾ ಸ್ವಾಮೀ ಸತ್ಸಂಗ, ಹಂಸ ಮಾರ್ಗ, ಆನಂದ ಮಾರ್ಗ, ಅತೀಂದ್ರಿಯ ಧ್ಯಾನಪಂಥ-(transcendental meditation)-ಇತ್ಯಾದಿ ಅದೆಷ್ಟು ಮತಮತಾಂತರಗಳು ಹುಟ್ಟಿವೆಯೋ, ನೆಟ್ಟಗೆ ಬಾಳಲಾರದೆ, ತೊಟ್ಟಿಲಲ್ಲೇ ಕೈಕಾಲೊದರಿ 'ಇತಿಶ್ರೀ' ಹೇಳಿಸಿಕೊಂಡು ಹೊರಟು ಹೋಗಿವೆಯೋ, ದಾಖಲೆ ಎಲ್ಲಿದೆ! ನಾವು ತೇರಾಪಂಥೀ ಸಾಧುಗಳು ಚಿತ್ರಿಸಿದ ನರಕ-ಸ್ವರ್ಗಗಳ ಚಿತ್ರಗಳನ್ನು ಕಂಡಾಗಲೇ (ಅದು 1949 ಇದ್ದೀತು) ದಿವಂಗತ ಚ. ವಾಸುದೇವಯ್ಯನವರ ಕನ್ನಡ ಬಾಲ ಬೋಧೆಯನ್ನು

ಸ್ಮರಿಸಿದ್ದೆವು. "ನವ ಸೃಷ್ಟಿಯ Lay out" ಬಗ್ಗೆ ದಾದಾರವರ ಇಂಜಿನಿಯರರ ಪ್ರತಿಭೆ ಕಂಡು ಸ್ತಬ್ಧರಾಗದೇ ಇರಲಾಗುವಂತಿತ್ತೇ? "ಕೇವಲ ಒಂಬತ್ತು ವರ್ಷಗಳಲ್ಲಿ ಪ್ರಳಯ; ಆಮೇಲೆ-ನಿಮಗೆ ಮೋಕ್ಷದಾಶೆ ಎಲ್ಲಿ? ಆದುದರಿಂದ, ಈಗಲೇ ಸೇರಿರಿ ಬ್ರಹ್ಮಾಕುಮಾರಿಯರ ಸಂಸ್ಥೆಯನ್ನು. ಇದೇ 'ಕೊನೆಯ ಛಾನ್ಸ್', ಆಮೇಲೆ ನಿಮ್ಮ ಮಾರ್ಗದರ್ಶಕರು ಯಾರೂ ಇಲ್ಲ". ಎಂದು 30 ವರ್ಷಗಳಿಂದ ಸಾರುತ್ತಲೇ ಬಂದರು ಈ ಸಂಪ್ರದಾಯದವರು! ಅದೇನು ದೈವವರ್ಷವೋ? ಅಥವಾ ಅವರ ಶಬ್ದಕೋಶದಲ್ಲಿ '8+1=9' ಎಂದಿರದೆ-' ಒಂಬತ್ತೆಂದರೆ ಅನಂತ ಕಾಲ." ಎಂದೇನಾದರೂ ಬರೆದಿದೆಯೋ ?

ಹೇಗೂ ಇರಲಿ. ಮಿಥ್ಯಾಪ್ರಲಾಪದಲ್ಲಿ ಒಂಬತ್ತೇನು **ತೊಂಬತ್ತೇನು**, ಒಂಬೈನೂರೇನು? ಹಸಿಯ ಸುಳ್ಳೆಂದ ಮೇಲೆ, ಹುಸಿಯನ್ನು ಹುಡುಕುತ್ತಾ, ಲಕ್ಷಾಂತರ ಜನ್ಮಗಳ ನಂತರ ಸಿಕ್ಕಿರುವ ಮಾನವ ಜನ್ಮದ ಅಮೂಲ್ಯ ಕ್ಷಣಗಳನ್ನು ಕಳೆಯುವುದೇಕೆ?

''**ಇಂದ್ರಂ ಪೃಚ್ಛ**''-ಎಂಬುದರ ವರ್ಣನೆಗೆ ಇಷ್ಟು ಹೇಳ ಬೇಕಾಯಿತು, ಉಪಾಸನೀ ಬಾಬಾ, ಸಿರಡಿಯ ಸಾಯೀಬಾಬಾ, ಬೊಂಬಾಯಿಯ ನಿರ್ಮಲಾನಂದ-ರಜನೀಶರು ರಾಧಾಸ್ವಾಮೀ ಆಚಾರ್ಯ, ಆನಂದ ಮಾರ್ಗದ ಪಿ. ಆರ್ ಸರಕಾರ್ (ಆನಂದ ಮೂರ್ತಿ!)- ಎಷ್ಟು ಮಂದಿ ಈಶ್ವರ ದರ್ಶನ ಪಡೆದ ಮಂದಿಗಳು!

ಕೊನೆಯ ಭಾಗವಿದು:- "**ಯಃ ತೇ ಸಖಿಭ್ಯ: ಆ ವರಂ**" ಎಲ್ಲ ವೈದಿಕ ಶಬ್ದಗಳಂತೆಯೇ ಈ ಮಾತುಗಳೂ ಮಹದರ್ಥಗರ್ಭಿತವಾಗಿವೆ. ಸುಲಭವಾಗಿ ತಳ್ಳಿಹಾಕಲ್ಪಡಬಹುದಾದ ಶಬ್ದವಾವುದೂ ಇಲ್ಲ. 'ಸಖಿಭ್ಯ, ವರಂ' ಈ ಶಬ್ದಗಳು ಸ್ವಲ್ಪ ವ್ಯಾಖ್ಯಾನಾಪೇಕ್ಷಿಗಳಾಗಿವೆ. ಶಬ್ದಾರ್ಥದಲ್ಲಿ ನಾವು 'ಸ್ನೇಹಿತರಿಗೆ', 'ಸರ್ವಾಧಿಕ ಅಪೇಕ್ಷಣೀಯ ತತ್ವವಾಗಿರುವ' ಎಂದಿದ್ದೇವೆ. ನಾವು ಮೇಲಿತ್ತಿರುವ ಅನ್ವಯಕ್ಕಿಂತ ಸ್ವಲ್ಪ ಬೇರೆಯಾಗಿ, "**ಯ: ತೇ ಸಖಿಭ್ಯಃ ಆ ವರಂ, (ತಂ) ವಿಪ್ರಂ, ಅಸ್ತೃತಂ ವಿಪಶ್ಚಿತಂ ಇಂದ್ರಂ ಪೃಚ್ಛ ಪರೇಹಿ.**"-ಎಂದೂ ಕೂಡ ಹೇಳಬಹುದು. "ಯಾವನು ನಿನ್ನ ಸಖರ ಪಾಲಿಗೆ ಕೇವಲ ಉತ್ತಮನಾಗಿಯೂ ವಿಶೇಷಜ್ಞನಾಗಿಯೂ, ಅಹಿಂಸಕನೂ-ಅಹಿಂಸಿತನೂ ಆಗಿಯೂ, ಚೇತನನೂ ಸರ್ವವಿದ್ಯೆಗಳ ಸಾಧಾರಣಜ್ಞನೂ ಆಗಿಯೂ ಇದ್ದಾನೋ, ಆ ಜೀವಮಾತ್ರರ ಮೇಲೆ ಕರುಣಾ ವೃಷ್ಟಿ ಕರೆಯುವ ದೇವದೇವನಲ್ಲಿಯೇ ಕೇಳಿಕೋ. ಈ ಸಲುವಾಗಿ, ಎಷ್ಟು ದೂರ ಬೇಕಾದರೂ ಹೋಗು." ಎಂದೂ ಕೂಡ ಹೇಳಬಹುದು. ಅರ್ಥಗಳಲ್ಲಿ ವಿಶಿಷ್ಟ ವ್ಯತ್ಯಾಸ ಮಾಡಲ್ಪಟ್ಟಿಲ್ಲ. ಈ ಅನ್ವಯ ಕ್ರಮದಲ್ಲಿ 'ವರ' ಎಂಬುದು ಭಗವಂತನು ಕೊಡಬೇಕಾದ ಯಾವುದೋ ವಸ್ತುವಾಗಿರದೆ ಆ ಪದವೂ ಪರಮಾತ್ಮನ ಗುಣವಾಚಕವಾಗಿ ಬೆಳಗುತ್ತದೆ. ಶಬ್ದಾರ್ಥದಲ್ಲಿಯೇ ನಾವು 'ವರಂ ಶಬ್ದವನ್ನೂ ಗುಣವ್ಯಂಜಕವಾಗಿಯೇ ಕಾಣಿಸುವುದರಿಂದ, ಈ ಪ್ರಶ್ನೆಯೂ ಉದಿಸದು.

ಸಾಮಾನ್ಯತಃ 'ಸಖಾ' - ಎಂದೊಡನೆ ನೆನಪಾಗುವುದು 'ಸ್ನೇಹಿತ' ಎಂಬರ್ಥವೇ. ಅದು ತಪ್ಪಲ್ಲ; ಆದರೆ, 'ಸಖಿ' ಎಂಬ ಶಬ್ದ ಏನೇನು ವಿಶಿಷ್ಟಭಾವನೆಗಳನ್ನು ತನ್ನ ಗರ್ಭದಲ್ಲಿ

ಹುದುಗಿಸಿಕೊಂಡಿದೆಯೋ, ಅವೆಲ್ಲವೂ 'ಸ್ನೇಹಿತ' - ಎಂಬ ಮಾತಿನಿಂದ ಹೊರಬಾರವು. ಆದ ಕಾರಣ ಯಾಸ್ಕಾಚಾರ್ಯರು:- **"ಸಮಾನಖ್ಯಾನಾ ಋತ್ವಿಜ: ಸಖಾಯ:"**. [1. 7. 30. 8.] "ಸಮಾನವಾದ ಖ್ಯಾತಿಯುಳ್ಳವರು ಸಖರು; ಹೋತೃವೋ, ಉದ್ಗಾತೃವೊ, ಅಧ್ವರ್ಯುವೋ, ಬ್ರಹ್ಮನೋ – ಯಾರೇ ಆಗಿರಲೊಲ್ಲರೇಕೆ? 'ಋತ್ವಿಕ್' ಎಂಬ ಶಬ್ದ, ನಾಮ ಖ್ಯಾತಿ – ಒಂದೇ ಆದಕಾರಣ ಋತ್ವಿಕ್‌ಗಳು ಸಖರು." – ಎಂದರು. **"ಸಮಾನಖ್ಯಾನಾ ಋತ್ವಿಜಃ"** [ಪ:- 1.13.]; **"ಸಖಾ ಕಸ್ಮಾತ್ ಸಖ್ಯತೇಃ ಸಹಭೂತೇಂದ್ರಿಯೈ ಶೇರತೆ."** [1. 7, 30. 8.] "ಒಂದೇ ಖ್ಯಾತಿವೆತ್ತವರು ಸಖರು.": "ಭೂತೇಂದ್ರಿಯಗಳೊಂದಿಗೆ ಸ್ನೇಹ ಕುದುರಿಸಿ, ಸುಖಪೂರ್ವಕವಾಗಿರುವ ಕಾರಣ ಸಖರು." ಎಂದಿದ್ದಾರೆ. ಹೀಗೆಯೇ ಸಮಾನುಕಂಪ, ಸಹಾನುಭೂತಿಯುಳ್ಳವರೂ ಸಖರೇ – ಎಂದಿದ್ದಾರೆ ಅಸೀಮ ಶಬ್ದವಾರಿಧಿಯ ಮಹಾನ್ ಅನರ್ಘರತ್ನ ಶ್ರೀ॥ಯಾಸ್ಕರು.

ಭಗವದ್ವರ್ಣನೆ ತೀರಿತು. ಅವನ ಅನುಕಂಪಕ್ಕೆ ಅರ್ಹರಾದವರ ಗುಣಗಳನ್ನು ಹೇಳಿದುದಾಯಿತು. ಸರ್ವಜ್ಞ-ಸರ್ವಶಕ್ತ-ಸರ್ವಾನುಭವ ಸಂಯುಕ್ತನಾಗಿರುವವನು. ಭಗವಂತ ಹಾಗೆ ನೋಡಿದರೆ - ಎಲ್ಲರಿಗೂ ಅವನು 'ವರ'ನೇ ಆದರೆ, ಅವನ ವರಣೀಯತ್ವದ ಸಾಕ್ಷಾದನುಭೂತಿ ಯಾರಿಗಾದೀತು? ಆ ಭಗವಂತನ ಗುಣ-ಕರ್ಮ-ಸ್ವಭಾವಗಳಿಗೆ ಅನುಗುಣವಾಗಿ, ತನ್ನ ವ್ಯಕ್ತಿತ್ವವನ್ನೂ ಅರಳಿಸಿಕೊಂಡಾಗ ಮಾತ್ರ ಅರ್ಥವಾದೀತು? ಆ ದೇವದೇವನ ವರಣೀಯತ್ವ; ಸ್ವೀಕರಣೀಯತ್ವ. "ಪರಮಾತ್ಮ ಅಂತಹವನು; ಇಂತಹವನು, ಅವನು ಸರ್ವವ್ಯಾಪಕ-ಸರ್ವಜ್ಞ. ಅವನು ನಿರಾಕಾರ-ನಿರ್ವಿಕಾರ," - ಎಂಬ ಶಬ್ದಗಳನ್ನು ಯಾವ ಶಬ್ದಕೋಶವಾದರೂ ಕಲ್ಪಿಸಿಕೊಟ್ಟೀತು. ಆದರೆ, ಆ ಶಬ್ದಗಳ ಸತ್ಯಾರ್ಥದಿಂದ ಅಭಿವ್ಯಕ್ತವಾಗುವ ನಿರ್ದಿಷ್ಟ ತತ್ತ್ವಗಳು ಹೃದಯದ ಅಂತರತಮವನ್ನು ಸ್ಪರ್ಶಿಸಬೇಕಾದರೆ– ಓದುವುದು - ಬರೆಯುವುದು ಮಾತ್ರವಲ್ಲ, ಮನನ-ಚಿಂತನಗಳ ನಿದಿಧ್ಯಾಸ-ಸಾಕ್ಷಾತ್ಕಾರ ಕ್ರಿಯೆಯ ನಿರಂತರವಾದ ಅನುಷ್ಠಾನ ಬೇಕೇ ಬೇಕು.

**"ಪೃಚ್ಛ = ಪ್ರಶ್ನಿಸು"** ಎಂಬ ಚಿಕ್ಕ ಶಬ್ದ ಇಂದ್ರದೇವನ ಇಷ್ಟೊಂದು ಗುಣಗಳ ಮೇಲೆ ಜ್ಞಾನದ್ಯುತಿಯ ಕಿರಣಗಳನ್ನೆರಚಿತು. ವಿಶೇಷವೆಂದರೆ – "ವಿಪಶ್ಚಿತ್" ಶಬ್ದದ ಮೇಲೆ ಶ್ರೀ॥ ಮಧ್ವರ ಭಾಷ್ಯ; "ವ್ಯಾಪ್ತಚಿತ್ತ"-ಎಂದರೆ, ಎಲ್ಲೆಡೆ ಹರಡಿದ, ವಿಶಾಲವಾದ ಚಿತ್ತ ಯಾವನದೋ, ಅವನೇ ವ್ಯಾಪ್ತಚಿತ್ತ; ಅವನೇ "ವಿಪಶ್ಚಿತ್" – ಎಂದಿದ್ದಾರೆ ಶ್ರೀ॥ ಮಧ್ವರು. ಮಹರ್ಷಿ ದಯಾನಂದರ ಹಾಗೂ ಶ್ರೀ॥ ಮಧ್ವರ ಸಮಾನ ದರ್ಶನಶಕ್ತಿ ನಿಜವಾಗಿ ಅಲೌಕಿಕ. ಶ್ರೀ॥ ಮಧ್ವರ ಕಾಲದಲ್ಲಿ ಮಹರ್ಷಿಗಳ ಜನನವಾಗಿರಲಿಲ್ಲ; ಶ್ರೀ॥ಮಹರ್ಷಿಗಳು ಶ್ರೀ॥ ಮಧ್ವರ ಈ ಗ್ರಂಥಗಳ ಅವಲೋಕನ ಮಾಡಿರಲಿಲ್ಲ. ಹೀಗಿದ್ದರೂ ಅವರಿಬ್ಬರ ಅರ್ಥ-ಸಾಮ್ಯ ಕೇವಲ ಒಂದು ತಥ್ಯವನ್ನು ಮಾತ್ರ ಮಂಡಿಸಲು ಸಾಧ್ಯ; ಅದು ಅನುಭೂತದ ತತ್ತ್ವದ ಅಭಿವ್ಯಂಜನ ಮಾತ್ರವನ್ನು. ಈ ಪ್ರಕರಣ ವ್ಯಕ್ತಗೊಳಿಸುತ್ತಿರುವುದು ಆದನ್ನೇ

ಭಗವಂತ ವಿಶೇಷಜ್ಞನು; ಅಹಿಂಸಕನು; ಅಹಿಂಸಿತನು. ವ್ಯಾಪ್ತಚಿತ್ತನಾದ ಆ ಸರ್ವಾಭಿಜ್ಞ ಈಶ್ವರ ಆರಾಧಕನ ಹಾಗೂ ಅವನ ಆಪ್ತರ ಪಾಲಿಗೆ ಸ್ವಯಂ ಸರ್ವೋತ್ತಮ, ಸಂಪತ್ತೇ ಆಗಿದ್ದಾನೆ ಬ್ರಹ್ಮಾಕುಮಾರಿಯರ ಏಳು ದಿನಗಳ 'ಸ್ಪೆಷಲ್ ಕೋಚಿಂಗ್' ನಿಂದಾಗಲಿ, ಕ್ರೈಸ್ತರ - 'Realization of God made easy' ಇಂತಹ ನರಕೃತ ನರಸಂಬದ್ಧ ವಿಕಾರವೆಲ್ಲದರ ಒತ್ತಡದಿಂದಾಗಲಿ, ನ್ಯಾಯ-ವಿರುದ್ಧವಾಗಿ ಈಶ್ವರ ಏನನ್ನೂ ಮಾಡನು. ಆದಕಾರಣ - "ಸಾಧಿಸು. ಕೃತಕೃತ್ಯನಾಗು, ಆದರ್ಶ ಉನ್ನತವಿರಲಿ; ಆದರೆ ತಪ್ಪು ಆಗ್ರಹ ಮಾತ್ರ ಬೇಡ." ಎಂಬ ಸಂದೇಶವೇ ಈ ಮಂತ್ರದ ಉಪದೇಶ.

ಈ ಚತುರ್ಥ ಸೂಕ್ತದ ಚತುರ್ಥ ಮಂತ್ರದ ಭಾಷ್ಯದ ಪೂರ್ಣವೆಚ್ಚ
ಶ್ರೀಮತಿ ಜಯಾದೇವಿ ಕೆ. ಆರ್. ನಾಗರಾಜ್
ಮೈಸೂರು, ಇವರ ಸೇವೆ.

## ಸಂಹಿತಾ ವಿಭಾಗ

**ಉತ ಬ್ರುವಂತು ನೋನಿದೋ ನಿರನ್ಯತಶ್ಚಿ ದಾರತ।**

**ದಧಾನಾ ಇಂದ್ರ ಇದ್ದುವಃ॥೫॥**

[ಋಕ್:- 1. 4. 5.]

**ಪದಪಾಠ:-** ಉತ, ಬ್ರುವಂತು, ನಃ, ನಿದಃ, ನಿಃ, ಅನ್ಯತಃ, ಚಿತ್, ಆರತ ದಧಾನಾಃ, ಇಂದ್ರೇ. ಇತ್, ದುವಃ॥೫॥

**ಅನ್ವಯ:–** ಉತ, ನಃ ನಿದಃ ಅನ್ಯತಃ ಚಿತ್ ನಿ ದಾರತ (ಇತಿ) ಬ್ರುವಂತು ಇಂದ್ರೇ ಇತ್ ದುವಃ ದಧಾನಾಃ

**ಶಬ್ದಾರ್ಥ:–** [ಉತ] ಮತ್ತು, [ನಃ ನಿದಃ] ನಮ್ಮ ನಿಂದಕರು. "[ಅನ್ಯತಃಚಿತ್] ಬೇರೆ ಎಲ್ಲಿಗಾದರೂ, [ನಿಃ ಆರತ] ಪೂರ್ಣತಃ ಹೊರಟೇ ಹೋಗಿರಿ" - (ಇತಿ - ಎಂದು) [ಬ್ರುವಂತು] ಹೇಳಲಿ. (ಆದರೂ, ನಾವು), [ಇಂದ್ರೇಇತ್] ಸರ್ವೇಶ್ವರನಾದ, ಸರ್ವೈಶ್ವರ್ಯ ಸಂಪನ್ನ ಈಶ್ವರನಲ್ಲಿಯೇ, [ದುವಃ] ಆತ್ಮನಿವೇದನವನ್ನು, ಪ್ರಾರ್ಥನಾಸ್ತುತಿಗಳನ್ನು [ದಧಾನಾಃ] ಮಂಡಿಸುವವರಾಗಿ, (ಸ್ಯಾಮ) ಇರೋಣ.

**ತಾತ್ಪರ್ಯ:–** ನಿಂದಕರ ವೃತ್ತಿ ಬಹುಕಷ್ಟದಿಂದ ವರ್ಜಿಸಲಾದೀತು, ನಮ್ಮ ಭಗವದುಪಾಸನಾಕಾರ್ಯ ನಿಂದಕರಿಗೆ ಅತಿಕಹಿಯಾಗಿ, ಬೇಡಾದವಸ್ತುವಾಗಿ ಕಂಡುಬಂದರೆ ಆಶ್ಚರ್ಯವಿಲ್ಲ. ನಮ್ಮ ಸರ್ವಹಿತಕಾಮನೆಯಿಂದಲೇ ನಡೆಯಿಸಲ್ಪಡುವ ಕಾರ್ಯ ನಿಂದಕರಿಗೆ ಏನೋ ಘೋರಾಪರಾಧವಾಗಿ ಕಾಣಬಹುದು. ಅವರ ಕೈ ಮೇಲಿದ್ದಾಗ ನಮ್ಮನ್ನು ಬೇರೆಡೆಗೆ ಹೋಗಬೇಕೆಂದು ಆಜ್ಞಾಪಿಸಬಹುದು. ಆದರೆ - ಯಾರ ಕೈ ಎಷ್ಟೇ ಮೇಲಾಗಲಿ; ಸರ್ವರಕ್ಷಕನ ರಕ್ಷಾಣಾಬಲಕ್ಕೆ ಅದೆಂದು ತಾನೇ ಸರಿಗಟ್ಟೀತು? ಸಟೆಗೆ ಸೋಲು ದಿಟಕ್ಕೆ ದಿಗ್ದಿಗಂತವ್ಯಾಪೀ ದಿಟ್ಟತನದ ಗೆಲುವು. ಜನರೇನೇ ಅನ್ನಲಿ; ಎಷ್ಟೇ ಕಷ್ಟ ಬರಲಿ ನಾವು ಮಾತ್ರ ಆ ಸರ್ವರಕ್ಷಕನನ್ನು ಮೂರುಕಾಲಕ್ಕೂ ಮರೆಯದಿರೋಣ. ಅವನ ನಾಮ ಸ್ಮರಣ ನಮ್ಮ ಜೀವನದ ಉಸಿರಾಗಲಿ, ಅವನ ಧ್ಯಾನವೇ ನಮ್ಮ ಪ್ರಾಣವಾಗಿ ಪರಿಣಮಿಸಲಿ. ಕಷ್ಟ ಬಂದಾಗ ನಮ್ಮ ಭಕ್ತಿಯದಾರ್ಢ್ಯದ ಪರೀಕ್ಷೆಯಾಗಲಿ.

**ಭಾಷ್ಯ:–** ಈ ಮಂತ್ರದಲ್ಲಿ ಕ್ಲಿಷ್ಟವಾದ ಶಬ್ದಗಳಿಲ್ಲ. ಆದರೂ, ಒಂದೇ ಪದಕ್ಕೆ ಪರಸ್ಪರ ವಿರುದ್ಧವಾದ ಅರ್ಥಗಳನ್ನು ಬರೆದು, ಭಾಷ್ಯಕಾರರು ಭ್ರಾಂತಿಗೆ ಎಡೆಯಿಲ್ಲದ ಕಡೆಯೂ ಭ್ರಾಂತಿಯನ್ನುಂಟುಮಾಡುತ್ತಾರೆ.

ಶ್ರೀ ಮಧ್ವರು ಈ ಮಂತ್ರದಲ್ಲಿ ಬರುವ **'ನಿದ'** ಶಬ್ದಕ್ಕೆ **"ನಿದಸ್ತಸ್ಯ ಸಮೀಪಗಾಃ।"** – "ಶ್ರೀಹರಿಯ ಬಳಿಯಿರುವವರು 'ನಿದ'ರು - ಎಂದು ವಿವರಣೆಯಿತ್ತು, **"ತೇಽಪಿ ಬ್ರುವಂತು ನೋ ದೇವಂ"** - "ಅವರೂ ಕೂಡ ನಮಗೆ ದೇವರ ಬಗೆಗೆ ಉಪದೇಶಿಸಲಿ." - ಎಂದು ಬರೆದಿದ್ದಾರೆ **"ನಿದ"** ಶಬ್ದಕ್ಕೆ ಶ್ರೀ॥ಮಧ್ವರಿತ್ತ ಅರ್ಥ **"ಶುನಶ್ಚಿಚ್ಛೇಪಂ ನಿದಿತಂ ಸಹಸ್ರಾದ್ಯೂಪಾದಮುಂಚೋ ಅಶಮಿಷ್ಟ ಹಿಷಃ॥** [ಋಕ್;- 5. 2. 7.] "ಓ ಅಗ್ನಿದೇವ! ನಿಂದಿತನಾದ, ನಾಯಿಯಂತೆ ಕಾಮಾತುರನಾಗಿ ವರ್ತಿಸುವ ಭೋಗಾಭಿಲಾಷೀ ಜೀವನವನ್ನೂ ಕೂಡ ಸಾವಿರ ಬಗೆಯ ನಾಶಸ್ತಂಭಗಳಿಂದ ನೀನು ಬಿಡಿಸಿದೆ; ಅವನ ಕಾಮಾತುರದೋಷ ತಣ್ಣಗಾಗಿ, ಅವನು ಶಾಂತನಾದನು." ಎಂಬ ಶ್ರುತಿಯಲ್ಲಿ 'ನಿದಿತ' ಶಬ್ದವನ್ನು ಕಾಣುತ್ತೇವೆ; **"ನಿದಂ ನಿದಂ ಪವಮಾನ- ನಿತಾರಿಷ."** [ಋಕ್:- 9 79. 5.] - "ಓ ಸರ್ವಪಾವನಕರ್ತ! ಪ್ರತಿಯೊಬ್ಬ ನಿಂದಕನನ್ನೂ ಸನ್ಮಾರ್ಗ ದಲ್ಲಿ ನಡೆಯಿಸಿ, ಉದ್ಧರಿಸು." - ಎಂಬ ಶ್ರುತಿಯಲ್ಲಿ 'ನಿದಂ' ಪದವೇ ಇದೆ. - ಎಂಬ ವೇದಾಶಯಗಳ ನಿಟ್ಟನಿಂದ, ನೆಟ್ಟನೆಯ ಅರ್ಥವೆಂದೇ ತೋರಲೂಬಹುದು. ಪತಿತ ಪಾವನನಲ್ಲವ ಈಶ್ವರ ಈಶ್ವರನೇ ಅಹ ದೋ - ಅಲ್ಲವೋ – ಎಂಬ ಸಂಶಯ ಮೂಡಿದರೆ ಆಶ್ಚರ್ಯವೂ ಅಲ್ಲ,

ಆದರೆ, **'ಣಿದಿ ಕುತ್ಸಾಯಾಂ', ಕುತ್ಸಾ, ನಿಂದಾ, ಗರ್ಹಣಾ'** ಆದಿ ಅರ್ಥಗಳನ್ನುಳ್ಳ 'ಣಿದಿ' **(ನಿದಿ?)** ಧಾತುವಿನಿಂದ ರೂಪಗೊಂಡ **'ನಿದಃ'** ಶಬ್ದಕ್ಕೆ, ನಿಂದಕರು ಎಂಬರ್ಥವೂ ಇದೆ ಎಂಬುದು ಸ್ಪಷ್ಟ. ಶ್ರೀ॥ ಸಾಯಣರು **"ಹೇ ನಿದಃ! ನಿಂದಿತಾರಃ ಪುರುಷಾಃ! ನಿರಾರತ."** - "ಓ ನಿಂದಕಜನರೇ! ಇಲ್ಲಿಂದ ಆಚೆ ಹೋಗಿರಿ, ಎಲ್ಲೆಡೆಯಿಂದಲೂ ದೂರ ಸಾಗಿರಿ." - ಎಂದೇ ಬರೆದಿದ್ದಾರೆ. ಕೆಟ್ಟವರನ್ನು ಅಟ್ಟುವ ನಮ್ಮ ವ್ಯಾಧಿ ಬಹುಪ್ರಾಚೀನ. ಆದಕಾರಣ, ನಾವು ನಿಂದಕರನ್ನೂ ಬಂಧುಗಳನ್ನಾಗಿ ಮಾಡಿ ಕೊಳ್ಳುವ ಕಾಲ ಬಂದೂ ಬಹುಕಾಲವಾಗಿದೆ. ನಿಂದಕರನ್ನು ಕೇವಲ ಬಂಧುಗಳಾಗಿಯೇ ಅಲ್ಲ; ಗುರುಗಳಾಗಿಯೂ ಮಾಡಿಕೊಳ್ಳಬೇಕೆಂಬ ಆಜ್ಞೆ ವೇದಗಳಲ್ಲಿದೆ. ಆಲಿಸಿರಿ:-

**ಯೋ ನೋ ಅಗ್ನೇ ಅರರಿವಾನಘಾಯುಃ**
**ಅರಾತೀವಾ ಮರ್ಚಯತಿ ದ್ವಯೇನ।**
**ಮಂತ್ರೋ ಗುರುಃ ಪುನರಸ್ತು ಸೋ ಅಸ್ಮಾನ್**
**ಅನುಮೃಕ್ಷೀಷ್ಟ ತನ್ವಂ ದುರುಕ್ತೈಃ ॥**

[ಋಕ್:- 1. 147. 4.]

"[ಅಗ್ನೇ] ಓ ಜ್ಯೋತಿರ್ಮಯ! [ಯಃ] ಯಾವನು, [ಅರರಿವಾನ್] ಜಿಪುಣನೂ, [ಅಘಾಯುಃ] ಪಾಪಭರಿತಜೀವನದವನೂ, [ಅರಾತೀವಾ] ಪರಮಸ್ವಾರ್ಥಿಯೂ ಆಗಿ, [ನಃ] ನಮ್ಮನ್ನು, [ದ್ವಯೇನ] ಇಬ್ಬಗೆಯ ನಡೆಯಿಂದ, [ಮರ್ಚಯತಿ] ಹಿಂಸಿಸುತ್ತಾನೋ, [ಪುನಃ]

[ಸಃ] ಅಂತಹವನಾದರೂ ಆವನೇ, [ಮಂತ್ರಃ] ನಮಗೆ ಆಲೋಚನಾಪ್ರೇರಕನೂ, [ಗುರುಃ] ಗುರುವೂ, [ಅಸ್ತು] ಆಗಲಿ! [ದುರುಕ್ತೈಃ] ದುರ್ನುಡಿಗಳಿಂದಲೇ ಆದರೂ ಸರಿಯೇ, [ಅಸ್ಮಾನ್] ನಮ್ಮನ್ನೂ [ತನ್ವಃ] ಅಂಗೋಪಾಂಗಗಳನ್ನೂ, [ಅನುಮೃಕ್ಷೀಷ್ಟ] ಶುದ್ಧೀಕರಿಸಲಿ."

ಸಜ್ಜನನು ಸನ್ಮಾನ್ಯನೇ ಸರಿ; ಏಕೆಂದರೆ, ಅವನು ನಮ್ಮ ಬಾಳುಗಳಿಗೆ ಬೆಳಕನ್ನು ತರುತ್ತಾನೆ. ಆದರೆ, ದುರ್ಜನ ಅವನಿಗಿಂತಧಿಕ ಸನ್ಮಾನ್ಯ. ಏಕೆಂದರೆ, ಸಜ್ಜನ ಸ್ವಂತ ಜೀವನಸಂಪತ್ತನ್ನು ಶೂನ್ಯಗೊಳಿಸಿ ನಮಗೆ ನೀತಿಕಲಿಸುವುದಿಲ್ಲ; ಆದರೆ, ದುರ್ಜನ ದೇವದತ್ತ ವಾದ ದೇಗುಲದಂತಿರುವ ದೇಹವನ್ನೂ, ನಡೆ-ನುಡಿ-ಬಗೆ-ನಗೆಗಳನ್ನೂ ಕೂಡ ಕಾಡುಪಾಲಾಗಿ ಮಾಡಿ, ನಮಗೆ ಸತ್ಪಥವನ್ನು ತೋರಿಸುತ್ತಾನೆ. ಈ ಬಗೆಯ ಉದಾತ್ತನೀತಿಯನ್ನು ಬೋಧಿಸುವ ವೇದ, "ನಿಂದಕರನ್ನು ಅಟ್ಟಿಬಿಡು. ಅವನ ಬದುಕು ಕೆಟ್ಟಾದರೂ ಹೋಗಲಿ ನಮ್ಮ ಬಳಿ ಅವನ ಆಗಮನ ಬೇಡವೇ ಬೇಡ" - ಎಂಬಂತಹ ಸಂಕುಚಿತ ಸಂದೇಶವನು ಕೊಡಬಲ್ಲದೆ? ಬುದ್ಧಿ ಏನೋ ಕೊಡಲಾರದು - ಎಂದೇ ಎನ್ನುತ್ತಿದೆ.

ಅನ್ಯಮತೀಯರಿಂದ 'ನಿಂದಕರನ್ನು ದೇಶದಲ್ಲಿರಗೊಡಬೇಡಿ. ಅವರು ಎಲ್ಲಿಯೂ ನೆಲೆಗಾಣದಿರಲಿ." - ಎಂಬ ಭಾವನೆಯ ವಾಕ್ಯಗಳು ಮಹರ್ಷಿ ದಯಾನಂದರ ಲೇಖನಿ ಯಿಂದ ನಿಃಸೃತವಾದವು - ಎಂದರೆ, ಅದರ ಅರ್ಥ ಖಂಡಿತ ಬೇರೆಯೇ ಇರಬೇಕು. "ನಿಂದಿತಾರಃ ನಿತರಾಂ ದೇಶಾತ್ ಗಚ್ಛತು" - ಎಂದು ಶಬ್ದಾರ್ಥದಲ್ಲಿ ಮಹರ್ಷಿಗಳೂ ಬರೆದಿದ್ದಾರೆ. ಆದುದರಿಂದ, ಋಷಿ-ಭಾವಾನಾಗ್ರಹಿಕೆಗಾಗಿ, ನಿಜವಾದ ಪೃಷ್ಠಭೂಮಿಕೆಯನ್ನು ನೋಡಲೇ ಬೇಕು. ಹಾಗೆಯೇ ನೋಡೋಣ, ಬನ್ನಿರಿ.

ಇನ್ನು ಮಹರ್ಷಿದಯಾನಂದ ಭಾಷ್ಯ:- **"ನಿರನ್ಯತಶ್ಚಿದಾರತ."** - ಎಂಬ ವಾಕ್ಯಕ್ಕೆ - "ಸರ್ವಥಾ ಬೇರೆಡೆಗೆ ತೆರಳಲಿ." - ಎನ್ನುತ್ತಾರಾದರೂ, ಗುಂಪು-ಗುಂಪಿಗೇ ಬಹಿಷ್ಕಾರಹಾಕುವ, "ಊರಿದ್ದಲ್ಲಿ ಹೊಲೆಗೇರಿಯೂ ಸಿದ್ಧ." - ಎಂಬ ಗಾದೆಗೆ, ತಲೆಬಾಗರು ಮಹರ್ಷಿ ಪ್ರವರರು. ನಿಂದಕರನ್ನು ಮಂದಿಗಳಿಂದ ದೂರವಿಟ್ಟು, ತಾತ್ಕಾಲಿಕರೋಗವನ್ನು ಶಾಶ್ವತವ್ಯಾಧಿಯಾಗಿ ಮಾರ್ಪಡಿಸುವ ಮುಗ್ಧಜನರ ಯೋಜನೆಯಲ್ಲ ಮಹರ್ಷಿಗಳದ್ದು. ಈ ದಿವ್ಯ ಸಿದ್ಧಾಂತ ಮಹರ್ಷಿಗಳ ಈ ನಿಮ್ನ ಲಿಖಿತವಾಕ್ಯಗಳಿಂದ ಸಿದ್ಧವಾಗುತ್ತದೆ.

> **"ಯೇ ಇಂದ್ರೇ ಪರಮೇಶ್ವರೇ ದುವಃ ಪರಿಚರ್ಯಾಂ ದಧಾನಾಃ ಸರ್ವಾಸು ವಿದ್ಯಾಸು ಧರ್ಮೇ ಪುರುಷಾರ್ಥೇ,ಚ ವರ್ತಮಾನಾಃ ಸಂತಿ, ತ ಉತೈವ ನೋಽಸ್ಮಭ್ಯಂ ಸರ್ವಾವಿದ್ಯಾ ಬ್ರುವಂತು, ಉಪದಿಶಂತು, ಯೇಚಿದನ್ಯೇ ನಾಸ್ತಿಕಾ ನಿದಾ ನಿಂದಿತಾರೋಽ ವಿದ್ವಾಂಸೋಃ ಧೂರ್ತಾಃ ಸಂತಿ, ತೇ ಸರ್ವೇ ಇತೋದೇಶಾತ್, ಅಸ್ಮನ್ನಿವಾಸಾತ್ ನಿರಾರತ ದೂರೇಗಚ್ಛಂತು; ಉತಾನ್ಯತೋ**

**ದೇಶಾದಪಿ ನಿಃಸರಂತು, ಅರ್ಥಾತ್ ಅಧಾರ್ಮಿಕಾಃ ಪುರುಷಾಃ ಕ್ವಾಪಿ ಮಾ ತಿಷ್ಠೇಯುಃ।**

ಇಷ್ಟು ದೀರ್ಘವಾದ ಉದ್ಧರಣವಿಸ್ತಾರಕ್ಕಾಗಿ ಕ್ಷಮೆಯಿರಲಿ. ಆದರೆ - ಪ್ರಸಂಗವೇ ಅಂತಹುದು. ಅಜಾತಶತ್ರು ಮಾತ್ರ, ನಿರ್ವೈರವ್ಯಕ್ತಿ ಮಾತ್ರ ಮೋಕ್ಷಾಧಿಕಾರಿಯಾದಾನೆಂಬ ವೇದಾದೇಶವನ್ನು ನಮ್ಮ ಸುಯೋಗ್ಯಪಾಠಕರು ಮೊದಲೇ ಓದಿದ್ದಾರೆ. ಎರಡು ವಿಧದಿಂದ ಮಾನವ ಅಜಾತ ಶತ್ರುವಾಗಬಲ್ಲನು. ಶತ್ರುವೆಂದು ತಿಳಿಯಲ್ಪಟ್ಟವನ ರುಂಡವನು ಚೆಂಡಾಡಿ ಅಜಾತ ಶತ್ರುವಾಗಬಲ್ಲನು; ಶತ್ರುವಾದವನನ್ನು ಮಿತ್ರನನ್ನಾಗಿ ಮಾಡಿಕೊಂಡು ಬೇಕಾದರೂ ಅಜಾತ ಶತ್ರುವಾಗಬಲ್ಲನು. ಮೊದಲಮಾರ್ಗ ಮೇಲುನೋಟಕ್ಕೆ ಸುಗಮ, ಸುಲಭ. ಆದರೆ, - ಅದರ ಪರಿಣಾಮ ಪರಿವರ್ತನಶೀಲ; ಆ ಮಾರ್ಗ ಎಂದಿಗೂ, ಯಾರಿಗೂ, ಎಲ್ಲಿಯೂ ಶಾಶ್ವತಫಲವನ್ನು ತಂದುಕೊಟ್ಟಿಲ್ಲ. ಎರಡನೇಯಮಾರ್ಗ ವೇದೋಕ್ತವಾದ, ಗುರಿತಪ್ಪದ, ಪರಮ ಮಧುರ ಮೈತ್ರೀಭಾವನೆಯನ್ನು, ಚಿರಸ್ಥಾಯಿಯಾದ ಪರಿಣಾಮವನ್ನು ಕೊಡುವ, ಪರಮಪವಿತ್ರವಾದ ಪರಮೇಶ್ವರ ಪ್ರದರ್ಶಿತವಾದ ಪುಣ್ಯಪಥ. **"ಯದ್ವದಾಮಿ ಮಧುಮತ್ತದ್ವದಾಮಿ ಯದೀಕ್ಷೇ ತದ್ವನಂತು ಮಾ"**. [ಅಥರ್ವವೇದ:– 12. 1. 58.] - "ಭಗವನ್! ಏನನ್ನು ಮಾತನಾಡುವೆನೋ, ಅದನ್ನು ಮಧುರ-ಮಧುರವಾಗಿಯೇ ಮಾತನಾಡುವೆನು, ಯಾವುದರ ಕಡೆ ನೋಡುವೆನೋ, ಅದು ನನ್ನಲ್ಲಿ ಮಮತೆಯನ್ನು ಬೆಳೆಯಿಸಿಕೊಳ್ಳಲಿ." **"ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮೇ ಆಸನ್."** [ಋಕ್:-3. 26. 7.] - ["ಜನ್ಮನಾ] ಜನ್ಮದಿಂದಲೇ, [ಜಾತವೇದಾಃ] ಸೃಜಿತವಾದುದನ್ನು ಅರಿಯಬಲ್ಲ ಚೇತನನಾದ ಆತ್ಮನು, [ಅಸ್ಮಿ] ಆಗಿದ್ದೇನೆ. [ಘೃತಂ] ಸ್ನೇಹವೇ, [ಮೇ ಚಕ್ಷುಃ] ನನ್ನ ಕಣ್ಣು. [ಮೇ ಆಸನ್] ನನ್ನ ಮುಖದಲ್ಲಿ, ನಾಲಗೆಯಲ್ಲಿ, [ಅಮೃತಂ] ಅಮೃತವಿದೆ." - ಈ ಬಗೆಯ, ಮಾನವನ ಮಾನವರ್ಧಕವಾದ ಮಾತನ್ನು ಅಂತರತಮದಿಂದ ಉದ್ಗರಿಸಬಲ್ಲ ವೇದಾನುಯಾಯಿ ಯಾರನ್ನಾದರೂ ತುಳಿಯಬಲ್ಲನೇ? ತಳ್ಳಬಲ್ಲನೇ? ಸ್ವಪ್ನದಲ್ಲಿಯೂ ಅದು ಸಂಭವವಿಲ್ಲ.

**"ಮಿತ್ರಸ್ಯ ಚಕ್ಷುಷಾ ಸಮೀಕ್ಷಾಮಹೇ."** [ಯಜು:- 36. 18].– "ನಾವು ಪರಸ್ಪರ ಒಬ್ಬರನ್ನೊಬ್ಬರು ಮಿತ್ರದೃಷ್ಟಿಯಿಂದಲೇ ನೋಡುತ್ತಿರೋಣ." - ಎಂಬ ಪಾಠಕಲಿತ ಮಹರ್ಷಿಗಳು ವೈರ-ವಿರೋಧಗಳ, ಸ್ಪೃಶ್ಯತಾಸ್ಪೃಶ್ಯತೆಗಳ ಕಲ್ಪನೆಯನ್ನಾದರೂ ಮಾಡಬಲ್ಲವರಾಗಿದ್ದರೇ?

ಈ ಹಿನ್ನೆಲೆಯಲ್ಲಿ ಮಹರ್ಷಿ ದಯಾನಂದರ ಭಾಷ್ಯವನ್ನೋದಿ ನೋಡೋಣ:-

"ಯಾರು ಸರ್ವೇಶ್ವರನಾದ ಭಗವಂತನನ್ನು ಆರಾಧಿಸುತ್ತಾ, ಸಮಸ್ತವಿದ್ಯೆಗಳಲ್ಲಿಯೂ, ಧರ್ಮದಲ್ಲಿಯೂ, ಪುರುಷಾರ್ಥದಲ್ಲಿಯೂ ನಿರತರಾಗಿರುತ್ತಾರೋ, ಅಂತಹವರೇ ನಮಗೆ ಸರ್ವವಿದ್ಯೆಗಳನ್ನೂ ಹೇಳಿಕೊಡಲಿ, ಉಪದೇಶಿಸಲಿ. ಮತ್ತೆ ಯಾರು ನಾಸ್ತಿಕರಾದ

'ನಿದ'ರು, ನಿಂದಕರಾದ ಅವಿದ್ವಾಂಸರೂ, ಧೂರ್ತರೂ ಇದ್ದಾರೋ, ಅವರೆಲ್ಲಾ ಈ ದೇಶದಿಂದ, ನಮ್ಮ ನಿವಾಸದಿಂದ ದೂರಸರಿಯಲಿ ಅನ್ಯದೇಶಗಳಿಂದಲೂ ಹೊರಗಾಗಲಿ ಎಂದರೆ – **ಅಧಾರ್ಮಿಕರಾದ ಪುರುಷರು ಎಲ್ಲಿಯೂ ಉಳಿಯದಿರಲಿ."**

ಗಮನಿಸಿರಿ. ಅಧಾರ್ಮಿಕರಾದ ಪುರುಷರು ಎಲ್ಲಿಯೂ ಉಳಿಯದಿರಲಿ. ಎಂದರೆ ಎಲ್ಲೆಡೆಯಲ್ಲಿಯೂ ಧಾರ್ಮಿಕರಾದ ಮಾನವರೇ ವಿರಾಜಿಸುತ್ತಿರಲಿ. ಇದೇ ಮಹರ್ಷಿವರ್ಯರ ಆಶಯ. ಅವರು ಉದಯಿಸಿದುದು ಬೆಳೆದುದು, ಕೊನೆಗೆ ಅಸ್ತವಾದುದೂ ಈ ಒಂದು ಮಹೋನ್ನತ ಭಾವನೆಯನ್ನು ಮೂರ್ತರೂಪಗೊಳಿಸಲಿಕ್ಕಾಗಿ. **"ಮಾ ನಃ ಶಂಸೋ ಅರರುಷೋ ಧೂರ್ತಿಃ ಪ್ರಣಙ್ಮರ್ತ್ಯಸ್ಯ। ರಕ್ಷಾಣೋ ಬ್ರಹ್ಮಣಸ್ಪತೇ॥** [ಋಗ್ವೇದ:- 1. 18. 3.] - "ಓ ಬ್ರಹ್ಮಾಂಡಾಧಿಪತೇ! ಓ ವೇದಜ್ಞಾನದ ಸ್ವಾಮಿ! ನಮ್ಮ ಯಶಸ್ಸು, ಶುಭ್ರಕೀರ್ತಿ ನಶಿಸದಿರಲಿ, ಸ್ವಾರ್ಥಿಯೂ, ಕ್ರೋಧಿಯೂ ಆದ ಮಾನವನ ಧೂರ್ತತನ ಮಾತ್ರ ನಾಶಹೊಂದಲಿ. ನಮ್ಮೆಲ್ಲರನ್ನೂ ರಕ್ಷಿಸು" - ಎಂಬ ಹಂಬಲು ಆ ಋಷಿಹೃದಯದ ಹೊನ್ನು. ಅವರು ಆಶಿಸುತ್ತಿದ್ದುದು ಮಾನವನ ಧೂರ್ತತನದ ನಾಶವನ್ನು ಮಾತ್ರ; ಮಾನವನ ನಾಶವನ್ನಲ್ಲ. ಅವರ ಸಮಗ್ರ ಜೀವನ ಈ ಮಹಾನ್ ತತ್ತ್ವದ ಜ್ವಲದುದಾಹರಣ ಮಾತ್ರ. ಅಂತಹ ಮಹಾಮಹಿಮನ ನಾಲಗೆಯಿಂದಾಗಲಿ, ಲೇಖನಿಯಿಂದಾಗಲಿ, ಯಾರಿಗಾದರೂ ಕೇಡಾಗಲಿ - ಎಂಬರ್ಥ ಬರುವ ಶಬ್ದವನ್ನು ನಿರೀಕ್ಷಿಸಲು ಎಂದಿಗೂ ಸಾಧ್ಯವಿಲ್ಲ.

ಹೀಗೆ, ಸರಿಯಾದ ಹಿನ್ನೆಲೆಯಲ್ಲಿ ಮಹರ್ಷಿದಯಾನಂದರ ಈ ಮಂತ್ರದ ಭಾಷ್ಯವನ್ನೋದಿದಾಗ, "ಕೆಟ್ಟವರನ್ನು ಸುಟ್ಟುಹಾಕಿರಿ; ಸೊಟ್ಟ ನಡೆಯುವವರನ್ನು ನೆಟ್ಟಗೆ ನರಕಕ್ಕೆ ಅಟ್ಟಿಬಿಡಿರಿ." - ಎಂಬುದವರ ಧ್ಯೇಯವಾಗಿರಲಿಲ್ಲ; ತಪ್ಪುಹೆಜ್ಜೆಯಿಟ್ಟವರನ್ನು, ವಿರಾಡಾತ್ಮನಾಶ್ರಯಕ್ಕೆ ಬರಲು ಒಪ್ಪಿಸಿ, ಒಪ್ಪವಾದ ಮಾರ್ಗಕ್ಕೆ ಅವರನ್ನು ಕರೆತನ್ನಿರಿ. ಧ್ವಂಸಮಾಡಬೇಕಾಗಿರುವುದು ಪಾಪವನ್ನೇ ಹೊರತು ಪಾಪಿಯನ್ನಲ್ಲ." ಎನ್ನುವುದೇ ಅವರ ಅಜರಾಮರವಾದ, ಶಾಶ್ವತವಾದ, ಸಾರ್ವಕಾಲಿಕ-ಸಾರ್ವಭೌಮ ಸಿದ್ಧಾಂತವೇ ಆಗಿತ್ತು: – ಎಂಬ ನಿಭ್ರಾಂತ, ನ್ಯಾಯಸಂಗತ ನಿರ್ಣಯವೇ ನಿಷ್ಪನ್ನವಾಗುತ್ತದೆ.

ಮಾತ್ರವಲ್ಲ. ಮೇಲು-ಮೇಲಿನ ನೋಟಕ್ಕೆ, ನಾವು ಕೊಟ್ಟಿರುವ - **''ಉತ ನಃ ನಿದಃ ಅನ್ಯತಃ ಚಿತ್ ನಿಃ ಆರತ, (ಇತಿ) ಬ್ರುವಂತು. (ತಥಾಪಿ) ಇಂದ್ರೇಚಿತ್ ದುವಃ ದಧಾನಾ (ಸ್ಯಾಮ)"** - ಎಂಬ ಅನ್ವಯದಿಂದ, ಮಹರ್ಷಿ ದಯಾನಂದರು ಮಾಡಿರುವ - **"ನಃ ಅಸ್ಮಭ್ಯಂ ಉತ ಅಪ್ಯೇವ ಸರ್ವಾವಿದ್ಯಾ ಉಪದಿಶಂತು. ನಿದಃ ನಿಂದಿತಾರಃ ನಿ ನಿತರಾಂ ಅನ್ಯಃ ದೇಶಾತ್ ಚಿತ್ ಅನ್ಯೇ ಆರಂತು ಗಚ್ಛಂತು."** - ಎಂಬ ಅನ್ವಯ ಸ್ವಲ್ಪ ಭಿನ್ನವೇನೋ - ಎಂದು ತೋರುತ್ತದೆ. ಆದರೆ ಅದು ಮೇಲು ನೋಟ ಮಾತ್ರ. ನಮ್ಮ ಅನ್ವಯ "ನಮ್ಮ ನಿಂದಕರು ನಮಗೆ "ನೀವು ಬೇರೆ ಎಲ್ಲಾದರೂ ಹೊರಟುಹೋಗಿರಿ." – ಎಂಬ ಭಾವನೆಯನ್ನು ಧ್ವನಿಸುವಂತೆ ತೋರು

ತ್ತದೆ, ಆದರೆ, ಮಹರ್ಷಿಗಳು 'ಉತ' ಎಂಬ ಪದಕ್ಕೆ 'ಅಪಿಏವ' - ಅಪರೂ ಕೂಡ (ಶ್ರೀ|| ಮಧ್ವರಂತೆಯೇ 'ಏವಃ' ಎನ್ನುವುದಕ್ಕೆ 'ಭಗವತ್ಸಾಮೀಪ್ಯವರ್ತಿಗಳು. - ಎಂಬ ಭಾವವನ್ನೇಗ್ರಹಿಸಿರಬಹುದೆನೋ.) ಎಲ್ಲ ವಿದ್ಯೆಗಳನ್ನೂ ಉಪದೇಶಿಸಲಿ." – ಎಂದು ಬರೆದಿದ್ದಾರೆ. "ನಮ್ಮ ನಿಂದಕರು ನಮ್ಮನ್ನು ಎಲ್ಲಿಗೇ ಅಟ್ಟಿದರೂ, ನಾವು ಮಾತ್ರ ಸರ್ವೇಶ್ವರನ ಆರಾಧನೆಯನ್ನು ಎಲ್ಲಿಯೇ ಇದ್ದರೂ ಬಿಡುವುದಿಲ್ಲ." - ಎಂಬ ಭಾವನೆ ನಮ್ಮ ಕಥನದಿಂದ ಧ್ವನಿತವಾದರೆ, "ನಿಂದಕರಿಗೆ ಎಲ್ಲಿಯೂ ಉಳಿಯಲು ಎಡೆಸಿಕ್ಕದಿರಲಿ," - ಎಂಬ ಭಾವನೆ ಮಹರ್ಷಿಗಳ ಕಥನದಿಂದ ಸೂಸುವಂತೆ ಕಾಣುತ್ತದೆ. ಆದರೆ, ಆಕಾಂಕ್ಷೆಮಾತ್ರ ಒಂದೇ "ನಾಸ್ತಿಕರು ಎಲ್ಲಿಯೂ ಇಲ್ಲದಂತಾಗಲಿ; ನಮ್ಮ ಭಗವದ್ಭಕ್ತಿಭಾವನೆ ಎಲ್ಲಿಯೂ, ಎಂದಿಗೂ ಯಾವುದೇ ಕಾರಣದಿಂದಲೂ ಕಂದದೆ, ಕುಂದದೆ, ನಂದದೆ, ಮಂದವಾಗದೆ, ಕ್ಷಣ-ಕ್ಷಣಕ್ಕೂ ಬೆಳೆದುಬರುತ್ತಿರಲಿ " - ಎಂಬುದೇ ನಮ್ಮ ಉದ್ದೇಶ. ದೃಷ್ಟಿಬಿಂದು ಮಾತ್ರ ಸ್ವಲ್ಪ ಬೇರೆ. ನಮ್ಮ ಅನ್ವಯದಲ್ಲಿ, ನಾವು ಇತ್ತಿರುವ ಅರ್ಥದಿಂದ, 'ನಾವು' ಪ್ರಧಾನರಾಗಿ, "ನಮ್ಮ ಭಕ್ತಿಯ ಭವ್ಯಭಾವನಾ ಬಲ ಎಂದೆಂದಿಗೂ ಕುಗ್ಗದಿರಲಿ. - ಎಂದು ಹೇಳುತ್ತಿದ್ದರೆ, ಮಹರ್ಷಿಗಳಿಗೆ ತಮ್ಮ ಭಗವದ್ಭಕ್ತಿ ಮಹಾನ್‌ಪರ್ವತದಂತೆ ದೃಢ: ಗಗನಸ್ಪರ್ಶಿ - ಎಂಬಷ್ಟು ಸಮುನ್ನತ ಅದು ಕುಂದುವ ಕನಸನ್ನೂ ಕೂಡ ಕಾಣಲಾರರು ಅವರು;" ತಾವಂತೂ ತಮ್ಮ ತತ್ತ್ವದಲ್ಲಿ ದೃಢರೇ. ಆದರೆ, ಅನ್ಯರೂ ನಾಸ್ತಿಕರಾಗದಿರಲಿ; ಈಶ್ವರೀಯ ಭಕ್ತಿ-ಸಂಪತ್ತನ್ನು ಕಳೆದುಕೊಳ್ಳದಿರಲಿ. – ಎಂಬ ಸರ್ವಹಿತಚಿಂತನದ ಆಂತರಿಕ ಅಭ್ಯರ್ಥನೆ ಎದ್ದುಕಾಣುತ್ತಿದೆ ಅವರ ಒಂದೊಂದು ಅಕ್ಷರದಿಂದಲೂ ಕೂಡ ವ್ಯತ್ಯಾಸವಿಷ್ಟೇ; ಅವರು ನಮಗಿಂತ ನೂರಾರು-ಸಾವಿರಾರು ಹೆಜ್ಜೆ ಮುಂದಿದ್ದಾರೆ; ನಾವು ಅಷ್ಟೇ ಹೆಜ್ಜೆ ಹಿಂದಿದ್ದೇವೆ. ಸಮಸ್ಯೆ ಅರ್ಥಭೇದದ್ದಲ್ಲ; ಭಾವನಾ ಭೇದದ್ದೂ ಅಲ್ಲ. ಕೇವಲ, ಹೊರಡಬೇಕಾದ ಒಂದು ನಿರ್ಧಾರದ ಸಮಸ್ಯೆ ಮಾತ್ರವಿದೆ. ಅದೂ, ಅಂತರವನ್ನು ಚಂಚಲಗೊಳಿಸುವಷ್ಟು, ಕಳವಳಪಡಿಸುವಷ್ಟು ಗಂಭೀರ ಪ್ರಶ್ನೆಯಲ್ಲವೇ ಅಲ್ಲ. ಮಹರ್ಷಿಗಳ ದೃಷ್ಟಿಕೋನದ ಯಾವ ಹಿನ್ನೆಲೆಯ ಶಬ್ದ ಚಿತ್ರವನ್ನು ನಾವಿತ್ತಿದ್ದೇವೋ, ಅದನ್ನು ಅಂತರ್ಯಕ್ಕೆ ಆಕರ್ಷಿಸಿಕೊಂಡು, ಅರ್ಥವನ್ನು ಅರಿತುಕೊಳ್ಳುವ ಯತ್ನವ ಮಾಡಿದರೆ, ಸಮಸ್ಯೆಯೆಂಬ ಶಬ್ದ ಮಾತ್ರ ಉಳಿದೀತು; ಸಂಶಯ ನಾಮ ಮಾತ್ರಕ್ಕೂ ಉಳಿಯಲಾರದು



ಈ ಚತುರ್ಥ ಸೂಕ್ತದ ಐದನೇ ಮಂತ್ರದ ಪೂರ್ಣವೆಚ್ಚ
ಶ್ರೀಮತಿ ರಾಜೀವಿ ದೇವಿ ಎಂ. ಲಕ್ಷ್ಮಣ ಕಿಣಿ, ಮಾಬುಕಳ
ಇವರ ಸೇವೆ.



ಸಂಹಿತಾ ವಿಭಾಗ

ಉತ ನಃ ಸುಭಗಾನರಿರ್ವೋಚೇಯುರ್ದಸ್ಮ ಕೃಷ್ಟಯಃ ।

ಸ್ಯಾಮೇದಿಂದ್ರಸ್ಯ ಶರ್ಮಣಿ ॥೬॥

[ಋಗ್ವೇದ:– 1. 4. 6

**ಪದಪಾಠ:**– ಉತ, ನಃ, ಸುಭಗಾನ್, ಅರಿಃ ವೋಚೇಯುಃ, ದಸ್ಮ, ಕೃಷ್ಟಯಃ। ಸ್ಯಾಮ ಇತ್, ಇಂದ್ರಸ್ಯ, ಶರ್ಮಣಿ ॥೬॥

**ಅನ್ವಯ**:– ದಸ್ಮ! ಅರಿಃ ಉತ ನಃ ಸುಭಗಾನ್ ವೋಚೇಯುಃ ಕೃಷ್ಟಯಃ (ವಯಂ) ಇಂದ್ರಸ್ಯ (ತೇ) ಇತ್ ಶರ್ಮಣಿ ಸ್ಯಾಮ ॥೬॥

**ಶಬ್ದಾರ್ಥ:**– [ದಸ್ಮ] ದುಷ್ಟದಳನಕಾರಿಯಾದ ಸರ್ವೇಶ್ವರನೇ ! [ಅರಿ] ಶತ್ರುಗಳೂ, [ಅಪಿ] ಅನ್ಯರೂ–ಎಂದರೆ ಮಿತ್ರರೂ, ಉದಾಸೀನರೂ ಆದ, [ಕೃಷ್ಟಯಃ] ಆಜೀವಿಕಾ ನಿರ್ವಾಹಕರಾಗಿರುವ ಮಾನವರೂ, [ನಃ] ನಮ್ಮನ್ನು, [ಸುಭಗಾನ್]ಸೌಭಾಗ್ಯಶಾಲಿಗಳೆಂದು, [ವೋಚೇಯುಃ] ಹೇಳಲಿ, ಹೇಳುವಂತಾಗಲಿ. (ವಯಂ) ನಾವು, [ಇಂದ್ರಸ್ಯ (ತೇ) ಇತ್] ಸರ್ವೇಶ್ವರನಾದ ಕೇವಲ ನಿನ್ನೊಬ್ಬನ [ಶರ್ಮಣಿ] ರಕ್ಷಣದಲ್ಲಿ. ಅನುಗ್ರಹ ಸುಖದಲ್ಲಿ, ಆಶ್ರಯದಲ್ಲಿ, ನಿತ್ಯ ಸುಖದಲ್ಲಿ, [ಸ್ಯಾಮ] ಇರೋಣ.

**ತಾತ್ಪರ್ಯ:**– ಓ ದುಷ್ಟದಳನಕಾರೀ ಸರ್ವೇಶ್ವರ! ನಮ್ಮ ಶತ್ರುಗಳೂ, ಮಿತ್ರರೂ, ಉದಾಸೀನರೂ ಆದ ಮಾನವರೆಲ್ಲರೂ, ಆಶ್ಚರ್ಯದಿಂದ – "ಆಹಾ! ಎಂತಹ ಸೌಭಾಗ್ಯ ಶಾಲಿಗಳಿವರು ! ಎಂತಹ ನಿಶ್ಚಲವಾದ, ಅಂತರತಮಸ್ಪರ್ಶಿಯಾದ ಗಾಢವಾದ ಭಕ್ತಿ ಈ ಪುಣ್ಯಾತ್ಮರದು !" ಎಂದು ಮೂಗಿನ ತುದಿಗೆ ಬೆರಳಿಡುವಂತಹ ಸದೃಢವಾದ ಭಕ್ತಿ ನಿನ್ನ ಒಗೆಗೆ ನಮ್ಮ ಹೃದಯಗಳಲ್ಲಿ ಬೆಳೆದು ಬರಲಿ. ಎಂತಹ ಪರಿಸ್ಥಿತಿಯಲ್ಲಿಯೂ, ಸಂಯೋಗ ವಿಯೋಗಗಳಲ್ಲಿ, ಸುಖ-ದುಃಖಗಳಲ್ಲಿ, ಶಾಂತಿ-ಕ್ರಾಂತಿಗಳಲ್ಲಿ, ವೈಮನಸ್ಯ-ಸೌಮನಸ್ಯಗಳಲ್ಲಿ-ನಗೆ-ದಗೆಗಳಲ್ಲಿ, ಹಿರಿಮೆ-ಕಿರಿಮೆಗಳಲ್ಲಿ ಮತ್ತು ಜನನ-ಮರಣಗಳಲ್ಲಿ ಸರ್ವಶರಣ್ಯನೂ ಸರ್ವಶಕ್ತನೂ, ಸರ್ವಜ್ಞನೂ, ಸರ್ವಾಶ್ರಯನೂ ಆದ ನಿನ್ನ ವಿಶಾಲ ಆಶ್ರಯದಲ್ಲಿಯೇ ನಾವು ಇರೋಣ. ಇಂತಹ ಮನೋಜ್ಞ ಮನೋಭಾವದ ನಿರಂತರ ಸ್ರೋತಸ್ಸಾಗಿಯೇ ನಮ್ಮ ಹೃದಯಗಳು ಉಕ್ಕಿ ಉಕ್ಕಿ ಬರುತ್ತಿರಲಿ. ನಿನ್ನ ಭಕ್ತಿಯೇ, ಅನುರಕ್ತಿಯೇ ನಮಗೆ ಶಕ್ತಿಯಾಗಿರಲಿ. ನಿರವದ ವಿರಕ್ತಿಯಾಗಿ ಅರಳಲಿ.

**ಭಾಷ್ಯ:**— ಭಗವಂತನ ಸತ್ಯಸ್ವರೂಪವನ್ನರಿತು, ನಿಜವಾದ ಭಕ್ತಿಭಾವನೆಯಿಂದ ಅವನ ಉಪಾಸನೆ ಮಾಡಿದರೆ, ಎಂತಹ ಅದ್ಭುತಶಕ್ತಿ ಭಕ್ತರಲ್ಲಿ ಉದ್ಭವಿಸುವುದೆಂಬುದನ್ನು ಈ ಮಂತ್ರ ವರ್ಣಿಸುತ್ತಲಿದೆ. ವೇದಾನುಯಾಯಿಯ ಹೃದಯದಲ್ಲಿ ಯಾರ ಬಗೆಗೂ ವೈರ ಭಾವನೆ ಮೂಡುವಂತೆಯೇ ಇಲ್ಲ - ಎಂದು ಓದುಗರು ಆಗಲೇ ಓದಿದ್ದಾರೆ. ಆದರೆ — ಅಜ್ಞಾನ, ಸ್ವಾರ್ಥ, ಮೋಹ - ಮೊದಲಾದ ಕಾರಣಗಳಿಂದ ಅನ್ಯರು ವೇದಾನುಯಾಯಿಗಳ ಬಗೆಗೆ ದ್ವೇಷಭಾವನೆ ತಾಳುವ ಸಂಭವವಿದ್ದೇ ಇರುತ್ತದೆ. ಮಾಡಬಾರದುದನ್ನು ಮಾಡುವ ಮಂದಿಗಳು ಇರುವುದರಿಂದಲೇ ಶಾಸ್ತ್ರಗಳ, ವಿಧಿ-ನಿಷೇಧಗಳ ಉಪದೇಶವನ್ನು ಮಾಡಬೇಕಾಗಿ ರುತ್ತದೆ. ಮಾಡಬಾರದುದನ್ನು ಮಾಡುವ, ಈಶ್ವರೀಯ ಸಂವಿಧಾನವನ್ನು ಭಂಗಿಸಿ ನಡೆಯುವ ಶಕ್ತಿ ಜೀವಾತ್ಮರುಗಳಿಗೆ ಇದೆ - ಎಂಬ ಮಾತು ಕೇಳಲು ಕಹಿ ಎನಿಸಿದರೂ, ಅದೊಂದು ಕಟು ಸತ್ಯ. ಈಶ್ವರೇಚ್ಛೆಗೆ ವಿರುದ್ಧವಾಗಿ ಜೀವರು ಏನನ್ನೂ ಮಾಡಲಾರರು - ಎಂಬ ಕಥನವನ್ನು ಅಕ್ಷರಶಃ ಒಪ್ಪಿಕೊಂಡು ಬಿಟ್ಟರೆ, ಪಾಪ-ಪುಣ್ಯ, ಕೆಡಕು-ಒಳಿತು, ಅಧರ್ಮ-ಧರ್ಮ, ಅನ್ಯಾಯ-ನ್ಯಾಯ, ಹಿಂಸೆ-ಅಹಿಂಸೆ, ವ್ಯಭಿಚಾರ-ಶಿಷ್ಟಾಚಾರ - ಎಲ್ಲವೂ ಶಬ್ದ ಮಾತ್ರಗಳಾಗಿ ಉಳಿದಾವು ಏಕೆಂದರೆ - ನಡೆಯುವುದೆಲ್ಲಾ ಈಶ್ವರೇಚ್ಛಾನುಸಾರವಾಗಿಯೇ— ಎಂದ ಮೇಲೆ, ಎಲ್ಲದರ ಉತ್ತರದಾಯಿತ್ವ ಬೀಳುವುದು ಆ ಈಶ್ವರನ ಮೇಲೆಯೇ. ಈ ಸ್ಥಿತಿಯಲ್ಲಿ ವಿಶ್ವದಲ್ಲಿ ಉಳಿಯುವುದು ಕೇವಲ ಅವ್ಯವಸ್ಥೆಯೊಂದೇ.

ಆದುದರಿಂದ, ಅಲ್ಪಜ್ಞನಾದ ಜೀವಾತ್ಮ, ಸ್ವರೂಪತಃ ಅಜ್ಞಾನಿಯಾಗಿರುವುದ ರಿಂದ, ಈಶ್ವರೇಚ್ಛಾವಿರುದ್ಧವಾಗಿಯೂ ನಡೆದುಕೊಳ್ಳಬಲ್ಲನೆಂಬುದು ಈಶ್ವರನ ಸರ್ವ ನಿಯಾಮಕತ್ವತತ್ತ್ವಕ್ಕೆ ಪ್ರತಿಕೂಲ; ಅಪಮಾನಕಾರಕ — ಎಂದು ತೋರಿದರೂ, ಸತ್ಯ ಭಾವುಕತೆಯ (Emotionalism) ಆಧಾರದ ಮೇಲೆ ನಿಂತಿಲ್ಲ; ಈಶ್ವರನಿಗೆ ಭಾವುಕರಾದ ಭಕ್ತರ ಆವಶ್ಯಕತೆಯೂ ಇಲ್ಲ - ಎಂಬುದನ್ನು ಮರೆಯದಿರೋಣ. ಸರ್ವಜ್ಞನಾದ ಈಶ್ವರ ಸರ್ವಜೀವರ ಸರ್ವವಿಧೋತ್ಕರ್ಷಕ್ಕಾಗಿ ವೇದಗಳನ್ನುಪದೇಶಿಸಿದ್ದಾನೆ; ಮಾನವರಿಗೆ ಅವನ್ನು ಅರಿತುಕೊಳ್ಳುವ ಬುದ್ಧಿಯನ್ನೂ ಕರುಣಿಸಿದ್ದಾನೆ. ಆದರೆ, ಜೀವ-ಜೀವರ ನಡುವೆ ಸ್ವರೂಪ ಭೇದವಿಲ್ಲವಾದರೂ, ಗುಣ-ಕರ್ಮ-ಸ್ವಭಾವಗಳ ಭೇದವಿದ್ದೇ ಇರುತ್ತದೆ. ಜೊತೆಯಲ್ಲಿಯೇ ಪ್ರತಿಯೊಬ್ಬ ಜೀವನಿಗೂ ತನ್ನ ಉತ್ಥಾನವನ್ನು ಸಾಧಿಸಿಕೊಳ್ಳುವ ಸಹಜ ಸಾಮರ್ಥ್ಯವೂ ಇದ್ದೇ ಇದೆ.

ಅಲ್ಲದೆ, "**ಸ್ವತಂತ್ರಃ ಕರ್ತಾ**" - ಎಂಬ ಮೌಲಿಕ ತತ್ತ್ವವನ್ನೇ ಮರೆತು, "ಎಲ್ಲವೂ ಅವನಿಚ್ಛೆ." - ಎಂದು ಸರ್ವರೂ ಸಾರ ಹತ್ತಿದರೆ, ಜಗತ್ತಿನ ಸ್ಥಿತಿ ಹೇಗೆ ಇರಬಹುದೆಂಬುದ ನ್ನೂಹಿಸಿಕೊಳ್ಳಲು ಮಹಾತತ್ತ್ವಜ್ಞಾನಿಗಳೇ ಬೇಕಾಗಿಲ್ಲ. ನ್ಯಾಯ, ಸತ್ಯ, ದಯಾ, ಪ್ರೇಮ - ಎಲ್ಲ ಶಬ್ದಗಳನ್ನೂ ಶಬ್ದಕೋಶಗಳಿಂದ ಏಕಮತರಾಗಿ ಎಲ್ಲರೂ ಸೇರಿ ಕಿತ್ತುಹಾಕಿಬಿಡಬಹುದು.

ಮಾನವ ಮಾತ್ರರ ಪುಣ್ಯವೆನ್ನಿರಿ; ಈಶ್ವರನ ಕರುಣೆಯೆನ್ನಿರಿ. ವೇದಗಳು ನಮಗೆ ಪ್ರಾಪ್ತವಾಗಿವೆ. ಆದರಲ್ಲಿ ಪ್ರತಿಯೊಂದು ತತ್ತ್ವದ ಯಥಾರ್ಥ ಸ್ವರೂಪದ ವರ್ಣನೆಯಿದೆ

ಪ್ರತಿಯೊಬ್ಬ ಜೀವನಿಗೂ ಕರ್ಮಸ್ವಾತಂತ್ರ್ಯವಿದೆ; ಆದರೆ – ಫಲಭೋಗ ಈಶ್ವರಾಧೀನ ಎಂಬುದೇ - ಕರ್ಮಫಲದಾತೃ ಈಶ್ವರ. ಆದುದರಿಂದ, ವೇದಾನುಯಾಯಿಗಳು ತಮ್ಮ ಧರ್ಮದ ಅನುಷ್ಠಾನವನ್ನು ತ್ರಿಕರಣಶುದ್ಧಿಪೂರ್ವಕವಾಗಿಯೇ ಮಾಡುತ್ತಿದ್ದರೂ, ಅವರ ಆಂತರ್ಯವನ್ನು ಅರಿಯಲಾರದ ಜನ, ಅವರನ್ನು ತಮ್ಮ ವೈರಿಗಳೆಂದು ಭಾವಿಸಬಹುದು ಅಷ್ಟೆ, ಸತ್ಯವಾದ ಈಶಭಕ್ತಿಯ ಶಕ್ತಿಯ ವೈಖರಿಯೇ ಒಂದು ಬಗೆಯದು. ತಮ್ಮ ಆಂತರಿಕ ದೋಷವಾವುದೋ ಒಂದರ ಪರಿಣಾಮವಾಗಿ ನಮ್ಮನ್ನವರು ಶತ್ರುಗಳೆಂದೇ ತಿಳಿಯು ತ್ತಿದ್ದರೂ, ನಮ್ಮ ಸದಾರಾಧನಾಸಾಮರ್ಥ್ಯ ಅವರ ಬಾಯಿನಿಂದಲೂ "ಸೌಭಾಗ್ಯವಂತರಪ್ಪ ಇವರು!" - ಎಂಬ ಉದ್ಗಾರವನ್ನು ಹೊರಡಿಸಿಯೇ ತೀರುವುದು. ಈ ಮಂತ್ರದ ಮೇಲೆ ವ್ಯಾಖ್ಯಾನಮಾಡುತ್ತಾ ಶ್ರೀ॥ಮಧ್ವರು ಹೇಳುತ್ತಾರೆ:–

**ಅರಯೋऽಪಿ ಪ್ರಜಾ ಅಸ್ಮಾನ್ ವೋಚೇಯುಃ ಸುಭಗಾನ್ ಸದಾ**
**ಶತ್ರುಭೇದಿನ್ ತವೇಂದ್ರಸ್ಯ ಸ್ಯಾಮ್ಯೈವಾನುಗ್ರಹೇ ಸುಖೇ ॥**

"ಶತ್ರುಧ್ವಂಸಿಯಾದ ಭಗವಾನ್! ನಮ್ಮ ಶತ್ರುಗಳಾದ ಪ್ರಜೆಗಳೂ ಕೂಡ ನಮ್ಮನ್ನು ಸದಾ ಸೌಭಾಗ್ಯಶಾಲಿಗಳೆನ್ನಲಿ ಓ ಇಂದ್ರ! ನಾವು ಸದಾ ನಿನ್ನ ಅನುಗ್ರಹದ ಸುಖದಲ್ಲಿಯೇ ಇರುವಂತಾಗಲಿ." ಶ್ರೀ॥ ಮಧ್ವರು ಇಂದ್ರನನ್ನು ಬೇರಾವನೋ ದೇವತೆ ಯೆಂದರ್ಥಯಿಸದೆ, ಪರಮಾತ್ಮನೇ ಇಂದ್ರನೆಂಬ ಪಕ್ಷ ಹಿಡಿದಲ್ಲಿ ಮತಭೇದವೇ ಉಳಿಯದು.

ಶ್ರೀ॥ ಸಾಯಣರು '**ದಸ್ಮ**' ಎಂಬ ಶಬ್ದಕ್ಕೆ '**ಶತ್ರೂಣಾಮುಪಕ್ಷಯಿತಾ**' '**ಶತ್ರುನಾಶಕ**' ಎಂದರ್ಥ ಮಾಡಿದ್ದಾರೆ. ಮತ್ತು 'ಮಂತ್ರದಲ್ಲಿ '**ವೋಚೇಯುಃ**' ಎಂಬ ಕ್ರಿಯೆ ಬಹುವಚನದಲ್ಲಿದ್ದರೂ, ಕರ್ತೃವಾದ '**ಅರಿಃ**' ಏಕವಚನದಲ್ಲಿರುವುದರಿಂದ. 'ಅರಿ ಎಂಬಲ್ಲಿ ವಚನವ್ಯತ್ಯಯವಿದೆ – ಎಂದಿದ್ದಾರೆ. ವೈದಿಕ ಸಾಹಿತ್ಯದಲ್ಲಿ ಇಂತಹ ವ್ಯತ್ಯಯಗಳು ಅನೇಕ ಕಡೆ ಕಂಡು ಬರುತ್ತವೆ. ಲಕಾರ ವ್ಯತ್ಯಯ, ಪುರುಷ ವ್ಯತ್ಯಯ, ವಿಭಕ್ತಿ ವ್ಯತ್ಯಯ ವಚನ ವ್ಯತ್ಯಯಗಳು ವೈದಿಕ ಸಾಹಿತ್ಯಜ್ಞರಿಗೆ ಹೊಸದಲ್ಲ. '**ದಸು ಉಪಕ್ಷಯೇ**' - ಎಂಬ ಧಾತುವಿನಿಂದ ವ್ಯುತ್ಪನ್ನವಾದ '**ದಸ್ಮ**' ಶಬ್ದಕ್ಕೆ ನಾವು ಮೇಲೆ ಹೇಳಿರುವ ಅರ್ಥವನ್ನು ಮಾಡಿದ್ದಾರೆ. "**ತ್ವದನುಗ್ರಹಾತ್ ಅರಿರುತ ಶತ್ರವೋऽಪಿ ನೋऽಸ್ಮಾನ್ ಸುಭಗಾನ್ ಶೋಭನ–ಧನೋಪೇತಾನ್ ವೋಚೇಯುಃ**" – "ನಿನ್ನ ಅನುಗ್ರಹದಿಂದ ಶತ್ರುಗಳೂ ಕೂಡ ನಮ್ಮನ್ನು 'ಸುಭಗರು', ಮನೋಜ್ಞ ಧನಸಂಪನ್ನರು' ಎನ್ನುವಂತಾಗಲಿ"– ಎಂದು ಬರೆದು, ಕೊನೆಗೆ, "**ತತೋ ಧನ ಸಂಪನ್ನಾ ವಯಂ ಇಂದ್ರಸ್ಯ ಶರ್ಮಣಿ ಇಂದ್ರಪ್ರಸಾದಾಲ್ಲಬ್ಧೇ ಸುಖೇ ಸ್ಯಾಮೇತ್; ಭವೇಮ್ಯೈವ.**" – " ಆ ಮೇಲೆ ಧನ-ಸಂಪನ್ನರಾದ ನಾವು. ಇಂದ್ರನ ರಕ್ಷಣೆಯಲ್ಲಿ, ಇಂದ್ರಪ್ರಸಾದದಿಂದ ಪ್ರಾಪ್ತವಾದ ಸುಖದಲ್ಲಿ ಇದ್ದೇ ಇರುವೆವು." – ಎಂದು ಮುಕ್ತಾಯ ಮಾಡಿದ್ದಾರೆ.

ಸಾಯಣರ ಮತ್ತೊಂದು ವೈಶಿಷ್ಟ್ಯವೆಂದರೆ '**ಶೄ ಹಿಂಸಾಯಾಂ**' - ಎಂಬ ಧಾತು ವಿನಿಂದ '**ಶರ್ಮನ್**' ಶಬ್ದದ ವ್ಯುತ್ಪತ್ತಿಯನ್ನು ಗ್ರಹಿಸಿ, '**ಹಿನಸ್ತಿ ದುಃಖಮಿತಿ**

**ಸುಖಂ ಶರ್ಮ'** - "ದುಃಖವನ್ನು ಧ್ವಂಸಮಾಡುವ ಕಾರಣ 'ಸುಖವೇ' ಶರ್ಮ" - ಎಂದಿದ್ದಾರೆ. **'ಕೃಷ್ಟಯ ಇತಿ ಮನುಷ್ಯನಾಮಸು ಪಠಿತಂ.'** [ನಿ. 3.8] - "ಮಾನವನಾಮಗಳಲ್ಲಿ 'ಕೃಷ್ಟಿ' ಎನ್ನುವುದೂ ಒಂದು."

ಇನ್ನು ಮಹರ್ಷಿ ದಯಾನಂದರ ಭಾಷ್ಯ. ಅವರು ಮಂತ್ರದಲ್ಲಿನ ವಾಕ್ಯಗಳ ವಿಂಗಡಣೆಯನ್ನು ಮಾಡುವ ರೀತಿಯೇ ಬೇರೆ. **"ಹೇ ದಸ್ಮ! ಉಪಕ್ಷಯರಹಿತ ಜಗದೀಶ್ವರ! ವಯಂ ತವ ಇಂದ್ರಸ್ಯ ಶರ್ಮಣಿ ಖಲ್ವಾಜ್ಞಾಪಾಲನಾಖ್ಯೇ ವ್ಯವಹಾರೇ ನಿತ್ಯಂ ಪ್ರವೃತ್ತಾಃ ಸ್ಯಾಮ ಇಮೇಃ ಕೃಷ್ಟಯಃ ಸರ್ವೇ ಮನುಷ್ಯಾಃ ಸರ್ವಾನ್ ಪ್ರತಿ ಸರ್ವಾವಿದ್ಯಾ ವೋಚೇಯುಃ ಉಪದಿಶ್ಯಾಸುಃ, ಯತಃ ಸತ್ಯೋಪದೇಶ ಪ್ರಾಪ್ತಾನ್ ನೋಽಸ್ಮಾನ್ ಅರಿರುತ ಶತ್ರುರಪಿ ಶುಭಗಾನ್ ಜಾನೀಯಾತ್ ವದೇಚ್ಚ."** ಎಂದರೆ, "ಓ ದಸ್ಮ! ಉಪಕ್ಷಯರಹಿತ! ಓ **ಅ**ವಿನಾಶ ಜಗದೀಶ್ವರ! ನಾವು ಸರ್ವೇಶ್ವರನಾದ ನಿನ್ನ 'ಶರ್ಮ' ಎಂದರೆ ಆಜ್ಞಾಪಾಲನವೆಂಬ ವ್ಯವಹಾರದಲ್ಲಿ ಸದಾ ಪ್ರವೃತ್ತರಾಗಿರೋಣ ಈ ಕೃಷ್ಟಿಗಳು - ಎಂದರೆ ಮಾನವರೆಲ್ಲರೂ, ಎಲ್ಲರಿಗೂ ಎಲ್ಲ ವಿದ್ಯೆಗಳನ್ನೂ ಉಪದೇಶಿಸಲಿ. ಹೀಗೆ, ಸತ್ಯೋಪದೇಶ ಪಡೆದ ನಮ್ಮನ್ನು ಶತ್ರುವೂ ಕೂಡ ಸುಭಗರು, ಸೌಭಾಗ್ಯಶಾಲಿಗಳು ಎಂದರಿಯಲಿ; ಹೇಳುವಂತಾಗಲಿ"

ಒಂದೆರಡು ವ್ಯತ್ಯಾಸಗಳು ಗಮನಾರ್ಹವಾಗಿವೆ ಶ್ರೀ|| ಮಧ್ವ-ಸಾಯಣರು **'ದಸ್ಮ'** ಎಂಬುದಕ್ಕೆ **'ಶತ್ರುನಾಶಕ'**ನೆಂದು ಅರ್ಥಮಾಡಿದ್ದಾರೆ ಮಹರ್ಷಿಗಳು **"ಸ್ವಯಂ ಅವಿನಾಶ"** – ಎಂದಿದ್ದಾರೆ; ಶಬ್ದಾರ್ಥದಲ್ಲಿ **"ದುಷ್ಟಸ್ವಭಾವೋಪಕ್ಷೇತ್ರ"** – **"ದುಸ್ವಭಾವ-ವಿನಾಶಕ"** – ಎಂದು ಹೇಳಿದ್ದಾರೆ **"ಸುಭಗಾನ್"** – ಎಂಬುದಕ್ಕೆ **"ಶೋಭನೋ ಭಗೋವಿದ್ಯೈಶ್ವರ್ಯಯೋಗೋ ಯೇಷಾಂ, ತಾನ್"** – ಎಂದರೆ **"ಯಾರ ಭಗ ಎಂದರೆ–ವಿದ್ಯಾ-ಐಶ್ವರ್ಯಗಳ ಯೋಗವು ಪ್ರಶಸ್ತವೋ, ಅವರನ್ನು"** – ಎಂದು ವಿಸ್ತರಿಸಿ, ಕೇವಲ ಭಾಗ್ಯನಲ್ಲ; ವಿದ್ಯೆ ಆದರ ಅವಿಭಾಜ್ಯ ಅಂಗವೇ ಆಗಿರಬೇಕು"- ಎಂಬ ಮಹದಂಶವನ್ನು ವೇದಾನುಯಾಯಿಗಳ ಗಮನಕ್ಕೆ ತಂದಿದ್ದಾರೆ ಶ್ರೀ ಮಧ್ವ–ಸಾಯಣರು 'ವೋಚೇಯುಃ' ಎಂಬ ಕ್ರಿಯೆಗೆ, 'ಅರಿ' ಯನ್ನು ಕರ್ತೃವೆಂದು ಗ್ರಹಿಸಿ ಸುಭಗಾನ್' ಎಂಬುದನ್ನು ಕರ್ಮಸ್ಥಾನದಲ್ಲಿ ಕೂಡಿಸಿದ್ದರೆ, ಮಹರ್ಷಿಗಳು 'ಕೃಷ್ಟಯಃ'- 'ಎಂದರೆ 'ಮಾನವರನ್ನೇ' ಕರ್ತೃಸ್ಥಾನದಲ್ಲಿ ಮಂಡಿಸಿ, 'ವೋಚೇಯುಃ' – 'ಎನ್ನಲಿ' - ಎಂಬ ಕ್ರಿಯೆಗೆ 'ಉಪದೇಶಿಸಲಿ' ಎಂದರ್ಥವಿತ್ತು, 'ಸರ್ವಾಃ ವಿದ್ಯಾಃ' – "ಸಮಸ್ತ ವಿದ್ಯೆಗಳನ್ನೂ" ಎಂಬುದನ್ನು ಕರ್ಮಸ್ಥಾನದಲ್ಲಿ ವಿರಾಜಿಸುವಂತೆ ಮಾಡಿದ್ದಾರೆ. ವೇದಪ್ರಸಾರಕ್ಕಾಗಿಯೇ ಜ್ಞಾನ–ವಿಜ್ಞಾನಗಳ ಶಾಶ್ವತ ಪ್ರದೀಪವನ್ನು ಹೊತ್ತಿಸುವ ಸಲುವಾಗಿಯೇ ಧರಾತಳಕ್ಕಿಳಿದು ಬಂದು, ಸಮಗ್ರ ಜೀವನವನ್ನೇ ಸತ್ಯವಿದ್ಯಾಸಂಪಾದನಕ್ಕಾಗಿ ಮೀಸಲಿಟ್ಟು, ಆ ಶಾಶ್ವತ ಸಾರ್ವಭೌಮ ನಿರ್ಭ್ರಾಂತ ಜ್ಞಾನದ ಪ್ರಸರಣ ಮಹಾಯಜ್ಞದ ಬಲಿವೇದಿಕೆಯ ಮೇಲೆ ಆತ್ಮಬಲಿದಾನವಿತ್ತು, ಸತ್ತರೂ ನಿತ್ಯರಾಗಿ, ಕಣ್ಮರೆಯಾದರೂ ಮಾನಸನೇತ್ರಗಳ ಮುಂದೆ ಎಂದೆಂದಿಗೂ ವಿರಾಜಿಸುವ ಆ ಆದಿತ್ಯ ಬ್ರಹ್ಮಚಾರಿಗಳ ನಿರ್ಮಲ ಮಸ್ತಿಷ್ಕದ ಮುಂದೆ

ಎಲ್ಲಕ್ಕಿಂತಧಿಕ ಮೂಲ್ಯವಾನ್‌ತತ್ತ್ವವಾದ ವಿದ್ಯೆಯಲ್ಲದೆ ಮತ್ತೇನು ಬರಲು ಸಾಧ್ಯವಿತ್ತು? ನಿಜವಾದ ಭಗ, ಐಶ್ವರ್ಯ, ವಿದ್ಯೆಯಲ್ಲದೆ ಮತ್ತೇನೂ ಅಲ್ಲ.

"ಭಗ ಇತಿ ಧನನಾಮಸು ಪಠಿತಂ." [ನಿಘಂ. 2.10.] "ಭಗವೆಂದು ಧನದ ಹೆಸರು."; "ಕೃಷ್ಟಯ ಇತಿ ಮನುಷ್ಯನಾಮಸು ಪಠಿತಂ." [ನಿಘಂ 2.3.] - "ಕೃಷ್ಟಿ"ಗಳೆಂಬುದು ಮನುಷ್ಯರು ಎಂಬರ್ಥದ ಪದ" – ಈ ಪ್ರಮಾಣಗಳನ್ನು ಶ್ರೀ ಮಧ್ವ-ಸಾಯಣರೂ ಕೊಟ್ಟಿದ್ದಾರೆ. 'ಅರಿರುತ ಶತ್ರುರಪಿ' – "ವೈರಿಯೂ ಕೂಡ, ಎಂದರೆ ಶತ್ರುವೂ ಸಹ." – ಎಂದು ವಚನವ್ಯತ್ಯಯವನ್ನೂ ಮಹರ್ಷಿಗಳು ಅಂಗೀಕರಿಸಿದ್ದಾರೆ.

ಈ ಮಂತ್ರದ ಇಂದಿನ ಋಕ್ಕಿಗೆ ವಿವರಣೆ ನೀಡುವಾಗ ನಾವು "ನಮ್ಮ ನಿಂದಕರು ನಮಗೆ-'ನೀವು ಬೇರೆ ಎಲ್ಲಿಗಾದರೂ ಹೊರಟು ಹೋಗಿರಿ.'-ಎಂದು ಹೇಳಿದರೂ ಕೂಡ ,ನಾವು ಸರ್ವೇಶ್ವರನಾದ ಸರ್ವೈಶ್ವರ್ಯ ಸಂಪನ್ನ ಈಶ್ವರನಲ್ಲಿಯೇ ಆತ್ಮ ನಿವೇದನವನ್ನು ಮಾಡಿಕೊಳ್ಳೋಣ; ಪ್ರಾರ್ಥನಾ-ಸ್ತುತಿಗಳನ್ನು ಮಂಡಿಸುವವರಾಗಿರೋಣ" -ಎಂದು ಬರೆದಿದ್ದೇವೆ. ಮತ್ತು, ಮೇಲು ನೋಟಕ್ಕಿದ್ದು ಮಹರ್ಷಿ ದಯಾನಂದರ ನಿಲುವಿಗೆ ಬೇರೆ-ಎಂಬಂತೆ ಕಾಣುತ್ತದೆ-ಎಂದೂ ಕೇಳಿದ್ದೇವೆ. ನಾವು "ನಿಂದಕರಿಂದ ಬೇರೆಡೆ ತೆರಳಿ ಈಶೋಪಾಸನೆಯಲ್ಲೇ ಮಗ್ನರಾಗಿರೋಣ."-ಎಂಬ ಪಕ್ಷ ಹಿಡಿದಂತೆ ಕಾಣುತ್ತದೆ. ಆದರೆ-ಮಹರ್ಷಿಗಳು 'ನಾಸ್ತಿಕರು ಅನ್ಯತ್ರ ಹೋಗಲಿ; ಎಲ್ಲಿಯೂ ಅವರಿಗೆ ನೆಲೆ ಸಿಕ್ಕದಿರಲಿ.' -ಎಂಬ ಧ್ವನಿಯನ್ನು ಸೂಚಿಸಿದ್ದಾರೆ."-ಎಂದು ಓದುಗರಿಗೆ ಶಂಕೆ ಹುಟ್ಟುವ ಸಂಭವವನ್ನು ಊಹಿಸಿ, ನಮ್ಮದೇ ಆದ ಶೈಲಿಯಲ್ಲಿ ಸಮನ್ವಯ ಮಾಡಿದ್ದೇವೆ. ಹಿಂದಿನ ಮಂತ್ರದ **"ದಧಾನಾ ಇಂದ್ರ ಇದ್ದುವಃ"** ಎಂಬಂಶಕ್ಕೂ, **"ಸ್ಯಾಮೇದಿಂದ್ರಸ್ಯ ಶರ್ಮಣಿ"**-ಎಂಬಂಶಕ್ಕೂ ತಾಳೆ ಹಾಕಿ ನೋಡಿದರೆ, "ಎಲ್ಲಿದ್ದರೂ ಸರಿಯೇ; ನಮ್ಮ ಆತ್ಮ ಸಮರ್ಪಣ ಆ ಸರ್ವೇಶ್ವರನಿಗೇ ಮೀಸಲು-ಅನ್ಯರು ನಮ್ಮನ್ನು ತೆಗಳಿದಾಗಲೂ ಕೂಡ; ಅದೇ ಸರ್ವೇಶ್ವರನದೇ ಆಶ್ರಯ-ಸುಖ ನಮಗೆ-ಅನ್ಯರು ನಮ್ಮನ್ನು ಸೌಭಾಗ್ಯಶಾಲಿಗಳೆಂದಾಗಲೂ ಕೂಡ-ಎಂಬ ಸುಂದರ ಸಮನ್ವಯ ತನ್ನಷ್ಟಕ್ಕೆ ತಾನೇ ಅವಿಷ್ಟ ನೊಗವಾಗಿ ರೂಪಗೊಳ್ಳುತ್ತಿದೆ

**ಈ ಚತುರ್ಥ ಸೂಕ್ತ ಆರನೆಯ ಮಂತ್ರದ ಭಾಷ್ಯದ ಪೂರ್ಣವೆಚ್ಚ**
**ಶ್ರೀಮತಿ ಇಂದಿರಾ ದೇವಿ ಪಿ. ರಾಮದಾಸ ಕಾಮತ್**
**ಉಡುಪಿ, ಇವರ ಸೇವೆ.**



ಸಂಹಿತಾ ವಿಭಾಗ

ಏಮಾಶುಮಾಶವೇ ಭರ ಯಜ್ಞಶ್ರಿಯಂ ನೃಮಾದನಂ।

ಪತಯನ್ಮಂದಯತ್ಸಖಂ॥೭॥

**ಪದಪಾಠ:**– ಆ, ಈಂ, ಆಶುಂ, ಆಶವೇ, ಭರ, ಯಜ್ಞಶ್ರಿಯಂ, ನೃಮಾದನಂ ಪತಯತ್, ಮಂದಯತ್-ಸಖಂ ॥೭॥

**ಅನ್ವಯ:**– ಈಂ ಆಶುಂ ಯಜ್ಞಶ್ರಿಯಂ ನೃಮಾದನಂ ಪತಯತ್ ಮಂದ ಯತ್ಸಖಂ ಆಶವೇ ಆಭರ

**ಶಬ್ದಾರ್ಥ:**– [ಈಂ] ಈ, [ಆಶುಂ] ತೀವ್ರಶಕ್ತಿಯುಕ್ತವೂ, [ಯಜ್ಞಶ್ರಿಯಂ] ಯಜ್ಞಕ್ಕೆ ಸೌಂದರ್ಯಪ್ರಾಯವೂ, ಯಜ್ಞಕ್ಕೆ ಸಂಪದ್ರೂಪವೂ, [ನೃಮಾದನಂ] ನರರಿಗೆ ಹರ್ಷಪ್ರದವೂ, [ಪತಯತ್+ಮಂದಯತ್+ಸಖಂ] ತನ್ನಲ್ಲಿರುವ ಮಹಾಸಾಮರ್ಥ್ಯ ದಿಂದ ಸಖರನ್ನು, 'ಋತ್ವಿಕ್'-ಎಂಬ ಸಮಾನವಾದ ಹೆಸರಿನಿಂದ ನಿರ್ದೇಶಿಸಲ್ಪಡುವ ಬ್ರಹ್ಮಾ-ಹೋತಾ-ಉದ್ಗಾತಾ-ಅಧ್ವರ್ಯು-ಎಂಬ ಯಜ್ಞಸಹಭಾಗಿಗಳಿಗೆ ಆಲಸ್ಯರಹಿತರಾಗಿ, ಚುರು ಕಾಗಿ ಕೆಲಸ ಮಾಡುವ ಶಕ್ತಿಯನ್ನೂ, ಅಲೌಕಿಕವಾದ ಸ್ಫೂರ್ತಿಯನ್ನೂ ಕೊಡುವ ನೈಜ ಭಕ್ತಿಯನ್ನು, [ಆಶವೇ] ವೇಗಶಾಲಿಗಳೆಲ್ಲಕ್ಕಿಂತ ಮಹದಧಿಕ ವೇಗಶಾಲಿಯಾದ ಭಗವಂತನಿಗೆ, [ಆ ಭರ] ನಿರಂತರವಾಗಿ ಸಮರ್ಪಿಸುತ್ತಾ ಹೋಗು.

**ತಾತ್ಪರ್ಯ:**– ಈಶ್ವರ ಭಕ್ತಿಗಿಂತ ಮಿಗಿಲಾದ ಶಕ್ತಿಯಿಲ್ಲ. ಈಶಭಕ್ತಿಯಲ್ಲಿ ಪ್ರಮಾದಾಲಸ್ಯಗಳನ್ನು ನಿರ್ಮೂಲ ಮಾಡುವ ಸಾಮರ್ಥ್ಯವಿದೆ. ಸಮಸ್ತ ಶುಭಕರ್ಮ ಗಳಿಗೂ, ಯಜ್ಞ-ಯಾಗಗಳಿಗೂ ಅಲಂಕಾರ ಪ್ರಾಯವಾದ ತತ್ತ್ವ ಈಶ ಭಕ್ತಿ, ಬೇರೆ ಯಾವುದೇ ಭೌತಿಕಭೋಗ ಭಾಗ್ಯಗಳಿಂದಲೂ ಲಭಿಸದ ಅಲೌಕಿಕ ಹರ್ಷ ಈಶಭಕ್ತಿಯಿಂದಲೇ ಮಾನವರಿಗೆ ಸಿಕ್ಕುತ್ತದೆ. ಯಜ್ಞಕರ್ತೃಗಳಿಗೆ, ಸತ್ಕರ್ಮನಿಷ್ಠರಾದ ಸತ್ಪುರುಷ ಮಾತ್ರರಿಗೆ ತೀವ್ರಗತಿಯಿಂದ ಕಾರ್ಯಸಾಧಿಸುವ ಹಾಗೂ ಅನುಕೂಲ-ಪ್ರತಿಕೂಲ ಪ್ರಸಂಗಗಳೆರಡ ರಲ್ಲಿಯೂ ಉಲ್ಲಾಸಭರಿತರಾಗಿಯೇ ಇರುವ ಆತ್ಮಬಲವನ್ನು ಕೊಡುವ ದಿವ್ಯ ಸಂಪತ್ತು ಈ ಈಶ್ವರಭಕ್ತಿ. ಓ ಮಾನವ! ನಿನ್ನ ಹೃದಯಾಂತರಾಳದಿಂದ ಉಕ್ಕಿ ಬರುವ ಭಕ್ತಿ ಯನ್ನು ಶೀಘ್ರಕಾರಿಯಾದ, ನಿತ್ಯಚೈತನ್ಯಸ್ವರೂಪನಾದ ಭಗವಂತನಿಗೆ ಸದಾ ಸಮರ್ಪಿಸುತ್ತಾ ಹೋಗು.

**ಭಾಷ್ಯ:**– ಹತ್ತು ಮಂತ್ರಗಳಿಂದ ಕೂಡಿದ ಈ ಪೂರ್ಣಸೂಕ್ತದ ದೇವತೆ, ಪ್ರತಿ ಪಾದ್ಯ ವಿಷಯ ಇಂದ್ರನೇ. ಆದುದರಿಂದ, ಈ ಮಂತ್ರದಲ್ಲಿ ಇಂದ್ರಶಬ್ದ ಬಾರದಿದ್ದರೂ

ಈ ಮಂತ್ರದ ವಿಷಯ ಇಂದ್ರನೇ ಆಗಿದ್ದಾನೆ. ಆದರೆ, ಮಂತ್ರದಲ್ಲಿ ಬಂದಿರುವ ಗುಣ ವಾಚಕ ಶಬ್ದಗಳತ್ತ ಗಮನವಿತ್ತಾಗ, ಸಮಗ್ರದೃಷ್ಟಿಯಿಂದ ಅವಲೋಕಿಸಿದಾಗ, ಈ ಋಕ್ಕು ವರ್ಣಿಸುತ್ತಿರುವುದು ಯಾವುದೋ ದ್ರವ ಪದಾರ್ಥವನ್ನು – ಎಂದೇ ತೋರುತ್ತದೆ. ಯಜುರ್ವೇದದ 'ತಾಃ ಅಪಃ' [32 1] "ಆ ಬ್ರಹ್ಮವೇ ಅವ್"; ಉಪನಿಷತ್ತಿನ **'ರಸೋ ವೈ ಸಃ'** - 'ಆ ಭಗವಂತನು ರಸವೇ ಆಗಿದ್ದಾನೆ.' - ಮೊದಲಾದ ಪ್ರಮಾಣಗಳಿಂದ, ಈ ಮಂತ್ರದಲ್ಲಿ ವರ್ಣಿತನಾಗಿರುವವನು ರಸರೂಪನಾದ ಭಗವಂತನೇ ಆಗಿರಬಾರದೇಕೆ? - ಎಂದು ತರ್ಕಿಸಲು ಅವಕಾಶವೇನೋ ಇದೆ ಆದರೆ, ಯಾವುದೋ ವಿಶಿಷ್ಟ ಗುಣಯುಕ್ತವಾದ ಒಂದು ರಸ, ಅದನ್ನು ಯಾರಿಗೋ ಸಮರ್ಪಿಸಬೇಕೆಂಬ ಸೂಚನೆ ಹಾಗೂ ಆ ಸೂಚನೆಗೆ ಕಿವಿಗೊಡಬೇಕಾದ ಆರಾಧಕ-ಇವೆಲ್ಲವರ ಕಡೆಗೂ ದೃಷ್ಟಿಪಾತ ಮಾಡಿದಾಗ, ಆ ದ್ರವ ಯಾವುದೇ ಆಗಿರಲಿ, ಪರಮಾತ್ಮನಂತೂ ಅಲ್ಲ ಏಕೆಂದರೆ ಆ ರಸವನ್ನು ಸ್ವೀಕರಿಸಬೇಕಾದ ಪರಮಾತ್ಮನ ವರ್ಣನೆ ಸ್ಪಷ್ಟವಾಗಿಯೇ ಮಂತ್ರದಲ್ಲಿ ಬಂದಿದೆ ಅಲ್ಲದೆ ಇವರ ಮುಂದಣ ಮಂತ್ರದಲ್ಲಿ 'ಅಸ್ಯ ಪೀತ್ವಾ ಶತಕ್ರತೋ'-ಎಂಬ ಮೊದಲಾದ ಶಬ್ದಗಳಿಂದಲೂ ಯಾವುದೋ ಪೇಯರಸದ ಅಭಿವರ್ಣನೆಯೇ ಇಲ್ಲಿಯೂ ಇದೆ-ಎಂದು ಸುಲಭವಾಗಿಯೇ ಊಹಿಸ ಬಹುದಾಗಿದೆ

ಶ್ರೀ॥ ಮಧ್ವರು ಹಾಗೂ ಶ್ರೀ ಸಾಯಣರು ತಮ್ಮ ಪರಂಪರಾಗತ ವಿಶ್ವಾಸಕ್ಕನುಸಾರವಾಗಿ ಯಜ್ಞಕ್ಕೆ ಬಿಜಯ ಗೈದ ಇಂದ್ರನಾಮಕ ದೇವತಾ ವಿಶೇಷನಿಗೆ ಪಾನಮಾಡಲು ಕೊಡುವ ಸೋಮರಸವನ್ನು ಗ್ರಹಿಸಿ ಅದಕ್ಕನುಸಾರ ವ್ಯಾಖ್ಯಾನ ಮಾಡಿದ್ದಾರೆ. ಶ್ರೀ॥ ಮಧ್ವರ ಶ್ಲೋಕಗಳಿರಲಿ; ಅವರ ಸಂಪ್ರದಾಯದ ನಿಷ್ಣಾತ ಪಂಡಿತರಾದ ಶ್ರೀ॥ ನಾರಾಯಣ ತಂತ್ರಿಗಳು ಕನ್ನಡವೆಂದು ಕರೆಯಲ್ಪಡಬಹುದಾದ ಭಾಷೆಯಲ್ಲಿ ಬರೆದಿರುವ ಅರ್ಥವನ್ನೋದಿದ ಮೇಲೆ, ಹೇಗೆ ಬ್ರೆಡ್ ಮತ್ತು ದ್ರಾಕ್ಷಾರಸವಿಲ್ಲದೆ ಮತ್ತು ಅವು ಹಲವು ಪ್ರಕ್ರಿಯೆಗಳಿಂದ ಏಸುವಿನ ಮಾಂಸ-ರಕ್ತಗಳಾಗಿ ಮಾರ್ಪಡದೆ ಮತೀಯ ಕರ್ಮಕಾಂಡ ಪೂರ್ಣವಾಗದೋ, ಹಾಗೆಯೇ ಪೌರಾಣಿಕ ಪರಂಪರಾಯಜ್ಞಕಾಂಡದಲ್ಲಿ ಲತಾವಿಶೇಷದ ರಸ ಪಾನ, ಸೋಮವೆಂಬ ಮಾದಕ ದ್ರವ್ಯದ ಪ್ರಯೋಗವಿಲ್ಲದೆ ಯಜ್ಞ ನಡೆಯಲು ಸಾಧ್ಯವೇ ಇಲ್ಲವೆಂದು ತೋರುತ್ತದೆ. ಕುಡಿತ, ಕುಣಿತ ಓಟ, ನೆಗೆದಾಟ, ಅರಚಾಟ-ಇವೆಲ್ಲ ನಡೆಯದೆ ಯಜ್ಞ ಹೇಗೆ ತಾನೇ ಸಫಲವಾದೀತು? ಇದನ್ನೆಲ್ಲಾ ತಂತ್ರಿಗಳು ಬಣ್ಣಿಸಿದ್ದಾರೆ. ಆದರೆ-ಈಗ ನಮಗೆ ಅದರ ಆವಶ್ಯಕತೆಯಿಲ್ಲ. ಶ್ರೀ॥ ಮಧ್ವರ ಭಾಷ್ಯವಿದು:–

**ಆಶುವೀರ್ಯೋ ತನ್ಮನಾಶುಂ ಸೋಮ ಕ್ಷಿಪ್ರಂ ಮನೋಽಪಿವಾ।**
**ಆಭರಣಸ್ತ್ವೋದರೇ ತುಷ್ಟ್ಯಾ ಹೃದಿ ವಾ ಯಜ್ಞಭೂಷಣಂ॥**
**ಈ ಸೋಮ ಪುಂ ಮದಕರಂ ಮದಾದುತ್ಪತನಾದಿಕೇ।**
**ಹೇತುಂ ಮಂದತ್ವಹೇತುಂಚ ತತ್ಸಖೀನಾಂ ಪುರೋಗತೇಃ॥**

"ಹೇ ಕ್ಷಿಪ್ರಕರ್ಮದಕ್ಷನಾದ ಇಂದ್ರನೇ ! ತ್ವರಾಯುಕ್ತವಾದ, ಯಜ್ಞಕ್ಕೆ ಭೂಷಣ ಪ್ರಾಯನಾದ, ಪುರುಷನನ್ನು ಮಿತ್ರನನ್ನಾಗಿ ಮಾಡುವ, ಮದದಿಂದಾಗಿ, ಶಾರೀರಿಕ ದೌರ್ಬಲ್ಯ ವನ್ನು ದೂರ ಮಾಡಿ. ಅಲೌಕಿಕ ಸುಖಾನುಭೂತಿಯಿಂದ ಮೈಮರೆತು ನೃತ್ಯ, ಹಾರುವಿಕೆಯೇ ಮೊದಲಾದುವಕ್ಕೆ ಕಾರಣನಾದ, ಸೋಮಪಾನ ಮಾಡದ ಋತ್ವಿಕ್ಕುಗಳನ್ನು ಮುನ್ನಡೆಯಲ್ಲಿ ಹಿಂದೆ ಬೀಳಿಸಲು ಕಾರಣವಾದ ಸೋಮವನ್ನು ತೃಪ್ತಿಯಿಂದ ನಿನ್ನ ಉದರದಲ್ಲಿ ತುಂಬಿಸಿಕೋ. ಅಥವಾ, ಶೀಘ್ರಗತಿಯನ್ನುಳ್ಳ, ಆಧ್ಯಾತ್ಮಿಕ ಆನಂದದ ಭರದಲ್ಲಿ ನರ್ತನಾದಿಗಳಿಗೆ ಕಾರಣ ವಾದ, ಮತ್ತು ದುರ್ಬಲ ಮನಸ್ಕರಾದ ಋತ್ವಿಕ್ಕುಗಳನ್ನು ಅಗ್ರಗತಿಯಲ್ಲಿ ಮಂದಗಾಮಿ ಗಳನ್ನಾಗಿ ಮಾಡಲು ಕಾರಣವಾದ ಮನಸ್ಸನ್ನು ಹೃದಯದಲ್ಲಿ ತುಂಬಿಕೋ ತೃಪ್ತಿಯಿಂದ." ಇದು ಶ್ರೀ॥ ಮಧ್ವರ ಶ್ಲೋಕರೂಪದಲ್ಲಿರುವ ಭಾಷ್ಯದ ಸಾರ. ಇಲ್ಲಿ ಮನಸ್ಸು—ಎಂಬುದಕ್ಕೆ ಸಂಕಲ್ಪ—ಎಂಬರ್ಥ ಮಾಡಿದರೆ ಮಾತ್ರ ಈ ಮಾತುಗಳಿಗೆ ಏನಾದರೂ ಬೆಲೆ ಬಂದೀತು. ಇದಕ್ಕೆ ಐತರೇಯೋಪನಿಷತ್ಪ್ರಮಾಣವೂ ಇದೆ—"ಯದೇತತ್ ಮನಃ......ಸಂಕಲ್ಪ...... [೩–೫–೨].

ಆದರೆ, ಆಧ್ಯಾತ್ಮಿಕ ಆನಂದದಲ್ಲಿ ಮೈಮರೆತು, ಭಕ್ತಿ ಭಾವದ ಆಧಿಕ್ಯದಲ್ಲಿ ಭಗವಂತನಲ್ಲಿಯೇ ತನ್ಮಯರಾಗಿ ತುಂಬಿರುವ ಇಂದಿನ ಪವಾಡ ಪುರುಷರಂತಲ್ಲ; ಲೋಕ ವಂಚನೆಗಾಗಿ, ಕೇವಲ ಆಡಂಬರದಿಂದ ನಾಟಕೀಯವಾಗಿ ಕುಣಿದಾಟದಲ್ಲಿ ಮಗ್ನರಾದ ಕೀರ್ತನ ಕಾರ—ಅಖಂಡ ಭಜನೀಕರರಂತೆಯೂ ಅಲ್ಲ; ಮೀರಾ ಬಾಯಿಯಂತೆ, ಸೂರದಾಸರಂತೆ, ತುಂಬು ಸಭೆಗಳಲ್ಲಿ, ವೇದಿಕೆಯ ಮೇಲೆಯೇ ನಾಮಗಾನ ಮಾಡುತ್ತಾ–ಮಾಡುತ್ತಾ, ತನ್ಮಯ ರಾಗಿ ಗದ್ಗದಕಂಠರೂ, ಆನಂದಾಶ್ರುಮೋಚನ ಮಾಡುವವರೂ ಆಗಿ, ಅಲೌಕಿಕ ಆಧ್ಯಾತ್ಮಿಕ ಲೋಕದಲ್ಲಿದ್ದಾರೇನೋ—ಎನ್ನಿಸುವಂತೆ ಕಂಡುಬರುತ್ತಿದ್ದ ಮಹರ್ಷಿಗಳಂತೆ ರಂಜಿಸುವ ಅಸಾ ಧಾರಣ ಆತ್ಮಿಕಾನುಭೂತಿಯಿಂದ ವಿರಾಜಿಸುವ ಸಾತ್ವಿಕ ವೃತ್ತಿಯವರಿಗೆ ಇದು ಅರ್ಥ ವಾದೀತು. ಆದರೆ—"**ಶಾಸ್ತ್ರಾದ್ರೂಢಿರ್ಬಲೀಯಸೀ**"—"ಶಾಸ್ತ್ರಕ್ಕಿಂತ ರೂಢಿಗೇ ಬಲ ಹೆಚ್ಚು"—ಎಂಬ, ಸಾಂಪ್ರದಾಯಿಕ ಪರಂಪರೆಯಲ್ಲಿಯೇ ನಂಬಿಕೆಯಿಟ್ಟು, "ಪೂರ್ವಾಗ್ರಹ ಗ್ರಸ್ತರಾದ ಸಾಯಣಾದಿಗಳ ಭಾಷ್ಯ, ಅದರಲ್ಲಿಯೂ ವಾಮಮಾರ್ಗೀ ಮಹೀಧರರ ಭಾಷ್ಯ— ಮೊದಲಾದ ಭಾಷ್ಯಗಳನ್ನು ಓದಿರಿ. ಅಸಭ್ಯ ವಿವರಣೆಯನ್ನು ಯಾಜ್ಞಿಕರು ಪ್ರತಿಪಾದಿಸಿದ್ದಾರೆ. "ಇದೇನು ಯಜ್ಞಶಾಲೆಯೋ, ವಾರುಣೀಪ್ರಸಾದ ವಿತರಣ ಕೇಂದ್ರವೋ—ಎನಿಸಿದರೆ. ಆಶ್ಚರ್ಯವೇನು? ಈ ಬಗೆಯ ಕಳಪೆ ಸಾಹಿತ್ಯವನ್ನು "ಅನೇಕ ಶತಮಾನ–ಸಹಸ್ರಮಾನಗಳ ಗಳ ಅನುಪಮ ಸಂಸ್ಕೃತಿ ಹೊಂದಿರುವ ಭಾರತವು ವಿಶ್ವಕ್ಕೆ ನೀಡುವ ಅತ್ಯಮೌಲ್ಯ ಹಾಗೂ ಅಸದೃಶವಾದ ಉಪಹಾರವಿದು." — ಎಂದು ಅದಾವ ಮುಖದಿಂದ ಘೋಷಿಸಲು ಸಾಧ್ಯ?

ಇನ್ನು ಸಾಯಣ ಭಾಷ್ಯ. "ಹೇ ಯಜಮಾನ ! ಆಶವೇ ಕೃತ್ಸ್ನಸೋಮ, ಯಾಗವ್ಯಾಪ್ತಾಯ ಇಂದ್ರಾಯ ಈಂಆಭರ. ಇಮಂ ಸೋಮಮಾಹರ. ಆಶುಂಸವನತ್ರಯ ವ್ಯಾಪ್ತಂ, ಯಜ್ಞಶ್ರಿಯಂ ಯಜ್ಞಸ್ಯ ಸಂಪದ್ರೂಪಂ, ನೃಮಾದನಂ ನೃಣಾಂ ಋತ್ವಿಗ್ಯಜ ಮಾನಾಂ ಹರ್ಷಹೇತುಂ, ಪತಯತ್ಂ ಪತಯಂತಂ ಕರ್ಮಾಣಿ ಪ್ರಾಪ್ನುವಂತಂ, ಮಂದಯತ್ಸಖಂ ಯ ಇಂದ್ರೋಮಂದಯತಿ ಯಜಮಾನಾನ್, ಹರ್ಷಯತಿ ತಸ್ಮಿನ್ನಿಂದ್ರೇ ಸಖಿಭೂತೋಽಯಂ ಸೋಮಃ ತತ್ಪ್ರೀತಿ ಹೇತುತ್ವಾತ್, ತೃಪಿ ಹೇತತ್ವಾದ್ವಾ."

ಉದ್ಧರಣ ಉದ್ದವಾಯಿತು ನಿಜ. ಆದರೆ, ಸಾಯಣರ ಭಾವನ ಹೃದಯಾಂಕಿತ ವಾಗಬೇಕಾದರೆ, ಈ ಸುದೀರ್ಘವಾದ ಉದ್ಧರಣ ಅನಿವಾರ್ಯ. "ಯಜಮಾನನೇ! ಶೀಘ್ರ ಗತಿಯುಕ್ತನಾದ, ಸಂಪೂರ್ಣ ಸೋಮಯಾಗವನ್ನೇ ಆವರಿಸಿರುವ, ಇಂದ್ರನಿಗೆ ಇದನ್ನು ತುಂಬಿ ಕೊಡು; ಈ ಸೋಮವನ್ನು ತಗೆದುಕೊಂಡು ಬಾ. ಆಶು—ಎಂದರೆ ಪ್ರಾತಃಸವನ—ಮಾಧ್ಯಂದಿನ ಸವನ—ಸಾಯಂಸವನ—ಈ ಮೂರನ್ನೂ ಒಳಗೊಂಡ, ಯಜ್ಞಶ್ರೀ—ಎಂದರೆ ಯಜ್ಞಕ್ಕೆ ಸಂಪದ್ರೂಪನಾದ ನೃಮಾದನ—ಎಂದರೆ ಋತ್ವಗ್ಯಜಮಾನರಿಗೆ ಹರ್ಷಕಾರಣನಾದ ಕರ್ಮಕರಣಪ್ರೇರಕನಾದ, ಯಜಮಾನರನ್ನು ಹರ್ಷಪಡಿಸುವ ಇಂದ್ರನಲ್ಲಿ ಸಖಿಸುತಿರುವ ಅವನ ಪ್ರೀತಿಗೆ ಅಥವಾ ತೃಪ್ತಿಗೆ ಕಾರಣವಾದುದು ಸೋಮ. ಅದನ್ನು ತಗೆದುಕೊಂಡು ಆಗಮಿಸು."

ಶ್ರೀಮಧ್ವ—ಸಾಯಣರಿಬ್ಬರೂ ಈ ಋಕ್ಕಿನಲ್ಲಿ ಇಂದ್ರನಿಗೆ ಸಮರ್ಪಿಸಲಿಕ್ಕಾಗಿ ತರಲ್ಪಡುವ ದ್ರವ ಸೋಮವೆಂದು ಸ್ಪಷ್ಟವಾಗಿ ಅಂಗೀಕರಿಸಿದ್ದಾರೆ. ಸ್ಕಂದ ಸ್ವಾಮಿಗಳೂ **'ಈಂ'** ಎಂದರೆ **'ಸೋಮ'** ಎಂದೇ ಅರ್ಥ ಹೇಳಿದ್ದಾರೆ. ಒಟ್ಟಿನಲ್ಲಿ ಈ ಮಂತ್ರದಲ್ಲಿ ಉಕ್ತವಾಗಿರುವುದು ಮದಕಾರಕವಾದ ಸೋಮ—ಎಂದು ಈ ಭಾಷ್ಯಕಾರರೆಲ್ಲಾ ಒಪ್ಪಿಕೊಂಡಿದ್ದಾರೆ. ನಾವು ಸೋಮ ಶಬ್ದದ ವಿಶ್ಲೇಷಣವನ್ನು ಈ ಮುನ್ನ ಮಾಡಿಯೇ ಇದ್ದೇವೆ. ಆದರೆ, ಈ ಮಂತ್ರದ ಅಂತಿಮಚರಣದಲ್ಲಿ ಬಂದಿರುವ **'ಪತಯನ್ ಮಂದಯತ್ಸಖಂ.'** ಎಂಬ ಸಮಾಸಬದ್ಧ ಶಬ್ದವೃಂದಕ್ಕೆ "ಮದವೇರಿಸಿ, ಕುಣಿದಾಡಿಸುವ, ನಗೆದಾಡಿಸುವ ಮದಿರಾವಿಶೇಷ, ಅದೊಂದು ಮಾದಕದ್ರವ್ಯ' ಎಂಬ ವಿವರಣಗಳನ್ನು ನಮ್ಮವರೇ ಆದ ಭಾಷ್ಯಕಾರರು ಕೊಟ್ಟಿರುವುದನ್ನು ನೋಡಿ, ಲಜ್ಜೆಯಿಂದ ತಲೆ ಬಾಗುತ್ತದೆ. ಮದಿರಾ ಪಾನ ಮಹಾಪಾಪವೆಂದು ವೇದಗಳೇ ಹೇಳುತ್ತಿವೆ. ಋಗ್ವೇದ ಹೇಳುತ್ತಲಿದೆ:—

**ಹೃತ್ಸು ಪೀತಾಸೋ ಯುಧ್ಯಂತೇ ದುರ್ಮದಾಸೋ ನ ಸುರಾಯಾಂ**
**ಊಧರ್ನ ನಗ್ನಾ ಜರಂತೇ ॥** [ಋಕ್:—8. 2. 12.]

"[ಸುರಾಯಾಂ] ಮದ್ಯಪಾನದಲ್ಲಿ, [ದುರ್ಮದಾಸಃ] ನಿಂದನೀಯವಾದ ಮತ್ತು ನೆತ್ತಿಗೆ ಏರಿದವರು, [ನ] ಮಾಡುವ ರೀತಿಯಲ್ಲಿ, [ಹೃತ್ಸು] ಹೃದಯಗಳಲ್ಲಿ ವಿಕೃತಿ ಮೂಡುವಂತೆ, [ಪೀತಾಸಃ] ಕುಡಿಯಬಾರದುದನ್ನು ಕುಡಿದವರು, [ಯುಧ್ಯಂತೇ] ಜಗಳ ಮಾಡುತ್ತಾರೆ. [ಊಧಃನ] ನೆಲೆಯಿಲ್ಲದೆ, ವೃಷ್ಟಿಯನ್ನೂ ಸುರಿಸದೆ ಗಗನದಲ್ಲಿ ತೇಲುವ ಮೇಘದಂತೆ, [ನಗ್ನಾಃ] ನಗ್ನರಾಗಿಯೇ, [ಜರಂತೇ] ಯದ್ವಾತದ್ವಾ ಅರಚಾಡುತ್ತಾರೆ."

ತಲೆ ಕೆಡಿಸುವ ಮಾದಕದ್ರವ್ಯಗಳು, ಗಾಂಜಾ, ಅಫೀಮು, ಸಾರಾಯಿ, ಹೆಂಡ—ಇನ್ನೂ ಅದೆಷ್ಟೋ ಇವೆ. ಅವುಗಳನ್ನು ಸೇವಿಸುವವರು ಎಲ್ಲಕ್ಕಿಂತ ಮೊದಲು ಮಾರಿಕೊಳ್ಳುವುದು ಮಾನವನ್ನು, ಮನೆ—ಮಠಗಳು, ಹೆಂಡಿರು—ಮಕ್ಕಳು, ಘನತೆ—ಗೌರವ, ಹಣ—ಕಾಸು, ಸಭ್ಯತೆ—ಸಂಸ್ಕೃತಿ, ನಡೆ—ನುಡಿ—ಎಲ್ಲಕ್ಕೂ ಎಳ್ಳು—ನೀರನ್ನೇ ಬಿಟ್ಟು, ಬಟ್ಟೆ—ಬರೆಗಳನ್ನೂ ಕೂಡ

ಮಾರಿ, ಮೋರಿಯಲ್ಲಿಯೋ, ತಿಪ್ಪೆಯ ಗುಂಡಿಯಲ್ಲಿಯೋ ಬಿದ್ದು, ನಾಚಿಕೆ-ಹೇಸಿಗೆ-ಯಾವುದನ್ನೂ ಗಮನಿಸದೆ, ಹುಚ್ಚುಪಟ್ಟೆ ಹಾರಾಡುತ್ತಾರೆ; ಹಾಡುತ್ತಾರೆ; ಓಡುತ್ತಾರೆ; ಉರುಳುತ್ತಾರೆ.

ವೇದಮಂತ್ರಗಳಲ್ಲಿ, ಈಗ ಭಾಷ್ಯಮಾಡುತ್ತಿರುವ ಮಂತ್ರದಲ್ಲಿ ಹೇಳಲ್ಪಟ್ಟಿರುವ, ಇಂದ್ರನಿಗೆ ಅರ್ಪಿಸಬೇಕಾದ ಆ ದ್ರವಪದಾರ್ಥ ಈ ರೀತಿಯ ಮಾದಕದ್ರವ್ಯವೇ? ಅರ್ಪಣೀಯ ವಸ್ತು ಸೋಮವೆಂಬುದೇನೋ ನಿರ್ವಿವಾದ. ಆದರೆ, ಆ ಸೋಮ ಇಂತಹ ನಿರ್ಲಜ್ಜತ್ವವರ್ಧಕವಾದ ವಸ್ತುವೇ? ಮೂರುಕಾಲಕ್ಕೂ ಸಾಧ್ಯವಿಲ್ಲದ ಮಾತಿದು. ಈ ಮಂತ್ರದಲ್ಲಿ ಭಗವಂತನಿಗೆ ಸಮರ್ಪಿಸಬೇಕೆಂದು ನಿರ್ದೇಶಿಸಲ್ಪಟ್ಟಿರುವ ಸೋಮ, ಆರಾಧಕನ ಅಂತರಂಗದಿಂದ ಚಿಮ್ಮಿ ಬರುವ ಭಕ್ತಿ - ಎಂದು ನಾವು ಸೂಕ್ಷ್ಮವಾಗಿ ಸೂಚಿಸಿದ್ದೇವೆ. ಮತ್ತು ಭಕ್ತಿಯು ದೈವೀಶಕ್ತಿಯ ಭವ್ಯರೂಪವೇ ಹೊರತು ಬುದ್ಧಿಮಾಂದ್ಯವನ್ನು ತರುವ ಮಾದಕ ದ್ರವವಲ್ಲ. ಹಿಂದೆ ಓದುಗರು ಓದಿರುವ ಸೋಮದ ವರ್ಣನೆಯ ಪುಷ್ಟೀಕರಣಕ್ಕಾಗಿ ಈ ಪ್ರಮಾಣಗಳನ್ನೂ ಗಮನಿಸಬಹುದು:-

**ಅಯಂ ಮೇ ಪೀತ ಉದಿಯರ್ತಿ ವಾಚ**
**ಮಯಂ ಮನೀಷಾ ಮುಶತೀಮಜೀಗಃ।**
**ಅಯಂ ಷಡುರ್ವೀರಮಿಮೀತ ಧೀರೋ**
**ನ ಯಾಭ್ಯೋ ಭುವನಂ ಕಚ್ಚನಾರೇ॥** [ಋಕ್:- 6, 67. 3.]

"[ಮೇ ಪೀತಃ] ನನ್ನಿಂದ ಕುಡಿಯಲ್ಪಟ್ಟ, [ಅಯಂ] ಈ ಸೋಮರಸವು, [ವಾಚಂ] ವಾಣಿಯನ್ನು, [ಉತ್ ಇಯರ್ತಿ] ಉನ್ನತಸ್ವರದಲ್ಲಿಯೇ ಹರಿದುಬಿಸುತ್ತದೆ. [ಅಯಂ] ಇದು, [ಉಶತೀಂ] ಕಾಮನಾಯೋಗ್ಯವಾದ [ಮನೀಷಾಂ] ಮನೋಭಾವವನ್ನು [ಅಜೀಗಃ] ಎಚ್ಚರಿಸುತ್ತದೆ. [ಯಾಭ್ಯಃ ಆರೇ] ಯಾವವುಗಳಿಂದಾಚೆ, [ಕಚ್ಚನ ಭುವನಂ] ಯಾವ ಭೌತಿಕ ಜಗತ್ತೂ [ನ] ಇಲ್ಲವೋ, ಅಂತಹ, [ಷಟ್ ಉರ್ವೀಃ] ಆರು ಮಹಾಶಕ್ತಿಗಳನ್ನು, ದರ್ಶನ-ಸ್ಪರ್ಶನ-ಶ್ರವಣ-ಘ್ರಾಣ-ರಸನಾ ಮತ್ತು ಮನನದ ಮಹಾಶಕ್ತಿಗಳನ್ನು, [ಅಯಂ ಧೀರಃ] ಬುದ್ಧಿಯನ್ನು ಪ್ರೇರಿಸುವ ಈ ಸೋಮವು, [ಅಮಿಮೀತ] ಅಳೆದು ನೋಡುತ್ತದೆ." ಈ ಸೋಮವು, ಈ ಭಕ್ತಿರಸವು ಬುದ್ಧಿನಾಶಕತತ್ತ್ವವೇ? ಸ್ವಯಂ ವೇದಗಳೇ ಭಕ್ತಿರಸದ (ಭಗವದಾನಂದ ರಸದ ಪ್ರಾಪ್ತಿಗಾಗಿ, ಈ ಭಕ್ತಿರಸದಿಂದ ಆತ್ಮನನ್ನು ಶುದ್ಧೀಕರಿಸಿಕೊಳ್ಳಬೇಕಾಗುತ್ತದೆ.) ಆಕರ್ಷಕ ವರ್ಣನೆಗಳನ್ನು ನಾನಾ ವಿಧದಲ್ಲಿ ಮಾಡುತ್ತವೆ. ಆಲಿಸಿರಿ—

**1. ಗೋಷಾ ಇಂದೋ ನೃಷಾ ಅಸ್ಯಶ್ವಸಾ ವಾಜಸಾ ಉತ।**
**ಆತ್ಮಾ ಯಜ್ಞಸ್ಯ ಪೂರ್ವ್ಯಃ॥** [ಋಕ್:- 9. 2. 10.]

"[ಇಂದೋ] ಜೀವನವನ್ನು ರಸಭರಿತವಾಗಿ ಮಾಡುವ ಸೋಮವೆ! ನೀನು [ಗೋಷಾ] ಉದಾತ್ತವಾಕ್ ಶಕ್ತಿಕೊಡುವಂತಹುದೂ, [ನೃಷಾ] ಶ್ರೇಷ್ಠಪುರುಷರ ಸಂಗವನ್ನು ಕೊಡುವಂತಹುದೂ, [ಅಶಸಾ] ಇಂದ್ರಿಯಗಳ ಹಾಗೂ ಆತ್ಮನ ಬಲವನ್ನೂ ಕೊಡು ವಂತಹುದೂ, [ಉತ] ಮತ್ತು, [ವಾಜಸಾಃ] ಅನ್ನ-ಜ್ಞಾನ-ಬಲಗಳನ್ನು ಕೊಡುವಂತಹುದೂ [ಯಜ್ಞಸ್ಯ] ಯಜ್ಞದ, [ಪೂರ್ವ್ಯಃ ಆತ್ಮಾ] ಪ್ರಥಮಾದರಾರ್ಹ ಆತ್ಮವೂ, [ಅಸಿ] ಆಗಿರುವೆ." ಮದಿರೆಗೆ ಈ ಲಕ್ಷಣಗಳುಂಟೇ?

2. "ಏಷ ದೇವೋ ಹ್ವರಾಂಸಿ ಅತಿಧಾವತಿ." [ಋಕ್:- 9. 3. 2.] "ಈ ದಿವ್ಯ ಶಕ್ತಿಸಂಪನ್ನ ಸೋಮವು ಎಲ್ಲ ಕುಟಿಲತನಗಳನ್ನೂ ಧ್ವಂಸಮಾಡುತ್ತದೆ."

3. "ಆವಿಷ್ಕೃಣೋತಿ ವಗ್ವನುಂ." [ಋಕ್:- 9. 3. 5.] "ಇದು ಉತ್ಕೃಷ್ಟ ವಾಕ್ಕನ್ನು ಬೆಳಕಿಗೆ ತರುತ್ತದೆ."

4. "ಆತ್ಮಾ ಯಜ್ಞಸ್ಯ ರಂಹ್ಯಾ" [ಋಕ್:- 9. 6. 8.] "ಯಜ್ಞಕ್ಕೆ ಚಲನೆ ನೀಡುವ ಆತ್ಮವಾಗಿದೆ ಈ ಸೋಮ"

5. "ಜುಷ್ಟ ಇಂದ್ರಾಯ ಮತ್ಸರಃ............ವಿಶ್ವಾ ಅಪದ್ವಿಷೋ ಜಹಿ." [ಋಕ್:- 9. 13, 8.] - "ಸೋಮವು ಇಂದ್ರಿಯವಾನ್ ಜೀವನಿಗೆ ಪ್ರಿಯವಾಗಿದೆ. ಓ ಸೋಮ! ಎಲ್ಲ ವೈರಗಳನ್ನೂ ತೊಡೆದುಹಾಕು."

6. "ಶುಚಿಃ ಪಾವಕ ಉಚ್ಯತೇ ಸೋಮಃ ಸುತಸ್ಯಮಧ್ವಃ। ದೇವಾ ವೀರಘಶಂಸಹಾ.॥" [ಋಕ್:- 8. 24. 7.] "ಮಧುರಭಾವೋತ್ಪನ್ನವಾದ ಸೋಮವು ಶುಚಿ, ಪಾವನಕರ, ದಿವ್ಯತ್ವವನ್ನು ಬೆಳಕಿಗೆ ತರುವ ತತ್ತ್ವ ಹಾಗೂ ಪಾಪಪ್ರಶಂಸಕನನ್ನು ದೂರೀಕರಿಸುವಂತಹುದು - ಎಂದು ಹೇಳಲ್ಪಟ್ಟಿದೆ."

7. "ಅಪಘ್ನನ್ ಪವಸೇ ಮೃಧಃ ಕ್ರತುವಿತ್ ಸೋಮ ಮತ್ಸರಃ। ನುದಸ್ವಾದೇವಯುಂ ಜನಂ॥ [ಋಕ್:- 9. 63. 24.] - "ಓ ಸೋಮ! ನೀನು ಹರ್ಷಪ್ರದ. ಸತ್ಕರ್ಮ-ಸದ್ವಚನಗಳನ್ನು ಎಚ್ಚರಿಸುವಂತಹುದು. ಅಸತ್ಯ-ಅಹಿಂಸೆಗಳನ್ನು ನಿರ್ನಾಮಮಾಡಿ, ದುಷ್ಟರನ್ನು ಶಿಷ್ಟರನ್ನಾಗಿಸುವೆ. ಆಸುರೀವೃತ್ತಿಯ ವ್ಯಕ್ತಿಗೂ ಸತ್ಪ್ರೇರಣೆ ಯಿತ್ತು, ಅವನನ್ನು ಸಮೃದ್ಧನನ್ನಾಗಿ ಮಾಡು."

8. "ವಿಘ್ನನ್ ರಕ್ಷಾಂಸಿ ದೇವಯುಃ" [ಋಕ್:- 9. 37. 1.] "ಭಗವತ್ಸಾಕ್ಷಾತ್ಕಾರಕ್ಕೆ ನೆರವಾಗುವ ಸೋಮವು ದುರ್ಗುಣಗಳನ್ನೆಲ್ಲಾ ಧ್ವಸ್ತ-ವಿಧ್ವಸ್ತವಾಗಿ ಮಾಡುತ್ತದೆ." ಈ ಬಗೆಯ, ರಾಕ್ಷಸನನ್ನು ಮಾನವನನ್ನಾಗಿಯೂ, ಮಾನವನನ್ನು ದೇವ ನನ್ನಾಗಿಯೂ ಮಾಡಬಲ್ಲ ಸಾಮರ್ಥ್ಯಸಂಪನ್ನವಾದ ಮಾದಕದ್ರವ್ಯವನ್ನು ಜಗತ್ತು ಇನ್ನೂ

ಕಾಣಬೇಕಾಗಿದೆ. ಈಶ್ವರ, ಜೀವ, ಸಾರದ್ರವ್ಯ, ಭಗವದಾನಂದ - ಹೀಗೆ ಹಲವಾರು ತತ್ತ್ವಗಳನ್ನು ಸೋಮವೆನ್ನುತ್ತಾರೆ - ಎಂದು ಹಿಂದೆ ಸಿದ್ಧಪಡಿಸಿದ್ದೇವೆ. ಭಕ್ತಿಯನ್ನೂ ಒಡಗೂಡಿಸಿಕೊಂಡರೆ, ಸೋಮ ವಿಷಯಕ ಪರಿಜ್ಞಾನಕ್ಕೆ ಒಂದು ನಿರ್ದಿಷ್ಟರೂಪ ಸಿಕ್ಕಿದಂತಾಗುತ್ತದೆ. ಮತ್ತು, ಭಾಷ್ಯಮಾಡಲ್ಪಡುತ್ತಿರುವ ಮಂತ್ರದಲ್ಲಿನ ಗುಣವಾಚಕ ಶಬ್ದಗಳಿಗೂ ನಿರ್ದೋಷವಾದ ಅರ್ಥವ್ಯಕ್ತವಾಗುತ್ತದೆ, ಮಹಾಬಲಯುಕ್ತವಾದ ಮತ್ತು ಪ್ರಮಾದಾಲಸ್ಯಗಳನ್ನು ದೂರೀಕರಿಸುವುದಾದ ಕಾರಣ, ಭಕ್ತಿರಸವು **'ಆಶು'**; ಶುಭಕರ್ಮಕ್ಕೆ ಅಲಂಕಾರಭೂತವಾದ ಕಾರಣ ಭಕ್ತಿ **'ಯಜ್ಞಶ್ರೀ'**ಯೂ ಅಹುದು. ಮಾನವರಿಗೆ ಅಹ್ಲಾದಕಾರಿಣಿಯಾದ ಕಾರಣ ಭಕ್ತಿಯು **'ನೃಮಾದನ'** - ಎಂಬುದೂ ಸರಿಯೆ, ಕೊನೆಯ **"ಪತಯೆತ್, ಮಂದಯೆತ್" ಸಖಾಯಂ"** ಎಂದು ಬಿಡಿಸಿ, "ಪತಯತ್, ಮಂದಯತ್ ಯತ್ ಸಖಾಯಂ, ತತ್ಪತಯನ್ಮಂದಯತ್‌ಸಖಾ" ಎಂದಾಗಲೀ, "ಪತಯತ್ ಯತ್ ಸಖಾಯಂ ತತ್ಸತಯತ್ಸಖಂ" ಹಾಗೂ "ಮಂದಯತ್ ಯತ್ಸಖಾಯಂ, ತನ್ಮಂದಯತ್ಸಖಂ." - ಎಂದು ಎರಡು ಶಬ್ದಕೂಟಗಳೆಂದಾಗಲಿ ಗ್ರಹಿಸಿ, ಸಮಾನಖ್ಯಾನರಾದ ಋತ್ವಿಕ್ಕುಗಳನ್ನು ಕಾರ್ಯವ್ಯಗ್ರರನ್ನಾಗಿಯೂ, ಪ್ರಫುಲ್ಲಹೃದಯರನ್ನಾಗಿಯೂ ಮಾಡುವಂತಹ ತತ್ತ್ವ ಭಕ್ತ - ಎಂದರೆ ಅದೂ ಸರಿಯೇ. ಪತಯತ್ಸಖ, ಮಂದಯತ್ಸಖ - ಎಂಬ ಎರಡು ಸಮಸ್ತಶಬ್ದಗಳೆಂದರೂ ಆದೀತು; ಪತಯನ್ಮಂದಯತ್ಸಖ - ಎಂಬ ಒಂದೇ ಸಮಸ್ತಪದವೆಂದರೂ ಆದೀತು. ಆದರೆ, **'ಸುಪರ್ಣಾ ಸುಪತನಾ'**-ಎಂದು ಯಾಸ್ಕರು **'ದ್ವಾ ಸುಪರ್ಣಾ'** ಎಂಬ ಋಕ್ಕಿನ ಮೇಲೆ ಬರೆದಿರುವ ನಿರುಕ್ತಿಯತ್ತ ಚಿತ್ತ ಚಿತ್ತಾಗ, **ಪತಯೆತ್**-ಎಂಬುದಕ್ಕೆ ಸಿಕ್ಕಾಬಟ್ಟೆ ಕೆಟ್ಟ ಕಡೆ ಬೀಳುವುದು. ಎಂದು ಮದ್ಯಪರ ಅರ್ಥವನ್ನೇ ಗ್ರಹಿಸಬೇಕಾಗಿಲ್ಲ; ಹಾಗೆಯೇ **"ಉನ್ಮಾಮಮಂದ ವೃಷಭೋ ಮರುತ್ವಾನ್."** [ಋಕ್:- 2. 33. 6.] - ಧರ್ಮಧಾರಕನೂ ಮಾನವ ಮಾತ್ರರಿಗೆ ಸೇರಿದ ಭಗವಂತ ನನ್ನನ್ನು ಹರ್ಷಗೊಳಿಸಂತ್ತಾನೆ." – ಎಂಬ ಋಗರ್ಥದಲ್ಲಿನ 'ಮಮಂದ' ಎಂಬತ್ತ ನಮ್ಮ ನೋಟ ಓಲಿದಾಗ, **'ಮಂದಯೆತ್'**-ಎಂಬುದಕ್ಕೆ 'ಹಿಂದಕ್ಕೆ ಬೀಳಿಸುವವನು'-ಎಂದೇ ತಿಳಿಯುವುದು. ಅನಿವಾರ್ಯವಲ್ಲ. **"ಪತಯೆನ್ ಮಂದಯೆತ್ಸಖ"** – ಎಂಬ ಪ್ರಯೋಗಕ್ಕೆ "ಋತ್ವಿಕ್ಕುಗಳನ್ನು ಆಲಸ್ಯರಹಿತರನ್ನಾಗಿಯೂ ಹರ್ಷಿತರನ್ನಾಗಿಯೂ ಮಾಡುವಂತಹ ವಸ್ತು." - ಎಂದರ್ಥಮಾಡಿ, ಕುಡುಕರ ಕಡುಕೆಟ್ಟ ಕೊಳಚೆಯ ಮಾತುಗಳನ್ನು ಸರ್ವಥಾ ದೂರಕ್ಕೆ ತಳ್ಳಿ, ಈಶ ಭಕ್ತರ ಸಾತ್ವಿಕ ಸರಣಿಯ ಸರಸಾರ್ಥವನ್ನೇ ಗ್ರಹಿಸಬಹುದು. ಅಲ್ಲಿಗೆ ಮುಗಿಯಿತು ಮದ್ಯಪಾಯಿಗಳ ಕೆಟ್ಟಕಥೆ.

ಇನ್ನುಳಿದುದು ಮಹರ್ಷಿದಯಾನಂದರ ಆರ್ಷಭಾಷ್ಯ. ನಮ್ಮ ಮಂದಗತಿಗೆ ಆ ಮಹಾಮಹಿಮನ ಗಂಭೀರಾರ್ಥದ ಆರ್ಷಶೈಲಿಯ ಅಂಚನ್ನು ಸ್ಪರ್ಶಿಸುವುದೂ ಕೂಡ ಕಷ್ಟವೆಂದೇ ಕಾಣುತ್ತದೆ. ಈ ಸಂಪೂರ್ಣಮಂತ್ರವನ್ನೇ ಅವರು ಭೌತಿಕ–ವಿಜ್ಞಾನಕ್ಷೇತ್ರಕ್ಕೆ ಉಪಯೋಗಿಸಿಕೊಂಡಿದ್ದಾರೆ. ಈ ಮಂತ್ರದ ಉದ್ದೇಶ್ಯ ಭಗವದ್ರಚಿತ ಸಮಸ್ತವಸ್ತುಗಳನ್ನೂ ಬಳಸಿಕೊಂಡು, ಭೌತಿಕೋತ್ಕರ್ಷವನ್ನು ಸಾಧಿಸಬೇಕು – ಎಂಬ ಉಪದೇಶವೆಂದು ಗ್ರಹಿಸಿ. ಅದೇ ದಿಕ್ಕಿನಲ್ಲಿ ಭಾಷ್ಯವನ್ನು ಮಾಡಿಕೊಂಡು ಹೋಗುತ್ತಿದ್ದಾರೆ. ಆರಿಸಿದ ಕ್ಷೇತ್ರವೇ ಬೇರೆ ಎಂದ ಮೇಲೆ, ಮತೈಕ್ಯ - ಮತಭೇದಗಳ ಪ್ರಶ್ನೆ ಉದ್ಭವಿಸದು.

"ಈಂ ಆಶುಂ ಆಶವೇ ಭರ" ಎಂಬುದಕ್ಕೆ ಮಹರ್ಷಿಗಳು – **'ಅಭಿತಃ ಈಂ ಜಲಂ ಪೃಥಿವೀಂ ಚ, (ಆಶುಂ) ವೇಗಾದಿಗುಣವಂತಮಗ್ನಿವಾಯ್ವಾದಿ ಪದಾರ್ಥಸಮೂಹಂ, (ಆಶವೇ) ಯಾನೇಷು ಸರ್ವಾನಂದಸ್ಯ, ವೇಗಾದಿ ಗುಣಾನಾಂ ಚ** ವ್ಯಾಪ್ತಯೇ (ಭರ) ಸಮ್ಯಗ್ಧಾರಯ ಪ್ರದೇಹಿ." – "ಎಲ್ಲೆಡೆಯಿಂದಲೂ (ಈಂ) ಜಲ-ಪೃಥಿವಿಗಳನ್ನೂ, ವೇಗ ಮೊದಲಾದ ಗುಣಯುಕ್ತವಾದ ಪದಾರ್ಥಸಮೂಹವನ್ನೂ ಯಾನಗಳಲ್ಲಿ ಸರ್ವಾನಂದದ ಮತ್ತು ವೇಗ ಮೊದಲಾದ ಗುಣಗಳ ವ್ಯಾಪ್ತಿಗಾಗಿ ಯುಕ್ತರೀತಿಯಲ್ಲಿ ಅಳವಡಿಸು.''-ಎಂದು ಬರೆದಿದ್ದಾರೆ. ಮುನ್ನಡೆದು, "**(ಯಜ್ಞಶ್ರಿಯಂ) ಚಕ್ರವರ್ತಿ ರಾಜ್ಯಾದೇರ್ಮಹಿಮ್ನಃ ಶ್ರೀಃ ಲಕ್ಷ್ಮೀಃ ಶೋಭಾ.** " – ಎಂದರೆ, "ಚಕ್ರವರ್ತಿರಾಜ್ಯ – ಮೊದಲಾದುದರ ಮಹಿಮೆಯು ಶ್ರೀಯು, ಲಕ್ಷ್ಮೀ ಅಥವಾ ಸೌಂದರ್ಯವಾಗಿರುತ್ತದೆ" – ಎಂದು ಅರ್ಥವಿತ್ತು. ರಾಷ್ಟ್ರ, ಯಜ್ಞ - ಇವೆರಡೂ ಕೂಡ ಸಮಾನಾರ್ಥವಾಚಕವೆಂಬುದನ್ನು ಸಿದ್ಧಪಡಿಸಲು, **"ರಾಷ್ಟ್ರಂ ವಾ ಅಶ್ವಮೇಧಃ,"** [ಶತ:- 13.1 6.3.] - "ರಾಷ್ಟ್ರವೆಂದರೆ ಅಶ್ವಮೇಧ." - ಎಂಬ ಪ್ರಮಾಣವನ್ನಿತ್ತು, "ಹೀಗೆ ಯಜ್ಞಶಬ್ದದಿಂದ ರಾಷ್ಟ್ರವು ಗ್ರಹಿಸಲ್ಪಡುತ್ತದೆ." - ಎಂಬ ವಿವರಣವನ್ನೂ ಕೊಟ್ಟಿದ್ದಾರೆ. **"ಯಜ್ಞೋ ವೈ ಮಹಿಮಾ."** [ಶತ:- 6.2.3.18] - "ಯಜ್ಞವೆಂದರೆ ಮಹಿಮೆ."- ಎಂದು ಸಾರಿಹೇಳಿ, ಮುಂದಣ ಭಾಷ್ಯಕ್ಕೆ ಕೈ ಹಾಕುತ್ತಾರೆ. **(ನೃಮಾದನಂ) ಮಾದ್ಯಂತೀ ಹರ್ಷ್ಯಂತೇऽನೇನ ತನ್ಮಾದನಂ ನೃಣಾಂ ಮಾದನಂ ನೃಮಾದನಂ. (ಪತಯತ್) ಯತ್ಪತಿಂ ಕರೋತೀತಿ ಪತಿತ್ವಸಂಪಾದಕಂತತ್. (ಮಂದಯತ್ಸಖಂ) ಮಂದಯಂತೋ ವಿದ್ಯಾಜ್ಞಾಪಕಾಃ ಸಖಾಯೋ ಯಸ್ಮಿನ್, ತತ್.**–ಎಂದರೆ "ಮಾನವರು ಯಾವುದರಿಂದ ಆಹ್ಲಾದಿತರೂ, ಹರ್ಷಿತರೂ ಆಗುತ್ತಾರೋ, ಅದು **ನೃಮಾದನ.** ಪತಿಯನ್ನಾಗಿ ಮಾಡುವಂತಹುದು, ಸ್ವಾಮಿತ್ವವನ್ನು ಗಳಿಸುವುದು **'ಪತಯತ್'**- ಎನಿಸುತ್ತದೆ. ಯಾವುದರಲ್ಲಿ ವಿದ್ಯಾಜ್ಞಾಪಕರಾದ ಮಿತ್ರರಿರುತ್ತಾರೋ, ಅದು **ಮಂದಯತ್ಸಖ** - ಎನಿಸಿಕೊಳ್ಳುತ್ತದೆ." – ಹೀಗೆ, ಪ್ರತಿ ಶಬ್ದವನ್ನೂ ಬಿಚ್ಚಿಬಿಚ್ಚಿ ತೋರಿಸಿ ಕೊನೆಗೆ, 'ಪರಮೇಶ್ವರ! ಇಂತಹ ಗುಣವಿಶಿಷ್ಟವಾದ ವಿಜ್ಞಾನವೇ ಮೊದಲಾದ ಧನವನ್ನು ಕರುಣಿಸು." - ಎಂದು ಮಂತ್ರಾರ್ಥವನ್ನು ಪೂರ್ತಿಮಾಡುತ್ತಾರೆ. ನೀತಿಯ ರೂಪದಲ್ಲಿ– **"ಈಶ್ವರಃ ಪುರುಷಾರ್ಥಿನೋ ಮನುಷ್ಯಸ್ಯೋಪರಿ ಕೃಪಾಂ ದಧಾತಿ, ನಾಲಸಸ್ಯ."** – "ಈಶ್ವರನು ಪರಿಶ್ರಮಿಯಾದ ಮಾನವನ ಮೇಲೆ ಕರುಣೆಯನ್ನು ಎರೆಯುತ್ತಾನೆಯೋ ಹೊರತು, ಸೋಮಾರಿಯ ಮೇಲೆ ಅಲ್ಲ." - ಎಂದು ಘೋಷಿಸಿದ್ದಾರೆ.

ನಾವು ಮುನ್ನವೇ ಹೇಳಿರುವಂತೆ, ಮಹರ್ಷಿ ಪ್ರವರರು ಈ ಮಂತ್ರದಲ್ಲಿ ಭೌತಿಕ ವಿಜ್ಞಾನವನ್ನೇ ಪ್ರತಿಪಾದಿಸುತ್ತಿರುವುದರಿಂದ, ಶ್ರೀ॥ ಮಧ್ವ-ಸಾಯಣರ ಭಾಷ್ಯದೊಂದಿಗಾಗಲಿ, ನಾವು ನಡೆದು ಬಂದಿರುವ ಭಾಷ್ಯದ ಶೈಲಿಯೊಂದಿಗಾಗಲಿ ಯಾವುದೇ ತುಲನಾತ್ಮಕ ವಿಷಯವನ್ನೂ ಪ್ರಸ್ತಾಪಿಸಲು ಸರ್ವಥಾ ಅವಕಾಶವೇ ಇಲ್ಲ. ಪಾಂಚಭೌತಿಕ ಜಗತ್ತಿನ ಪ್ರತಿಯೊಂದು ಕಣದಲ್ಲಯೂ, ಅಣುವಿನಲ್ಲಿಯೂ ಭೌತಿಕ ಸಂಪತ್ತೂ ತುಂಬಿದೆ;

ಅರಸುವ ಅಕ್ಷವಿದ್ದಲ್ಲಿ, ಅರಿಯುವ ಆಸೆಯಿದ್ದಲ್ಲಿ, ಪರಮೈಶ್ವರ್ಯವಾನ್, ಪರಮಶಕ್ತಿ ಸಂಪನ್ನ ಸರ್ವೇಶ್ವರನ ಈ ಅದ್ಭುತ ಸೃಷ್ಟಿಯಲ್ಲಿ ಎಲ್ಲೆಲ್ಲಿಯೂ ಐಶ್ವರ್ಯವಿದೆ; ಎಲ್ಲದರಲ್ಲಿಯೂ ವಿಜ್ಞಾನದ ವೈಭವವಿದೆ—ಎಂದಿದ್ದಾರೆ ಮಹರ್ಷಿಗಳು. ವೇದದ ಪ್ರಮಾಣವೂ ಇದೆ:-

ಪರಿಚಿನ್ಮರ್ತೋ ದ್ರವಿಣಂ ಮಮನ್ಯಾತ್
ಋತಸ್ಯ ಪಥಾ ನಮಸಾ ವಿವಾಸೇತ್।
ಉತ ಸ್ವೇನ ಕ್ರತುನಾ ಸಂಪದೇತ
ಶ್ರೇಯಾಂಸಂ ದಕ್ಷಂ ಮನಸಾ ಜಗೃಭ್ಯಾತ್॥

[ಋಕ್:– 10. 31. 2.]

"[ಮರ್ತಃ] ಮರ್ತ್ಯನಾದ ಮಾನವನು, [ದ್ರವಿಣಂ] ಧನವು, [ಪರಿಚಿತ್] ಎಲ್ಲೆಡೆಯೂ ಇದೆ-ಎಂದು, [ಮಮನ್ಯಾತ್] ತಿಳಿದುಕೊಳ್ಳಬೇಕು. [ನಮಸಾ] ವಿನಯದಿಂದ, [ಋತಸ್ಯ ಪಥಾ] ವೇದದ, ಸತ್ಯದ, ಯಜ್ಞದ ಹಾಗೂ ನ್ಯಾಯದ ಮಾರ್ಗದಿಂದ, [ವಿವಾಸೇತ್] ವ್ಯವಹರಿಸಬೇಕು. [ಉತ] ಮತ್ತು, [ಸ್ವೇನ ಕ್ರತುನಾ] **ತನ್ನ ಸ್ವಂತ ಶುಭ ಕರ್ಮ-ಶುಭ ಆಲೋಚನೆಗಳ ಮೂಲಕವೇ,** [ಸಂಪದೇತ] **ಅನ್ಯರೊಂದಿಗೆ ವರ್ತನಾಡಬೇಕು.** [ಮನಸಾ] **ಮನಸ್ಸಿನಿಂದ,** [ಶ್ರೇಯಾಂಸಂ ದಕ್ಷಂ] **ಶ್ರೇಯಸ್ಕರವಾದ ಶಕ್ತಿಯನ್ನು,** * **ನೈಪುಣ್ಯವನ್ನು,** [ಜಗೃಭ್ಯಾತ್] ಗ್ರಹಿಸಬೇಕು." ನುಡಿಯಿಂದಲ್ಲ: ದುಡಿಮೆಯಿಂದ, ಉಪದೇಶದಿಂದಲ್ಲ; ಆಚಾರದಿಂದ ಜೀವನದ ಶ್ರೇಷ್ಠತ್ವವನ್ನು ತೋರಿಸುವ ಪ್ರಾಮಾಣಿಕತೆಯನ್ನೇ ವ್ಯವಹಾರದ ತಳಹದಿಯಾಗಿ ಮಾಡಿಕೊಂಡ ವಿನಯಶಾಲೀ ವ್ಯಾಪಾರಿಗಳಿಂದ ತುಂಬಿದ ರಾಷ್ಟ್ರ ನಿಜವಾಗಿಯೂ ಅಜೇಯವಾದ ಮಹಾನ್ ರಾಷ್ಟ್ರವಾಗುತ್ತದೆ.

ಒಂದು ರೀತಿಯಿಂದ ನೋಡಿದಾಗ, ಮಹರ್ಷಿಗಳ ವೈಶಿಷ್ಟ್ಯ ಶಬ್ದ–ಶಬ್ದದಲ್ಲಿಯೂ ವ್ಯಕ್ತವಾಗುತ್ತದೆ. ಅನ್ಯ ಸಾಹಿತ್ಯಕಾರರು ರಾಜಾಶ್ರಯ ಅಥವಾ ಆಸ್ಥಾನದ ಅನುಕಂಪವನ್ನು ಗಳಿಸುವ ಸಲುವಾಗಿಯೇ ತಮ್ಮ ತಮ್ಮ ಕೃತಿಗಳಲ್ಲಿ ಆಶ್ರಯದಾತೃಗಳ ಹೆಗ್ಗಳಿಕೆಯ ಉಗ್ಗಡಣೆಗಾಗಿ, ಕೈತುಂಬ ದಕ್ಷಿಣೆಯ ಒಗ್ಗರಣೆಗಾಗಿ ಕಾವ್ಯರಚನೆಮಾಡಿರುವುದು ಕಂಡು ಬರುತ್ತದೆ. **"ವಿಕ್ರಮಾರ್ಜುನ ವಿಜಯ,"** **"ಸಾಹಸಭೀಮ ವಿಜಯ"** (ಪಂಪಭಾರತ-ಗದಾಯುದ್ಧ)- ಈ ಪರ್ವತೋನ್ನತ ಸಾಹಿತ್ಯದ ರಚನೆಯ ಹಿಂದೆ ಇರುವ ರಹಸ್ಯ ಪಂಡಿತರಿಗೆ ತಿಳಿಯದ ವಿಷಯವಲ್ಲ. ರಾಜಾಶ್ರಯ ಸಂಪಾದನೆಯ ಈ ವ್ಯಾಧಿ ಕೇವಲ ಕನ್ನಡಕ್ಕೆ ಮಾತ್ರ

---

* **"ಶ್ರೇಯಾಂಸಂ ದಕ್ಷ"** –"ಅತ್ಯುನ್ನತತಮ ಶಕ್ತಿ ಹಾಗೂ ನೈಪುಣ್ಯ" ಎಂದಾದರೂ ಬಿಡಿಸಬಹುದು; **ದಕ್ಷ "ಶ್ರೇಯಾಂಸಂ"**–"ನೈಪುಣ್ಯವಂತನು ಸಾಧಿಸಬಹುದಾದ ಉತ್ಕೃಷ್ಟತಮ ಶ್ರೇಯಸ್ಸು."-ಎಂದಾದರೂ ಬಿಡಿಸಬಹುದು.

ಅನ್ವಯಿಸುವಂತಹುದಲ್ಲ. ಎಲ್ಲ ಭಾಷೆಯ ಜನರಿಗೂ-ಸಾಹಿತ್ಯಕಾರರಿಗೂ-ಈ ಜಾಡ್ಯ ಹತ್ತಿದ್ದಿತು. ಹಲಕೆಲವು ಕವಿಗಳ ದೃಷ್ಟಿಯಲ್ಲಿಯಂತೂ ಸಾಹಿತ್ಯ ರಚನೆಗಿಂತ ಈ ದಕ್ಷಿಣೆಯ ಒಗ್ಗರಣೆಗೇ ಹೆಚ್ಚು ಪ್ರಾಶಸ್ತ್ಯವಿತ್ತು. ಸಂಸ್ಕೃತ ಸಾಹಿತ್ಯಜ್ಞರಿಗೆ ಜಗನ್ನಾಥ ಕವಿಯ ಹೆಸರು ಹೊಸತಲ್ಲ. ಅವನ ಕವಿತಾಗ್ರಂಥನ ಶಕ್ತಿಯ ಬಗೆಗೆ ವಿವಾದವಿಲ್ಲ. ಯಾವುದೋ ಮುಸ್ಲಿಂ ಯುವತಿಯ ಕೈ ಹಿಡಿದ ಕಾರಣ, ಅವನ ಜಾತಿಯ ಜನ ಅವನನ್ನು ಬಹಿಷ್ಕೃತರನ್ನಾಗಿ ಮಾಡಿದ ರೆಂಬುದೂ ಸತ್ಯವೇ. ಅಪಹಾಸ್ಯಕ್ಕಾಗಿ ಜನ ಅವನನ್ನು 'ಮರ್ಕಭಟ್ಟ' (ಮರ್ಕಟವೋ) ನೆಂದ ಕರೆದುದೂ, ಅವನ ಸಮೀಪದ ನೆಂಟರಿಷ್ಟರೂ ಬ್ರಾಹ್ಮಣವರ್ಗದಿಂದ ಹೊರಗಾಗಿ 'ಮಾರ್ಕ' ರೆಂದು ಪ್ರಸಿದ್ಧವಾದುದೂ ಸರ್ವವಿದಿತ. ಆದರೆ, ಕೇವಲ ಗುಣ ಕರ್ಮ-ಸ್ವಭಾವಾನುಸಾರ ವಾಗಿಯೇ ವರ್ಣವ್ಯವಸ್ಥೆಯನ್ನು ಅಂಗೀಕರಿಸುವ ವೇದಾನುಯಾಯಿಗಳಾದ ನಮಗೆ ಜಾತಿ ಏನು? ಮತವೇನು?

ಜಗನ್ನಾಥ ತನ್ನ ಕವಿತಾಕ್ಷಮದ ಬಗೆಗೆ ಸ್ವಲ್ಪ ಅಳತೆಮೀರಿದ ನಂಬಿಕೆಯನ್ನಿಟ್ಟಿದ್ದ ನೆಂದು ಕಾಣುತ್ತದೆ. ಯಾರೋ ತತ್ಕಾಲೀನ ಸಾಮಂತರಾಜರ ಆಶ್ರಯಪಡೆಯುವ ಸಲಹೆ ಯಿತ್ತಾಗ, ಜಗನ್ನಾಥನೆಂದ :

**ದಿಲ್ಲೀಶ್ವರೋ ವಾ ಜಗದೀಶ್ವರೋ ವಾ ಮನೋರಥಂ ಪೂರಯಿತುಂ ಸಮರ್ಥಃ ।**
**ಅನ್ಯೈರ್ನೃಪಾಲೈಃ ಪರಿದೀಯಮಾನಂ ಶಾಕಾಯ ವಾ ಸ್ಯಾತ್ ಲವಣಾಯ ವಾ ಸ್ಯಾತ್ ॥**

"ದಿಲ್ಲೀಶ್ವರನೋ, ಜಗದೀಶ್ವರನೋ ಮನೋರಥವನ್ನು ಈಡೇರಿಸಲು ಶಕ್ತನಾದಾನು. ಬೇರೆಯ ರಾಜರುಗಳಿಂದ ಕೊಡಲ್ಪಡುವ ಧನ ತರಕಾರಿಗಾದೀತ; ಉಪ್ಪಿಗಾದೀತು !"

ಇದರಲ್ಲಿ ಐತಿಹಾಸಿಕ ಅಂಶವೆಷ್ಟೋ, ಕಾಲ್ಪನಿಕ ಕಗ್ಗವೆಷ್ಟೋ. ಈಗ ಆ ಚರ್ಚೆ ಬೇಡ. ಒಟ್ಟಿನಲ್ಲಿ ಕೇವಲ ಭಾರತೀಯ ಕವಿಗಳೇ ಅಲ್ಲ; ಎಲ್ಲ ರಾಷ್ಟ್ರಗಳ ಕವಿಗಳೂ ಕೂಡ ರಾಜ-ಮಹಾರಾಜರ ಕೃಪಾಛತ್ರದಡಿಯಿರಲು ಬಯಸುತ್ತಿದ್ದುದೂ ನಿಜ; ರಾಜಾಶ್ರಯದಿಂದ ಜಾಗತಿಕ ಸಾಹಿತ್ಯ ನಿರ್ಮಾಣಕ್ಕೆ ಬಹಳ ಸಹಾಯ ಸಂದಿದ-ಎಂಬುದೂ ಕೂಡ ಅಷ್ಟೇಸತ್ಯ.

ಆದರ, ಅಮಾವಾಸ್ಯೆಯ ಸಟ್ಟಿರುಳಿನ ಕಾರ್ಗತ್ತಲಲ್ಲಿ ಇದ್ದಕ್ಕಿದ್ದಂತೆ ಕ್ಷಣಕಾಲಕ್ಕೆ ಮಿಂಚಿ ಮರೆಯಾಗಿಹೋಗುವ ತಡಿಲ್ಲತೆ (ಮಿಂಚಿನ ಬಳ್ಳಿ) ಯಂತೆ ಮಹರ್ಷಿ ದಯಾನಂದ ರಂತಹ ಪುರುಷಸಿಂಹರೂ ಕ್ಷಣಮಾತ್ರ ಕಾಲ ಮಿಂಚಿ ಮರೆಯಾಗಿ ಹೋಗುವುದುಂಟು. ಬ್ರಿಟಿಷ್ ಸಾಮ್ರಾಜ್ಯದ ಭಾಗ್ಯಸೂರ್ಯ ಸಮಗ್ರ ಭೂಮಂಡಲದಲ್ಲೇ ಪ್ರಖರವಾಗಿ ಮೆರೆ ಯುತ್ತಿದ್ದ, 'ಬ್ರಿಟಿಷ್' ಎಂಬ ಮಾತೇ ಭೂಮಂಡಲದ ಶಾಸಕರನ್ನು ನಡುಗಿಸಲು ಸಮರ್ಥ ವಾಗಿದ್ದಾಗ ಮತ್ತು 'ಲಾರ್ಡ್ ಆಮ್‌ಹೆರ್ಸ್ಟ್'ನಂತಹ ಉಗ್ರಸಾಮ್ರಾಜ್ಯವಾದೀ ಕಟ್ಟುಗ್ರ

ನೀತಿಯು ವ್ಯಕ್ತಿ ಗವರ್ನರ್ ಜನರಲ್‌ರಾಗಿದ್ದಾಗ, ತೆರೆಮರೆಗಳಲ್ಲಿ - "ಚಕ್ರವರ್ತಿ ಆರ್ಯ ಸಾಮ್ರಾಜ್ಯದ ಒಗೆಗೆ ಲೇಖನ-ಭಾಷಣಗಳ ಅಖಂಡ ಶೃಂಖಲೆಯನ್ನೇ ಉಳಿಸಿಕೊಂಡು ಬಂದಿದ್ದ ಈ ಕೌಪೀನಮಾತ್ರಧಾರೀ ಸನ್ಯಾಸಿಯ ಸಾಹಸದ ವಿಷಯದಲ್ಲಿ ಏನನ್ನಬೇಕೋ ತಿಳಿಯದು. "ಧರ್ಮದಲ್ಲಿ ದೃಢವಾದ ಶ್ರದ್ಧೆ, ಭಗವಂತನಲ್ಲಿ ಬಣ್ಣಗೆಡದ ಭಕ್ತಿ, ವೇದಗಳಲ್ಲಿ ನಿರ್ವಿವಾದವೇ ಆದ ವಿಶಿಷ್ಟಜ್ಞಾನ, ತಾರ್ಕಿಕ ಶಿರೋಮಣಿಗಳ ತಲೆಯನ್ನೂ ಕೂಡ ತೀವ್ರತರ್ಕ ಪ್ರೌಢಿಮೆಯಿಂದ ತಗ್ಗಿಸುವಂತೆಸಗುವ ಈ ದಂಡೀ ಸ್ವಾಮಿಯ ವ್ಯಕ್ತಿತ್ವವೇ ಬೇರೆ!" - ಎಂದಿದ್ದನಂತೆ ಲಾರ್ಡ್ ನಾರ್ಥ್‌ಬ್ರೂಕ್ ಮಹಾಶಯ!

ಇರಲಿ. ಮಹರ್ಷಿಯ ಸ್ಥಾನ ಮಹರ್ಷಿಗೆಯೇ ಮೀಸಲು. ಅವರು ತೋರಿಸಿರುವ ದಾರಿಯಲ್ಲಿ ನಡೆದು, ವೈದಿಕ ವಿಜ್ಞಾನದ ವಿಶಿಷ್ಟ ಸಾಮರ್ಥ್ಯವನ್ನು ತೋರಿಸಿಕೊಡುವ ಮಹಾನ್ ವ್ಯಕ್ತಿಯೊಬ್ಬರ ಆಗಮನಕ್ಕಾಗಿ ಹಾದಿಕಾಯುತ್ತಿದ್ದಿತು ಮಾನವ ಸಮಾಜ. ಬಂದರು; ಅವರೇ ದಯಾನಂದರು. ನೂರಾರು-ಸಾವಿರಾರು-ಲಕ್ಷಾಂತರ ದೇವರುಗಳ ಉತ್ಪಾದನೆ, ವಿದ್ವಾಂಸರೆನಿಸಿಕೊಂಡವರ ಮೆದುಳಿನಲ್ಲಿಯೇ ಮೂಡಿ ಬಂದಿತು. ಸಂಪ್ರದಾಯ-ಸಂಪ್ರದಾಯಗಳ ನಡುವೆ ಸೌಮನಸ್ಯವನ್ನು ಕುದುರಿಸಲು, ಎಲ್ಲ ದೇವರುಗಳೂ ಒಬ್ಬನೇ ಒಬ್ಬ ಭಗವಂತನ ಭಿನ್ನ-ಭಿನ್ನ ರೂಪಗಳೆಂದು ಅದೆಷ್ಟೋ ಜನ ಉದಾರಾತ್ಮರು ನಿರಂತರವಾಗಿ ಯತ್ನಿಸುತ್ತಲೇ ಬಂದಿದ್ದಾರೆ. ಆದರೆ, ಅವರ ಪ್ರಯತ್ನಗಳ ಫಲವಾಗಿ, ಲಭಿಸಿದುದು ಏಕದೇವೋಪಾಸನೆಯಲ್ಲ; ಏಕಮಾತ್ರ ಪರಮಾತ್ಮನ ಅಸ್ತಿತ್ವದಲ್ಲಿ ನಂಬಿಕೆ ಕೂಡ ಅಲ್ಲ. ಉದಾರಾತ್ಮರೆಂದು ನಾವು ನಿರ್ದೇಶಿಸಿರುವ ಜನರು, "ತಾವು ಯಾವ ಸಂಪ್ರದಾಯದಲ್ಲಿ ಹುಟ್ಟಿದರೋ, ಆ ಸಂಪ್ರದಾಯದ ದೇವರೇ ನಿಜವಾದ ದೇವರು; ಅನ್ಯ ದೇವರುಗಳೆಲ್ಲಾ ಆ ದೇವರ ಉಪಜೀವ್ಯರಾದ, ಶಾಸನ ಶಾಖಾ ವಿಭಾಗದ ಮುಖ್ಯಾಧಿಕಾರಿಗಳಂತೆ ವರ್ತಿಸುವ 'ಉಪದೇವರು'ಗಳು ಮಾತ್ರ-ಎಂದು ದನಿಯೆತ್ತಿದಾಗ ಪರಿಣಾಮವೇನಾಗಬಹುದೆಂದು ಊಹಿಸಲು ವಿಶೇಷ ಕಷ್ಟವೇನಿಲ್ಲ. ಈ ಶ್ಲೋಕವನ್ನು ನಮ್ಮ ಮಾಜೀ ರಾಷ್ಟ್ರಪತಿ ಡಾ|| ರಾಧಾಕೃಷ್ಣನ್ ಬಾರಿ ಬಾರಿ ಉಚ್ಚರಿಸುತ್ತಿದ್ದರು:—

**ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ**
**ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ ।**
**ಅರ್ಹನ್ನಿತ್ಯಥ ಜೈನ ಶಾಸನ ರತಾ ಕರ್ಮೇತಿ ಮೀಮಾಂಸಕಾಃ**
**ಸೋಽಯಂ ನೋ ವಿದಧಾತು ವಾಂಛಿತಫಲಂ ತ್ರೈಲೋಕ್ಯ**
**ನಾಥೋಹರಿಃ ||**

"ಯಾವನನ್ನು ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮನೆಂದೂ, ಬೌದ್ಧರು ಬುದ್ಧನೆಂದೂ, ಪ್ರಮಾಣ ಪಟುಗಳಾದ (ಈ ಪ್ರಮಾಣ ಪಟುಗಳು ಬೌದ್ಧರೋ, ನೈಯಾಯಿಕರೋ-ತಿಳಿಯದು.) ನೈಯಾಯಿಕರು, ಕರ್ತಾ-ಎಂದೂ, 'ಅರ್ಹನ್'-ಎಂದು ಜೈನಶಾಸನರತರೂ,

ಕರ್ಮವೆಂದು ಮೀಮಾಂಸಕರೂ ಉಪಾಸನೆ ಮಾಡುತ್ತಾರೋ, ಆ ತ್ರೈಲೋಕ್ಯನಾಥನಾದ ಹರಿಯು ನಮಗೆ ವಾಂಛಿತ ಫಲವನ್ನೀಯಲಿ." ಶ್ಲೋಕಕರ್ತೃ ನಿಃಸಂದೇಹವಾಗಿಯೇ ವೈಷ್ಣವರಾಗಿದ್ದು, ಶಿವ, ಬ್ರಹ್ಮ, ಬುದ್ಧ, ಕರ್ತಾ, ಅರ್ಹನ್, ಕರ್ಮ - ಇವೆಲ್ಲವೂ ಹರಿಯ ಭಿನ್ನ ಭಿನ್ನ ನಾಮಗಳಷ್ಟೇ – ಎಂದು ಭಾವಿಸಿರಬಹುದು; ಅವರ ಭಾವನೆ ಅಮಂಗಳವೆಂದು ನಾವೆನ್ನಲಾರೆವು: ತಮ್ಮಂತೆಯೇ ಸರ್ವ ಸಾಂಪ್ರದಾಯಿಕರೂ ತಮ್ಮ ತಮ್ಮ ಕಲ್ಪನೆಯ ದೇವರುಗಳಿಗೆಯೇ ಪ್ರಾಧಾನ್ಯ ಕೊಡುವರೆಂಬುದನ್ನು ಮರೆತರೇನೋ! ಸರ್ವ ಮತ ಸಮ್ಮೇಳನ ಒಂದರಲ್ಲಿ ಅವರು ಈ ಶ್ಲೋಕ ಓದಿದಾಗ, "ತ್ರೈಲೋಕ್ಯನಾಥಃ ಶಿವಃ-ಆಗಲೊಲ್ಲನ್ಯಾಕೆ, ಸ್ವಾಮೀ ?" - ಎಂದೊಬ್ಬರೆದ್ದರು. ಬುದ್ಧ, ಬ್ರಹ್ಮ, ಅರ್ಹನ್, ಕರ್ತಾ, ಕರ್ಮ – ಎಲ್ಲರಿಗೂ ವಕೀಲರು ಸಿಕ್ಕಿಯೇ ಸಿಕ್ಕಿದರು. ಪಿಂಗಳನ ಛಂದಃ ಶಾಸ್ತ್ರಕ್ಕೆ ಮಂಗಳ ಹಾಡಿ, ಮೇಲೆ ನಾವು ನಿರ್ದೇಶಿಸಿರುವ ಮಾಜೀ ರಾಷ್ಟ್ರಪತಿಗಳು, ಮತ್ತೆರಡು ಸಾಲುಗಳನ್ನು ಸೇರಿಸಿದರು ಅಂತಿಮ ಪಾದಕ್ಕೆ ಮುನ್ನ:–

ಕ್ರೈಸ್ತಾಃ ಕ್ರಿಸ್ತ ಇತೀಶ ಪುತ್ರ ವಿಷಯೇ ತ್ವೇಕತ್ವವಾದೇ ರತಾ
ಅಲ್ಲಾ ಶ್ಚೇತಿ ತದರ್ಥನಿರ್ಗತಮತಾ ಇಸ್ಲಾಂಮತೇ ಸಂಸ್ಥಿತಾಃ ।

ನಾಲ್ಕಕ್ಕೆ ಪ್ರತಿಯಾಗಿ ಆರು ಚರಣಗಳಾದವು; ಆದರೆ – " ನಮ್ಮ ದೇವರ ಭಿನ್ನ ಭಿನ್ನ ರೂಪಗಳೇ ಅನ್ಯ ದೇವರುಗಳು." – ಎಂದೊಪ್ಪಿಕೊಳ್ಳದೆ, ಏಕಾಭಿಪ್ರಾಯ ಮೂಡು ಮಂತಿರಲಿಲ್ಲ.

ಅಂದಿನದೇ ಸ್ಥಿತಿ ಇಂದಿಗೂ ಇದೆ. ತಮ್ಮನ್ನು ತಾವೇ "ನಾಸ್ತಿಕರು; ಅದೇ ಕಾರಣದಿಂದ ಹೇತುವಾದಿಗಳು; ಬುದ್ಧಿ ಶಾಲಿಗಳು." – ಎಂದು ಕೊಂಡು ಮೆರೆಯುವ, ಮಾನವ ಸಮಾಜಕ್ಕೆ ಹತ್ತಿದ "ಧರ್ಮ – ದೇವರು – ಆತ್ಮ" ಎಂಬ ತ್ರಿವಿಧ ದೋಷಗಳಿಂದ (ವಾತ-ಪಿತ್ತ-ಕಫಗಳೋ ?) ಮಹಾತ್ರಾಸದಾಯಕವಾದ ರೋಗಕ್ಕೆ ತಮ್ಮ 'ಔಷಧಿಗಳ ಪೆಟ್ಟಿಗೆ'ಯಲ್ಲಿ ನಾಸ್ತಿಕ್ಯ' ವೆಂಬ, ಎಂದಿಗೂ ನಿಷ್ಫಲವಾಗದ ದಿವ್ಯೌಷಧವಿದೆ.'' ಎಂಬ ನಂಬಿಕೆಯಿಂದ, ಮನ ಬಂದಂತೆ ಮಾತನಾಡುವ ಧೀರರು ಸಂಖ್ಯಾ ದೃಷ್ಟಿಯಿಂದ ಬೆಳೆಯುತ್ತಿದ್ದರೂ, ಅವರ ಅಕ್ಕ ಪಕ್ಕದಲ್ಲಿಯೇ ನವನೂತನ ದೇವರುಗಳ, ಬಗೆಬಗೆಯ ಬಣ್ಣಗಳ, ಕೇಶ-ಶೃಂಗಾರಗಳ ವಸ್ತ್ರ-ವಿನ್ಯಾಸಗಳ, ಅಲೌಕಿಕ ಚಮತ್ಕಾರಗಳ 'ಬಾಬಾ'ಗಳ ಬೆಟ್ಯಾಲಿಯನ್' ಗಳು ಬೇರೆ ಹರಡುತ್ತಿವೆ

ಈ ಪರಿಸ್ಥಿತಿಯಲ್ಲಿ ಕೇವಲ ವೈದಿಕ ಧರ್ಮ ಒಂದೇ ಜೀವರೆಲ್ಲರನ್ನೂ ರಕ್ಷಿಸಬಲ್ಲದಾಗಿದೆ. ಆದುದರಿಂದ, ವೇದಾಧ್ಯಯನ ಒಂದೇ ಈಗ ಮಾನವರೆಲ್ಲರ ಆದ್ಯ ಕರ್ತವ್ಯವಾಗಿದೆ. ಬನ್ನಿರಿ, ಮುಂದಣ ಮಂತ್ರದತ್ತ ಗಮನವನ್ನು ಹರಿಸೋಣ:–

ಈ ಚತುರ್ಥ ಸೂಕ್ತ ಏಳನೆಯ ಮಂತ್ರದ ಭಾಷ್ಯದ ಪೂರ್ಣವೆಚ್ಚ
ಶ್ರೀಮತಿ ವತ್ಸಲಾ ದೇವಿ ಎಂ. ಹನುಮಂತ ಕಿಣಿ,
ಮುಂಬಾಯಿ, ಇವರ ಸೇವೆ.

ಸಂಹಿತಾ ವಿಭಾಗ

ಅಸ್ಯ ಪೀತ್ವಾ ಶತಕ್ರತೋ ಘನೋ ವೃತ್ರಾಣಾಮಭವಃ ।

ಪ್ರಾವೋ ವಾಜೇಷು ವಾಜಿನಂ ॥೮॥

**ಪದಪಾಠ:–** ಅಸ್ಯ, ಪೀತ್ವಾ, ಶತಕ್ರತೋ, ಘನಃ ವೃತ್ರಾಣಾಂ, **ಅಭವಃ । ಪ್ರ, ಆವಃ,** ವಾಜೇಷು, ವಾಜಿನಂ ॥೮॥

**ಅನ್ವಯ:–** ಶತಕ್ರತೋ ! ಅಸ್ಯ ಪೀತ್ವಾ ವೃತ್ರಾಣಾಂ, ಘನಃ, ಅಭವಃ ವಾಜೇಷು ವಾಜಿನಂ ಪ್ರ ಆವಃ ।

**ಶಬ್ದಾರ್ಥ:–** [ಶತಕ್ರತೋ] ಶತಶತಕರ್ಮಪ್ರಜ್ಞೆಗಳನ್ನು, ಸಾವಿರಸಾವಿರ ಕ್ರಿಯಾಜ್ಞಾನಗಳನ್ನು ಮಾಡಬಲ್ಲ ಮಹಾನ್ ಪರಮಾತ್ಮನ್ ! [ಅಸ್ಯ] ಈ ಸೋಮದ, ಭಕ್ತಾರ್ಪಿತ ಭಕ್ತಿರಸದ, [ಪೀತ್ವಾ] ಪಾನವನ್ನು ಮಾಡಿದವನಾಗಿ; [ವೃತ್ರಾಣಾಂ] ಆವರಿಸಿ ಬರುವ ಆತ್ಮಘಾತಕವಾದ ಅಜ್ಞಾನಾದಿ ಅವಗುಣಗಳನ್ನು, [ಘನಃ] ದೃಢವಾಗಿ ನಿಂತು ನಿರ್ನಾಮ ಮಾಡುವವನು, [ಅಭವಃ] **ಆ**ಗಿರುತ್ತೀಯೆ, [ವಾಜೇಷು] ಸಂಗ್ರಾಮಗಳಲ್ಲಿ, [ವಾಜಿನಂ] ಹೋರಾಟಗಾರನನ್ನು, [ಪ್ರ+ಆವಃ] ಪ್ರಕೃಷ್ಟವಾಗಿಯೇ ರಕ್ಷಿಸುತ್ತಾ ಬಂದಿದ್ದೀಯೆ. ಭಕ್ತನ ಕೈ ಬಿಡುವವನು ನೀನೆಂದಿಗೂ ಅಲ್ಲ.

**ಭಾಷ್ಯ:–** ಈ ಮಂತ್ರದ ಪ್ರತಿಪಾದ್ಯ ವಿಷಯವೂ ಇಂದ್ರನೇ. ಸಂಪೂರ್ಣ ಸೂಕ್ತದಲ್ಲಿ ನಮ್ಮ ಓದುಗರು ಇಂದ್ರನ ನಾನಾರೂಪಗಳ ಚಿತ್ರಣವನ್ನು ನೋಡುತ್ತಾ ಬಂದಿದ್ದಾರೆ ಈ ಮಂತ್ರ ಅದೇ ಇಂದ್ರನ ಮತ್ತೊಂದು ರೂಪವನ್ನು ನಮ್ಮ ಮುಂದೆ ಮಂಡಿಸುತ್ತಿದೆ.

ಎಷ್ಟು ಸಾರಿ ಹೇಳಿದರೂ ಅಷ್ಟೇ; ಇಂದ್ರನು ದೇವಲೋಕಾಧೀಶ, ಶಚೀಪತಿ. ನೂರು ಯಜ್ಞಗಳನ್ನು ಮಾಡಿದ ಮೇಲೆಯೇ ಇಂದ್ರಪದವಿ ಸಿಕ್ಕುವುದು. ಅನ್ಯಥಾ ಯಾವನೂ ಇಂದ್ರನಾಗಲಾರನು - ಎಂಬ ಪೌರಾಣಿಕ ಕಲ್ಪನೆ, ಬೇರುಸಹಿತ ನಾಶಹೊಂದದೆ, ಇಂದ್ರನ ನಿಜವಾದ ಸ್ವರೂಪವನ್ನು ಯಾವನೂ ಅರಿಯಲಾರನು - ಎಂಬುದು ತ್ರಿಕಾಲಾಬಾಧಿತ ಸತ್ಯ. ಈ ಮಂತ್ರದಲ್ಲಿ 'ಇಂದ್ರ' ಎಂಬ ಶಬ್ದವಿಲ್ಲ, ನಿಜ. ಆದರೆ ಸಂಪೂರ್ಣ ಸೂಕ್ತವೇ ಇಂದ್ರದೇವತಾಕವೆಂದ ಮೇಲೆ, ಸಂಶಯಕ್ಕೆಡೆ ಎಲ್ಲಿ ? ಇಂದ್ರಶಬ್ದಕ್ಕೆ ಹಲವಾರು ಅರ್ಥಗಳಿವೆ - ಎಂದು ನಾವು ಹೇಳುತ್ತಲೇ ಬಂದಿದ್ದೇವೆ. ಅದರಲ್ಲಿ ಸರ್ವಪ್ರಧಾನವಾದ ಅರ್ಥ 'ಪರಮೈಶ್ವರ್ಯವಾನ್', ಪರಮಶಕ್ತಿಸಂಪನ್ನ ಸರ್ವೇಶ್ವರನೆಂಬುದೇ -ಎಂದೂ ಕೂಡ ಪಾಠಕರೋದಿದ್ದಾರೆ. ಇಂದ್ರನು ಸರ್ವೇಶ್ವರನೇ – ಎಂಬ ತಥ್ಯವನ್ನು ತಿಳಿದ ಕೋಟ್ಯಂಶದಷ್ಟೂ

ಸಂದೇಹಕ್ಕೆಡೆ ಕೊಡದೆ ವರ್ಣಿಸುವ ನಿಮ್ನಾಂಕಿತ ಪ್ರಮಾಣಗಳು ಪಾಠಕರ ಅಭಿನ್ನ ಸಂಪತ್ತಾದೀತು-ಎಂದು ಯಾವ ನಿಷ್ಪಕ್ಷಪಾತ ವ್ಯಕ್ತಿಯಾದರೂ ಒಪ್ಪಲೇ ಬೇಕಾದೀತು:-

**ಯಃ ಪೃಥಿವೀಂ ವ್ಯಥಮಾನಾಮದೃಗ್ಂಹತ್**
**ಯಃ ಪರ್ವತಾನ್ ಪ್ರಕುಪಿತಾನರಮ್ಣಾತ್।**
**ಯೋ ಅಂತರಿಕ್ಷಂ ವಿಮಮೇ ವರೀಯೋ**
**ಯೋ ದ್ಯಾಮಸ್ತಭ್ನಾತ್ ಸ ಜನಾಸ ಇಂದ್ರಃ॥**

[ಋಗ್ವೇದ:-2. 12. 2.]

"[ಜನಾಸಃ] ಮಾನವರೇ! [ಯಃ] ಯಾವನು, [ವ್ಯಥಮಾನಾಂ ಪೃಥಿವೀಂ] ಕಂಪಾಯಮಾನವಾದ ಭೂಮಿಯನ್ನು, [ಅದೃಂಹತ್] ದೃಢಪಡಿಸಿದ್ದಾನೋ, [ಯಃ] ಯಾವನು, [ಪ್ರಕುಪಿತಾಂ ಪರ್ವತಾನ್] ಪ್ರಕ್ಷುಬ್ಧವಾದ, ಗುಡುಗು-ಸಿಡಿಲು-ಮಿಂಚುಗಳಿಂದ ಕ್ರೋಧವನ್ನು ತೋರುವ ಕಾರ್ಮೋಡಗಳ ಉನ್ನತ ಸಮೂಹಗಳನ್ನು, [ಅರಮ್ಣಾತ್] ರಮಣೀಯವನ್ನಾಗಿಯೂ, ಲೋಕಾಭಿರಾಮವಾಗಿಯೂ ಮಾಡಿದ್ದಾನೋ. [ಯಃ] ಯಾವನು, [ಜನಾಸಃ] ಓ ಮಾನವರೇ! [ವರೀಯಃ] ಪ್ರಾಣಾಧಾರವಾದ ವಾಯುವನ್ನು ತನ್ನಲ್ಲಿಯೇ ಧರಿಸಿರುವ ಕಾರಣ, ಪ್ರಾಣಿ ಮಾತ್ರರಿಗೆ ಶ್ರೇಷ್ಠವಾಗಿ ತೋರುವ, [ಅಂತರಿಕ್ಷಂ ವಿಮೇ] ಅಂತರಿಕ್ಷವನ್ನು ಅಳೆದು ನೋಡಿ ಅಳವಡಿಸಿದ್ದಾನೋ, [ಯಃ] ಯಾವನು, [ದ್ಯಾಂ] ಸೂರ್ಯ-ಗ್ರಹೋಪಗ್ರಹ-ನಕ್ಷತ್ರ ಮಂಡಳಗಳ ಲೋಕವನ್ನು [ಅಸ್ತಭ್ನಾತ್] ಎತ್ತಿ ಹಿಡಿದಿದ್ದಾನೋ, [ಸಃ ಇಂದ್ರಃ] ಅವನೇ ಇಂದ್ರನಾಗಿದ್ದಾನೆ." ಟೀಕೆಯೂ ಬೇಕೆ?

**ಯೇನೇಮಾ ವಿಶ್ವಾ ಚ್ಯವನಾ ಕೃತಾನಿ ಯೋ ದಾಸಂ ವರ್ಣಮಧರಂ ಗುಹಾ ಕಃ।**
**ಶ್ವಘ್ನೀವಯೋ ಜಿಗೀವಾನ್ ಲಕ್ಷಮಾದದರ್ಯಃ ಪುಷ್ಟಾನಿ ಸ ಜನಾಸ ಇಂದ್ರಃ॥**

[ಋಗ್ವೇದ:- 2. 12. 4.]

"[ಜನಾಸಃ] ಜನರೇ! [ಯೇನ] ಯಾವನಿಂದ, [ಇಮಾ] ಈ [ವಿಶ್ವಾ ಚ್ಯವನಾ] ಸಮಸ್ತ ನಶ್ವರವಾದ ಜಗತ್ತುಗಳೂ, [ಕೃತಾನಿ] ನಿರ್ಮಿಸಲ್ಪಟ್ಟಿವೆಯೋ, [ಯಃ] ಯಾವನು [ದಾಸಂ] ಪರಹಿಂಸಕವಾದಂತಹ, [ವರ್ಣಂ] ಆರಿಸಿಕೊಂಡ ಕಾರ್ಯವನ್ನು, [ಅಧರಂ] ಆಧಾರರಹಿತವಾಗಿಯೂ, [ಗುಹಾ] ಅಂತರಿಕ ಗುಣವಾಗಿಯೂ, [ಕಃ] ಮಾಡಿದ್ದಾನೋ, * [ಯಃ] ಯಾವನು. [ಜಿಗೀವಾನ್] ಜಯಶಾಲಿಯಾದ. [ಅರ್ಯಃ] ಸ್ವಾಮಿಯಾಗಿದ್ದು,

* ನರಹಿಂಸಕನು ವೈದಿಕಭಾಷೆಯಲ್ಲಿ 'ದಾಸ'ನೆನಿಸಿಕೊಳ್ಳುತ್ತಾನೆ. ಹಿಂಸಾವೃತ್ತಿ ಅವನ ಕರ್ಮ. ಭಗವಂತನು ಹಿಂಸಾವೃತ್ತಿಯನ್ನು ಆಧಾರರಹಿತವಾದಿ ಮಾಡಿದ್ದಾನೆ. ಆದಕ್ಕೆ ಧರ್ಮದ ಸಮ್ಮತಿಯಿಲ್ಲ. ಅಲ್ಲದೆ, ಹೃದಯಾಂತರಾಳವೇ ಅದರ ನೆಲೆ,

[ಶ್ವಘ್ನೀ ಇವ= ಶ್ವ+ಘ್ನೀ ಇವ] ನಾಳೆ ಏನು ಸಿಕ್ಕಬಹುದೋ, ಅದನ್ನು ಕೂಡ ಆತ್ಮಾಶೆಯಿಂದ ಹಾಳುಮಾಡಿಕೊಳ್ಳುವ ಲೋಭಿಯಂತೆ ವರ್ತಿಸದೆ, [ಲಕ್ಷಂ] ಲಕ್ಷ್ಯವನ್ನೂ [ಪುಷ್ಟಾನಿ] ಪ್ರವರ್ಧಿತವಾದುವನ್ನೂ, [ಆದತ್] ಉಳಿಸಿಕೊಂಡೇ ಹೋಗುತ್ತಾನೋ. [ಸಃ ಇಂದ್ರಃ] ಅವನೇ ಇಂದ್ರನಾಗಿದ್ದಾನೆ."

**ಯೋ ರಧ್ರಸ್ಯ ಚೋದಿತಾ ಯಃ ಕೃಶಸ್ಯ ಯೋ ಬ್ರಹ್ಮಣೋ ನಾಧಮಾನಸ್ಯ ಕೀರೇಃ।**
**ಯುಕ್ತ ಗ್ರಾವ್ಣೋ ಯೋಽವಿತಾ ಸುಶಿಪ್ರಃ ಸುತಸೋಮಸ್ಯ ಸ ಜನಾಸ ಇಂದ್ರಃ॥**

[ಋಗ್ವೇದ:- 2. 12. 6.]

"[ಜನಾಸಃ] ಮಾನವರೇ! [ಯಃ] ಯಾವನು, [ರಧ್ರಸ್ಯ] ಆತ್ಮಸಮರ್ಪಣ ಮಾಡುವ ಆರಾಧಕನಿಗೂ, ನ್ಯಾಯಕಾರೀ ಮಾನವನಿಗೂ, [ಚೋದಿತಾ] ಪ್ರೇರಕನೋ. [ಯಃ] ಯಾವನು, [ಕೃಶಸ್ಯ] ಭೀಕರವ್ಯಾಧಿಯಿಂದಲೋ, ದಾರಿದ್ರ್ಯದಿಂದಲೋ ಕೃಶನಾದವನಿಗೂ, [ಯಃ] ಯಾವನು, [ನಾಧಮಾನಸ್ಯ] ಪ್ರಾರ್ಥನೆಮಾಡುವ, [ಕೀರೇಃ] ನಿನ್ನ ಯಶೋಗಾನ ಗೈಯುವ, [ಬ್ರಹ್ಮಣಃ] ಚತುರ್ವೇದಜ್ಞನಾದವನಿಗೂ, [ಚೋದಿತಾ] ಪ್ರೇರಕನೋ, [ಯಃ] ಯಾವನು, [ಯುಕ್ತಗ್ರಾವ್ಣಃ] ಉಪದೇಶಕರೊಂದಿಗೆ ಸದಾ ಸಂಪರ್ಕವಿಟ್ಟುಕೊಂಡಿರುವ, [ಸುತ-ಸೋಮಸ್ಯ] ವಿಶ್ಲೇಷಣ-ಪರಿಪ್ರಶ್ನ-ತರ್ಕಚಿಂತನಾದಿಗಳಿಂದ ಸತ್ಯದ ಸಾರವನ್ನು ಹಿಂಡಿ ತೆಗೆಯುವ ವ್ಯಕ್ತಿಯ, [ಅವಿತಾ] ರಕ್ಷಕನೂ. [ಸುಶಿಪ್ರಃ=ಸು+ಶಿ+ಪ್ರಃ] ಉತ್ತಮ ಶಿಕ್ಷಣಪ್ರದನೂ ಆಗಿದ್ದಾನೋ, [ಸಃ ಇಂದ್ರಃ] ಅವನು ಇಂದ್ರನಾಗಿದ್ದಾನೆ."

**ಯಂ ಕ್ರಂದಸೀ ಸಂಯತೀ ವಿಹ್ವಯೇತೇ ಪರೇಽವರ ಉಭಯಾ ಅಮಿತ್ರಾಃ॥**
**ಸಮಾನಂ ಚಿದ್ರಥಮಾ ತಸ್ಥಿವಾಂಸಾ ನಾನಾ ಹವೇತೇ ಸ ಜನಾಸ ಇಂದ್ರಃ॥**

[ಋಗ್ವೇದ:- 2.12.8]

"[ಜನಾಸಃ] ಜನರೇ! [ಯಂ] ಯಾವನನ್ನು, [ಕ್ರಂದಸೀ] ದುಃಖಾತಿಶಯದಿಂದ ಆಕ್ರಂದನ ಮಾಡುವ. [ಸಂ ಯತೀ] ಪರಸ್ಪರ ಒಬ್ಬರಿಗೊಬ್ಬರು ಸಂಯಮದಲ್ಲಿ ಸಹಾಯಕರಾಗುವ ನರ.ನಾರಿಯರು. [ಪರೇ ಅವರೇ] ಶ್ರೇಷ್ಠರೂ, ಕನಿಷ್ಠರೂ, [ಉಭಯಾ] ಎರಡು ಪಕ್ಷದವರೂ ಕೂಡ, [ಅಮಿತ್ರಾ] ಸ್ನೇಹಿತರಿಲ್ಲದವರಾಗಿ, [ಸಮಾನಂ ಇತ್ ರಥಂ] ಸಮಾನವೇ ಆದ ಜೀವನ ರಥದಲ್ಲಿ, [ಆ ತಸ್ಥಿವಾಂಸಾ] ನಿರಂತರ ಕುಳಿತಿದ್ದರೂ ಕೂಡ, ವಿಹ್ವಯೇತೇ] ವಿಹ್ವಲರಾಗಿ ನರಳುತ್ತಾರೋ [ನಾನಾ ಹವೇತೇ] ನಾನಾ ವಿಧದಿಂದ ಕರೆಯುತ್ತಾರೋ, [ಸಃ ಇಂದ್ರಃ] ಅವನೇ ಇಂದ್ರನು."

ಆಯಿತು. ಪ್ರಮಾಣೋದ್ಧರಣತೋಭಕ್ಕೆ ಕೊನೆ ಎಲ್ಲಿದೆ ? ಇನ್ನೊಂದೇ ಮಂತ್ರ ದಿಂದ ತೃಪ್ತರಾಗೋಣ, ಆಗಮಿಸಿರಿ:-

**ದ್ಯಾವಾ ಚಿದಸ್ಮೈ ಪೃಥಿವೀನಮೇತೇ ಶುಷ್ಮಾಚ್ಚಿದಸ್ಯ ಪರ್ವತಾ ಭಯಂತೇ,**

**ಯಃ ಸೋಮಪಾ ನಿಚಿತೋ ವಜ್ರಬಾಹುರ್ಯೋ ವಜ್ರಹಸ್ತಃ ಸ ಜನಾಸ ಇಂದ್ರಃ॥** [ಋಕ್:- 2,12,13]

"[ಜನಾಸಃ] ಜನರೇ ! [ಅಸ್ಮೈ] ಈ ಸರ್ವಶಕ್ತನಿಗಾಗಿ, [ದ್ಯಾವಾ ಪೃಥಿವೀ ಚಿತ್] ದ್ಯುಲೋಕ-ಭೂಲೋಕಗಳು, [ನಮೇತೇ] ನಮಿಸುತ್ತವೆ. [ಅಸ್ಯ] ಇವನ, [ಶುಷ್ಮಾತ್ ಚಿತ್] ಶಕ್ತಿಯ ಕಾರಣದಿಂದ, [ಪರ್ವತಾ] ಗಿರಿ-ಸ್ತೋಮಗಳೂ, ಮೇಘರಾಜಿಗಳೂ ಭಯಂತೇ] ಹೆದರುತ್ತವೆ. [ಯಃ] ಯಾವನು, [ಸೋಮಪಾಃ] ಜೀವನವೆಲ್ಲದರ ರಸ ರೂಪವಾದ ಜೀವಾತ್ಮನ ಭೌತಿಕಸಮುತ್ಥಾನದ ಕಾರಣವಾದ ಐಶ್ವರ್ಯದ ಹಾಗೂ ಸಾರಾ ಸಾರ ವಿಚಾರ ಪಾರಂಗತರಾದ ವಿದ್ವಜ್ಜನರ ರಕ್ಷಕನೂ, ಸೋಮದಂತಹ ಓಷಧಿಗಳ ಪಾಲ ಕನೂ, [ನಿಚಿತಃ] ಅಂತರ್ಯಾಮಿಯೂ, ಅವ್ಯಕ್ತನು ಆಗಿದ್ದಾನೋ, [ಯಃ] ಯಾವನು [ವಜ್ರಬಾಹುಃ] ವರ್ಜನೀಯವಾದುದನ್ನೆಲ್ಲಾ ನಿರೋಧಿಸುವವನೂ, [ವಜ್ರಹಸ್ತಃ] ಮಹಾನ್ ಸಾಮರ್ಥ್ಯಸಂಪನ್ನನೂ, ದುಷ್ಟರನ್ನು ತಾಡಿಸುವ ಬಲವನ್ನುಳ್ಳವನೂ ಆಗಿದ್ದಾನೋ, [ಸಃ ಇಂದ್ರಃ] ಅವನೇ ಇಂದ್ರನಾಗಿದ್ದಾನೆ."

ಈ ಬಗೆಯ ಸ್ಫುಟವಾದ ಹಾಗೂ ವಿವಾದಕ್ಕೆ ಆಸ್ಪದವನ್ನೇ ಕೊಡದ ಸ್ಪಷ್ಟ ವಾದ ಮಂತ್ರಗಳು ಇಂದ್ರನ-ಸರ್ವೇಶ್ವರನ - ವರ್ಣನೆ ಮಾಡುತ್ತಿರುವಾಗ, ಇನ್ನೂ ತರ್ಕ ಮಾಡುತ್ತಲೇ ಹೋಗಬೇಕೇ ? ಇಂದ್ರನಾವನು ? ವೃತ್ರನಾವನು ? - ಎಂಬ ಪ್ರಶ್ನೆಗಳಿಗೆ ಅವಕಾಶವಾದರೂ ಎಲ್ಲಿದೆ ? ಈ ರೀತಿ. ಸರ್ವದೃಷ್ಟಿಗಳಿಂದಲೂ, ಭಗವಂತನಿಗೆ ಆರಾ ಧಕನು ಅರ್ಪಿಸಬೇಕಾಗಿರುವುದು ಯಾವುದೋ ರೀತಿಯ ಮಾದಕದ್ರವವಲ್ಲ. ಭಕ್ತನು ಭಕ್ತಿ ಭಾಜನನಾದ ಭಗವಂತನಿಗೆ ಭ್ರಾಂತಿರಹಿತವಾದ, ಭೀತಿಗೆಡೆಕೊಡದ ನಿರ್ಮಲ ಭಕ್ತಿರಸವನ್ನು ಮಾತ್ರ.

ನಮ್ಮ ಭಕ್ತಿ ಕೇವಲ ನಾಟಕೀಯ ಅಥವಾ ಸಿನಿಮೀಯ ಪ್ರದರ್ಶನವಾಗದೆ, ನಿಜವಾದ ಭಕ್ತಿಯೇ ಆಗಿದ್ದಲ್ಲಿ ಈ ಮಂತ್ರದಲ್ಲಿನ ಪ್ರತಿಯೊಂದು ಶಬ್ದವೂ ತನ್ನ ನೈಜವಾದ ಅರ್ಥದಲ್ಲಿಯೇ ಹೃದ್ಗತವಾದೀತು.

ಆದರೆ, ಸಾಕಾರೇಶ್ವರವಾದಿಗಳ ಹಾಗೂ ಅನೇಕೇಶ್ವರವಾದಿಗಳ ಕತೆಯೇ ಬೇರೆ **"ದೇವೋ ದಾನಾತ್"** - ಎಂಬುದಕ್ಕಿಂತ **"ದೇವೋ ಗ್ರಹಣಾತ್"** - ಎಂಬುದರಲ್ಲಿ

ಅವರಿಗೆ ಬಹಳ ನಂಬಿಕೆ. "ಕೊಡುವುದಾದ ಮೇಲೆ; ಗ್ರಹಿಸುವುದೇ ದೇವರ ಆದ್ಯ ಕಾರ್ಯ" ಎಂಬುದವರ ನಂಬಿಕೆ. "ಇಂದ್ರ! ಕುಡಿ ಮೊದಲು ಈ ಸೋಮವನ್ನು ಅಮೇಲಿನದು ಆಮೇಲೆ." – ಎಂಬುದವರ ಪಕ್ಷ.

ಇದಕ್ಕನುಸಾರ, ಮಧ್ವರು ಬರೆದಿದ್ದಾರೆ:-

**ಅಸ್ಯ ಪೀತ್ವಾ ಬಹುಜ್ಞಾನಾಭೂಸ್ತಮೋಭಿರನಾವೃತಃ**
**ಪ್ರಸಾದಾದೇವ ಮುಕ್ತೇಷು ತಮೋಽಸಹ್ಯತಯಾ ಘನಃ ॥**
**ಅವೃತೇ ರೇವ ವೃತ್ರಾಣಿ ಹ್ಯಜ್ಞಾನಾನನ್ನದಂ ನರಂ।**
**ಪ್ರಾವೋ ಯುದ್ಧೇಷು ಯೋದ್ಧಾರಂ ಭಕ್ತಂ ಜ್ಞಾನಿನಮೇವ ಚ ॥**

"ಓ ಬಹುವಿಜ್ಞಾನಾದ ಇಂದ್ರ! ನೀನು (ಅಜ್ಞಾನದ) ಅಂಧಕಾರದಿಂದ ಆವರಿಸಲ್ಪಡದವನಾಗಿರುತ್ತೀಯೆ. (ಹರಿಯ ? ಹರಿಯಾದ ನಿನ್ನ ?) ಪ್ರಸಾದದಿಂದಲೇ ಜೀವರು ಮುಕ್ತರಾಗುವರು. ಅವರಲ್ಲಿ ಅಂಧಕಾರ ನುಗ್ಗದಂತೆ ನೀನು †ಘನನಾಗಿರುತ್ತೀಯೆ. ಆ ವೃತ್ತಿಯಿಂದಲೇ - ಅಜ್ಞರನ್ನು ಆವರಿಸಬಲ್ಲ ತಮ್ಮ ಬಲದಿಂದಲೇ ಕವಿದುಬರುವ ಅಜ್ಞಾನಗಳು. 'ವೃತ್ರ'ಗಳೆನಿಸುತ್ತವೆ. ನೀನು ಅನ್ನದಾತೃವನ್ನೂ, ರಣಗಳಲ್ಲಿ ಹೋರಾಡುವವನನ್ನೂ, ಭಕ್ತನನ್ನೂ ಮತ್ತು ಜ್ಞಾನಿಯನ್ನೂ ಒಳಿತಾಗಿ ರಕ್ಷಿಸುತ್ತೀರೀವೆ."

ಮಂತ್ರದೊಳಗಿನ 'ವೃತ್ರ', 'ಘನ' ಆದಿ ನಾಲ್ಕಾರು ಶಬ್ದಗಳನ್ನುಳಿದರೆ, ಈ ಮಂತ್ರಕ್ಕೂ, ಈ ಭಾಷ್ಯಕ್ಕೂ ಏನು ಸಂಬಂಧವಿದೆಯೋ, ಹೇಳುವುದು ಕಷ್ಟ.

ಸಾಯಣರ ಮಾನಸಪಟಲದ ಮೇಲೆಯೂ ಇಂದ್ರ. ವೃತ್ರರು, ಘನ-ಎಲ್ಲವೂ ತೇಲಿ ಹೋಗುತ್ತವೆ. ಅವರು ಇಂದ್ರ-ವೃತ್ರರ ಸಂಗ್ರಾಮವನ್ನು ಹೀಗೆ ವರ್ಣಿಸುತ್ತಾರೆ:- **"ಹೇ ಶತಕ್ರತೋ ಬಹುಕರ್ಮಯುಕ್ತೇಂದ್ರಃ ತ್ವಮಸ್ಯ ಸೋಮಸ್ಯ ಸಂಬಂಧಿನಮಂಶಂ ಪೀತ್ವಾ ವೃತ್ರನಾಮಾಸುರ ಪ್ರಮುಖಾನಾಂ ಶತ್ರೂಣಾಂ ಘನೋಽಭವಃ ಹಂತಾಭೂಃ। ತತೋ ವಾಜೇಷು ಸಂಗ್ರಾಮೇಷು ವಾಜಿನಂ ಸಂಗ್ರಾಮವಂತಂ ಸ್ವಭಕ್ತಂ ಪ್ರಾವಃ। ಪ್ರಕರ್ಷೇಣ ರಕ್ಷಿತವಾನಸಿ। ಘನಃ ಮೂರ್ತಾವಂತಂ ಘನಃ ॥"**-"ಹೇ ಶತಕ್ರತೋ! ಬಹುಕರ್ಮಯುಕ್ತ ಇಂದ್ರ! ನೀನು ಸೋಮಕ್ಕೆ ಸಂಬಂಧಿಸಿದ ಈ ಅಂಶವನ್ನು ಕುಡಿದು ವೃತ್ರರನ್ನು, ವೃತ್ರನೆಂಬ ರಾಕ್ಷಸ ಪ್ರಮುಖರಾದ ಶತ್ರುಗಳನ್ನು ಅಡ್ಡಗಟ್ಟಿರುವೆ; ನಷ್ಟಗೊಳಿಸಿರುವೆ. ಆ ಮೇಲೆ ಸಂಗ್ರಾಮಗಳಲ್ಲಿ ಹೋರಾಡುವ ಸ್ವಭಕ್ತನನ್ನು ರಕ್ಷಿಸಿದ್ದೀಯೆ. ಮೂರ್ತರೂಪತ್ವವೇ ಘನತೆ. ಘನನೆಂದರೆ ಸಂಹಾರಕನು.

† ಆಂಗ್ಲಭಾಷೆಯಲ್ಲಿ ತರಲವಾದ (Liquid-like) ವಸ್ತುವನ್ನು rare ಎಂದೂ, ಒತ್ತಾದ ಅಣುಗಳಿಂದಾದುದನ್ನೂ (dense) ಎಂದೂ ಹೇಳುತ್ತಾರೆ, ತರಳ ವಸ್ತುವಿನ ನಡುವೆ ನುಸಿದು ಹೋಗಬಹುದು; ಘನವಾದುದರಿಂದ ಸಾಧ್ಯವಿಲ್ಲ.

ವಸ್ತುತಃ, ಆಕಾಶೀಯ ಘಟನೆಗಳು, ಇವನ್ನೂ, ಇವುಗಳಲ್ಲಿ ಬರುವ ಹಲವು ಹೆಸರುಗಳನ್ನು ಬಳಸಿಕೊಂಡು, ವೇದಗಳಲ್ಲಿ ಐತಿಹಾಸಿಕ ಘಟನೆಗಳ ನಿರೂಪಣವನ್ನು ಮಾಡುವ ಪ್ರಣಾಳಿ ಯಾವ ಕುಕ್ಷಣದಲ್ಲಿ ತಲೆಯೆತ್ತಿತೋ, ಆ ಕ್ಷಣದಿಂದಲೇ ಆರಂಭವಾಯಿತು ವೈದಿಕಧರ್ಮೀಯರ ಅಧಃಪತನ. 'ಇಂದ್ರ, ಮಿತ್ರ, ವರುಣ, ವಾಯು, ಅಗ್ನಿ, ಯಮ, ಮಾತರಿಶ್ವಾ, ಅಗ್ನಿ, ಮನ್ಯು, ವಿಶ್ವಕರ್ಮಾ-ಮೊದಲಾದ ನಾಮಗಳು ಮುಖ್ಯತಃ ನಿರಾಕಾರ-ನಿರ್ವಿಕಾರ, ಸರ್ವವ್ಯಾಪಕ-ಸರ್ವಜ್ಞ, ಸಚ್ಚಿದಾನಂದ ಸ್ವರೂಪ ಪರಮಾತ್ಮನ ನಾಮ; ಗೌಣ (ಅಮುಖ್ಯ) ರೂಪದಿಂದ ಬೇರೆಯ ಚೇತನಾಚೇತನಗಳಿಗೆ ಅನ್ವಯಿಸಬಹುದು.'- ಎಂಬ ವೈದಿಕಮೂಲ ತತ್ತ್ವವನ್ನು ಮರೆತು, "ಒಂದೊಂದು ಹೆಸರು ಒಂದೊಂದು ಬೇರೆ ದೇವರ ಅಥವಾ ದೇವತೆಯ ಹೆಸರು.'- ಎಂದು ತಿಳಿಯಹತ್ತಿದ ಕೂಡಲೇ ವೇದೋಕ್ತ ಧರ್ಮಾನುಯಾಯಿಗಳ ಸಮಾಜ ಸಾವಿರ-ಸಾವಿರವಾಗಿ ಸಿಡಿದು ಬೀಳಲು, ಸೀಳಿ ಹೋಗಲು ಬಹುಕಾಲ ಬೇಕಾಗಲೇ ಇಲ್ಲ. ಅಲ್ಲ; ಸೋಮವನ್ನೋ, ಹಣ್ಣನ್ನೋ, ಹಾಲನ್ನೋ-ಮೊಸರನ್ನೋ, ಒಡವೆಗಳನ್ನೋ-ವಸ್ತ್ರಗಳನ್ನೋ ಭಕ್ತರು ಅರ್ಪಿಸಿದರಾಯಿತು; ಪ್ರಸನ್ನವಾಗಿಯೇ ತೀರುತ್ತಾನೆ.- ಎಂಬ ನಂಬಿಕೆ ಆರಾಧಕರ ಅಂತರಂಗಗಳನ್ನು ಆವರಿಸಿದ ಮೇಲೆ, ಕತೆಯೇ ತೀರಿತು. ತಪಸ್ಸು, ಸಾಧನೆ, ಸದಾಚಾರ, ಪ್ರಾಮಾಣಿಕತೆ-ಯಾವುದೂ ಬೇಕಾಗಿಲ್ಲ. ಗೀತೆಯ ೭೦೦ ಶ್ಲೋಕಗಳಲ್ಲಿ ಇಂತಹವರ ಕಣ್ಣಿಗೆ ಕಾಣುವುದು ಕೆಳಕಂಡ ಶ್ಲೋಕಗಳೆರಡು ಮಾತ್ರ:-

ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥

[ಗೀತಾ:- 4.36.]

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥

[ಗೀತಾ:- 9.30.]

"ಅರ್ಜುನ! ನೀನು ಪಾಪಿಗಳೆಲ್ಲರಿಗಿಂತಲೂ ಮಹಾಪಾಪಿಯಾಗಿದ್ದರೂ ಕೂಡ ಸರ್ವಪಾಪವನ್ನೂ ಕೂಡ ಜ್ಞಾನವೆಂಬ ದೋಣಿ (ತೊಲೆ ?) ಯಿಂದ ದಾಟಿಬಿಡುವೆ." ಈ ಶ್ಲೋಕದಲ್ಲಿ ಇಂತಹ ಭಕ್ತೋತ್ತಮರು ಹಾರಿಸಿಬಿಡುವುದು 'ಜ್ಞಾನ-ಪ್ಲವ'ದಿಂದ-ಎಂಬುದಷ್ಟನ್ನೇ!

"ಬಹಳ-ಬಹಳ ದುರಾಚಾರಿಯಾದವನೂ ಕೂಡ ನನ್ನನ್ನು ಏಕೈಕಭಾವದಿಂದ ಭಜಿಸುವವನಾದರೆ, ಅವನು ಸಾಧುವೆಂದೇ ಭಾವಿಸಲ್ಪಡಬೇಕು. ಏಕೆಂದರೆ, ಅವನು ಸತ್ಸಂಕಲ್ಪಯುಕ್ತನೇ †ಆಗಿದ್ದಾನೆ."

† ಈ ಗಬ್ಬಯ ಶ್ಲೋಕಗಳಿಗೆ ಅರ್ಥಬರೆಯುವಾಗ, ಲೇಖಕ ತನ್ನ ಬುದ್ಧಿಗೆ ಬೀಗವನ್ನೇ ಹಾಕಬೇಕಾದೀತು.

ಅವನು ಸಮ್ಯಗ್ವ್ಯವಸಿತನೇ ಆಗಿದ್ದರ, ಇನ್ನು 'ಸುದುರಾಚಾರ'ದ ಮಾತೆಲ್ಲಿಯದು ? ಇಂತಹ ದ್ವ್ಯರ್ಥಾರ್ಥದಾಯಕ ಶ್ಲೋಕರಚನೆಯಿಂದ (ಮಹಾಭಾರತಕಾರರೂ, ಬ್ರಹ್ಮ ಸೂತ್ರಕಾರರೂ, 18 ಪುರಾಣಗಳ ಲೇಖಕರೂ ಆಗಿರುವರೆಂದು ತಿಳಿಯಲ್ಪಡುವ ಶ್ರೀ ವೇದವ್ಯಾಸರ ರಚನೆ ಈ ಗೀತೆ - ಎಂದು ನಂಬುವವರ ಗುಂಪಿನಲ್ಲಿ ನಮ್ಮ ಹೆಸರಿಲ್ಲ.) ಜನತೆಗೆ ಲಾಭಕ್ಕಿಂತಧಿಕ ಹಾನಿ – ಎಂಬ ತಥ್ಯವನ್ನು ಜನರೆಷ್ಟು ಬೇಗ ತಿಳಿದರೆ, ಮಾನವತ್ವಕ್ಕೆ ಅಷ್ಟೇ ಹಿತ.

ಎಷ್ಟೇ ಬಳಸಿ ಬನ್ನಿ; ಮುಂಜಾನೆ ನೀವು ನಿಮ್ಮ ಗಾಡಿಯೊಂದಿಗಿರುವುದು ಘಟ್ಟ ಕುಟಿ(ಸುಂಕದಕಟ್ಟೆ)ಯ ಮುಂದೆಯೆ. ಸಾಕಾರೇಶ್ವರಾಸ್ತಿತ್ವವನ್ನು ಒಪ್ಪಿದ ಮೇಲೆ ಯಾರೂ ಆ ಈಶ್ವರನ ಏಕದೇಶಿಯತ್ವ (spacial finitude), ಅದರ ಆನುಷಂಗಿಕ ನಿರ್ಣಯಗಳಾದ ಅಲ್ಪಶಕ್ತಿಮತ್ತ್ವ, ಅಲ್ಪಜ್ಞತ್ವ, ಔಚಿತ್ಯಾನೌಚಿತ್ಯಗಳ ಸೀಮಾ ನಿರ್ಧಾರದಲ್ಲಿ ತಪ್ಪಾದ ತೀರ್ಮಾನ, ಅವತಾರವಾದ, ಅಳು-ನಗುಗಳು, ಶಾಂತಿ-ಕ್ರಾಂತಿಗಳು, ರೋಗ-ನಿರೋಗತ್ವಗಳು - ಎಲ್ಲವನ್ನೇ ಒಪ್ಪಲೇಬೇಕಾದೀತು. ಈ ಬಗೆಯ ಒಬ್ಬ ದೇವರ ಕಾಟವೇ ಕುಕ್ಕಿ ತಿನ್ನಲು ಸಾಕಾಗಿರುವಾಗ, ಹಂತ ಹಂತವಾಗಿ, ತರ-ತಮ ಕ್ರಮದಲ್ಲಿ ನೂರಾರು ದೇವರುಗಳ ಮತ್ತು ಅವರವರ ಬೇರೆ-ಬೇರೆ ಶಾಖಾ-ನಿರ್ವಹಣ ಕ್ರಮದ ಇರುವಿಕೆಗೆ ಅಸ್ತಿತ್ವದ ಮುದ್ರೆಯೊತ್ತಿದ ಮೇಲೆ ತೀರಿತು ವೇದೋಕ್ತಧರ್ಮದ ಅಧಿಕಾರವ್ಯಾಪ್ತಿ-ಎಂದು ಅನಿಸಿಯೇ ತೀರುತ್ತದೆ ಬಹುಮಂದಿ ವಿಚಾರಶೀಲರಿಗೆ. ಈ ಪ್ರವೃತ್ತಿ ನಿಲ್ಲಬೇಕು. ನಿಶ್ಚಿತವೂ, ಸಾರ್ವಕಾಲಿಕವೂ, ಸಾರ್ವಭೌಮವೂ, ಮಾನವ ಮಾತ್ರರಿಗೆ ಯಾವುದೇ ಭೇದವೂ ಇಲ್ಲದೆ ಏಕಪ್ರಕಾರವಾಗಿ ಅನ್ವಯಿಸಬೇಕು. ಆಗ ಮಾತ್ರ ಅರಳೀತು ಮಾನವೀಯತಾಕಲಿ (ಮೊಗ್ಗು).

ಈ ಮಂತ್ರದ ಮೇಲೆ ಮಹರ್ಷಿ ದಯಾನಂದರ ಭಾಷ್ಯ ಆಧಿದೈವಿಕ - ಆದಿಭೌತಿಕ ವಾಗಿದೆ. ಹೀಗಾಗಿ, ಆಧ್ಯಾತ್ಮಿಕ ಕ್ಷೇತ್ರದ ಪರಿಧಿಯಲ್ಲಿ ಅವರ ಭಾಷ್ಯವನ್ನು ಮೇಲೆ ಹೇಳಿದ ಭಾಷ್ಯಕಾರರಿಬ್ಬರ ಭಾಷ್ಯಗಳೊಂದಿಗೆ ಹೋಲಿಸಿ ನೋಡುವ ಸೌಲಭ್ಯವಿಲ್ಲ. ಅವರು 'ಇಂದ್ರ' ಶಬ್ದವನ್ನು (ವಸ್ತುತಃ ಮಂತ್ರದಲ್ಲಿರುವುದು ಶತಕ್ರತುವೆಂಬ ಶಬ್ದ) ನೂರಾರು ಅಸಂಖ್ಯಾತವಾದ ಕರ್ಮಗಳನ್ನು ಮಾಡುವ ಶೂರವೀರರನ್ನು ಅಥವಾ ಸೂರ್ಯಲೋಕವನ್ನು ಗ್ರಹಿಸುತ್ತಾರೆ. **"ಶತಮಿತಿ ಬಹುನಾಮಸು ಪಠಿತಂ"** (ನಿಘಂ.: 3.1.), **"ಕ್ರತು ರಿತಿ ಕರ್ಮನಾಮಸು ಪಠಿತಂ"** (ನಿಘಂ. : 2 1.) "ಶತವೆನ್ನುವುದು 'ಬಹು' ಎಂಬರ್ಥದ ಶಬ್ದಗಳಲ್ಲೊಂದು" "ಕ್ರಮವೆಂದು ಕರ್ಮದ ಹೆಸರುಗಳಲ್ಲಿ ವರ್ಣಿಸಿದ್ದಾರೆ" ಎಂದು ಹೇಳಿ, "**ವೃತ್ರ ಇತಿ ಮೇಘನಾಮಸು ಪಠಿತಂ**" (ನಿ.1.10-) "ವೃತ್ರವೆಂಬುದು ಮೋಡದ ಹೆಸರುಗಳಲ್ಲಿ ಒಂದು."- ಎಂಬ ಪ್ರಮಾಣವನ್ನುದ್ಧರಿಸಿ, ಅರ್ಥ ಆಧ್ಯಾತ್ಮಿಕದಂತೆ ಕಾಣಿಸದಿದ್ದರೂ, ಮಂತ್ರದ ಭವ್ಯ ಭಾವನೆಯನ್ನು ಭಾಗ್ಯಶಾಲೀ ಜಿಜ್ಞಾಸುಗಳ ಮುಂದೆ ಮಂಡಿಸುವಾಗ ಆಧ್ಯಾತ್ಮಿಕ ಔನ್ನತ್ಯದ ಶಿಖರವನ್ನೇ ಮುಟ್ಟುತ್ತಿದ್ದಾರೋ ಎನಿಸುವಂತೆ ಮಾಡಿದ್ದಾರೆ.

ಯಜುರ್ವೇದದ ನಾಲ್ವತ್ತನೆಯ ಅಧ್ಯಾಯದ ಎಂಟನೆಯ ಮಂತ್ರದಲ್ಲಿನ **'ಅಪಾಪವಿದ್ಧಂ'** - 'ಎಂದಿಗೂ ಪಾಪದಿಂದ ಚುಚ್ಚಲ್ಪಡದವನು 'ಭಗವಂತ' - ಎಂಬ ಮಹತೀ ಭಾವನೆಯ ಪ್ರಸರಣ ಮಾಡುತ್ತಾ, "**ಘನೋವೃತ್ರಾಣಾಮಭವಃ**"-ಎಂಬ ವಾಕ್ಯಕ್ಕೆ ಅರ್ಥ ವಿಸ್ತರಿಸುತ್ತಾ, [ಘನಃ] ದೃಢನಾಗಿ, ಕಾಠಿನ್ಯದಿಂದಾಗಿ ಮೂರ್ತವಸ್ತುವಿನಂತೆ ಅಭೇದ್ಯನಾಗಿ, [ವೃತ್ರಾಣಾಂ] ವೃತ್ರನಂತೆ ಸುಖವನ್ನು ಮುಚ್ಚಿಡುವ ಶತ್ರುಗಳ ಅಥವಾ ಮೇಘಗಳ ಬಗೆಗೆ, [ಅಭವಃ] ಅಭೇದ್ಯನಾಗಿದ್ದೀಯೇ." - ಎಂದು ಸಾರಿ ಹೇಳಿ, [ವಾಜೇಷು] ಯುದ್ಧಗಳಲ್ಲಿ. (ವಾಜಿನಂ,) ಧಾರ್ಮಿಕನಾದ ಶೂರ-ವೀರ ಪುರುಷನನ್ನು. [ಪ್ರಾವಃ] ರಕ್ಷಿಸುತ್ತಲೇ ಹೋಗುತ್ತೀಯೆ." ಎಂದು ಬರೆದಿದ್ದಾರೆ. **ವಾಜ ಇತಿ ಸಂಗ್ರಾಮ. ನಾಮಸು ಪಠಿತಂ** (ನಿಘಂ. 2.17) "ವಾಜ ಎನ್ನುವುದು ಸಂಗ್ರಾಮವೆಂಬ ಶಬ್ದದ ಅರ್ಥಗಳಲ್ಲಿ ಹೇಳಲ್ಪಟ್ಟಿದೆ." ಎಂದು ಜೀವನದಲ್ಲಿ ಸಂಭವಿಸುವ ಸಂಘರ್ಷಗಳು, ಸದಾ ದಾರ್ಢ್ಯದಿಂದಲೇ ಎದುರಿಸಬೇಕಾದ ವಸ್ತುಸ್ಥಿತಿಗಳು. **ಪರಮೇಶ್ವರೋಽಪಿ ಧಾರ್ಮಿಕಾಣಾಂ ಯುದ್ಧಕರ್ತೄಣಾಂ ಮನುಷ್ಯಾಣಾಮೇವ ಸಹಾಯಕಾರೀ [† ಸಹಾಯಃ ?] ಭವತಿ** "ಪರಮೇಶ್ವರನೂ ಕೂಡಾ ಧಾರ್ಮಿಕರಾದ, ಯೋಧರಾದ ಮಾನವರಿಗೆ ಮಾತ್ರ ಸಹಾಯಕನಾಗುತ್ತಾನೆ," ಎಂಬ ದಿವ್ಯಸಂದೇಶದೊಂದಿಗೆ ಈ ಮಂತ್ರದ ಅರ್ಥವನ್ನು ಸಮಾಪ್ತಿಗೊಳಿಸುತ್ತಾರೆ.

## ಸಂಹಿತಾ ವಿಭಾಗ

**ತಂ ತ್ವಾ ವಾಜೇಷು ವಾಜಿನಂ ವಾಜಯಾಮಃ ಶತಕ್ರತೋ ।**

**ಧನಾನಾಮಿಂದ್ರ ಸಾತಯೇ ॥೯॥**

**ಪದಪಾಠ :** ತಂ, ತ್ವಾ, ವಾಜೇಷು, ವಾಜಿನಂ, ವಾಜಯಾಮಃ, ಶತಕ್ರತೋ, ಧನಾನಾಂ, ಇಂದ್ರ, ಸಾತಯೇ

† 'ಸಹಾಯ' ಶಬ್ದವೇ 'ಸಹಾಯಕ'ನೆಂಬರ್ಥ ಕೊಡುತ್ತದೆ. ಪುನಃ 'ಕಾರಿನ್'ಎಂಬುದರ ಆವಶ್ಯಕತೆ ಅರ್ಥವಾಗದು. ಬಹುಶಃ ಭಾವವಾಚಕವಾ 'ಸಹಾಯತಾ' ಸಹಾಯಕ ಸಮೂಹವಾಚಿಯಾದ ಕಾರಣ, ಮಹರ್ಷಿಯವರು 'ಸಹಾಯ'ವೆಂದು ಹೇಳಿರಬಹುದು. ಆದರೆ ಲೇಖಕರು 'ಸಾಹಾಯ್ಯ'ವೆಂದು ಬರೆದಿರಬಹುದು.

**ಅನ್ವಯ** : ಶತಕ್ರತೋ ಇಂದ್ರ ! ವಾಜಿನಂ ತಂ ತ್ವಾ ವಾಜೇಷು ಧನಾನಾಂ ಸಾತಯೇ ವಾಜಯಾಮಃ.

**ಪದಾರ್ಥ** : [ಶತಕ್ರತೋ] ನೂರು-ನೂರು, ಸಾವಿರ-ಸಾವಿರ ಅಸಂಖ್ಯ ಸೃಜನಗಳನ್ನು ಮಾಡುವವನೂ, ಅಪರಿಮಿತ ವಿಜ್ಞಾನವಂತನೂ ಆದ ಸರ್ವಶಕ್ತಿವಾನ್ ಸರ್ವೈಶ್ವರ್ಯ ಯುಕ್ತ ಭಗವನ್ ! [ವಾಜಿನಂ] ಸಂಗ್ರಾಮ-ಸಂಘರ್ಷಗಳಲ್ಲಿ ನಿರತನಾದ, [ತಂ ತ್ವಾ] ಆ ನಿನ್ನನ್ನು, [ವಾಜೇಷು] ಸಂಗ್ರಾಮರಂಗಗಳಲ್ಲಿಯೂ, ಜ್ಞಾನ-ವಿಜ್ಞಾನ-ಶಕ್ತಿ-ಸಾಮರ್ಥ್ಯಗಳಲ್ಲಿಯೂ, ಅನ್ನಾಂಬು (ಖಾದ್ಯ ಪೇಯಗಳಲ್ಲಿಯೂ), [ಧನಾನಾಂ ಸಾತಯೇ] ಧನಗಳ ದಾನಕ್ಕಾಗಿ, [ವಾಜಯಾಮಃ]ಸ್ವತಃ ನಿನ್ನನ್ನೇ ಸಂಗ್ರಾಮರತನನ್ನಾಗಿ ಮಾಡುತ್ತೇವೆ.

**ತಾತ್ಪರ್ಯ** : ಓ ಅಸಂಖ್ಯ ಕರ್ಮ-ವಿಜ್ಞಾನಯುಕ್ತ ದೇವ ದೇವ ! ಈ ನಮ್ಮ ಜೀವನಸಂಗ್ರಾಮದಲ್ಲಿ, ಸಂಗ್ರಾಮಾದಿಗಳಲ್ಲಿ ನಿರಂತರ ನಿರತನಾಗಿರುವ ನಿನ್ನನ್ನು ನಮ್ಮ ಈ ಬಾಳಿನ ತಿಕ್ಕಾಟಗಳಲ್ಲಿ ನಾವು ಹೆದರಿಯದಂತೆ ಮುನ್ನಡೆಯುವಂತೆ ನೆರವಾಗು-ಎಂದು ಅರಿಕೆ ಮಾಡಿಕೊಳ್ಳುತ್ತೇವೆ. ನೀನು ಶಕ್ತಿಯ ಆಗರ; ಆಹಾರದ ಅಕ್ಷಯ ಭಂಡಾರ; ಸರ್ವವಿದ್ಯಾ ವಿಚಕ್ಷಣನಾದ, ಎಲ್ಲವನ್ನೂ ಬಲ್ಲ, ಮಹಾನ್ ವಿಶ್ವಚೇತನನಾಗಿದ್ದೀಯೇ. ಈ ಜೀವನ ಒಂದು ನಿರಂತರವಾದ ಸಂಗ್ರಾಮ; ಕಷ್ಟ–ಕಾರ್ಪಣ್ಯಗಳ, ಕ್ಲೇಶಾಕ್ರೋಶಗಳ ಮಹಾತಪಸ್ಸೇ ಆಗಿದೆ. ಆದಕಾರಣ, ಪ್ರಭೂ ! ಸರ್ವವಿಧಸಂಪತ್ತಿನ ಪ್ರಾಪ್ತಿಗಾಗಿ ಹಾಗೂ ಪ್ರಾಪ್ತವಾದುದರ ಸುಪಾತ್ರದಾನಕ್ಕಾಗಿ ನಮ್ಮೊಂದಿಗಿದ್ದು,ನಮ್ಮನ್ನು ಮುನ್ನಡೆಯಿಸು.

**ಭಾಷ್ಯ** : "ಸರ್ವತ್ರ, ಸರ್ವದ, ಸರ್ವಪ್ರಕಾರದ ಶಾಂತಿಗಾಗಿ ಆ ಪರಮಶಾಂತಿ ನಿಧಾನನಾದ ಜಗದೀಶ್ವರನನ್ನು ಆಶ್ರಯಿಸಿರಿ."- ಎಂಬ ಉಪದೇಶ ಸರ್ವಮತೀಯ ಗುರುಜನರ ನಾಲಗೆ ತುದಿಯಿಂದಲೂ ಮೊಳಗುತ್ತಿರುವಾಗ, ಅದು ಸರಿ- ಎಂದೂ ತೋರುತ್ತಿರುವಾಗ, ಯುದ್ಧಕ್ಕೆ ಸನ್ನದ್ಧರಾಗಿರಿ: ಸಿದ್ಧರಾಗಿರಿ ಎಂಬ ಈ ವೇದಾದೇಶ ಅಪಶ್ರುತಿಯಲ್ಲವೇ ? ಕ್ರೂಸೇಡ್-ವಾರ್ (ಶಿಲುಬೆಯ ಯುದ್ಧ) ಹಾಗೂ 'ಜಹಾದ್' ಗಳಂತೆಯೇ ಈ ವೇದೋಕ್ತ ಯುದ್ಧವೂ ಆಯಿತಲ್ಲ !" -ಎಂದು ಅನೇಕರಿಗೆ ಅನ್ನಿಸಿದರೆ. ಅದರಲ್ಲಿ ಆಶ್ಚರ್ಯವೇನೂ ಇಲ್ಲ ಏಕೆಂದರೆ, ಎಲ್ಲ ಮತಗಳ ಉದ್ದೇಶ್ಯವೂ - ಕನಿಷ್ಠಪಕ್ಷ ಮಾತಿನಲ್ಲಿಯಾದರೂ-ಶಾಂತಿ. ಸ್ಥಾಪನೆಯೇ-ಆಗಿರುತ್ತದೆ.

ಆದರೆ, ವೇದಗಳ ನಿಜವಾದ ಅರ್ಥದ ಅರಿವಾದ ಮೇಲೆ, ಈ ಭ್ರಾಂತಿ ಉಳಿಯದು. ಸಂಗ್ರಾಮ ಕೇವಲ ಬಾಹ್ಯಶತ್ರುಗಳೊಂದಿಗೆಯೇ ಅಲ್ಲ; ಆಂತರಿಕ ಶತ್ರುಗಳೊಂದಿಗೆಯೂ ನಡೆಯುತ್ತದೆ. ಸಂಘರ್ಷವಿಲ್ಲದ ಜೀವನ ಜೀವನವೇ ಅಲ್ಲ; ಮಾನವನ ಮನಃಕಾಮನೆ ಸ್ಮಶಾನ ಶಾಂತಿಯ ಪ್ರಾಪ್ತಿಯಲ್ಲ; ಜೀವಂತಶಾಂತಿಯೇ ಅವನ ಗುರಿ. ತೀವ್ರ ತಿಕ್ಕಾಟವಿಲ್ಲದೇ, ಸಬಲಸಂಘರ್ಷವಿಲ್ಲದೆ ಜೀವಂತವಾದ ಶಾಂತಿ ಈವರೆಗೆ ಯಾರಿಗೂ ಸಿಕ್ಕಿಲ್ಲ; ಸಿಕ್ಕುವುದೂ ಇಲ್ಲ. ಈ ಶಾಶ್ವತ ಸತ್ಯವನ್ನೇ ಸ್ಪಷ್ಟವಾಗಿ ಸಾರುತ್ತಿದೆ ಈ ಮಂತ್ರ.

ಶ್ರೀ ಮಧ್ವರು ಹೇಳುತ್ತಾರೆ;-

**ಯೋಧಯಾಮೋ ವಯಂ ತ್ವಂ ತ್ವಾ ಜ್ಞಾನಾದಿಧನಲಬ್ಧಯೇ ।**
**ಅಜ್ಞಾನಾದ್ಯೈಸ್ಮದರಿಭಿಃ...............**

"ಓ ಇಂದ್ರ! ಜ್ಞಾನವೇ ಮೊದಲಾದ ಸಂಪತ್ತಿನ ಸಂಪಾದನೆಗಾಗಿ, ಅಜ್ಞಾನ-ವೊದಲಾದ ನಮ್ಮ ಶತ್ರುಗಳೊಂದಿಗೆ ಆ ನಿನ್ನನ್ನು ಹೋರಾಡಿಸುತ್ತೇವೆ."

ಯಾವುದೋ ಲೋಕದ ಸ್ವಾಮಿಯಾದ ಹಾಗೂ ಸೋಮಪಾನ, ಹವಿರ್ದಾನಾದಿಗಳಿಂದ ತೃಪ್ತನಾಗಿ, ಸಹಾಯಕ್ಕಾಗಿ ಧಾವಿಸಿ ಬರುವ ಇಂದ್ರನೆಂಬ ಸಾಕಾರನಾದ ದೇವತೆಯ ಅಸ್ತಿತ್ವ ವನ್ನು 'ಸಾಧ್ಯವೋ ? ಅಸಾಧ್ಯವೋ ?'-ಎಂದು ಯೋಚಿಸುವಷ್ಟು ತೊಂದರೆಯನ್ನೂ ತೆಗೆದು ಕೊಳ್ಳದೆ ಒಪ್ಪಿಕೊಂಡು ಬರುವ ಸಂಪ್ರದಾಯ-ಶರಣರಿಗೆ ಇಂತಹ ಶಬ್ದಗಳನ್ನು ಬಳಸುವಾಗ ಯಾವುದೇ ಕಷ್ಟವೂ ಆಗದಿರಬಹುದು. ಆ ಸ್ಥಿತಿಯಲ್ಲಿಯೂ ಕೂಡ ಲಕ್ಷದಲ್ಲಿಯೋ ಎರಡು ಲಕ್ಷದಲ್ಲಿಯೋ, ಒಬ್ಬಿಬ್ಬರಿಗೆ "ನಾವು ಹೇಳಿದಂತೆ ಆಜ್ಞಾಪಾಲನೆ ಮಾಡುವ, ಲಂಚಕ್ಕೆ ಕೊಂಚವೂ ಸಂಕೋಚವಿಲ್ಲದೆ ಕೈನೀಡುವ ಇಂದ್ರನೆಂಬವನು ಇರುವುದೇ ನಿತ್ಯವಾದಲ್ಲಿ. ಅವನನ್ನು 'ದೇವತೆ' ಎಂದು ಕರೆಯಲಾದೀತೇ?"-ಎಂಬ ಪ್ರಶ್ನೆ ಒಳಗೊಳಗೆಯೇ ಗುಮಗುಗುಟ್ಟಬಹುದು. ವೇದೋಕ್ತವಾದ. ನೇರವಾದ ರಾಜಮಾರ್ಗ ಬಿಟ್ಟಮೇಲೆ, ಇಂತಹ ಅತೃಪ್ತಿಕಾರಕವಾದ ಪ್ರಶ್ನೆ ಗಳಿಂದ ದೂರ ಉಳಿಯಲು ಸಾಧ್ಯವೇ ಇಲ್ಲ. ಒಂದು ಸಮಾಧಾನಕರವಾದ ಸಂಗತಿಯೆಂದರೆ, ಶ್ರೀ ಮಧ್ವರು-"ಜ್ಞಾನ ಮೊದಲಾದ ಐಶ್ವರ್ಯದ ಪ್ರಾಪ್ತಿಗಾಗಿ, ನಮ್ಮ ವೈರಿಯಾದ ಅಜ್ಞಾನದೊಂದಿಗೆ ಹೋರಾಡಲು ನಿನ್ನನ್ನು ಬಿಡುತ್ತೇವೆ."-ಎಂದು ಬರೆದು, "ಈ ಯುದ್ಧ ಲೌಕಿಕವಲ್ಲ; ಆಧ್ಯಾತ್ಮಿಕ"- ಎಂಬ ತಥ್ಯಕ್ಕೆ ಸ್ವೀಕೃತಿಯ ಮುದ್ರೆಯನ್ನು ಒತ್ತಿದ್ದಾರೆ. "ಅಜ್ಞಾನಕ್ಕಿಂತ ದೊಡ್ಡ ಶತ್ರುವಿಲ್ಲ - ಜ್ಞಾನಕ್ಕಿಂತ ಮಿಗಿಲಾದ ಐಶ್ವರ್ಯವಿಲ್ಲ." ಎಂದು ಪರೋಕ್ಷವಾಗಿಯೇ ಆಗಿರಲೊಲ್ಲದೇಕೆ ?- ಒಪ್ಪಿಕೊಂಡಿದ್ದಾರೆ, ಮಂತ್ರದ ಅಂತರಾರ್ಥವನ್ನು ಸ್ಪರ್ಶಿಸಿದ್ದಾರೆ.

ಈಗ ಸಾಯಣರತ್ತ ನೋಡೋಣ. **ಹೇ ಶತಕ್ರತೋ! ಬಹುಕರ್ಮಯುಕ್ತ ಅಥವಾ ಬಹು ಪ್ರಜ್ಞಾಯುಕ್ತ ಇಂದ್ರ! ಧನಾನಾಂ ಸಾತಯೇ, ಸಂಭಜ ನಾರ್ಥಂ ವಾಜೇಷು ಯುದ್ಧೇಷು ವಾಜಿನಂ ಬಲವಂತಂ ತ್ವಾ ಪೂರ್ವ ಮಂತ್ರೋಕ್ತಗುಣಯುಕ್ತಂ ವಾಜಯಾಮಃ । ಅನ್ನವಂತಂ ಕುರ್ಯಾಮಃ"** "ಓ ಶತಕ್ರತೋ ! ಬಹುಕರ್ಮಯುಕ್ತನಾದ, ಅಥವಾ ಪ್ರಜ್ಞಾನಯುಕ್ತನಾದ ಇಂದ್ರನೇ! ಧನಗಳ 'ಸಾತಿ' ಎಂದರೆ ವಿಭಜನಕ್ಕಾಗಿ, ವಾಜಗಳಲ್ಲಿ ಎಂದರೆ ಯುದ್ಧಗಳಲ್ಲಿ, ವಾಜಿಯಾದ, ಎಂದರೆ ಬಲಶಾಲಿಯಾದ. ಹಿಂದಿನ ಮಂತ್ರದಲ್ಲಿ ಹೇಳಿರುವ ಗುಣಗಳಿಂದ ಕೂಡಿದ ನಿನ್ನನ್ನು ಅನ್ನವಂತನನ್ನಾಗಿ ಮಾಡುತ್ತೇವೆ." ಅದೇ ಪೌರಾಣಿಕ ಸಾಕಾರದೇವತೆ ! ಧನದ ಸಂಪಾದನ ಕ್ಕಾಗಿಯೋ ಹಂಚುವಿಕೆಗಾಗಿಯೋ ಅವನನ್ನು ಆಹ್ವಾನಿಸುವುದು; ತಿನ್ನಿಸಿ –ಕುಡಿಸಿ,

ಹೋರಾಡಿಸುವುದು ! ಎಂತಹ ದೇವತೆಗಳೋ, ಯಾವ ಮಹದುದ್ದೇಶ್ಯವೋ ಓದಿದರೆ ವಿಚಾರಶೀಲರಿಗೆ ಬೇಸರ ತರುವಂತಹ ಮಾತುಗಳೇ ಹೊರತು, ಆಧ್ಯಾತ್ಮಿಕ ದೃಷ್ಟಿಯಿಂದ ಸ್ವಲ್ಪವಾದರೂ ಉನ್ನತರಾಗಲು ಪಥಪ್ರದರ್ಶನ ಮಾಡುವ ಒಂದೇ ಒಂದು ಮಾತಾದರೂ ಇಲ್ಲ ಈ ಭಾಷ್ಯದಲ್ಲಿ.

ಆದರೆ ಇದೇ ನಿಜವಾಗಿ ಮಂತ್ರದ ಅರ್ಥವೇ ? ವೇದಗಳ ಗಂಭೀರಜ್ಞಾನ ಆ ಕಡೆ ಯಿರಲಿ; ಕೇವಲ ಸಾಧಾರಣಾರ್ಥ ಬಲ್ಲವರೂ ಕೂಡ, "ಎಲ್ಲಿಯೋ; ಏನೋ ಕಳಚಿಕೊಂಡೇ ಇರಬೇಕು. ವೈದಿಕ ಸಿದ್ಧಾಂತಗಳ ಔನ್ನತ್ಯವೆಲ್ಲಿ, ಈ ನಿಮ್ನಸ್ತರದ ವಿವರಣೆ ಎಲ್ಲಿ ?" –ಎಂದು ಕೊಳ್ಳುವುದರಲ್ಲಿ ಸಂದೇಹವೇ ಇಲ್ಲ.

ಹಾಗಾದರೆ, ಈ ಮಂತ್ರದ ನಿಜವಾದ ಅರ್ಥವೇನಿದ್ದೀತು ? ಈಶ್ವರೋಕ್ತವೇದಗಳ ಶಬ್ದ-ಶಬ್ದವೂ ಮಹದರ್ಥಗರ್ಭಿತವಾಗಿಯೇ ಇರುತ್ತದೆ. ಈ ಮಂತ್ರದ ದೇವತೆಯೂ ಅದೇ ಇಂದ್ರ. ಪ್ರತಿಪಾದ್ಯನೂ ಅದೇ ವಿರಾಡಾತ್ಮ; ಅದೇ ಸರ್ವತ್ರವ್ಯಾಪಿನೀ ಸರ್ವಪದಾರ್ಥಾ ವರಿಕಾ ಮಹತೀಚೇತನಶಕ್ತಿ. ದಿನ-ದಿನದ ಬಳಕೆಯ ಭಾಷೆಯಲ್ಲಿ ದೇವರು. ಆ ದೇವರ ಅಸಂಖ್ಯಗುಣವಾಚಕ ಶಬ್ದಗಳಲ್ಲಿ ಈ 'ಇಂದ್ರ' ಶಬ್ದಕ್ಕೆ ಅತಿಮಹತ್ತ್ವದ ಸ್ಥಾನವಿದೆ. ಪ್ರಕ ರಣವನ್ನು ಸರಿಯಾಗಿ ಗುರುತಿಸಿದಾಗ, ಅರ್ಥವನ್ನು ತಿಳಿಯುವುದು ಏನೇನೂ ಕಷ್ಟವಾಗ ಲಾರದು.

ಮಹರ್ಷಿ ದಯಾನಂದರ ಸರಣಿಯನ್ನು ಅನುರಿಸಿ ನಡೆದರೆ, ಈ ಮಂತ್ರದ ಮಹತ್ತ್ವ ಮನವರಿಕೆಯಾಗುವುದು. ಮಹರ್ಷಿ ಪ್ರವರರು ಬರೆಯುತ್ತಾರೆ :–

**"[ತಂತ್ವಾ] ಇಂದ್ರಂ ಪರಮೇಶ್ವರಂ ತ್ವಾಂ, [ವಾಜೇಷು] ಯುದ್ಧೇಷು, [ವಾಜಿನಂ] ವಿಜಯಪ್ರಾಪಕಂ, [ವಾಜಯಾಮಃ] ವಿಜ್ಞಾಪಯಾಮಃ । [ಶತ ಕ್ರತೋ]ಶತೇಷು, ಅಸಂಖ್ಯಾತೇಷು ವಸ್ತುಷು ಕೃತುಃ ಪ್ರಜ್ಞಾಃ ಯಸ್ಯ [ತಂ] [ಧನಾನಾಂ] ಪೂರ್ಣವಿದ್ಯಾರಾಜ್ಯಾದಿಸಾಧ್ಯ ಪದಾರ್ಥಾನಾಂ, [ಇಂದ್ರ] ಪರ ಮೈಶ್ವರ್ಯವನ್ ! [ಸಾತಯೇ] ಸುಖಾರ್ಥಂ ಸಮ್ಯಕ್ಸೇವನಾಯ"** ಈ ವಾಕ್ಯಗಳ ಸರಳವಾದ ಅರ್ಥವಿದು :– "ನೂರಾರು ಅಸಂಖ್ಯಾತ, ವಸ್ತುಗಳ ರಚನೆಯಲ್ಲಿ ಪ್ರಜ್ಞೆಯನ್ನುಳ ಭಗವಂತನೇ ! ಪೂರ್ಣವಾದ ವಿದ್ಯೆ, ರಾಜ್ಯ- ಮೊದಲಾದ ಸಾಧಿಸಲರ್ಹವಾದ ತತ್ತ್ವಗಳ ಸುಖಕ್ಕಾಗಿ, ಉತ್ತಮ ಸೇವನಕ್ಕಾಗಿ , ಪರಮೈಶ್ವರ್ಯಶಾಲಿಯಾದ, ಪರಮಾತ್ಮನಾದ ನಿನ್ನಲ್ಲಿ ನಮಗೆ ವಿಜಯಪ್ರದನಾಗು-ಎಂದು ವಿಜ್ಞಾಪನೆ ಮಾಡಿಕೊಳ್ಳುತ್ತೇವೆ."

ಶ್ರೀ ಮಧ್ವರೂ, ಶ್ರೀ ಸಾಯಣರೂ, ಮಹರ್ಷಿ ದಯಾನಂದರೂ 'ವಾಜ' ಎಂಬ ಶಬ್ದಕ್ಕೆ ಅನ್ನ, ಜ್ಞಾನ, ಬಲ-ಎಂಬ ಅರ್ಥಗಳನ್ನು ಅಂಗೀಕರಿಸಿದ್ದಾರೆ. **ವಾಜ ಇತಿ ಸಂಗ್ರಾಮ ನಾಮಸು ಪಠಿತಂ'** (ನಿ: 2.17) "ವಾಜ ಎಂಬುದು ಸಂಗ್ರಾಮದ ಹೆಸರುಗಳಲ್ಲಿದೆ.

**"ಕ್ರತುರಿತಿ ಕರ್ಮನಾಮಸು ಪಠಿತಂ"** (ನಿ. 2 1) "ಕ್ರತು ಎಂಬುದು ಕರ್ಮದ-ಹೆಸರುಗಳಲ್ಲಿ ಹೇಳಲ್ಪಟ್ಟಿದೆ." ಆಳಕ್ಕಿಳಿದು ಅರ್ಥ-ಚಿಂತನ ಮಾಡುವ ವಿಚಾರಶೀಲರಿಗೆ ಸಹಜವಾಗಿಯೇ '**ವಾಜಯಾಮಃ**' ಎಂಬ ಶಬ್ದದ ಅರ್ಥದ ವಿಷಯದಲ್ಲಿ ಸ್ವಲ್ಪ ಸಂಶಯ ಒರುವ ಸಂಭವವಿದೆ. "ಯುದ್ಧ ಮಾಡಿಸುತ್ತೇವೆ, ಹೋರಾಡಿಸುತ್ತೇವೆ; ಬಲಿಷ್ಠನನ್ನಾಗಿಸುತ್ತೇವೆ: ಅನ್ನಯುಕ್ತನನ್ನಾಗಿ ಮಾಡಿಸುತ್ತೇವೆ. ಜ್ಞಾನವಂತನನ್ನಾಗಿ ಮಾಡುತ್ತೇವೆ."-ಎಂಬಿವೇ '**ವಾಜಯಾಮ**'-ಎಂಬುವರ ಸ್ವರವಾದ ಅರ್ಥಗಳು. ಯಾವುದನ್ನೇ ಗ್ರಹಿಸಿದರೂ 'ನಾವೇ ಮೇಲು. ದೇವರು ಕೀಳು. ನಾವು ಅವನ ಭಕ್ತರಲ್ಲ; ಅವನು ನಮ್ಮ ಆಜ್ಞಾಪಾಲಕನಾದ ಸೇವಕ." ಎಂಬ ಭಾವನೆಯೇ ಹೊರಸೂಸುತ್ತದೆ. ಇದು ನಿಜವಾಗಿ ಚಿಂತನೀಯವಾದ ವಿಷಯ. ಏನಿದ್ದೀತು ಗೂಢಾರ್ಥ? **ಭಕ್ತಪರಾಧೀನ ಭಗವಂತ** ಎಂದು ಹರಿಕಥೆ ಮಾಡುವ ದಾಸರುಗಳೇನೋ ಹೇಳಿಬಿಡಬಹುದು. ಆದರೆ. ಆ ಜಗನ್ನಿಯಾಮಕನ ವಿಷಯದಲ್ಲಿ ಇಂತಹ ಬಾಲಭಾಷಿತ ದಾರ್ಶನಿಕರಿಗೆ ಎಂದಿಗೂ ಒಪ್ಪಿಗೆಯಾಗದು.

**ವಾಜಯಾಮಃ** ಎಂಬಾಗ ದಯಾನಂದರು ವಾಜ ಶಬ್ದಕ್ಕಿರುವ 'ಧ್ವನಿ' ಎಂಬರ್ಥವನ್ನು ಗ್ರಹಿಸಿ, '**ಅಂತರ್ಯವನ್ನು ಧ್ವನಿಸೋಣ**'- ಎಂಬ ಭಾವನೆಗೆ ಪ್ರಾಧಾನ್ಯವನ್ನಿತ್ತಿರಬಹುದು. **ವಿಜ್ಞಾಪಯಾಮಹೇ** - ಎಂಬಾಗ ಇದೇ ಭಾವನೆಯನ್ನವರು ವ್ಯಕ್ತಪಡಿಸಿರಬಹುದು.

**ಅನ್ನವಂತಂ ಕುರ್ಮಃ** ಎಂಬ ಸಾಯಣೋಕ್ತಿಯ ಹಿಂದೆ ಅದೇ ಪೌರಾಣಿಕ "ನಾನಿದ ನೀವೆ; ನೀನದ ನೀಡು"-ಎಂಬ ಭಾವನೆ ಎದ್ದು ಕಾಣುತ್ತದೆ. "ಹವಿಸ್ಸನ್ನು ತೆಗೆದುಕೊಂಡು ಬಲಿಷ್ಠನಾಗಿ ನಮ್ಮ ಪರ ಹೋರಾಡು"-ಎಂದು ಇಂದ್ರನಿಗೆ ಪ್ರಲೋಭನವೀಯುವ ಭಾವನೆ ವೇದಾಸುಯಾಯಿಗೆ ಎಂದಿಗೂ ಸಮ್ಮತವಾಗದು.

ಶ್ರೀ ಮಧ್ವರದಂತೂ ತೀರ ನೇರವಾದ ಪೆಟ್ಟೇ. '**ಯೋಧಯಾಮಃ** -"ಇಂದ್ರ! ನಿನ್ನನ್ನೂ ಯುದ್ಧರಂಗಕ್ಕೆಳೆದು ಹೋರಾಡಿಸುತ್ತೇವೆ!" -ಎಂದೇ ಉದ್ಗರಿಸಿಬಿಟ್ಟಿದ್ದಾರೆ! ಮಹರ್ಷಿ ದಯಾನಂದರ ರೀತಿಯೇ ಬೇರೆ; ಅವರ ವೈಜ್ಞಾನಿಕ ದೃಷ್ಟಿ ಎಲ್ಲರಿಂದಲೂ ನಿರೀಕ್ಷಿಸಲಾಗದು. ಶ್ರೀ ಮಧ್ವ-ಸಾಯಣರ ಇಂದ್ರ ವೇದೋಕ್ತನಾದ ವಿರಾಡಾತ್ಮನೂ ಅಲ್ಲ; ಆದರೆ ಕೊಳುಗೆ ಕೊಡುಗೆಗಳ ವ್ಯವಹಾರವನ್ನಿಟ್ಟುಕೊಂಡಿರುವ ಪೌರಾಣಿಕ ದೇವತೆಯಾದ ಕಾರಣ ಅವನ ಬಗೆಗೆ ತರ್ಕವೂ ಬೇಕಾಗಿಲ್ಲ.

ಶ್ರೀ ವೆಂಕಟಮಾಧವರ '**ಸ್ತುತಿಭಿರ್ಬಲಿನಂ ಕುರ್ಮ**' ಸ್ತುತಿಗಳಿಂದ ನಿನ್ನನ್ನು ಬಲಶಾಲಿಯನ್ನಾಗಿಸುತ್ತೇವೆ"-ಎಂಬ ವ್ಯಾಖ್ಯಾನದಲ್ಲಿಯೂ ಇಂದ್ರನ ಹಿರಿಮೆಗೆ ಪ್ರತಿಯಾಗಿ, ಹೊಗಳಿಕೆಗೆ ಉಬ್ಬುವ ಕಿರಿಮೆಯೇ ಎದ್ದುಕಾಣುತ್ತದೆ. ಶ್ರೀ ಸ್ಕಂದಸ್ವಾಮಿಗಳ "**ವಾಜಯತಿ ರರ್ಚಯತಿಕರ್ಮಾ ಸ್ತುಮಃ**" "**ವಾಜಯಾಮಃ- ಎಂದರೆ ಅರ್ಚಯಾಮಃ**-

**ಎಂದು ಗ್ರಾಹ್ಯ. ಸ್ತುತಿಸುತ್ತೇವೆ-ಎಂದೇ ತಾತ್ಪರ್ಯ."** ಎಂಬ ವಿವರಣೆ ಅದೆಷ್ಟೋ ಉತ್ತಮ ಸ್ತರದಲ್ಲಿದೆ. ಏಕೆಂದರೆ, ಈ ವಾಕ್ಯ ಭಗವಂತನನ್ನು ರಣರಂಗದಿಂದ ಹೊರತಂದು, ಪೂಜಾಸ್ಥಾನದಲ್ಲಿರಿಸುತ್ತದೆ.

ಈ ವಿಸ್ತೃತ ತರ್ಕ-ವಿತರ್ಕಗಳ ಸಾರವಾದರೂ ಏನು ? ಈ ಮಂತ್ರದ ಹೃದಯ ಯಾವುದು ? ವಿಶ್ವಚೇತನ ವಿರಾಡಾತ್ಮನೇ, ಜೀವಮಾತ್ರರ ಮೇಲೆ ಕರುಣಾದೃಷ್ಟಿಗರೆಯುವ ಜೀವಮಾತ್ರರಲ್ಲಿ ರಮಿಸುವ ಸರ್ವಶಕ್ತಿಮಾನ್ ಸರ್ವೇಶ್ವರನೇ ಇಂದ್ರನೆಂದ ಮೇಲೆ, ಅನ್ಯ ಅಂಶಗಳು ಅತಿ ಸುಲಭವಾಗಿಯೇ ಅರ್ಥವಾಗಬೇಕು.

ಪ್ರಜ್ಞಾನ-ಸಾಮರ್ಥ್ಯ-ಜೀವಿಕಾ ಸಾಮಗ್ರಿಗಳಿಂದ ಸದಾ ಸಮೃದ್ಧನೇ ಆಗಿರುವ ಜೀವನ ಸಂಘರ್ಷದಲ್ಲಿಯೂ ಸದಾ ಸದ್ಭಾವನಾಭಾವಿತರಾದ ಜೀವರಿಗೆ ಸಹಾಯಕನಾಗಿಯೇ ಸಹಕರಿಸುವ ಆ ಪರಮಕರುಣಾವನಧಿಯಲ್ಲಿ ನಾವು ಕೇಳಬೇಕಾಗಿರುವುದಾದರೂ ಏನನ್ನು ? ಈ ಮಂತ್ರ ಹೇಳುತ್ತಲಿದೆ ! "**ಧನಾನಾಂ ಸಾತಯೇ**"-ಧನಗಳ ದಾನಕ್ಕಾಗಿ-ಎಂದು. ಪ್ರಥಮ ಸೂಕ್ತದಲ್ಲಿಯೇ "ರಯಿ"ಯ, "ಧನ"ದ ವಿಷಯ ಬಂದಿದೆ. ಈ ಸೂಕ್ತದಲ್ಲಿಯೂ ನಾವು "ದ್ರವಿಣ ಎಲ್ಲಿಯೂ ಇದೆ. ಪ್ರಾಮಾಣಿಕತೆ ಬೇಕು; ವಿನಯಸಂಯೋಗ ಬೇಕು. ಮಾತಿಗಿಂತಧಿಕ ಕೃತಿ ಬೇಕು. ಚಿತ್ತ ಉತ್ಕೃಷ್ಟತಮ ತತ್ತ್ವದಲ್ಲಿ ನಿಲ್ಲಬೇಕು: ಶ್ರೇಯಃಕಾಂಕ್ಷೆ ಗುರಿಯಾಗಿ ಮೆರೆಯಬೇಕು." ಎಂಬ ಉದಾತ್ತಭಾವನಾಪ್ರೇರಕ ಮಂತ್ರವನ್ನು (ಋಕ್. 10,31.2.) ಉದ್ಧರಿಸಿದ್ದೇವೆ. ಆ ಇಂದ್ರದೇವ "**ಭೂರಿದಾ**" (ಋಕ್. 4.30.22.) "ಪುಷ್ಕಳ ಪ್ರಮಾಣದಲ್ಲಿ ಕೊಡುವವನು", ಅವನು ಜಿಪುಣನಲ್ಲ.

ಸರಿ. ಇಂತಹ ಅದ್ಭುತ ಐಶ್ವರ್ಯದ ಪ್ರಾಪ್ತಿಗಾಗಿ ಸಂಗ್ರಾಮರಂಗಕ್ಕೆ ಇಳಿಯಬೇಕು. ಅವನ 'ದೇವಸೇನೆ'ಯ ಸೈನಿಕರಾಗಬೇಕು. 'ಸೇನಾ ?' ಶಾಂತಿಸ್ಥಾಪನೆ ದೇವರ, ಧರ್ಮದ, ಜ್ಞಾನವಾನ್ ಜೀವರ ಉದ್ದೇಶ್ಯವಾಗಿದ್ದರೆ, ಈ 'ಸೇನಾ' ಬೇಕಾದರೂ ಏತಕ್ಕೆ? ಗತ ಶತಮಾನಗಳ 'ಶಿಲುಬೆಯ ಸಂಗ್ರಾಮ', 'ಜಿಹಾದ್'ಗಳ ಪುನಃಸ್ಮರಣ ಈಗೇಕೆ ಬೇಕು ?

ಬೇಕು. ಸಂಗ್ರಾಮ ಬೇಕು. ಆದರೆ, ಋವೇದೋಕ್ತ ಸಂಗ್ರಾಮ ಬೇರೆ ಬಗೆಯ ಯುದ್ಧ. ಇದು ನೆತ್ತರಿನ ನದಿಯನ್ನು ಹರಿಸುವ ರಕ್ಕಸಕಾಳಗವಲ್ಲ. 'ಇನ' ಎಂದರೆ. ನೇತ್ರ ನಾಯಕ, ಮುಖಂಡ. ಸ+ಇನ=ಸೇನ. ನಾಯಕನನ್ನು ಹೊಂದಿರುವುದಾವುದೋ, ಅದು ಸೇನ. ಬಹುಮಂದಿ ಸೇರಿದಾಗ, ಸಾಮೂಹಿಕ ರೂಪ ತಳೆದಾಗ, ಅದೇ 'ಸೇನಾ' ಎನಿಸುತ್ತದೆ. ಹಾಗೆ ನೋಡಿದರೆ. ಆಸ್ತಿಕರೇನು - ನಾಸ್ತಿಕರೇನು ? ಧಾರ್ಮಿಕರೇನು, ಕಾಡಾಡಿಗಳೇನು ? ನಿಶ್ಚಯವಾದಿಗಳೇನು-ಸಂದೇಹವಾದಿಗಳೇನು ? ವ್ಯಕ್ತವಾದಿಗಳೇನು-ಅವ್ಯಕ್ತವಾದಿಗಳೇನು ? ಮಾನವರೆಲ್ಲರೂ ಸೈನಿಕರೇ. ದೇವರು ಬೇಡವೆನಿಸಿದರೆ. ನಿಸರ್ಗವನ್ನೇ ಗ್ರಹಿಸಿರಿ. ನಿಸರ್ಗವೇ 'ಇನ'. 'ಸ್ವಾಮಿ' ಸರಿ. ನಾಸ್ತಿಕರೂ 'ಸೇನ'ರೇ ಆದರು. 'ಸೇನಾಘಟಕಗಳಾದ ಕಾರಣ

'ಸೈನಿಕರೇ' ಆದರು.

ಆದರೆ, ಒಂದು ಬಾಯ್ದೆರೆಡ ವ್ಯತ್ಯಾಸವಿದೆ. ಬೇರೆ ಸೈನ್ಯಗಳೂ ಮಾನವೀಯತೆಯ ಕಗ್ಗೊಲೆಯ ಕಾರಣಗಳಾದರೆ, ಈ ವೇದೋಕ್ತ ಸೇನಾ ಬಿದ್ದವರನ್ನು ಎದ್ದೇಳಿಸುವ, ಸಿಡಿದ ಹೃದಯುಗಳನ್ನು ಒಡಗೂಡಿಸುವ, ರೋದನದ ವೇದಿಕೆಯ ಮೇಲೆ *ಮೋದನವನ್ನು ರೂಪಿಸುವ, ದಗೆಯನ್ನಾರಿಸಿ, ನಗೆಯನ್ನು ಮಿರುಗಿಸುವ, ಹತಾಶ ಹೃದಯಗಳಲ್ಲಿ ನಿಷ್ಪಾಶ ಆಶೆಗಳನ್ನು ತುಂಬಿಸುವ, ಈ ನರಕಸಮನಾದ ನೆಲವನ್ನೇ ನಾಕವಾಗಿ ಮಾರ್ಪಡಿಸುವ ಸೇನೆ-ಈ ದೇವ-ಸೇನೆ.

ಯಾವ ಸೇನೆಯಾದರೂ ದಾರಿ ತಪ್ಪೀತು, ಆದರೆ, ಈ ಸೇನೆ ದಾರಿ ತಪ್ಪುವ ಪ್ರಶ್ನೆಯೇ ಇಲ್ಲ. ಕಾರಣ, ಈ ಸೇನೆಯ 'ಇನ', ಸ್ವಾಮಿ, ನಾಯಕ ಸ್ವತಃ ಪರಮಾತ್ಮನೇ ಆಗಿದ್ದಾನೆ. ಆಲಿಸೋಣ :-

**ಗೋತ್ರಭಿದಂ ಗೋವಿದಂ ವಜ್ರಬಾಹುಂ ಜಯಂತಮಜ್ಮ ಪ್ರಮೃಣಂತಮೋಜಸಾ**
**ಇಮಂ ಸಜಾತಾ ಅನುವೀರಯಧ್ವಮಿಂದ್ರಂ ಸಖಾಯೋ ಅನುಸಂರಭಧ್ವಂ॥**
(ಋಗ್ವೇದ 10.103.6)

"[ಸಖಾಯಃ] ಮಿತ್ರರಾದ ಮಾನವರೇ! [ಗೋತ್ರಭಿದಂ] + ಅನ್ಯಾಯಾರ್ಜಿತ ಸಂಪತ್ತನ್ನೂ, ಅಧಾರ್ಮಿಕ ಸುಖಭೋಗವನ್ನೂ, ದುಷ್ಟವಚನಗಳನ್ನೂ, ದುಷ್ಟಾಚಾರವನ್ನೂ ತುಂಡರಿಸಿ ಚೆಲ್ಲುವ, ಜಾತೀಯ ಅಥವಾ ಸಾಮೂಹಿಕ ಹೆಮ್ಮೆಯನ್ನು ತರದೊಟ್ಟುವವನೂ [ಗೋವಿದಂ] ಉತ್ತಮ ವಾಣಿಯನ್ನೂ, ಜ್ಞಾನೇಂದ್ರಿಯ ಶಕ್ತಿಗಳನ್ನೂ ಪ್ರಕಾಶ, ಸಾತ್ವಿಕ ಸುಖಾದಿಗಳನ್ನು ಕರುಣಿಸುವವನೂ, [ವಜ್ರಬಾಹುಂ] ವರ್ಜ್ಯವಾದುದೆಲ್ಲವನ್ನೂ ಬಾಧಿಸುವವನೂ. (**ವಜ್ರಃ ಕಸ್ಮಾತ್ ? ವರ್ಜಯತೀತಿ ಸತಃ** । ನಿರುಕ್ತ 3.2.11.5); (**ಬಾಹುಃ ಕಸ್ಮಾತ್ ? ಪ್ರಬಾಧತ ಆಭ್ಯಾಂ ಕರ್ಮಾಣಿ** । ನಿರುಕ್ತ 3,2.8.2.) ºº [ಅಜ್ಮ ಜಯಂತಂ] ಸಂಘರ್ಷದಲ್ಲಿ ಜಯಿಸುವವನೂ, [ಓಜಸಾ] ತನ್ನ ಶಕ್ತಿಯಿಂದಲೇ, [ಪ್ರಮೃಣಂತಂ] ದುರ್ವೃತ್ತಿಗಳನ್ನು ಹಿಸುಕಿ ಹಾಕುವವನೂ ಆದ [ಇಮಂ ಇಂದ್ರಂ] ಈ ಸರ್ವೇಶ್ವರನನ್ನು, [ಅನು] ಹಿಂಬಾಲಿಸಿ, [ವೀರಯಧ್ವಂ] ಪೌರುಷದಿಂದ ವರ್ತಿಸಿರಿ. [ಸಜಾತಾಃ] ಸಜಾತೀಯರೇ ಆದ, ನನ್ನಂತೆ ಮಾನವರೇ ಆದ ಜೀವಾತ್ಮರುಗಳೇ!

---

*ಹರ್ಷ, ತೃಪ್ತಿ, ಸಂತೋಷ.

+ 'ಭಿತ್' ಪದಖಂಡ 'ತುಂಡರಿಸುವವನು' ಎಂಬರ್ಥದಲ್ಲಿ ಬರುತ್ತದೆ. 'ಗೋ' ಶಬ್ದಕ್ಕೆ ನಾನೆಣಿಸಿರುವಷ್ಟೇ ಅಲ್ಲ, ಇನ್ನೂ ೨೮ ಖಂಡನಾರ್ಹಶತ್ರುಗಳಿವೆ.

ºº ವರ್ಜ್ಯವಾದುದೇ ವಜ್ರ; ತಡೆಗಟ್ಟುವ ಸಾಧನವೇ ಬಾಹು.

[ಅನು] ಈ ದೇವದೇವನನ್ನೇ ಅನುಸರಿಸಿ. [ಸಂ ರಭಧ್ವಂ] ಒಗ್ಗಟ್ಟಿನಿಂದ ಜೀವಿತದ ಗುರಿಯನ್ನು ಸಾಧಿಸಿರಿ."

ಹೌದು. ಪ್ರಥಮವೇದವಾದ ಋಗ್ವೇದದ ಪ್ರಥಮ ಮಂಡಲದ, ಪ್ರಥಮ ಸೂಕ್ತದ, ಪ್ರಥಮ ಮಂತ್ರದ ಪ್ರಥಮ ಶಬ್ದವೇ "ಅಗ್ನಿ"! ಆಚಾರ್ಯ ಯಾಸ್ಕರು ನಿರುಕ್ತದಲ್ಲಿ "ಅಗ್ನಿಃ ಕಸ್ಮಾತ್ ? ಅಗ್ರಣೀರ್ಭವತಿ". "ಅಗ್ನಿ" ಎನ್ನುವುದೇಕೆ ? ಅವನು 'ಅಗ್ರಣಿ ಯಾಗಿರುವುದರಿಂದ' ಎನ್ನುತ್ತಾರೆ. ಹೀಗೆ ನಮ್ಮ ಪರಮ ಪವಿತ್ರ ಸರ್ವೋಚ್ಚ ಶಾಸ್ತ್ರ ಗಳಾದ ವೇದಗಳ ಎಲ್ಲಕ್ಕಿಂತ ಮೊದಲ ಆದೇಶ - "ತೇಜೋಮಯ ಭಗವಂತನೇ ಈ ಬ್ರಹ್ಮಾಂಡವೆಲ್ಲದರ ನಾಯಕ—ಎಂಬುದು ನೆನಪಿರಲಿ"-ಎಂದಾಗಿದೆ. ಭಗವನ್ನೇತೃತ್ವದ ಸಿದ್ಧಾಂತ ಆಲಿಸಲಿಕ್ಕೇನೋ ಸುಲಭವೇ ಆಗಿದೆ. ಆದರೆ, ಆ ದೇವದೇವನ ನಾಯಕತ್ವ ವನ್ನೊಪ್ಪಿಕೊಂಡು, ಆ ಸರ್ವಾಗ್ರಣಿಯ, ಆ ಸರ್ವೋನ್ನತ, ನಿರ್ವಿಕಾರ ಹಾಗೂ ಶಾಶ್ವತ ನಾಯಕನ ನಾಯಕತ್ವವನ್ನೊಪ್ಪಿಕೊಂಡು, ಆ ಸೇನೆಯ ಅನುಶಾಸನವನ್ನೂ, ಶಿಸ್ತನ್ನೂ ಪಾಲಿಸಿಕೊಂಡು ಹೋಗುವುದು ಮಹಾ ಕಠೋರ ತಪಶ್ಚರ್ಯೆಯೇ ಸರಿ. ಅವನು 'ದೇವ ನಾಗಿದ್ದಾನೆ; ನಾವು 'ಅದೇವರು'ಗಳಾಗಿ ದೇವಸೇನೆಗೆ ಸೇರಲು ಸಾಧ್ಯವೇ ಇಲ್ಲ. ವೇದಗಳೇ ದೇವಸೇನೆಯ ಸೈನಿಕರಿಗೆ ಇರಲೇಬೇಕಾದ ಗುಣವನ್ನು ವರ್ಣಿಸುತ್ತವೆ:-

**ಇಂದ್ರ ಆಸಾಂ ನೇತಾ ಬೃಹಸ್ಪತಿರ್ದಕ್ಷಿಣಾ ಯಜ್ಞಃ ಪುರ ಏತು ಸೋಮಃ।**
**ದೇವ ಸೇನಾನಾಮಭಿಭಂಜತೀನಾಂ ಜಯಂತೀನಾಂ ಮರುತೋ ಯಂತ್ವಗ್ರಂ**
[ಋಗ್ವೇದ 10.103.8]

"[ಬೃಹಸ್ಪತಿಃ] ಬೃಹದ್ವಿಶ್ವದ, ಬೃಹತೀವೇದವಾಣಿಯ ಸ್ವಾಮಿಯೂ, ಪಾಲಕನೂ ಆದ, [ಇಂದ್ರಃ] ಪರಮೈಶ್ವರ್ಯವಾನ್ ಪರಮ ಕಾರುಣಿಕ ಸರ್ವೇಶ್ವರನು. [ಆಸಾಂ] ಈ ಸೇನೆಗಳ, [ನೇತಾ] ನಾಯಕನಾಗಿದ್ದಾನೆ. [ಯಜ್ಞಃ] ದೇವದೇವನಾದ ಭಗವಂತನ, ದಿವ್ಯ ಗುಣಸಂಪನ್ನ ಮಹಾಶಯ ಮಾನವರ ಹಾಗೂ ಈಶರಚಿತ ಜಡವಸ್ತುಗಳ ಸತ್ಕಾರ-ಸದು ಪಯೋಗ, ಒಟ್ಟುಗೂಡಿ ಏಕಮತರಾಗಿ ಮುನ್ನಡೆಯುವುದು, ಮತ್ತು ನವ-ನವ ಆವಿಷ್ಕಾರ ಗಳನ್ನು ಮಾಡುವುದು, ತಮ್ಮ ಬಳಿಯಿರುವುದರಲ್ಲಿ ಯುಕ್ತವಾದಷ್ಟು ಪ್ರಮಾಣದಲ್ಲಿ ಅನ್ಯ ಹಿತಕ್ಕಾಗಿ ಬಿಟ್ಟುಕೊಡುವುದು ಹಾಗೂ ಜ್ಞಾನದಾನ ಮಾಡುವುದು-ಎಂಬ ಈ ಮೂರು ಅಂಗ ಗಳಿಂದ ಕೂಡಿದ ಶ್ರೇಷ್ಠತಮ ಕರ್ಮವೇ, [ದಕ್ಷಿಣಾ] ಈ ಸೈನಿಕರಿಗೆ ಸಿಕ್ಕುವ, ದೈವೀ ಆವಶ್ಯಕತಾ ಪೂರ್ತಿಯೇ ವೇತನ. [ಸೋಮಃ] ಭಗವದಾನಂದ, ಭಗವದ್ಭಕ್ತಿ ರಸ, ಸ್ವತಃ ಭಗವಂತ, ಭೋಕ್ತೃವಾದ ಜೀವಾತ್ಮ, ಸಾರಾಸಾರವಿವೇಕ. [ಪುರಃ ಏತು] ಮುಂದೆ ಮುಂದೆ ನಡೆಯಲಿ; ಮುನ್ನಡೆಯುವ ಪ್ರೇರಣೆಯನ್ನು ವ್ಯಕ್ತಿ-ವ್ಯಕ್ತಿಗೂ ಕೊಡುತ್ತಿರಲಿ. [ಮರುತಃ] ಮರ್ತ್ಯರಾದ, ಸತ್ಯಧರ್ಮಕ್ಕಾಗಿ ಪ್ರಾಣವನ್ನೇ ಬೇಕಾದರೂ ಬಲಿಕೊಡುವ, ಸಂಯಮ - ಅನುಶಾಸನಗಳನ್ನು ಪಾಲಿಸುವ ಧೀರ–ವೀರರು, [ಅಭಿ ಭಂಜತೀನಾಂ] ಎಲ್ಲೆಡೆಯಿಂದಲೂ

ಕೆಟ್ಟದುದೆಲ್ಲವನ್ನೂ ಛಿನ್ನ-ಬಿನ್ನ ಮಾಡುತ್ತಾ. [ಜಯಂತೀನಾಂ] ಸದಾ ದುಷ್ಟ ವೃತ್ತಿಗಳ ಮೇಲೆ ಜಯವನ್ನೇ ಪಡೆಯುತ್ತಾ ಹೋಗುವ [ದೇವಸೇನಾನಾಂ ಅಗ್ರಂ] ದೇವಸೇನೆಗಳ ಮುಂಭಾಗದಲ್ಲಿ. [ಯಂತು] ಸಫಲರಾಗುತ್ತಾ ಹೋಗಲಿ.

ಓಹೋ! ಅದೆಂತಹ ಚಮತ್ಕಾರಕಾರೀ ದಿವ್ಯ ಈ ದೇವ ಸೈನಿಕರದು? ಹೆದರಿ ಓಡುತ್ತಿರುವ ಹೇಗೋ ಹಾಗೆ ಉಸಿರಾಡಿಕೊಂಡಿದ್ದರ ನಾಕಂಬ ಹೇಡಿಗಳಿಗೆ ಈ ದೇವ ಸೇನೆಯಲ್ಲಿ ಸ್ಥಾನವಿಲ್ಲ. ಆಲಿಸಿರಿ -

**ಇಂದ್ರಸ್ಯ ವೃಷ್ಣೋ ವರುಣಸ್ಯ ರಾಜ್ಞ ಆದಿತ್ಯಾನಾಂ ಮರುತಾಂ ಶರ್ಧ ಉಗ್ರಂ।**
**ಮಹಾಮನಸಾಂ ಭುವನಚ್ಯವಾನಾಂ ಘೋಷೋ ದೇವಾನಾಂ ಜಯತಾ**
**ಮುದಸ್ಥಾತ್॥** [ಋಕ್. 10.103 9]

[ವೃಷ್ಣಃ] ಸ್ವಯಂ ಧರ್ಮಸ್ವರೂಪನೂ, ಸುಖ-ಸಮೃದ್ಧಿಗಳ, ಕಾಂತಿ-ಶಾಂತಿಗಳ ಮಳೆಯನ್ನೇ ಸುರಿಸುವವನೂ [ವರುಣಸ] ಪಾಪ-ತಾಪನಿವಾರಕನೂ, ಮಾನವಮಾತ್ರರಿಗೆ ವರಣೀಯನೂ, [ರಾಜ್ಞಃ] ವಿಶ್ವ-ಬ್ರಹ್ಮಾಂಡದ ಏಕೈಕ ಪ್ರಕಾಶಮಾನ ಸರ್ವೋಚ್ಚ ಶಾಸಕನೂ, ನಿಯಾಮಕನೂ ಆದ, [ಇಂದ್ರಸ್ಯ] ಆ ಸರ್ವೈಶ್ವರ್ಯವಾನ್ ಸರ್ವೇಶ್ವರನ, [ಆದಿತ್ಯಾನಾಂ] ಅಖಂಡರೂ, ಪ್ರಾಮಾಣಿಕರೂ, ಬಾಹ್ಯಾಭ್ಯಂತರ ಶುಚಿತ್ವವನ್ನು ಪಡೆದುಕೊಂಡವರೂ, ಆದರಣೀಯರೂ, [ಮರುತಾಂ] ಮರ್ತ್ಯರಾಗಿದ್ದರೂ ಧರ್ಮ-ಸತ್ಯ-ನ್ಯಾಯಾದಿಗಳಿಗಾಗಿ ಪ್ರಾಣಗಳನ್ನಾದರೂ ತೆತ್ತು ಅಮರರಾಗಿ ಹೋಗುವ ಸಂಯುತಾತ್ಮರ, [ಶರ್ಧಃ] ಸ್ಪರ್ಧೆಯಲ್ಲಿ ಎಂತಹ ಪ್ರಬಲ ಆತಂಕವೇ ಬರಲಿ, ಪರ್ವತಗಳಂತೆ ದೃಢರಾಗಿ ನಿಲ್ಲುವ ಸಾಮರ್ಥ್ಯ, [ಉಗ್ರಂ] ಉಗ್ರವೇ, ತೀವ್ರವೇ ಆಗಿದೆ. [ಮಹಾಮನಸಾಂ] ಆ ಮಹಾಮನಸ್ಕರೂ, ವಿಶಾಲ ಹೃದಯದವರೂ, ಉದಾರಾತ್ಮರೂ. [ಭುವನಚ್ಯವಾನಾಂ] ಲೋಕವನ್ನೇ ಅಲ್ಲಾಡಿಸಿಬಿಡುವ, ಮಾನವ ಸಮಾಜದಲ್ಲಿ ಮಹಾನ್‌ಕ್ರಾಂತಿಯನ್ನು, ಪರಿವರ್ತನೆಯನ್ನು ತರುವ, [ಜಯತಾಂ] ಸದಾ ಜಯಿಸುತ್ತಲೇ ಮುನ್ನಡೆಯುವ, [ದೇವಾನಾಂ] ದಿವ್ಯಗುಣ-ಕರ್ಮ-ಸ್ವಭಾವಯುಕ್ತರಾದ ಆ ಮಹಾಮಾನವರ, [ಘೋಷಃ] ವಿಜಯಘೋಷವು, ಜಯಜಯಕಾರವು, [ಉತ್ ಅಸ್ಥಾತ್] ಗಗನಾಂತರಾಳಕ್ಕೆಯೇ, ಮೇಲು-ಮೇಲಕ್ಕೆಯೇ ಏರುತ್ತದೆ."

ಮಾನವ ಸಮಾಜದಲ್ಲಿ ಇಂತಹ ಮಹತೀ ಯಶಸ್ವಿನೀ ಕ್ರಾಂತಿಯನ್ನೆಬ್ಬಿಸಿ, ಸುಪ್ತ ಮಾನವರ ಪ್ರಸುಪ್ತ ಮನಸ್ಸುಗಳನ್ನೆಚ್ಚರಿಸಿ, ಆಕಾರ ಮಾತ್ರದಿಂದ ಮಾನವರಾಗಿ ಕಂಡು ಬಂದರೂ ವಸ್ತುತಃ ದಾನವರಾಗಿಯೇ ಉಳಿದು ಹೋಗಿರುವವರನ್ನು ಎಚ್ಚರಿಸಿ, ಮೊದಲು ಅವರನ್ನು ಮಾನವರನ್ನಾಗಿಯೂ, ಆಮೇಲೆ, 'ದೇವಜನ'ರನ್ನಾಗಿಯೂ ರೂಪಿಸಲಿಕ್ಕಾಗಿಯೇ ಭಗವಂತನು ವೇದಗಳನ್ನು ಉಪದೇಶಿಸುತ್ತಾನೆ. "ಇದು ಆದಿತ್ಯರೆಂಬ ದೇವತೆಗಳಿಗಾಗಿಯೇ ಹೇಳಿದ ಮಾತು ಇದು ಮರುತ್ತರೆಂಬ ದೇವತೆಗಳಿಗಾಗಿ ಬೋಧಿಸಿದ ವಿಷಯ; ಇದು ವಸು ದೇವತೆಗಳಿಗೆ; ಇದು ಅಶ್ವಿನೀ ದೇವತೆಗಳಿಗೆ; ಇದು ವಿಶ್ವೇ ದೇವರುಗಳಿಗೆ ಭಗವಂತ

ನಾಡಿದ ಮಾತು. ಮಾನವರಾದ ನಮಗೂ ಈ ವೇದೋಪದೇಶಗಳಿಗೂ ಏನೇನೂ ಸಂಬಂಧ ವಿಲ್ಲ."- ಎಂದು ಸುಣುಚಿಕೊಳ್ಳುತ್ತಾ ಹೋದರ "ನಿಜವಾಗಿ ಬ್ರಹ್ಮದೇವರಿಗೆ ಮಾತ್ರ ವೇದ ಗಳು ಅರ್ಥವಾಗುತ್ತವ; ಮಾನವರಿಗೆ ಗೊತ್ತಾಗುವುದಿಲ್ಲ."- ಎಂಬ ಅಪಸಿದ್ಧಾಂತಕ್ಕೆ ಅಂಟಿ ಕೊಂಡೇ ಹೋಗುತ್ತಿದ್ದರೆ ನಮಗೆ ವೇದಗಳಿಂದ ಅರಕಾಸಿನಷ್ಟೂ ಲಾಭವಾಗದು. ವೇದ ಗಳ ಸ್ವರ ಮಾರದಿಂದಲೇ ಸರ್ವಾರ್ಥ ಸಿದ್ಧಿಯಾಗಿ ಹೋಗುತ್ತವೆ; ಅರ್ಥ-ವಿವೇಚನೆ ಆವಶ್ಯಕವೇ ಅಲ್ಲ." ಎಂದು ಆತ್ಮವಂಚನ ಮಾಡಿಕೊಳ್ಳುತ್ತಾ ಹೋದರ, ಹಾನಿಯುಂಟಾಗು ವುದು. ಸರ್ವಜ್ಞನಾದ ಪರಮಾತ್ಮನಿಗಲ್ಲ; ಮಾನವ ಜನ್ಮವನ್ನೆತ್ತಿದ್ದರೂ, ಪಶುಗಳಿಗಿಂತ ಕೆಳ ಮಟ್ಟದ ಜೀವನ ನಡೆಸುತ್ತಿರುವ, ಜ್ಞಾನಭಂಡಾರಗಳಾದ ವೇದಗಳೇ ನಮ್ಮ ಕೈಯಲ್ಲಿದ್ದರೂ, ಅವುಗಳನ್ನು ಬಿಚ್ಚಿ ಸಹ ನೋಡದ, ಅರ್ಥ ಮಾಡಿಕೊಳ್ಳಲು ಪ್ರಯತ್ನವನ್ನೇ ಮಾಡದ, ನಮಗೆಯೇ ಮೂರು ಕಾಲಕ್ಕೂ ತುಂಬಿಕೊಡಲಾಗದಂತಹ ಹಾನಿಯುಂಟಾಗುವುದು. **"ಇಮಾಂ ವಾಚಂ ಕಲ್ಯಾಣೀಮಾ ವದಾನಿ ಜನೇಭ್ಯಃ। ಬ್ರಹ್ಮರಾಜನ್ಯಾಭ್ಯಾಂ ಶೂದ್ರಾಯ ಚಾರ್ಯಾಯ ಚ,॥"** [ಯಜುರ್ವೇದ: 26.2.] - "ಈ ಕಲ್ಯಾಣಕಾರಿಣೀ ವೇದವಾಣಿಯನ್ನು ನಾನು ಮಾನವ ಮಾತ್ರರಿಗಾಗಿ, ಬ್ರಾಹ್ಮಣ-ಕ್ಷತ್ರಿಯರಿಗಾಗಿ, ಶೂದ್ರ ನಿಗಾಗಿ ಮತ್ತು ವೈಶ್ಯನಿಗಾಗಿ ಬೋಧಿಸುತ್ತೇನ."-ಸ್ವತಃ ವೇದಜ್ಞಾನದಾತಾ ದೇವ-ದೇವನೇ ಸಾರಿ-ಸಾರಿ ಹೇಳುತ್ತಿರುವಾಗ. ಯಾವನೋ ಕಜ್ಜಿ ಹತ್ತಿದ ಕೊಳಕನು. ಶೂದ್ರನೇ**ದು** ನಂಬ ಲಾದ ಜಾನಶ್ರುತಿಯನ್ನು ಕುರಿತು 'ರೇ ಶೂದ್ರ!' - ಎಂದು ತಿರಸ್ಕರಿಸಿದನು. - ಎಂಬ, ಸ್ಪಷ್ಟವಾಗಿಯೇ ಯಾರೋ ಧೂರ್ತರು ಛಾಂದೋಗ್ಯೋಪನಿಷತ್ತಿನಂತಹ ದಿವ್ಯ**ಗ್ರಂ**ಥದಲ್ಲಿ ಪ್ರಕ್ಷೇಪ ಮಾಡಿದ ಅಸುರವಚನಗಳ ಆಶ್ರಯದ ಮೇಲೆ "ಶೂದ್ರರಿಗೆ ವೇದಾಧಿಕಾರವಿ**ಲ್ಲ."** ಎಂಬ ಅಪಶ್ರುತಿ ಹಾಡುವುದನ್ನು ಈಗಲಾದರೂ ನಿಲ್ಲಿಸಿದರೆ, "ಗೌತಮ ಧರ್ಮಸೂತ್ರ", "ವಿಷ್ಣು ಧರ್ಮಸ್ಮೃತಿ" ಮೊದಲಾದ ಭಾರಿ ಭಾರೀ ಪಸರುಗಳಿಂದ ಮನಬಂದಂತೆ ಗ್ರಂಥ ರಚಿಸಿ, ಶೂದ್ರರೆನಿಸಿಕೊಂಡವರು ವೇದಗಳನ್ನು ಆಲಿಸಿದರೆ, ಉಚ್ಚರಿಸಿದರೆ, ಆಚರಿಸಿದರೆ ಎಂತೆಂತಹ ರಾಕ್ಷಸೀ ಶಿಕ್ಷೆಗಳನ್ನು ವಿಧಿಸಬೇಕೆಂದು ಹುಲುಮಾನವರು ಬರೆದಿಟ್ಟ ಹೊಲಸು ಹೊತ್ತಿಗೆ (ಪುಸ್ತಕ) ಗಳಿಗೆ ಮಿತಿ ಮೀರಿದ ಪ್ರಾಶಸ್ತ್ಯವಿತ್ತು, ಈ ವರಗ ವೈದಿಕ ಧರ್ಮಕ್ಕೆ ತಂದಿಟ್ಟ ಧಕ್ಕೆಯೇ ಸಾಕು. ಈ ಲೋಕದ ಮಾನವರಿಗೆ ಸಲ್ಲದ, ಎಲ್ಲೆಲ್ಲಿನದೋ ಕಾಡು ಕಗ್ಗಗಳನ್ನು ಗೀಚಿಡಲು ಸರ್ವಜ್ಞನಾದ ಭಗವಂತ ಮೂರ್ಖನಲ್ಲ; ಸಂಬಂಧ-ಪ್ರಕರಣ-ಆಕಾಂಕ್ಷೆಗಳ ಅರಿ ವಿಲ್ಲದ ಅಜ್ಞನಲ್ಲ. ಅಧಿಕಾರ-ಅನಧಿಕಾರಗಳ ಸಮಸ್ಯೆಯು ತಳಹದಿ ಹುಟ್ಟಿದ **ಕುಲವಲ್ಲ;** ಅರಿತುಕೊಳ್ಳಬಲ್ಲ ಯೋಗ್ಯತೆ. ಮಾನವಮಾತ್ರರ ಸಂಪತ್ತು ವೇದಗಳು. ಅವುಗಳನ್ನು "ಹಿಂದೂ ಗಳ ಶಾಸ್ತ್ರಗಳು; ಬ್ರಾಹ್ಮಣರು ಮಾತ್ರ ಓದಬಲ್ಲ-ಓದಿಸಬಲ್ಲ. ಕ್ಷತ್ರಿಯ-ವೈಶ್ಯರು ಕೇವಲ ಕೇಳಬಲ್ಲ ಶಾಸ್ತ್ರಗಳು. ಶೂದ್ರರೆನಿಸಿಕೊಂಡವರೂ, ಸ್ತ್ರೀಯರೂ, ವೇದಾಧ್ಯಯನ-ಅಧ್ಯಾಪನ ಗಳಿಗೆ ಸರ್ವಥಾ ಅನಧಿಕಾರಿಗಳು."– ಎಂದು ಸಾಕಾದಷ್ಟು ಕೂಗಾಡಿದ್ದೇವೆ. ಈಗಲಾದರೂ ಇಂತಹ ಹೃದಯದ ಚಿಕ್ಕತನವನ್ನು ಚೂರು-ಚೂರಾಗಿ ಮಾಡಿ, ಮನಸ್ಸಿನ ವೈಶಾಲ್ಯ**ವನ್ನು** ಪೂರ್ಣತಃ ಸಾಧಿಸಿಕೊಂಡು, ತ್ರಿಕರಣಶುದ್ಧಿಪೂರ್ವಕವಾಗಿ ಮಾನವ ಮಾತ್ರರ ನಡುವೆ **ವೇದ** ಪ್ರಚಾರ ಮಾಡೋಣ. ಜಗದೀಶ್ವರನ ಆಜ್ಞಾ ಪರಿಪಾಲನೆ ಮಾಡಿ, ಜಗತ್ತಿನಲ್ಲಿ **ಶಾಂತಿ-**

ಸಾಮ್ರಾಜ್ಯವನ್ನು ಸ್ಥಾಪಿಸಲು ಯತ್ನಿಸೋಣ. ವೇದಗಳಿರುವುದು ನಮಗಾಗಿ; ಋಗ್ವೇದ ಹೇಳುವಂತೆ-"**ಮಾ ನಃ ಕಥಃ ಪಿತ್ರ್ಯಾನ್ಮಾನವಾದಧಿ ದೂರಂ ನೈಷ್ಟ ಪರಾವತಃ॥** [8 30.3.]-"ಓ ವಿದ್ವಜ್ಜನರೇ! ನಮ್ಮನ್ನು ನಮ್ಮ ಪಾಲಕರಾದ ಜ್ಞಾನಿಗಳ ಹಾಗೂ ಮೋಕ್ಷಪ್ರದನಾದ ಪರಮಾತ್ಮನ **ಮಾನವೀಯ ಮಾರ್ಗದಿಂದ** ದೂರಕ್ಕೆ ಕರೆದೊಯ್ಯಬೇಡಿ."- ಎಂದು ಗುರುಜನರಲ್ಲಿ ಕೇಳಿಕೊಳ್ಳೋಣ. **ಮಾನವೀಯ ಮಾರ್ಗ; ಅದೇ ನಮ್ಮ ಧರ್ಮ; ಅದೇ ನಮ್ಮ ಸತ್ಯಸನಾತನ, ನಿತ್ಯ ಚಿರಂತನ ಮಹಾನ್ ಧರ್ಮ."** "**ಮನುರ್ಭವ ಜನಯಾ ದೈವ್ಯಂ ಜನಂ**" [10.53.6.] "**ಪ್ರತಿಗೃಭ್ಣೀತ ಮಾನವಂ ಸುಮೇಧಸ**" [ಋಕ್:- 10.62.1.] "ಸ್ವತಃ ಮನನ ಶೀಲನಾಗು; ದಿವ್ಯಗುಣವಾನ್ ಮಾನವನನ್ನು ರೂಪಿಸು." ಉತ್ತಮ ಬುದ್ಧಿಶಾಲಿಗಳೇ! ಮಾನವನನ್ನು ನಿಮ್ಮವನಾಗಿ ಮಾಡಿಕೊಳ್ಳಿರಿ."- ಈ ಬಗೆಯ ವೇದಾದೇಶಗಳಿಗೆ ತಿಲ-ತರ್ಪಣವಿತ್ತು, ಸಾರ್ವಕಾಲಿಕ ಸಾರ್ವಭೌಮ ಮಾನವೀಯ ಧರ್ಮವನ್ನು ಜುಟ್ಟು-ವಿಭೂತಿ-ಅಡಗಂಧ-ಮೂರುನಾಮ-ಗೋಪೀ ಚಂದನದ ಮುದ್ರೆ-ಅಂಗಾರಗಳನ್ನು ಧರಿಸುವ ಸೂಕ್ಷ್ಮದರ್ಶಿನಿಗೂ ಕೂಡಾ ಕಾಣದಷ್ಟು ಅಲ್ಪ-ಸಂಖ್ಯಾತರ ಅರ್ಥಹೀನ ಸಂಪ್ರದಾಯವಾಗಿ ಮಾರ್ಪಡಿಸಿ, ಭಗವಂತನಿಗೂ. ವೇದಗಳಿಗೂ ಅಪಚಾರ ಮಾಡುವ ಅಪರಾಧಕ್ಕೆ ಪ್ರಾಯಶಃ ಯಾವ ಪ್ರಾಯಶ್ಚಿತ್ತವೂ ಇಲ್ಲ.

ಆಯಿತು. ಉದಾರಾಶಯರೂ, ವಿಶಾಲಹೃದಯರೂ, ಮಹಾಮನಸ್ಕರೂ ಆದ ಸ್ವತಃ ಜಗತ್ಪತಿಯನ್ನೇ ಸೇನಾನಿಯಾಗಿ ಆರಿಸಿಕೊಂಡ ಸೈನಿಕರಾದ ನಾವು ಯಾವ ಉದ್ದೇಶ್ಯಕ್ಕಾಗಿ ಹೋರಾಡಬೇಕು ? "**ಧನಾನಾಂ ಸಾತಯೇ**" _ ಎನ್ನುತ್ತದೆ ಈ ಮಂತ್ರ. ಧನವೆಂದರೆ ಸಂಪತ್ತು. ಅದು ಹಣ, ನೆಲ, ಮನೆ- ಮೊದಲಾದ ಭೌತಿಕ ವಸ್ತುಗಳಾಗಬಹುದು; ಜ್ಞಾನ, ತಪಸ್ಸು, ಸಾಧನೆ ಶುಭಗುಣಗಳು - ಮೊದಲಾದ ಆಧ್ಯಾತ್ಮಿಕ ತತ್ತ್ವಗಳೂ ಆಗಬಹುದು. ಜಡ-ಚೇತನಗಳು. ದೇಹ-ಆತ್ಮಗಳು ಒಟ್ಟಿಗಿರುವವರೆಗೆ ಭೌತಿಕ-ಸಂಪತ್ತೂ ಬೇಕು, ಆಧ್ಯಾತ್ಮಿಕ ಸಂಪತ್ತೂ ಬೇಕು. ಸಾತಿ -ಎಂಬ ಶಬ್ದಕ್ಕೆಬಹ್ವರ್ಥಯುಕ್ತ ದಾನ, ದತ್ತಿ (donation) ಲಾಭ, ಪ್ರಾಪ್ತಿ, ಸಹಾಯ, ವಿನಾಶ, ಸಮಾಪ್ತಿ, ಅಂತ ಹಾಗೂ ತೀವ್ರ ವೇದನೆ-ಎಂಬಿಷ್ಟು ಮುಖ್ಯಾರ್ಥಗಳಿವೆ. ಇವುಗಳಲ್ಲಿ "ಧನ"ದ ಜೊತೆಗೆ, ಮಂತ್ರದ ಭಾವನೆಗೆ; ಪೋಷಕವಾಗುವಂತೆ ಯಾವಯಾವುದನ್ನು ಹೊಂದಿಸಬಹುದು-ಎಂದು ಯೋಚಿಸುವಾಗ ಸತ್ಯಮುಖವಾದ ರೀತಿಯಲ್ಲಿ ಭೌತಿಕ ಸಂಪಾದನೆ, ದಾನ ಮತ್ತು ಸಹಾಯವನ್ನು ಪಾತ್ರರಿಗೆ ಕೊಡುವುದು, ಅಪ್ರಾಮಾಣಿಕ ವ್ಯವಹಾರದ ಮೂಲಕ ಗಳಿಸಿದ ಸಂಪತ್ತನ್ನು ಧ್ವಂಸಮಾಡುವುದು† ಕೊನೆಮುಟ್ಟಿಸುವುದು ಎಂಬ ಭಾವನೆಗಳನ್ನು ಗ್ರಹಿಸಬಹುದು. ಆಧ್ಯಾತ್ಮಿಕ ಸಂಪತ್ತಿನ

---

† ನಾವು ಹೀಗೆಂದಾಗ, ಈ ಶತಮಾನದ 'ಪೆಟ್ರೋಲ್ ಡಬ್ಬಿ-ಬೆಂಕಿಪೆಟ್ಟಿಗೆಯ ನವ ಸಂಸ್ಕೃತಿ(?) ನಮ್ಮ ಓದುಗರಿಗೆ ನೆನಪಾಗದಿರಲಿ. ಅಪ್ರಾಮಾಣಿಕ ವ್ಯವಹಾರಗಳ ಮೂಲಕ ಗಳಿಸುವ ವೃತ್ತಿಗೆಯೇ ಪೂರ್ಣವಿರಾಮ ಹಾಕುವುದು-ಎಂದಿಷ್ಟು ಮಾತ್ರ ಹೃದ್ಗತವಾದರೆ ಸಾಕು.

ಬಗೆಗೆ ಹೇಳುವುದೇನಿದೆ ? ಪ್ರಾಪ್ತಿ, ಸಂಪಾದನೆ-ಎಂದಿಷ್ಟು ಮಾತ್ರ ಹೇಳಲು ಸಾಧ್ಯ. ತೀವ್ರ ವೇದನೆಗೂ, ಈ ಮಂತ್ರದ ವಿಷಯಕ್ಕೂ ಸಂಬಂಧವೇ ಇಲ್ಲ. ಆದುದರಿಂದ, ಅದನ್ನು ಬಿಟ್ಟೇ ಬಿಡಬಹುದು.

ಈ ಮಂತ್ರದ ಭಾಷ್ಯ ಮುಗಿಸುವ ಮುನ್ನ. ಮತ್ತೆ ಮಹರ್ಷಿ ದಯಾನಂದರ ನಿಮ್ನಾಂಕಿತ ಶಬ್ದಗಳನ್ನು ಸ್ಮರಿಸೋಣ:-

**"ಪರಮೈಶ್ವರ್ಯವನ್! ಪೂರ್ಣವಿದ್ಯಾರಾಜ್ಯಾದಿ ಸಾಧ್ಯ ಪದಾರ್ಥಾನಾಂ ಸುಖಾರ್ಥಂ ಸಮ್ಯಕ್ಸೇವನಾಯ ತಂ ತ್ವಾ ವಿಜ್ಞಾಪಯಾಮಃ ।"**
"ಪರಮೈಶ್ವರ್ಯವನ್ ಜಗತ್ಪತೇ ! ಸಂಪೂರ್ಣ ವಿದ್ಯೆ, ಸ್ವಕೀಯ ರಾಜ ಪ್ರಕಾಶನ (self-government)-ಮೊದಲಾದುವನ್ನು ಸಾಧಿಸಲು ಯೋಗ್ಯವಾದ, ಸಂಪಾದಿಸಬೇಕಾದ ವಸ್ತುಗಳ ಹಾಗೂ ತತ್ತ್ವಗಳ ಸುಖಕ್ಕಾಗಿಯೂ, ಸಮುಚಿತ ರೀತಿ ಉಪಭೋಗಕ್ಕಾಗಿಯೂ ನಮಗೆ ಆವಶ್ಯಕ ಸಾಮರ್ಥ್ಯವನ್ನು ಕರುಣಿಸು-ಎಂದು, ಇಂತಹ ಶಕ್ತಿ ಕೊಡಬಲ್ಲ ನಿನ್ನಲ್ಲಿಯೇ ವಿಜ್ಞಾಪನೆ ಮಾಡಿಕೊಳ್ಳುತ್ತೇವೆ."-ಈ ಆರ್ಷ ದೃಷ್ಟಿಯಲ್ಲಿ ಎಲ್ಲವೂ ಅಡಕವಾಗಿದೆ.

## ಸಂಹಿತಾ ವಿಭಾಗ

**ಯೋ ರಾಯೋಽವನಿರ್ಮಹಾನ್ತ್ಸುಪಾರಃಸುನ್ವತಃ ಸಖಾ**

**ತಸ್ಮಾ ಇಂದ್ರಾಯ ಗಾಯತ ॥೧೦॥**

**ಪದಪಾಠ :** ಯಃ, ರಾಯಃ, ಅವನಿಃ, ಮಹಾನ್, ಸುಪಾರಃ, ಸುನ್ವತಃ, ಸಖಾ ತಸ್ಮೈ, ಇಂದ್ರಾಯ, ಗಾಯತ.॥೧೦॥

**ಅನ್ವಯ :** ಯಃ ರಾಯಃ ಮಹಾನ್ ಅವನಿಃ, (ಅಥವಾ) ಅವನಿಃ, ಮಹಾನ್ ಸುಪಾರಃ, ಸುನ್ವತಃ ಸಖಾ, ತಸ್ಮೈ ಇಂದ್ರಾಯ ಗಾಯತ.

**ಪದಾರ್ಥ** : [ಯಃ] ಯಾವನು, [ರಾಯಃ] ಸಂಪತ್ತಿನ, [ಮಹಾನ್ ಅವನಿಃ] ಮಹಾ ರಕ್ಷಕನೂ, (ಅಥವಾ) [ರಾಯಃ ಅವನಿಃ] ಸಂಪತ್ತಿನ ಸಂರಕ್ಷಕನೂ, [ಮಹಾನ್] ಸರ್ವ ಜ್ಯೇಷ್ಠನೂ, [ಸುಪಾರಃ] ಒಳ್ಳೆಯವರನ್ನು ಪಾರುಗಾಣಿಸುವವನೂ, ಒಳ್ಳೆಯದನ್ನು ಪೂರ್ಣ ಗೊಳಿಸುವವನೂ. [ಸುನ್ವತಃ] ಸಾರಗ್ರಾಹಿಯು, [ಸಖಾ] ಮಿತ್ರನೂ, ಜೀವನಂತೆಯೇ 'ಆತ್ಮಾ' ಎಂಬ ಖ್ಯಾನ (ಹೆಸರು) ವನ್ನುಳ್ಳವನೂ ಆಗಿದ್ದಾನೋ, [ತಸ್ಮೈ ಇಂದ್ರಾಯ] ಆ ಪರಮ

ಐಶ್ವರ್ಯವಾನ್. ಪರಮ ಕಾರುಣಿಕ. ಸರ್ವರಕ್ಷ ಭಗವಂತನಿಗಾಗಿ. [ಗಾಯತ] ಸ್ತುತಿ ಮಾಡಿರಿ.

**ತಾತ್ಪರ್ಯ** : ಸರ್ವೇಶ್ವರನಾದ ಪರಮೈಶ್ವರ್ಯವಾನ್ ಪರಮಾತ್ಮನು ಭೌತಿಕ ಆಧ್ಯಾತ್ಮಿಕ ಐಶ್ವರ್ಯಗಳ ಮಹಾನ್ ರಕ್ಷಕನು ಹಾಗೂ ಸ್ವಾಮಿಯು. ಸ್ವಯಂ ಜ್ಯೇಷ್ಠನಾದ ಆ ದೇವ ದೇವನು ಒಳಿತುಗಳ ಸಾಫಲ್ಯಕಾರಕನು; ಸಜ್ಜನರನ್ನು ಸರ್ವವಿಧ ತಾಪಗಳ, ಸಂಸಾರಸಾಗರದ, ಆಚೆಗೆ ದಾಟಿಸುವವನು. ವಿಶ್ವದ ಸಾರಭೂತನಾದ ಈಶ್ವರನನ್ನೂ, ವೈಯಕ್ತಿಕ ಜೀವನದ ಸಾರಭೂತನಾದ ಜೀವನನ್ನೂ, ಜಗತ್ತಿನ ಸಾರಭೂತವಾದ ಪ್ರಕೃತಿ ಯನ್ನೂ ವಿವೇಚನಾ ಬಲದಿಂದ ಗ್ರಹಿಸುವ ವಿವೇಕಿಯು ಮಿತ್ರನು: 'ಆತ್ಮ' -ಎಂಬ ಸಮಾನ ವಾದ ಖ್ಯಾನ (ಹೆಸರು)ವನ್ನು ಹೊಂದಿರುವವನು. ಆ ವಿಶ್ವಕರ್ತೃ-ವಿಶ್ವಭರ್ತೃ-ಸಂಹರ್ತೃ ವಾದ ಸರ್ವೇಶ್ವರನನ್ನು ಸ್ತುತಿಸಿರಿ.

**ಭಾಷ್ಯ** : ಇದು ಈ ಸೂಕ್ತದ ಕೊನೆಯ ಮಂತ್ರ. ಶಬ್ದ-ಸರಣಿಯ ದೃಷ್ಟಿಯಿಂದ ಬಹು ಸುಲಭವೆಂದು ಕಂಡರೂ ವೈದಿಕಧರ್ಮದ ಅನುಪಮ ವೈಶಿಷ್ಟ್ಯ ಒಂದನ್ನು ಅತಿಸೂಕ್ಷ್ಮ ವಾಗಿ ತನ್ನ ಗರ್ಭದಲ್ಲಿ ಅಡಗಿಸಿಕೊಂಡಿದೆ. "**ಧನೈರ್ನಿಷ್ಕುಲೀನಾಃ ಕುಲೀನಾ ಭವಂತಿ, ಧನೈರಾಪದೋ ಮಾನವಾ ನಿಸ್ತರಂತಿ। ಧನೇಭ್ಯೋಽಧಿಕೋ ಬಾಂಧವೋ ನಾಸ್ತಿಲೋಕೇ, ಧನಾನ್ಯರ್ಜಯಧ್ವಂ ಧನಾನ್ಯರ್ಜಯಧ್ವಂ॥**"- ಧನಗಳಿಂದ ಕುಲ ಹೀನರು ಕುಲೀನರಾಗುತ್ತಾರೆ. ಧನಗಳಿಂದ ಮಾನವರು ಆಪತ್ತುಗಳಿಂದ ಪಾರಾಗುತ್ತಾರೆ. ಧನಗಳಿಗಿಂತ ದೊಡ್ಡ ಬಾಂಧವರು ಲೋಕದಲ್ಲಿಲ್ಲ. ಆದುದರಿಂದ. ಧನವನ್ನು ಗಳಿಸಿರಿ; ಧನಗಳನ್ನು ಗಳಿಸಿರಿ." ಎಂದು ಕೆಲವರು ಸ್ವರವನ್ನೆತ್ತಿದರೆ. "**ತಸ್ಮಾದರ್ಥಾಗಮಾಃ ಸರ್ವೇ ಮನೋಮೋಹ ವಿವರ್ಧನಾ। ಕಾರ್ಪಣ್ಯಂ ದರ್ಪಮಾನೌ ಚ ಭಯಮುದ್ವೇಗ ಏವಚ॥**"-"ಆದಕಾರಣ, ಧನಾರ್ಜನೆ ಎಲ್ಲವೂ ಮನೋಮೋಹ, ಕಾರ್ಪಣ್ಯ, ದರ್ಪ, ದುರಭಿಮಾನ. ಭಯ, ಉದ್ವೇಗ-ಇವುಗಳನ್ನು ಹೆಚ್ಚಿಸುವಂತಹವೇ ಆಗಿವೆ."-ಎಂದು ಮತ್ತೆ ಹಲವರು ಅಪಸ್ವರವೆತ್ತುತ್ತಾರೆ. "ಸೂಜಿಯ ಕಣ್ಣಿನಿಂದ ಒಂಟೆಯಾದರೂ ತೂರಿಹೋದೀತು; ಆದರೆ-ಐಶ್ವರ್ಯಶಾಲೀ ಎಂದಿಗೂ ಸ್ವರ್ಗವನ್ನು ಪ್ರವೇಶಿಸಲಾರನು."-ಎಂಬ ಕ್ರೈಸ್ತರ ಕೂಗನ್ನು ಕೇಳದವರಾರು ?

ಆದರೆ -ವೇದಗಳ ದೃಷ್ಟಿ ಇದಲ್ಲ. ದಾರಿದ್ರ್ಯವನ್ನು, ಕಂಗಾಲತನವನ್ನು ಒಂದು ಮಹಾನ್ ಶುಭಗುಣವೆಂದು ವೇದಗಳೆಂದೂ ಬೋಧಿಸುವುದಿಲ್ಲ. ಜಡದ್ರವ್ಯವಾದ ಧನ ಸ್ವತಃ ಒಳ್ಳೆಯದಾಗಲಿ. ಕೆಟ್ಟದಾಗಲಿ ಆಗಿರಲು ಹೇಗೆ ಸಾಧ್ಯ ? ಒಳಿತು-ಕೆಡುಕುಗಳು ಚೇತನದ ಗುಣಗಳಾಗಿರಬಹುದು. ಆದರೆ, ಜಡ ದ್ರವ್ಯದ ಒಳ್ಳೆಯತನ-ಕೆಟ್ಟತನಗಳು ಅದರ ಉಪ ಯೋಗವನ್ನು ಅವಲಂಬಿಸಿವೆ, ಅಷ್ಟೆ ! ಶಂಖಪಾಷಾಣ ವಿಚಕ್ಷಣನಾದ ಚಿಕಿತ್ಸಕನ ಕೈಗೆ ಸಿಕ್ಕಿ ಅಮೃತವಾಗಬಹುದು; ಹಾಲು ಹೊಟ್ಟೆಬಾಕನ ಕೈಗೆ ಸಿಕ್ಕಿ ವಿಷವಾಗಬಹುದು. ಹೀಗೆ ಜಡ ದ್ರವ್ಯಗಳ ಸದುಪಯೋಗ-ದುರುಪಯೋಗಗಳ ಪ್ರಶ್ನೆಯೇ ಹೊರತು, ಸ್ವತಃ ಜಡದ್ರವ್ಯ

ಒಳ್ಳಿತೋ-ಕೆಟ್ಟದೋ-ಎಂಬುದಲ್ಲ ಪ್ರಶ್ನೆ.

ವೇದಗಳ ಭಾಷೆಯಲ್ಲೇ ಹೇಳುವುದಾದರೆ, **ವಯಂ ಸ್ಯಾಮ ಪತಯೋ ರಯೀಣಾಂ** [ಯಜು. 10 20.] - "ಪ್ರಜಾಪತೇ ! ನಾವು ಸಂಪತ್ತುಗಳ ಸ್ವಾಮಿಗಳಾಗೋಣ. ಸ್ಮರಣೀಯವಾದ ಅಂಶ, ನಾವು ಸಂಪತ್ತಿನ ಸ್ವಾಮಿಗಳಾಗೋಣ. ಸ್ವಾಮಿಗಳೇ ಆಗೋಣ; ದಾಸರಾಗದಿರೋಣ ! ಎಂದಿನವರೆಗೆ ಮಾನವ ಧನದ ಪತಿಯಾಗಿರುತ್ತಾನೋ, ಅಂದಿನವರೆಗೆ ಯಾರಿಗೂ ಎಳ್ಳಿನಷ್ಟೂ ಅಪಾಯವಿಲ್ಲ; ಆದರೆ ಯಾವ ಕ್ಷಣ ಮಾನವ ಧನದ ದಾಸನಾಗುತ್ತಾನೋ: ಆ ಕ್ಷಣವೇ ರಕ್ತ-ಕ್ರಾಂತಿ ಪೂರ್ಣತಃ ನಿಶ್ಚಿತ; ಮಹರ್ಷಿ ವ್ಯಾಸರು ಭೀಷ್ಮ-ದ್ರೋಣ-ಕೃಪ-ಶಲ್ಯ-ಈ ನಾಲ್ವರ ಬಾಯಿಯಿಂದಲೂ ಕೆಳಕಂಡ ಮಾತುಗಳನ್ನಾಡಿಸಿ, ಮಾನವ ಜಾತಿಗೆ ಮೂರುಕಾಲಕ್ಕೂ ಸಲ್ಲುವ ಶಾಶ್ವತ ಸತ್ಯವನ್ನು ನಿರೂಪಿಸಿ. ಎಚ್ಚರಿಸಿ ಹೋಗಿದ್ದಾರೆ:-

**ಅರ್ಥಸ್ಯ ಪುರುಷೋ ದಾಸೋ ದಾಸಸ್ತ್ವರ್ಥೋ ನ ಕಸ್ಯಚಿತ್ ।**
**ಇತಿ ಸತ್ಯಂ ಮಹಾರಾಜ ಬದ್ಧೋಽಸ್ಮ್ಯರ್ಥೇನ ಕೌರವೈಃ ॥**

[ಭೀಷ್ಮಪರ್ವ 43.41.56.71.82]

"ಮಾನವ ಧನದ ದಾಸ; ಧನ ಯಾವನ ದಾಸನೂ ಅಲ್ಲ. ಮಹಾರಾಜ ! ಇದು ಸತ್ಯ. ಇದನ್ನರಿತು, ನಾನು ಕೌರವರಿಂದ ಧನದಿಂದ ಬಂಧಿಸಲ್ಪಟ್ಟಿದ್ದೇನೆ." ನಾಲ್ವರೂ ಧರ್ಮಜ್ಞರು; ಕರ್ತವ್ಯಪ್ರಜ್ಞರು. ಆದರೆ ಧನವನ್ನು ತಮ್ಮ ದಾಸವೆಂದು ತಿಳಿದು ಧರ್ಮದ ಪಕ್ಷವನ್ನು ಹಿಡಿಯದೆ, "ಉಪ್ಪಿಟ್ಟವನಿಗೆ ಎರಡು ಬಗೆಯಬಾರದು."-ಎಂಬ ಲೋಕೋಕ್ತಿಗೆ ತಲೆಬಾಗಿ, ಅಧರ್ಮದ ಪಕ್ಷವನ್ನು ಹಿಡಿದರು; ಕೌರವರ ಪರವಾಗಿ ಹೋರಾಡಿದರು. ಇದೇ ಕಾರಣದಿಂದ ನಮಗೆ ವೇದಗಳು ಹೇಳುತ್ತವೆ:- "ಹಣಕ್ಕೆ ಗುಲಾಮರಾಗಬೇಡಿ; ಹಣವನ್ನು ನಿಮ್ಮ ಗುಲಾಮನನ್ನಾಗಿ ಮಾಡಿಕೊಳ್ಳಿರಿ." ಎಂದು.

ಇದರರ್ಥ ವೇದಗಳು ದಾರಿದ್ರ್ಯವನ್ನು ಒಂದು ಮಹಾಶುಭಗುಣವೆಂದು ಹೇಳುತ್ತವೆ-ಎಂದು ತಿಳಿಯಬಾರದು. ದಾರಿದ್ರ್ಯ ಒಂದು ವರದಾನವಲ್ಲ. ಅಭಿಶಾಪ. ಋಗ್ವೇದ ಮೊಳಗುತ್ತಲಿದೆ:-

**ಅರಾಯಿ ಕಾಣೇ ವಿಕಟೇ ಗಿರಿಂ ಗಚ್ಛ ಸದಾನ್ವೇ ।**
**ಶಿರಿಂಬಿಠಸ್ಯ ಸತ್ತ್ವಭಿಸ್ತೇಭಿಷ್ಟ್ವಾ ಚಾತಯಾಮಸಿ ॥**

"[ಸದಾನ್ವೇ] ಸದಾ ರೋದನ ಮಾಡಿಸುವ, [ವಿಕಟೇ] ಕುಟಿಲತೆಗೆಡೆಗೊಡುವ, [ಕಾಣೇ] ಒಕ್ಕಣ್ಣೆಯಾದ, [ಅರಾಯಿ] ದಾರಿದ್ರ್ಯವೇ ! [ಶಿರಿಂಬಿಠಸ್ಯ] ನೆಲವನ್ನೇ ಮುಟ್ಟದೆ, ಅಂತರಿಕ್ಷದಲ್ಲೇ ತೇಲಾಡುವ ಮೇಘದ, [ತೇಭಿಃ ಸತ್ತ್ವಭಿಃ] ಆ ಸಾಮರ್ಥ್ಯಗಳಿಂದ [ತೇ] ನಿನ್ನನ್ನು [ಚಾತಯಾಮಸಿ] ಧ್ವಂಸ ಮಾಡುತ್ತೇವೆ. [ಗಿರಿಂ ಗಚ್ಛ] ಬೆಟ್ಟ-ಗುಡ್ಡಗಳ ಪಾಲಾಗು."

ಧನ ಬೇಕು. ಬೇಕೇಬೇಕು. ಆದರೆ ಆ ಧನ ಎಂತಹದಾಗಿರಬೇಕು ? ಪ್ರಾಮಾಣಿಕತೆಯಂತೂ ಸಂಪಾದನೆಯಲ್ಲಿರಲೇಬೇಕು. ಒಂದಿಗೇ ಆ ಸಂಪತ್ತು ನಮ್ಮ ಜೀವನಗಳಿಗೆ ಏನೇನನ್ನು ತರಬೇಕು ?

**ಸುಬ್ರಹ್ಮಾಣಂ ದೇವವಂತಂ ಬೃಹಂತಮುರುಂ ಗಭೀರಂ ಪೃಥುಬುಧ್ನಮಿಂದ್ರ**
**ಶ್ರುತಋಷಿಮುಗ್ರಮಭಿಮಾತಿಷಾಹಮಸ್ಮಭ್ಯಂ ಚಿತ್ರಂ ವೃಷಣಂ ರಯಿಂ ದಾಃ॥**
[ಋಗ್ವೇದ 10.47.3]

"[ಇಂದ್ರ] ಓ ಪರಮೈಶ್ವರ್ಯವನ್! [ಅಸ್ಮಭ್ಯಂ] ನಮಗೆ, [ಸುಬ್ರಹ್ಮಾಣಂ] ಉತ್ತಮ ವೇದಜ್ಞರನ್ನು ಬಳಿತರುವ, [ದೇವಯಂತಂ] ಸರ್ವದಾ ವಿಜಯವನ್ನೇ ಒದಗಿಸುವ, [ಬೃಹಂತಂ] ಮಹತ್ಕಾರ್ಯಗಳಿಗೆ ಒದಗುವ, [ಉರುಂ] ವಿಶಾಲವಾದ, [ಗಭೀರಂ] ಸತ್ಯ ಸಂಧತೆಯಿಂದ ಸಿಕ್ಕುವ, [ಪೃಥುಬುಧ್ನಂ]ಬಹುಸಂಖ್ಯೆಯಲ್ಲಿ ಜನರಿಗೆ ನೆರವನ್ನೀಯುವ, [ಶ್ರುತ ಋಷಿಂ] ಖ್ಯಾತತತ್ತ್ವದರ್ಶಿಗಳಿಗೆ ಆಶ್ರಯಕೊಡುವ, [ಉಗ್ರಂ] ಪರಾಕ್ರಮಪ್ರದವಾದ [ಅಭಿಮಾತಿಷಾಹಂ] ದುರಭಿಮಾನದ, ಶುಷ್ಕಗರ್ವದ ತಲೆಮೆಟ್ಟಿ ನಿಲ್ಲುವ, ವಿನಯಗುಣ ಸಾಧಕವಾದ, [ಚಿತ್ರಂ] ಹಾಗೂ ಅದ್ಭುತವಾದ, [ರಯಿಂ ದಾಃ] ಐಶ್ವರ್ಯವನ್ನು ಕರುಣಿಸು.

**ಸನದ್ವಾಜಂ ವಿಪ್ರವೀರಂ ತರುತ್ರಂ ಧನಸ್ಪೃತಂ ಶೂಶುವಾಂಸಂ ಸುದಕ್ಷಂ।**
**ದಸ್ಯುಹನಂ ಪೂರ್ಭಿದಮಿಂದ್ರ ಸತ್ಯಮಸ್ಮಭ್ಯಂಚಿತ್ರಂ ವೃಷಣಂ ರಯಿಂ ದಾಃ**
[ಋಗ್ವೇದ 10.47.4]

"[ಸನದ್ವಾಜಂ] ಆವಶ್ಯಕತೆಯುಳ್ಳವರಿಗೆ ಅನ್ನ-ಜ್ಞಾನ-ಬಲಗಳನ್ನು ಕೊಡುವ, [ವಿಪ್ರ ವೀರಂ] ಮೇಧಾವಿಗಳಿಗೆ ಸ್ಫೂರ್ತಿಯನ್ನು ಕೊಡುವ. [ತರುತ್ರಂ] ಗಿಡ-ಮರ-ಬಳ್ಳಿ-ದವಸ-ಧಾನ್ಯಾದಿಗಳನ್ನು ರಕ್ಷಿಸುವ, ದೀನರನ್ನು ಉದ್ಧರಿಸುವ, ಜನಸೇವಕರನ್ನು ಕಾಪಾಡುವ. [ಧನಸ್ಪೃತಂ] ರಾಷ್ಟ್ರದ ಸಿರಿಯನ್ನು ಬೆಳೆಯಿಸುವ. [ಶೂಶುವಾಂಸಂ] ಆಧಿ ವ್ಯಾಧಿ ಗ್ರಸ್ತರ ಉಪಚಾರಕ್ಕೆ ಒದಗುವ, [ಸುದಕ್ಷಂ] ಸಜ್ಜನರ ಶಕ್ತಿಯನ್ನು ಹೆಚ್ಚಿಸುವ, ಉತ್ತಮವಾದುದಕ್ಕೆ ಆಶ್ರಯಭೂತವಾದ, [ದಸ್ಯುಹನಂ] ಕಳ್ಳ–ಕಾಕರನ್ನು, ದುಷ್ಟ ಪ್ರವೃತ್ತಿಗಳನ್ನು ನೆಲಸಮ ಮಾಡುವ, [ಪೂರ್ಭಿದಂ] ಜೀವರನ್ನು ಜನನ ಮರಣದ ಬಂಧನಕ್ಕೆ ಸಿಕ್ಕಿಸುವ, ದುರ್ವೃತ್ತಿ ಪೋಷಕ ದೇಹಗಳನ್ನು ಕೊಚ್ಚಿಹಾಕುವ, [ಸತ್ಯಂ] ಪ್ರಾಮಾಣಿಕವಾದ, [ಚಿತ್ರಂ] ಅದ್ಭುತವಾದ ಹಾಗೂ [ವೃಷಣಂ] ಸುಖವರ್ಷಕವಾದ, ಧರ್ಮಕ್ಕೆ ಪೋಷಕವಾದ. [ರಯಿಂ] ಐಶ್ವರ್ಯವನ್ನು, [ಇಂದ್ರ] ಓ! ಸರ್ವೇಶ್ವರ! [ಅಸ್ಮಭ್ಯಂ ದಾಃ] ನಮಗೆ ದಯಪಾಲಿಸು." ಸ್ಪಷ್ಟವಾಗಿ ಸ್ವಯಂ ಮಾತಾಡುತ್ತಿರುವ ಈ ಮಂತ್ರಗಳ ಮೇಲೆಯೂ ವ್ಯಾಖ್ಯಾನ ಬೇಕೆ?

ಈ ಬಗೆಯ ಸಂಪತ್ತಿಗೆಯೇ ರಕ್ಷಕ. ಆ ಪರಮೈಶ್ವರ್ಯವಾನ್ ಪರಮೇಶ್ವರ. **"ರಾಯಃ ಮಹಾನ್ ಅವನಿಃ"**. "ಈ ವಿಧದ ಐಶ್ವರ್ಯದ ಮಹಾನ್ ರಕ್ಷಕನು ನಮಗೂ

ಇಂತಹ ಸಿರಿಯನ್ನು ಕರುಣಿಸಲಿ. ನಾವು ಜೀವ ಮಾತ್ರರ ಸೇವೆಗೆ ಮೀಸಲಾಗಿಸೋಣ ಈ ಐಶ್ವರ್ಯವನ್ನು. ವೇದಗಳಲ್ಲಿ ಬರುವ "ಸ್ವಾಹಾ" ಎಂಬುದು ಸರ್ವರ ಕಲ್ಯಾಣಕ್ಕಾಗಿ ಸಮರ್ಪಿಸಬೇಕೆಂದೇ ಸೂಚಿಸುವುದು.

**ಇತಿ ಋಗ್ವೇದಸ್ಯ**
**ಪ್ರಥಮ ಮಂಡಲಸ್ಯ ಚತುರ್ಥಂ ಸೂಕ್ತಂ ಸಮಾಪ್ತಂ**

**ಈ ಚತುರ್ಥ ಸೂಕ್ತ ೯ ಮತ್ತು ೧೦ನೇ ಮಂತ್ರಗಳ ಭಾಷ್ಯದ ಪೂರ್ಣವೆಚ್ಚ ಶ್ರೀಮತಿ ಲೀಲಾದೇವಿ ಕೆ. ಆರ್. ಕುಮಾರ್, ಯಾದವಗಿರಿ, ಮೈಸೂರು 2 ಇವರ ಸೇವೆ.**

## ಈತನಕ ವೇದಭಾಷ್ಯಕ್ಕೆ ಸೇವೆ ಸಲ್ಲಿಸಿದ ಮಹಿಳೆಯರ ಹೆಸರುಗಳು

೧ ಶ್ರೀಮತಿ ಕಿರಣ ಯಾನೆ ಸುಜಾತಾದೇವಿ ಕಾಮತ್, ಉಡುಪಿ.
೨ ,, ಚಿನ್ನಮ್ಮದೇವಿ ಕೆ. ರಾಮಕೃಷ್ಣಪ್ಪ, ಮೈಸೂರು.
೩ ,, ಮನೋರಮಾದೇವಿ ಎ. ವಿ. ನಾಯಕ್, ಮುಂಬಯಿ.
೪ ,, ಗೌರೀದೇವಿ ಮಾಧವ ಕುಡ್ವ, ಕುಂದಾಪುರ.
೫ ,, ವತ್ಸಲಾದೇವಿ ಎಂ. ದಯಾನಂದ ಕಿಣಿ, ಮಾಬುಕಳ.
೬ ,, ಉಮಾದೇವಿ ಕೆ. ವರದರಾಯ ಪ್ರಭು, ಮಂಗಳೂರು.
೭ ,, ಸುನಂದಾದೇವಿ ಕೆ. ಕೃಷ್ಣ ಕಾಮತ್, ಮಂಗಳೂರು.
೮ ,, ಸತ್ಯಶೀಲಮ್ಮ ಬಿ. ವಿ. ರತ್ನಯ್ಯ ಶೆಟ್ಟಿ, ಮೈಸೂರು.
೯ ,, ಸುಶೀಲಾದೇವಿ ಕಾಮತ್, ಕುಂಜಿಬೆಟ್ಟು, ಉಡುಪಿ.
೧೦ ,, ಅರುಣಾದೇವಿ ಎಂ. ನಿತ್ಯಾನಂದ ಕಿಣಿ, ಮಾಬುಕಳ.
೧೧ ,, ಕಸ್ತೂರಿದೇವಿ ಎಂ. ಸದಾನಂದ ಕಿಣಿ, ಹರಿಯಾಣ.
೧೨ ,, ಜಯಾದೇವಿ ಕೆ. ಆರ್. ನಾಗರಾಜ್, ಮೈಸೂರು.
೧೩ ,, ರಾಜೀವಿದೇವಿ ಎಂ. ಲಕ್ಷ್ಮಣ ಕಿಣಿ, ಮಾಬುಕಳ.
೧೪ ,, ಇಂದಿರಾದೇವಿ ಪಿ. ರಾಮದಾಸ ಕಾಮತ್, ಉಡುಪಿ.
೧೫ ,, ವತ್ಸಲಾದೇವಿ ಎಂ. ಹನುಮಂತ ಕಿಣಿ, ಮುಂಬಯಿ.
೧೬ ,, ಸುಶ್ಮಾದೇವಿ ಸುಭಾಷ್ಚಂದ್ರ ಕಾಮತ್, ಅಮೇರಿಕಾ.
೧೭ ,, ಲೀಲಾದೇವಿ ಕೆ. ಆರ್. ಕುಮಾರ್, ಮೈಸೂರು.

ಸರ್ವರಿಗೂ ವೇದ ಭಗವಾನನು ಮಂಗಳವನು ಂಟುಮಾಡಲಿ.

# ಋಗ್ವೇದ ಪ್ರಥಮಮಂಡಲದ ಐದನೆಯ ಸೂಕ್ತ.

೧೦ ಋಕ್ಕುಗಳನ್ನುಳ್ಳ ಈ ೫ನೆಯ ಸೂಕ್ತದ ಋಷಿ—ಮಧುಚ್ಛಂದಾಃ ದೇವತಾ ಇಂದ್ರ ೧. ವಿರಾಡ್ಗಾಯತ್ರೀ. ೩. ಪಿಪೀಲಿಕಾಮಧ್ಯಾ ನಿಚೃದ್ಗಾಯತ್ರೀ. ೪ ಮತ್ತು ೧೦ ಗಾಯತ್ರೀ ೫ ೬, ೭ ಮತ್ತು ೯ ನಿಚೃದ್ಗಾಯತ್ರೀ. ೮—ಪಾದ ನಿಚೃದ್ಗಾಯತ್ರೀ. ೨ ಆರ್ಚ್ಯುಷ್ಣಿಕ್ ಛಂದಃ ಮತ್ತು ಋಷಭಸ್ವರ. ಉಳಿದುವೆಲ್ಲದರ ಸ್ವರ-ಷಡ್ಜ.

## ಸಂಹಿತಾ ವಿಭಾಗ

**ಆ ತ್ವೇತಾ ನಿಷೀದತೇಂದ್ರ ಮಭಿ ಪ್ರಗಾಯತ**

**ಸಖಾಯ ಸ್ತೋಮವಾಹಸ** ॥೧॥

**ಪದಪಾಠ :**– ಆ, ತು, ಆ, ಇತ ನಿ, ಸೀದತ ಇಂದ್ರಂ. ಅಭಿ ಪ್ರ. ಗಾಯತ ಸಖಾಯ ಸ್ತೋಮವಾಹಸಃ॥೧॥

**ಅನ್ವಯ :**– ಸ್ತೋಮವಾಹಸಃ ಸಖಾಯಃ ! ಆ ತು ಆ ಇತ. ನಿಷೀದತ, ಇಂದ್ರ ಅಭಿ ಪ್ರಗಾಯತ.

**ಶಬ್ದಾರ್ಥ:**– [ಸ್ತೋಮ ವಾಹಸಃ] ಸಮೂಹವನ್ನು ಜೊತೆಗೊಯ್ಯುವ [ಸಖಾಯಃ] ಋತ್ವಿಕ್ಕುಗಳೇ ! ಮಿತ್ರರೇ! [ಆ] ಎಲ್ಲ ದಿಕ್ಕುಗಳಿಂದಲೂ [ತು] ನಿಶ್ಚಯ ಮಾಡಿದವರಾಗಿ, [ಆ] ನಿರಂತವಾಗಿ [ಇತ] ಬನ್ನಿರಿ.

**ತಾತ್ಪರ್ಯ :**— ಸಾಮೂಹಿಕವಾಗಿ ಸಾಮಾಜಿಕವಾಗಿ ಪರಸ್ಪರ ಸುಖ ದುಃಖ ಭಾಗಿಗಳಾಗಿ ಜೀವನವನ್ನು ನಡೆಸುವ, ವಿರಾಡಾತ್ಮನಿಗೆ ಸ್ತುತಿ ಸಮೂಹವನ್ನರ್ಪಿಸುವ ಮಿತ್ರರೇ! ಯಜ್ಞ ಭಾಗಿಗಳಾದ ಋತ್ವಿಗ್ಜನರೇ! ನೀವು ಯಾವ ದಿಕ್ಕಿನವರೇ ಆಗಿರಲೊಲ್ಲಿರೇಕೆ? ಯಾವ ವೃತ್ತಿಯಲ್ಲೇ ನಿರತರಾಗಿರಲೊಲ್ಲಿರೇಕೆ? ಬನ್ನಿರಿ ಕ್ಷಿಪ್ರವೇ ಆಗಮಿಸಿರಿ. ನಿಶ್ಚಲಚಿತ್ತರಾಗಿ ಕುಳಿತುಕೊಳ್ಳಿರಿ. ಸರ್ವೇಶ್ವರರನ್ನು ಕುರಿತು ಉತ್ಕೃಷ್ಟವಾದ ರೀತಿಯಲ್ಲಿ ಸ್ತುತಿಯನ್ನು ಮಾಡಿರಿ.

**ಭಾಷ್ಯ :**— ಈ ಸೂಕ್ತದ ವಿಷಯವೂ ಇಂದ್ರನೇ ಈವರೆಗೆ ವಿವೇಕ ಸಂಪನ್ನರಾದ ನಮ್ಮ ಸುಯೋಗ್ಯ ಪಾಠಕರು ವಿಶ್ಲೇಷಣಾತ್ಮಕವೂ, ಸಹೈತುಕವೂ ವೈಜ್ಞಾನಿಕವೂ ಆದ ದೃಷ್ಟಿಯಿಂದ ಓದುತ್ತಾ ಬಂದು, ನಿಸ್ಸಂದೇಹವಾಗಿ ಇಂದ್ರ ಶಬ್ದದ ಅನೇಕಾರ್ಥಗಳನ್ನು ಹೃದ್ಗತವನ್ನಾಗಿ ಮಾಡಿಕೊಂಡೇ ಇದ್ದಾರೆ. ಇಂದ್ರ ಶಬ್ದಕ್ಕೆ ಆದೆಷ್ಟೋ ಅರ್ಥಗಳಿರಲೊಲ್ಲವೇ?

ಮುಖ್ಯಾರ್ಥ ಯಾವುದೇ ಶಂಕೆಯೂ ಇಲ್ಲದೇ ಪರಮಾತ್ಮನೆಂದೇ ಆಗಿರುತ್ತದೆ. ವೇದಗಳು ಮಾನವ ಜೀವನದ ವಿವಿಧ ಕ್ಷೇತ್ರಗಳ ವಿಕಾಸಕ್ಕೆ ನೆರವಾಗುವ ಸಮಸ್ತ ವಿದ್ಯೆಗಳಿಂದಲೂ ಪರಿಪೂರ್ಣವಾಗಿರುವುದು ಸತ್ಯವೇ ಆದರೂ, ಅವುಗಳ ಪ್ರಧಾನ ಉದ್ದೇಶ್ಯ ಪ್ರತ್ಯಕ್ಷ-ಅನುಮಾನ ಉಪಮಾನ, ಐತಿಹ್ಯ ಸಂಭವ, ಅಭಾವ, ಹಾಗೂ ಅರ್ಥಾಪತ್ತಿ–ಎಂಬ ಏಳು ಪ್ರಮಾಣಗಳ ಹಿಡಿತಕ್ಕೂ ಸಿಕ್ಕದ, ಕೇವಲ ಊಹಾಮಾತ್ರವಾದ ಹಾಗೂ ಸತ್ತ್ವರಹಿತವಾದ ತತ್ತ್ವವಲ್ಲದ, ತ್ರಿಕಾಲಾಭಾಧಿತ ಸತ್ಯಸ್ವರೂಪವಾದ, ಪರಮಾತ್ಮನೆಂಬ ಸರ್ವಶ್ರೇಷ್ಠ ಹಾಗೂ ಸರ್ವ ಜ್ಯೇಷ್ಠ ವಸ್ತುವಿನ ಸಾಕ್ಷಾತ್ಕಾರಕ್ಕೆ ನೇರವಾಗಿಯೇ ನೆರವಾಗುವುದೇ ಆಗಿದೆ.

**ಯಸ್ಮಾತ್ಕೋಶಾದುದಭರಾಮ ವೇದಂ**
**ತಸ್ಮಿನ್ನಂತರವ ದಧ್ಮ ಏನಂ॥**

[ಅಥರ್ವವೇದ– 19.72.1]

"[ಯಸ್ಮಾತ್ ಕೋಶಾತ್] ಯಾವ ಪರಬ್ರಹ್ಮವೆಂಬ ಅನಂತ ಹಾಗೂ ಅಕ್ಷಯ ಜ್ಞಾನ ಭಂಡಾರದಿಂದ, [ವೇದಂ] ವೇದ ಜ್ಞಾನವನ್ನು, [ಉತ್ ಅಭರಾಮ] ಎತ್ತಿ ತುಂಬಿಸಿಕೊಂಡಿದ್ದೇವೋ, [ತಸ್ಮಿನ್ ಅಂತಃ] ಆ ಪರಬ್ರಹ್ಮದಲ್ಲಿಯೇ, [ಏನಂ] ಈ. ವೇದಜ್ಞಾನವನ್ನು [ಅವ ದಧಃ] ಸಮನ್ವಯಿಸಿ ಬಿಡೋಣ.'' ಭಾವನೆ ಅತಿಸ್ಪಷ್ಟ ವೇದಗಳ ಪ್ರಧಾನೋದ್ದೇಶ್ಯ ಪರಬ್ರಹ್ಮದ ಸಾಕ್ಷಾತ್ಕಾರವೇ ಸರಿ. ವೇದಗಳಲ್ಲಿಯೇ ಈ ನಮ್ಮ ಹೇಳಿಕೆಗೆ ಸ್ಫುಟವಾದ ಪ್ರಮಾಣಗಳು ಪುಷ್ಕಳ ಪ್ರಮಾಣದಲ್ಲಿಯೇ ಇವೆ. ಮಾನವನು ಎಲ್ಲವನ್ನೂ ತಿಳಿದಿರಬಹುದು; ಎಲ್ಲವನ್ನೂ ಗಳಿಸಿಯೂ ಇರಬಹುದು. ಆದರೆ– ಪರಬ್ರಹ್ಮವೆಂಬ ಈ ತತ್ತ್ವವನ್ನು ಕಂಡುಕೊಳ್ಳದಿದ್ದರೆ, ಮನಸ್ಸು–ಬುದ್ಧಿಯೆಂಬ ಎರಡು ಬೆಣಚುಕಲ್ಲುಗಳನ್ನು (ಅರಣಿ) ಪರಸ್ಪರ ತಿಕ್ಕಿ-ತೀಡಿ, ಪರಬ್ರಹ್ಮವೆಂಬ ಬೆಂಕಿಯ ಕಿಡಿಯನ್ನು ನೋಡಲಾರದೆ ಹೋದರೆ, ಅವನ ಬಾಳು ನಿರರ್ಥಕ. ಖಾದ್ಯ-ಪೇಯಗಳ, ಕಾಮಕೇಳಿಗಳ ಭೋಗಕ್ಕೆ ಆನೆ-ಸಿಂಹಗಳ, ಚಕ್ಕವಕ್ಕಿ-ಗುಬ್ಬಚ್ಚಿಗಳ ಜನ್ಮ ಮಾನವ ಜನ್ಮಕ್ಕಿಂತ ಅತ್ಯಧಿಕ ಉಪಯುಕ್ತ ಆಶ್ರಯ ಸ್ಥಾನಗಳಾಗಿವೆ. ಅಷ್ಟು ಮಾತ್ರಕ್ಕಾಗಿ ಮಾನವ ಜನ್ಮ ಬೇಕಾಗಿಯೇ ಇಲ್ಲ. ಮಾನವನ ವೈಶಿಷ್ಟ್ಯವೆಂದರೆ-ಇದೇ ಪರ-ಬ್ರಹ್ಮಸಾಕ್ಷಾತ್ಕಾರ. ಅದಕ್ಕಾಗಿಯೇ ಮನೋಬುದ್ಧಿಗಳ ಕ್ಷಮತೆ (ಸಾಮರ್ಥ್ಯವನ್ನು)ಯನ್ನು ಬೆಳೆಯಿಸಲು, ಪರಮಾತ್ಮನು ಕಲ್ಪ-ಕಲ್ಪದಲ್ಲಿಯೂ ವೇದಗಳ ಆವಿರ್ಭಾವ (ಪ್ರಕಾಶನ)ವನ್ನು ಮಾಡುತ್ತಾನೆ. ಆಲಿಸಿರಿ:–

**ವೇದಾಹಮೇತಂಪುರುಷಂ ಮಹಾಂತ**
**ಮಾದಿತ್ಯವರ್ಣಂ ತಮಸಃ ಪರಸ್ತಾತ್।**
**ತಮೇವ ವಿದಿತ್ವಾತಿ ಮೃತ್ಯುಮೇತಿ**
**ನಾನ್ಯ ಪಂಥಾ ವಿದ್ಯತೇಽಯನಾಯ॥**

[ಯಜುರ್ವೇದ:– 31. 18.]

"[ಅಹಂ] ನಾನು, [ತಮಸಃ] ಪ್ರಾಕೃತಜಗತ್ತಿಗಿಂತ, ಅಜ್ಞಾನಾಂಧಕಾರಕ್ಕಿಂತ, [ಪರಸ್ತಾತ್] ಉನ್ನತಸ್ತರಕ್ಕೇರಿ, [ಏತಂ ಆದಿತ್ಯವರ್ಣಂ] ಈ ಅಖಂಡಜ್ಯೋತಿರ್ಮಯನಾದ, ಅಖಂಡರೂಪದಿಂದ ವರಣೀಯನಾದ, [ಮಹಾಂತಂ ಪುರುಷಂ] ಮಹಾನ್ ಸರ್ವತ್ರವ್ಯಾಪಕ ಪರಮಾತ್ಮನನ್ನು, [ವೇದ] ತಿಳಿದುಕೊಳ್ಳುವೆನು. ಏಕೆಂದರೆ, [ತಂ ಏವ] **ಕೇವಲ ಅವನನ್ನು**, [ವಿದಿತ್ವಾ] **ತಿಳಿದನಂತರವೇ ಮಾನವನು**, [ಮೃತ್ಯುಂ] **ಸಾವನ್ನು, ಮರ್ತ್ಯಲೋಕವನ್ನು**, [ಅತಿ ಏತಿ] **ದಾಟಿ ಹೋಗುತ್ತಾನೆ.** [ಅಯನಾಯ] **ಮುನ್ನಡೆಯಲು, ಪ್ರಗತಿ ಸಾಧಿಸಲು, ಊರ್ಧ್ವಗತಿ ಹೊಂದಲು,** [ಅನ್ಯಃ ಪಂಥಾಃ] **ಅನ್ಯ ಮಾರ್ಗವು**, [ನ ವಿದ್ಯತೇ] **ಇಲ್ಲವೇ ಇಲ್ಲ.**" ಇದು ಯಜುರ್ವೇದದ ನಿಶ್ಚಿತ ಧೋರಣೆಯಾದರೆ, ಋಗ್ವೇದದ ಕೆಳಗಣ ಈ ಘೋಷಣೆ ಮತ್ತೂ ವಿಚಾರ ಪ್ರಚೋದಕ:-

**ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ**
**ಯ ಇತ್ತದ್ವಿದುಸ್ತ ಇಮೇ ಸಮಾಸತೇ॥**

[ಋಗ್ವೇದ:- 1. 164.39.]

"[ಯಃ] ಯಾವನು, [ತತ್] ಆ ಅಕ್ಷರಬ್ರಹ್ಮವನ್ನು, ಅಕ್ಷಯ ವಿರಾಡಾತ್ಮನನ್ನು [ನ ವೇದ] ತಿಳಿಯನೋ, ಅವನು, [ಋಚಾ] ಋಕ್ಕಿನಿಂದ, [ಕಿಂ ಕರಿಷ್ಯತಿ] ಸಾಧಿಸುವನಾದರೂ ಏನನ್ನು? [ಯೇ ಇತ್] ಕೇವಲ ಯಾರು, [ತತ್ ವಿದುಃ] ಆ ಅಕ್ಷಯ ತತ್ತ್ವವನ್ನು ತಿಳಿಯುತ್ತಾರೋ. [ತೇ ಇಮೇ] ಆ ಸೌಭಾಗ್ಯಶಾಲಿಗಳಾದ ಈ ಜನರು [ಸಂ ಆಸತೇ] ಸಮ್ಯಗ್ರೂಪದಲ್ಲಿ, ಸಮೀಚೀನವಾದ ಸ್ಥಿತಿಯಲ್ಲಿ, ಸಾವನ್ನು ಸದೆಬಡೆಯುವ ಸಾಮರ್ಥ್ಯಸಂಪನ್ನವಾದ ಸಮಾಧಾನದ ಸೌಭಾಗ್ಯದಾಗರದಲ್ಲಿ ಶಾಂತಿಯಿಂದ ನೆಲೆಸುತ್ತಾರೆ."

ಹೀಗೆ, ವೇದಗಳ ಸರ್ವೋನ್ನತ ಧ್ಯೇಯ ಪರಬ್ರಹ್ಮದ ಸಾಕ್ಷಾತ್ಕಾರವೇ-ಎಂಬುದು ಶಾಶ್ವತವಾದ ಸತ್ಯ. ಅದೇ ಕಾರಣದಿಂದ 'ಇಂದ್ರ' ಎಂಬಂತಹ ಮಹದರ್ಥಗರ್ಭಿತ ಶಬ್ದಗಳ ಮುಖ್ಯ ಸಂಕೇತ ಆ ಪರಬ್ರಹ್ಮದ ಕಡೆಗೆಯೇ - ಎನ್ನುವ ಮಾತು ಸರ್ವಥಾ ನಿರ್ವಿವಾದ.

ಈ ಸೂಕ್ತವೂ ಕೂಡ, ಇಂದ್ರಶಬ್ದದಿಂದ ಮುಖ್ಯವಾಗಿ ಪರಮಾತ್ಮನತ್ತವೇ ಸಾಧಕರ, ಮುಮುಕ್ಷುಗಳ ಗಮನವನ್ನು ಸೆಳೆಯುತ್ತದೆ. ಇಂದ್ರನೆಂಬ ಶಬ್ದದ ಬಗೆಗೆ ಈ ವರೆಗೆ ಓದಿರುವುದೆಲ್ಲವೂ ನೆನಪಿರಲಿ. ಆದರೆ, ಅಷ್ಟುಮಾತ್ರದ ಸ್ಮರಣವಿದ್ದರೆ, ಇಂದ್ರನ ಬಗೆಗೆ ತಿಳಿಯಬೇಕಾದುದನ್ನೆಲ್ಲಾ ತಿಳಿದಂತಾಯಿತು - ಎಂಬ ಭ್ರಮೆಗೆ ಮಾತ್ರ ಎಡೆಗೊಡದಿರೋಣ. ಏಕೆಂದರೆ, ಆ ಇಂದ್ರ ಅನಂತ; ಜ್ಞಾನ, ಸ್ಥಾನ, ಸಾಮರ್ಥ್ಯ, ಪರಿಮಾಣ-ಯಾವುದೇ ದೃಷ್ಟಿಯಿಂದಲಾದರೂ ನೋಡೋಣ; ಕಂಡುಕೊಂಡಿರುವುದಕ್ಕಿಂತ, ಕಂಡುಕೊಳ್ಳಬೇಕಾಗಿರುವುದೇ ಸಹಸ್ರ - ಸಹಸ್ರಪಾಲು ಅಧಿಕವಾಗಿ ಉಳಿದಿರುತ್ತದೆ. ಮಾನವೀವಾಣಿಯಿಂದ ನಾವು ಹೇಳುವುದಾದರೂ ಏನು? ಸ್ವಯಂ ಅಪೌರುಷೇಯ ವೇದವಾಣಿಯೇ ಮೊಳಗುತ್ತಲಿದೆ:

**ಅರ್ಚಾಮಸಿ ವೀರ ಬ್ರಹ್ಮವಾಹೋ
ಯಾ ದೇವ ವಿದ್ಮ ತಾತ್ತ್ವಾ ಮಹಾಂತಂ॥**

[ಋಗ್ವೇದ:-6. 21. 6.]

"ಓ ಇಂದ್ರ ! [ವೀರ] ಚೇತನನಾದ ಜೀವಾತ್ಮನನ್ನು ಪ್ರೇರಿಸುವ ಪರಮಾತ್ಮನೇ [ಬ್ರಹ್ಮವಾಹಃ] ನೀನಿತ್ತ ವೇದಜ್ಞಾನದ ಧಾರಕರಾಗಿ ನಾವು,[ಯಾತ್ ಏವ ವಿದ್ಮ] ಎಷ್ಟೆಷ್ಟು ತಿಳಿಯುತ್ತೇವೋ, [ತಾತ್ ಮಹಾಂತಂ] ಅಷ್ಟು ಅಷ್ಟೂ ದೊಡ್ಡವನೇ ಆಗುವ, [ತ್ವಾ] ನಿನ್ನನ್ನು, [ಅರ್ಚಾಮಸಿ] ಆರಾಧಿಸುತ್ತೇವೆ." ಆರಾಧ್ಯ ಅನಂತನಾಗಿರುವಾಗ, ಆರಾಧನೆ ಪೂರ್ಣವಾಗುವುದಾದರೂ ಎಂತು ? ಸತ್ಯವಿದು; ಶಾಶ್ವತವಿದು. ಹಾಡಿರಿ; ಹಾಡುತ್ತಲೇ ಹೋಗಿರಿ:-

**ತುಂಜೇ ತುಂಜೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣಃ।
ನ ವಿಂಧೇ ಅಸ್ಯ ಸುಷ್ಟುತಿಂ॥**

[ಅಥರ್ವ:- 20. 70. 13.]

"[ತುಂಜೇ ತುಂಜೇ] ಅವನು ಕೊಡುವ ದಾನ-ದಾನಕ್ಕಾಗಿ, [ವಜ್ರಿಣಃ] ಪಾಪ ವರ್ಜನ ಮಾಡಿಸುವ, [ಇಂದ್ರಸ್ಯ] ಆ ಸರ್ವೇಶ್ವರನ, [ಯೇ ಸ್ತೋಮಾಃ] ಯಾವ ಸ್ತುತಿ ಸಮೂಹ ಗಳು, [ಉತ್ತರೇ] ಉನ್ನತೋನ್ನತವೇ ಆಗುತ್ತಾ ಹೋಗುವವೋ (ಅರಿಯಲಾರೆ) [ಅಸ್ಯ] ಈ ಇಂದ್ರದೇವನ, [ಸುಸ್ತುತಿಂ] 'ಇಷ್ಟುಸಾಕು'-ಎನಿಸುವಷ್ಟು ಸ್ತುತಿಯನ್ನು, [ನ ವಿಂಧೇ] ನಾನು ಸಾಧಿಸಲಾರದವನಾಗಿದ್ದೇನೆ."-ಎಂದೇ ಅನಿಸುತ್ತದೆ ಈಶ್ವರ ಸಾಕ್ಷಾತ್ಕಾರದ ಅನಂತ ಪಥದಲ್ಲಿ ಹೆಜ್ಜೆ ಹಾಕುತ್ತಿರುವ ಸಾಧಕನಿಗೆ.

ಆದಕಾರಣ, ಒಂದೇ ಮಂತ್ರ ಒಂದೇ ವೇದದಲ್ಲಿ ಒಂದಕ್ಕಿಂತ ಹೆಚ್ಚು ಸಾರಿ ಬಂದರೆ, ಅಥವಾ ಒಂದಕ್ಕಿಂತ ಹೆಚ್ಚು ವೇದಗಳಲ್ಲಿ ಬಂದರೆ, ಕೂಡಲೇ "ವೇದಗಳಲ್ಲಿ ಪುನರುಕ್ತದೋಷ ತುಂಬಿದೆ. ಆದಕಾರಣ, ವೇದಗಳನ್ನು, ಕನಿಷ್ಠ ಪಕ್ಷ, ಈಗ ಅವು ಯಾವ ರೂಪದಲ್ಲಿವೆಯೋ, ಆ ರೂಪದಲ್ಲಿ ಸರ್ವಜ್ಞ ಪರಮೇಶ್ವರೋಕ್ತವೆನ್ನುವುದು ಸರಿಯಲ್ಲ." - ಎಂಬ ತೀರ್ಮಾನಕ್ಕೆ ಬಂದು ಬಿಡಬಾರದು. ಉದಾತ್ತಾನುದಾತ್ತ ಸ್ವರಿತಕಂಪಾದಿಗಳಲ್ಲಿಯೂ ಕೂಡ ಏನೊಂದು ವ್ಯತ್ಯಾಸವೂ ಇಲ್ಲದೆ ಒಂದೇ ಮಂತ್ರ ಒಂದಕ್ಕಿಂತಧಿಕ ಸಾರಿ ಕಂಡು ಬಂದಾಗಲೂ, ಪ್ರಕರಣ ವನ್ನೂ, ಒಂದೇ ಶಬ್ದಕ್ಕೆ ಅನೇಕಾರ್ಥಗಳಿರುವುದನ್ನೂ ಗಮನಿಸಿ, ಸೂಕ್ಷ್ಮದೃಷ್ಟಿಯಿಂದ ಪರ್ಯಾಲೋಚಿಸಿಯೇ ಅಂತಿಮ ನಿರ್ಣಯಕ್ಕೆ ಬರಬೇಕು.

ಅನೃತ-ವ್ಯಾಘಾತ - ಪುನರುಕ್ತ ದೋಷಗಳ ನಿರ್ದೋಷವಾದ ಪರಿಜ್ಞಾನವಿಲ್ಲದೆ, ವೇದಗಳ ಮೇಲೆ ನಿರಾಧಾರವಾದ ಆರೋಪಣೆಗಳನ್ನು ಹೊರಿಸುವುದು ಬಹುದೊಡ್ಡ ಅನಧಿಕಾರ ಚೇಷ್ಟೆಯಾದೀತು. ಮಾತ್ರವಲ್ಲ. ಸರ್ವಥಾ ಅನುಪಮನೇ ಆದ ಭಗವಂತನನ್ನು

**"ಅಕ್ಷಾನಿವ ಶ್ವಘ್ನೀ ನಿಮಿನೋತಿ ತಾನಿ."** [ಅಥರ್ವವೇದ:- 4.16.5.] **"ಸೋ ಅರ್ಯಃ ಪುಷ್ಟೀರ್ವಿಜ ಇವಾ ಮಿನಾತಿ."** [ಋಗ್ವೇದ:- 2.12.5.] ಮೊದಲಾದ ಶ್ರುತಿವಾಕ್ಯಗಳಲ್ಲಿ 'ಶ್ವಘ್ನಿ', 'ವಿಜಃ' ಮೊದಲಾದ ಶಬ್ದಗಳಿಗೆ **'ಜೂಜುಕೋರ'**, **'ಬೇಟೆಗಾರ'** ಮೊದಲಾದ ಅರ್ಥಗಳನ್ನು ಗ್ರಹಿಸಿ, ಅಂತಹವರೊಂದಿಗೆ ಹೋಲಿಸುವ **ಪ್ರಣಾಳಿಯ ಬಗೆಗೆ** ಬಹು ಆಳಕ್ಕಿಳಿದು ಆಲೋಚಿಸಬೇಕಾಗಿದೆ. ಈ ಪ್ರಣಾಳಿ ಬಹು ಪ್ರಾಚೀನವೆಂಬುದೂ ಸತ್ಯ ಆ ಪದಗಳಿಗೆ ಆ ಅರ್ಥಗಳಿವೆ - ಎಂಬುದೂ ಸತ್ಯ ಮತ್ತು ಪ್ರಾಯಶಃ ವೇದಭಾಷ್ಯಕಾರರೆಲ್ಲರೂ ಅಂತಹ ಅರ್ಥಗಳನ್ನೇ ಮಾಡುತ್ತಾ ಬಂದಿದ್ದಾರೆಂಬುದೂ ಅಷ್ಟೇ ಪರಿಪುಷ್ಟವಾದ ವಾಸ್ತವಿಕತೆಯೂ ಅಹುದು. ಅತಿ ಸಾಧಾರಣಸ್ತರದ ಬುದ್ಧಿಗಳನ್ನುಳ್ಳ ಜನರಿಗೂ ಸುಲಭವಾಗಿ ಅರ್ಥವಾಗಲೆಂದು ಭಗವಂತನು ಲೋಕದಲ್ಲಿ ಮಾನವಸಮಾಜದಲ್ಲಿ ದಿನದಿನವೂ ದೃಷ್ಟಿಗೋಚರವಾಗುವ ಘಟನೆಗಳನ್ನೂ ಉಪಮಾನಕ್ಕಾಗಿ ಉಪಯೋಗಿಸಿಕೊಂಡಿದ್ದಾನೆ-ಎಂದು ಈ ಪಕ್ಷವನ್ನು ಸಾಧಿಸುವ ದಿಟ್ಟರಿದ್ದಾರೆ. ಹಾಗೆಯೇ "ವೇದಗಳು ಈಶ್ವರೀಯವಲ್ಲ; ಕೇವಲ ಮಾನವ ಕೃತವಷ್ಟೇ. ಮಾನವನು ಅದೇ ತಾನೇ ಬಾಲವನ್ನು ಕಳಚಿ ಹಾಕಿ, ಕೆನ್ನೆಗಳನ್ನೂ, ತುಟಿಗಳನ್ನೂ, ನಾಲಗೆಯನ್ನೂ ಶಬ್ದೋಚ್ಚಾರಣಕ್ಕೆ ಸಹಾಯವಾಗುವಂತೆ ಮಾಡಿಕೊಂಡು, ಅತಿ ಮಂದಗತಿಯಿಂದ ಮಾನವೀಯ ಸಂಸ್ಕೃತಿಯ ಮೊಟ್ಟಮೊದಲ ಮೆಟ್ಟಲಿನ ಮೇಲೆ ಮೊದಲ ಹೆಜ್ಜೆಯನ್ನಿರಿಸಿದ ಕಾಲದಲ್ಲಿ, ಪ್ರಕೃತಿಯ ಚಿತ್ರ-ವಿಚಿತ್ರ ರೂಪಾತಿಶಯಗಳಿಂದ ಬೆರಗಾಗಿ ಏನೇನೋ ಹಾಡಹತ್ತಿದನು. ಕೃಷಿ-ಕೈಗಾರಿಕೆ ಕುಶಲಕಲೆ - ಯಾವುದರ ಅರಿವೂ ಇಲ್ಲದೆ, ಕೇವಲ ಪ್ರಾಣಿಗಳ ಬೇಟೆಯಾಡಿ, ಹಸಿಯ ಮಾಂಸವನ್ನೇ ಜಗಿದು, ಹಸಿವೆಯನ್ನು ಹಿಂಗಿಸಿಕೊಳ್ಳುತ್ತಾ, ಕಾಲಕಳೆಯಲು ಜೂಜನ್ನಾಡುತ್ತಾ ಚಿಕ್ಕ-ಚಿಕ್ಕ ಗುಂಪುಗಳಲ್ಲಿ ವಾಸಿಸುತ್ತಿದ್ದ ಅನಾಗರೀಕ ಅಸಭ್ಯ ಆದಿಮಾನವರು ಬರೆದ ವೇದಗಳಲ್ಲಿ ಇನ್ನೆಂತಹ ಉಪಮಾನವಿರಲು ಸಾಧ್ಯ ?" - ಎಂದು ಪ್ರಶ್ನಿಸುವವರೂ ಕಡಿಮೆಯಿಲ್ಲ. ತಪ್ಪೋ-ಒಪ್ಪೋ-ಎಂದು ಪ್ರಶ್ನಿಸಬೇಕಾದರೂ ಯಾರೂ ? ಪ್ರಾಚೀನ ನಗರಿ-ಪತ್ತನಗಳ ಹಳ್ಳ-ದಿಣ್ಣೆಗಳ ಅಗೆತದಲ್ಲಿ ಸಿಕ್ಕಿದ ಒತ್ತಿ-ಒತ್ತಿ ಹೆಪ್ಪುಗಟ್ಟಿದ ಪ್ರಾಚೀನ ಪ್ರಾಣ-ಧಾರಿಗಳ ಮೂಳೆಗೂಡುಗಳ ಅವಶೇಷಗಳ ಆಧಾರದ ಮೇಲೆ, ಪೂರ್ಣವಾಗಿ ಸಿಕ್ಕಿದ ಅಸ್ಥಿಪಂಜರಗಳ, ಉಪಲಬ್ಧವಾದ ಭಾಗಕ್ಕೆ, ತಮ್ಮ ಕಲ್ಪನಾಶಕ್ತಿಯ ಸಹಾಯದಿಂದ ಉಪಲಬ್ಧವಾಗದ ಭಾಗಗಳನ್ನು ಊಹಿಸಿ, ರೂಪ ಕೊಟ್ಟು, ಅವುಗಳ ತಳಹದಿಯ ಮೇಲೆಯೇ ಕಟ್ಟಿದ ಡಾರ್ವಿನ್ ಮಹಾಶಯನ ಉತ್ಕ್ರಾಂತಿವಾದ ಅಥವಾ ಉತ್ತರೋತ್ತರ ವಿಕಾಸದ ಸಿದ್ಧಾಂತವನ್ನು ಶತ ಪ್ರತಿಶತ ಅಖಂಡನೀಯ ಸತ್ಯವೆಂದು ದಿಗ್ಗಜ ವಿದ್ವನ್ಮಣಿಗಳೆನ್ನಿಸಿಕೊಂಡ ವಿಜ್ಞಾನಿಗಳು ಒಪ್ಪಿರುವಾಗ, ದೇವಕೃತಿ ದೋಷ ಯುಕ್ತವಾದರೂ ಆದೀತು; ಆದರೆ – ಡಾರ್ವಿನ್ ಮಹಾಶಯನ Theory of evolution ಮೂರು ಕಾಲಕ್ಕೂ ನಿರ್ದೋಷವೇ-ಎಂಬ ನಂಬಿಕೆಯ ಕಗ್ಗಲ್ಲಿನ ಭಾರದಡಿ ಜಜ್ಜಿ ಹೋದ ಮೆದಳುಗಳನ್ನುಳ್ಳ ಆಧುನಿಕ ವಿದ್ವಾಂಸರ ವಾದವನ್ನು ಪ್ರತಿಭಟಿಸುವ ಧೀರ 'ನಿತಾಂತ ನಗ್ನ ನರ-ನಾರಿಯರ ನಡುವೆ ಅರಿವೆಯನ್ನುಟ್ಟವನು ಹುಚ್ಚ'-ಎಂಬ ಗಾದೆಯ ಬಾಣದ ಕೂರಲಗಿಗೆ ಗುರಿಯಾಗುತ್ತಾನೆ. ಆದರೆ, ವೇದಗಳು

ವೇದೋಕ್ತ ತತ್ತ್ವಗಳು ಅತ್ಯಂತ ನವೀನ ವೈಜ್ಞಾನಿಕ ಆವಿಷ್ಕಾರಗಳಿಗಿಂತ ನೂರಾರು ಹೆಜ್ಜೆ ಮುಂದೆಯೇ ಹೊರತು, ಅಂಗುಲದ ಕಲ್ಪನಾತೀತ ಅಣು-ಅಂಶಕ್ಕಿಂತ ಹಿಂದಿಲ್ಲ-ಎಂಬ ಸತ್ಯವನ್ನು ನೇರವಾಗಿಯೇ ಕಂಡುಕೊಂಡಾಗ ಈ ಕ್ರಮಿಕ ವಿಕಾಸವಾದ ಉತ್ತರೋತ್ತರ ಉತ್ಕರ್ಷವಾದ **ಮತ್ತು** "ಅತ್ಯಂತ ಯೋಗ್ಯತಾ **ಯುಕ್ತವಾದುದರ** ಉಳಿಕೆ; ಬೇರೆ ಎಲ್ಲದುದರ ಅಳಿವು" (Survival of fittest and the annihilation of the weak)" Choice of Nature"-ಮೊದಲಾದ ತಳವಿಲ್ಲದ ಉರುಳು ಬಂಡೆಗಳ ಅಪಸಿದ್ಧಾಂತಗಳೆಲ್ಲಾ ಉರುಳಿ ಬೀಳುವುದರಲ್ಲಿ ಸಂದೇಹವಿಲ್ಲ.

ಮಂತ್ರಭಾಷ್ಯದಲ್ಲಿ ಈ ಧೋರಣೆಗಳ ಪೋಷಣೆಗಳೇಕೆ ? - ಎಂಬ ಪ್ರಶ್ನೆ ಸಹಜವಾಗಿಯೇ ಏಳಬಹುದು. ಇದಕ್ಕೆ ಉತ್ತರ ಭಾಷ್ಯದಲ್ಲಿಯೇ ಸಿಕ್ಕಿಹೋಗುವುದು. ಜ್ಞಾನ-ಪೂರ್ವಕವೂ, ಸುಸಂಗಠಿತವೂ, ಸಂಯೋಜಿತವೂ, ಕ್ರಮಬದ್ಧವೂ ಆದ ಈ ವಿಶ್ವದ ರಚನೆ, ಸಂಚಾನೆ, ಖಂಡ-ಪ್ರಳಯ, ಪೂರ್ಣವಿಧ್ವಂಸ ಮೊದಲಾದುವುಗಳ ಹಿಂದೆ ಯಾವುದೋ ಒಂದು ಬೃಹದ್‌ಜ್ಞಾನ - ಭಂಡಾರವೂ ಅಸಮಾನ ಸಾಮರ್ಥ್ಯ ಸಂಪನ್ನವೂ ಆದ ಚೇತನ ಶಕ್ತಿಯ ಅವ್ಯಕ್ತನಿರಂತರ ಕ್ರಿಯೆಯಿದೆ-ಎಂದು ಒಪ್ಪಲಾರದಷ್ಟು ವನೌಷ್ಯವನ್ನು ಎರಡೆರಡು ಕೈಗಳಿಂದಲೂ ಬಾಚಿ ಬಾಚಿ, ಬುರುಡೆಯ ತುಂಬ ತುಂಬಿಕೊಂಡಿರುವವರ ವೈಜ್ಞಾನಿಕತೆಯ ಬಗೆಗೆ ಸಂದೇಹ ಉದ್ಭವಿಸದಿರಲು ಸಾಧ್ಯವಿಲ್ಲ.

ಹೀಗೆ, ಪದರ - ಪದರವಾಗಿ, ತೆಳವು - ತೆಳವಾಗಿ ಸತ್ಯವನ್ನು ಆವರಿಸಿ, ಸಾಧಾರಣ ಜನತೆಗೆ ಅರ್ಥವೇ ಆಗದಷ್ಟು ಬಿಗಿಯಾಗಿ ಸುತ್ತಿಕೊಂಡಿರುವ, ಹೇತುವಾದಕ್ಕೆ ಆಧಾರವೆಂದು ನಿರಾಧಾರವಾಗಿಯೇ ಒಪ್ಪಿಕೊಂಡು ಬಿಡುವ ನಿರ್ಮೂಲವಾದ ಊಹೆಯ (Hypothesis) ಸುರುಳಿಗಳನ್ನು ಕಳಚಿ ಹಾಕುತ್ತಾ ಹೋದರೆ, ವೇದೋಕ್ತ ಶಾಶ್ವತ ತತ್ತ್ವದ ಭವ್ಯ ದರ್ಶನವಾಗಿಯೇ ಆಗುವುದು. ಆಗ ಮಾನವ ಗುರುತಿಸುವನು ಈ ಇಂದ್ರನನ್ನು. ಹೇಳುತ್ತಲಿದೆ ಋಗ್ವೇದ:-"**ಸತ್ಯ ಮಿದ್ವಾ ಉ ತಂ ವಯಮಿಂದ್ರಂ ಸ್ತವಾಮ ನಾನೃತಂ**" [8. 62. 12.] - [ವಯಂ] **ನಾವು,** [ವಾ=ಸ್ಯ] **ನಿಜವಾಗಿಯೂ,** [ಸತ್ಯಂ ಇತ್] **ಸತ್ಯನೇ ಆಗಿರುವ,** [ತಂ ಇಂದ್ರಂ] **ಆ ಇಂದ್ರನನ್ನು,** [ಉ] **ದೃಢರಾಗಿ,** [ಸ್ತವಾಮ] **ಸ್ತುತಿಸೋಣ.** [ಅನೃತಂ] **ಅನೃತನಾದ, ಋತನಲ್ಲದ, ಸತ್ಯನಲ್ಲದ,** [ನ] **ಇಂದ್ರನನ್ನಲ್ಲ."**

ಎಲ್ಲ ಮಂತ್ರಗಳಂತೆಯೇ ಈ ಮಂತ್ರವೂ ಕೂಡ ಮಹಾಮಹಿಮಾನ್ವಿತವೇ ಆಗಿದೆ ಆದರೆ, ಶ್ರೀ ॥ ಮಧ್ವರೇಕೋ ಈ ಮಂತ್ರದ ಮೇಲೆ ಭಾಷ್ಯ ಬರೆಯಲಿಲ್ಲ. ಆದರೆ, ಶ್ರೀ॥ ಮಧ್ವಭಾಷ್ಯವನ್ನು ಕನ್ನಡಿಸಿರುವ ಶ್ರೀ ॥ ತಂತ್ರಿಗಳು - "ಸ್ಪಷ್ಟಾರ್ಥಕವಾದುದರಿಂದ ಈ ಋಕ್ಕನ್ನು ಭಾಷ್ಯಕಾರರು ವ್ಯಾಖ್ಯಾನ ಮಾಡಲಿಲ್ಲ." - ಎಂದಿಷ್ಟೇ ಹೇಳಿ, ಕಥೆಯನ್ನು ಮುಗಿಸಿಬಿಟ್ಟಿದ್ದಾರೆ.

ಶ್ರೀ II ಸಾಯಣರ ಭಾಷ್ಯದಲ್ಲಿಯೂ ವೈಶಿಷ್ಟ್ಯವೇನೂ ಕಾಣಿಸುತ್ತಿಲ್ಲ. **"ತು ಶಬ್ದಃ ಕ್ಷಿಪ್ರಾರ್ಥೋ ನಿಪಾತಃ। ಹೇ ಸಖಾಯಃ ಋತ್ವಿಜಃ ಕ್ಷಿಪ್ರ ಮಸ್ಮಿನ್ ಕರ್ಮಣಿ ಆಗಚ್ಛತಾಗಚ್ಛತ। ಆಗತ್ಯ ಚ ನಿಷೀದತ। ಉಪವಿಶತ। ಉಪವಿಶ್ಯ ಚೇಂದ್ರಮಭಿ ಪ್ರಗಾಯತ। ಸರ್ವತಃ ಪ್ರಕರ್ಷೇಣ। ಸ್ತುತ ಕೀದೃಶಾಃ ಸಖಾಯಃ? ಸ್ತೋಮವಾಹಸಃ। ಸ್ತೋಮಂ ವಹಂತೀತಿ ಸ್ತೋಮವಾಹಸಃ "** - "ತು"- ಎಂಬ ಪದ ಬೇಗ -ಎಂಬರ್ಥವನ್ನು ಹೊಂದಿದೆ. ಹೇ ಸಖರೇ ! ಋತ್ವಿಕ್ಕುಗಳೇ ! ಬೇಗ ಈ ಕರ್ಮದಲ್ಲಿ ಸೇರಲು ಬನ್ನಿರಿ, ಬನ್ನಿರಿ. ಬಂದು ಕುಳಿತುಕೊಳ್ಳಿರಿ. ಕುಳಿತುಕೊಂಡು, ಇಂದ್ರನನ್ನು ಎಲ್ಲೆಡೆಯಿಂದಲೂ ಪ್ರಕೃಷ್ಟರೀತಿಯಿಂದ ಸ್ತುತಿಸಿರಿ. ಎಂತಹ ಸಖರು? ಸ್ತೋಮವಾಹಕರಾದವರು. **ಸ್ತೋಮಾನಸ್ಮಿನ್ ಕರ್ಮಣಿ ವಹಂತಿ ಪ್ರಾಪಯಂತೀತಿ.** "ಸ್ತೋಮಗಳನ್ನು ಈ ಕರ್ಮದಲ್ಲಿ ವಹಿಸುವವರು" ಎಂದು ಹೇಳಿ, ಮುಗಿಸಿಬಿಟ್ಟಿದ್ದಾರೆ ಈ ಮಂತ್ರದ ಭಾಷ್ಯವನ್ನು. "ಬಂದು ಕುಳ್ಳಿರಿ; ಕುಳಿತು ಸ್ತುತಿಸಿರಿ." - ಎಂಬೀ ಕಥನಗಳಿಗೆ ತೂಕ ಸಾಲದು - ಎನಿಸುತ್ತದೆ. ನಿಂತೋ, ಮಲಗಿಯೋ ಕೂಡ ಸ್ತುತಿಸಬಹುದು. ಆದರೆ, ಯಜ್ಞಶಾಲೆಗೆ ಬಾರದೇ ಕುಳಿತುಕೊಂಡಾರೇನು?

ಶೈಥಿಲ್ಯಕ್ಕೆ ಕಾರಣವಿಲ್ಲದೇ ಇಲ್ಲ. ಈ ಮಂತ್ರದಲ್ಲಿನ **"ಆ, ತು, ಆ, ಇತ, ನಿ, ಅಭಿ, ಪ್ರ, ಸ್ತೋಮವಾಹಸಃ"** -ಇಷ್ಟು ನಿಪಾತಗಳಿಗೂ, ಶಬ್ದಗಳಿಗೂ ಮೇಲೆದ್ದು ಕಾಣುವುದಕ್ಕಿಂತ ಹೆಚ್ಚು ಗಂಭೀರವಾದ, ಆಧ್ಯಾತ್ಮಿಕಪ್ರಪಂಚಕ್ಕೆ ಸಾಧಕರನ್ನು ಆಕರ್ಷಿಸುವ ನಿಹಿತವಾದ ಅರ್ಥಗಳಿವೆ. ಅವನ್ನು ಗ್ರಹಿಸದೆ, ಮಂತ್ರದ ಮಹತ್ತ್ವವನ್ನು ಮನದಟ್ಟಾಗಿ ಮಾಡಿಕೊಳ್ಳಲು ಸಾಧ್ಯವೇ ಇಲ್ಲ.

ಈ ದಿಕ್ಕಿನಲ್ಲಿ ಮಹರ್ಷಿ ದಯಾನಂದರ ಆರ್ಷದೃಷ್ಟಿ ನಿಖರವಾಗಿ ಮೆರುಗುತ್ತಿದೆ. ಈ ಮಂತ್ರಸ್ಥವಾದ, ಪ್ರತಿಪಾದ್ಯ ವಿಷಯವಾದ, ದೇವತೆಯಾದ **'ಇಂದ್ರ'** ಎಂಬ ಶಬ್ದದಿಂದ ಮಹರ್ಷಿಗಳು ಪರಮಾತ್ಮ ಮಾತ್ರವಲ್ಲದೆ, ಭೌತಿಕವಾಯುವನ್ನೂ ಕೂಡ ಗ್ರಹಿಸಿದ್ದಾರೆ. ಶಬ್ದ - ಶಬ್ದವೂ ವಾಯುವಿನ ಗುಣಸೂಚಕ ವಿಶೇಷಣಗಳಾಗಿ ಹೊಂದಿಕೊಂಡು ಹೋಗುತ್ತದೆ. ಆದರೂ, ಈ ಮಂತ್ರದ ಮುಖ್ಯ ಆಶಯ ವಿರಾಟ್ ಚೇತನನಾದ ಪರಮಾತ್ಮನ ಕಡೆಗೆ ಮಾನವನನ್ನು ಅವನ ಜೀವನದ ಸಮಸ್ತ ಕ್ಷೇತ್ರಗಳೊಂದಿಗೆ ಹಾಗೂ ಬಾಳಿನ ಕ್ಷಣ - ಕ್ಷಣದೊಂದಿಗೆ ತಿರುಗಿಸುವುದೇ ಆಗಿದೆ - ಎಂಬುದು ಈ ಮಂತ್ರದಲ್ಲಿನ ಪ್ರತಿಯೊಂದು **ನಿಪಾತ**ದಿಂದಲೂ (ಅಭಿ, ಪ್ರ, ಆ - ಮೊದಲಾದ ಅವ್ಯಯಗಳು) ಅಭಿವ್ಯಕ್ತವಾಗುತ್ತಿದೆ.

ಯಾವ ಇಂದ್ರನನ್ನು ಸ್ತುತಿಸಲು ಈ ಮಂತ್ರ ಋತ್ವಿಕ್ಕುಗಳಿಗೆ ಆದೇಶ ನೀಡುತ್ತಿದೆಯೋ, ಅವನ ಸ್ವರೂಪದ ಬಗೆಗೆ ನಾಲ್ಕಾರು ಮಾತುಗಳನ್ನು ದೃಕ್ - ಪಥದಿಂದ ನುಸುಳಿ ಹೋಗಲು ಬಿಡದಿನ ರೆ. ಪಾಠಕರು ಈ ಮಂತ್ರದ ಮರ್ಮವನು

ಸ್ಪರ್ಶಿಸಲು ಸುಲಭವಾಗಿ ಮಾರ್ಗವನ್ನು ಕಂಡುಕೊಳ್ಳುವರು. ಈ ಇಂದ್ರನು ಪರಮಾತ್ಮನೇ ಎಂಬಂಶ ನಿಶ್ಚಿತವೇ ಸರಿ. ಆದರೂ, ಈ ಮಂತ್ರದ ವೈಶಿಷ್ಟ್ಯವನ್ನರಿಯಲು ನಿಮ್ನ-ಲಿಖಿತ ಲಕ್ಷಣಗಳು ಪರಮ ಸಹಾಯಕವಾದಾವು.

ಶತಪಥ ಬ್ರಾಹ್ಮಣವು [2 1. 2. 11] **"ಇಂದ್ರೋವೈ ಯಜಮಾನಃ** "ಇಂದ್ರನು ವಸ್ತುತಃ ಯಜಮಾನನು; ಯಜ್ಞಕರ್ತೃವು" - ಎನ್ನುತ್ತಿದೆ. ಈ ಚರಾಚರ - ಚೇತನಾಚೇತನ ಜಗತ್ತಿನ ಸಂಚಾಲನವು ಒಂದು ವಿರಾಡ್ಯಜ್ಞ; ಬೃಹದಧ್ವರ. ವ್ಯಕ್ತಿ - ವ್ಯಕ್ತಿಯ ದೇಹದಲ್ಲಿಯೂ ಜನನದಿಂದಾರಂಭಿಸಿ ಮರಣಪರ್ಯಂತ ಒಂದು ಯಜ್ಞವೇ ನಡೆದಿದೆ; ಅದು ವಿರಾಟ್ ಚೇತನನ ಬೃಹದ್ಯಜ್ಞದ ಒಂದು ಪುಟ್ಟ ಪ್ರತೀಕವಷ್ಟೇ. "ಯಥಾ ಬ್ರಹ್ಮಾಂಡೇ ತಥಾ ಪಿಂಡೇ, ಯಥಾ ಪಿಂಡೇ ತಥಾ ಬ್ರಹ್ಮಾಂಡೇ. "ಬ್ರಹ್ಮಾಂಡದಲ್ಲೆಂತೋ, ವ್ಯಕ್ತಿಯಲ್ಲಿಯೂ ಅಂತೇ; ವ್ಯಕ್ತಿಯಲ್ಲೆಂತೋ ಬ್ರಹ್ಮಾಂಡದಲ್ಲಿಯೂ ಅಂತೆಯೇ." ಈ ಮೂಲಸೂತ್ರ ಒಂದು ಸಾಧಕನಿಗೆ, ಆರಾಧಕನಿಗೆ ನೆನಪಿದ್ದರೆ, ಮಾನವ ಜೀವನದ ಸಾಫಲ್ಯ- ಸಂಪಾದನ ಅತಿ ಸುಕರವಾದೀತು. ಬ್ರಹ್ಮಾಂಡದಲ್ಲಿ ಯಾವ ಪ್ರಾಕೃತಿಕ ತತ್ತ್ವಗಳು ಕಾರ್ಯ ನಡೆಸುತ್ತಿವೆಯೋ ಅವೇ- ವ್ಯಕ್ತಿ ವ್ಯಕ್ತಿಯ ಶರೀರವಲ್ಲಿಯೂ ಕಾರ್ಯನಡೆಸುತ್ತಿವೆ. ಬ್ರಹ್ಮಾಂಡ ಯಜ್ಞದ ಯಜ್ಞಕರ್ತೃ ಸ್ವಯಂ ಸರ್ವವ್ಯಾಪಕ-ಸರ್ವಜ್ಞ, ನಿರಾಕಾರ-ನಿರ್ವಿಕಾರ ಪರಬ್ರಹ್ಮ; ಅದು ಪ್ರಾಪ್ತಸರ್ವಸ್ವವಾದ ಕಾರಣ, ತನ್ನ ಸ್ವಾರ್ಥಸಾಧನೆಗಾಗಿ ಬ್ರಹ್ಮಾಂಡಯಜ್ಞವನ್ನು ನಡೆಯಿಸುತ್ತಿಲ್ಲ; ಆದರೆ ಪರಿಚ್ಛಿನ್ನ-ಅಲ್ಪಜ್ಞ, ಸ್ವರೂಪತಃ ನಿರಾಕಾರನಾದರೂ ಸಾಕಾರ ಶರೀರಧಾರಿಯೂ, ಅಲ್ಪಜ್ಞತ್ವದ ಪರಿಣಾಮವಾಗಿ ಆಗಾಗ ಸವಿಕಾರನಾಗುತ್ತಿರುವವನೂ ಆದ ಅಣುಚೇತನನು ಅಪ್ರಾಪ್ತವಾದುದರ ಪ್ರಾಪ್ತಿಗಾಗಿಯೂ, ಪ್ರಾಪ್ತವಾಗಿರುವ ಬೇಡವಾದುದನ್ನು ದೂರೀಕರಿಸಲಿಕ್ಕಾಗಿಯೂ ಶರೀರದಲ್ಲಿದ್ದು ತನ್ನ ಪುಟ್ಟಯಜ್ಞವನ್ನು ನಡೆಯಿಸುತ್ತಾನೆ- **ಯಜ್ಞಮಯೋಽಯಂ ಪುರುಷಃ**" ಎಂದು ಉಪನಿಷತ್ಕಾರರೆಂದಾಗ, ಅವರ ಹೃದಯಾಂತರಾಳದಲ್ಲಿ ದನಿಗುಡುತ್ತಿರುವ ಭಾವನೆಯಿದೇ. "ಸಮಾನಶೀಲ ವ್ಯಸನೇಷು ಸಖ್ಯಂ" - ಎಂದು ಕವಿ ಧ್ವನಿವೊಳಗಿಸಿದಾಗ, ಗುಣ - ಸಾದೃಶ್ಯದತ್ತಲೇ ಅವನ ಭಾವನೆ ಓಲಿರುವುದು. ಒಂದೇ ಬಗೆಯ ಶೀಲ, ನಡೆ – ನುಡಿ, ಭಾವನೆಯುನ್ನುಳ್ಳವರ ನಡುವೆ ಸಖ್ಯ ಸುಲಭವಾಗಿ ಸಿದ್ಧಿಸುವುದು. ಇದು ಆಲಿಸಿದ ಮಾತಲ್ಲ; ಕಲ್ಪಿಸಿಕೊಂಡ ಸ್ಥಿತಿಯಲ್ಲ, ಇದು ವಾಸ್ತವಿಕತೆ. **"ಇಂದ್ರೋವೈ ಯಜಮಾನಃ**" ಎಂದಿಷ್ಟೇ ಹೇಳಿ ಮುಗಿಸಲಿಲ್ಲ, ಬ್ರಾಹ್ಮಣಗ್ರಂಥಕಾರರು. **"ಇಂದ್ರೋ ಯಜ್ಞಸ್ಯ ನೇತಾ"** [ಶ. 4. 1. 2. 15.] - "ಇಂದ್ರನು ಯಜ್ಞದ ನಾಯಕನು." **"ಇಂದ್ರೋ ಯಜ್ಞಸ್ಯಾತ್ಮೇಂದ್ರೋದೇವತಾ"** [ಶತ:- 9. 5. 1. 33 ] "ಇಂದ್ರನು ಯಜ್ಞದ ಆತ್ಮನು; ಇಂದ್ರನೇ (ಯಜ್ಞದ ಗುರಿಯಾದ) ದೇವತೆ" - ಎಂದಾಗಲೇ ಅವರ ಹೃದಯತಳದಲ್ಲಿ ಶಾಂತಿಯ ತೆಳು ತೆರೆಯೊಂದು ಮೂಡಿರಬೇಕು. ಸಾಯಣರು "ಸಂಪೂರ್ಣ ವೇದಗಳ ವಿನಿಯೋಗ ಯಜ್ಞಕ್ಕಾಗಿಯೇ."–ಎನ್ನುವಾಗ, "ಮಾನವನ ಜೀವನ, ಯಜ್ಞದಿಂದಲೇ ಕ್ಷಣ–ಕ್ಷಣವೂ ಸಾಮರ್ಥ್ಯಪಡೆದುದಾಗಿರಬೇಕು; ಯಜ್ಞದಲ್ಲಿಯೇ ಸಾಫಲ್ಯ ಕಂಡುಕೊಳ್ಳಬೇಕು." - ಎಂಬ ಭಾವನೆ ಸೂಸುತ್ತಾರೆಂದು ಸಂಶಯದ ಅತ್ಯಂತ ಕ್ಷೀಣವಾದ ರೇಖೆಯೂ

ಇಲ್ಲದಂತೆ ಸಿದ್ಧಪಡಿಸಲು ಸಾಧ್ಯವಿದ್ದಲ್ಲಿ ನಿಜವಾಗಿ ಅವರ ಕೃತಿ ಅವರದಾಗಿ ಮಾತ್ರ ಉಳಿಯದೆ ಅಮರವಾಗಿ ಹೋಗುತ್ತಿತ್ತು. ಆದರೆ, ಅವರ ರಚನೆಯಲ್ಲಿ ಕೇವಲ ಕರ್ಮಕಾಂಡದ ಹೊರಗಣ ಹೊದಿಕೆಯೇ ಕಾಣುತ್ತಿದೆಯೇ ಹೊರತು, ಕರ್ಮಕಾಂಡಕ್ಕೆ ದೃಢವಾದ ತಳಹದಿಯಾದ ಜ್ಞಾನಕಾಂಡದ ಜ್ಞಾನಕಾಂಡ-ಕರ್ಮಕಾಂಡಗಳ ಸರಸ ಸಮುಚ್ಚಯ ಸಾಧಕವಾದ ಉಪಾಸನಾಕಾಂಡದ ನೆರಳೂ ಕೂಡ ಕಾಣದಿರುವುದು, ನಮ್ಮ ದೌರ್ಭಾಗ್ಯವಷ್ಟೇ. ಏಕೆಂದರೆ, ಅದು ನಮ್ಮ ಶಾಶ್ವತ ಶಾಸ್ತ್ರವಾದ, ಮಾನವಮಾತ್ರರ ಸರ್ವಾಂಗೀಣ ಸಮುತ್ಥಾನಕ್ಕೆ ನಿಶ್ಚಿತಪಥ ಪ್ರದರ್ಶಕವಾದ ವೇದಗಳನ್ನು ನಾನಾ ಬಾಹ್ಯಕ್ರಿಯಾಕಲಾಪಗಳ ಪ್ರದರ್ಶಕ ಮಾತ್ರವಾದ ಕೈಗನ್ನಡಿಯಂತೆ ಜಗತ್ತಿನೆದುರಿಗಿಟ್ಟು, ಸರ್ವಕಾಲಕ್ಕೂ, ಸರ್ವದೇಶಗಳಿಗೂ, ಸರ್ವಮಾನವರಿಗೂ ಏಕಪ್ರಕಾರವಾದ ಅಭ್ಯಂತರ-ಬಾಹ್ಯಜ್ಯೋತಿಯನ್ನೆರಚುವ ಆ ಬೃಹದ್ದೀಪ - ಸ್ತಂಭಗಳನ್ನು ಯಾರ ಗೌರವಕ್ಕೂ ಪಾತ್ರವಾಗದ, ಸರ್ವಥಾ ನಿರರ್ಥಕವಾದ ಶಬ್ದರಾಶಿಯ ರೂಪದಲ್ಲಿ ಕಂಡುಬರುವಂತೆ ಮಾಡಿಟ್ಟು ಹೋಗಿದ್ದಾರೆ. **"ಇಂದ್ರನು ನಿಜವಾಗಿ ಯಜ್ಞದ ಯಜಮಾನ; ಇಂದ್ರನು ಯಜ್ಞದ ನೇತೃ; ಇಂದ್ರನು ಯಜ್ಞದ ಆತ್ಮ; ಇಂದ್ರನೇ ಯಜ್ಞದಿಂದ ಸಾಕ್ಷಾತ್ಕೃತನಾಗಬೇಕಾದ, ಯಜ್ಞದ ಸಾಧ್ಯನಾದ ಪ್ರಾಪ್ತಿ ಯೋಗ್ಯ ತತ್ತ್ವ.**" ಕೇವಲ ಬಾಹ್ಯ ಆಡಂಬರಾತ್ಮಕವಾದ, ಯಜ್ಞವಲ್ಲದ, ಅದನ್ನೂ ಯಜ್ಞವೆಂದು ಕರೆಯಲ್ಪಟ್ಟ ಕ್ರಿಯಾಕಲಾಪಗಳಲ್ಲಿ, ಸೋಮಲತಾರಸವನ್ನು ಕುಡಿಯಲು ಕರೆಯಲ್ಪಡುವ ಅವರ ಇಂದ್ರನೂ, "**ಇಂದ್ರೋವೈ ದೇವಾನಾಮೋಜಿಷ್ಠೋ ಬಲಿಷ್ಠಃ ಸಹಿಷ್ಠಃ ಸತ್ತಮಃ ಪಾರಯಿಷ್ಣುತಮಃ**" [ಐತ:- 7.16.8.12.]- "ಇಂದ್ರನು ವಾಸ್ತವವಾಗಿ ಸರ್ವಾಧಿಕ ಓಜಸ್ವೀ; ಸರ್ವಾಧಿಕ ಬಲಸಂಪನ್ನ; ಸರ್ವಾಧಿಕ ಕ್ಷಮಾಗುಣಪರಿಪೂರ್ಣ; ಸತ್ಯಗಳೆಲ್ಲದರ ಮಹತ್ತಮ ಸತ್ಯ; ಸಂಸಾರಸಾಗರದ ಉನ್ಮಾದಕರ ಭ್ರಮದ ಸುಳಿಯಿಂದ ಸಂಸಾರಿ ಜೀವರನ್ನು ಪಾರುಗಾಣಿಸುವವರಲ್ಲೆಲ್ಲಾ ಅತ್ಯಂತ ಸಾಮರ್ಥ್ಯಸಂಪನ್ನ." - ಎಂದು ಋಷಿಮುನಿಗಳು ಗುರುತಿಸಿದ ವಿರಾಡಾತ್ಮನಲ್ಲಿ "ನೂರು ಯಾಗಗಳನ್ನೆಸಗಿ, ಶತಕ್ರತುವೆನಿಸಿಕೊಂಡು ಇಂದ್ರಪದವಿಗೇರುವ ಅದಾವನೋ ಒಬ್ಬ ವಿಶಿಷ್ಟದೇವತೆ" - ಈ ಬಗೆಯ ಭಾಷ್ಯ, ಬುದ್ಧಿಪೂರ್ವಕವೂ ಮಾನವಮಾತ್ರರಿಗೆ ಮಹೋನ್ನತ ಧ್ಯೇಯವನ್ನು ಸಾಧಿಸಲು ಪೂರ್ಣತಃ ಅಸಂದಿಗ್ಧವಾದ ಸಹಾಯವನ್ನೊದಗಿಸುವಂತಹುದು ಆದ ವೇದ ಚತುಷ್ಟಯಕ್ಕೆ ಅಪಚಾರ ಮಾಡಬಲ್ಲುದೇ ಹೊರತು ಯಾವ ವಿಚಾರಶೀಲರ ಹೃದಯಗಳಲ್ಲಿ ಗೌರವವನ್ನು ಪ್ರಚೋದಿಸಲಾರದು. ಇದು ಕಹಿಯಾದ ಸತ್ಯ. ಕಹಿಯಾದರೂ ಸತ್ಯ ಸತ್ಯವೇ; ಸಿಹಿಯಾದರೂ ಸತ್ಯ ಸತ್ಯವೇ.

ಭಗವಂತನನ್ನು ಕುರಿತು ಮಾಡಿದ ಯಜ್ಞ ಯಜ್ಞವೇ ಅಲ್ಲ ಏಕೆಂದರೆ ಯಜ್ಞದ ಆತ್ಮನನ್ನೇ ಮರೆತಾಗ, ಆತ್ಮಹೀನ ಜಡಶರೀರದಂತೆಯೇ, ಅಂತಹ ಯಜ್ಞವೂ ಆತ್ಮರಹಿತ, ಅದೇ ಕಾರಣದಿಂದ ಶವಸದೃಶ, ಅದರಿಂದ, ಮಾನವರಿಗೇನು ಲಾಭ ? ಧನದ, ಬಲದ, ಕಾಲದ ಮತ್ತು ವಿಶ್ಲೇಷಣ - ವಿವೇಚನ - ಮನನದ ಅಪವ್ಯಯ ಮಾಡಬೇಕಾಗಿದ್ದರೆ ಮಾತ್ರ, ಪರಮಾತ್ಮನ ಜ್ಞಾನ - ಧ್ಯಾನ - ಚಿಂತನಗಳನ್ನು ಬದಿಗೊತ್ತಿ, ಬೆಂಕಿಗೆ ಬಹುಬೆಲೆಯ, ಬಗೆಬಗೆಯ ಸರಕುಗಳನ್ನು ಸುರಿಯಬೇಕು, ಅಷ್ಟೇ. ಈ ಬಗೆಯ ನಾಮಮಾತ್ರದ ಯಜ್ಞ

ಇಹಕ್ಕೂ ಸಲ್ಲದು; ಪರಕ್ಕೂ ಸಲ್ಲದು. **"ಯಜ್ಞೋಽಪಿ ತಸ್ಯೈ ಜನತಾಯೈ ಕಲ್ಪತೇ, ಯತ್ರ ಹೋತಾ ವಿದ್ವಾನ್ ಭವತಿ"**-"ಎಲ್ಲಿ ಹೋತೃವು, ಯಜ್ಞಕರ್ತೃವು, ವಿದ್ವಾಂಸನಾಗಿರುತ್ತಾನೋ, ಅಲ್ಲಿ ನಡೆಯುವ ಯಜ್ಞಕರ್ತೃವಿನ ಯಜ್ಞವೇ ಜನತೆಗೆ ಸಲ್ಲುತ್ತದೆ." - ಉಪಕಾರಕವಾಗುತ್ತದೆ, ಎಂಬ ಆರ್ಷವಾಕ್ಯವನ್ನು ಮರೆತರೆ, ನಾವು ನಾಮ ಮಾತ್ರಕ್ಕೆ ಮಾನವರಾಗಿ ಉಳಿದೇವು; ವಸ್ತುತಃ ನಾವು ತಿನ್ನುವುದರ ಮೂರು,ಮೂರರಷ್ಟು ಖಾದ್ಯವನ್ನು ನಾಶ ಪಡಿಸುವ ಮಂಗಗಳೇ ಆಗಿ ಹೋದೇವು. ಚಾರ್ಲ್ಸ್ ಡಾರ್ವಿನ್ನನ ವಿಕಾಸ ವಾದದ ಅಪಸಿದ್ಧಾಂತಕ್ಕೆ ನಮ್ಮ ಪಾಲಿನ ಅತ್ಯುದಾರ ಕಾಣಿಕೆಯನ್ನು ಸಲ್ಲಿಸಿಯೇವು.

ಹೀಗೆ ಎಂದಿಗೂ ಆಗಬಾರದು-ಎಂಬುದು ವೇದಗಳ ನಿರ್ದಿಷ್ಟವಾದ, ಉತ್ಕೃಷ್ಟವಾದ ನಿಲುವಾಗಿದೆ. "ನಮ್ಮ ಶಾಶ್ವತ ಪಿತೃವಾದ, ಶಾಶ್ವತೀ ಮಾತೆಯಾದ ಭಗವಂತ ಯಜ್ಞದ ಯಜಮಾನ; ಇಂದ್ರನು ಯಜ್ಞದ ಆತ್ಮ; ನಿರಂತರ ನಾಯಕ." ಎಂಬ ಆರ್ಷವಾಕ್ಯಗಳು, "ನಾವೂ ಆ ಭಗವಂತನಂತೆಯೇ ಯಜ್ಞಕರ್ತೃಗಳಾಗಿರಬೇಕು; ಯಜ್ಞ ನಾಲಗೆಯ ತುದಿಯ ಮೇಲೆ ತೂಗಾಡುವ ನೆಲೆ - ನೆಲೆ-ಬೆಲೆ-ಯಾವುದೂ ಇಲ್ಲದ ಒಣಮಾತು ಮಾತ್ರವಲ್ಲ. ನಮ್ಮ ಜೀವನದ ಪ್ರತಿಯೊಂದು ಕ್ಷಣದಲ್ಲಿಯೂ, ಪ್ರತಿಯೊಂದು ಕ್ಷೇತ್ರದಲ್ಲಿಯೂ ಹಾಸು ಹೊಕ್ಕಾಗಿ ಹೊಸೆದು ಬಂದ ಹಸನಾದ ಹುಸಿಯಲ್ಲದ ಅವಿಭಾಜ್ಯ ತತ್ತ್ವವಾಗಿ ಇಳಿದು ಬರಬೇಕು; ಬೆಳೆದು, ಬಲಿತು, ನಮ್ಮನ್ನು ಬಲಿಷ್ಠರನ್ನಾಗಿಸಬೇಕು. ಇದೇ ದೃಷ್ಟಿಬಿಂದು ನಮ್ಮ ಜೀವಿತದ ಮಧ್ಯಬಿಂದುವಾಗಿ ಮೆರೆಯಬೇಕು. ಆಲಿಸೋಣ:-

**ಯಜ್ಞೋ ಹಿ ತ ಇಂದ್ರ ವರ್ಧನೋ ಭೂದುತ ಪ್ರಿಯಃ ಸುತಸೋಮೋ ಮಿಯೇಧಃ ।**
**ಯಜ್ಞೇನ ಯಜ್ಞಮವ ಯಜ್ಞಿಯಃ ಸನ್ ಯಜ್ಞಸ್ತೇ ವಜ್ರಮಹಿಹತ್ಯ ಆವತ್ ॥**
[ಋಗ್ವೇದ:- 3. 32. 12]

"[ಇಂದ್ರ] ಓ ಇಂದ್ರಿಯವಾನ್ ಜೀವ! [ಯಜ್ಞಃಹಿ] ಕೇವಲ ಯಜ್ಞ ಮಾತ್ರ, [ತೇ] ನಿನ್ನ, [ವರ್ಧನಃ] ಅಭಿವೃದ್ಧಿ ಸಾಧಕವೂ, [ಉತ] ಹಾಗೂ [ಪ್ರಿಯಃ] ಪ್ರಿಯವೂ, ಹಿತಕಾರಿಯೂ, [ಸುತಸೋಮಃ] ವಿವೇಕದಿಂದ ಹಿಂಡಿ ತೆಗೆದ ಭಗವದಾನಂದ ರಸಯುಕ್ತವೂ, [ಮಿಯೇಧಃ] ಔದಾರ್ಯಪ್ರೇರಕವೂ, ಮಿಥ್ಯಾಪಸಿದ್ಧಾಂತಗಳ ಧರ್ಷಕವೂ, [ಭೂತ್] ಆಗಿರುತ್ತದೆ. [ಯಜ್ಞಿಯಃ ಸನ್] ಸ್ವತಃ ಯಜ್ಞಕರ್ತೃವಾಗಿ [ಯಜ್ಞೇನ] ಯಜ್ಞದಿಂದಲೇ [ಯಜ್ಞಂ ಅವ] ಯಜ್ಞವನ್ನು ರಕ್ಷಿಸಿಕೊಂಡು ಹೋಗು [ಅಹಿಹತ್ಯೇ] ಕೊಂಕುತನದ ಕೊಲೆಯಲ್ಲಿ, [ತೇ ವಜ್ರಂ] ನಿನ್ನ ವಜ್ರಾಯುಧವಾಗಿ, ಪಾತಕ ವಿದಾರಕವಾಗಿ, ತಾಪವನ್ನು ವರ್ಜನೆ ಮಾಡಿಸುವಂತಹುದಾಗಿ, [ಯಜ್ಞಃ] ಯಜ್ಞವೇ [ಆವತ್] ಸಂರಕ್ಷಿಸುತ್ತದೆ."

ಉದ್ದುದ್ದವಾದ ಭಾಷಣಗಳನ್ನು ಮಾಡಿ, ಆಡಂಬರಮಯವಾದ ಬಾಹ್ಯ ಕ್ರಿಯಾ ಕಲಾಪಗಳ ವಿಜೃಂಭಣೆಯಿಂದ ಯಾರೂ ಯಜ್ಞವನ್ನು-ಶುಭ ಕರ್ಮಗಳನ್ನು ರಕ್ಷಿಸಲಾರರು

"ಯಜ್ಞೇನ ಯಜ್ಞಂ ಅವ"–"ಯಜ್ಞದಿಂದಲೇ ಯಜ್ಞವನ್ನು ರಕ್ಷಿಸು." – ಎಂಬ ವೇದದ ಕರೆ ವೇದೋಕ್ತ ಜೀವನ ಪಥದ ದಿಗ್ದರ್ಶಕ ಪಟಲ (Board) ವಾಗಿದೆ. ಅಷ್ಟು ಮಾತ್ರ ವಲ್ಲ; ಈಗಿನ ಸರಕಾರೀ ಅಧಿಕಾರಿಗಳಂತೆ, ಅಥವಾ, ಆರ್ಥಿಕ ದೃಷ್ಟಿಯಿಂದ ಅನುಕೂಲಕರ ವಾದ ಸ್ಥಿತಿಯಲ್ಲಿರುವ ಭದ್ರಪುರುಷರಂತೆ, ಅರ್ಚಕರಿಗೋ, ಪುರೋಹಿತರಿಗೋ ಮಾಸಿಕ– ವೇತನ ಕೊಟ್ಟು-"ಸ್ವಾಮೀ ! ಪೂಜಾ ಪಾಠಗಳನ್ನು ಮಾಡಿಕೊಂಡು ಹೋಗಿರಿ. ದಕ್ಷಿಣೆ ತಮ್ಮ ಕಿಸೆಯಲ್ಲಿರಲಿ: ಪುಣ್ಯ ಮಾತ್ರ ಸ್ವರ್ಗದಲ್ಲಿರುವ ನಮ್ಮ ಪ್ರತ್ಯೇಕ ರಿಜಿಸ್ಟರಿನಲ್ಲಿ ಜಮಾ ಆಗುತ್ತಾ ಹೋಗಲಿ." ಎಂಬ ನಿಲುವನ್ನಂಗೀಕರಿಸಿ, ಯಜ್ಞ - ಪೂಜಾದಿಗಳನ್ನು ಯಾರಾದರೂ ನಡೆಯಿಸಿಕೊಂಡು ಹೋಗಲಿ. ನಾವೂ ನಮ್ಮ ವಂತಿಕೆಯನ್ನು, ಆಹುತಿ ಯನ್ನು ಅರ್ಪಿಸುತ್ತಾ ಹೋಗುತ್ತೇವೆ." ಎಂಬ, "**Virtuous deeds by proxy**" ಎಂದೆನಿಸುವ ಮಿಥ್ಯಾತತ್ತ್ವದ ಅನುಷ್ಠಾನವನ್ನು ವೇದಗಳು ಒಪ್ಪುವುದಿಲ್ಲ. "**ಮಾಽಹಂ ರಾಜನ್ ಅನ್ಯ ಕೃತೇನ ಭೋಜಂ.**" (ಋಗ್ವೇದ:- 2. 28. 9.) "ಓ ಜಗಚ್ಛಾಸಕ ! ಅನ್ಯರ ದುಡಿಮೆಯಿಂದ ನಾನು ಉಣ್ಣುವ ಗತಿ ಬಾರದಿರಲಿ."-ಎಂಬ ಮರ್ಮಸ್ಪರ್ಶೀ ಆತ್ಮ ನಿವೇದನವನ್ನು ಋಗ್ವೇದ ಪ್ರತಿಯೊಬ್ಬನ ಬಾಯಿನಿಂದಲೂ ಹೊರಡಿಸುತ್ತದೆ "ನೀನೇ ದುಡಿ; ನೀನೇ ಭುಂಜಿಸು."-ಎಂಬ ಪಲ್ಲವಿ ಸದಾ ವೇದಾನುಯಾಯಿಗಳ ನಾಲಗೆಗಳ ಮೇಲೆ ಮಾತ್ರವಲ್ಲ; ಹೃದಯಾಂತರಾಳದಲ್ಲಿಯೂ ಮೊಳಗುತ್ತಿರಬೇಕು. ಫಲ ಭೋಕ್ತೃವಾರು ? ವಿರಾಟ್ ಪ್ರಶ್ನೆಯಿದು.

**ಸೇದಗ್ನೇ ಅಸ್ತು ಸುಭಗಃ ಸುದಾನುರ್ಯಸ್ತ್ವಾ ನಿತ್ಯೇನ ಹವಿಷಾ ಯ ಉಕ್ಥೈಃ ।**
**ಪಿಪ್ರೀಷತಿ ಸ್ವ ಆಯುಷಿ ದುರೋಣೇ ವಿಶ್ವೇದಸ್ಮೈ ಸುದಿನಾ ಸಾಸ ದಿಷ್ಟಿಃ ॥**
[ಋಗ್ವೇದ:- 4. 4. 7. ]

"[ಅಗ್ನೇ] ಓ ಜ್ಯೋತಿರ್ಮಯ ! [ಯಃ] ಯಾವನು, [ತ್ವಾ] ನಿನ್ನನ್ನು, [ನಿತ್ಯೇನ ಹವಿಷಾ] ನಿರಂತರವಾದ ಸದಾದಾನ-ಸತ್ಪ್ರದಾನಗಳಿಂದ, [ಯಃ] ಯಾವನು, [ಉಕ್ಥೈಃ] ನಿನ್ನ ಅತುಲವೂ, ಸ್ಫುಟವೂ ಆದ ಗುಣ ಕೀರ್ತನದಿಂದಲೂ, [ಸ್ವೇ ಆಯುಷಿ] ತನ್ನ ಸ್ವಂತ ಜೀವಿತದಲ್ಲಿಯೂ, [ದುರೋಣೇ] ಸ್ವಗೃಹದಲ್ಲಿಯೂ, [ಪಿ ಪ್ರೀಷತಿ] ಶ್ರದ್ಧಾ ಭಕ್ತಿಗಳಿಂದ ಉಪಾಸಿಸುತ್ತಾನೋ, [ಸ ಇತ್] ಕೇವಲ ಅವನೇ, [ಸುಭಗಃ] ಸೌಭಾಗ್ಯಶಾಲಿಯೂ [ಸುದಾನುಃ] ಸತ್ಯವಾದ ದಾನವನ್ನು ಮಾಡುವವನೂ, [ಅಸ್ತು]* ಆಗಿರುತ್ತಾನೆ. [ಅಸ್ಮೈ] ಇವನ ಪಾಲಿಗೆ, [ವಿಶ್ವಾ ಇತ್] ಎಲ್ಲವೂ ಕೂಡ, [ಸುದಿನಾ] ಒಳ್ಳೆಯ ದಿನಗಳೇ [ಸಾ] ಏಕೆಂದರೆ, ಅದು, [ಇಷ್ಟಿಃ ಅಸತ್] ಯಜ್ಞವೇ ಆಗಿದೆ. ಅಥವಾ [ಅಸ್ಮೈ] ಇವನಿಗೆ

* ವರ್ಣವ್ಯತ್ಯಯ, ಪುರುಷ-ವ್ಯತ್ಯಯ ಹಾಗೂ ವಿಭಕ್ತಿ-ವ್ಯತ್ಯಯಗಳ ಹಾಗೆಯೇ ವೇದ ಗಳ ಮಂತ್ರಗಳಲ್ಲಿ ಲಕಾರ-ವ್ಯತ್ಯಯಗಳನ್ನೂ ಕಾಣುತ್ತೇವೆ. ಇಲ್ಲಿ ಲಟ್ ಲಕಾರಕ್ಕೆ ಪ್ರತಿಯಾಗಿ ಲಙ್‌ಲಕಾರ ಬಂದಿದೆ.

[ವಿಶ್ವಾ ಇತ್] ಎಲ್ಲವೂ ಕೂಡಾ [ಸಾ ಸುದಿನಾ ಇಷ್ಟಿಃ] ಆ ಶುಭದಿನಗಳನ್ನೇ ತೋರಿಸುವ [ಇಷ್ಟಿಃ] ಯಜ್ಞವೇ, [ಅಸತ್] ಆಗಿರುತ್ತದೆ." ಹೇಗೆ ಬಿಡಿಸಿಕೊಂಡರೂ ಭಾವನೆ ಒಂದೇ ಸಂಪೂರ್ಣ ಜೀವನವೇ ಬೃಹದ್ಯಜ್ಞವೇ. ಜೀವನವೇ ಯಜ್ಞರೂಪವಾದ ಮೇಲೆ, ಅವನ ಅನುಭವಿಸುವುದು ಸುದಿನಗಳನ್ನೇ ಹೊರತು ಕುದಿನಗಳನ್ನಲ್ಲ. ಯಜ್ಞಕರ್ತೃವಿನ ಪಾಲಿಗೆ ಕೆಟ್ಟ ದಿನಗಳೆಂಬ ಪದಗಳೇ ಅತಿದೂರ.

ಯಜ್ಞದ ವಿಷಯ ಮುನ್ನವೂ ಬಂದಿದೆ, ಮುಂದೆಯೂ ಬರಲಿದೆ. ಆದಕಾರಣ, ಈ ಸೂಕ್ತದಲ್ಲಿ ಹೇಳಿರುವ, **"ಇಂದ್ರೋ ಯಜ್ಞಸ್ಯಾತ್ಮಾ"** - "ಯಜ್ಞದ ಆತ್ಮನೇ ಆಗಿರುವ ಸ್ವಯಂ ಯಜಮಾನನೇ ಆಗಿರುವ ಇಂದ್ರನೊಂದಿಗೆ ಸಾಧರ್ಮ್ಯ-ಸಂಬಂಧವನ್ನು ಸ್ಥಾಪಿಸಿ ಕೊಳ್ಳಲು ಉಪಾಸಕನಿಗೆ ಅನಿವಾರ್ಯವೇ ಆಗಿ ಬೇಕಾಗಿರುವ ಉಪಾಯವನ್ನು ಗುರುತಿಸಲು ಸಾಮರ್ಥ್ಯವನ್ನು ಕೊಡಲು ಈ ಸೂಕ್ತದ ಭಾಷ್ಯದ ಆರಂಭದಲ್ಲಿ ಈ ಪೃಷ್ಠಭೂಮಿ ಯನ್ನು ಚಿತ್ರಿಸಿದ್ದೇವೆ. ಯಜ್ಞದಿಂದ ಸಿದ್ಧಿಸದ ಯಾವ ಮಾನವೋಚಿತ ಉದ್ದೇಶ್ಯವೂ ಇಲ್ಲ. ಕೇಳಿರಿ:-

**ಊರ್ಜೋ ಭಾಗೋ ನಿಹಿತೋ ಯಃ ಪುರಾ ವಃ ಋಷಿಪ್ರಶಿಷ್ಟಾಪ ಆ ಭರೈತಾಃ।**
**ಅಯಂ ಯಜ್ಞೋ ಗಾತುವಿನ್ನಾಥವಿತ್ಪ್ರಜಾವಿದುಗ್ರಃ ಪಶುವಿದ್ವೀರ ವಿದ್ವೋ ಅಸ್ತು॥** [ಅಥರ್ವವೇದ:- 11. 1.15.]

"[ಅಪಃ] ಪಕ್ಷಪಾತರಹಿತ ಪ್ರಜೆಗಳೇ ! [ಋಷಿಪ್ರಶಿಷ್ಟಾಃ] ಸತ್ಯದರ್ಶೀ ಪ್ರಗತಿ ಪರ ಜ್ಞಾನಿಗಳಿಂದ ಪ್ರಶಿಕ್ಷಿತರಾಗಿ, [ಏತಾಃ ಅಪಃ]‡ ಈ ಶುಭಕರ್ಮಗಳನ್ನೂ, [ಆ ಭರ] ನಿಮ್ಮಲ್ಲಿನ ವ್ಯಕ್ತಿ-ವ್ಯಕ್ತಿಯೂ ನಿರಂತರ ನಿರ್ವಹಿಸುತ್ತಾ ಹೋಗಲಿ, [ಯಃ] ಯಾವುದು [ವಃ ಪುರಾ] ನಿಮ್ಮ ಮುಂದೆ, [ನಿಹಿತಃ] ಮಂಡಿಸಲ್ಪಟ್ಟ, [ಊರ್ಜಃ ಭಾಗ] ಅನ್ನ-ಜ್ಞಾನಗಳ ಭಾಗವಾಗಿದೆಯೋ, ಅಂತಹ, [ಅಯಂ ವಃ ಯಜ್ಞಃ] ಈ ನಿಮ್ಮ ಯಜ್ಞವು [ಗಾತುವಿತ್]* ಮಾರ್ಗದರ್ಶಕವೂ, ಜ್ಞಾನವಾಣಿಯನ್ನು ಬಳಿಗೊಯ್ಯುವಂತಹುದೂ, +[ನಾಥವಿತ್] ವಿಶ್ವನಾಥನ ಸಾಕ್ಷಾತ್ಕಾರ ಮಾಡಿಸುವಂತಹುದೂ, ಪ್ರಾರ್ಥನಾಸ್ವರೂಪವನ್ನು ಕಳಿಸುವಂತಹುದೂ, [ಪ್ರಜಾವಿತ್ ] ಜನತಾ ಪರಿಚಯವನ್ನು, ಕೊಡುವಂತಹುದೂ,[ಉಗ್ರಃ] ಬಹುಬಲಪ್ರದವೂ, [ಪಶುವಿತ್] ಪಶು-ಸಂಪತ್ತನ್ನು ಕೊಡುವಂತಹುದೂ, [ವೀರವಿತ್] †ಸತ್ಸಂತತಿಪ್ರದವೂ, ಪ್ರಾಣಶಕ್ತಿದಾಯಕವೂ, ಚೇತನಜೀವರನ್ನು ಪ್ರೇರಿಸುವಂತಹುದೂ

‡ 'ಅಪಃ' ಶಬ್ದ 'ಆಪ್ತ ಜನರನ್ನು. ಸತ್ಕರ್ಮಗಳನ್ನು' ಎಂಬರ್ಥಪ್ರದವಾಗಿದೆ.
* 'ಗಾತು' ಶಬ್ದ 'ಮಾರ್ಗ ಜ್ಞಾನವಾಣಿ' ಈ ಎರಡರ್ಥಗಳನ್ನೂ ಹೊಂದಿದೆ.
+ 'ನಾಥ' ಶಬ್ದ 'ಒಡೆಯ, ಪ್ರಾರ್ಥನೆ' ಎಂಬೆರಡು ಅರ್ಥಗಳನ್ನು ಹೊಂದಿದೆ.
† 'ವೀರ' ಶಬ್ದಕ್ಕೆ ಸಂತಾನ, ಪ್ರಾಣ, ಅನ್ಯ ಜೀವರ ಪ್ರೇರಕ ಎಂಬರ್ಥಗಳಿವೆ.

[ಶಿಸ್ತು] ಆಗಲಿ." ನಿಜವಾಗಿ ಇಷ್ಟು ಬಗೆಯ ವರಗಳನ್ನೆರೆಯುವ ಯಜ್ಞದ ಗುಣವರ್ಣ ನಾಲ್ಕಾರು ಪುಟಗಳಲ್ಲಿ ಮುಗೀತೇ ? ವೇದಗಳು ಯಜ್ಞಕ್ಕ ಎಷ್ಟು ಪ್ರಾಧಾನ್ಯವಿತ್ತಿದೆ ಎಂದರೆ ಯಜ್ಞವಿರೋಧಿಗಳು 'ಆರ್ಯ' ಎಂದರೆ 'ಶ್ರೇಷ್ಠ' ಎಂಬ ಗುಣವಾಚಕ ವಿಶೇಷಣಕ್ಕೂ ಅರ್ಹರಲ್ಲ; ಆದರೆ,

**ನ್ಯ ಕ್ರತೂನ್ ಗ್ರಥಿನೋ ಮೃಧ್ರವಾಚಃ ಪಣೀನಶ್ರ್ಧ್ಧಾನ ವೃಧಾನಯ ಜ್ಞಾನ್**
**ಪ್ರ ಪ್ರತಾನ್ ದಸ್ಯೂನಗ್ನಿರ್ವಿವಾಯ ಪೂರ್ವಶ್ಚ ಕಾರಾ ಪರಾನಯ ಜ್ಯೂನ್ ॥**
[ಋಗ್ವೇದ:- 7. 6. 3. ]

"[ಪೂರ್ವಃ ಅಗ್ನಿ] ಅನಾದಿನಾಯಕನಾದ ಭಗವಂತನು, [ನಿ] ಸರ್ವಥಾ, [ಅಕ್ರತೂನ್] ಸತ್ಕರ್ಮ - ಸದ್ಭಾವನಾಹೀನರೂ, [ಗ್ರಥಿನಃ] ಎರಡೆರಡು ಬಗೆಯ ಸಿಕ್ಕುಗಟ್ಟಿದ ವ್ಯವಹಾರ ಮಾಡುವವರೂ, [ಮೃಧ್ರವಾಚಃ] ಅಸತ್ಯವಾದಿಗಳೂ, [ಪಣೀನ] ಜೂಜುಕೋರರ [ಅಶ್ರದ್ಧಾನ್] ಸತ್ಯದಲ್ಲಿ ನಂಬಿಕೆಯಿಲ್ಲದವರೂ [ಅವೃಧಾನ್] ತಾವೂ ಮುನ್ನಡೆಯದವರೂ ಅನ್ಯರ ಮುನ್ನಡೆಗೂ ಅಡ್ಡ ನಿಲ್ಲುವವರೂ [ಅಯಜ್ಞಾನ್] ಯಜ್ಞಮಾಡದವರೂ [ಅಯ ಜ್ಯೂನ್] ಅನ್ಯರಿಗೆ ಗೌರವ ತೋರಿಸದವರೂ ಆದ, [ತಾನ್] ಆ, [ದಸ್ಯೂನ್] × ಪರ ಪೀಡಕರನ್ನು. [ಪ್ರ] ಅವರ ಸುಧಾರಣೆಗಾಗಿಯೇ, [ಪ್ರವಿವಾಯ] ಉತ್ತಮಕ್ರಮದಲ್ಲಿಯೇ ಬೇರೆಯಿಟ್ಟು, [ಅಪರಾನ್ ಚಕಾರ] ಶತ್ರುರಹಿತರನ್ನಾಗಿ, ಶ್ರೇಷ್ಠರಲ್ಲಿ ಶ್ರೇಷ್ಠರೇ ಆಗು ವಂತೆ ಮಾಡುತ್ತಾನೆ." ಮತ್ತೂ ಸ್ಪಷ್ಟೀಕರಣಕ್ಕೆ ಕೆಳಗಣ ಮಂತ್ರ ನೆರವಾದೀತು:-

**ಅನ್ಯವ್ರತಮಮಾನುಷಮಯಜ್ವಾನಮದೇವಯುಂ ।**
**ಅವ ಸ್ವಃ ಸಖಾ ದುಧುವೀತ ಪರ್ವತಃ ಸುಘ್ನಾಯ ದಸ್ಯುಂ ಪರ್ವತಃ॥**
[ಋಗ್ವೇದ:–8, 70. 11.]

"[ಪರ್ವತಃ] ಜ್ಞಾನವನ್ನು ದಾನ ಮಾಡುವ ಪ್ರೀತಿಯುಕ್ತನಾದ ಆಚಾರ್ಯನು, [ಸ್ವಃಸಖಾ] ಆ ದುಷ್ಟನ ನಿಜವಾದ ಮಿತ್ರನಾಗಿದ್ದು, [ಅನ್ಯವ್ರತಂ] ವಿರುದ್ಧವಾದ ಸಂಕಲ್ಪ ಹೊಂದಿರುವವನೂ, [ಅಮಾನುಷಂ] ಅಮಾನುಷ-ಎಂದರೆ ರಾಕ್ಷಸನಂತೆ ವರ್ತಿಸುವವನೂ, [ಅಯಜ್ವಾನಂ] ಯಜ್ಞವನ್ನು ಮಾಡದವನೂ, [ಅದೇವಯುಂ] ದಿವ್ಯಗುಣವಾನ್ ಜ್ಞಾನಿ ಗಳ, ದೇವದೇವನಾದ ಪರಮೇಶ್ವರನ ಬಳಿ ಸಾರದವನೂ ಆದ, [ದಸ್ಯುಂ ]ಹಿಂಸಕನನ್ನು [ಅವ ದುಧುವೀತ] ದಂಡಿಸಿ ನಡುಗಿಸಬೇಕು. [ಪರ್ವತಃ] ವೃಷ್ಟಿಕರೆಯುವ ಮೇಘದಂತೆ

× ಭಾರತದ ಮೂಲ ನಿವಾಸಿಗಳನ್ನು, ಹೊರಗಿನಿಂದ ಬಂದ ಆರ್ಯರು 'ದಸ್ಯು'ಗಳೆಂದು ಕರೆದೂ ಕಾಡಿಗಟ್ಟಿದರು - ಇತ್ಯಾದಿ ಗೌರಾಂಗಪ್ರಭುಗಳ ಇತಿಹಾಸ ಅವರ ಸಂಪತ್ತಾಗಿಯೇ ಇರಲಿ ವಸ್ತುತಃ ಹಿಂಸಕರೇ ದಸ್ಯುಗಳು. ಅವರಾರೋ ಅನ್ಯ ಜನಾಂಗದವರೆಂಬ ಕಗ್ಗ-ಸತ್ಯಕ್ಕೆ ಅತಿದೂರ.

ಜ್ಞಾನವೃಷ್ಟಿ ಕರೆಯುವ ಗುರುವು [ಸುಘ್ನಾಯ] ಒಳ್ಳೆಯವರನ್ನು ಹಿಂಸಿಸುವ ಕುಕೃತ್ಯಕ್ಕಾಗಿ [ಅವ ದುಧುವಿತ] ನಯವಿನಯಗಳಿಂದ ತಗ್ಗಿ ಬಗ್ಗಿ ನಡೆಯುವಂತೆ ಶಿಕ್ಷಿಸಬೇಕು ವೇದಗಳಲ್ಲಿ ಬರುವ ಈ 'ದಸ್ಯು' ಶಬ್ದ, ಈಗಿನ ಕಾಲ್ಪನಿಕ ಇತಿಹಾಸಕಾರರೂ "ಆರ್ಯ", ಆರ್ಯತ್ವ." - ಎಲ್ಲಕ್ಕೂ ಬದ್ಧದ್ವೇಷ ಬೆಳೆಸಿಕೊಂಡ, 'ದ್ರಾವಿಡ' ನಾಮಕರೂ ಊಹಿಸುವಂತೆ "ಆರ್ಯರು ಈ 'ದ್ರಾವಿಡ'ರನ್ನೇ 'ದಸ್ಯು, ದಾಸ' - ಎಂದು ಮೊದಲಾಗಿ ಕರೆದು, ತುಚ್ಛೀ ಕರಿಸಿದರು " - ಎಂಬ ಅಪಸಿದ್ಧಾಂತ ಸತ್ಯವಲ್ಲ. ಹಿಂದೀ, ಗುಜರಾತೀ. ಸಿಂಧೀ (?), ಬಂಗಾಳೀ ಅಸಾಮೀ ರಾಜಸ್ಥಾನೀ, ಕಶ್ಮೀರೀ - ಆದಿ ಭಾಷೆಗಳವರು ಆರ್ಯರು; ತೆಲುಗು, ತಮಿಳ ಕನ್ನಡ, ಮಲೆಯಾಳಂ, ತುಳು, ಮರಾಠೀ, (ಈ ಭಾಷೆ ಮತ್ತು ಗುಜರಾತಿಯನ್ನು ಹಲವರು ದ್ರಾವಿಡ-ಆರ್ಯಭಾಷಾ ಸಂಸರ್ಗದಿಂದಾದುವು- ಎನ್ನುವುದುಂಟು) ಈ ಭಾಷಾಭಾಷಿಗಳು ದ್ರಾವಿಡರೆಂದೂ ಹಲವು ವಿದ್ವಾಂಸರ ಮತವಾಗಿದೆ. ಆರ್ಯತ್ವ-ದ್ರಾವಿಡತ್ವಕ್ಕೆ ಭಾಷೆ ಆಧಾರವಲ್ಲ. ದ್ರಾವಿಡರನ್ನು ಆರ್ಯರು ದಾಸ, ದಸ್ಯು-ಎಂದು ಕರೆದರು ಎನ್ನುವುದೂ ಕೇವಲ ಕಲ್ಪನಾತ್ಮಕವೇ. ಸಾವಿರಾರು ವರ್ಷಗಳ ಮುನ್ನವೇ - "**ಮುಖ ಬಾಹೂರುಪ ಜ್ಜಾನಾಂ ಯಾ ಲೋಕೇ ಜಾತಯೋ ಬಹಿಃ। ಮ್ಲೇಚ್ಛ ವಾಚಶ್ಚಾರ್ಯ ವಾಚಃ ಸರ್ವೇ ತೇ ದಸ್ಯವಃ ಸ್ಮೃತಾ** ॥ [ಮನು:- 10. 45.] - "ಬಾಯಿ - ಎಂದರೆ ಜ್ಞಾನೋ ಪದೇಶದಿಂದ ಪ್ರಸಿದ್ಧರಾಗುವ ಬ್ರಾಹ್ಮಣರು, ಬಾಹುಬಲದಿಂದ ಬಲ್ಮೆ ಪಡೆಯುವ ಕ್ಷತ್ರಿಯರು ತೊಡೆಗಳ-ದೇಶ ವಿದೇಶಗಳಲ್ಲಿ ಸುಳಿದಾಡಿ, ವಾಣಿಜ್ಯದಲ್ಲಿ ಖ್ಯಾತರಾಗುವ ವೈಶ್ಯರು, ಪಾದ ಸ್ಥಾನೀಯರಾಗಿ ಸರ್ವಭಾರ ಹೊರುವುದರಿಂದ ಪ್ರಸಿದ್ಧರಾಗುವ ಶೂದ್ರರು – ಎಂಬ ನಾಲ್ಕು ಜಾತಿಗಳಿಂದ ಹೊರಗೆ, ಲೋಕದಲ್ಲಿ ಮ್ಲೇಚ್ಛ-ಭಾಷೆ ಅಥವಾ ಆರ್ಯಭಾಷೆಗಳನ್ನಾಡುವವರು ಯಾರಾದರೂ ಅವರೆಲ್ಲ ದಸ್ಯುಗಳೇ " - ಎಂದು ಹೇಳಿ, ಭಾಷೆಗೂ, ಆರ್ಯತ್ವ-ದಸ್ಯುತ್ವ ಗಳಿಗೂ ಸಂಬಂಧವೇ ಇಲ್ಲ ಎಂಬ ತಥ್ಯವನ್ನು ತೋರಿಸಿದ್ದಾನೆ.

ಆರ್ಯ-ದ್ರಾವಿಡ ವಿವಾದವನ್ನು ನಾವು ಇಲ್ಲಿ ಎತ್ತಿರುವುದು ಕೇವಲ ಒಂದೇ ಕಾರಣದಿಂದ. ಈ ಸೂಕ್ತದಲ್ಲಿ ದೇವತಾರೂಪದಲ್ಲಿ ಗ್ರಾಹ್ಯನಾಗಿರುವ ಇಂದ್ರನು "**ಯಜ್ಞದ ಆತ್ಮನು; ಯಜ್ಞದ ದೇವತೆ.**" - ಎಂಬ ವಿಶಿಷ್ಟರೂಪದಲ್ಲಿ ವರ್ಣಿತನಾಗಿದ್ದಾನೆ ಮಾತ್ರವಲ್ಲ; ಸ್ವಯಂ ವಿರಾಡ್ಯಜ್ಞದ ಯಜಮಾನನೂ ಕೂಡ. ಉಪಾಸ್ಯ ದೇವನು ಯಜ್ಞ ಕರ್ತೃವಾಗಿರುವಾಗ, ಉಪಾಸಕರು "ಅಯಜ್ವಾಗಳು" - ಆಗಿದ್ದು, ಅದೇವಯುಗಳಾದ, ಪರಮಾತ್ಮನ ಹಾಗೂ ಅನ್ಯ ದೇವಜನರ ಕಡೆಗೆ ವಿಚಾರದೃಷ್ಟಿಯಿಂದ ನೋಡದ, 'ಅಯಜ್ಯು' ಗಳಾಗಿದ್ದು - ಅನ್ಯ ಆದರಣೀಯರನ್ನು ಗೌರವಿಸದ ಜನರಾಗಿದ್ದು, ಎಂದಿಗಾದರೂ ಈಶ್ವರ ಸಾಕ್ಷಾತ್ಕಾರ ಮಾಡಿಕೊಳ್ಳಲು ಸಮರ್ಥರಾದಾರೇ ? ಯಜ್ಞವಿಮುಖರಾಗುವುದೇ ಪುರಸ್ಕರಣೀಯರ ಬಗೆಗೆ ತಿರಸ್ಕಾರ ತೋರುವುದೇ ದಸ್ಯುತ್ವ; ಅನಾರ್ಯತ್ವ. ಈ ಪ್ರಕರಣ ದಲ್ಲಿ ಯಾವ ಯಾವ ಯಜ್ಞ-ನಿಯಾಮಕ ಮಂತ್ರಗಳನ್ನುದ್ಧರಿಸಿದ್ದೇವೋ, ಅವುಗಳಿಂದ ಸಿಕ್ಕುವ ಪಥಪ್ರದರ್ಶನ, ಅನ್ಯ ಲೇಖನಗಳಿಂದ ಸಿಕ್ಕಲಾರದು. ಮಾನವೀಯತ್ವದ ಪರಿಪೂರ್ಣ, ನಿರ್ಬಾಧ ಹಾಗೂ ಜ್ಯೇಷ್ಠತಮ ವಿಕಾಸ, ಯಜ್ಞವಿಲ್ಲದಲ್ಲಿ ಎಂದೆಂದಿಗೂ ಅಲಭ್ಯ,

ಸರ್ವವಿಧ ಸಾಮರ್ಥ್ಯಸಾಧಕ ಯಜ್ಞ; ಮಾರ್ಗದರ್ಶಕ-ಜ್ಞಾನವಾಕ್ಯಪ್ರದಾಯಕ ಯಜ್ಞ; ಜನತಾ ಸಂಪರ್ಕಸಾಧಕ; ಪರಸ್ಪರ ಪ್ರೇಮಪ್ರಸಾರಕ ಯಜ್ಞ; ಶಕ್ತಿತೇಜಃಪೂರಕ ಯಜ್ಞ. ಪಶುಸಂಪದ್ವಿವರ್ಧಕ ಯಜ್ಞ; ಮತ್ತು ಸತ್ಸಂತತಿ ಪ್ರಧಾನಕರ್ತೃ, ಪ್ರಾಣಬಲ ಸಂವರ್ಧಕ. ಹತಾಶರ ಆಹತವಾದ ಹೃದಯಗಳಲ್ಲಿ ಹೊಸಹುರುಪನ್ನು ಹೊಸೆಯುವುದು ಕೊನೆಗೆ ಅದೇ ಯಜ್ಞ. ನಾಲದೆಂದು ನಾವು ವೇದಗಳಲ್ಲಿ - "**ಆ ವೋಽರ್ವಾಚೀ ಸುಮತಿರ್ವವೃತ್ಯಾದಂ ಹೋಶ್ಚಿದ್ಯಾ ವರಿವೋವಿತ್ತರಾಸತ್.**" [ಋಗ್ವೇದ:- 1. 107. 1.] "ಆದಿತ್ಯರೇ ! ಆದರಣೀಯ ಪ್ರಾಮಾಣಿಕ ಸಜ್ಜನರೇ ! ಯಾವುದು ಪಾಪಾತ್ಮ ರನ್ನೂ ಕೂಡ ಪ್ರಾಪ್ತಿಯೋಗ್ಯ ದೈವೀಸಂಪತ್ತನ್ನು ತುಂಬಿಸಿಕೊಡುವುದೋ, ಆ ನಿಮ್ಮ ನಿತ್ಯನೂತನ ಸದ್ಬುದ್ಧಿಯು ಯಜ್ಞದಿಂದ ಅರಳಿ ಬರಲಿ." - ಎಂದೂ ಕೂಡ ಓದುತ್ತೇವೆ. ಇಂತಹ ಶ್ರೇಷ್ಠತಮ ಕರ್ಮಕ್ಕೆ ಬೆನ್ನನ್ನು ತೋರಿಸುವುದೆಂದರೆ, ಆತ್ಮವಿಕಾಸದ ಸುಮ ಕೋಮಲವಾದ ಮೊಗ್ಗನ್ನೇ ಚಿವುಟಿ ಹಾಕುವ ವಾನರ ಚೇಷ್ಟೆ ಮಾತ್ರ. "**ಇಮಂ ಯಜ್ಞಂ ವಿತತಂ ವಿಶ್ವಕರ್ಮಣಾ ದೇವಾ ಯಂತು ಸುಮನಸ್ಯಮಾನಾಃ** ಅಥರ್ವವೇದ:- 2. 35. 5] - "ಸ್ವತಃ ವಿಶ್ವಕರ್ಮಾ - ಎಂದರೆ ವಿಶ್ವಸೃಜನಕರ್ತೃವೇ ವಿಸ್ತರಿಸಿರುವ ಈ ಶರೀರವ್ಯಾಪೀ ಯಜ್ಞವನ್ನು ಜ್ಞಾನಿಗಳು ಸುಮನಸ್ಕರಾಗಿ ನಡೆಯಿಸಿ ಕೊಂಡು ಹೋಗಲಿ." – ಎಂಬ ವೇದಾದೇಶದತ್ತ ನಮ್ಮ ದೃಷ್ಟಿ ಹೊರಳಿದಾಗ, ಅತ್ತವೇ ಚಿತ್ತವೂ ಒತ್ತಾಸೆಗೆ ನಿಂತಾಗ, ಈ ಸೂಕ್ತದ ಸೂಕ್ಷ್ಮವೇ ಆದರೂ ಸ್ಪಷ್ಟವಾದ ಮಹತ್ತ್ವ ಎಲ್ಲ ಸಂಶಯಗಳ, ಪ್ರಶ್ನಾತ್ಮಕ ಚಿಹ್ನೆಗಳ ತಲೆಮೆಟ್ಟಿ ನಿಂತೀತು. ದಸ್ಯು – ಎಂಬ ಶಬ್ದ ಈ ದೇಶದ ಮೂಲನಿವಾಸಿಗಳೆಂದು, ಪ್ರಾಚೀನತಮ ಸ್ವಾಮಿಗಳೆಂದು ಭಾವಿಸಲ್ಪಡುವ ದ್ರಾವಿಡರಿಗಲ್ಲ; ಆದರೆ - ಪರಪೀಡಕರಿಗೆ, 'ಅಯಜ್ವಾ' – ಎಂದರೆ ಸರ್ವಹಿತಕ್ಕಾಗಿ ಶುಭ ಕರ್ಮಮಾಡದ ಸ್ವಾರ್ಥಿಗಳಿಗೆ, ಕಳ್ಳ-ಕಾಕರಿಗೆ, 'ಅಯಜ್ಯು' – ಎಂದರೆ ಸಜ್ಜನರನ್ನು ಗೌರವಿಸದ ದುರಭಿಮಾನಿಗಳಿಗೆ ಅನ್ವಯಿಸುವುದೇ ಹೊರತು, ಯಾವುದೇ ನಿರ್ದಿಷ್ಟ ಭಾಷಾ ಭಾಷಿಗಳಿಗಲ್ಲ. ಒಳ್ಳೆಯವರು –ಕೆಟ್ಟವರು ಎಲ್ಲ ಭಾಷೆಗಳನ್ನಾಡುವವರಲ್ಲಿಯೂ ಇರುತ್ತಾರೆ. ಸಜ್ಜನರು ಆರ್ಯರು; ದುರ್ಜನರು ದಸ್ಯುಗಳು. ಮೂಲಸತ್ಯ ಇದಾಗಿರುವಾಗ ಆರ್ಯ-ದ್ರಾವಿಡ-ಹೋರಾಟ ಅರ್ಥವಿಲ್ಲದ ಅಮಾನುಷ ಸಂಘರ್ಷ ಮಾತ್ರ.†

ವೇದಗಳ ಸರ್ವಸಿದ್ಧಾಂತಗಳಿಗೂ ಮೂಲವಾದ, ದೃಢ ಆಧಾರಶಿಲೆಯಾದ

---

† 'ಯ ಗತೌ'-ಮುನ್ನಡೆ-ಎಂಬರ್ಥದ ಧಾತುವಿನಿಂದ ಹುಟ್ಟಿದುದು 'ಆರ್ಯ' ಶಬ್ದ .ದ್ರಮ್' ಎಂಬ ಧಾತುವಿನ ಅರ್ಥವೂ 'ಮುನ್ನಡೆ' ಎಂದೇ. ಇದರಿಂದ ರೂಪಗೊಂಡುದು ದ್ರಮಿಳ' ಶಬ್ದ. 'ದ್ರಾವಿಡ' ಎಂಬುದು ಈ 'ದ್ರಮಿಳ'ದ ರೂಪಾಂತರವಷ್ಟೇ. ಹೀಗೆ ಆರ್ಯ-ದ್ರಾವಿಡರಿಬ್ಬರೂ ಪ್ರಗತಿ ಶೀಲರೇ ಆಗಿರುವಾಗ, ನಿರರ್ಥಕ ಕೋಲಾಹಲವೇಕೆ ? ಗೌರಾಂಗ ಪ್ರಭುಗಳು ಹೇಗೂ ಹೋದರಲ್ಲ; ಅವರ ಹಿಂದೆಯೇ ಈ ಅಪಸಿದ್ಧಾಂತವನ್ನೂ ಅಟ್ಟಿಬಿಡೋಣ, ಬನ್ನಿ.

ಯಜ್ಞದ ಮಹತ್ತ್ವಕ್ಕೆ ಸ್ಫುಟವಾದ ಪೃಷ್ಠಭೂಮಿಯನ್ನೊದಗಿಸಲು ಇಷ್ಟು ಹೇಳಬೇಕಾಯಿತು. ಈಗ, ಸ್ವತಃ 'ಯಜಮಾನ'ನಾದ, ಯಜ್ಞದ ಆತ್ಮನೇ ಆದ ಇಂದ್ರದೇವನನ್ನೂ, ಅವನ ನಿಜವಾದ ಭಕ್ತರನ್ನೂ ನಮ್ಮ ವಾಚಕರು ಸುಲಭವಾಗಿ ಗ್ರಹಿಸಬಲ್ಲರು.

ಮಹರ್ಷಿ ದಯಾನಂದರ ಭಾಷ್ಯ ಸ್ಪಷ್ಟವಾದ ದಿಗ್ದರ್ಶನ ನೀಡುತ್ತದೆ. "[ಆ] **ಎಲ್ಲೆಡೆಯಿಂದಲೂ,** [ತು] **ಪುನಃ ಪುನಃ,** [ಆ] **ಚಾಚೂ ತಪ್ಪದಂತೆ,** [ಇತ] **ಆಗಮಿಸಿರಿ.** [ನಿ] **ಸರ್ವಸಾಮರ್ಥ್ಯಪ್ರದಾನಪೂರ್ವಕವಾಗಿ,** [ಸೀದತ] **ಶಿಲ್ಪವಿದ್ಯೆಯ ಪ್ರಾಪ್ತಿಯಲ್ಲಿ ನಿರತರಾಗಿರಿ.** [ಇಂದ್ರಂ] **ಪರಮೇಶ್ವರನನ್ನು,** [ಅಭಿಪ್ರಗಾಯತ] **ಸಾಕ್ಷಾದನುಭೂತಿಯುಕ್ತರಾಗಿ, ಉತ್ತಮೋತ್ತಮದೊಂದಿಗೆ, ವಿದ್ಯಾಸಿದ್ಧಿಗಾಗಿ, ಸ್ತುತಿಸಿರಿ. ಅವನ ಗುಣಗಳನ್ನುಪದೇಶಿಸಿರಿ ಮತ್ತು ಕೇಳಿರಿ. ವಿದ್ಯಾಜೀವನಪ್ರದನಾದುದರಿಂದ ಇಂದ್ರ ಶಬ್ದದಿಂದ ಇಲ್ಲಿ ಪರಮಾತ್ಮನು ಗ್ರಾಹ್ಯನಾಗಿದ್ದಾನೆ** [ಸಖಾಯಃ] **ಪರಸ್ಪರ ಸುಹೃದರಾಗಿ,** [ಸ್ತೋಮವಾಹಸಃ] **ಸ್ತುತಿಸಮೂಹವನ್ನು ಗಳಿಸತಕ್ಕವರೂ, ಅನ್ಯರಿಗೆ ತಿಳಿಸತಕ್ಕವರೂ ಆಗಿ, ವಿರಾಜಿಸಿರಿ.**

ಮಹರ್ಷಿಗಳ ಆರ್ಷದೃಷ್ಟಿ ಯಜ್ಞದ ನ್ಯಾಯವಾದ ಸ್ಥಾನ-ಮಾನಗಳನ್ನು **ಗುರು**ತಿಸಿದೆ. ವಾಚಕರು ಹಿಂದೆಯೇ 'ದೇವಪೂಜಾ, ಸಂಗತಿಕರಣ, ದಾನ-ಎಂಬ **'ಯಜ್'** ಧಾತುವಿನ ಅರ್ಥತ್ರಯವನ್ನು ಹೃದಯಾಂಕಿತವಾಗಿ ಮಾಡಿಕೊಂಡಿದ್ದಾರೆ. ಮಾನವನಿಗೆ ವ್ಯಕ್ತಿಗತವಾದ ಜೀವನವಿದೆ. ಅದರ ಒಗೆಗೆ ನಾಸ್ತಿಕರಾದ ಕಮ್ಯುನಿಸ್ಟರು ವಾದ - **ವಿವಾದ** ಹೂಡಬಹುದು, ಅಷ್ಟೇ. ಸಮಷ್ಟಿಯ ಘಟಕಗಳಾದ ವ್ಯಷ್ಟಿಗಳಿಗೆ ಅಸ್ತಿತ್ವವೇ ಇಲ್ಲವೆಂದಾದರೆ, ಸಮಷ್ಟಿಗೆಲ್ಲಿದೆ ಅಸ್ತಿತ್ವ ? ಇಟ್ಟಿಗೆಗಳೇ ಇಲ್ಲದ ಇಟ್ಟಿಗೆ ಗೋಡೆ, ಸಿಮೆಂಟೇ ಇಲ್ಲದ ಸಿಮೆಂಟಿನ ಗೋಡೆ, ಕಲ್ಲುಗಳೇ ಇಲ್ಲದ ಕಲ್ಲುಗೋಡೆ-ಎದ್ದೀತಾದರೂ ಎಂತು ? ವೃಕ್ಷಗಳೇ ಇಲ್ಲದ ದಾರು-ದಾರುಣವಾದ ಘೋರ ಕಾನನದ ಇರುವನ್ನು ಊಹಿಸುವ ಮೆದುಳನ್ನು ನಾವಿನ್ನೂ ಕಾಣಬೇಕಾಗಿದೆ.

ವ್ಯಕ್ತಿ - ವ್ಯಕ್ತಿಯ ಸ್ವತಂತ್ರ ವ್ಯಕ್ತಿತ್ವವನ್ನು ಅರಳಿಸಿ, ಸಮಾಜದ ಸರ್ವಾಂಗೀಣ ಸಮುತ್ಕರ್ಷಕ್ಕೆ, ಜೀವನ-ಸಂತುಲನಕ್ಕೆ ರೂಪಕೊಡುವ ಶಕ್ತಿ ಒಂದು ತತ್ತ್ವಕ್ಕೆ, ಕೇವಲ ಒಂದೇ ಒಂದು ತತ್ತ್ವಕ್ಕೆ ಮಾತ್ರವಿದೆ. ಅದನ್ನು ವೇದ 'ಯಜ್ಞ' ಎಂಬ ಹೆಸರಿನಿಂದ ಸಂಕೇತ ಮಾಡಿ ತೋರಿಸುತ್ತದೆ. ಈ ಯಜ್ಞದ ಉಪಯೋಗಿತ್ವವನ್ನು ವೇದಶಬ್ದಗಳಲ್ಲಿಯೇ ಆಲಿಸೋಣ:-

**ಆಯುರ್ಯಜ್ಞೇನ ಕಲ್ಪತಾಂ ಪ್ರಾಣೋ ಯಜ್ಞೇನ ಕಲ್ಪತಾಂ**
**ಚಕ್ಷುರ್ಯಜ್ಞೇನ ಕಲ್ಪತಾಂ ಶ್ರೋತ್ರಂ ಯಜ್ಞೇನ ಕಲ್ಪತಾಂ**

**ಪೃಷ್ಠಂ ಯಜ್ಞೇನ ಕಲ್ಪತಾಂ ಯಜ್ಞೋ ಯಜ್ಞೇನ ಕಲ್ಪತಾಂ।**
**ಪ್ರಜಾಪತೇಃ ಪ್ರಜಾ ಅಭೂಮ ಸ್ವರ್ದೇವಾ ಅಗನ್ಮಾಮೃತಾ ಅಭೂಮ॥**
[ಯಜುರ್ವೇದ:- 9. 21.]

"[ಆಯುಃ] ಆಯಸ್ಸು, [ಯಜ್ಞೇನ ಕಲ್ಪತಾಂ] ಯಜ್ಞದಿಂದ ವರ್ಧಿಸಲಿ. [ಪ್ರಾಣಃ] ಪ್ರಾಣವು, [ಯಜ್ಞೇನ ಕಲ್ಪತಾಂ] ಯಜ್ಞದಿಂದ ಬಲಿಷ್ಠವಾಗಲಿ. [ಚಕ್ಷುಃ] ದರ್ಶನ ಶಕ್ತಿಯು, [ಯಜ್ಞೇನ ಕಲ್ಪತಾಂ] ಯಜ್ಞದಿಂದ ಪ್ರವರ್ಧಮಾನವಾಗಲಿ. [ಶ್ರೋತ್ರಂ ಶ್ರವಣ ಶಕ್ತಿ, [ಯಜ್ಞೇನ] ಯಜ್ಞದಿಂದ, [ಕಲ್ಪತಾಂ] ಶಕ್ತಿಯುಕ್ತವಾಗಲಿ. [ಪೃಷ್ಠಂ] ಮೇರುದಂಡವು, (ಬೆನ್ನುಮೂಳೆ) ಹಾಗೂ ಸ್ಥಿತಿಶಕ್ತಿಯು [ಯಜ್ಞೇನ ಕಲ್ಪತಾಂ] ಯಜ್ಞದಿಂದ ದೃಢವಾಗಲಿ. [ಯಜ್ಞಃ] ಯಜ್ಞವು, ಶ್ರೇಷ್ಠತಮ ಕರ್ಮವು, [ಯಜ್ಞೇನ] ಯಜ್ಞದಿಂದಲೇ, [ಕಲ್ಪತಾಂ] ವಿಸ್ತೃತವಾಗಲಿ. [ಪ್ರಜಾಪತೇಃ] ಪ್ರಜಾಪತಿಯಾದ ಪರಮಾತ್ಮನ [ಪ್ರಜಾಃ ಅಭೂಮ] ಉತ್ತಮ, ಆಜ್ಞಾನುವರ್ತೀ ಪ್ರಜೆಗಳಾಗೋಣ. [ದೇವಾಃ] ಸ್ವತಃ ಕರ್ತವ್ಯನಿಷ್ಠ, ಜಾಗರೂಕ, ವಿಶಾಲ ಮನಸ್ಕ ಜ್ಞಾನಿಗಳಾಗಿ, [ಸ್ವಃ] ಆನಂದವನ್ನು, [ಅಗನ್ಮ] ಗಳಿಸೋಣ. [ಅಮೃತಾಃ ಅಭೂಮ] ಅಮರರಾಗೋಣ; ಕಳೇವರ ಕಳಚಿ ಬಿದ್ದರೂ, ಕುಂದದ, ಕಂದದ; ಕುಸಿಯದ ಕೀರ್ತಿಯನ್ನು ಕಾಲ-ಕಾಲಾಂತರಕ್ಕೂ ಕೆಡದಂತೆ ಬಿಟ್ಟು ಹೋಗೋಣ."

ಇದಕ್ಕೇಕೆ ವ್ಯಾಖ್ಯಾನ ? ಪ್ರತಿಯೊಬ್ಬ ಮಾನವ, ಪ್ರತಿಯೊಬ್ಬಳು ಮಾನವೀ ವೈಯಕ್ತಿಕವಾಗಿ, ತಮ್ಮ ತಮ್ಮ ತನುಗಳ ಅಂಗೋಪಾಂಗಗಳನ್ನೂ, ಜಡ ಭೂತಗಳ ಸದುಪಯೋಗದಿಂದ, ಚೇತನ ಜೀವರ ಸತ್ಸಂಗದಿಂದ, ಪ್ರಜಾಪತಿಯಾದ ಪರಮಾತ್ಮನ ಪ್ರಜೆ ತಾನೆಂಬ ತಿಳಿವಿನಿಂದ ಜೀವನ ಕಲಿಯು (ಮೊಗ್ಗು) ಜೀವಂತ ಪುಷ್ಪವಾಗಿ ಅರಳಲಿ - ಎಂಬ ಹಂಬಲವನ್ನು, ಹುಂಬರಂತಲ್ಲ; ಹುಸಿಯನ್ನು ಹೊಸಕಿ ಹಾಕಿ, ಸತ್ಯವನ್ನು ಹದವಾಗಿ ಹೃದಯಂಗಮವಾಗಿ ಮಾಡಿಕೊಂಡ, ಹೊಳಪಿನಿಂದ ರಾಜಿಸುವ ತುಂಬು ತತ್ತ್ವ ಜ್ಞಾನಿಗಳಂತೆ ಹೇಳಿಕೊಳ್ಳಬೇಕು. ಇದೆಲ್ಲಾ ಯಜ್ಞ ವೈಭವ. ಮುಂದೆ:-

**ವಾಗ್ಯಜ್ಞೇನ ಕಲ್ಪತಾಂ ಮನೋ ಯಜ್ಞೇನ ಕಲ್ಪತಾಮಾತ್ಮಾ ಯಜ್ಞೇನ ಕಲ್ಪತಾಂ ಬ್ರಹ್ಮ ಯಜ್ಞೇನ ಕಲ್ಪತಾಂ ಜ್ಯೋತಿರ್ಯಜ್ಞೇನ ಕಲ್ಪತಾಂ॥**
[ಯಜು:- 18. 29.]

"[ವಾಕ್] ವಾಣಿಯು, [ಯಜ್ಞೇನ] ಯಜ್ಞದಿಂದ, [ಕಲ್ಪತಾಂ] ಪ್ರಭಾವ ಶಾಲಿನಿಯಾಗಿ ಬೆಳೆದು ಬರಲಿ. [ಮನಃ] ಮನಸ್ಸು, [ಯಜ್ಞೇನ ಕಲ್ಪತಾಂ] ಯಜ್ಞದಿಂದ ಪುನೀತವೂ, ವಿಶಾಲವೂ ಆಗುತ್ತಾ ಸಾಗಲಿ. [ಆತ್ಮಾ] ಸುಖ-ದುಃಖಭಾಕ್ ಜೀವಾತ್ಮನು, [ಯಜ್ಞೇನ ಕಲ್ಪತಾಂ] ಯಜ್ಞದಿಂದ ವಿಕಸಿತವಾಗುತ್ತಾ ಹೋಗಲಿ. [ಬ್ರಹ್ಮ] ವೇದಜ್ಞಾನ,

[ಯಜ್ಞೇನ ಕಲ್ಪತಾಂ] ಯಜ್ಞದಿಂದ ಬೆಳೆದು ಬರಲಿ [ಜ್ಯೋತಿಃ] ವರ್ಚಸ್ಸು, [ಯಜ್ಞೇನ ಕಲ್ಪತಾಂ] ಯಜ್ಞದಿಂದ ಪ್ರೋಜ್ಜ್ವಲವಾಗಲಿ."

ಶಾರೀರಿಕದಾರ್ಢ್ಯದ ನಂತರ, ವಾಕ್ಕು, ಮನಸ್ಸು, ಆತ್ಮಶಕ್ತಿ, ವೇದಜ್ಞಾನ, ಹಾಗೂ ವರ್ಚಸ್ಸುಗಳನ್ನು ಬೆಳೆಯುವುದಾದರೂ ಯಜ್ಞದಿಂದಲೇ. ಮುಂದಣ ಹೆಜ್ಜೆ ಹೀಗಿದೆ:-

**......ಅಪಾನೋ ಯಜ್ಞೇನ ಕಲ್ಪತಾಂ ಸ್ವಾಹಾ ವ್ಯಾನೋ**
**ಯಜ್ಞೇನ ಕಲ್ಪತಾಂ ಸ್ವಾಹೋದಾನೋ ಯಜ್ಞೇನ**
**ಕಲ್ಪತಾಂ ಸ್ವಾಹಾ ಸಮಾನೋ ಯಜ್ಞೇನ ಕಲ್ಪತಾಂ ಸ್ವಾಹಾ**
**ಬ್ರಹ್ಮಾ ಯಜ್ಞೇನ ಕಲ್ಪತಾಂ ಸ್ವರ್ಯಜ್ಞೇನ ಕಲ್ಪತಾಂ ಸ್ವಾಹಾ॥**
[ಯಜು:- 22. 33.]

ಸ್ವಾಹಾಕಾರ ಈ ಮಂತ್ರದ ವೈಶಿಷ್ಟ್ಯ. ಸ್ವಾಹಾಕಾರವಿಲ್ಲದ ಯಜ್ಞ ಯಜ್ಞವಲ್ಲ; ಆಹುತಿ ಆಹುತಿಯೂ ಅಲ್ಲ. ಬೆಂಕಿಗೆ ತುಪ್ಪ-ಸಾಮಗ್ರಿಗಳನ್ನು, ಆಜ್ಯ-ಸ್ಥಾಲೀಪಾಕ-ಹವ್ಯ ದ್ರವ್ಯಗಳನ್ನು ಸುರಿಯುವುದು ಯಜ್ಞವಲ್ಲ; **"ಸು ಆಹೇತಿ ವಾ, ಸ್ವಂ ಆಹೇತಿ ವಾ, ಸ್ವೇ ಸ್ಥಿತಂ ಆಹೇತಿ ವಾ ಸ್ವಾಹಾಕಾರಃ ಸೂಚಯತಿ."** - "ಒಳಿತನ್ನೇ ಹೇಳುವೆ- ಅಥವಾ ತನ್ನದೇ ಆಂತರ್ಯವನ್ನು ಅರಿಕೆಮಾಡುವೆ ಅಥವಾ ಆತ್ಮನಲ್ಲಿರುವುದನ್ನೇ ಹೇಳುವೆ - ಎಂಬುದನ್ನು ಸ್ವಾಹಾಕಾರ ಸೂಚಿಸುತ್ತದೆ." "ಸ್ವಾಹಾ - ಎನ್ನುವಾಗ ಹೋತೃ ಅದೆಷ್ಟು ದೊಡ್ಡ ಉತ್ತರದಾಯಿತ್ವವನ್ನು ಹೆಗಲ ಮೇಲೆ ಹೊರುತ್ತಾನೆ - ಎಂಬುದನ್ನು ಸ್ಮರಿಸಿದಾಗ, ಎಂತಹ ಧೀರನ ಹೃದಯವೂ ಕಂಪಿಸಿಯೇ ತೀರೀತು. ದುರ್ವಚನವಾಡುವ ನಾಲಗೆ -ಸ್ವಾಹಾ' ಎನ್ನಲಾರದು. ತನ್ನದಲ್ಲದುದನ್ನು ಅರ್ಪಿಸುವವನ ಜಿಹ್ವೆಗೆ 'ಸ್ವಾಹಾ' ಎಂಬ ಮಾತನ್ನುಚ್ಚರಿಸಲು ಅಧಿಕಾರವಿಲ್ಲ. ಮತ್ತು ಅಂತರಂಗದಲ್ಲಿ ಅನ್ಯಭಾವ ತಳೆದು, ಬಹಿರಂಗ ದಲ್ಲಿ ಬಾಹ್ಯ ಜಗತ್ತಿನ ಬಾಯಿನಿಂದ ಭವ್ಯವಾದ ಬಿರುದು - ಬಾವಲಿಗಳ ಬಣ್ಣ-ಬಣ್ಣದ ಬಿರುನುಡಿಗಳನ್ನು, ಹೊಗಳಿಕೆಯ ಹಸಿವನ್ನು ಹಿಂಗಿಸುವಂತಹ, ಹಗುರವಾದರೂ ಹುಸಿಯಾದ ಹಾಡುಗಳನ್ನುಹೇಳಿಸಿ, ಹಿಗ್ಗಬೇಕೆಂಬ ಹಾರ್ದವುಳ್ಳವನು 'ಸ್ವಾಹಾ' ಎಂಬ ಹಕ್ಕನ್ನು ಹೊಂದಿರುವುದಿಲ್ಲ. ಯಜ್ಞಕರ್ಮ ಸುಲಭ, ಸರಳ – ಎಂದಾರೂ ಸ್ವಪ್ನದಲ್ಲಿಯೂ ಭಾವಿಸಬಾರದು. ತ್ಯಾಗಕ್ಕೆ ಸನ್ನದ್ಧನಲ್ಲದ, ಭೋಗಕ್ಕೆ ಮಾತ್ರ ಬಾಗುತ್ತಾ ಹೋಗುವ ಆತ್ಮಬಲಹೀನ ವ್ಯಕ್ತಿ ಎಂದಿಗೂ ಯಜ್ಞವನ್ನು ಮಾಡಲಾರನು.

ಯಜ್ಞದ ಮೂಲಕ, ನಾಮರೂಪಾತ್ಮಕ ಜಗತ್ತಿನ ಪ್ರತಿಯೊಂದು ಕಣದ, ಪ್ರತಿಯೊಂದು ಅಣುವಿನ ಸದುಪಯೋಗ ಮಾಡಿಕೊಳ್ಳುವುದರ, ವಿದ್ವಾನ್ ಜೀವರ ಸಹವಾಸದಿಂದ ಜ್ಞಾನದ ಸ್ತರವನ್ನು ಹೆಚ್ಚಿಸಿಕೊಳ್ಳುತ್ತಾ, ವೈಯಕ್ತಿಕ ಸಾಮರ್ಥ್ಯ ಸಂವರ್ಧನಮಾಡಿಕೊಳ್ಳುವುದರ ಮೂಲಕ, ಪಂಚಪ್ರಾಣಗಳ ಶಕ್ತಿಯನ್ನು ಯುಕ್ತಿ–ಯುಕ್ತವಾಗಿ ಬೆಳೆಸಿಕೊಂಡು, ಪರಬ್ರಹ್ಮದ ಅನುಭೂತಿಯನ್ನೂ, ಇಹದಲ್ಲಿಯೇ ಬ್ರಹ್ಮಾನಂದದ ದಿವ್ಯಾನುಭವವನ್ನೂ ಗಳಿಸಬೇಕು.

ಅಹುದು; ವೈಯಕ್ತಿಕ ಶಕ್ತಿವರ್ಧನ-ಪರಬ್ರಹ್ಮಾನಂದ ಸಂಪ್ರಾಪ್ತಿಯ ನಡುವೆ, ಸಾಮಾಜಿಕ ವ್ಯವಹಾರಗಳ, ಜನತಾಸುಖ-ವರ್ಧನದ, ದೀನ-ಹೀನರ ಉದ್ಧಾರ ಸಿದ್ಧಿಯ ಕರ್ತವ್ಯದತ್ತ ಉಪಾಸಕರ ಗಮನವನ್ನೆಳೆಯುತ್ತದೆ ಯಜ್ಞ. ಕೇವಲ ತ್ಯಾಗ ಅವ್ಯವಹಾರ್ಯ; ಕೇವಲ ಭೋಗ ಮಾನವೀಯತೆಯ ಚೌರ್ಯ. ಆದಕಾರಣ, "**ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಸ್ವಿದ್ಧನಂ** ?" [ಯಜು:- 40. 1.] - "ಭಗವಂತನ ಕೊಡುಗೆಯನ್ನು ತ್ಯಾಗಭಾವನೆಯಿಂದ ಭೋಗಿಸು. ದುರಾಶೆ, ಈರ್ಷ್ಯೆ, ಹೊಟ್ಟೆಕಿಚ್ಚು ಎಂದೆಂದಿಗೂ ಬೇಡ. ಆರದು ಈ ಧನ. ? ಆನಂದಮಯ ಈಶ್ವರನದು. ನಿನಗೇಕೆ ಸ್ವಾರ್ಥಮಯ ಮಮಕಾರ ?"- ಎಂದೆಚ್ಚರಿಸುವ ಯಾಜುಷೀಶ್ರುತಿಯನ್ನು ಸ್ಮರಿಸುವ ಸಾಮಾಜಿಕ ಜೀವನದ ಆಧಾರ ಶಿಲೆಯಾದ ತ್ಯಾಗಮಯ ಭೋಗದ ಸರಸ ಸಿದ್ಧಾಂತವೇ ನಮ್ಮನ್ನು 'ಯಜ್ಞ ಕರ್ತೃ'ಗಳನ್ನಾಗಿಸ ಬಲ್ಲದು.

ಮಹರ್ಷಿ ದಯಾನಂದರು ಈ ರಹಸ್ಯವಲ್ಲದ ರಹಸ್ಯವನ್ನು, ಸುಲಭವಾದರೂ ಮಹಾ ಕಷ್ಟಕರವಾದ ತತ್ತ್ವವನ್ನು, ಗುರುತಿಸಿದರು. ಈ ಮಂತ್ರ "ಆ, ತು, ಆ, ಇತ" - ಎಂಬಲ್ಲಿ 'ಆ' ಎಂಬ ನಿಪಾತ ಎರಡು ಸಾರಿ ಬಂದಿದೆ. ಕರ್ತವ್ಯಕರ್ಮದ ಆವಶ್ಯಕತೆ ಅತ್ಯಂತ ತ್ವರೆಯಿಂದ ಪೂರಯಿಸಬೇಕೆಂಬುದನ್ನು ಸೂಚಿಸಲು ಈ ದ್ವಿರುಕ್ತಿ - ಎಂಬ ಶಾಸ್ತ್ರಜ್ಞರ ನಿರ್ಣಯ ತಪ್ಪಲ್ಲ. ಆದರೆ, ಆಳಕ್ಕಿಳಿದು ಅರಸಿದಾಗ, ಅರಿವಿಗಂದುವ ಅತಿಗಂಭೀರವಾದ ಇನ್ನೊ ಒಂದು ರಹಸ್ಯ ಈ ದ್ವಿರುಕ್ತಿಯಲ್ಲಿ ಅಡಗಿರುವುದು ಗೊತ್ತಾಗುತ್ತದೆ. ಮೊದಲ ಪ್ರಯೋಗ "ಆ ಸಮಂತಾತ್". ಎಂದರೆ, "ಜೀವನದ ವೈಯಕ್ತಿಕ, ಪಾರಿವಾರಿಕ, ಸಾಮಾಜಿಕ, ರಾಷ್ಟ್ರೀಯ. ಅಂತಾರಾಷ್ಟ್ರೀಯ, ಧಾರ್ಮಿಕ, ಆಧ್ಯಾತ್ಮಿಕ, ನೈತಿಕ - ಮೊದಲಾದ ಸಮಸ್ತ ಕ್ಷೇತ್ರಗಳಿಂದಲೂ ಆಗಮಿಸಿರಿ." - ಎಂಬ ಬಾವನೆಯನ್ನು ಸೂಚಿಸುತ್ತಿದೆ. ಎರಡನೆಯ ಪ್ರಯೋಗ 'ಆ ನಿರಂತರಂ, ಮುಹುರ್ಮುಹುಃ, ನಿರಂತರತ್ವೇನ' - ಎಂದರೆ - "ಎಂದೋ ಮನಬಂದಾಗ ಮಾತ್ರವಲ್ಲ; ಉತ್ತರದಾಯಿತ್ವದ ಶೃಂಖಲೆ ಮುರಿಯದಂತೆ, ಮತ್ತೆ-ಮತ್ತೆ, ಅಂತಃಸುಪ್ತ ಚೇತನನನ್ನು ಕರ್ತವ್ಯದ ಬಗೆಗೆ ಎಚ್ಚರಿಸುತ್ತಾ ಆಗಮಿಸಿರಿ; ಆಗಮಿಸುತ್ತಲೇ ಹೋಗಿರಿ ಏಕೆಂದರೆ, ಯಜ್ಞದ ಯಜಮಾನನೂ, ಆತ್ಮನೂ, ದೇವತೆಯೂ, ನಾಯಕನೂ ದೇವತೆ ಗಳಲ್ಲೆಲ್ಲಾ ಓಜಿಷ್ಠನೂ, ಬಲಿಷ್ಠನೂ, ಸಹಿಷ್ಠನೂ, ಸತ್ತಮನೂ, ಪಾರಯಿಷ್ಣುತಮನೂ *ಆದ ಆ ವಿರಾಟ್‌ಚೇತನ ಭಗವಾನ್ ಇಂದ್ರದೇವನ ಆರಾಧನೆ ಜೀವನದ ಯಾವುದೋ ಒಂದು ಕ್ಷೇತ್ರದಿಂದ, ಯಾವಾಗಲೋ ಒಂದೊಂದು ಸಾರಿ, "ನಾನೂ ಮಾಡಿಬಿಟ್ಟೆನಯ್ಯ ಯಜ್ಞವನ್ನು !" – ಎಂದು ಹೇಳಿಕೊಳ್ಳಲು ಮಾಡುವ ಆಡಂಬರದ ಕ್ರಿಯೆಯಲ್ಲ. ಅದು ಜೀವನದ ಎಲ್ಲಾ ಕ್ಷೇತ್ರಗಳಿಗೂ ವ್ಯಾಪಿಸುವ, ಆಜೀವ ಪರ್ಯಂತ ಸ್ವಲ್ಪವೂ ಸಡಿಲು ಬಿಡದೆ

* 'ಓಜಿಷ್ಠ–ಎಂಬಲ್ಲಿನಿಂದ ಹಿಡಿದು 'ಪಾರಯಿಷ್ಣುತಮ' ಎಂಬವರೆಗಿನ ವಿಶೇಷಣೆ ಗಳೆಲ್ಲಾ ತಮಸ್ವರದಲ್ಲಿಯೇ (Superlative degree) ಇವೆ ! ಭಗವತ್ಸರ್ವೋತ್ತಮತ್ವದ ಜ್ವಲತ್ಪ್ರಮಾಣವಿದು.

ಮಾಡುತ್ತಲೇ ಹೋಗಬೇಕಾದ ಅಖಂಡ ಸಾಧನೆ; ಉಗ್ರತಪಶ್ಚರ್ಯೆ. ಆದರೆ, ಜೀವನಿಗೆ ತನ್ನ ಸಾಧನೆಯು ರೂಢಿಯಾದ ಮೇಲೆ, ಈ ಉಗ್ರತ್ವಕ್ಕಿಂತ ಕೋಮಲವಾದ ಕೋಮಲತೆ ಎಲ್ಲಿಯೂ ಇಲ್ಲದ ತಥ್ಯ.

ಉಪಸರ್ಗಗಳನ್ನೂ, ಯಜಮಾನನಾದ ಇಂದ್ರನನ್ನೂ ಕುರಿತು ವಿವೇಚಿಸಿದ ನಂತರ ಮಂತ್ರದ ಸಮಸ್ತ ಭಾರವನ್ನೂ, ಹೊತ್ತಿರುವ ಶಬ್ದ 'ಸಖಾಯಃ' ಎಂಬುದರ ವಿಶೇಷಣವಾಗಿ ಬಂದಿರುವ 'ಸ್ತೋಮವಾಹಸಃ' ಎಂಬುದೇ ಆಗಿದೆ. ಭಾಷ್ಯಕಾರರುಗಳು ಇದಕ್ಕೆ ಸಾಮಾನ್ಯವಾಗಿ 'ಸ್ತುತಿ ಸಮೂಹವಾಹಕರು' - ಎಂದೇ ಅರ್ಥ ಮಾಡಿದ್ದಾರೆ. ಅದು ಅಯುಕ್ತವೇನೂ ಅಲ್ಲ. ಆದರೆ, ಯಜ್ಞ ಕರ್ತೃರೂಪದಲ್ಲಿ ಭಗವಂತನ ವರ್ಣನೆ ಮಾಡಿರುದು ಈ ಪ್ರಕರಣದಲ್ಲಿ, ಯಜಧಾತುವಿನ ದ್ವಿತೀಯಾರ್ಥವಾದ ಸಂಗತಿಕರಣದತ್ತ ಚಿತ್ತವಿತ್ತಾಗ ನಮ್ಮ ಹೃದಯಗಳ ಮೇಲೆ ಮುದ್ರೆಯನ್ನೊತ್ತುವ ಭಾವನೆ ಕೇವಲ ಸ್ತುತಿಸಮೂಹವನ್ನು ನಿರ್ವಹಿಸುವುದು - ಎಂಬುದಲ್ಲ; ಆದರೆ, ಕಾರಣಾಂತರಗಳಿಂದ, ತಮ್ಮ ಸ್ವರೂಪಸಹಜವಾದ ಅಲ್ಪಜತ್ವದಿಂದಾಗಿ ನೂರು - ನೂರು, ಸಾವಿರ - ಸಾವಿರ ಗುಂಪುಗಳಾಗಿ ಸಿಡಿದು ಹೋಗುವ ಮಾನವ-ಸಮಾಜದಲ್ಲಿ ಏಕತಾ ಭಾವನೆಯ ಉದ್ಭಾಸನ ಮಾಡಬೇಕು-ಎಂಬುದೇ. ವೇದಗಳಲ್ಲಿ ಸಾಮಾಜಿಕ ಜೀವನದ ಸ್ಪಷ್ಟಾತಿಸ್ಪಷ್ಟ ಆದೇಶ ಕೊಡುವ ನೂರಾರು ಮಂತ್ರಗಳಿವೆ. ಋಗ್ವೇದ ಒಂದು ಕಡೆ ಅತ್ಯಂತ ತೆರೆನುಡಿಗಳಿಂದ ಹೇಳುತ್ತಲಿದೆ:-

**ಸಂಗಚ್ಛಧ್ವಂ ಸಂ ವದಧ್ವಂ ಸಂವೋ ಮನಾಂಸಿ ಜಾನತಾಂ ।**
**ದೇವಾ ಭಾಗಂ ಯಥಾ ಪೂರ್ವೇ ಸಂ ಜಾನಾನಾ ಉಪಾಸತೇ]**

[ಋಗ್ವೇದ:- 10. 191. 2]

"ಮಾನವರೇ [ಯಥಾ] ಹೇಗೆ, [ಪೂರ್ವೇ ದೇವಾಃ] ಅಗ್ರಗಾಮಿಗಳಾದ ವಿದ್ವಾಂಸರು [ಸಂ ಜಾನಾನಾ] ಒಬ್ಬರನ್ನೊಬ್ಬರು ತಿಳಿದುಕೊಳ್ಳುತ್ತಾ, [ಭಾಗಂ] ತಮ್ಮ ತಮ್ಮ ಕರ್ತವ್ಯ ಕರ್ಮದ ಭಾಗವನ್ನು, ತಮ್ಮ ತಮ್ಮ ಭಾಗ್ಯವನ್ನು, ಅಥವಾ ಭಜನೀಯನಾದ ಭಗವಂತನನ್ನು, [ಉಪಾಸತೇ] ನಿರ್ವಹಿಸುತ್ತಾರೋ, ಅಥವಾ ಆರಾಧಿಸುತ್ತಾರೋ, ಹಾಗೆಯೇ [ಸಂಗಚ್ಛಧ್ವಂ], ಒಂದುಗೂಡಿ ನಡೆಯಿರಿ. [ಸಂ ವದಧ್ವಂ] ಒಬ್ಬರಿಗೊಬ್ಬರು ಅಕ್ಕರೆ ಸೂಸುವ ಸಕ್ಕರೆಯಂತಹ ಸಿಹಿನುಡಿಗಳನ್ನೇ ಆಡಿರಿ. [ಜಾನತಾಂ] ತಿಳುವಳಿಕೆಯುಳ್ಳ [ವಃ] ನಿಮ್ಮ [ಮನಾಂಸಿ] ಮನಸ್ಸುಗಳು, [ಸಂ] ಒಂದಕ್ಕೊಂದು ಹೊಂದಿಕೊಂಡೇ ಮುಂದುವರಿಯಲಿ." ಅಥರ್ವವೇದ - "**ಸಂಜಾನೀಧ್ವಂ ಸಂಪೃಚ್ಯಧ್ವಂ ಸಂವೋ ಮನಾಂಸಿ ಜಾನತಾಂ.**" [6 64. 1.] "ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಿರಿ. ಒಬ್ಬರು ಇನ್ನೊಬ್ಬರ ಸಂಪರ್ಕ –ದಲ್ಲಿದ್ದುಕೊಂಡಿರಿ, ಜ್ಞಾನಿಗಳಾದ ನಿಮ್ಮ ಮನಸ್ಸುಗಳು ಏಕಮುಖವಾಗಿಯೇ ಹರಿಯಲಿ." ಎನ್ನುತ್ತಿದೆ. ಋಗ್ವೇದದ ಈ ಮಂತ್ರ ಶುಭ್ರ ಸಾಮಾಜಿಕ ಜೀವನದ ತಳಹದಿಯನ್ನು ಹಾಕುತ್ತಲಿದೆ:-

**ಹಂಸಾ ಇವ ಶ್ರೇಣಿಶೋ ಯತಾನಾಃ ।**
**ಶುಕ್ರಾ ವಸಾನಾಃ ಸ್ವರವೋ ನ ಆಗುಃ ॥**

[ಋಗ್ವೇದ:- 3. 8. 9.]

"[ಹಂಸಾ ಇವ] ಹಂಸಗಳಂತೆ, [ಶ್ರೇಣಿಶಃ] ಸಾಮೂಹಿಕವಾಗಿ. [ಯತಾನಾಃ] ಪರಿಶ್ರಮಿಸುತ್ತಾ. [ಶುಕ್ರಾ] ಪರಿಶುದ್ಧ ಜೀವನಗಳನ್ನು. ಪರಿಶುದ್ಧವಾದ. ಕಾಂತಿಯುಕ್ತವಾದ ಚಾರಿತ್ರ್ಯಗಳನ್ನು, ಪ್ರಕಾಶಮಯವಾದ ಶರೀರಗಳನ್ನು, [ವಸಾನಾಃ] ಧರಿಸುತ್ತಾ, [ಸ್ವರವಃ] ಸರಸ-ಸುಂದರ, ಮಧುರ-ಮೃದುಲ ಉಪದೇಶಗಳನ್ನು ಕೊಡುತ್ತಾ, ಜ್ಞಾನೀಜನರು, [ನಃ ಆಗುಃ] ನಮಗೆ ಪ್ರಾಪ್ತರಾಗಲಿ." "**ಹಂಸಾ ಇವ ಶ್ರೇಣಿಶೋ ಯತಂತೇ ಯದಾಕ್ಷಿಷುರ್ದಿವ್ಯಮಜ್ಮಮಶ್ವಾಃ**" [ಯಜು;- 29. 21.]- "[ಅಶ್ವಾಃ] ಸುಖ-ದುಃಖಭಾಕ್ ಶರೀರವಾನ್ ಜೀವರು. [ಹಂಸಾ ಇವ] ಹಂಸಗಳಂತೆ, [ಶ್ರೇಣಿಶಃ] ಪಂಕ್ತಿಬದ್ಧರಾಗಿ, [ಯತ್ ಯತಂತೇ] ಯತ್ನಿಸುವರಾದರೆ, [ದಿವ್ಯಂ ಅಜ್ಮಂ] ದಿವ್ಯನಾದ ಈಶ್ವರನ ಪರಮಾಶ್ರಯವನ್ನು, [ಅಕ್ಷಿಷುಃ] ಪಡೆದುಕೊಳ್ಳುವರು." ಎನ್ನುತ್ತದೆ, ಯಜುರ್ವೇದ. ಇದೇ ರೀತಿ ಅಥರ್ವವೇದ ಸಾಮಾಜಿಕ ಜೀವನದ ಮೌಲಿಕ ತತ್ತ್ವವನ್ನು ಹೀಗೆ ಬಣ್ಣಿಸುತ್ತದೆ:-

**ಹಂಸೈರಿವ ಸಖಿಭಿರ್ವಾವದದ್ಭಿಃ**
**ಅಶ್ಮನ್ಮಯಾನಿ ನಹನಾ ವ್ಯಸ್ಯನ್॥**

[ ಅಥರ್ವ:-20. 91. 3. ]

"[ಹಂಸೈಃ ಇವ] + ಹಂಸಗಳ ಹಾಗೆ ಒಂದುಗೂಡಿದವರಾದ, [ವಾವದದ್ಭಿಃ] ಪರಸ್ಪರ ವಿಚಾರ - ವಿನಿಮಯವನ್ನು, ಅಭಿಪ್ರಾಯಗಳ ವಿಮರ್ಶನವನ್ನು ಮಾಡುವುದಕ್ಕಾಗಿಯೇ ಮತ್ತೆ ಮತ್ತೆ ಸಂಭಾಷಣೆ ಮಾಡುವ, [ಸಖಿಭಿಃ] ಸಮಾನ ನಾಮಧೇಯರಾದ ದೇಹಧಾರೀ ಜೀವಾತ್ಮರುಗಳಿಂದ ಜೀವಾತ್ಮರುಗಳ ಮೂಲಕ, [ಅಶ್ಮನ್ಮಯಾನಿ] ಶಿಲಾಭಿತ್ತಿಗಳ ಹಾಗೆ ಕಲ್ಲುಗೋಡೆಗಳ ಹಾಗೆ ದೃಢವಾದ, [ನಹನಾ] ಗಂಟುಬಿದ್ದ ಕಠೋರ ಕರ್ಮಬಂಧನಗಳನ್ನು (ಜ್ಞಾನಿಗಳು) [ವಿ ಅಸ್ಯನ್] ವಿವಿಧೋಪಾಯಗಳಿಂದ ಕೆಡಹಿ ಬಿಡುತ್ತಾರೆ."

-ಹೀಗೆ ಹಲವಾರು ಪ್ರಮಾಣಗಳನ್ನುದ್ಧರಿಸಬಹುದು. ಮಾನವ ಸಮಾಜಜೀವಿ - ಎಂಬುದನ್ನು ಯಾರೂ ಕ್ಷಣಕಾಲಕ್ಕೂ ಮರೆಯುವಂತಿಲ್ಲ. ಅಥರ್ವವೇದ ಈ ಲೋಕದಲ್ಲಿ ಹೇಗೆ ಸಾಮೂಹಿಕವಾಗಿ, ಸಾಮಾಜಿಕರಾಗಿ ಮಾನವರು ಬಾಳಬೇಕೆಂಬುದನ್ನು ಹೀಗೆ ವರ್ಣಿಸುತ್ತಿದೆ:-

**+ ಗುಂಪು ಗುಂಪಾಗಿ, ಪಂಕ್ತಿ ಬದ್ಧವಾಗಿ ಹಾಡುವುದಕ್ಕೂ, ಶುಭ್ರವಾಗಿ ಕಂಗೊಳಿಸುವುದಕ್ಕೂ ಹಂಸಪಕ್ಷಿಗಳು ಪ್ರಸಿದ್ಧ.**

**ಜ್ಯಾಯಸ್ವಂತಶ್ಚಿತ್ತಿನೋ ಮಾ ವಿಯೌಷ್ಟ ಸಂ ರಾಧಯಂತಃ ಸಧುರಾಶ್ಚರಂತಃ।**
**ಅನ್ಯೋ ಅನ್ಯಸ್ಮೈ ವಲ್ಗು ವದಂತ ಏತ ಸಧ್ರೀಚೀನಾನ್ವಃ ಸಮ್ಮನಸ್ಕೃಣೋಮಿ॥**

[ 3. 30. 5. ]

"[ಜ್ಯಾಯಸ್ವಂತಃ] ಹಿರಿಯ ಗುರಿಯನ್ನಿಟ್ಟುಕೊಂಡವರಾಗಿ, ಹಿರಿಯರಿಗೆ ಗೌರವ ಸಲ್ಲಿಸುವವರಾಗಿ, [ಚಿತ್ತಿನಃ] ಜಾಗರೂಕರಾಗಿ,ಹೊಣೆಗಾರರಾಗಿ, [ಸಂ ರಾಧಯಂತಃ] ನ್ಯಾಯ ಬದ್ಧವಾಗಿ ಹಾಗೂ ಐಕ್ಯಭಾವದಿಂದ ಧನಾರ್ಜನೆ ಮಾಡುತ್ತಾ, [ಸಂ] ವೇದ ಶಾಸ್ತ್ರೋಕ್ತ ಕ್ರಮದಿಂದ, ಸಾಮೂಹಿಕವಾಗಿ ಭಗವದುಪಾಸನೆ ಮಾಡುತ್ತಾ [ಸಧುರಾಃ] ಸರ್ವಸಾಮಾನ್ಯ ವಾದ, ಸರ್ವರಿಗೂ ಅನ್ವಯಿಸುವ ಆಧ್ಯಾತ್ಮಿಕ - ಭೌತಿಕ ನಿಯಮಗಳ, ಈಶ್ವರೀಯ ವಿಧಾನವಾದ ಏಕಮಾತ್ರವೇ ಇರುವ ಧರ್ಮತತ್ತ್ವಕ್ಕೆ ತಲೆಬಾಗಿ, ಅದರ ನೊಗಹೊತ್ತು, [ಚರಂತಃ] ನಡೆಯುತ್ತಾ, [ಅನ್ಯಃ] ಒಬ್ಬರು, [ಅನ್ಯಸ್ಮೈ] ಮತ್ತೊಬ್ಬರಿಗೆ, [ವಲ್ಗು] ಒಳಿತನ್ನೇ, [ವದಂತಃ] ಮಾತನಾಡುತ್ತಾ, [ಏತ] ನನ್ನಬಳಿ ಬನ್ನಿರಿ. [ಮಾ ವಿಯೌಷ್ಟ] ಒಬ್ಬರಿಂದೊಬ್ಬರು ದೂರ ಸರಿಯಬೇಡಿರಿ. [ವಃ] ನಿಮ್ಮನ್ನು, [ಸಧ್ರೀಚೀನಾನ್] ನೇರ ವಾದ ಮಾರ್ಗದಲ್ಲಿ ನಡೆಯುವವರನ್ನಾಗಿಯೂ, [ಸಂಮನಸಃ] ಒಂದೇ ವಿಧದ ಒಲವನ್ನುಳ್ಳ ಮನಸ್ಸಿನವರನ್ನಾಗಿಯೂ, [ಕೃಣೋಮಿ] ಮಾಡುತ್ತೇನೆ."

ಯಜ್ಞದ ದ್ವಿತೀಯಾಂಗವಾದ ಸಂಗತೀಕರಣದ ಪಕ್ಷಿನೋಟವಿದು. ವಿಸ್ತರಿಸಿದಷ್ಟೂ ಇದೆ. "ಸ್ತೋಮವಾಹಃ" - ಎಂಬ ಶಬ್ದದ ಅರ್ಥವ್ಯಾಪ್ತಿಯ ಕಿರುನೋಟವನ್ನು ಓದುಗರ, ಮುಂದಿಡಲು ಇಷ್ಟು ಹೇಳಬೇಕಾಯಿತು. ಸ್ತುತಿ - ಸಮೂಹವಹಾದು; ಅದಕ್ಕಿಂತ ಅತಿ ವಿಸ್ತೃತವಾದ ಮತ್ತೊಂದು ಭಾವನೆಯೂ ಸ್ಮರಣೀಯವಾಗಿದೆ. ಇಹವಂತೂ ಇಹವೇ ಆಯಿತಲ್ಲ. ಇಲ್ಲಿ ಸಾಮೂಹಿಕ ಜೀವನ ಸ್ವತಃ ಅಭಿವ್ಯಕ್ತವೇ. ಪರರ ಬಗೆಗೂ ವೇದದ ದಿಗ್ದರ್ಶನ ಅಸಾಮಾನ್ಯವೇ. ಭಗವತ್ಪ್ರಾಪ್ತಿ ಯಾರಿಗೆ ಸಾಧ್ಯ ? ಋಗ್ವೇದ ಹೇಳುತ್ತದೇ

**ತಂ ಶಗ್ಮಾಸೋ ಅರುಷಾಸೋ ಅಶ್ವಾ ಬೃಹಸ್ಪತಿಂ ಸಹವಾಹೋ ವಹಂತಿ।**
**ಸಹಶ್ಚಿದ್ಯಸ್ಯ ನೀಡವತ್ಸಧಸ್ಥಂ ನಭೋನ ರೂಪಮರುಷಂ ವಸಾನಾಃ**

[ 7. 97. 6. ]

["ಯಕಸ್ಯ ಸಹಃ ಚಿತ್] ಯಾವನ ಶಕ್ತಿಯೂ ಕೂಡ. [ನೀಡವತ್] ಗೂಡಿನಂತೆ: [ಸಧಸ್ಥಂ] ಸಮೀಪವರ್ತಿಯೂ, ಆಶ್ರಯಪದವೂ ಆಗಿದೆಯೋ, [ರಂ ಬೃಹಸ್ಪತಿಂ] ಆ ಬೃಹದ್ವಿಶ್ವದ ಸ್ವಾಮಿಯೂ, ರಕ್ಷಕನೂ ಆದ ಭಗವಂತನನ್ನು, [ಶಗ್ಮಾಸಃ] ಪರಮಶಾಂತರೂ, [ಅರುಷಾಃ] ಅಹಿಂಸಾವೃತಿಗಳೂ, [ಅಶ್ವಾಃ] ಪ್ರಗತಿ ಸಾಧಕರೂ, [ಅರುಷಂ ನಭಃ ನ] ಕಾರ್ಮೋಡ ಕವಿದಿರದ, ಗುಡುಗು-ಸಿಡಿಲು-ಮಿಂಚು-ಆಲಿಕಲ್ಲುಗಳ ಆರ್ಭಟ-ಕ್ಷೋಭಗಳಿಲ್ಲದ ಶುಭ್ರಾಕಾಶದಂತೆ ನಿರ್ಮಲ ಚಾರಿತ್ರವನ್ನುಳ್ಳ, [ರೂಪಂ ದಧಾನಾ] ರೂಪವನ್ನು ತಳೆದಿರುವ,

[ಸಹವಾಹಃ] **ಸಾಮೂಹಿಕವಾಗಿ ಐಹಿಕಾಮುಷ್ಮಿಕ ಕರ್ತವ್ಯ ಭಾರ ಹೊರುವವರು,** [ವಹಂತಿ] ಸಾಕ್ಷಾತ್ಕರಿಸಿಕೊಳ್ಳುತ್ತಾರೆ."

ಒಂದೊಂದು ಪದಕ್ಕೂ ರತ್ನದ ರಾಶಿಗಳನ್ನೇ ಸುರಿಯಬಹುದು ಆದರೂ, ದಪ್ಪ ಅಕ್ಷರಗಳಿಂದ ರೇಖಾಂಕಿತವಾಗಿರುವ ಮಾತುಗಳನ್ನು ಓದುಗರು ನೆಟ್ಟ ದಿಟ್ಟಿಯಿಂದ, ಎಚ್ಚೆತ್ತ ಅಪ್ರಮತ್ತ ಚಿತ್ತದಿಂದ ಅವಲೋಕಿಸಬೇಕು, ಆಗ ಅರಿವಾದೀತು 'ಸೋಮವಾಹಸಃ' ಎಂಬುದರ ಅರ್ಥಗಾಂಭೀರ್ಯ. ಸ್ತುತಿ-ಸಮೂಹಗಳು ಬೇಕು; ಭಗವಂತನಲ್ಲಿ ಇಲ್ಲದ ಹುರುಪನ್ನು ಹುಟ್ಟಿಸಿ, ಅವನನ್ನು ನಮ್ಮ ಕಡೆಗೆ ಒಲಿಸಿಕೊಳ್ಳುವುದಕ್ಕಲ್ಲ; ಅವನಲ್ಲಿ ನಮ್ಮ ಭಕ್ತಿ-ಬಲಿಷ್ಠವಾಗಲಿಕ್ಕಾಗಿ; ನಮ್ಮ ಶ್ರದ್ಧೆ ಶತಶತ ಪಟ್ಟು ಶಕ್ತಿ ಹೊಂದಿ ನಮ್ಮನ್ನು ಶುಭ ಶಾಂತಿ-ಕೃತಿಕಾಂತಿಗಳಿಂದ ಯುಕ್ತರನ್ನಾಗಿ ಮಾಡಲಿಕ್ಕಾಗಿ. ಆದರೆ - ಸ್ತೋಮ ಸ್ತುತಿಗಳದೇ ಆದರೆ ಸಾಲದು; ಮಾನವ ಸ್ತೋಮವೂ ಆದಾಗಬೇಕು; ಜೀವ-ಸ್ತೋಮವು ಆದಾಗಬೇಕು. ಆಗ ಮಾತ್ರ 'ಸ್ತೋಮವಾಹಕ'ರ ಸತ್ಯ ಸ್ವರೂಪ ಸ್ಪಷ್ಟವಾದೀತು, ಇನ್ನೂ ಅನೇಕ ಸಾಮಾಜಿಕ ಪ್ರಜ್ಞೋದ್ಬೋಧಕ ಮಂತ್ರಗಳನ್ನುದ್ಧರಿಸುವ ಲೋಭವನ್ನು ಹೇಗೋ ನಿಗ್ರಹಿಸಿ. ಕೇವಲ ಒಂದು ಋಕ್ಕನ್ನು ಕೊಡುತ್ತೇವೆ:-

**ಹಂ ಸಾ ಇವ ಕೃಣುಥ ಶ್ಲೋಕಮದ್ರಿಭಿಃ ।**
**ಮದಂತೋ ಗೀರ್ಭಿರಧ್ವರೇ ಸುತೇ ಸಚಾ ।**
**ದೇವೇಭಿರ್ವಿಪ್ರಾ ಋಷಯೋ ನೃ ಚಕ್ಷಸೋ**
**ವಿ ಪಿಬಧ್ವಂ ಕುಶಿಕಾಃ ಸೋಮ್ಯಂಮಧು ॥** [ಋಗ್ವೇದ:- 3, 53. 10.]

"[ಕುಶಿಕಾಃ] ಮಹಾನ್ ಉಪದೇಶಕರೇ ! ಬ್ರಹ್ಮಸತ್ಯ ಪ್ರಕಾಶಕರೇ ! [ಅದ್ರಿಭಿಃ] ಆದರಾರ್ಹರೂ. ಪರ್ವತಗಳಂತೆ ದೃಢರೂ ಆದ, [ದೇವೇಭಿಃ] ದಿವ್ಯಗುಣ-ಕರ್ಮಸ್ವಭಾವರಾದ ಜ್ಞಾನಿಗಳೊಂದಿಗೆ ಸೇರಿ, [ಅಧ್ವರೇ] ಹಿಂಸಾರಹಿತವಾದ ಶುಭಯಜ್ಞದಲ್ಲಿ, [ಸುತೇ] ಜೀವನ ಸಾರಭೂತವಾದ ಆ ಕೃತಿಯಲ್ಲಿ, [ಸಚಾ] ಸಾಮೂಹಿಕವಾಗಿ, ಸಾಮಾಜಿಕವಾಗಿ ಸೇರಿದವರಾಗಿ. [ಗೀರ್ಭಿಃ] ಯಜ್ಞದಲ್ಲಿ ವಿನಿಯೋಗಿಸಲ್ಪಡುವ ಮಂತ್ರದ ವಾಣಿಗಳಿಂದಲೂ ಪ್ರವಚನ ಶಬ್ದಗಳಿಂದಲೂ [ಮದಂತಃ] ಹರ್ಷೋಲ್ಲಾಸ ಸ್ಫೂರ್ತಿ-ಪ್ರೂರ್ತಿಯನ್ನು ಸಾಧಿಸಿ ನಲಿಯುತ್ತಾ, [ಹಂಸಾಃ ಇವ] ಹಂಸಗಳಂತೆ. [ಶ್ಲೋಕಂ ಕೃಣುತ] ಕರ್ಣ ಮಧುರವಾದ ಮಂತ್ರನಿನಾದವನ್ನು ಮಾಡಿರಿ. [ವಿಪ್ರಾಃ] ಮೇಧಾವಿಗಳೂ, [ಋಷಯಃ] ಸತ್ಯ ದರ್ಶನಯುಕ್ತರೂ, ಮುನ್ನಡೆಯುವವರೂ, [ನೃ ಚಕ್ಷಸಃ] ಪರಿಶುದ್ಧ ಮಾನವೀಯ ದೃಷ್ಟಿಯುಳ್ಳವರೂ ಆಗಿ, [ಸೋಮ್ಯಂ ಮಧು] * ವಿಶ್ವ ವಿರಾಡ್ ಸ್ವರೂಪ ಪರಮಾತ್ಮನಿಗೆ

---

* **ಸೋಮ - ಎಂಬುದಕ್ಕೆ ಈಶ್ವರ, ಜೀವ - ಎಂಬೆರಡು ಮುಖ್ಯಾರ್ಥಗಳೂ ಮಧು- ಎಂಬುದಕ್ಕೆ ಜೀವಾತ್ಮ, ಜ್ಞಾನ, ಮಾಧುರ್ಯ ಎಂಬ ಮೂರು ಮುಖ್ಯಾರ್ಥಗಳೂ ಇರುವ ಕಾರಣ ವಿಕಲ್ಪದ್ಯೋತಕವಾದ** ಇಷ್ಟು 'ಅಥವಾ'ಗಳನ್ನು ಬಳಸಬೇಕಾಯಿತು.

ಸೋಮದ ಪಟ್ಟಿ [ಮಧು] ಆನಂದರಸವನ್ನು, [ವಿ ಪಿಬಧ್ವಂ] ಜಾಗತಿಕ ಪೇಯಗಳ ಪಾನ ದಂತಿಲ್ಲದೆ, ವಿಶಿಷ್ಟವಾದ ಕ್ರಮದಲ್ಲಿ ಪಾನ ಮಾಡಿರಿ. ಅಥವಾ, [ಸೋಮ್ಯಂ] ಆನಂದ ರಸ ರೂಪ ಪರಮಾತ್ಮನಿಗೂ, ಮಮತಾರಸರೂಪನಾದ ಜೀವಾತ್ಮನಿಗೂ ಸಂಬಂಧಿಸಿದ [ಮಧು] ಜ್ಞಾನವನ್ನು, ಜ್ಞಾನ ರಸವನ್ನು, [ವಿ ಪಿಬಧ್ವಂ] ವಿಶೇಷ ರೀತಿಯಲ್ಲಿ ಕುಡಿಯಿರಿ. ಅಥವಾ, [ಸೋಮ್ಯಂ] ಆನಂದಮಯ ಭಗವಂತನ ಪುತ್ರನಾದ ಜೀವಾತ್ಮನ, [ಮಧು], ಮಾಧುರ್ಯಾನುಭೂತಿಯನ್ನು. [ವಿ ಪಿಬಧ್ವಂ] ವಿಶಿಷ್ಟವಾಗಿ ಸೇವಿಸಿರಿ. ಇಲ್ಲವೇ, [ಸೋಮ್ಯಂ] ರಸರೂಪನಾದ ದೇವದೇವನಿಗೂ, ಸೀಮಿತ ಜೀವಿತ ಕ್ಷೇತ್ರದಲ್ಲಿ ರಸ ರೂಪನಾದ ಜೀವಾತ್ಮನಿಗೂ ಸಂಬದ್ಧನಾದ, [ಮಧು] ಜೀವಾತ್ಮನನ್ನು, [ವಿ ಪಿಬಧ್ವಂ] ವಿಶಿಷ್ಟ ಕ್ರಮದಲ್ಲಿ ರಕ್ಷಿಸಿರಿ."

ಆದರೆ, ವಿಕಲ್ಪ ಬಾಹುಳ್ಯ, ಅರ್ಥ ಸೌಲಭ್ಯಕ್ಕಾಗಲಿ, ಭಾವನಾ ಸೌಷ್ಠವಕ್ಕಾಗಲಿ, ಸ್ವಲ್ಪವಾದರೂ ತೊಂದರೆಯನ್ನು ತಂದಿಲ್ಲ. ಸಾಮಾಜಿಕ ಜೀವನ ಸಫಲವಾಗಬೇಕಾದರೆ, ದೇಶ-ಭಾಷೆಗಳ, ಜಾತಿ-ಮತಗಳ, ಚರ್ಮದ ಶ್ವೇತತ್ವ - ಕೃಷ್ಣತ್ವ - ಪೀತತ್ವ - ಶ್ಯಾಮಲತ್ವ, ಸ್ತ್ರೀತ್ವ ಪುರುಷತ್ವಗಳ, ಭೇದವೇ ಇಲ್ಲದೆ, ಎಲ್ಲರೂ ಏಕ ಮತರಾಗಿ ಅಹಿಂಸಾತ್ಮಕ ಶುಭ ಕರ್ಮಗಳಲ್ಲಿ ವಿಶಾಲ ಪ್ರಮಾಣದಲ್ಲಿ ಭಾಗಿಗಳಾಗಬೇಕು. ಹಂಸಗಳಂತೆ ಪಂಕ್ತಿ ಬದ್ಧರಾಗಿ ನಡೆಯಬೇಕು. ಮಮತಾ-ಮಾರ್ದವ-ಮಾನವೀಯತೆಯ ಅಂತರತಮದ ಉದ್ಗಾರ ಮಧುರ ನಿಃಸ್ವನದಂತೆ ಮೊಳಗಬೇಕು. ದೇವತ್ವ, ವಿಪ್ರತ್ವ, ಋಷಿತ್ವ, ಮಾನವತಾ ದೃಷ್ಟಿ ಬೆಳೆಯ ಬೇಕು. ಮಾನವ್ಯದ ಚರಮಲಕ್ಷ್ಯವಾದ ಭಗವದಾನಂದ ಪ್ರಾಪ್ತಿ, ಪುಸ್ತಕದ ಹಾಳೆಗಳಲ್ಲಿ ಮಸಿಯಿಂದ ಬರೆದ, ಅಕ್ಷರಗಳೆಂದು ಕರೆಯಲ್ಪಡುವ ಚಿತ್ರ - ವಿಚಿತ್ರವಾದ ಸೊಟ್ಟ - ಪಟ್ಟ ಗೆರೆಗಳಲ್ಲಿ ಅಲ್ಲ; ಆತ್ಮನ ಅಂತಸ್ತಳದಿಂದ ಲಭಿಸಬೇಕು.

ಪ್ರಾಪ್ತಿ ಆಗಬೇಕು ನಿಜ; ಆದರೆ - ಅದಕ್ಕೆ ಕಟ್ಟಬೇಕಾದ ಬೆಲೆಯೂ ಇದೆ. ಅರ್ಥ-ತಿಳಿಯದ, ತಾತ್ಪರ್ಯದ ತಿರುಳನ್ನರಿಯದ ಕೀರ್ತನಕಾರರೂ, ಭಜನೋಪದೇಶಕರೂ - "ಓ ಮುಗ್ಧ, ನಿನಗೇನು ತಗಲುವುದು ಖರ್ಚು! ಬೇಡ ದೇಗುಲ ಮಸೀದಿಯು ಬೇಡ ಚರ್ಚು ॥ ರಾಮ-ಎನು, ಕೃಷ್ಣ-ಎನು, ಶಿವನೇ ಎನು ಹರಿ ಎನ್ನು॥ ಅಷ್ಟೆಯೇ ಸಾಕಯ್ಯ ಬಳಿಕೆಲ್ಲ ಚೆನ್ನು." –ಎಂದು ಹಾಡಿ, ಕುಣಿದು ತನ್ನ ಮುಗ್ಧತೆಯನ್ನು ಮಂದಿಯ ಮುಂದೆ ತೋರಿಸಿ ಕೊಳ್ಳಬಹುದು; ಮಂದಿಯನ್ನೂ ಮುಗ್ಧರನ್ನಾಗಿಸಬಹುದು.

ಆದರೆ-ಇವೆಲ್ಲ ಆತ್ಮ- ಸಾಕ್ಷಾತ್ಕಾರದ ಮಾರ್ಗ; ಈಶ್ವರ ಸಾಕ್ಷಾತ್ಕಾರದ ಪಥ. ತೆರ ಬೇಕಾದುದಿದೆ, ಮಹಾ ತೆರಿಗೆಯನ್ನು. ಯಜುರ್ವೇದದ ಈ ಮಂತ್ರಗಳನ್ನು ಅರಿಯಲಾರದ ಮಂದಿ ಈಶ್ವರಾನುಭೂತಿಯ, ತತ್ಸಾಕ್ಷಾತ್ಕಾರದ ಸಮಸ್ತ ಆಸೆ – ಆಕಾಂಕ್ಷೆಗಳನ್ನೂ ನಿಃಸಂಕೋಚವಾಗಿ ಬಿಟ್ಟೇಬಿಡಬಹುದು. ಇಲ್ಲಿವೆ ಆ ಮಂತ್ರಗಳು:-

**ಯಸ್ತು ಸರ್ವಾಣಿ ಭೂತಾನ್ಯಾತ್ಮನ್ನೇವಾನು ಪಶ್ಯತಿ ।**
**ಸರ್ವಭೂತೇಷು ಚಾತ್ಮಾನಂ ತತೋ ನ ವಿಚಿಕಿತ್ಸತಿ ॥**

ಯಸ್ಮಿನ್ತ್ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ ।
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥
[ ಯಜು:- 40. 6. 7. ]

ವ್ಯಕ್ತಿ - ವ್ಯಕ್ತಿಯ ಹೆಗಲ ಮೇಲೆಯೂ ಭಾರವಾಗಿ ಬಿದ್ದಿರುವ ಹೊಣೆಗಾರಿಕೆಯ ಹೊರೆಯಿದು. "ಬ್ರಹ್ಮ ಸತ್ಯಂ ಜಗನ್ಮಿಥ್ಯಾ" ಮೊದಲಾದ ಅಸಂಬದ್ಧ ಮೃಷಾವಾದಗಳಿಗೆ ಈ ಮಂತ್ರಗಳಲ್ಲಿನ ಏಕತ್ವ - ಸರ್ವಾತ್ಮಸ್ವಾತ್ಮೈಕ ದೃಷ್ಟಿಯ ಆದೇಶಗಳ ಆಶ್ರಯದಲ್ಲಿ ಸಮೀಚೀನತ್ವ (ಸರಿಯಾಗಿರುವಿಕೆ)ದ ಪ್ರಮಾಣ ಪತ್ರ ಕೊಡಲು ಹವಣಿಸುವವರಿಗೆ ಈ ಮಂತ್ರಗಳು ಆಸ್ಪದವನ್ನೇ ಕೊಡುವುದಿಲ್ಲ. "ಯಾವಾಗ [ಯಃ ತು] ಯಾವನು ನಿಶ್ಚಯವಾಗಿ, [ಸರ್ವಾಣಿ ಭೂತಾನಿ] ಸರ್ವ ಪ್ರಾಣಿಗಳನ್ನೂ, [ಆತ್ಮನ್ ಏವ] ತನ್ನ ಆತ್ಮನಲ್ಲಿಯೇ ಅಥವಾ ವಿರಾಡಾತ್ಮನಲ್ಲಿಯೇ, [ಅನು] ತನ್ನ ಅನುಭವದ ಆಧಾರಕ್ಕನುಸಾರ, [ಪಶ್ಯತಿ] ನೋಡುತ್ತಾನೋ. [ಚ] ಮತ್ತು, [ಸರ್ವಭೂತೇಷು] ಎಲ್ಲ ಪ್ರಾಣಿಗಳಲ್ಲಿಯೂ, [ಆತ್ಮಾನಂ,] ತನ್ನ ಆತ್ಮನನ್ನು ಅಥವಾ ವಿರಾಡಾತ್ಮನನ್ನು (ನೋಡುತ್ತಾನೋ), [ತತಃ] ಆಮೇಲೆ [ನವಿಚಿಕಿತ್ಸತಿ] ಸಂದೇಹ ಪಡುವುದಿಲ್ಲ."

"[ಯಸ್ಮಿನ್] ಯಾವ ಸ್ಥಿತಿಯಲ್ಲಿ, [ಅನು] ತನ್ನ ಅನುಭವದ ನೆಲೆಯಲ್ಲಿ, [ಏಕತ್ವ] ಏಕತ್ವವನ್ನು, [ಪಶ್ಯತಃ] ನೋಡುವ, [ವಿ ಜಾನತಃ] ವಿಶೇಷ ಕೋಟಿಯ ಜ್ಞಾನಿಗೆ, [ಆತ್ಮಾ ಏವ] ತನ್ನ ಆತ್ಮನೇ, ಅಥವಾ ವಿರಾಡಾತ್ಮನೇ, [ಸರ್ವಾಣಿ ಭೂತಾನಿ] ಎಲ್ಲ ಪ್ರಾಣಿಗಳಾಗಿ, [ಅಭೂತ್] ಆಗಿಹೋಗಿದ್ದಾನೋ, [ತತ್ರ] ಆ ಸ್ಥಿತಿಯಲ್ಲಿ, [ಅವನಿಗೆ], [ಮೋಹಃ ಕಃ] ಮೋಹವಾವುದು ? [ಶೋಕಃ ಕಃ] ಶೋಕವಾವುದು ?- ಈ ಮಂತ್ರಗಳಿಗೆ ಅರ್ಥ ಮಾಡುವಾಗ, 'ಅನು' ಎಂಬ ಪೂರ್ವೋಪಸರ್ಗವನ್ನು ಪಕ್ಕಕ್ಕೆ ತಳ್ಳಿಹೋಗಿ ತಾವೇ ಬೋರಲಾಗಿ ಬಿದ್ದು ಮೂಗನ್ನು ಜಜ್ಜಿಕೊಂಡಿದ್ದಾರೆ, ಘನವಿದ್ವಾಂಸರೂ ಕೂಡ ; "ದರ್ಶನ" ಹಾಗೂ "ಅನುದರ್ಶನ"ಗಳ ವ್ಯತ್ಯಾಸವನ್ನು ತಿಳಿಯಲಾರದೆ, ನವೀನ ವೇದಾಂತದ ಅದ್ವೈತವಾದಕ್ಕೆ ತಲೆ-ಬಾಗಿ ಬಿಟ್ಟಿದ್ದಾರೆ. "ದರ್ಶನ" ಯಾವ ವಸ್ತುವಿನದೂ ಆಗಬಲ್ಲುದು. ಅದು ಸ್ಥೂಲ ಲಕ್ಷ್ಯವಾದಲ್ಲಿ ಇಂದ್ರಿಯಗಳ ಮೂಲಕ; ಅಲ್ಲಿಯೂ, ಹಾಗೆಂದು ಸ್ಫುಟವಾಗಿ ಹೇಳದಿದ್ದರೂ ದ್ರಷ್ಟೃ-ಎಂದರೆ ಪ್ರೇಕ್ಷಕ ಈಕ್ಷಣೀಯವಾದ ಪ್ರೇಕ್ಷ್ಯ ಹಾಗೂ ಈಕ್ಷಣ-ಈ ಮೂರರ ಇರುವನ್ನು ಇದೆಯೆಂದು ಒಪ್ಪಿಯೇ ಮುನ್ನಡೆಯಲಾದೀತು. ("ಅನುದರ್ಶನ)ದಲ್ಲಿಯಂತೂ, ಮೊದಲು ತನ್ನ (ಎಂದರೆ-ನೋಡುವ ಅಣುಚೇತನನ ಅಥವಾ ವಿಶ್ವಚೇತನನ) ಅಸ್ತಿತ್ವವನ್ನು ಸ್ಪಷ್ಟವಾಗಿಯೇ ಒಪ್ಪಿಕೊಂಡು, ತನ್ನನ್ನು ಕಂಡ ನಂತರವೇ ಅನ್ಯ ಈಕ್ಷಣೀಯ ಲಕ್ಷ್ಯವನ್ನು ಕಾಣುವ ವ್ಯವಸ್ಥೆ ಎದ್ದು ಕಾಣುತ್ತದೆ. "ಏಕತ್ವಾನುದರ್ಶನ ಭಾವಾದ್ವೈತ (Substantial Monism absolute and total rejection of the Being of anything as a second)ವನ್ನಲ್ಲ; ಭಾವನಾದ್ವೈತವನ್ನಲ್ಲ. (Emotional one-ness, that never rejects the existance

of things more than one in number.) ನಿಜವಾಗಿ, "ಸರ್ವ ಪ್ರಾಣಿಗಳು, ಆತ್ಮ, ಪೋಹ, ಶೋಕ, ಏಕತ್ವಾನುದರ್ಶನ, ಈ ಮೊದಲಾದ ಶಬ್ದಗಳ ಪ್ರಯೋಗವು, ಚೈತನ್ಯೈಕ್ಯವಾದ, ಅದ್ವೈತವಾದ, ಜಗನ್ಮಿಥ್ಯಾವಾದ-ಈ ಮೊದಲಾದ ಶಬ್ದಗಳ ಬಳಕೆಗೆಯೇ ಅವಕಾಶ ನೀಡದು. ಇರುವುದೊಂದು "ಪ್ರಜ್ಞಾನಂ ಬ್ರಹ್ಮ"ವಾದರೆ, ಅವುಗಳ ಹಾಗೂ ತನ್ನ ತಾದಾತ್ಮ್ಯ ಭಾವವನ್ನು ಕಂಡುಕೊಳ್ಳಲು ಬೇಕಾದ 'ಸಮಸ್ತ ಭೂತ'ಗಳ ಇರುವಿಕೆ; ಅವು ತನ್ನಲ್ಲಿವೆ; ತಾನು ಅವುಗಳಲ್ಲಿದ್ದೇನೆ'-ಎಂದು ಹೇಳಿಕೊಳ್ಳಬೇಕಾದ ಅವಶ್ಯಕತೆ-ಹೀಗೆ ಅದೆಷ್ಟು ಮುಗ್ಧಮಾನವರು ಮಾತ್ರ ಕೇಳಬಹುದಾದ ಪ್ರಶ್ನೆಗಳು ತಲೆಯೆತ್ತುತ್ತವೆ. ಈ ಮಂತ್ರಗಳು ಎಷ್ಟೇ ತಿಪ್ಪರಲಾಗ ಹಾಕಿದರೂ, ಆದಿಶಂಕರರಿಂದ ಮಂಡಿಸಲ್ಪಟ್ಟಿದೆಂದು ಭಾವಿಸಲ್ಪಡುವ ಅದ್ವೈತವನ್ನು ಸಿದ್ಧಪಡಿಸಲಾರವು. ಬ್ರಹ್ಮಪರಕವಾದಲ್ಲಿ - "ಈಶ್ವರನ ಸರ್ವವ್ಯಾಪಕತ್ವ: ಅನ್ಯ ಚೇತನಾ-ಚೇತನವಲ್ಲದರ ವ್ಯಾಪ್ಯತ್ವ ಮಾತ್ರ. ಈ ನೆಲಗಟ್ಟಿನಲ್ಲಿ, ಯೋಗೇಶ್ವರ ಶ್ರೀ ಕೃಷ್ಣ ಗೀತೆಯಲ್ಲಿ ತೆರೆದು ಹೇಳಿರುವ **'ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ। ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ॥** [ಗೀತಾ:- 6. 32.] - "ಅರ್ಜುನ ! ಸುಖದಲ್ಲಿಯೇ ಆಗಲಿ, ದುಃಖದಲ್ಲಿಯೇ ಆಗಲಿ; ಯಾವನು ಎಲ್ಲೆಡೆಯೂ ಆತ್ಮೌಪಮ್ಯದೃಷ್ಟಿಯಿಂದಲೇ (ತನ್ನಂತೆಯೇ ಪರರು - ಎಂಬ ವಿಶಾಲಹಾರ್ದ) ಸಮದೃಷ್ಟಿಯಿಂದಲೇ ನೋಡುತ್ತಾನೊ, ಅವನು ಪರಮ ಯೋಗಿಯೆಂದು ಒಪ್ಪಲ್ಪಟ್ಟಿದ್ದಾನೆ," - ಎಂಬರಿವು ಮೂಡಿ ಬಂದಾಗ, ತತ್ತ್ವದೃಷ್ಟಿ-ತತ್ತ್ವಾನುಷ್ಠಾನ - ಎರಡೂ ಏಕಪ್ರಕಾರವಾದಾಗ, ಸಾಧಕನಿಗೆ ಸಿಕ್ಕುವ ಸುಖ-ಸೌಭಾಗ್ಯವನ್ನು ಸರ್ವವಿದಿತವಾಗುವಂತೆ ಸಂತುಲಿತ ಸಮನ್ವಯದ ಸೊಗಸಾದ ಸೊಲ್ಲಿನಲ್ಲಿ ಸೂಚಿಸುವ ಸಾಮರ್ಥ್ಯವಾರಿಗಿದೆ ? ಬ್ರಹ್ಮ ಸರ್ವಥಾ ಅನುಪಮವೇ ಆದ ತತ್ತ್ವವಾಗಿರುವಲ್ಲಿ, ಅನ್ಯ ವಸ್ತುಗಳೊಂದಿಗೆ ಅದನ್ನು ಹೋಲಿಸುವ ಸಂಭವ ಸರ್ವಕಾಲಕ್ಕೂ ಸೊನ್ನೆಯೇ.

ಅಹುದು, ಜೀವರಿಗಿದು ನೂರಕ್ಕೆ ನೂರಂಶ ಅನ್ವಯಿಸುವ ತತ್ತ್ವ, ಜೀವಾತ್ಮ ಸಂಖ್ಯಾನೇಕತ್ವ ಸರ್ವಾಭಿಜ್ಞ ಸ್ವೀಕೃತ ತತ್ತ್ವ **'ಸರ್ವೋಪಮತ್ವ'** ಎಂಬಾಗ **'ಸರ್ವ'**ದ ಅಂಗೀಕಾರ ಸ್ವತಃ ಸಿದ್ಧ. **"ನಾವೆಲ್ಲರೂ ಒಂದೇ"**- ಎಂದು ಹೇಳುವಾಗ **'ನಾವು'** - ಎಂದರೆ ನಮ್ಮಂತಹ ಜೀವರು ಅಲ್ಪಜ್ಞರಾದ ನಮ್ಮ ಬೂದು ಬಣ್ಣದ ಕಣಗಳಿಗೆ (grey cells) ಹಿಡಿಯಲಾಗದಷ್ಟಿರುವುದನ್ನು ತರ್ಕವಿಲ್ಲದೆಯೇ ಒಪ್ಪಿಕೊಳ್ಳುತ್ತೇವೆ. **"ನಾವೆಲ್ಲಾ ಒಂದೇ"**-ಎಂದು ಅಪಲಾಪ ತೆರೆಯುವ ಹತಭಾಗ್ಯನನ್ನು ಯಾರಾದರೂ ಕಾಣಬಲ್ಲರಾದರೆ, ಅದು ಕೇವಲ ಮಾನಸ ಚಿಕಿತ್ಸಾಲಯದ ರೋಗಿಗಳ ಕೋಷ್ಠಗಳಲ್ಲಿ ಮಾತ್ರ !

ಮಾನವನ ಸಾಮಾಜಿಕ ಜೀವನ ರೂಪ ತಾಳಿ, ಮಾನವ ಜೀವನದ ಎಲ್ಲ ಕ್ಷೇತ್ರಗಳನ್ನೂ ಆಳಿ, ಮಠಗಳಲ್ಲಿ-ಮತಗಳಲ್ಲಿ ಹರಡಿರುವಂತೆ ಯಾವ ಅನಾಚಾರಕ್ಕೂ ಎಡೆಗೊಡದೆ ದೃಢಿಷ್ಠವೂ, ಬಲಿಷ್ಠವೂ, ಸಹಿಷ್ಠವೂ, ಗರಿಷ್ಠವೂ ಆಗಿ, ಹಬ್ಬಿ, ಹರಡಿ, ಹೊಳೆಯೊಳೆದು ಹೊಸತನದ ಹೆಸರಿದ್ದರೂ, ಹಳತಾದುದರ ಹಿರಿಮೆಗೆ, ಹೆಗ್ಗಳಿಕೆಗೆ, ಹುರಿದುಂಬಿಸುವ

ಹೆಮ್ಮೆಗೆ ನಾವು ನಮಸ್ಕಾರ ಹಾಕಬೇಕಾದ ಆವಶ್ಯಕತೆಯಿಲ್ಲ. ಬೇರೆ ಯಾವುದೇ ಗ್ರಂಥ ಏನು ಬೇಕಾದರೂ ಹೇಳಲಿ; ವೇದಗಳ ಪರಿಧಿಯಲ್ಲಿ ಮಾತ್ರ ಹೊಸದು-ಹಳೆಯದು-ಹಿಂದು ಎಂಬ ಮಾತುಗಳಿಗೆ ಯಾವ ಗೌರವವೂ ಇಲ್ಲ. ಯಾವ ಯುಗದಲ್ಲಿ ತಾನೇ ಒಳ್ಳೆಯವರು-ಕೆಟ್ಟವರು ಇರಲಿಲ್ಲ ? ತ್ರೇತೆಯ ಶ್ರೀ ರಾಮನನ್ನು ನಮಿಸೋಣವೆಂದರೆ, ಅದೇ ಕಾಲದಲ್ಲಿ ನಡುಗಿಸುತ್ತಿದ್ದ ಲೋಕವನ್ನೆಲ್ಲಾ ಹತ್ತು ತಲೆಯ (ಹತ್ತು ತಲೆಗಳಲ್ಲಿಃಬಹುಮಾದದುಬುದ್ಧಿಯನ್ನುಳ್ಳ) ರಾವಣ ! ಶ್ರೀ ಕೃಷ್ಣನಿಗೆ ಕೈ ಮುಗಿಯೋಣವೆಂದರೆ, ಅವನ ಕಾಲದಲ್ಲೇ ಕೆಟ್ಟ ಆಟ್ಟಹಾಸದಿಂದ ಸುಟ್ಟು ಹೋದ, ಪೆಟ್ಟು ತಿಂದ, ಮೆಟ್ಟಿ ಬಿದ್ದ ಶಿಶುಪಾಲ - ದಂತವಕ್ತ್ರರು ಅದೇ ಕಾಲದಲ್ಲಿ ಕುಣಿದು ಕುಪ್ಪಳಿಸುತ್ತಿದ್ದರು; ಕಂಸನೂ ಹಂಸನಾಗುವ ಬದಲು ರೂಪವೆತ್ತ ಧ್ವಂಸದಂತೆ ಇದೇ ನೆಲವನ್ನು ತುಳಿದು ಸಂಹಿದಾಡುತ್ತಿದ್ದನು. ಕೆಟ್ಟಂ ಯುಗಬಿಟ್ಟಿಯದು; ಕಲಿಯುಗ ಕಲಹದ, ಕೆಡಾಚಾರದ, ಕೆಡಕು, ಹತ್ತಿತ್ತ ಕೊಲೆಗಳ ಪ್ರಕಾಶನಕಾಲ-ಎಂದೆಲ್ಲಾ ಕಲ್ಪಿಸಿಕೊಳ್ಳುವುದು "ಮುನ್ನದೆಯ ಬಯಕೆಯೊ ಇಂದ, ಇರುವ ಸ್ಥಿತಿ ಇರು ವಂತೆಯೇ ಇರಲಿ;" - ಎಂಬ ತಾಟಸ್ಥ್ಯ ಮನೋಭಾವದ ಚಿತ್ರನ್ನು ನೋಡಲಾರದ ಕಣ್ಣು ಕನ್ನು ಕೊಡಹಿ ಹಾಕುವ ಕಿಚ್ಚೇ ಇಲ್ಲದ ನಿರಾಶಾವಾದಿಗಳ ಕನಸಿನ ಕಿರುಚಾಟವಷ್ಟೇ.

ಇಂತಹ ಬಗ್ನಮನೋರಥರಾದ ಜನ "ಜಗತ್ತಿನಲ್ಲಿ ಒಳಿತಿಗಾಗಿ ದುಡಿಯುವ ಲಕ್ಷಾಂತರ ಜನರಿದ್ದಾರೆ; ಜಗತ್ತು ಜಜ್ಜಿಹೋಗಲಿಕ್ಕೆ ಮಾತ್ರವಲ್ಲ; ಉಜ್ವಲ ಭವ್ಯವನ್ನು ರೂಪಿಸಲು ಬೇಕಾದ ಸಾಸಿರ - ಸಾಸಿರ ಸಾಧನ - ಸಂಪತ್ತುಗಳೂ ಈ ಜಗದೀಶ್ವರನ ಜಗತ್ತಿನಲ್ಲಿದೆ." - ಎಂದೂ ಕೂಡ ನಂಬಲಾರರು. ಈ ಬಗೆಯ, ಈ ಸೋಗಿನ ಈ ನೋಮಾರಿತನದ ಹುಲು ಮಾನವರೇ ಬೃಹದಭಿಲಾಷ - ಈ ಸುಂದರ ವಸುಂಧರೆಗೆ ಆದರೆ, "**ವಿಜಯೋऽಸ್ತು ಪ್ರಭೋ ನೋऽತ್ರ ತತೋऽವಾಸ್ತು, ಪರಾಜಯಃ। ಜಯಃ ಸ್ಯಾನ್ನೋ ನಿಪಾತಾಯ ಪ್ರಕರ್ಷಾಯ ಪರಾಜಯಃ॥ ವಿಜೇತಾ ವಿಸ್ಮರೇನ್ಮಿತ್ರಂ ಸ್ಮರೇತ್ತಂತು ಪರಾಜಿತಃ॥** - "ದೇವದೇವ ! ಈ ರಣಾಂಗಣದಲ್ಲಿ ನಮಗೆ ಜಯ ಸಿಕ್ಕಲಿ. ಅಥವಾ ಪರಾಜಯವೇ ಗಂಟುಬೀಳಲಿ. ಜಯ ನಮ್ಮ ಪತನಕ್ಕೆ ನೆರವಾದೀತು. ಉತ್ಕರ್ಷಕ್ಕೆ ಉತ್ಥಾನಕ್ಕೆ ನಿನ್ನ ನೆರವು ಕೂಡಿ ಬಂದೀತು." "ಜಯಶಾಲಿ ಮಿತ್ರನನ್ನೂ ಮರೆತಾನು. ಪರಾಜಿತನಂತೂ ಅವನನ್ನೆಂದಿಗೂ ಬಿಡಲೊಲ್ಲನು."

ಈ ಶ್ಲೋಕಗಳು ಕಾಂಜೀವರಂ ನಗರಿಯ ವೃದ್ಧ ಬ್ರಾಹ್ಮಣರ ಮನೆಯಲ್ಲಿ 1934ರಲ್ಲಿ ನಮಗೆ ನೋಡಸಿಕ್ಕಿದವು. ಈ ಶ್ಲೋಕಗಳ ಕ್ರಮಸಂಖ್ಯೆ 37 ಮತ್ತು 38 - ಎಂದು ಬರೆದಿದ್ದಿತು. ನಾವು ಅದನ್ನು ನಮ್ಮ ದೈನಂದಿನಿಯಲ್ಲಿ ಬರೆದು ಕೊಂಡೆವು. ಆಗ ಆ ವೃದ್ಧ ಬ್ರಾಹ್ಮಣರು ಯಾವದೋ ಅಜ್ಞಾತ ಭಯದಿಂದ ನಡುಗುತ್ತಾ "ಅಪ್ಪಡಿಯೆಲ್ಲಾ ಸೇಯಾದಂಗೋ, ಇಪ್ಪಡಿ ಅನಾಧಿಕಾರಿಗಳ ಕೈಲೋ ಇದಿ ಪೋಕೂಡಾದಿ. ಎನ್ನ ಗುರು ಅಪ್ಪಡಿದಾ ಸೊಲ್ಲಿಕ್ಕಾರಿ." - ಎಂದರು. ಅವರಿಗೆ ಭರವಸೆ ಕೊಡಲು ನಮ್ಮಿಂದ ಸಾಧ್ಯವಾಗಲಿಲ್ಲ.

ನಮಗಾದ ಲಾಭ ಸ್ಪಷ್ಟ. 700ಕ್ಕೆ ಬದಲು ಕೇವಲ 70 ಶ್ಲೋಕಗಳ ಗೀತೆ ನಮಗೆ ಸಿಕ್ಕಿತು. ಅರ್ಥ ಹಾಗೂ ಭಾವನಾ ದೃಷ್ಟಿಯಿಂದ ಈ 70 ಶ್ಲೋಕಗಳೇ ಗೀತಾ ಚಾರ್ಯರ ಭಾವನೆಯನ್ನು ಹೊರಗೆಡಹಲು ಸಾಕಾಗಿದ್ದಿತು. ಮಹಾಭಾರತದಲ್ಲೇ ೯೯,೦೦೦ದಷ್ಟು ಶ್ಲೋಕಗಳನ್ನು ತೂರಿಸಿದ ಮಹನೀಯರಿದ್ದರು - ಎಂಬ ತಥ್ಯವನ್ನು ಶ್ರೀ॥ ಮಧ್ವರೇ ಒಪ್ಪಿಕೊಂಡಿದ್ದಾರೆ. ಆಲಿಸಿರಿ:–

**ಕ್ವಚಿದ್ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಿ ಚ।**
**ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ...... ಇತ್ಯಾದಿ.**

"ಹಲವು ಗ್ರಂಥಗಳಲ್ಲಿ ಪ್ರಕ್ಷೇಪ ಮಾಡುತ್ತಾರೆ. ಕೆಲವೆಡೆ ಪರಿವರ್ತಿಸಿ ಬಿಡುತ್ತಾರೆ. ಅಲ್ಲಲ್ಲಿ ವ್ಯತ್ಯಾಸ ಮಾಡುತ್ತಾರೆ......" ಎಂದು ಬರೆದಿದ್ದಾರೆ. 25 ಸಾವಿರ ಶ್ಲೋಕಗಳ 'ಜಯ' ಎಂಬ ಗ್ರಂಥ ವ್ಯಾಸರ ಕೃತಿ. ಅದಕ್ಕೆ 25 ಸಾವಿರ ಶ್ಲೋಕ ಸೇರಿಸಿ, ವ್ಯಾಸ-ಶಿಷ್ಯರಾದ ವೈಶಂಪಾಯನರು 50,000 ಶ್ಲೋಕಗಳ ಭಾರತವನ್ನು ಜಾತಿಗರ್ಭಿಸಿದರು. ಈಗದು 1.25,000 ಶ್ಲೋಕಗಳ ಮಹಾಕಾವ್ಯ! ಒಟ್ಟು ಗ್ರಂಥ ಇಷ್ಟು ಬೆಳೆದಿರುವಾಗ, 70 ಶ್ಲೋಕಗಳ ಗೀತೆ (ಈಗದು ಇಂಡೋನೇಷಿಯಾದ ಸುಮಾತ್ರಾ ದ್ವೀಪದ ಯಾವುದೋ ಗ್ರಾಮದಲ್ಲಿ ಸಿಕ್ಕುತ್ತದೆಂದು ಕೇಳಿದ್ದೇವೆ.)

ಇದ್ದೀತು. ಆದರೆ, ಮಹಾಭಾರತ ಪೂರ್ಣ ಒಂದು ಲಕ್ಷದಷ್ಟೇ ಹೆಚ್ಚಿದಾಗ, ಅದೇ ಕಾವ್ಯದ ಒಂದು ಚಿಕ್ಕ ಭಾಗ ಗೀತೆ 70ರಿಂದ 700ಕ್ಕೇರಲಾರದೇ ? ಆಯಿತು ವೈದಿಕಧರ್ಮ ನಿಂತಿರುವುದು ಈ ಬಗೆಯ ಮಹಾಕಾವ್ಯಗಳ, ಹಿಗ್ಗುವ-ಕುಗ್ಗುವ, ಸರಿಪಡಿಸಿ ಕೊಳ್ಳುವ, ತಿದ್ದುವ ಕಾವ್ಯಗಳ ಆಧಾರದಿಂದಲ್ಲ. ಕಾವ್ಯ ಕಾವ್ಯವೇ. ಅದರಲ್ಲಿಯೂ ವೇದಾನುಕೂಲವಾದ ತತ್ತ್ವವೇನಾದರೂ ಸಿಕ್ಕಿದರೆ, ತತ್ತ್ವಪುಷ್ಟಿಯ ದೃಷ್ಟಿಯಿಂದ ಅದನ್ನು ಗ್ರಹಿಸಬಹುದಷ್ಟೇ.

ಆದರೆ, ಅದು ಆತ್ಮನ ಅಂಗೀಕಾರಕ್ಕೆ, ವಿಶ್ವಮಾನವ ಧರ್ಮದ ವರ್ಣನೆಗೆ, ವೈದಿಕ ಯಜ್ಞ-ಯಾಗಾದಿ ಹಿಂಸಾರಹಿತ ಪರಮ ಪವಿತ್ರಕರ್ಮಗಳಿಗೆ, ಈಶ್ವರ, ಜೀವ, ಕರ್ಮ-ತಪಶ್ಚರ್ಯೆ, ಆತ್ಮಾರ್ಪಣ-ಮೊದಲಾದ ಸತ್ಪ್ರವೃತ್ತಿಗಳಿಗೆ ಒತ್ತಾಸೆಯಿತ್ತಾಗ, ಪರತಃ ಪ್ರಮಾಣರೂಪದಿಂದ ಅದೂ ಗ್ರಾಹ್ಯವಾದೀತು. ಶ್ರೀ॥ ಮಧ್ವರೇನೇ ಹೇಳಲಿ; ಶಂಕರ ರಾಮಾನುಜರ ನಿಲುವು ಯಾವುದೇ ಆಗಿರಲಿ: ಬ್ರಹ್ಮಸೂತ್ರಗಳು, ಮೀಮಾಂಸಾ, ಸಾಂಖ್ಯ ವೈಶೇಷಿಕ, ನ್ಯಾಯ ಹಾಗೂ ನ್ಯಾಯದರ್ಶನಗಳು, ಈಶಾವಾಸ್ಯದಿಂದ ಬೃಹದಾರಣ್ಯಕದ ವರಗಿನ (ಕೆಲವರು ಶ್ವೇತಾಶ್ವತರವನ್ನೂ ಕೂಡ ಸೇರಿಸುತ್ತಾರೆ) ಉಪನಿಷತ್ತುಗಳು, ಮೂಲರಾಮಾಯಣ–ಇದನ್ನು ಪರತಃ ಪ್ರಮಾಣವೆಂದು ಸಾರುವ ಕಿಚ್ಚು, ಯಾರಿಗೂ ಸಗ್ಗದ, ಬಗ್ಗದ ದಿಟ್ಟತನ ಕಂಡು ಬಂದುದು ಕೇವಲ ಒಬ್ಬ ಗುರ್ಜರ ಸನ್ಯಾಸಿಯಲ್ಲಿ ಮಾತ್ರ. ಜಗತ್ತು ಆ ಧೀರ-ಗಂಭೀರ-ಶೂರ-ವೀರ ಯತೀಶ್ವರರನ್ನು "ಮಹರ್ಷಿ ದಯಾನಂದ

ಸರಸ್ವತೀ." - ಎಂದು ಗುರುತಿಸಿತು. ವೇದಗಳ ಸಂಹಿತಾಭಾಗ ಮಾತ್ರ ಸ್ವತಃ ಪ್ರಮಾಣ ಅದು ಮಾತ್ರ ಅಪೌರುಷೇಯ. ಬ್ರಾಹ್ಮಣಾರಣ್ಯಕೋಪನಿಷದಾದಿಗಳು ಪರತಃ ಪ್ರಮಾಣವಷ್ಟೇ. ಅವುಗಳ ವೇದಾನುಕೂಲವಾದ ಭಾಗಗಳು ಮಾತ್ರ ಮಾನ್ಯ - ಎಂದು ಹೇಳಿ, ಮಹರ್ಷಿಗಳು ವೈದಿಕಧರ್ಮದ ವಿಶಾಲ ಮನೋಹರ ಪುಷ್ಪೋದ್ಯಾನದಲ್ಲಿ ಹುಟ್ಟಿ ಕೊಂಡ ಕಳೆಗಳನ್ನೂ ಮುಳ್ಳು-ಜಳ್ಳು-ಜೊಂಡುಗಳನ್ನೂ ನಿರ್ದಯರಾಗಿ ಕಿತ್ತೆಸೆದರು.

ಮಹರ್ಷಿಯವರ ವರಪ್ರಸಾದ; ವೈದಿಕ ಧರ್ಮಿಯರು ತಮ್ಮ ಸತ್ಯಸನಾತನ ಧರ್ಮದ ಸತ್ಸ್ವರೂಪವನ್ನು ಕಂಡುಕೊಂಡರು. ಯಜ್ಞಶಾಲೆಯಾಗಿರಬೇಕಾದ (ನಿಜ ವಾದ ದೇವಸ್ಥಾನಗಳು = ವಿದ್ವಜ್ಜನರ ನೆಲೆವೀಡುಗಳು) ಪವಿತ್ರ ಮಂಟಪಗಳು ವಿಗ್ರ ಹಾರಾಧನೆಯ ಅಜ್ಞಾನ ಪ್ರಕ್ರಿಯೆಗೆ ನೆರವಾದ ನೆಲೆಯಾದ ಗುಡಿಗಳಾಗಿ ಕುಳಿತಿದ್ದಾಗ, ಗುಣ - ಕರ್ಮ - ಸ್ವಭಾವ ಪರೀಕ್ಷಣಾನಂತರ ಆಚಾರ್ಯ ಪ್ರವರರ ಸಲಹೆ ಪಡೆದು ತನ್ನ ಮನ ದೊಲವಿಗೆ, ಬುದ್ಧಿ ಶಕ್ತಿಗೆ ಕಾರ್ಯ ಸಾಮರ್ಥ್ಯಕ್ಕೆ ಒಗ್ಗುವ, ಚಾತುರ್ವಣ್ಯವೆಂದು ಕರೆಯಲ್ಪ ಡುವ ಸೇವಾಕ್ಷೇತ್ರವನ್ನಾರಿಸಿ ಕೊಳ್ಳುವ ಅಧಿಕಾರವನ್ನು ಹೊತ್ತಿಕ್ಕಿ, ಹುಟ್ಟಿನಿಂದಲೇ ವರ್ಣದ, ಆ ಮೇಲೆ ಜಾತಿಯ ಕೇವಲ ಸ್ವಾರ್ಥವೃತ್ತಿ ಮಾನವೀಯತೆಯನ್ನೇ ಕುಕ್ಕಿ ಹಾಕಿದಾಗ, ಒಬ್ಬ ನಿರಾಕಾರ - ನಿರ್ವಿಕಾರ, ಸರ್ವವ್ಯಾಪಕ - ಸರ್ವಜ್ಞ, ಸೃಷ್ಟಿ - ಸ್ಥಿತಿ - ಪ್ರಳಯ ನಿಮಿತ್ತನಾದ ವಿರಾಡಾತ್ಮನನ್ನು ಸರ್ವಥಾ ಮರೆತು, ನೂರಾರು ಜಾತಿಗಳ, ಸಾವಿ ರಾರು ಆಕಾರಗಳ, ಗಂಡು - ಹೆಣ್ಣು ದೇವತೆಗಳ ಹಿಂಸಾತ್ಮಕ - ಅಹಿಂಸಾತ್ಮಕ ಪೂಜೆ ಪ್ರಚಲಿತವಾದಾಗ, ಲಿಂಗ ದೇಹಲಕ್ಷಣ; ಆತ್ಮ ಲಕ್ಷಣವಲ್ಲ. ಆದ ಕಾರಣ ನಾರಿಗೂ ನರನಂತೆಯೇ ಸತ್ಯಶಾಸ್ತ್ರಗಳಾದ ವೇದಗಳ ಪಠನ - ಪಾಠನ ಪೂರ್ಣತಃ ನಾರಿಯ ಅಧಿ ಕಾರ ಕ್ಷೇತ್ರದಲ್ಲಿಯೂ ಇದೆ - ಎಂಬ ಸತ್ಯವನ್ನೇ ಮಣ್ಣುಗೂಡಿಸಿದಾಗ, ವೇದಾಧಿಕಾರದ ಪ್ರಶ್ನೆ, ಅಧ್ಯಯನಾಕಾಂಕ್ಷಿ ಹುಟ್ಟಿದ ಕುಲದ ಆಧಾರದಿಂದಲ್ಲ; ಅವನ ಬೌದ್ಧಿಕ ಸಾಮರ್ಥ್ಯದ ಆಧಾರದಿಂದ ಮಾತ್ರ ನಿರ್ಣೀತವಾಗಬೇಕು; **"ಸಂಸ್ಕಾರಪರಾಮರ್ಶಾತ್; ತದಭಾವ ಲಾಪಾಚ್ಚ."** [ಬ್ರಹ್ಮಸೂತ್ರ :–1.3.34.] "ವೇದಾಧ್ಯಯನಕ್ಕೆ ಉಪನಯನಸಂಸ್ಕಾರ ಬೇಕು (ಶೂದ್ರನಿಗೆ) ಅದಿಲ್ಲವಾದಕಾರಣ, ಶೂದ್ರನು ವೇದಾಧಿಕಾರಿಯಲ್ಲ." - ಎಂಬ ದುರ್ಬಲ ಪ್ರಮಾ ಣಗಳಿಂದ ಮಾನವ ಜನಾಂಗದ ಬಹು ಸಂಖ್ಯಾತರನ್ನೇ ವೇದಜ್ಞಾನ ವ್ಯಾಪ್ತಿಯಿಂದ ದೂರ ದೂಡಿದಾಗ, ವೇದಾನುಯಾಯಿಗಳೆನ್ನಿಸಿಕೊಂಡವರ ಉಪೇಕ್ಷೆಯಿಂದ ಹಾಗೂ ವಿಮತೀ ಯರ ಅಪೇಕ್ಷೆಯಿಂದ ವೈದಿಕಧರ್ಮೀಯರ ಅವನತಿ ಅವಿಚ್ಛಿನ್ನವಾಗಿ ಸಾಗಿದ್ದಾಗ, ಒಬ್ಬ ಭೀಮ ಕಾಯ + ಮಾತ್ರವಲ್ಲ; ಭೀಮಮಾಯನೂ, ಭೀಮಭಾಯನೂ, * ಭೀಮದಾಯನೂ § ಆದ ಸಂನ್ಯಾಸಿಯೊಬ್ಬನ ಶುಭಾಗಮನ ಅನಿವಾರ್ಯವಾಗಿತ್ತು. ಈ ಮೂರ್ತಿಮಾನ್

+ ಭೀಮಕಾಯ=ಮಹಾಶಕ್ತಿಮಾನ್ ದೇಹವನ್ನುಳ್ಳವನು.

* ಯಾವನ ನೆರಳೇ ಅಧಾರ್ಮಿಕರಿಗೆ ಭಯದಾಯಕವೋ, ಅವನು.

§ ಪರಾಹೃತವಾದ ಯಾವನ ದಾಯಭಾಗ ಭಯಂಕರವೆಂದು ತೋರುತ್ತದೋ, ಅವನು

ಮಹಾಶಕ್ತಿಯೇ ಮಹರ್ಷಿದಯಾನಂದರು. "**ಧರ್ಮೋ ಧಾರಯತೇ ಪ್ರಜಾಃ**" - ಧರ್ಮ ಪ್ರಜಾಮಾತ್ರರನ್ನೇ ಎತ್ತಿಹಿಡಿಯುತ್ತದೆ." – ಎಂದು ವ್ಯಾಸರು ಹೇಳಿದರೇ ಹೊರತು "**ಧರ್ಮೋಧಾರಯತೇ ಪ್ರಜಾಃ ನ್ಯೈನಸ್ ಸರ್ಟೆನ್ ಕ್ಲ್ಯಾಸ್ಸ್**" - ಎನ್ನಲಿಲ್ಲ.

"**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್.**" [ಯಜು:– 31. 16.] · "ವಿದ್ವಜ್ಜನರು ದೇವಪೂಜಾ-ಸಂಗತಿಕರಣದಾನಗಳಿಂದಲೇ ಪೂಜ್ಯನಾದ ಪರಮಾತ್ಮನ ಪೂಜನವನ್ನು ಮಾಡುತ್ತಾರೆ. ಆ ದೇವಪೂಜೆ, ಸಂಗತಿಕರಣ ಮತ್ತು ದಾನ-ಇವೇ ಪ್ರಥಮಧಾರಣ ಶಕ್ತಿಗಳಾಗಿರುತ್ತವೆ." – ಎಂಬ ಪಾಠ ಕಲಿತ ಮಹರ್ಷಿಗಳು ಈ ಮಂತ್ರದ ಮರ್ಮವನ್ನು ನೇರವಾಗಿಯೇ ಸ್ಪರ್ಶಿಸಿದ್ದಾರೆ. "ಸಖಾಯಃ ಸ್ತೋಮವಾಹಸಃ" - ಈ ಶಬ್ದಗಳ ಗೂಢರಹಸ್ಯವನ್ನು ಬಿಚ್ಚಿಟ್ಟಿದ್ದಾರೆ. "ಸಖರು ಋತ್ವಿಕ್ಕುಗಳು" ಸರಿ. ಎಂತಹವರು? ಸ್ತುತಿಸಮೂಹವಾಹಕರೇ ? ಅದು ತಪ್ಪಲ್ಲ. ಆದರೆ-ಅದು ಗೌಣಾರ್ಥವಷ್ಟೇ. ಮುಖ್ಯಾರ್ಥವೇನು ? ಸಮಸ್ತ ಜನತೆಯನ್ನು ಜೊತೆಗೂಡಿಸಿಕೊಂಡು ಹೋಗುವವರು ನಿಜವಾದ ಸ್ತೋಮವಾಹಕರು. ಪ್ರಥಮ ಧರ್ಮವಾದ ಯಜ್ಞವೇ ಜನಸಾಮಾನ್ಯರನ್ನೆಲ್ಲಾ ಒಟ್ಟುಗೂಡಿಸಿಕೊಳ್ಳಲು ಸಮರ್ಥವಾಗದಿದ್ದರೆ - ಆಶ್ರಯ ಮತ್ತಾವುದಿದೆ ? ಹೌದು ಮಹರ್ಷಿ ಕಲಿತಿದ್ದ ನೀತಿಯಿದು:– "**ನಕಿರ್ದೇವಾ ಮಿನೀಮಸಿ ನಕಿರಾಯೋಪಯಾಮಸಿ। ಮಂತ್ರ ಶ್ರುತ್ಯಂ ಚರಾಮಸಿ। ಪಕ್ಷೇಭಿರಪಿ ಕಕ್ಷೇಭಿರತ್ರಾಭಿ ಸಂ ರಭಾಮಹೇ॥**" [ಋಗ್ವೇದ:– 10.134.7]

"[ದೇವಾಃ] ಉದಾರಾಶಯ ವಿದ್ವಜ್ಜನರೇ ! [ದೇವಾಃ] ಸ್ವತಃ ಜ್ಞಾನವಂತರೂ ಜಾಗರೂಕ ಕರ್ತವ್ಯನಿಷ್ಠರೂ, ಉದಾರಹೃದಯರೂ ಆದ ನಾವು, [ನಕಿಃ ಮಿನೀಮಸಿ.] ಯಾರನ್ನೂ ಹಿಂಸಿಸುವುದಿಲ್ಲ. [ನಕಿಃ ಆಯೋಪಯಾಮಸಿ] ಒಂದುಗೂಡಿದ ಜನಸಮೂಹವನ್ನು ಛಿನ್ನ ಭಿನ್ನವನ್ನಾಗಿಯೂ ಮಾಡುವುದಿಲ್ಲ. [ಮಂತ್ರ ಶ್ರುತ್ಯಂ] ಮಂತ್ರ ಶ್ರವಣದಿಂದ ಲಬ್ಧವಾದ ಜ್ಞಾನವನ್ನು, [ಚರಾಮಸಿ] ಕ್ರಿಯಾತ್ಮಕ ರೂಪಕ್ಕಿಳಿಸುತ್ತೇವೆ. [ಪಕ್ಷೇಭಿಃ] ನಮ್ಮದಾದ ಪಕ್ಷಗಳೊಂದಿಗೂ, [ಕಕ್ಷೇಭಿಃ] ಅನ್ಯಾಶ್ರಯಿಗಳೂ, ಬಾಳಿನಲ್ಲಿ ರಸಕಾಣಲಾರದೆ ಒಣಗಿ ಹೋಗಿರುವವರೂ, ಪಥಭ್ರಷ್ಟರಾಗಿ ಭ್ರಮದ ಪಂಕದಲ್ಲಿ (ಕೆಸರಿನಲ್ಲಿ) ಸಿಕ್ಕಿಕೊಂಡಿರುವವರೂ ಆದ ದೀನ-ಹೀನರ, ಹತಾಶ-ಹತಪ್ರಭ-ಹತಪ್ರತಿಭರಾದವರ ಪಕ್ಷಗಳೊಂದಿಗೂ, [ಅಪಿ] ಕೂಡ ಸೇರಿದವರಾಗಿ, [ಅತ್ರ] ಈ ಜೀವನದಲ್ಲಿ, [ಅಭಿ] ಎಲ್ಲೆಡೆಯಿಂದಲೂ, [ಸಂ ರಭಾಮಹೇ] ಸಮೀಚೀನವಾದ, ಯುಕ್ತವೇ ಆದ ಪುರುಷಾರ್ಥದಲ್ಲಿ, ಪ್ರಯತ್ನದಲ್ಲಿ, ನಿರ್ವಾಹದಲ್ಲಿ ತೊಡಗಿರುತ್ತೇವೆ."

ಈ ಆರ್ಯಭಾವನೆ ವ್ಯಕ್ತಿ-ವ್ಯಕ್ತಿಯ ಶಕ್ತಿಯಾಗಿ ಪರಿಣಮಿಸಿದರೆ, ಲತಾರಸಪಾನಕ್ಕಾಗಿ ನಾಲಗೆ ಚಪ್ಪರಿಸುತ್ತಾ, ತುಟಿಗಳನ್ನು ನೆಕ್ಕಿಕೊಳ್ಳುತ್ತಾ ಯಜ್ಞಸ್ಥಾನಕ್ಕೆ ಓಡಿ ಬರುವ ಏನೇನನ್ನೋ ಕೊಟ್ಟು ಹೋಗುವ ಇಂದ್ರನು, ಕೇವಲ ಅಲಸಮಸ್ತಿಷ್ಕದ ನಿರಾಧಾರ-ನಿಷ್ಪ್ರಮಾಣ-ನಿಷ್ಪ್ರಾಣ ಕಲ್ಪನೆಯಾಗಿ ಮಾತ್ರ ಉಳಿದಾನಲ್ಲವೇ ? ಇಂದ್ರಶಬ್ದದ ನಾನಾರ್ಥಗಳನ್ನು ನಮ್ಮ ಪಾಠಕ ಮಹಾಶಯರಾಗಲೇ ಗ್ರಹಿಸಿದ್ದಾರೆ. ಮತ್ತೇಕೆ ಭ್ರಾಂತಿ ?

ಈ ಮಂತ್ರದ ವ್ಯಾಖ್ಯಾನವನ್ನು ತತ್ತ್ವದರ್ಶೀ ಮಹರ್ಷಿಗಳು ಹಿಂಡಿತೆಗೆದ ಸಾರದಿಂದ ಕೊನೆಮುಟ್ಟಿಸೋಣ:–

**"ಯಾವನ್ಮನುಷ್ಯಾ ಹಠಚ್ಛಲಾಭಿಮಾನಂ ತ್ಯಕ್ತ್ವಾ, ಸಂಪ್ರೀತ್ಯಾ ಪರಸ್ಪರೋಪಕಾರಾಯ ಮಿತ್ರವನ್ನ ಪ್ರಯತಂತೇ, ತಾವನ್ನೈವೈಶೇಷಾಂ ಕದಾಚಿದ್ವಿದ್ಯಾಸುಖೋನ್ನತಿರ್ಭವತಿ."**

"ಎಂದಿನವರೆಗೆ **ಮಾನವರು ಹಠ, ಛಲ, ಅಭಿಮಾನ - ಇವುಗಳನ್ನು ತ್ಯಜಿಸಿ, ಸಂಪ್ರೀತಿಯಿಂದ ಪರಸ್ಪರೋಪಕಾರಕ್ಕಾಗಿ ಮಿತ್ರರಂತೆ ಪ್ರಯತ್ನಿಸು** ಪ್ರಪಿಕ್ಷನ್ನೋ, ಅಂದಿನವರೆಗೆ ಇವರ **ವಿದ್ಯಾಗ್ರಹಣದಿಂದ ಲಭಿಸುವ ಸುಖದ ಉನ್ನತಿಯು ಎಂದಿಗೂ ಆಗುವುದಿಲ್ಲ."** ಆರ್ಷದೃಷ್ಟಿ; ಆರ್ಷವಾಕ್ಯ, ಆರ್ಷಶಬ್ದ ಎಂದಿಗೂ ಸುಳ್ಳಾಗದು.

ಹಠ, ಛಲ, ಅಭಿಮಾನ - ಇವೆಲ್ಲಾ ಕೊಂಕು - ಕೊಂಕೇ, ಕೊಂಕುನಡೆ, ಜುಹುರಾಣ [ ಯಜು:- 40. 16. ] ಹಾವಿನ ನಡೆಯೇ ತಾನೇ! "ನಾಯಬಾಲಕ್ಕೆ ದಬ್ಬೆ ಕಟ್ಟಿದರೆ ನೆಟ್ಟಗಾದೀತೇ ?"; "ಎಷ್ಟೇ ಶಿಕ್ಷಣವಿತ್ತರೂ ಹಾವು ಡೊಂಕು - ಡೊಂಕಾಗಿಯಲ್ಲದೆ ನೇರ ವಾಗಿ ನಡೆಯಲಾದೀತೇ ?" ಇಲ್ಲ; ಏಕೆಂದರೆ - ಅದು ನಿಸರ್ಗದ ನಿರ್ಮಾಣ. ಆದರೆ ಮಾನವನ ಕೊಂಕುನಡೆ ನೈಸರ್ಗಿಕವಲ್ಲ; ಸ್ವಾರ್ಥ, ಮೋಹ - ಕ್ರೋಧಾದಿ ನಿಮಿತ್ತಗಳಿಗೆ ಸಿಕ್ಕಿ, ಆತ್ಮಬಲವಿಲ್ಲದೆ ಆರಂಭಿಸುವುದು ಅವನು ಅನುವರ್ತನೆಯನ್ನು. ಪಾಠಕರು ಯಜ್ಞದ ಬಗೆಗೆ ಓದುತ್ತಾ - **"ಯಜ್ಞಸ್ತೇವಜ್ರ ವಹಿಹತ್ಯ ಆವತ್."** [ಋಗ್ವೇದ:- 3. 32. 12. ]. "ಓ ಮಾನವ ಅಹಿಹತ್ಯದಲ್ಲಿ, ಕೊಂಕುನಡೆಯ ಬಿಂಕವನ್ನು ಸೋಂಕೇ ಇಲ್ಲದಂತೆ ಬೆಂಕಿಗೆಸೆದು ಧ್ವಂಸಮಾಡಲು ಯಜ್ಞ ನಿನ್ನನ್ನು ವಜ್ರಾಯುಧವಾಗಿ ರಕ್ಷಿಸುವುದು. ಸರ್ವ ಸ್ನೇಹ - ಸಮಭಾವ - ಸರಸ ಸಂಗವನ್ನು ಬಾಳಿಗೆ ಸೂಸುವುದು **'ಮಿಯೇಥ'** - ಎಂದರೆ ಸರ್ವೈಕ್ಯಸಾಧಕ." ಎಂದು ಓದಿಯೇ ಇದ್ದಾರೆ. **"ಮಾಹಿರ್ಭೂರ್ಮಾ ಪೃದಾಕು:"** [ಯಜು:- 6. 12. ] "ಓ ಮಾನವ! ಹಾವಿನಂತೆ ಕೊಂಕು ನಡೆಯುವವನಾಗಬೇಡ; ಬೆನ್ನಿನ, ಹಿಂದಿನಿಂದ ಇರಿಯುವ ವಂಚಕ ಹಾಗೂ ಕ್ರೂರ ಮೃಗವಾಗಬೇಡ." ಈ ವೇದೋಕ್ತಿಗಳು ಯಾವನ ಹೃದಯಗಳನ್ನು ಸ್ಪರ್ಶಿಸವೋ, ಅವನು ಹತಭಾಗ್ಯ; ಯಜ್ಞವನ್ನು ಅವನು ಅರಿತುಕೊಳ್ಳುವನಾದರೂ ಹೇಗೆ ? ಆದರೆ - ಅರಿಯದೆ ಬೇರಾವ ವಿಧಿ ತಾನೇ ಆತ್ಮೋ ದ್ಧಾರಕ್ಕಿದೆ ? ನೇರವಾದ ಮನೋಭಾವಗಳು, ನೇರವಾದ ವಾಣಿಗಳು ಮತ್ತು ನೇರವೇ ಆದ ಆಚರಣೆಗಳು - ಈ ಮೂರು ಅನಿವಾರ್ಯಗಳಾದ ಸಾಧನಗಳು ಜೀವನದ ಸರ್ವಕ್ಷೇತ್ರ ಗಳಿಗೂ ಇಳಿದುಬಾರದೆ, ಆತ್ಮೋದ್ಧಾರವಾದೀತೆಂಬ ಸ್ವಪ್ನವನ್ನು ಕೂಡ ಮಾನವನು ಕಾಣಬಾರನು. ಏಕೆಂದರೆ,

**ಆ ಭೋಗೆಯೇಂ ಪ್ರಯೆಧಿಚ್ಛಂತ ಐತೆನಾ-ಪಾಕಾ: ಪ್ರಾಂಚೋ ಮನು
ಕೇಚಿದಾಪಯ: ।**

**ಸೌಧನ್ವನಾಸಶ್ಚರಿತಸ್ಯ ಭೂಮನಾ-ಗಚ್ಛತ ಸವಿತುರ್ದಾಶುಷೋ ಗೃಹಂ॥**
[ಋಗ್ವೇದ:_ 1. 110. 2]

"ಮಾನವರೇ ! [ಆ ಭೋಗಯಂ] ಜೀವನದಾದ್ಯಂತ ಅನುಭವಕ್ಕೆ ಬರುವಂತಹ ಶುಭ ಭೋಗವನ್ನು, [ಯತ್ ಪ್ರ ಇಚ್ಛಂತಃ] ಉತ್ತಮ ಧ್ಯೇಯವನ್ನಾಗಿಸಿಕೊಳ್ಳಲು ಬಯಸುವಿರಾದರೆ, [ಆ ಇತನ] ನಿರ್ದಿಷ್ಟ ಗತಿಯಿಂದ ಮುಂದೆ ಬನ್ನಿರಿ. [ಕೇ ಚಿತ್] ಯಾರೇ ಆಗಿರಲಿ, [ಮಮ ಆಪಯಃ] ನನ್ನ ಬಂಧುಗಳೇ ಆಗಿದ್ದೀರಿ. [ಅಪಾಕಾಃ] ಅಪಕ್ವರಾಗಿದ್ದರೂ, ಈವರೆಗೆ ತಪೋಽನುಷ್ಠಾನ ಮಾಡದವರೇ ಆಗಿದ್ದರೂ, [ಪ್ರಾಂಚಃ] ಮುಂದೆ ಬರುವ, ಪ್ರಗತಿ ಪಡೆದುಕೊಳ್ಳಬಲ್ಲ ಜೀವರೇ ಆಗಿದ್ದೀರಿ. [ಸೌಧನ್ವನಾಸಃ] ಭೂಮಾತೆಯ ಸುಪುತ್ರರಾಗಿ, + [ಚರಿತಸ್ಯ ಭೂಮನಾ] ಚಾರಿತ್ರ್ಯದ ಶ್ರೀಮಂತಿಕೆಯಿಂದ, [ದಾಶುಷಃ] ಸರ್ವಪ್ರದನಾದ, [ಸವಿತುಃ] ಸರ್ವೋತ್ಪಾದಕನೂ, ಸತ್ಪ್ರೇರಕನೂ ಆದ, ಭಗವಂತನ, [ಗೃಹಂ] ‡ ಗ್ರಾಹ್ಯವಾದ ಪದಕ್ಕೆ, ಮೋಕ್ಷಾವಸ್ಥೆಗೆ, [ಗಚ್ಛತಃ] ತೆರಳಿರಿ."

ಪರಿಶುದ್ಧ ಚಾರಿತ್ರ್ಯದ ಮಹಿಮೆಯಿದು. ಧನದ, ಧಾತುವಿನ, ಧರಣೀಯ ಪದದ, ಅಧಿಕಾರದ, ಉಪಾಧಿಗಳ ಶ್ರೀಮಂತಿಕೆ ಕೆಟ್ಟದಲ್ಲವಾದರೂ, ಪ್ರಭು-ಸಾಕ್ಷಾತ್ಕಾರಕ್ಕೆ ಅದು ಸಾಧನವಲ್ಲ. **ಎಲ್ಲಕ್ಕಿಂತ ಹಿರಿದಾದ, ಎಲ್ಲಕ್ಕಿಂತ ಗರಿಷ್ಠವೂ ವರಿಷ್ಠವೂ ಆದ ಶ್ರೀಮಂತಿಕೆ ಚಾರಿತ್ರ್ಯದ ಶ್ರೀಮಂತಿಕೆಯೇ.** ಅದರ ಜಾಗದಲ್ಲಿ ಒಂದು ಸರ್ವಭಕ್ಷಕ ಅಭಾವ ಬಾಯ್ದೆರೆದು ನಿಂತಿದ್ದರೆ, ಮತ್ತೆ ಇನ್ನೆಷ್ಟೇ ಐಶ್ವರ್ಯವಿರಲಿ; ಈಶ್ವರ-ಸಾಕ್ಷಾತ್ಕಾರ ಮೂರು ಕಾಲಕ್ಕೂ ಆಗದು. ಋಗ್ವೇದದ ಈ ಮಂತ್ರ ವ್ಯಕ್ತಿ-ವ್ಯಕ್ತಿಯ ಚಿತ್ತವನ್ನೂ ಈ ತಥ್ಯದತ್ತ ಎಳೆಯುತ್ತಿದೆ.

---

+ ಧನ್ವನ್-ಎಂದರೆ ಭೂಮಿ. ಭೂಮಾತೆಯ ಉನ್ನತ ಸಲಯೇ 'ಸುಧನ್ವಾ'-ಸುಧನ್ವಾ-ಸಂತತಿ. ಬಹುವಚನದಲ್ಲದು 'ಸೌಧನ್ವನಾಃ' ಎಂದಾಗುತ್ತದೆ. ಇದೇ ಶಬ್ದದ ಛಾಂದಸ ಪ್ರಯೋಗ '**ಸೌಧನ್ವನಾಸಃ**'

‡ ಸರ್ವವ್ಯಾಪಕನಿಗೆ ಒಂದು ನಿರ್ದಿಷ್ಟ ನಿಕೇತನವಿಲ್ಲ. ಬ್ರಹ್ಮಾಂಡದ ಅಣು - ಅಣುವೂ ಅವನಿಂದ ವ್ಯಾಪ್ತವಾಗಿದೆ. ಎಂದ ಮೇಲೆ, 'ಗೃಹ' ಎಂದರೆ 'ಮನೆ'ಯಲ್ಲ; ಗ್ರಾಹ್ಯವಾದ ಪದಮಾತ್ರ.

---

**ಈ ಐದನೇ ಸೂಕ್ತದ ಪ್ರಥಮ ಮಂತ್ರದ ಪೂರ್ಣವೆಚ್ಚ**
**ಶ್ರೀಮತಿ ಸುಪರ್ಣಾದೇವಿ ಸುದರ್ಶನ ಕಾಮತ್, ಉಡುಪಿ,**
**ಇವರ ಸೇವೆ.**

## ಸಂಹಿತಾ ವಿಭಾಗ

ಪ್ರ ರೂತಮಂ ಪುರೂಣಾಮೀಶಾನಂ ವಾರ್ಯಾಣಾಮ್ ।

ಇಂದ್ರಂ ಸೋಮೇ ಸಚಾ ಸುತೇ ॥೨॥

**ಪದಪಾಠ:-** ಪುರೂತಮಂ, ಪುರೂಣಾಂ, ಈಶಾನಂ, ವಾರ್ಯಾಣಾಂ, ಇಂದ್ರಂ ಸೋಮೇ, ಸಚಾ, ಸುತೇ ॥ ೨॥

**ಅನ್ವಯ:-** ಪುರೂಣಾಂ ಪುರೂತಮಂ, ವಾರ್ಯಾಣಾಂ ಈಶಾನಂ ಇಂದ್ರಂ ಸುತೇ ಸೋಮೇ ಸಚಾ [ಅಭಿ ಪ್ರಗಾಯತ].

**ಶಬ್ದಾರ್ಥ:-** [ಪುರೂಣಾಂ] ಪುರುಷ ಮಾತ್ರರಲ್ಲಿ, [ಪುರೂತಮಂ] ಅತ್ಯಂತ ಪೂರ್ಣನೂ, ಪೂರ್ಣತಮನೂ, ಮತ್ತು [ಪುರೂಣಾಂ] ಬಹಳ ದುಷ್ಟವೃತ್ತಿಗಳಲ್ಲಿ ನಿರತರಾಗಿರುವ, ಮಹಾ ದುಷ್ಟ ಸ್ವಭಾವರಾದ ಪಾತಕಿಗಳನ್ನು, [ಪುರೂತಮಂ] ದಂಡರೂಪದಲ್ಲಿ ಅತ್ಯಂತಗ್ಲಾನಿಗೆ ಈಡುಮಾಡುವವನೂ[ವಾರ್ಯಾಣಾಂ]ವರಣೀಯವಾದ,ಅಂಗೀಕಾರಯೋಗ್ಯವಾದ ಕರ್ಮಫಲಗಳನ್ನು ಅನುಭವಿಸಲು ಕಾಮ್ಯವಾದ ವಿವಿಧ ಲೋಕ - ಲೋಕಾಂತರಗಳ, [ಈಶಾನಂ] ಸ್ವಾಮಿಯೂ. ಶಾಸಕನೂ ಆದ, [ಇಂದ್ರಂ] ಸರ್ವಶಕ್ತಿಮಾನ್ ಭಗವಂತನನ್ನು, [ಸುತೇ] ರಚಿತವಾದ, ಆಕಾಶಾದಿ - ಪೃಥಿವೀ ಪರ್ಯಂತ ನಿರ್ಮಿತವಾಗಿರುವ ವ್ಯಕ್ತಾವ್ಯಕ್ತ ತತ್ತ್ವಗಳ ಸಾರಭೂತವಾದ, [ಸೋಮೇ] ಈ ಸರಸ ಸುಂದರ ಸೃಷ್ಟಿಯಲ್ಲಿ, [ಸಚಾ] ಒಂದುಗೂಡಿ, [ಅಭಿ ಪ್ರಗಾಯತ] ಎಲ್ಲೆಡೆಯಿಂದಲೂ, ಉತ್ಕೃಷ್ಟ ರೂಪದಲ್ಲಿ ಸ್ತುತಿಸಿರಿ.

**ತಾತ್ಪರ್ಯ:-** ಪರಮಾತ್ಮನು ಪುರುಷರಲ್ಲೆಲ್ಲಾ ಅತ್ಯಂತ ಪೂರ್ಣನಾದವನು. ತಮ್ಮ ನೈಜ ಗುಣಗಳಾದ ಏಕದೇಶೀಯತ್ವ - ಅಲ್ಪಜ್ಞತ್ವಗಳ ಕಾರಣದಿಂದ, ವಿವಿಧ ಭೌತಿಕ ಭೋಗಗಳ ಗುಂಗಿನಲ್ಲಿ ಮಹಾದುಷ್ಟ ಪ್ರವೃತ್ತಿಗಳಿಗೆ ಸಿಕ್ಕಿಕೊಳ್ಳುವ ಜೀವರಿಗೆ, ಅವಕ್ಕೆ ತಕ್ಕಂತಹ ದಂಡವನ್ನಿತ್ತು ಗ್ಲಾನಿಗೆ ಈಡು ಮಾಡುವವನು. ಆತ್ಮವಿಕಾಸಕ್ಕೆ ಆವಶ್ಯಕವಾದ ಕಾರಣ ಜೀವ ಮಾತ್ರರಿಗೆ ಗ್ರಾಹ್ಯವಾಗಿರುವ ಈ ಬಗೆ ಬಗೆಯ ಸೃಷ್ಟಿಗಳಿಗೆ, ಲೋಕ - ಲೋಕಾಂತರಗಳಿಗೆ ಸರ್ವೋನ್ನತ ಶಾಸಕನಾಗಿರುವವನು. ಪ್ರಾಕೃತಿಕ ತತ್ತ್ವಗಳೆಲ್ಲದರ ಸಾರರೂಪವಾದ ಈ ಲೋಕದಲ್ಲಿ ಎಲ್ಲರೂ ಒಂದಾಗಿ, ಅನುಪಮ ಶ್ರದ್ಧೆಯಿಂದ ಆ ಸರ್ವೇಶ್ವರನನ್ನು ಎಲ್ಲೆಡೆಯಿಂದಲೂ ಸ್ತುತಿಸಿರಿ.

**ಭಾಷ್ಯ:-** ಪಾತಕರಿಗೆ ಈಗಾಗಲೇ ನಾನಾ ಗುಣಗಳಿಂದ ಕೂಡಿದವನಾದ ಇಂದ್ರದೇವನ ಪರಿಚಯ ಸಾಕಷ್ಟಾಗಿದೆ. ಸಾಕಷ್ಟಾಗಿದೆ - ಎಂದರೆ ತಪ್ಪಾದೀತೇನೋ ! ಸರ್ವ ದೃಷ್ಟಿಯಿಂದಲೂ ಸೀಮಾರಹಿತನಾದ ಸರ್ವೇಶ್ವರನ ವಿಷಯದಲ್ಲಿ ಹಾಗೆನ್ನುವುದು ಪ್ರಾಯಶಃ

ಅಪರಿಪಕ್ವ ವಿಚಾರಶೀಲತೆಯು, ಅಪೂರ್ಣ ಬುದ್ಧಿಯ ಪರಿಚಯವನ್ನು ಉಂಟುಮಾಡುವ ಕ್ರಿಯೆಯಾದೀತು. ಆದರೆ - ತಥ್ಯ ಮಾತ್ರ ಇದೇ; ಒಂದೊಂದು ಮಂತ್ರದ ಮನನ ದೊಂದಿಗೂ ಪರಮಾತ್ಮನ ವಿಷಯದಲ್ಲಿ ಹೆಚ್ಚು - ಹೆಚ್ಚು ಅರಿವು ಮೂಡುತ್ತಾ ಹೋಗು ತ್ತದೆ. ಅರಿವು - ಎಂದೆವು; ಸಾಕ್ಷಾತ್ಕಾರವೆನ್ನಲಿಲ್ಲ. ಅರಿವು ಸಾಕ್ಷಾತ್ಕಾರವಲ್ಲ; ಸಾಕ್ಷಾತ್ಕಾರದ ಸಾಧನ ಮಾತ್ರ. ಮತ್ತು ಅರಿವಾದರೂ ಪರಮಾತ್ಮನದಲ್ಲ; ಕೇವಲ ಅವನ ಲಕ್ಷಣಗಳದು ಮಾತ್ರ ಉಂಟಾಗುವುದು. ಸಂಜ್ಞಾ - ಸಂಜ್ಞೀ - ಸಂಬಂಧದ ಮೂಲಕ, ಲಕ್ಷಣ - ಲಕ್ಷ್ಯಗಳ ಘನಿಷ್ಠ ಸಂಬಂಧದ ಮೂಲಕ ಈಶ್ವರನ ಸಾಕ್ಷಾತ್ಕಾರವಾಗುವುದು. ಇದೇ ಕಾರಣದಿಂದ, ಪುನರುಕ್ತದಂತೆ ಕಂಡರೂ ಪುನರುಕ್ತವಲ್ಲದ, ಪ್ರಭು - ಗುಣಗಾನದ ಶಬ್ದಗಳು ಮತ್ತೆ ಮತ್ತೆ ಮುಂದೆ ಬರುತ್ತವೆ. ಮತ್ತು ಪ್ರತಿ ಸಾರಿಯೂ ಏನಾದರೂ ಒಂದು ನವೀನತೆಯ ಬಣ್ಣ ತಳೆದೇ ಬರುತ್ತವೆ. ಅವುಗಳ ಮನನ ಮಾಡುತ್ತಾ - ಮಾಡುತ್ತಾ, ಮನಸ್ಸು ಲಕ್ಷಣಗಳನ್ನು ಹಿಂದೆ ಬಿಟ್ಟು, ಲಕ್ಷ್ಯ ದಲ್ಲಿ ನಿಲ್ಲುವ ಶಕ್ತಿಯನ್ನು ಗಳಿಸಿಕೊಳ್ಳುತ್ತದೆ. ಮನಸ್ಸು ಈ ಮಟ್ಟ ವನ್ನು ಮುಟ್ಟಿದ ಮೇಲೆ, ಮನೀಷಿಯಾದ ಮಾನವನ ಅಧಃಪತನದ ಸಂಭವ ಬಹು ಕಡಿಮೆ.

ಈ ಸೂಕ್ತದ ದೇವತೆಯಾದ ಅದೇ ಇಂದ್ರನ ಬಗೆಗೆ ಈ ಮಂತ್ರ ಕೆಳ ಕಂಡ ವೈಶಿಷ್ಟ್ಯಗಳನ್ನು ಜಿಜ್ಞಾಸುಗಳ ಮುಂದೆ ಮಂಡಿಸುತ್ತಿದೆ:-

೧. ಪುರೂಣಾಂ ಪುರೂತಮಃ.

೨. ವಾರ್ಯಾಣಾಂ ಈಶಾನಃ.

೩. ಪುರೂಣಾಂ ವಾರ್ಯಾಣಾಂ ಈಶಾನಃ. [ಮಹರ್ಷಿ ದಯಾನಂದರು 'ಪುರು' ಶಬ್ದವನ್ನು 'ವಾರ್ಯ'ದ ವಿಶೇಷಣವೆಂದು ಗ್ರಹಿಸಿದ್ದಾರೆ.]

ಶ್ರೀ ಮಧ್ವರು ಈ ಮಂತ್ರದ ಮೇಲೆ ಹೀಗೆ ಭಾಷ್ಯ ಬರೆದಿದ್ದಾರೆ:-

**ಸುಪೂರ್ಣಾನಾಂ ಪೂರ್ಣತಮಂ ವರೇಣ್ಯಾನಾಮಧೀಶ್ವರಂ ।**
**ಸುತೇ ಸೋಮೇ ಸುಖೇನೈವ ಸಚಾ ಗಾಯತ ತಂ ಪ್ರಭುಂ ॥**

ಅರ್ಥ ಸುಬೋಧವಾಗಿದೆ. "ಬಹು ಪೂರ್ಣರಾದವರ ಮಧ್ಯೆ ಪೂರ್ಣತಮನೂ, ಉಪಾದೇಯ - ಎಂದರೆ ಗ್ರಾಹ್ಯ ವಸ್ತುಗಳೆಲ್ಲದರ, ತತ್ತ್ವಗಳೆಲ್ಲದರ ಮಹಾಸ್ವಾಮಿಯೂ ಆದ ಪ್ರಭುವನ್ನು, ಸೋಮರಸ ಹಿಂಡಲ್ಪಡುತ್ತಿರುವಲ್ಲಿ, ಸುಖವಾಗಿಯೇ ಸ್ತುತಿಸಿರಿ." ಪರ ಮಾತ್ಮ ಪೂರ್ಣತಮ; ವರಣೀಯವಾದುದೆಲ್ಲದರ ಅಧೀಶ್ವರ - ಎಂಬಲ್ಲಿ ವಾದಕ್ಕೆಡೆಯಿಲ್ಲ. ಪಾಲನ, ಪೂರಣ' ಎಂಬರ್ಥಗಳನ್ನುಳ್ಳ 'ಪೃ' ಧಾತುವಿನಿಂದ 'ಪುರು' ಶಬ್ದವೂ, 'ವರಣ'- ಎಂಬರ್ಥವನ್ನುಳ್ಳ 'ವೃಞ್' 'ಧಾತು'ವಿನಿಂದ 'ವಾರ್ಯ' ಶಬ್ದವೂ ವ್ಯುತ್ಪನ್ನವಾಗಿವೆ-ಎಂದು ಅವರು ಗ್ರಹಿಸಿ ಭಾಷ್ಯ ಮಾಡಿದ್ದಾರೆ. '**ಸುತೇ ಸೋಮೇ**' - ಎಂಬಲ್ಲಿ "ಸೋಮರ

'ಹೊಡಲ್ಪಡುವಲ್ಲಿ" - ಎಂದು ಅವರು ಬರೆದಿರುವುದು ಪೌರಾಣಿಕ ಪರಂಪರಾನುಕೂಲ. ಅದ ರಿಂದ, ವೇದಗಳ ಗಂಭೀರಾಶಯ ವ್ಯಕ್ತವಾಗದು.

ಶ್ರೀ ॥ ಸಾಯಣರು ಇದಕ್ಕಿಂತ ಹೆಚ್ಚು ಆಳಕ್ಕಿಳಿದಿದ್ದಾರೆ - ಎಂದು ತೋರುತ್ತದೆ. ಏಕೆಂದರೆ ಅವರು **"ಪುರುತಮಂ ಪುರೂಣಾಂ"** - ಎಂಬ ಶಬ್ದಗಳಿಗೆ ಅರ್ಥ ಮಾಡುತ್ತಾ- **"ಪುರೂನ್ ಬಹೂನ್ ಶತ್ರೂಂಸ್ತಮಯತಿ, ಗ್ಲಾಪಯತೀತಿ ಪುರುತಮಃ"** ಎಂದರೆ, "ಬಹುಮಂದಿ ಶತ್ರುಗಳನ್ನು ಗ್ಲಾನಿಗೆ - ನೋವುಗಳಿಗೆ - ಈಡು ಮಾಡುವವನು ಪುರುತಮನು" - ಎಂದು ಬರೆದಿದ್ದಾರೆ. **"ತಮುಗ್ಲಾನೇ"** - "ತಮ್ ಎಂದರೆ ಗ್ಲಾನಿಗೆ ಈಡುಮಾಡು" - ಎಂದು ಗ್ರಹಿಸಿದರೆ, ಅದರಲ್ಲಿ ದೋಷವಿಲ್ಲ. "ಗ್ಲೈ" ಧಾತುವಿಗೆ **'ಅಪೇಕ್ಷಿಸ ದಿರು.'** - ಎಂದರ್ಥವಿದೆ. ಈ ಧಾತುವಿನ ಸಕರ್ಮಕ ರೂಪ 'ಗ್ಲಾಪಯ' - ಎಂದಾಗು ತ್ತದೆ. ಹೀಗೆ, "ಗ್ಲಾಪಯತಿ" - ಎಂದರೆ, 'ಬೇಡದುದನ್ನು ಬಿಟುಮಾಡು - ಎಂದಾಗುತ್ತದೆ. ಮಾತ್ರವಲ್ಲ; 'ಒಣಗಿಸಿಬಿಡು, ನೋಯಿಸು, ಆಯಾಸಪಡಿಸು.' ಎಂಬರ್ಥಗಳೂ ಇವೆ. ಸಾಯಣರು ಇದೇ ಅರ್ಥಗಳನ್ನು ಗ್ರಹಿಸಿ ಭಾಷ್ಯ ಬರೆದಿದ್ದಾರೆ. 'ಬಹುಜನ ಶತ್ರುಗಳನ್ನು' - ಎಂಬ ಸ್ಥಳದಲ್ಲಿ ಮಾತ್ರ ಸ್ವಲ್ಪ ಆಲೋಚಿಸಬೇಕಾಗುತ್ತದ. ಸರ್ವೇಶ್ವರನು ಸರ್ವೇಶ್ವರನೇ ಆಗಿರುವಾಗ, ಅವನಿಗೆ ಶತ್ರುಗಳಾರು, ಮಿತ್ರರಾರು ? ಪ್ರಾಪ್ತಸರ್ವಸ್ವನೂ, ನಿತ್ಯತೃಪ್ತನೂ ಸರ್ವದಾ ಮತ್ತು ಸರ್ವಥಾ ಆನಂದಮಯನೂ ಆದ ಆ ಪ್ರಭುವಿಗೂ ಶತ್ರುಗಳುಂಟೇ ? ಋಗ್ವೇದವಂತೂ ಅತಿಸ್ಪಷ್ಟವಾಗಿ, **'ನಾಸ್ಯ ಶತ್ರುರ್ನ ಪ್ರತಿಮಾನಮಸ್ತಿ.'** [ಋಗ್ವೇದ:- 6. 18. 12.] "ಈ ದೇವ ದೇವನಿಗೆ ಶತ್ರುವಾವನೂ ಇಲ್ಲ; ಸಮಾನ ತೂಕದವನೂ (ಭಾವನೆ ಗ್ರಹಿಸಿರಿ) ಇಲ್ಲ." ಎಂದೇ ಹೇಳುತ್ತದೆ. ಆದರೂ, "ಈಶ್ವರಾಜ್ಞಾರೂಪವಾದ ವೇದಾದೇಶಗಳಿಗೆ ಪ್ರತಿಕೂಲವಾಗಿ ವರ್ತಿಸುವವನೇ ಅವನ ಶತ್ರು." - ಎಂದು ಆಲಂಕಾರಿಕ ವಾದ ಅರ್ಥವನ್ನು ಗ್ರಹಿಸಲು ಅವಕಾಶವಿದೆ. ಉದಾಹರಣೆಗೆ - **"ದೀರ್ಘಂತಮ ಆಶಯದಿಂದ್ರ ಶತ್ರುಃ".** - [ಋಗ್ವೇದ:- 1. 32. 10.] - "ಸರ್ವೇಶ್ವರನ ಶತ್ರುವು ದೀರ್ಘವಾದ ಅಂಧಕಾರದಲ್ಲಿ ಬಿದ್ದಿರುತ್ತಾನೆ."; **"ಹತ್ವಾಯ ಶತ್ರೂನ್ ವಿಭಜಸ್ವ ವೇದಃ"** [ಋಗ್ವೇದ:- 1. 32. 6.] - "ಓ ಸರ್ವಶಕ್ತಿಮನ್ ! ಶತ್ರುಗಳನ್ನು ಬಲಿಹಾಕಿ, ಸಂಪತ್ತನ್ನು ಹಂಚಿಕೊಡು." - ಈ ಮೊದಲಾದ ಉದ್ಧರಣಗಳನ್ನು ಕೊಡಬಹುದು. ಆದರೆ, ಇವೆಲ್ಲಾ ಆಲಂಕಾರಿಕ ಭಾಷಾಬದ್ಧವೆಂಬುದನ್ನು ಮಾತ್ರ ಮರೆಯುವಂತಿಲ್ಲ. ಏಕೆಂದರೆ, ಅಸೀಮ ಪ್ರೇಮದ ಗಂಭೀರ ಮಹಾಸಾಗರದಂತಿರುವ ಆ ಭಗವಂತ, ಯಾವನೇ ಜೀವನಿಗೂ ಶತ್ರುವಲ್ಲ. ಋಗ್ವೇದದ ಈ ಮರ್ಮಸ್ಪರ್ಶೀ ಶಬ್ದಗಳೇ ಸಾಕು:-

**ತ್ವಮಗ್ನೇ ಪ್ರಮತಿಸ್ತ್ವಂ ಪಿತಾಸಿ ನಸ್ತ್ವಂ ವಯಸ್ಕೃತ್ತವ ಜಾಮಯೋವಯಂ**
**ಸಂ ತ್ವಾ ರಾಯಃ ಶತಿನಃ ಸಂ ಸಹಸ್ರಿಣಃ ಸುವೀರಂ ಯಂತಿ ವ್ರತಪಾಮದಾಭ್ಯ** [ಋಗ್ವೇದ:-1. 31. 10.]

"[ಅದಾಭ್ಯ] ಯಾವನೇ ಶಕ್ತಿಗೂ ಮಣಿಯದ, [ಅಗ್ನೇ] ಬ್ರಹ್ಮಾಂಡಾಧಿ ನಾಯಕನಾದ ಭಗವಂತ! [ತ್ವಂ] ನೀನು, [ನಃ] ನಮ್ಮ, [ಪ್ರಮತಿಃ] ಉತ್ಕೃಷ್ಟ ಜ್ಞಾನ ಸ್ವರೂಪನು; ನಮ್ಮ ಬಾಳಿನ ಬೆಲೆಯ ಆಳತೆಯ ಕೋಲು. * [ತ್ವಂ] ನೀನೇ, [ನಃ] ನಮ್ಮ [ಪಿತಾ ಅಸಿ] ತಂದೆಯಾಗಿದ್ದೀಯೆ. [ತ್ವಂ] ನೀನೇ, [ವಯಸ್ಕೃತ್] ಆಯುರ್ದಾತೃವು: ಆತ್ಮ - ವಿಕಾಸಸಾಧಕನು. [ವಯಂ] ನಾವು, [ತವ ಜಾಮಯಃ] ನಿನ್ನ ಮಕ್ಕಳಾಗಿದ್ದೇವೆ. [ಸುವೀರಂ] ಉತ್ತಮ ವೀರನೂ, ಉತ್ತಮವಾದುದನ್ನೇ ಜೀವನಿಗೆ ಪ್ರೇರಿಸುವವನೂ, [ವ್ರತಪಾಂ] ಶುಭಸಂಕಲ್ಪಗಳರಕ್ಷಕನೂ ಆದ, [ತ್ವಾ]ನಿನ್ನನ್ನೇ, ನಿನ್ನಲ್ಲಿಯೇ,[ಶತಿನಃ] ನೂರು -ನೂರು ಬಗೆಯ ಸಂಪತ್ತುಳ್ಳವನ, [ರಾಯಃ] ಐಶ್ವರ್ಯಗಳು, [ಸಂ ಯಂತಿ] ಒಂದುಗೂಡುತ್ತವೆ. [ಸಹಸ್ರಿಣಃ] ಸಾವಿರ - ಸಾವಿರ ವಿಧದ ಸಂಪತ್ತುಳ್ಳವನ, [ರಾಯಃ] ಐಶ್ವರ್ಯಗಳೂ, [ಸಂ ಯಂತಿ] ಸೇರಿಹೋಗುತ್ತವೆ." ಮಕ್ಕಳಾದ ನಾವು, ಜೀವ ಮಾತ್ರರು, ತಂದೆಯಾದ ಆ ಪ್ರಭುವಿಗೆ ವೈರಿಗಳಾದೇವಾದರೂ ಎಂತು ?

ವಸ್ತುತಃ ಭಗವಂತ, ಸರ್ವಥಾ ಅನುಪಮನೇ ಆದ ಆ ವಿಶ್ವಚೇತನ, ಸರ್ವಶ್ರೇಷ್ಠ - ಸರ್ವಜ್ಯೇಷ್ಠನಾದ ಆ ವಿರಾಡಾತ್ಮ ಶತ್ರುರಹಿತನು. ವೇದಗಳು ಅವನನ್ನು **"ಮಿತ್ರೋ ಅದ್ಭುತಃ"** [ಋಗ್ವೇದ:- 1. 94. 13.] - "ಅವನು ಅದ್ಭುತನಾದ ಮಿತ್ರನು; **"ಸಖಾ ಸಖ್ಯಾ ಸಮಿಧ್ಯತೇ"** [ಋಗ್ವೇದ:- 8. 43. 14.] "ಸ್ವತಃ ಸರ್ವರಿಗೂ ಸಖನಾದ ನೀನು, ಸಖ್ಯಭಾವನಾವಂತನಿಂದಲೇ ಪ್ರಕಟವಾಗುವೆ." ; **"ಸಯುಜಾ ಸಖಾಯಾ"** [ಋಗ್ವೇದ:- 1. 164. 20] "ಜೀವನೂ, ಈಶ್ವರನೂ ಸದಾ ಒಂದಿಗೇ ಇರುವವರು ಪರಸ್ಪರ ಮಿತ್ರರು" - ಎಂದೇ ಗುರುತಿಸುತ್ತವೆ. ಮಾತ್ರವಲ್ಲ; ಶತ್ರುಭಾವನಾಯುಕ್ತನಿಗೆ ಮುಕ್ತಿಯೇ ಸಿಕ್ಕದು; ಶತ್ರುರಹಿತ ಮಾತ್ರ ಮೋಕ್ಷಾಧಿಕಾರಿ." - ಎಂಬ ಭಾವನೆಯನ್ನು **"ಅಜಾತ ಶತ್ರು ಮಜರಾಸ್ವರ್ವತೀ .........ಉಷಯತೇ."** [ಋಗ್ವೇದ:- 5. 34. 1] "ಜೀರ್ಣವಾಗದ ಆನಂದಮಯೀ ಮುಕ್ತಿ ಅಜಾತ ಶತ್ರುವಿಗೆ ಲಭ್ಯ." - ಎಂದು ಋಗ್ವೇದ ವ್ಯಕ್ತಪಡಿಸುತ್ತಿದೆ. ಉಪಾಸ್ಯನೂ ಶತ್ರುರಹಿತನು; ಉಪಾಸಕನೂ ಅದೇ ಗುಣವನ್ನು ಅರಳಿಸಿಕೊಂಡಾಗ ಮಾತ್ರ ಮೋಕ್ಷ - ಪ್ರಾಪ್ತಿ ಸಂಭವ - ಎನ್ನುವುದೇ ವೇದೋಕ್ತ ತತ್ತ್ವ. ಯಜುರ್ವೇದದ - **"ಮಿತ್ರಸ್ಯ ಮಾ ಚಕ್ಷುಷಾ ಸರ್ವಾಣಿ ಭೂತಾನಿ ಸಮೀಕ್ಷಂತಾಂ। ಮಿತ್ರಸ್ಯಾಹಂ ಚಕ್ಷುಷಾ ಸರ್ವಾಣಿ ಭೂತಾನಿ ಸಮೀಕ್ಷೇ."** [36. 18.] "ಸಮಸ್ತ ಜೀವರೂ ನನ್ನನ್ನು ಮಿತ್ರದೃಷ್ಟಿಯಿಂದ ನೋಡಲಿ; ನಾನು ಜೀವಮಾತ್ರರನ್ನು ಮಿತ್ರದೃಷ್ಟಿಯಿಂದಲೇ ಅವಲೋಕಿಸುವೆ." - ಎಂಬ ಮಧುರಸ್ವರ ಯಾರ ಹೃದಯವೀಣೆಯ ತಂತಿಯನ್ನು ತಾನೇ ಮೀಂಟದೇ ಬಿಟ್ಟೀತು ?

---

* ಪ್ರಮತಿ, ಪ್ರಮಿತಿ, ಪ್ರಮಾಣ, ಪ್ರಮಾ, ಮಾ - ಎಲ್ಲದರ ಅರ್ಥವೂ ಒಂದೇ. ಮಾನವನ ಜೀವನದ ಔನ್ನತ್ಯದ ಆಳತೆಯಾಗುವುದು, ಮಾನವ ಎಷ್ಟು ಮಟ್ಟಿಗೆ ಈಶ್ವರನನ್ನು ಅರಿಯಲು ಶಕ್ತನಾಗಿದ್ದಾನೆ - ಎಂಬುದರ ಮೇಲೆಯೇ.

ವಸ್ತು ಸ್ಥಿತಿ ಇದೇ ಆದರೂ ಸಾಯಣರು **"ಪುರೂತಮಃ"** ಎಂಬುದಕ್ಕೆ - "ಬಹು ಶತ್ರುಗಳನ್ನು ಗ್ಲಾನಿಗೆ ಈಡು ಮಾಡುವವನು." - ಎಂದು ಅರ್ಥಮಾಡಿದ್ದಾರೆ. ಈ ಅರ್ಥವನ್ನು ಹಗುರವಾಗಿ ಮೂಲೆಗೊತ್ತಲು ಸಾಧ್ಯವಿಲ್ಲ. ಏಕೆಂದರೆ, ಪ್ರತಿಯೊಂದು ಪದ ವನ್ನೂ ತೀಕ್ಷ್ಣ - ತರ್ಕದ ಒರೆಗಲ್ಲಿಗೆ ಹಚ್ಚಿ ನೋಡುವ ಮಹರ್ಷಿ ದಯಾನಂದರೂ ಕೂಡ ಈ ಶಬ್ದಕ್ಕೆ ಭಾಷ್ಯಮಾಡುವಾಗ **"ಪುರೂನ್ ಬಹೂನ್ ದುಷ್ಟ ಸ್ವಭಾವಾನ್ ಜೀವಾನ್ ಪಾಪಕರ್ಮ ಫಲದಾನೇನ ತಮಯತಿ ಗ್ಲಾಪಯತಿ."** - ಬಹು ಮಂದಿ ದುಷ್ಟಸ್ವಭಾವರಾದ ಜೀವರನ್ನು ಅವರ ಪಾಪಕರ್ಮಗಳಿಗೆ ಫಲವಿತ್ತು ಗ್ಲಾನಿಗೀಡು ಮಾಡುತ್ತಾನೆ ಪರಮೇಶ್ವರನು." - ಎಂದಿದ್ದಾರೆ. ಕರುಣಾಮಯನು ಕರ್ಮಫಲಪ್ರದಾತೃವೂ ಆಗಿದ್ದಾನೆ. ರುದ್ರರೂಪನಾಗಿ ಪಾತಕಿಗಳನ್ನು ರೋದನಕ್ಕೆ ಗುರಿಪಡಿಸುತ್ತಾನೆ. **"ಯುವಾ ಪಿತಾ ಸ್ವಪಾ ರುದ್ರ ಏಷಾಂ."** [ಋಗ್ವೇದ: - 5.60.5. ] "ಅಜರನೂ, ಆತ್ಮ ರಕ್ಷಕನೂ ಆದ ಭಗವಂತನು ಇವರ ತಂದೆಯೂ ಅಹುದು; ಪಾಪಫಲ ಭುಂಜನ ಮಾಡಿಸು ವಾಗ ಅಳುವಂತೆ ಮಾಡುವ 'ರುದ್ರ'ನೂ ಅಹುದು." - ಎಂಬುದು ಸ್ಮೃತಿಪಥದಿಂದ ಜಾರಿಹೋಗದಿದ್ದರೆ, ಈ ತತ್ವ ಸುಲಭವಾಗಿ ಹೃದಯಾಂಕಿತವಾದೀತು. ಭಾವನೆ ಗ್ರಾಹ್ಯ ವಾದೀತು.

ಸಾಯಣರು **'ಪುರೂಣಾಂ'** ಶಬ್ದವನ್ನು **'ವಾರ್ಯಾಣಾಂ'** - ಎಂಬ ಶಬ್ದಕ್ಕೂ ಜೋಡಿಸಿ, **"ಪುರೂಣಾಂ ವಾರ್ಯಾಣಾಂ ಈಶಾನಾಂ ಬಹೂನಾಂ ವರಣೀಯಾ ನಾಂ ಧನಾನಾಮೀಶಾನಂ."** - ಬಹಳವಾದ ಹಾಗೂ ವರಣೀಯವಾದ ಧನಗಳ ಸ್ವಾಮಿಯನ್ನು." - ಎಂದು ಬರೆದಿದ್ದಾರೆ. ಮಹರ್ಷಿ ದಯಾನಂದರು - **"ಪುರೂಣಾ ಮೀಶಾನಂ ಬಹೂನಾಮಾಕಾಶಾದಿಪೃಥಿವ್ಯಂತಾನಾಂ ಪದಾರ್ಥಾನಾಂ ರಚನೇ ಸಮರ್ಥಂ ಪರಮೇಶ್ವರಂ"** - "ಆಕಾಶದಿಂದ ಹಿಡಿದು ಪೃಥ್ವಿಯವರೆಗಿನ ವಸ್ತುಗಳ ರಚನೆಯಲ್ಲಿ ಸಮರ್ಥನಾದ ಪರಮೇಶ್ವರನನ್ನು." - ಎಂದಿದ್ದಾರೆ. ಸಾಯಣರ ದೃಷ್ಟಿಯಲ್ಲಿ ಈಶಾನನು **'ಸ್ವಾಮಿ'**ಯಾದರೆ, ದಯಾನಂದರ ದೃಷ್ಟಿಯಲ್ಲಿ **'ರಚನಾ ಸಮರ್ಥ'**ನಾಗಿದ್ದಾನೆ. ಇಲ್ಲಿ ಪರಸ್ಪರ ಪೂರಕಭಾವ ಕಾಣುತ್ತದೆಯೇ ಹೊರತು, ವಿರೋಧ ಭಾವವಲ್ಲ. ಮುನ್ನಡೆದು ಮಹರ್ಷಿಗಳು. **"ವಾರ್ಯಾಣಾಂ ವರಾಣಾಂ ವರಣೀಯಮ ನಾಮತ್ಯಂತೋತ್ತಮಾನಾಂ ಮಧ್ಯೇ ಸ್ವೀಕರ್ತುಮರ್ಹಂ"** - ಕಾರ್ಯಗಳ, ಎಂದರೆ ವರಗಳ, ವರಣೀಯಗಳ, ಅತ್ಯಂತ ಉತ್ತಮವಾದ ತತ್ತ್ವಗಳ ಮಧ್ಯೆ ಸ್ವೀಕಾರಾರ್ಹ ನಾದ ಪರಮಾತ್ಮನನ್ನು - ಎಂದು ವಿಸ್ತರಿಸಿದ್ದಾರೆ. ತತ್ತ್ವದೃಷ್ಟಿಯಿಂದ ಇವನ್ನಾರೂ ವಿರೋಧಿಸಲು ಸಾಧ್ಯವಿಲ್ಲ.

ಈ ವರೆಗೆ ಹೇಳಿದುದೆಲ್ಲಾ ಇಂದ್ರನ ವಿಷಯವೇ. ಸ್ಕಂದ ಸ್ವಾಮಿಗಳು 'ಪ್ರರುತಮ' ದಲ್ಲಿನ 'ತಮ'ವೆಂಬುದನ್ನು 'ತಮು ಅಭಿಕಾಂಕ್ಷಾಯಾಂ' - ಈ ಅರ್ಥದ ಧಾತುವಿನಿಂದ ನಿಷ್ಪನ್ನವೆಂದು ಗ್ರಹಿಸಿ, **'ಬಹುಭಿರ್ಯೋಽಭಿಕಾಂಕ್ಷ್ಯತೇ, ಪ್ರಾರ್ಥ್ಯತೇ, ಯಾಚ್ಯತೇ ಸ ಪುರುತಮಃ.'** - "ಬಹುಮಂದಿಗಳಿಂದ ಅಭಿಕಾಂಕ್ಷಿಸಲ್ಪಡುವವನು

ಪ್ರಾರ್ಥಿಸಲ್ಪಡುವವನು, ಯಾಚಿಸಲ್ಪಡುವವನು ಪುರುತಮನು." - ಎಂದಿದ್ದಾರೆ. ಇದೂ ಜಿಜ್ಞಾಸುಗಳ ಜ್ಞಾನವರ್ಧಕವೇ ಆಗಿದೆ.

"ಸುತೇ ಸೋಮೇ ಸಚಾ ಇಂದ್ರಂ (ಅಭಿಪ್ರಗಾಯತ)' - ಇದಿಷ್ಟು ಮಾತ್ರ ಈಗ ವಿವರಣೆಗೆ ಉಳಿದಿದೆ. 'ಅಭಿಪ್ರಗಾಯತ' - ಎಂಬ ಕ್ರಿಯಾಸೂಚಕ ಶಬ್ದವೃಂದ ಮೇಲಿನ ಮಂತ್ರದಿಂದ ಅಧ್ಯಾಹಾರವಾಗಿ ಬಂದಿದೆ. ಪರಂಪರಾಗತ ವಿಶ್ವಾಸದ ಜಾಡನ್ನೇ ಹಿಡಿದು ನಡೆದ ಸಾಯಣರ ದೃಷ್ಟಿಯಲ್ಲಿ 'ಸೋಮೇ ಸುತೇ' ಎಂಬ ಶಬ್ದದ್ವಯ 'ಸೋಮರಸ ಹಿಂಡಲ್ಪಡುತ್ತಿರಲು' - ಎಂಬಿಷ್ಟೇ ಹೇಳಿ, ಮೌನ ತಾಳುತ್ತದೆ. ಮಂತ್ರದ ಈ ಭಾಗದಲ್ಲಿ ಅಡಗಿರುವ, ಸಾರ್ವಭೌಮ-ಸಾರ್ವಕಾಲಿಕ-ಶಾಶ್ವತ ಮೂಲ್ಯಯುಕ್ತ ಮಹೋನ್ನತ ಸಿದ್ಧಾಂತವನ್ನು ಗ್ರಹಿಸಲು ಕೇವಲ ಬಹುಶ್ರುತತ್ವ, ಪಾಂಡಿತ್ಯ ಸಾಲದು; ಸಾಧನೆ ಬೇಕು; ತಪಸ್ಸು ಬೇಕು; ಎಲ್ಲಕ್ಕಿಂತಧಿಕವಾಗಿ ಮಾನವತ್ವದ ಸರ್ವೋತ್ತಮ ಲಕ್ಷಣವಾದ ವಿಶಾಲ ಹೃದಯತ್ವಬೇಕು. ಮೇಲು-ಕೀಳುಗಳ ಜಂಜಾಟಕ್ಕೆ ಸಿಕ್ಕಿಕೊಂಡ, ಜಾತ್ಯುಪಜಾತಿಗಳ ಅಸ್ತಿತ್ವಕ್ಕೆ ಶಾಶ್ವತತ್ವವನ್ನು ಕೊಡಲು ಹೆಣಗುವ ಹೃದಯ, ಮನಸ್ಸಿನ ಚಿಕ್ಕತನ ಇರುವಲ್ಲಿ ಈ ಶಬ್ದಗಳ ಗುಂಜನಕ್ಕೆ ಅರ್ಥಕೊಡಿ ಬರುವುದು ಸರ್ವಥಾ ಅಸಂಭವ. ಮಹರ್ಷಿ ದಯಾನಂದರ ದೃಷ್ಟಿಯಂತಹ ಆರ್ಷದೃಷ್ಟಿಯೇ ಬೇಕಾದೀತು. ಮಹರ್ಷಿಪ್ರವರರ ಮಾತುಗಳಲ್ಲೇ ಕೇಳೋಣ:-

**"[ಇಂದ್ರಂ] ಸಕಲೈಶ್ವರ್ಯಪ್ರದಂ ಪರಮೇಶ್ವರಂ, ಆತ್ಮನಃ ಸರ್ವಭೋಗಹೇತುಂ, [ಸೋಮೇ] ಸೋತವ್ಯೇ ಸರ್ವಸ್ಮಿನ್ ಪದಾರ್ಥೇ, ವಿಮಾನಾದಿಯಾನೇ ವಾ, [ಸಚಾ] ಯೇ ಸಮವೇತಾಃ ಪದಾರ್ಥಾಃ ಸಂತಿ, [ಸುತೇ] ಉತ್ಪನ್ನೇ, ಅಭಿಷವವಿದ್ಯಯಾಽಭಿಪ್ರಾಪ್ತೇ [ಅಭಿಪ್ರಗಾಯತ]"**

ಈ ಆರ್ಷಶಬ್ದಗಳ ತಾತ್ಪರ್ಯ ತಿಳಿಗನ್ನಡದಲ್ಲಿ ಹೀಗಾಗುತ್ತದೆ:- "ಪರಮಾತ್ಮನು ಎಲ್ಲ ಐಶ್ವರ್ಯಗಳನ್ನು ಕೊಡುವವನೂ; ಜೀವನದ ಸಿಹಿ-ಕಹಿ ಭೋಗಗಳೆಲ್ಲಕ್ಕೂ ನಿಮಿತ್ತ ಕಾರಣನು. ಸೃಷ್ಟಿಯ ಪ್ರತಿಯೊಂದು ಪದಾರ್ಥವೂ ವಿಶ್ಲೇಷಣಕ್ಕೆ ಅರ್ಹವಾದುದು, ನೈಸರ್ಗಿಕವಾದ ಪರ್ವತ-ಸಾಗರಗಳೇ ಆಗಲಿ; ಮಾನವಕೃತವಾದ ವಿಮಾನ ಮೊದಲಾದ ಗತಿ-ಸಾಧನಗಳೇ ಆಗಲಿ. ಎಲ್ಲದರಲ್ಲಿಯೂ ಭಿನ್ನ-ಭಿನ್ನ ಅಂಶಗಳಿವೆ. ಭಗವಂತನ ಸೃಜನ ಜ್ಞಾನದಿಂದಲೂ, ಮಾನವನ ವೈಜ್ಞಾನಿಕ ಪುರುಷಾರ್ಥದಿಂದಲೂ ರೂಪಗೊಂಡಿರುವ ಈ ಪ್ರಪಂಚದಲ್ಲಿ ಎಲ್ಲರೂ ಒಂದಾಗಿ ಆ ಸರ್ವೇಶ್ವರನನ್ನು ಎಲ್ಲೆಡೆಯಿಂದಲೂ, ಉತ್ಕೃಷ್ಟ ರೀತಿಯಲ್ಲಿ ಸ್ತುತಿಸಿರಿ."

ಮಹರ್ಷಿ ಗುರುತಿಸಿದ ಸಾರ್ವಕಾಲಿಕ-ಸಾರ್ವಭೌಮ-ಮಾನವೀಯ ಧರ್ಮವಿದು ಸಾಂಪ್ರದಾಯಿಕರ ಸಂಕುಚಿತ ಮನೋಭಾವದ ಹಿಡಿತಕ್ಕೆ ಇದು ಸಿಕ್ಕುವುದು ಕಷ್ಟ, ಕಷ್ಟ ಮಾತ್ರವೇನು ? ಅಸಂಭವವೇ ಸರಿ, ಏಕೆಂದರೆ, ಈ ವೈದಿಕಧರ್ಮ ನಿಂತಿರುವುದು ಕುರುಡು

ನಂಬಿಕೆಯ ಮೇಲೆ ಅಲ್ಲ; ವೈಜ್ಞಾನಿಕ ವಿಶ್ಲೇಷಣ ಮನೋಭಾವದ ಮೇಲೆ. ವೈದಿಕ ಧರ್ಮದ ಜೀವನಾಡಿ ಆವಿಷ್ಕಾರ ಮನೋಭಾವ. **"ಯೂಯಂ ತತ್ಸತ್ಯಶವಸಃ ಆವಿಷ್ಕರ್ತ ಮಹಿತ್ವನಾ."** [ಋಗ್ವೇದ:- 1. 86. 9.] - "[ಸತ್ಯಶವಸಃ] ಸತ್ಯವನ್ನೇ. ಶಕ್ತಿಯಾಗಿ ಹೊಂದಿರುವ, ಸತ್ಯವೇ ಆದ ಶಕ್ತಿಯನ್ನು ಹೊಂದಿರುವ ಮಾನವರೇ! [ಯೂಯಂ] ನೀವು, [ಮಹಿತ್ವನಾ] ಸ್ವಂತ ಆತ್ಮಶಕ್ತಿಯಿಂದ, ತಮ್ಮದೇ ಆದ ಹಿರಿಮೆಯಿಂದ [ತತ್] ಅದನ್ನು, [ಆವಿಷ್ಕರ್ತ] ಆವಿಷ್ಕಾರ ಮಾಡಿರಿ." ಮತವಾದಿಗಳಿಗೆ ವೇದಗಳ ಈ ಸಮುನ್ನತ ಧ್ಯೇಯ, ಆದೇಶ, ಅರ್ಥವಾಗುವುದು ಕಠಿಣವೇ. ಪರಮಾತ್ಮನಿಂದ ಹಿಡಿದು ಮರಳಿನ ಒಂದು ಕಣದವರೆಗೆ. ಎಲ್ಲದರ ಬಗೆಗೂ ಇದೇ ತೆರೆ-ಮನದ ವಿಶಾಲ ಹೃದಯದ ವೃತ್ತಿಯನ್ನೇ ಬೆಳೆಯಿಸಿಕೊಳ್ಳಬೇಕೆಂದು ವೇದಗಳು ಆದೇಶ ನೀಡುತ್ತವೆ. ಪ್ರಶ್ನೆ ಪ್ರಾಚೀನವೋ, ಅರ್ವಾಚೀನವೋ - ಎಂಬುದಲ್ಲ; ಸತ್ಯವೋ. ಅಸತ್ಯವೋ- ಎಂಬುದು ಮಾತ್ರ.

**"ಯತ್ ಪೂರ್ವ್ಯಂ ಮರುತೋ ಯಚ್ಚ ನೂತನಂ ಯದುದ್ಯತೇ ವಸವೋ ಯಚ್ಚ ಶಸ್ಯತೇ।**
**ವಿಶ್ವಸ್ಯ ತಸ್ಯ ಭವಥಾ ನವೇದಸಃ ಶುಭಂ ಯಾತಾಮನು ರಥಾ ಅವೃತ್ಸತ॥"**
[ಋಗ್ವೇದ:- 5. 55. 8.]

"[ಮರುತಃ] ಮರ್ತ್ಯರೇ! ಸಂಯಮಿಗಳೇ! ಸತ್ಯಕ್ಕಾಗಿ ಆತ್ಮ ಬಲಿ ದಾನಕ್ಕೂ ಸಿದ್ಧರಾದ ಉದಾರಾಶಯರೇ! [ಯತ್] ಯಾವುದು, [ಪೂರ್ವ್ಯಂ] ಪ್ರಾಚೀನವೋ, [ಚ] ಮತ್ತು, [ಯತ್] ಯಾವುದು, [ನೂತನಂ] ನವೀನವೋ, [ಯತ್] ಯಾವುದು, [ಉದ್ಯತೇ] ಸ್ವತಃ ನಿಮಗೆಯೇ ಸ್ಫುರಿಸುತ್ತದೋ, [ಚ] ಮತ್ತು, [ಯತ್] ಯಾವುದು, [ಶಸ್ಯತೇ] ಅನ್ಯರಿಂದ ಉಪದೇಶಿಸಲ್ಪಡುತ್ತದೋ, [ತಸ್ಯ ವಿಶ್ವಸ್ಯ] ಆ ಎಲ್ಲವನ್ನೂ. [ಭವಥ] ನಿಮ್ಮದಾಗಿಸಿಕೊಳ್ಳಿರಿ. ಏಕೆಂದರೆ, [ವಸವಃ] ಸೀಮಿತವಾದ ದೇಹಗಳಲ್ಲಿ ವಾಸಿಸುವ ಪರಿಚ್ಛಿನ್ನ ಜೀವರೇ! [ನವೇದಸಃ] ಅಜ್ಞರೇ, ಅಲ್ಪಜ್ಞರೇ ಆಗಿದ್ದೀರಿ. [ಶುಭಂ ಯಾತಾಂ ಅನು] ಕಲ್ಯಾಣದತ್ತ ಸಾಗುವವರ ಹಿಂದೆ, [ರಥಾಃ] ನಿಮ್ಮ ಬಾಳಿನ ತೇರುಗಳು, [ಅವೃತ್ಸತ] ತೆರಳುತ್ತಾ ಹೋಗಲಿ." - ಎಂಬ ಋಗ್ವೇದದ ಕರೆ ಯಾವ ವಿಚಾರಶೀಲರನ್ನು ತಾನೇ ಸ್ತಬ್ಧಗೊಳಿಸದು ? ಈ ವಿಶಾಲದೃಷ್ಟಿ ಬೆಳೆಯಬೇಕಾದರೂ, ಈಶ್ವರೀಯ ಜ್ಞಾನಕೋಶಗಳಾದ ವೇದಗಳ ಅಧ್ಯಯನ ಅನಿವಾರ್ಯವೇ. ಮಾನವರಚಿತ ಅನ್ಯಶಾಸ್ತ್ರಗಳಿಗೆ ಸ್ವತಃ ಪ್ರಮಾಣತ್ವ ಸಲ್ಲದು. ಶತಪಥ-ಗೋಪಥಾದಿ ಬ್ರಾಹ್ಮಣಗಳೇ ಆಗಲಿ, ಈಶಾವಾಸ್ಯ, ಕೇನ, ಕಠ ಮೊದಲಾದ ಉಪನಿಷತ್ತುಗಳೇ ಆಗಲಿ, ಮನು, ಪರಾಶರ, ಯಾಜ್ಞವಲ್ಕ್ಯ-ಮೊದಲಾದ ಸ್ಮೃತಿಗಳೇ ಆಗಲಿ, ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಮೀಮಾಂಸಾ ಹಾಗೂ ವೇದಾಂತ ಎಂಬ ಷಡ್ದರ್ಶನಗಳೇ ಆಗಲಿ, ವೇದಗಳಿಗೆ ಅನುಕೂಲವಾಗಿರುವಷ್ಟು ಮಾತ್ರ ಪ್ರಮಾಣವಾದಾವು; ಅವೆಂದಿಗೂ ಸ್ವತಃ ಪ್ರಮಾಣಗಳಾಗಲಾರವು. ಅವು ಪರತಃ ಪ್ರಮಾಣಗಳು ಮಾತ್ರ. ರಾಮಾಯಣ-ಮಹಾಭಾರತಗಳಂತೂ ಐತಿಹಾಸಿಕ

ಮಹಾಕಾವ್ಯಗಳೇ ಆಗಿವೆ. ಅದನ್ನು 'ಶಾಸ್ತ್ರ' ಎಂದು ಕರೆಯುವುದೇ ಸರ್ವಥಾ ಅನುಚಿತ. 'ಭಾರತ ಪಂಚಮವೇದ' - ಎಂಬ ಮಂದಿಗೆ ವೇದಗಳ ಸ್ವರೂಪ - ಜ್ಞಾನವೇ ಇಲ್ಲವೆನ್ನಬಹುದು. ಭಾಗವತಾದಿ ೧೮ ಪುರಾಣಗಳನ್ನೂ, ಅನಿರ್ದಿಷ್ಟ ಸಂಖ್ಯೆಯ ಉಪಪುರಾಣಗಳನ್ನೂ ಶಾಸ್ತ್ರವೆಂದು ಅಂಗೀಕರಿಸಿದರೆ, ಧರ್ಮ - ಅಧರ್ಮಗಳಿಗೆ, ಸತ್ಯ - ಅಸತ್ಯಗಳಿಗೆ, ನ್ಯಾಯ - ಅನ್ಯಾಯಗಳಿಗೆ ನಡುವೆ ಏನೂ ವ್ಯತ್ಯಾಸವೇ ಉಳಿಯುವಂತಿಲ್ಲ. ಅಷ್ಟಾದಶ ಪುರಾಣಗಳನ್ನು ವ್ಯಾಸ-ರಚಿತವೆಂದು ನಂಬುವುದೂ ಕೂಡ ವಿಚಾರಶೂನ್ಯತೆಯ ದ್ಯೋತಕವೇ ಆದೀತು. ಸಾಧಾರಣ ದರ್ಜೆಯ ಲೇಖಕನೂ ಕೂಡ ತನ್ನ ಕೃತಿಗಳಲ್ಲಿ ವ್ಯಾಘಾತ ದೋಷಕ್ಕೆ (ತನ್ನ ಸಿದ್ಧಾಂತಕ್ಕೆ ಪ್ರತಿಕೂಲವಾಗಿ ತಾನೇ ಬರೆಯುವುದು.) ಅವಕಾಶ ಕೊಡಬಯಸನು; ಇನ್ನು ವ್ಯಾಸರಂತಹ ಮಹಾ ವಿದ್ವಾಂಸರು (ಅವರನ್ನು ಭಗವದವತಾರ ಇತ್ಯಾದಿ ಶಬ್ದಗಳಿಂದ ನಿರ್ದೇಶಿಸುವುದು ಪೂರ್ಣತಃ ಅವೈದಿಕ) ತಮ್ಮ ಕೃತಿಗಳಲ್ಲಿ ಅವಕ್ಕೆ ಎಡೆ ಕೊಟ್ಟಾರೇ? ಸಾತ್ವಿಕ - ರಾಜಸ - ತಾಮಸ ಪುರಾಣಗಳೆಂಬ ಕಲ್ಪನೆ ದೂರವೇ ಇರಲಿ; ವೈಷ್ಣವ – ಶೈವ ಪುರಾಣಗಳ ನಡುವಣ ಘೋರ ಆಂತರಿಕ ವಿರೋಧಗಳನ್ನು 'ಇಲ್ಲ' ಎನ್ನುವ ಧೀರನೆಲ್ಲಿದ್ದಾನೆ.

ವಸ್ತುತಃ ಮೂಲ ತತ್ತ್ವವಿದು; ಅಖಂಡ ಸತ್ಯವಿದು. ಶ್ರೀಮಚ್ಛಂಕರ - ರಾಮಾನುಜ - ಮಧ್ವರಂತಹ ಅಸಾಧಾರಣ ಪ್ರತಿಭಾಸಂಪನ್ನ ಮಹಾನ್ ದಾರ್ಶನಿಕರು 'ಪ್ರಸ್ಥಾನ ತ್ರಯಿ'ಯನ್ನು ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಮತ್ತು ಗೀತೆ - ಬದಿಗಿಟ್ಟು ವೇದ ಸಂಹಿತೆಗಳಿಗೆಯೇ ಭಾಷ್ಯ ಬರೆದು ಹೋಗಿದ್ದರೆ, ಈ ಅದ್ವೈತ - ವಿಶಿಷ್ಟಾದ್ವೈತ - ದ್ವೈತ ಮೊದಲಾದ ಹಲವಾರು ದಾರ್ಶನಿಕ ಸಂಪ್ರದಾಯಗಳು ತಲೆಯನ್ನೆತ್ತದೆ, ಜಾತಿ - ಭೇದ - ಜಡಾರಾಧನೆಯಂತಹ ರಾಕ್ಷಸೀಯ ಹಾಗೂ ಪರಮ ಮೌಢ್ಯದ ಪದ್ಧತಿಗಳು ಉದ್ಭವಿಸದೆ, ಮಾನವ ಸಮಾಜ ಮಾನವ - ಸಮಾಜವಾಗಿಯೇ ಉಳಿದುಕೊಂಡು, ನುಚ್ಚು - ನೂರಾಗದೆ, ಕಿಚ್ಚನ್ನು ಹಚ್ಚದೆ, ಸಮಾನತೆಯ ದೃಢವಾದ ಆಧಾರದ ಮೇಲೆ ಏಕಮತವಾಗಿ ನಲಿಯುತ್ತಿತ್ತು. ವೈದಿಕ ಋಷಿ - ಮುನಿಗಳು ಪ್ರಾಚೀನ ಕಾಲದಂತೆಯೇ ದೇಶ - ದೇಶಾಂತರಗಳಿಗೂ ತೆರಳಿ, ವೇದ - ಪ್ರಚಾರ ಮಾಡುತ್ತಿದ್ದಲ್ಲಿ, ಜಾರದುಷ್ಟ - ಯಹೂದ್ಯ-ಕ್ರೈಸ್ತ–ಮಹಮ್ಮದೀಯ ಮತಗಳೂ ಉದ್ಭವಿಸುತ್ತಿರಲಿಲ್ಲ, ಆದರೆ - ವೇದಗಳ ಉಪದೇಶ ಮಾಡಬೇಕಾದವರೇ ವೇದಗಳನ್ನು ಮೂಲೆಗುಂಪಾಗಿಸಿ, ವಿಭೂತಿ - ರುದ್ರಾಕ್ಷ- ಊರ್ಧ್ವ-ಪುಂಡ್ರ– ಅಡ್ಡಗಂಧ - ಅಂಗಾರ-ಅಕ್ಷತ ಮುದ್ರೆಗಳಿಗಾಗಿ ಗುದ್ದಾಡಹತ್ತಿದರೆ, ಪರಿಣಾಮ ನಾವು ನೋಡುತ್ತಿರುವುದನ್ನುಳಿದು ಬೇರೆಯಾಗಲು ಸಾಧ್ಯವೇ ಇಲ್ಲ. ಸಾಕಾರೇಶ್ವರವಾದ-ಅನೇಕೇಶ್ವರವಾದ - ಮತ - ಪಂಥಗಳು ಉಳಿದಿರುವವರೆಗೆ ಮಾನವೈಕ್ಯ ಹಗಲುಗನಸು ಮಾತ್ರ.

ಒಗ್ಗಟ್ಟಿಲ್ಲದೆ, ಐಕಮತ್ಯವಿಲ್ಲದೆ, ಮಾನವ ಸಮತಾ ಭಾವವಿಲ್ಲದೆ, ವಿಶ್ಲೇಷಣಾತ್ಮಕ ದೃಷ್ಟಿಬಿಂದುವಿಲ್ಲದೆ, ಮಾನವ - ಸಮಾಜ ಸುಖ – ಶಾಂತಿಗಳನ್ನು ಎಂದಿಗೂ ಪಡೆಯು

ಲಾರದು. ಇಂತಹ ಮನೋಭಾವವನ್ನು ರೂಢಿಸಲು ಸರ್ವೋತ್ತಮ ಸಾಧನ ಸಾಮೂಹಿಕ ಭಗವದುಪಾಸನೆ. ಅದಕ್ಕಿಂತಧಿಕ ಪ್ರಭಾವಶಾಲಿಯಾದ ಮಾನವೈಕ್ಯ ಸಾಧನೆ ಬೇರೆ ಯಾವುದೂ ಇಲ್ಲ. ಈ ಮಂತ್ರ **"ಸಚಾ ಇಂದ್ರಂ ಅಭಿ ಪ್ರಗಾಯತ"**–(ಎಲ್ಲರೂ ಒಂದುಗೂಡಿ ಸರ್ವೇಶ್ವರನನ್ನು ಎಲ್ಲ ರೀತಿಯಿಂದಲೂ ಆತ್ಮಸಮರ್ಪಣ ಮಾಡಿ ಸ್ತುತಿಸಿರಿ"- ಎಂದು ಬೋಧಿಸಲು ಇದೇ ಕಾರಣ. **"ಪಂಚ ಜನಾ ಮಮ ಹೋತ್ರಂ ಜುಷಂತಾಂ"** [ಋಗ್ವೇದ: 10.53.5.] "ಬ್ರಾಹ್ಮಣ - ಕ್ಷತ್ರಿಯ - ವೈಶ್ಯ - ಶೂದ್ರ – ನಿಷಾದರೆಂಬ ಭೇದಗಳನ್ನು ತೊಡೆದು ಹಾಕಿ, ಆ ಐದು ಬಗೆಯ ಜನರೂ ನನ್ನ ಆರಾಧನೆಯನ್ನುನಗಲಿ." **"ಸಮ್ಯಂಚೋಽಗ್ನಿಂ ಸಪರ್ಯತ"** [ಅಥರ್ವವೇದ: 3.30 6] -ಎಲ್ಲರೂ ಒಂದುಗೂಡಿ ಜ್ಯೋತಿರ್ಮಯನನ್ನು ಆರಾಧಿಸಿರಿ" **ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ** " [ಋಗ್ವೇದ: 9. 66. 20] – "ಜ್ಯೋತಿಃಸ್ವರೂಪನಾದ ಭಗವಂತನು ಸತ್ಯದ್ರಷ್ಟಾರನು; ಪವಿತ್ರಕಾರಕನು; ಬ್ರಾಹ್ಮಣಾದಿ ಪಂಚ ಶ್ರೇಣಿಯವರಿಗೂ ಏಕ ಪ್ರಕಾರ ಸೇರಿದವನು. ಹಾಗೂ ಅನಾದಿ ಕಾಲದಿಂದಲೂ ಸರ್ವಹಿತಕಾರಿ ಮತ್ತು ಅಗ್ರಗಣ್ಯನು."; **"ಇಂದ್ರ ಸಾಧಾರಣಸ್ತ್ವಂ."** [ ಋಗ್ವೇದ :- 4.32 13. ]-"ಓ ಸರ್ವೇಶ್ವರ! ನೀನು ಸಾಧಾರಣನು, ಎಂದರೆ-ಯಾವುದೇ ಒಂದು ಪಂಗಡಕ್ಕೂ ಸೇರದೆ, ಸಮಸ್ತರಿಗೂ ಸೇರಿದವನು." – ಮೊದಲಾದ ಏಕತಾಬೋಧಕಶ್ರುತಿಗಳನ್ನು ಪುಂಖಾನು ಪುಂಖವಾಗಿ ಉದ್ಧರಿಸುತ್ತಾ ಹೋಗಬಹುದು. ಆದರೆ – ಸಮಾನತ್ವ – ಏಕತ್ವಗಳನ್ನೇ ಎತ್ತಿ ತೋರಿಸುವ ಸೂಕ್ತ – ಸೂಕ್ತಗಳೇ ಮುಂದೆ ವಾಚಕರ ಗಮನಕ್ಕೆ ಬರಲಿರುವಾಗ, ಇಲ್ಲಿ ಈ ವಿಷಯವನ್ನು ಬೆಳೆಯಿಸಬೇಕಾಗಿಲ್ಲ. **"ಸಾಮೂಹಿಕ ಭಗವದುಪಾಸನೆಯಿಂದಲೇ ಹೃದಯಗಳ ಸಂಗಮ ಸಿದ್ಧಿಸಿ, ಏಕತ್ವದ ಭಾವನೆ ರೂಪಗೊಳ್ಳುವುದು. ಆ ಏಕತ್ವದಲ್ಲಿಯೇ ಮಾನವನು ಸುಖ - ಶಾಂತಿಗಳನ್ನು ಸಾಧಿಸಬಲ್ಲನು."** - ಎಂಬ ಸೂತ್ರವನ್ನು ಓದುಗರ ಮುನ್ನ ಮಂಡಿಸಿದರೆ ಸಾಕು. ಈಗ ಮುಂದಣಮಂತ್ರವನ್ನು ವಿಶ್ಲೇಷಣಕ್ಕೆ ತೆಗೆದುಕೊಳ್ಳೋಣ:–

**ಈ ಐದನೇ ಸೂಕ್ತದ ದ್ವಿತೀಯ ಮಂತ್ರದ ಭಾಷ್ಯದ ಪೂರ್ಣವೆಚ್ಚ**
**ಶ್ರೀಮತಿ ಸುಮತಿದೇವಿ ಸುರೇಂದ್ರ ಪ್ರಭು, ಶಿವಮೊಗ್ಗಾ**
**ಇವರ ಸೇವೆ**

## ಸಂಹಿತಾ ವಿಭಾಗ

**ಸ ಘಾ ನೋ ಯೋಗ ಆ ಭುವತ್ಸ ರಾಯೇ ಸ ಪುರಂಧ್ಯಾಂ।**

**ಗಮದ್ವಾಜೇಭಿರಾ ಸ ನಃ ॥೩॥**

**ಪದಪಾಠ:-** ಸಃ, ಘ, ನಃ, ಯೋಗೇ, ಆ, ಭುವತ್. ಸಃ, ಯೋಗೇ, ಸಃ ಪುರಂಧ್ಯಾಂ, ಗಮತ್ ವಾಜೇಭಿಃ, ಆ, ಸಃ, ನಃ ॥೩॥

**ಅನ್ವಯ:-** ಸಃ ಘ ನಃ ಯೋಗೇ, ಸಃ ರಾಯೇ, ಸಃ ಪುರಂಧ್ಯಾಂ ಆ ಭುವತ್. ಸಃ ನಃ ವಾಜೇಭಿಃ ಆ ಗಮತ್ ॥೩॥

**ಶಬ್ದಾರ್ಥ:-** [ಸಃ] ಆ ಸರ್ವೇಶ್ವರನೇ, [ಘ] ನಿಜವಾಗಿಯೂ. [ನಃ] ನಮ್ಮ [ಯೋಗೇ] ಯೋಗದಲ್ಲಿ, ಚಿತ್ತವೃತ್ತಿ ನಿರೋಧದ ಸ್ಥಿತಿಯಲ್ಲಿಯೂ, [ಸಃ] ಅವನೇ, [ರಾಯೇ] ಸಂಪತ್ತಿನ ಪ್ರಾಪ್ತಿಯಲ್ಲಿಯೂ, [ಸಃ] ಅವನೇ, [ಪುರಂಧ್ಯಾಂ] ದೇಹವೆಂಬ ಪುರವನ್ನು ಸುಸೂತ್ರ ಎತ್ತಿ ಹಿಡಿಯುವ, ಬಹು ಬಗೆಯ ವಿದ್ಯೆಗಳನ್ನು ಗ್ರಹಿಸುವ ಬುದ್ಧಿಯಲ್ಲಿಯೂ, [ಆ ಭುವತ್] ನಿರಂತರವಾಗಿ ಅನುಭವಕ್ಕೆ ಬರುತ್ತಿರಲಿ. [ಸಃ] ಅದೇ ಸರ್ವೈಶ್ವರ್ಯ ಸಂಪನ್ನ ಸರ್ವೇಶ್ವರನು, [ವಾಜೇಭಿಃ] ಜ್ಞಾನ-ಸಾಮರ್ಥ್ಯ - ಅನ್ನಗಳೊಂದಿಗೆ, [ನಃ] ನಮಗೆ, [ಆ ಗಮತ್] ಎಲ್ಲೆಡೆಯಿಂದಲೂ ಪ್ರಾಪ್ತನಾಗಲಿ; ಅನುಭವದ ಹಿಡಿತಕ್ಕೆ ಸಿಕ್ಕಲಿ; ಅಂತಃಕರಣಕ್ಕೆ ಅಭಿವ್ಯಕ್ತನಾಗಲಿ.

**ತಾತ್ಪರ್ಯ :-** ಆ ಸರ್ವೇಶ್ವರನು ಚಿತ್ತದ ಏಕಾಗ್ರತೆಯಲ್ಲಿ ನಮಗೆ ಪ್ರಾಪ್ತನಾಗಲಿ. ಐಶ್ವರ್ಯ ಸಂಪಾದನೆಗೂ ಅವನು ನಮ್ಮ ದೃಕ್ಪಥದಲ್ಲಿರಲಿ. ಅನೇಕ ವಿಧದ ಶಾಸ್ತ್ರಗಳ, ಕಲೆಗಳ, ವಿದ್ಯೆಗಳ ಭಂಡಾರವಾಗಿರುವ ನಮ್ಮ ಬುದ್ಧಿಗಳಲ್ಲಿಯೂ ಅವನೇ ಬೆಳಗುತ್ತಿರಲಿ. ಐಹಿಕ-ಆಮುಷ್ಮಿಕ, ಇಹ-ಪರಗಳ ಶಾಂತಿ - ಆನಂದಗಳ ಅನುಭವಕ್ಕೆ ಆವಶ್ಯಕವಾದ ಭ್ರಾಂತಿ ರಹಿತಜ್ಞಾನ, ತಪಃಸಾಮರ್ಥ್ಯ ಮತ್ತು ಆಹಾರಗಳೊಂದಿಗೆ ಅದೇ ಸರ್ವೇಶ್ವರನು ನಮ್ಮ ಜೀವಿತಗಳಿಗೆ ಇಳಿದು ಬರಲಿ.

**ಭಾಷ್ಯ :-** ನಮ್ಮ ವಿವೇಕಶಾಲಿಗಳಾದ ಪಾಠಕರಿಗೆ ಈ ಮಂತ್ರದ ಅರ್ಥವನ್ನು ಗ್ರಹಿಸಲು ಕಷ್ಟವಾಗದು. ಏಕೆಂದರೆ, ಯೋಗ, ಪುರಂಧಿ - ಈ ಎರಡು ಶಬ್ದಗಳನ್ನುಳಿದು ಮಿಕ್ಕುವೆಲ್ಲಾ ಮುನ್ನ ಬಂದ ಶಬ್ದಗಳೇ ಆಗಿವೆ. ದೇವತೆ ಅದೇ ಸರ್ವೇಶ್ವರನಾದ ಇಂದ್ರನಾಗಿರುವ ಕಾರಣ, ತಿಳಿದುಕೊಳ್ಳುವುದು ಇನ್ನೂ ಸುಲಭ. ಭಕ್ತರು, ಭಗವದುಪಾಸಕರು

ಉಪಾಸ್ಯನಾದ ಸರ್ವೇಶ್ವರನಲ್ಲಿ ಅಂತರತಮದ ಆಸೆಯನ್ನು ಮಾರ್ಮಿಕವಾಗಿ ತೋಡಿಕೊಳ್ಳು ವುದನ್ನು ಈ ಮಂತ್ರ ಚಿತ್ರಿಸುತ್ತಿದೆ.

ಶ್ರೀ॥ ಮಧ್ವರು "**ಮುಕ್ತೌ ಯೋಗಾಯ ಸಮಂತಾತ್ ಭವೇನ್ನೋ ಘೋऽವಧಾರಣೇ। ಸ ಏವ ಭಗವಾನ್ ಜ್ಞಾನವಿತ್ತ್ಯಾಯ ಸ ಚ ಬುದ್ಧಿಗಃ ॥ ಬುದ್ಧಿಃ ಪುರಾಶ್ರಯತ್ವೇನ ಪುರಂಧಿಃ ಪತ್ನ್ಯಭಾಪಿವಾ। ಪತ್ನ್ಯರ್ಥತ್ವೇತು ತಾದರ್ಥ್ಯಂ ಸೋऽನ್ನೈಃ ಸಹ ನ ಆವ್ರಜೇತ್ ॥**" – ಎಂದು ಭಾಷ್ಯ ಬರೆದಿದ್ದಾರೆ. ಈ ಭಾಷ್ಯದ ಅರ್ಥ - "ಮುಕ್ತಿಯಲ್ಲಿ ಅವನೊಂದಿಗೆ ಸಂಯುಕ್ತರಾಗಲು ಅವನೇ ಎಲ್ಲೆಡೆಯಿಂದಲೂ ನೆರವಾಗಲಿ. (ಘ - ಎಂಬುವುದು ಒತ್ತುವಿಕೆ (Emphasis)ಗಾಗಿದೆ.+) ಜ್ಞಾನ - ಸಂಪತ್ತನ್ನು ಕೊಡಲು ಅವನೇ ಒದಗಲಿ. ಅವನೇ ಬುದ್ಧಿಗಮ್ಯ‡ನಾಗಿದ್ದಾನೆ. ಪುರ - ಎಂದರೆ ಶರೀರಕ್ಕೆ ಆಶ್ರಯವಾಗಿರುವುದರಿಂದ ಬುದ್ಧಿಯು ಪುರಂಧಿ - ಎನಿಸುತ್ತದೆ. ಅಥವಾ, ಪುರಂಧಿ - ಎಂದರೆ ಪತ್ನೀ ಎಂದೂ ಆಗುತ್ತದೆ. ಪತ್ನೀ - ಎಂದು ಗ್ರಹಿಸಿದಾಗ, ಪತ್ನೀಪ್ರಾಪ್ತಿಗೂ ಅವನು ನೆರವಾಗಲಿ, ಅವನು ಅನ್ನಗಳೊಂದಿಗೆ ನಮಗೆ ಪ್ರಾಪ್ತನಾಗಲಿ."

ಪುರಂಧಿ ಎಂಬ ಶಬ್ದ ಪತ್ನೀ - ಎಂಬರ್ಥದಲ್ಲಿ ಬರುವುದಾದರೂ, ಗಂಭೀರ ಆಧ್ಯಾತ್ಮಿಕ ವಿವರಣೆಯ ನಡುವೆ, ಹೆಂಡತಿಯನ್ನು ಗಳಿಸುವಲ್ಲಿ ಭಗವಂತನು ನೆರವಾಗಲಿ - ಎಂಬ, ಅತ್ಯಂತ ಲೌಕಿಕವಾದ ವಿಷಯವನ್ನು ತೂರಿಸುವುದರ ಔಚಿತ್ಯದ ಬಗೆಗೆ ವಿವಾದ ಸಹಜ. ಆದರೆ, ಪ್ರಭು 'ಸರ್ವಪ್ರದ'ನೆಂದಾಗ, ಸರ್ವದಲ್ಲಿ ಪತ್ನಿಗೂ ಸ್ಥಾನ ಉಂಟಷ್ಟೇ ?

ಶ್ರೀ ಮಧ್ವರು ಇಲ್ಲಿ ಇಂದ್ರ ಶಬ್ದದಿಂದ ಭಗವಂತನನ್ನೇ ಗ್ರಹಿಸಿರುವುದರಿಂದ ಅರ್ಥದ ಬಗೆಗೆ ಬಹುಮಟ್ಟಿಗೆ ಸಮ್ಮತಿಯೇ ಇರುತ್ತದೆ.

ಇನ್ನು ಶ್ರೀ॥ ಸಾಯಣರ ವಿಷಯ. ಅವರು ಪೂರ್ವೋಕ್ತ ಆಚಾರ್ಯರಿಗಿಂತ ಹೆಚ್ಚು ಆಳಕ್ಕಿಳಿದಂತೆ ಕಾಣುತ್ತದೆ. "**ಘ ಶಬ್ದೋऽವಧಾರಣಾರ್ಥಃ। ಸ ಘ ಸ ಏವೇಂದ್ರಃ ಪೂರ್ವಮಂತ್ರೋಕ್ತಗುಣವಿಶಿಷ್ಟಃ ನೋऽಸ್ಮಾಕಂ ಯೋಗೇ ಪೂರ್ವಮ ಪ್ರಾಪ್ತಸ್ಯ ಪುರುಷಾರ್ಥಸ್ಯ ಸಂಬಂಧೇ ಆ ಭವತು. ಪುರುಷಾರ್ಥಂ ಸಾಧಯತು** - ಇತ್ಯರ್ಥಃ। **ಸ ಏವ ರಾಯೇ ಧನಾರ್ಥಮಾ ಭವತು. ಸ ಏವ ಪುರಂಧ್ಯಾಂ ಯೋಷಿತ್ಯಾ ಭವತು। ಯದ್ವಾ ಬಹುವಿಧಾಯಾಂ ಬುದ್ಧೌ ಆ ಭುವತ್ । ಪುರಂಧಿರ್ಬಹುಧೀರಿತಿ ಯಾಸ್ಕಃ। ಸ ಏವ ವಾಜೇಭಿರ್ದೇಯೈರನ್ನೈಃ ಸಹ ನೋऽಸ್ಮಾನ್ ಆಗಮತ್, ಆ ಗಚ್ಛತು.**" ಓದುಗರು ಸಂಸ್ಕೃತ ಬಾರದಿದ್ದರೂ, ಉನ್ನತ ಸ್ತರದ ಕನ್ನಡದ ಜ್ಞಾನವಿದ್ದಲ್ಲಿ ಈ ಭಾಷ್ಯದ ಅರ್ಥವನ್ನು

---

+ ಸಂಕ್ಷೇಪವನ್ನು ಗುರಿಯಾಗಿಟ್ಟುಕೊಂಡಿರುವ ಶ್ರೀ ಮಧ್ವರು ವಾಕ್ಯಗಳ ನಡುವೆ ಹೀಗೆ ವ್ಯಾಕರಣ - ನಿರುಕ್ತಾದಿಗಳ ಉದ್ಧರಣಗಳನ್ನು ಅಡಕ ಮಾಡುವುದು ಸಾಧಾರಣ.

‡ ಬುದ್ಧಿ ನಿಯಾಮಕ - ಎಂದು ಶ್ರೀಮದಾಚಾರ್ಯರ ಶಿಷ್ಯರು ಬರೆದಿದ್ದಾರೆ.

ಸುಗಮವಾಗಿ ಗ್ರಹಿಸಬಹುದು. "ಘ - ಎಂಬುದು ಒತ್ತಿ ಹೇಳುವ ನಿಪಾತ (ಅವ್ಯಯ) ಮಾತ್ರ. ಹಿಂದಿನ ಮಂತ್ರದಲ್ಲಿ ಹೇಳಿದ ಗುಣಗಳಿಂದ ಯುಕ್ತನಾದ ಇಂದ್ರನು ನಮಗೆ ಮುನ್ನ ಸಿಕ್ಕದ ಅಭೀಷ್ಟದ ಪ್ರಾಪ್ತಿಯಲ್ಲಿ ನೆರವಾಗಲಿ. ಅಭೀಷ್ಟ ಸಿದ್ಧಿಯನ್ನು ಮಾಡಲಿ -ಎಂದರ್ಥ. ಅವನೇ ಧನ ಪ್ರಾಪ್ತಿಗೂ ನೆರವಾಗಲಿ. ಅವನೇ ಸ್ತ್ರೀ - ಪ್ರಾಪ್ತಿಗೂ ನೆರವಾಗಲಿ. ಅಥವಾ ಬಹು ವಿಧದ ಬುದ್ಧಿಯಲ್ಲಿ ನೆರವಾಗಲಿ. ಪುರಂಧಿ - ಎಂದರೆ ಬಹುಪ್ರಜ್ಞನೆಂದಿದ್ದಾರೆ ಯಾಸ್ಕರು. ಅವನೇ ವಾಜಗಳೊಂದಿಗೆ, ಎಂದರೆ ಕೊಡಬೇಕಾದ ಅನ್ನಗಳೊಂದಿಗೆ ನಮಗೆ ಲಬ್ಧವಾಗಲಿ. ಅಥವಾ, ಇದರಲ್ಲಿ ದೇಹ ಧರಿಸಲ್ಪಡುವುದರಿಂದ ಪುರಂಧಿ - ಎಂದರೆ ಬುದ್ಧಿಯಾದೀತು."

ಯೋಗ - ಎಂಬುದಕ್ಕೆ ಸಿಕ್ಕದಿರುವುದರ ಸಂಪಾದನೆ – ಎಂದು ಸಾಯಣರು ಮಾಡಿರುವ ಅರ್ಥ ಮನನೀಯ. ಇವರೂ **ಪುರಂಧಿ** - ಎಂದಾಗ '**ಯೋಷಿತ್**' ಎಂದರೆ ಸ್ತ್ರೀಯನ್ನು ಸ್ಮರಿಸಿದ್ದರೂ, ಮುನ್ನಡೆದು, '**ಬಹು ಬಗೆಯ ಬುದ್ಧಿ**' ಎಂದು ಹೇಳಿರುವುದು ಸಮಾಧಾನಕರವೇ ಸರಿ. ಆದರೆ - ಇಂದ್ರ ಶಬ್ದಕ್ಕೆ ಪರಂಪರಾಗತವಾದ ಅರ್ಥವನ್ನೇ ಗ್ರಹಿಸಿರುವುದು ಸಾಯಣರ ವಿಶೇಷ ಲಕ್ಷಣವೇ ಸರಿ. ಮತ್ತೆ ಅದರ ಬಗೆಗೆ ಏನಾದರೂ ಹೇಳುವುದು ಚರ್ವಿತ - ಚರ್ವಣ (ಅಗಿದದ್ದನ್ನೇ ಅಗಿಯುತ್ತಾ ಹೋಗುವುದು)ವಾದೀತು.

ಮಹರ್ಷಿ ದಯಾನಂದರ ಭಾಷ್ಯ ಯಥಾಪೂರ್ವ ವೈಜ್ಞಾನಿಕ - ಆಧ್ಯಾತ್ಮಿಕ ವೃತ್ತಿಗಳ ಸಮನ್ವಯ ಮಾಡುತ್ತಾ ತೆರಳುತ್ತವೆ. ಅವರ ಭಾಷ್ಯ ಹೀಗಿದೆ:-

**"ಸ ಇಂದ್ರಃ ಈಶ್ವರಃ ನಃ ಅಸ್ಮಾಕಂ ಯೋಗೇ ಸರ್ವಸುಖ ಸಾಧನ - ಪ್ರಾಪ್ತಿ ಸಾಧಕೇ ಆ ಭುವತ್ ಸಮಂತಾದ್ಭೂಯಾತ್. ಸಃ ರಾಯೇ ಪರಮೋತ್ತಮ ಧನಲಾಭಾಯ; ಸಃ ಪುರಂಧ್ಯಾಂ ಬಹು ಶಾಸ್ತ್ರ ವಿದ್ಯಾಯುಕ್ತಾಯಾಂ ಬುಧ್ಯಾಂ ಗಮತ್ ಆಜ್ಞಾಪ್ಯಾತ್, ಗಮಯತಿ ವಾ. ವಾಜೇಭಿಃ ಉತ್ತಮೈರನ್ನೈಃ ಸಹ. ಆ ಸರ್ವತಃ ಸಃ ಅಸ್ಮಾನ್ ಗಮತ್ ಗಮಯೇತ್"**
ಈ ಪಂಕ್ತಿಗಳ ಕನ್ನಡ - ಭಾಷಾಂತರವಿದು:– "ಆ ಇಂದ್ರನು ಎಂದರೆ ಈಶ್ವರನು ನಿಶ್ಚಯವಾಗಿ ನಮ್ಮನ್ನು ಯೋಗದಲ್ಲಿ - ಎಂದರೆ ಸರ್ವಸುಖ ಸಾಧನಗಳನ್ನು ಗಳಿಸುವಲ್ಲಿ ಮುನ್ನಡೆಯಿಸಲಿ. ಅವನೇ **ಪರಮೋತ್ತಮ ಧನಲಾಭಕ್ಕಾಗಿ** ನಮಗೆ ನೆರವಾಗಲಿ. ಅವನೇ **ಬಹುಶಾಸ್ತ್ರವಿದ್ಯಾ ಯುಕ್ತವಾದ ಬುದ್ಧಿಯಲ್ಲಿ** ನಮಗೆ ಅನುಭವಕ್ಕೆ ಸಿಕ್ಕಲಿ. ಮರಳಿ ಅವನೇ **ಉತ್ತಮವಾದ ಆಹಾರಗಳೊಂದಿಗೆ** ಎಲ್ಲೆಡೆಯಿಂದಲೂ ಸಾಕ್ಷಾತ್ಕೃತನಾಗಲಿ."

ಆರ್ಷದೃಷ್ಟಿಯ ಮಹಿಮೆ ಇಲ್ಲಿ ಸ್ಪಷ್ಟವಾಗಿದೆ. ಮಹರ್ಷಿಗಳ ಯೋಗ ಕೇವಲ ಜೀವೇಶ್ವರರ ಸಮ್ಮಿಳನವಲ್ಲ; ಸಮಸ್ತ ಸುಖಸಾಧನಗಳ - ಅದರಲ್ಲಿ ಈಶ್ವರ ಸಾಕ್ಷಾತ್ಕಾರವೂ ಬಂದೇ ಬಂದಿತು - ಸಂಪಾದನೆಗೆ ನೆರವಾಗುವ ಕ್ರಿಯೆ. ವೇದದ ಈ ಕರೆಗೆ ಅವರು ಕಿವಿಗೊಟ್ಟಿದ್ದರು:-

**ಯೋಗೇ ಯೋಗೇ ತವಸ್ತರಂ ವಾಜೇ ವಾಜೇ ಹವಾಮಹೇ।**
**ಸಖಾಯ ಇಂದ್ರಮೂತಯೇ॥** [ಯಜುರ್ವೇದ:- 11. 14.]

"[ಸಖಾಯಃ] ಸ್ನೇಹಸಾಂದ್ರ ಸುಹೃದಯರಾದ ಮಾನವರೇ! [ತವಸ್ತರಂ] ಶಕ್ತಿಯಲ್ಲಿ ಅನುಪಮವಾದ, [ಇಂದ್ರಂ] ಸರ್ವೇಶ್ವರನನ್ನು, [ಯೋಗೇ ಯೋಗೇ] ಪ್ರತಿಯೊಂದು ಸಂಧಿವೇಳೆಯಲ್ಲಿಯೂ, [ವಾಜೇ ವಾಜೇ] ಪ್ರತಿಯೊಂದು ಅನ್ನ-ಬಲ-ಜ್ಞಾನಗಳ ಪ್ರಾಪ್ತಿ ಸಮಯದಲ್ಲಿಯೂ, ಜೀವನದ ಪ್ರತಿಯೊಂದು ಸಂಘರ್ಷದಲ್ಲಿಯೂ, [ಊತಯೇ] ರಕ್ಷಣೆಗಾಗಿ, [ಹವಾಮಹೇ] ಕರೆಗೊಡುತ್ತೇವೆ." ವಾಜವಿಲ್ಲದ ಯೋಗ, ಯೋಗವಿಲ್ಲದ ವಾಜ - ಎರಡೂ ಬಾಧಕಗಳೇ. ಆದಕಾರಣ, ಸಂಯಮದೊಂದಿಗೆ, ಈಶ್ವರಾನುಭವದೊಂದಿಗೆ, **ಭೌತಿಕ** ಭೋಗಗಳ ಅನುಭವವನ್ನು ಹೊಂದಬೇಕು - ಎಂದು ಮಹರ್ಷಿ ವೇದಗಳಿಂದ ಕಲಿತಿದ್ದರು. ಮತ್ತೆ. ಮಹರ್ಷಿಗಳ ದೃಷ್ಟಿಯಲ್ಲಿ 'ರೈ' - ಎಂದರೆ ಸಂಪತ್ತು ಕೇವಲ ಸಂಪತ್ತಾಗಿರಲಿಲ್ಲ. "**ಇಂದ್ರ ಶ್ರೇಷ್ಠಾನಿ ದ್ರವಿಣಾನಿ ಧೇಹಿ.**" [ಋಗ್ವೇದ:- 2,21.6]

"ಓ ಸಕಲೈಶ್ವರ್ಯವನ್! ಶ್ರೇಷ್ಠವಾದ ಸಂಪತ್ತನ್ನು ಕರುಣಿಸು."; **ಋತಸ್ಯ ಪಥಾ ನಮಸಾ ವಿವಾಸೇತ್.**" [ಋಗ್ವೇದ:- 10. 31. 2.] - "ದ್ರವಿಣಾರ್ಜನೆಯಲ್ಲಿ, ಮಾನವ ಸತ್ಯದ, ಪ್ರಾಮಾಣಿಕತೆಯ ಮಾರ್ಗದಲ್ಲಿ ನಡೆಯಬೇಕು."; "**ಅಗ್ನೇ ನಯ ಸುಪಥಾ ರಾಯೇ.**" [ಯಜು:- 40. 16.] - "ಓ ತೇಜೋಮಯ! ಸಂಪತ್ತನ್ನು ಗಳಿಸಲು ನಮ್ಮನ್ನು ಸನ್ಮಾರ್ಗದಲ್ಲಿಯೇ ನಡೆಯಿಸು." - ಎಂಬ ಶ್ರುತಿವಾಕ್ಯಗಳನ್ನಾಲಿಸಿದ್ದ ಅವರು 'ಅನ್ಯಾಯಾರ್ಜಿತವಲ್ಲ; ಪರಮೋತ್ತಮ ಧನಲಾಭದ ಬಗೆಗೆ ಮಾತ್ರ ಆಲೋಚಿಸಬಲ್ಲವರಾಗಿದ್ದರು "**ಪುರಂಧಿ**" - ಎಂದಾಗ ಆ ಆದಿತ್ಯ ಬ್ರಹ್ಮಚಾರಿಯ ಅಂತಃಕರಣವನ್ನು ಸ್ಪರ್ಶಿಸುತ್ತಿದ್ದುದು - "**ಯೋಷಿತ್** ಅಥವಾ **ಪತ್ನಿ**"ಯಲ್ಲ; **ಬಹುಶಾಸ್ತ್ರವಿದ್ಯಾಯುಕ್ತವಾದ** ಎಂದೇ "**ವೇದದ ವಿದ್ವಾನ್ ಶೃಣವಚ್ಚ ವಿದ್ವಾನ್.**" [ಋಗ್ವೇದ:- 5.30.3.] "**ಅಜ್ಞಾನಿ** ಜ್ಞಾನಾರ್ಜನೆ ಮಾಡಬೇಕು: ವಿದ್ವಾಂಸನು ಮತ್ತೂ ಹೆಚ್ಚು ಆಲಿಸಬೇಕು."; "**ಪುರಾ ತಸ್ಯಾ ಅಭಿಶಸ್ತೇರಧೀಹಿ**" [ಋಗ್ವೇದ :- 1. 71. 10.] "ಮುಪ್ಪೆಂಬ ಅಭಿಶಾಪ ಬಾಳಿಗೆ ತಾಗುವ ಮುನ್ನವೇ ಜ್ಞಾನದಾನ ಮಾಡು." - ಎಂಬ ವೇದೋಕ್ತಿಗಳನ್ನು ಹೃದಯಾಂಕಿತವನ್ನಾಗಿ ಮಾಡಿಕೊಂಡಿದ್ದ ಅವರು ಬೇರೆ ಏನನ್ನೂ ಯೋಚಿಸುವಂತೆಯೇ ಇರಲಿಲ್ಲ. "**ಆಹಾರ ಶುದ್ಧೌ ಸತ್ವಶುದ್ಧಿಃ**" "ಆಹಾರಶುದ್ಧಿಯಿಂದ ಬುದ್ಧಿ-ಶುದ್ಧಿಯಾದೀತು." - ಎಂಬ ಆರ್ಷ ವಚನವನ್ನು ಆಲಿಸಿದ ಅವರು '**ವಾಜ**' - ಎಂದಾಗ ಕೇವಲ 'ಉತ್ತಮ ಅನ್ನ'ವನ್ನುಮಾತ್ರ ಸ್ಮರಿಸಬಲ್ಲವರಾಗಿದ್ದರು. ಏಕೆಂದರೆ, "**ಅನ್ನಪತೇಽನ್ನಸ್ಯನೋ ದೇಹ್ಯನಮೀವಸ್ಯ ಶುಷ್ಮಿಣಃ.** [ಯಜು:- 11. 83.] - "ಓ ಅನ್ನದೊಡೆಯ! ನಮಗೆ ರೋಗ ತಾರದ, ಬಲದಾಯಕವಾದ ಸಾತ್ವಿಕಾಹಾರವನ್ನೇ ಕರುಣಿಸು."; "**ಜನಿಷ್ಟಂ ದೇವಾ ಓಷಧೀಷ್ವಪ್ಸು ಯದ್ಯೋಗ್ಯಾ ಅಶ್ನವೈಥೇ ಋಷಿಣಾಂ.**" [ಋಗ್ವೇದ:- 7.70.4.] "ದಿವ್ಯಗುಣವಾನ್ ದಂಪತಿಗಳೇ!

ಋಷಿಜನರಿಗೆ ಯೋಗ್ಯವಾದ ಕೇವಲ ಓಷಧಿ ರಸಪೂರ್ಣ ಶಾಕಭೋಜನವನ್ನೇ ಬಯಸಿರಿ ಮತ್ತು ಭಕ್ಷಿಸಿರಿ." ಎಂಬ ವೇದಾದೇಶವನ್ನು ಅವರು ಮರೆಯಲು ಶಕ್ಯವಿತ್ತೇ ?

ಮಹರ್ಷಿಗಳ ಈ ವೈಶಿಷ್ಟ್ಯಗಳನ್ನು ತೋರಿಸಿದ ಮೇಲೆ, ಅವರು ಈ ಭವ್ಯ ಮಂತ್ರ ದಿಂದ ಗ್ರಹಿಸಿದ ತಾತ್ಪರ್ಯವನ್ನು ಮಂಡಿಸಿ, ಇದರ ಭಾಷ್ಯವನ್ನು ಮುಕ್ತಾಯಗೊಳಿಸ ಬಹುದು. **ಈಶ್ವರಃ ಪುರುಷಾರ್ಥಿನೋ ಮನುಷ್ಯಸ್ಯ ಸಹಾಯಕಾರೀ ಭವತಿ, ನೇತರಸ್ಯ. ನೈವ ಕಸ್ಯಚಿತ್ ವಿನಾ ಪುರುಷಾರ್ಥೇನ ಧನವೃದ್ಧಿ ಲಾಭೋ ಭವತಿ, ಅತಃ ಸರ್ವೈರ್ಮನುಷ್ಯೈಃ ಉದ್ಯೋಗಿಭಿಃ ಆಶೀರ್ವದ್ಭಿಃ ಭವಿತವ್ಯಂ"** ಎಂದರೆ, "ಈಶ್ವರನು ದುಡಿಯುವ ಮಾನವನಿಗೆ ಮಾತ್ರ ಸಹಾಯಕನಾಗುತ್ತಾನೆ; ಸೋಮಾರಿ ಗಳಿಗಲ್ಲ. ದುಡಿಯದೆ ಯಾವನಿಗೂ ಧನವೃದ್ಧಿಲಾಭವಾಗದು. ಆದಕಾರಣ ಸರ್ವಮಾನವರೂ ಉದ್ಯೋಗವಂತರೂ, ಶುಭಕಾಮನಾಸಂಪನ್ನರೂ ಆಗಬೇಕು."—ಎಂದು ಮಂತ್ರದ ಸಾರವನ್ನು ಹಿಂಡಿತೆಗೆದಿದ್ದಾರೆ ಮಹರ್ಷಿಗಳು. "ಪ್ರಾರ್ಥನೆ—ಎಂದರೆ ಅದನ್ನು ಕೊಡು. ಇದನ್ನು ಕೊಡು-ಎಂದು ಬೇಡುತ್ತಾ ಹೋಗುವುದಲ್ಲ. ಪೂರ್ಣ ಪ್ರಯತ್ನಶೀಲನಾಗಿ, ಈಶ್ವರನ ಸಹಾಯ ಕೋರುವುದೇ ಪ್ರಾರ್ಥನೆ." -ಎಂದವರು ಉಪದೇಶಿಸುತ್ತಿದ್ದರು.

ಅಹುದು. ವೇದಾರ್ಥ ಗ್ರಹಿಸಬಯಸುವ ಜಿಜ್ಞಾಸುಗಳು ಸದಾ ನೆನಪಿನಲ್ಲಿಡಬೇಕಾದ ಅಂಶ ಒಂದಿದೆ. ವೇದಗಳ ಶೈಲಿಯೇ ಪ್ರಾರ್ಥನಾಶೈಲಿ. ವಿಧಿ-ನಿಷೇಧಗಳೂ ಅಲ್ಲಲ್ಲಿ ಕಂಡು ಬರುವುದಾದರೂ ಪ್ರಧಾನವಾಗಿ ವೇದಗಳ ಉಪದೇಶಗಳು ಪ್ರಾರ್ಥನಾರೂಪದಲ್ಲಿಯೇ ಇವೆ. ಈ ರಹಸ್ಯವನ್ನರಿಯದ ಪೌರಾಣಿಕಪದ್ಧತಿಯ ಪಂಡಿತರು ಹಾಗೂ ಪಾಶ್ಚಿಮಾತ್ಯವಿದ್ವಾಂಸರು. "ವೈದಿಕ ಋಷಿಮುನಿಗಳು ಸೂರ್ಯ, ಚಂದ್ರ, ವನಸ್ಪತಿ. ನದಿ, ಸಾಗರ, ಪರ್ವತ, ಮೇಘ- ಮೊದಲಾದ ಜಡವಸ್ತುಗಳನ್ನೂ ಕೂಡ, ಅವು ಚೇತನವೋ - ಎಂಬಂತೆ ಪ್ರಾರ್ಥಿಸುತ್ತಿದ್ದರು." —ಎಂಬ ನಿರ್ಣಯಕ್ಕೆ ಬಂದಿದ್ದಾರೆ. ಇದು ಮಹಾಭ್ರಾಂತಿ ಮಾತ್ರ. ಪರಮೇಶ್ವರ ಮಹಾ ಕವಿ; ಅವನ ಕೃತಿಗಳಾದ ವೇದಗಳು ಮಹಾಕಾವ್ಯಗಳು. ಎಂದ ಮೇಲೆ ಕಾವ್ಯಶೈಲಿ ಇರಲೇ ಬೇಕಷ್ಟೇ ? **"ದೇವಸ್ಯ ಪಶ್ಯ ಕಾವ್ಯಂ ನ ಮಮಾರ ನ ಜೀರ್ಯತಿ"** [ಅಥರ್ವ : 10.8.32.] - "ಈಶ್ವರನ ಕಾವ್ಯವನ್ನು ನೋಡು. ಅದು ಅಮರ ಮತ್ತು ಅಜರ !" - ಎಂಬ ವೇದಪ್ರಮಾಣವೇ ಇದೆ. ಕವಿಗಳು ಜಡದೊಂದಿಗೆ ಮಾತನಾಡರೇ? ಅಲಂಕಾರವೇ ಕಾವ್ಯದ ಉಸಿರಾಗಿರುವಾಗ, ವೇದಗಳಲ್ಲಿ ಆಲಂಕಾರಿಕ ಭಾಷಾಪ್ರಯೋಗ ವರಮ ಸಹಜ.

ನಮ್ಮ ಈಶ್ವರಸಾಕ್ಷಾತ್ಕಾರದ ಕಷ್ಟದಾಯಕ ಪಥದಲ್ಲಿ; ಅಭಿಷ್ಟ ಧನಸಿದ್ಧಿಯ ಪ್ರಯತ್ನದಲ್ಲಿ, ಬುದ್ಧಿವಿಕಾಸದ ತಪಶ್ಚರ್ಯೆಯಲ್ಲಿ ಆ ಸರ್ವೇಶ್ವರನು ನಮಗೆ ನೆರವಾಗಲಿ. ಉತ್ತಮ ಸಾಮರ್ಥ್ಯಗಳ, ಶ್ರೇಷ್ಠ ಖಾದ್ಯಗಳ, ನಿಭ್ರಾಂತ ಜ್ಞಾನದ ವರದಾನದೊಂದಿಗೆ ಆ ಪರಮೇಶ್ವರನು ನಮ್ಮ ಅಂತಃಕರಣಗಳಿಗೆ ಅಂದಲಿ—ಇಷ್ಟಾದರೂ ಓದುಗರಿಗೆ ಹೃದ್ಗತವಾದಲ್ಲಿ ನಮ್ಮ ಪ್ರಯತ್ನ ಸಫಲವೇ ಸರಿ. ಈಗ ಮುಂದಿನ ಮಂತ್ರದ ಕಡೆಗೆ ದೃಷ್ಟಿ ಹೊರಳಿಸೋಣ

ಸಂಹಿತಾ ವಿಭಾಗ

**ಯಸ್ಯ ಸಂಸ್ಥೇ ನ ವೃಣ್ವತೇ ಹರೀ ಸಮತ್ಸು ಶತ್ರವಃ।**

**ತಸ್ಮಾ ಇಂದ್ರಾಯ ಗಾಯತ॥೪॥**

**ಪದಪಾಠ:**– ಯಸ್ಯ, ಸಂಸ್ಥೇ, ನ, ವೃಣ್ವತೇ, ಹರೀ, ಸಮತ್ಸು, ಶತ್ರವಃ, ತಸ್ಮೈ, ಇಂದ್ರಾಯ, ಗಾಯತ ॥೪॥

**ಅನ್ವಯ:**– ಶತ್ರವಃ ಸಮತ್ಸು ಯಸ್ಯ ಸಂಸ್ಥೇ ಹರೀ ನ ವೃಣ್ವತೇ, ತಸ್ಮೈ ಇಂದ್ರಾಯ ಗಾಯತ ॥

**ಶಬ್ದಾರ್ಥ:**– [ಶತ್ರವಃ] ಶತ್ರುಗಳು, ಹಿಂಸಕರು, [ಯಸ್ಯ] ಯಾವನ, [ಸಂಸ್ಥೇ] ಸುದೃಢವಾಗಿ, ನಿಯಮಾನುಸಾರ ನೆಲೆಗೊಂಡಿರುವ ಜಗತ್ತಿನಲ್ಲಿ, [ಹರೀ] ಮನಸ್ಸು ಹಾಗೂ ಬುದ್ಧಿಯ ಸಮಕ್ಷ, [ನ ವೃಣ್ವತೇ] ಸುಳಿಯಲಾರರೋ, [ತಸ್ಮೈ ಇಂದ್ರಾಯ] ಆ ಸರ್ವೇಶ್ವರನ ಪ್ರಾಪ್ತಿಗಾಗಿ, (ಅವನ) [ಗಾಯತ] ಗುಣಗಾನ ಮಾಡಿರಿ.

**ತಾತ್ಪರ್ಯ:**– ಭಗವಂತನು ಸರ್ವಶಕ್ತನು. ಅವನ ಆದೇಶಗಳಿಗೆ ವಿರುದ್ಧರಾಗಿ ನಡೆದು, ಸತ್ಪುರುಷರನ್ನು ಪೀಡಿಸುವ ಹಿಂಸಕರಾದ ಶತ್ರುಗಳು, ದೃಢವಾದ ಅವನ ಈ ಜಗತ್ತಿನಲ್ಲಿ, ವಿಕಸಿತವಾದ ಮನಸ್ಸಿನ ಹಾಗೂ ಬಹು ವಿದ್ಯಾಭಂಡಾರವಾದ ಬುದ್ಧಿಯ ಮುಂದೆ ಸುಳಿಯಲೂ ಕೂಡ ಶಕ್ತರಲ್ಲ. ಆ ಸರ್ವೇಶ್ವರನ ಗುಣಗಾನ ಮಾಡಿರಿ.

**ಭಾಷ್ಯ:**– ಮೇಲುನೋಟಕ್ಕೆ ಮಂತ್ರ ಬಹಳ ಸರಳವೆಂಬಂತೆ ತೋರುತ್ತದೆ. ಆದರೆ, ಶಬ್ದಗಳ ಸಂಯೋಜನ ಕ್ರಮ ಸಾಕಷ್ಟು ವಿಶ್ಲೇಷಣೆಗೆ ಎಡೆಗೊಡುವಂತಿದೆ. ದೇವತೆ ಅದೇ ಇಂದ್ರನಾದುದರಿಂದ ಆ ಶಬ್ದ ಹಿಡಿದು ವಿಸ್ತಾರ ಮಾಡುವ ಆವಶ್ಯಕತೆಯಿಲ್ಲ.

ಪೌರಾಣಿಕ ಪರಂಪರೆಯ ಮತ್ತು ಪುರಾಣಗಳಿಗೂ ವೇದಗಳಿಗೆ ಕೊಡುವಷ್ಟೇ ಮಹತ್ತ್ವ ಕೊಡುವ ಆಚಾರ್ಯರುಗಳಿಗೆ ಶಬ್ದ-ಸಂಯೋಜನಕ್ರಮ ಅಷ್ಟು ಕಷ್ಟ ಕೊಡುವುದಿಲ್ಲ. ಆದರೆ, ಸತ್ಯಾರ್ಥವನ್ನು ಗ್ರಹಿಸಲು ಪ್ರಯತ್ನಿಸುವ ಜಿಜ್ಞಾಸುಗಳಿಗೆ ಸ್ವಲ್ಪ ಕಷ್ಟ ಕಾದೀತು. ಪೌರಾಣಿಕ ಪರಂಪರಾಗತ ವಿಶ್ವಾಸಾನುಸಾರ, ಇಂದ್ರನು ಒಬ್ಬ ಸಾಕಾರ, ಶರೀರಧಾರೀ ದೇವತೆಯಾಗಿರುವ ಕಾರಣ, ರಥ, ಕುದುರೆಗಳು – ಎಲ್ಲವನ್ನೂ ಅವನಿಗೆ ಒದಗಿಸಿಕೊಡಲು ಶ್ರಮವೇ ಇಲ್ಲ. ಮಂತ್ರದಲ್ಲಿನ ಪದಗಳಿಗೆಯೇ ಅಂತಹ ಅರ್ಥ ಮಾಡಿದ

ರಾಯಿತು. ಶ್ರೀ ಮಧ್ವರು ಈ ಮಂತ್ರದ ಮೇಲೆ ಮಾಡಿರುವ ಭಾಷ್ಯದಲ್ಲಿ:- **"ಯಸ್ಯ ಸ್ಥಿತೌ ನ ವೃಣುತೇ ಹರ್ಯೋರಗ್ರಮಪಿ ಶತ್ರವಃ"** - "ಯಾವನು ಎದುರಿಗಿರುವಾಗ ಶತ್ರುಗಳು ಅವನ ರಥದ ಕುದುರೆಗಳ ಮುಂದೆ ಸುಳಿಯಲೂ ಕೂಡ ಸಮರ್ಥರಲ್ಲವೋ (ಆ ಇಂದ್ರನನ್ನು ಸ್ತುತಿಸಿರಿ)" – ಎಂದು ಬರೆದಿದ್ದಾರೆ. ಶ್ರೀ॥ ಸಾಯಣರ ನಿಲುವೂ ಬಹು ಮಟ್ಟಿಗೆ ಇದೇ ಆಗಿದೆ. ಅವರು ಈ ಮಂತ್ರಕ್ಕೆ ಭಾಷ್ಯಮಾಡುತ್ತಾ – **"[ಸಮತ್ಸು] ಯುದ್ಧೇಷು, [ಯಸ್ಯ] ಇಂದ್ರಸ್ಯ [ಸಂಸ್ಥೇ] ರಥೇ (ಯುಕ್ತೌ)ಹರೀ ದೃಷ್ಟ್ವಾ ಶತ್ರವಃ [ನ ವೃಣ್ವತೇ]ನ ಸಂಭಜಂತೇ, ರಥಮಶ್ವೌಚ ದೃಷ್ಟ್ವಾ ಪಲಾಯಂತ ಇತ್ಯರ್ಥಃ, [ತಸ್ಮೈ ಇಂದ್ರಾಯ] ತತ್ಸಂತೋಷಾರ್ಥಂ ಹೇ ಋತ್ವಿಜಃ! [ಗಾಯತ] ಸ್ತುತಿಂ ಕುರುತ"**. - ಎಂದರೆ ಯುದ್ಧಗಳಲ್ಲಿ ಯಾವ ಇಂದ್ರನ ರಥದಲ್ಲಿ ಹೂಡಿದ ಎರಡು ಕುದುರೆಗಳನ್ನು ಶತ್ರುಗಳು ಎದಿರುಗೊಳ್ಳಲಾರರೋ, (ರಥವನ್ನೂ. ಕುದುರೆಗಳನ್ನೂ ಕಂಡು ಓಡಿಹೋಗುತ್ತಾರೆ - ಎಂದರ್ಥ.) ಅವನ ಸಂತೋಷಕ್ಕಾಗಿ, ಓ ಋತ್ವಿಕ್ಕುಗಳೇ ! ಅವನನ್ನು ಸ್ತುತಿಸಿರಿ " - ಎಂದು ಬರೆಯುತ್ತಾರೆ. ಶ್ರೀ॥ ಸಾಯಣರ ದೃಷ್ಟಿಯಲ್ಲಿಯೂ ಇಂದ್ರನು ದೇಹಧಾರಿಯಾದ, ಕುದುರೆಗಳನ್ನು ಹೂಡಿದ ರಥದಲ್ಲಿ ಸಂಚಾರ ಮಾಡುವ ಹಾಗೂ ಹೊಗಳಿಕೆಯಿಂದ ಹಿಗ್ಗಿ ಹರ್ಷಿಸುವ ಒಬ್ಬ ಸಾಕಾರದೇವತೆ. ತಮ್ಮ ಪಕ್ಷ-ಪೋಷಣೆಗಾಗಿ **"ಸಂಗ್ರಾಮನಾಮಸು ಸಮತ್ಸು ಸಮರಣ ಇತಿ ಪಠಿತಂ."** [ನಿರುಕ್ತ]; **"ಸಮ್ಯಕ್ ತಿಷ್ಠತೀತಿ ಸಂಸ್ಥೋ ರಥಃ."."ಹರತೋ ರಥಮಿತಿ ಹರೀ ಅಶ್ವೌ."**; ಹಾಗೂ **"ಹಿಂಸಾರ್ಥಕ ಶತಿಧಾತೋಃ ಶತ್ರುಃ"** - "ಯುದ್ಧವೆಂಬರ್ಥದಲ್ಲಿ ಸಮತ್ಸು ಸಮರಸ - ಎಂದು ಹೇಳಲಾಗಿದೆ.": "ದೃಢವಾಗಿ ನಿಲ್ಲುವುದರಿಂದ ತೇರನ್ನು ರಥ ವೆನ್ನುತ್ತಾರೆ."; "ರಥವನ್ನು ಹರಿಯಿಸುವುದರಿಂದ ಕುದುರೆಗಳನ್ನು 'ಹರಿ' ಎನ್ನುತ್ತಾರೆ." ಹಾಗೂ, "ಹಿಂಸಾ-ಎಂಬರ್ಥದ ಶತಿ ಧಾತುವಿನಿಂದ ಶತ್ರು ಶಬ್ದ ಹುಟ್ಟಿರುವುದರಿಂದ, ಶತ್ರು ಎಂದರೆ ಹಿಂಸಕ." - ಎಂಬ ಪ್ರಮಾಣಗಳನ್ನು ಕೊಟ್ಟಿದ್ದಾರೆ.

ಆದರೆ, ಈ ಅರ್ಥ ಅತ್ಯಂತ ಲೌಕಿಕ, ವಸ್ತುತಃ ಈ ಸೂಕ್ತದಲ್ಲಿ ಇಂದ್ರ ಎಂಬುದು ನಿರಾಕಾರನೂ, ನಿರ್ವಿಕಾರನೂ, ಸರ್ವವ್ಯಾಪಕನೂ ಆದ ಪರಮಾತ್ಮನಿಗೆ ಅನ್ವಯಿಸುವ ಶಬ್ದ - ಎಂಬ ತಥ್ಯವನ್ನು ಓದುಗರು ಈಗಾಗಲೇ ಕಂಡುಕೊಂಡಿದ್ದಾರೆ. ವ್ಯಾಪಕನಿಗೆ ರಥ ಕುದುರೆ ಮೊದಲಾದ ವಾಹನಗಳ ಆವಶ್ಯಕತೆಯಾದರೂ ಏನಿದೆ ? ಏಕ ರಸನಾಗಿ ಎಲ್ಲೆಡೆಯೂ ವ್ಯಾಪಕನಾಗಿರುವ ಭಗವಂತ ಬರುವುದು - ಹೋಗುವುದು ಎಲ್ಲಿಂದ ? ಮತ್ತು ಎಲ್ಲಿಗೆ ? ಆದುದರಿಂದ ರಥ ತೇರಲ್ಲ; ಹರಿ ಕುದುರೆಯೂ ಅಲ್ಲ. ಅವಕ್ಕೆ ವೈದಿಕ ಶೈಲಿಯಲ್ಲಿ ಬೇರೆ ಅರ್ಥಗಳೇ ಇವೆ. ಈ ರಹಸ್ಯವನ್ನು ಮಹರ್ಷಿ ದಯಾನಂದರು ಕಂಡುಕೊಂಡಿದ್ದಾರೆ. ಅವರು ಈ ಮಂತ್ರದ ಭಾಷ್ಯದಲ್ಲಿ **["ಯಸ್ಯ] ಪರಮೇಶ್ವರಸ್ಯ [ಸಂಸ್ಥೇ] ಸಮ್ಯಕ್ ತಿಷ್ಠಂತಿ ಯಸ್ಮಿನ್, ತಸ್ಮಿನ್ ಜಗತಿ [ನವೃಣ್ವತೇ] ನ ಸಂಭಜಂತೇ, [ಹರೀ] ಹರಣಶೀಲೌ ಬಲಪರಾಕ್ರಮೌ, [ಸಮತ್ಸು] ಯುದ್ಧೇಷು (ಸಮತ್ಸ್ವಿತಿ ಸಂಗ್ರಾಮ ನಾಮಸು ಪಠಿತಂ.) [ನಿ. 2.1.], [ಶತ್ರವಃ]**

**ಅಮಿತ್ರಾಃ, [ತಸ್ಮೈ] ಏತದ್ಗುಣ ವಿಶಿಷ್ಟಂ [ಇಂದ್ರಾಯ] ಪರಮೇಶ್ವರಂ [ಗಾಯತ] ಗುಣಸ್ತವನ ಶ್ರವಣಾಭ್ಯಾಂ ವಿಜಾನೀತ."** - ಎಂದು ಬರೆಯುತ್ತಾರೆ. ಆರ್ಷ ದೃಷ್ಟಿಯಲ್ಲಿ ಇದರ ಸರಳ ಕನ್ನಡ ಭಾಷಾಂತರ ಹೀಗಾದೀತು:– "ಯಾವ ಪರಮೇಶ್ವರನ ಜಗತ್ತಿನಲ್ಲಿ ಜೀವರು ಉತ್ತಮ ರೀತಿಯಲ್ಲಿ ನೆಲೆಸುತ್ತಾರೋ, ಆ ಜಗತ್ತಿನಲ್ಲಿ ಅನ್ಯರ ವಸ್ತು - ಐಶ್ವರ್ಯ - ಅಧಿಕಾರಾದಿಗಳನ್ನು ಕಸಿದುಕೊಳ್ಳುವ ಬಲ - ಪರಾಕ್ರಮಗಳನ್ನು ಸಂಘರ್ಷಗಳಲ್ಲಿ ಶತ್ರುಗಳು ಎದುರಿಸಲಾರರೋ, ಅಂತಹ ಗುಣ ವಿಶಿಷ್ಟವಾದ ಪರಮೇಶ್ವರನನ್ನು ಕುರಿತು ಹಾಡಿರಿ; ಅವನ ಗುಣಸ್ತವನ - ಶ್ರವಣಗಳಿಂದ ಅವನನ್ನು ಅರಿತುಕೊಳ್ಳಿರಿ."

ಶ್ರೀಮಧ್ವ - ಸಾಯಣರ ರಥ ದಯಾನಂದರ ಜಗತ್ತಾಯಿತು; ಅವರ ಕುದುರೆಗಳು ದಯಾನಂದರ ಬಲ - ಪರಾಕ್ರಮಗಳಾದವು. ಆಶ್ಚರ್ಯವೆಂದರೆ, ಶ್ರೀ ಮಧ್ವರು ಮೇಲೆ ಉದ್ಧೃತವಾಗಿರುವ ಶಬ್ದಗಳ ನಂತರ - **"ಮನಃ ಪುರೋವಾ ವಿಷಯಹರಣ ನ್ಮನ ಏವಚ ಬುದ್ಧಿಶ್ಚ ಹರಿಶಬ್ದೋಕ್ತೇ ತಮ ಆದೀನಿ ಶತ್ರವಃ"** - ಎಂದರೆ: ಮನದ ಎದುರಿಗೆ - ಎಂದೂ ಆಗಬಹುದು. ಏಕೆಂದರೆ - ವಿಷಯಗಳನ್ನು ಎಳೆದುಕೊಳ್ಳುವುದರಿಂದ ಮನಸ್ಸನ್ನೂ ಹರಿ - ಎನ್ನಬಹುದು. ಅದೇ ಕಾರಣದಿಂದ, ಹರಿ - ಎಂದಾಗ ಬುದ್ಧಿಯನ್ನೂ ಕೂಡ ಗ್ರಹಿಸಬಹುದು. ತಮಸ್ಸು - ಅಜ್ಞಾನ ಮೊದಲಾದವುಗಳು ಶತ್ರುಗಳು" - ಎಂದು ಬರೆದಿದ್ದಾರೆ. ಸ್ಪಷ್ಟವಾಗಿಯೇ ಶ್ರೀ॥ ಮಧ್ವರು ಈ ಸ್ಥಳದಲ್ಲಿ ಲೌಕಿಕ ದೃಷ್ಟಿಯಿಂದ ಮೇಲೆದ್ದು, ಆಧ್ಯಾತ್ಮಿಕ ಪರಿಧಿಯ ಅಂಚನ್ನು ಸ್ಪರ್ಶಿಸಿದ್ದಾರೆ. ಆದರೆ, ತೊಡಕು ಬರುವುದು, "ಆ ಮನೋಬುದ್ಧಿಗಳು ಯಾರವು?"-ಎಂಬ ಪ್ರಶ್ನೆ ತಲೆಯನ್ನೆತ್ತಿದಾಗ, **"ಅಪಾಣಿಪಾದೋ ಜವನೋಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ"** "ಪರಮಾತ್ಮನು ಕೈಯಿಲ್ಲದಿದ್ದರೂ ಹಿಡಿಯುತ್ತಾನೆ, ಕಾಲಿಲ್ಲದಿದ್ದರೂ ಸಂಚರಿಸುತ್ತಾನೆ. ಕಿವಿಯಿಲ್ಲದಿದ್ದರೂ ಅವನು ಆಲಿಸುತ್ತಾನೆ."; **"ಅಪ್ರಾಣೋಹ್ಯಮನಾಃ"** - "ಪ್ರಾಣರಹಿತನು; ಮನೋರಹಿತನು," - ಎಂದಿದ್ದಾರೆ ಉಪನಿಷತ್ಕಾರರು. **"ಸರ್ವತಃ ಪಾಣಿಪಾದಂತತ್ ಸರ್ವತೋಽಕ್ಷಿಶಿರೋಮುಖಂ। ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯತಿಷ್ಠತಿ॥ ಸರ್ವೇಂದ್ರಿಯ ಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ॥"** [ಗೀತಾ:– 13. 13. 14.] - ಅದು ಎಲ್ಲೆಡೆಯೂ ಕೈಕಾಲುಗಳನ್ನುಳ್ಳದು; ಎಲ್ಲೆಡೆಯೂ ಕಣ್ಣು - ತಲೆ - ಮುಖಗಳನ್ನುಳ್ಳದು. ಲೋಕದಲ್ಲಿ ಎಲ್ಲವನ್ನೂ ಆವರಿಸಿ ವಿರಾಜಿಸುತ್ತಿದೆ. ಎಲ್ಲ ಇಂದ್ರಿಯಗಳ ಗುಣಗಳ ಪ್ರಕಾಶದಿಂದಲೂ ಯುಕ್ತವಾದುದು. ಆ ಪರಬ್ರಹ್ಮ ಸಮಸ್ತ ಇಂದ್ರಿಯಗಳಿಂದಲೂ ರಹಿತವಾದುದು." - ಎಂದಿದ್ದಾನೆ ಯೋಗೇಶ್ವರ ಶ್ರೀ ಕೃಷ್ಣ. ಆಲಂಕಾರಿಕವಾಗಿ, **"ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಸ್ಪಾತ್."** [ಯಜುರ್ವೇದ:– 17. 19.] - ಪರಮಾತ್ಮನು ಎಲ್ಲೆಡೆಯೂ ಮುಖಗಳುಳ್ಳವನು; ಎಲ್ಲೆಡೆಯೂ ಬಾಹುಗಳುಳ್ಳವನು, ಎಲ್ಲೆಡೆಯೂ ಪಾದಗಳುಳ್ಳವನು." - ಎಂದು ಮೊದಲಾಗಿ ವೇದಗಳು ವರ್ಣಿಸಿರುವುದರ ಅನುವರ್ಣನೆ

ಮಾತ್ರವಿದು. ತಾತ್ಪರ್ಯವಿಷ್ಟೇ. ಪರಮಾತ್ಮನು ಸಕಲೇಂದ್ರಿಯಂಗಳಿಂದಲೂ ರಹಿತನಾದರೂ ಕಗ್ಗಲ್ಲಿನಂತೆ ಜಡದ್ರವ್ಯವಲ್ಲ; ಇಂದ್ರಿಯಗಳಿಲ್ಲದಿದ್ದರೂ ಇಂದ್ರಿಯಗಳೆಲ್ಲದರ ಶಕ್ತಿಯಿಂದಲೂ ಯುಕ್ತನಾದವನು. ವಸ್ತುಸ್ಥಿತಿ ಹೀಗಿರುವಾಗ, ಮನೋಬುದ್ಧಿಗಳು ಪರಮಾತ್ಮನದಂತೂ ಅಲ್ಲ. ಆದುದರಿಂದ ಮಂತ್ರದಲ್ಲಿನ ಶಬ್ದಗಳ ಸಮನ್ವಯ ಕಷ್ಟವೇ ಸರಿ. ಅಹುದು; ಮನಸ್ಸೆಂದಾಗ ಅದರಲ್ಲಿನ ಶಕ್ತಿಯೆಂದೂ, ಬುದ್ಧಿ - ಎಂದಾಗ ಅದರ ಶಕ್ತಿಯೆಂದೂ ಗ್ರಹಿಸಿದರೆ, ಸಂಗತಿ ಹೊಂದಬಹುದು.

ಮಾನವ ಜೀವನ ಸುಖದ ಸುಪ್ಪತ್ತಿಗೆಯಲ್ಲ; ಸಂಘರ್ಷಗಳ ಸದನ. ವಿಪರೀತ ಅಜ್ಞಾನಿಯಾದ ಮುಗ್ಧ ಮಾನವ, ಸಲ್ಲದ ಸಲುಗೆಯಿಂದ "ತನ್ನ ಮನೋಬಲದ ಮುಂದೆ ಯಾರ ಮನೋಬಲವೂ ನಿಲ್ಲಲಾರದು; ತನ್ನ ಬುದ್ಧಿಬಲದ ಮುಂದೆ ಯಾರ ಬುದ್ಧಿಬಲವೂ ಬಾಲ ಬಿಚ್ಚಲಾರದು." - ಎಂದು ಕೊಚ್ಚಿಕೊಳ್ಳಬಹುದು. ಆದರೆ ಯಾವನನ್ನು ವೇದ - "**ಯೋ ಅಚ್ಯುತಚ್ಯುತ್ ಸ ಜನಾಸ ಇಂದ್ರಃ**" [ಋಗ್ವೇದ:–2.12.9.] "ಜನರೇ ! ಯಾವನು ಕೆಡಹಲಾಗದವರನ್ನೂ ಕೆಡಹಿಯೇ ತೀರುತ್ತಾನೋ, ಅವನೇ ಇಂದ್ರನು."-ಎಂದು ಬಣ್ಣಿಸುತ್ತಿದೆಯೋ, ಆ ಸರ್ವ ಶಕ್ತಿಮಾನ್ ಈಶ್ವರನು ಸ್ವರೂಪತಃ ನಿರೀಂದ್ರಿಯನಾದರೂ ಸೇಂದ್ರಿಯರೆಲ್ಲರಿಗಿಂತಲೂ ಅಧಿಕ ಶಕ್ತಿ - ಸಂಪನ್ನನೇ ಆಗಿದ್ದಾನೆ. ಅವನು ಮುಗ್ಧ ಮಾನವನ ಗರ್ವವನ್ನಡಗಿಸಬೇಕೆಂದು ಸಂಕಲ್ಪ ಮಾಡಿದರಾಯಿತು. ಅವನ ಮನೋಬುದ್ಧಿ ಶಕ್ತಿಯ ಮುಂದೆ, ಯಾವನ ಮನವೂ ನಿಲ್ಲಲಾರದು; ಯಾವನ ಬುದ್ಧಿಯೂ ಸುಳಿಯಲಾರದು.

ಮಹರ್ಷಿ ದಯಾನಂದರು 'ಹರೀ' ಶಬ್ದದಿಂದ ಬಲ - ಪರಾಕ್ರಮಗಳನ್ನು ಗ್ರಹಿಸುತ್ತಾರೆ. ವೇದಗಳು "**ಬಲವಿಜ್ಞಾಯಃ ಸ್ಥವಿರಃ ಪ್ರವೀರಃ ಸಹಸ್ವಾನ್ ವಾಜೀ ಸಹಮಾನ ಉಗ್ರಃ । ಅಭಿವೀರೋ ಅಭಿಸತ್ವಾ ಸಹೋಜಾಃ**" [ಋಗ್ವೇದ:- 10. 103 5.] - "ಓ ಇಂದ್ರ ! ನೀನು ಬಲಗಳನ್ನರಿತವನು. ಅನಾದಿಯು. ಸ್ವತಃ ಉತ್ಕೃಷ್ಟ ವೀರನು. ಎದುರಿಸುವ ಶಕ್ತಿಯುಳ್ಳವನು. ವೇಗಶಾಲಿಯು. ಸಹನಶಕ್ತಿಯುಕ್ತನು. ಉಗ್ರನು. ಎಲ್ಲ ಬಗೆಯಿಂದಲೂ ಉಗ್ರನು. ಎಲ್ಲ ರೀತಿಯಿಂದಲೂ ಸತ್ತ್ವಸಂಪನ್ನನು. ಓಜಸ್ವಿತಮನು." . ಎಂದು ಪ್ರಭುವನ್ನು ವರ್ಣಿಸುತ್ತಿವೆ. "**ಶಂನೋ ವಿಷ್ಣುರುರುಕ್ರಮಃ**" [ಋಗ್ವೇದ;– 1-90. 9.] - "ಪರಾಕ್ರಮಶಾಲಿಯಾದ ವ್ಯಾಪಕ ದೇವನು ನಮಗೆ ಶಾಂತಿಕೊಡಲಿ." - ಎಂಬ ಮಂತ್ರ ಇಂದ್ರನ ಪರಾಕ್ರಮವನ್ನು ವರ್ಣಿಸುತ್ತಿದೆ. ಹೀಗೆ, ಮಹರ್ಷಿ ದಯಾನಂದರು ಮಾಡಿದ ಅರ್ಥ ನೇರವಾಗಿದೆ; ಅತ್ಯಂತ ಸ್ಪಷ್ಟವಾಗಿದೆ.

ಆಯಿತು, ದೇವ - ದೇವನಿಗೆ ಶತ್ರುಗಳಿಲ್ಲ. ಕೇವಲ ಜನ ಹಿಂಸಕರು ಮಾತ್ರ ಶತ್ರುಗಳು, ಅವರೂ ಜೀವರಿಗೆ ಹಿಂಸೆ ಮಾಡುವವರು. "ತಮ್ಮ ಸುಖವೇ ಸುಖ; ಅನ್ಯರು ಅತ್ತರೇನು ? ನಕ್ಕರೇನು ?" - ಎಂದು ಭಾವಿಸಿ, ದೀನ - ದುರ್ಬಲರ ಮೇಲೆ ದರ್ಪ ತೋರಿಸುತ್ತಾ, ಅವರನ್ನು ಪೀಡಿಸುತ್ತಾ, ರಾಕ್ಷಸೀಯ ಜೀವನ ನಡೆಯಿಸುವ ಜನ, ತಮ್ಮ

ಮನೋಬಲ – ಬುದ್ಧಿಬಲಗಳನ್ನು ಎಷ್ಟೇ ಪ್ರಯೋಗಿಸಲಿ; ಪರಮಾತ್ಮನ ಶಕ್ತಿಗಳ ಮುಂದೆ ಅವರು ಕ್ಷಣ ಮಾತ್ರಕ್ಕೂ ನಿಲ್ಲಲಾರರು. ಅವನ ಬಲ - ಪರಾಕ್ರಮಗಳ ಮುಂದೆ ಈ ಹಿಂಸಕರ ಬಲ–ಪರಾಕ್ರಮಗಳು ಸರ್ವಥಾ ನಿಃಸತ್ತ್ವವಾಗುತ್ತವೆ. ಭಗವದ್ರಚಿತವಾದ ಈ 'ಸಂಸ್ಥ' ದಲ್ಲಿ, ಜಗತ್ತಿನಲ್ಲಿ ಯಾರ ಹಾರಾಟವೂ ಬಹುಕಾಲ ಉಳಿಯದು. "**ರಥಃ ರಂಹತೇರ್ಗತಿಕರ್ಮಣಃ ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ.**" [ನಿರುಕ್ತ:–3. 2. 11. 1.] – "ರಂಹಣ - ಎಂದರೆ ಚಲನೆಯುಳ್ಳ ಕಾರಣ ತೇರನ್ನು ರಥವೆನ್ನುತ್ತಾರೆ. ಅಥವಾ ವರ್ಣವ್ಯತ್ಯಯದಿಂದ ಸ್ಥಿರವಾಗಿರುವುದೇ ರಥ." ಎಂಬ ಯಾಸ್ಕೋಕ್ತಿಯನ್ನು ಗೌರವಿಸಿ ಗತಿಯುಕ್ತವಾಗಿರುವುದರಿಂದ ಜಗತ್ತೇ ರಥ; ಅಥವಾ ತನ್ನ ಅಕ್ಷದಲ್ಲಿ ಸ್ಥಿರವಾಗಿರುವುದರಿಂದ ಜಗತ್ತನ್ನು ರಥವೆನ್ನಬಹುದು. ಈ ಸ್ಥಿತಿಯಲ್ಲಿ, 'ಸಮ್ಯಕ್ ತಿಷ್ಠತೀತಿ ಸಂಸ್ಥೋ ರಥಃ' – ಎಂಬ ಸಾಯಣೋಕ್ತಿಗೂ ಬೆಲೆ ಬರುವುದು.

ಪರಮಾತ್ಮನಿಗೆ ಸ್ತುತಿಯ, ಹೊಗಳಿಕೆಯ ಆವಶ್ಯಕತೆಯಿಲ್ಲ. ಅವನ ಸ್ತುತಿಯಿಂದ ಎಂದರೆ ಗುಣಗಾನದಿಂದ ಅವನಲ್ಲಿ ನಮಗೆ ಆಸಕ್ತಿ ಮೂಡುವುದು. ಆ ಕಾರಣದಿಂದಲೆ ಭಗವಂತನನ್ನು ಸ್ತುತಿಸಬೇಕು–ಎಂಬ ತಥ್ಯವನ್ನು ನಮ್ಮ ವಿಶ್ಲೇಷಣ–ಚತುರ, ವಿಚಾರಶಾಲೀ ಪಾಠಕರು ಈಗಾಗಲೇ ಅರಿತಿದ್ದಾರೆ. ಮಹರ್ಷಿ ದಯಾನಂದರು 'ಗಾಯತ' ಎಂಬ ಶಬ್ದಕ್ಕೆ ಮಾಡಿರುವ "ಗುಣಸ್ತವನಶ್ರವಣಾಭ್ಯಾಂ ವಿಜಾನೀತ" - ಎಂದರೆ – "ಆ ಭಗವಂತನ ಗುಣಗಾನದಿಂದ ಮತ್ತು ಗುಣಶ್ರವಣದಿಂದ ಅವನನ್ನು ಅರಿತುಕೊಳ್ಳಿರಿ." - ಎಂಬರ್ಥ ಅತ್ಯಂತ ಮನನೀಯ. ಈಶ್ವರ–ಸಾಕ್ಷಾತ್ಕಾರ ಮಾಡಿಕೊಳ್ಳದ, ಮಾಡಿಕೊಳ್ಳಲು ಶ್ರದ್ಧಾಸಕ್ತಿಗಳಿಂದ ಪ್ರಯತ್ನಿಸದ ಜೀವನ ಯಾವುದೇ ಪಶುಪಕ್ಷಿಗಳ, ಕ್ರಿಮಿ–ಕೀಟಗಳ ಜೀವನವಾದೀತು. ಆದರೆ ಮಾನವನ ಜೀವನವಾಗಲಾರದು. ಮಹರ್ಷಿಯ ಈ ಭಾವನೆ ಸರ್ವಗ್ರಾಹ್ಯ; ಅಲ್ಲಿ 'ನನು,ನಚ' ಎನ್ನಲು ಸೂಜಿಯ ಮೊನೆಯಷ್ಟು ಎಡೆಯಿಲ್ಲ.

### ಸಂಹಿತಾ ವಿಭಾಗ

**ಸುತಪಾವ್ನೇ ಸುತಾ ಇಮೇ ಶುಚಯೋ ಯಂತಿ ವೀತಯೇ**

**ಸೋಮಾಸೋ ದಧ್ಯಾಶಿರಃ ॥೫॥**

**ಪದಪಾಠ:–** ಸುತಪಾವ್ನೇ, ಸುತಾಃ ಇಮೇ, ಶುಚಯಃ, ಯಂತಿ, ವೀತಯೇ, ಸೋಮಾಸಃ, ದಧ್ಯಾಶಿರಃ ॥೫॥

**ಅನ್ವಯ:–** ದಧ್ಯಾಶಿರಃ ಶುಚಯಃ ಸುತಾಃ ಇಮೇ ಸೋಮಾಸಃ ವೀತಯೇ, ಸುತಪಾವ್ನೇ ಯಂತಿ.

**ಶಬ್ದಾರ್ಥ**– [ದಧ್ಯಾಶಿರಃ] ಸರ್ವಾಧಾರನಾದ ಪರಮಾತ್ಮನ ಸಂಪರ್ಕದಲ್ಲಿರುವ, ಪರಮಾತ್ಮನನ್ನೇ ದೋಷನಾಶಕನನ್ನಾಗಿ ಹೊಂದಿರುವ, [ಶುಚಯಃ], ನಿರ್ಮಲರಾದ ತೇಜಸ್ವಿಗಳಾದ, [ಸುತಾಃ] ಶರೀರಧಾರಿಗಳಾಗಿ ಉತ್ಪನ್ನರಾಗಿ ಬಂದ ಈಶ - ಪುತ್ರರಾದ [ಸೋಮಾಸಃ] ಜೀವನದ ಸಾರರೂಪರಾದ ಜೀವಾತ್ಮರು, [ವೀತಯೇ] ಮುನ್ನಡೆಗಾಗಿ ಪ್ರಜಾವಿಸ್ತಾರಕ್ಕಾಗಿ, ಕಾಂತಿಯ ವ್ಯಾಪ್ತಿಗಾಗಿ, ಪ್ರಾಣಶಕ್ತಿ ವರ್ಧನಕ್ಕಾಗಿ ಮತ್ತು ತಮ್ಮ ಪಾಲಿನ ಭೋಗಕ್ಕಾಗಿ, [ಸುತಪಾವ್ನೇ] ಸೃಷ್ಟವಾದ ಸಮಸ್ತ ಬ್ರಹ್ಮಾಂಡದ ಹಾಗೂ ಸಾರ ರೂಪರಾದ ಜೀವರೆಲ್ಲರ ಪಾಲನ ಮಾಡುವ ಭಗವಂತನ ಸಾಕ್ಷಾತ್ಕಾರಕ್ಕಾಗಿ, [ಯಂತಿ] ಪ್ರಾಪ್ಯವಾದ ಗುರಿಯ ಕಡೆಗೆ ನಡೆಯುತ್ತಾರೆ.

**ತಾತ್ಪರ್ಯ**:– ತಮ್ಮ ಪೂರ್ವಕೃತವಾದ ಕರ್ಮಗಳ ಫಲಭೋಗಕ್ಕಾಗಿ, ದೇಹ ತಳೆದು ಬಂದ, ನಿರ್ಮಲರಾದ, ಸರ್ವಾಧಾರನಾದ ಭಗವಂತನ ಮಾನಸಿಕ ಸಂಪರ್ಕದಿಂದ ದೋಷಗಳನ್ನು ಕಳೆದುಕೊಂಡ ಈ ಸಾರಭೂತರಾದ ಜೀವರುಗಳು ಪ್ರಗತಿ-ಸಂತತಿ-ಕಾಂತಿ ಪ್ರಾಣಶಕ್ತಿವರ್ಧನ-ಭೋಗಗಳನ್ನು ಪಡೆದುಕೊಳ್ಳಲು ಅನಿವಾರ್ಯವಾದ ಈಶ್ವರ ಸಾಕ್ಷಾತ್ಕಾರ ಸಾಧನೆಗಾಗಿ ಮುನ್ನಡೆಯುತ್ತಾರೆ.

**ಭಾಷ್ಯ**:– ಈ ಮಂತ್ರದ ದೇವತೆಯೂ ಇಂದ್ರನೇ. ಅವನು 'ಸುತಪಾವಾ'-ಎಂದರೆ ಜಡ-ಚೇತನ ಜಗತ್ತೆಲ್ಲದರ ಮಹಾನ್ ರಕ್ಷಕನು. ಪ್ರತಿಯೊಬ್ಬ ಮಾನವನು 'ವೀತಿ'ಯನ್ನು, ಎಂದರೆ ಪ್ರಗತಿ-ಉತ್ತಮ ಸಂತತಿ-ವರ್ಚಸ್ಸು-ಜೀವನ ಶಕ್ತಿ-ಕೃತಕರ್ಮಗಳ ಫಲ ಭೋಗ ವನ್ನು ಪಡೆದುಕೊಳ್ಳಲು ವಿಶ್ವರಕ್ಷಕಪರಮಾತ್ಮನ ಕಡೆಗೆಯೇ ಹೊರಳುತ್ತಾನೆ. ಆ ದಿಕ್ಕಿನಲ್ಲಿಯೇ ಹೆಜ್ಜೆ ಹಾಕುತ್ತಾನೆ.

ಹೆಜ್ಜೆ ಹಾಕುತ್ತಾನೆ, ಹೌದು. ಆದರೆ, ಕೆಲವು ವಿಶಿಷ್ಟ ಲಕ್ಷಣಗಳನ್ನು ರೂಢಿಸಿ ಕೊಳ್ಳಲು ಸಮರ್ಥನಾಗದೇ ಹೋದರೆ, ಈ ಹೆಜ್ಜೆ ಹಾಕುವಿಕೆಗೆ ಅರ್ಥವೇ ಇರುವುದಿಲ್ಲ. ಯಾವವು ಆ ವಿಶಿಷ್ಟ ಗುಣಗಳು ? ವಿಶಿಷ್ಟ ಲಕ್ಷಣಗಳು ? ಮೊದಲು ಅನ್ಯ ಭಾಷ್ಯಕಾರರ ಕಥನಗಳನ್ನಾಲಿಸೋಣ. ಶ್ರೀ ಮಧ್ವರು ಬರೆಯುತ್ತಾರೆ:–

**ಸೋಮಪೇ ಶುಚಯಃ ಸೋಮಾಃ ಪ್ರಾಪ್ತ್ಯೈ ದಧಿವಿಮಿಶ್ರಿತಾಃ ।**
**ಮನಾಂಸಿ ಧ್ಯಾನಯುಕ್ತಾನಿ ವಾ ಯಾಂತಿ ಹರಯೇ ಸದಾ ॥**

ಈ ಶ್ಲೋಕದ ತಾತ್ಪರ್ಯವಿದು. "ಶುಚಿಯೂ, ಮೊಸರಿನಿಂದ ಬೆರೆತುವೂ ಆದ ಸೋಮಗಳು ಸೋಮಪಾನ ಮಾಡುವ ಇಂದ್ರನಿಗಾಗಿ ಮತ್ತು ಯಜಮಾನನಿಗೆ ಇಂದ್ರನ ಭೇಟಿ ಮಾಡಿಸಲಿಕ್ಕಾಗಿ ಸಿದ್ಧವಾಗಿವೆ. ಅಥವಾ ಧ್ಯಾನಯುಕ್ತವಾದ ಮನಸ್ಸುಗಳು ಹರಿಗಾಗಿ ಸದಾ ಅವನ ಕಡೆಗೆ ಹೋಗುತ್ತವೆ." ಓದುಗರು ಸ್ಪಷ್ಟವಾಗಿ ಈ ಉದ್ಧರಣಗಳಲ್ಲಿ ಎರಡು ಬೇರೆ-ಬೇರೆ ಅರ್ಥಗಳನ್ನು ಕಾಣುತ್ತಾರೆ. ಮೊದಲನೆಯದು ಅತಿ ಸ್ಪಷ್ಟವಾಗಿ ಪೌರಾಣಿಕ

ಕಲ್ಪನೆಯ ಸಾಕಾರನಾದ ಮತ್ತು ಸೋಮ-ರಸಪಾನಕ್ಕಾಗಿ ಹಾತೊರೆಯುವ ಇಂದ್ರ. ಇವನನ್ನು ನಾವು ನಿರಾತಂಕವಾಗಿ ಮರೆತೇ ಬಿಡಬಹುದು. ಎರಡನೆಯ ಭಾಗದಲ್ಲಿ ಮಧ್ವರು ಸ್ವಲ್ಪ ಆಳಕ್ಕಿಳಿದಿದ್ದಾರೆ. "ದಧ್ಯಾಶಿರಃ ಸೋಮಾಃ"-ಎಂದರೆ, 'ಧ್ಯಾನಯುಕ್ತವಾದ ಮನಸ್ಸುಗಳು.' ಎಂಬ ಅರ್ಥ ಮಾಡಿ, ಅವು ಶ್ರೀ ಹರಿಯ ಕಡೆಗೇ ಹೋಗುವವು, - ಎಂದು ಬರೆದಿದ್ದಾರೆ. 'ದಧಿ' ಶಬ್ದವನ್ನು **'ಡುದಾಞ್ ಧಾರಣೇ'** - ಎಂಬ ಧಾತುವಿನಿಂದ ವ್ಯುತ್ಪನ್ನವಾದುದೆಂದು ಗ್ರಹಿಸಿ, ಧಾರಣ ಅಥವಾ ಧಾರಣಾ ಧ್ಯಾನದ ಒಂದು ಸ್ಥಿತಿಯೆಂದು ಭಾವಿಸಿದ್ದಾರೆ. **"ತತ್ರ ಪ್ರತ್ಯಯೈಕತಾನತಾ ಧ್ಯಾನಂ"** [ಯೋಗ:-ವಿಭೂತಿ ಪಾದ-2.] "ಧಾರಣಾವಸ್ಥೆಯಲ್ಲಿ ಜ್ಞಾನ ಅಖಂಡವಾಗಿ ನಿಲ್ಲುವುದೇ ಧ್ಯಾನ." - ಎಂಬ ಪಾತಂಜಲ ಸೂತ್ರ ಶ್ರೀ ಮಧ್ವರಿಗೆ ಅನುಕೂಲವಾಗಿರುವಂತೆ ತೋರುತ್ತದೆ.

ಶ್ರೀ ಸಾಯಣರ ಭಾಷ್ಯದಲ್ಲಿಯೂ ಸೋಮದ ಬಗೆಗೆ ಪರಂಪರಾಗತ ವಿಶ್ವಾಸವೇ ವ್ಯಕ್ತವಾಗಿದೆ. "**ಇಮೇ ಸೋಮಾಸಃ ಅಸ್ಮಿನ್ ಕರ್ಮಣಿ ಸಂಪಾದಿತಾಃ ಸೋಮಾಃ ಸುತಪಾವ್ನೇ ಅಭಿಷುತಸ್ಯ ಸೋಮಸ್ಯ ಪಾನಕರ್ತ್ರೇ, ತಸ್ಯ ಪಾತುಃ ವೀತಯೇ ಭಕ್ಷಣಾರ್ಥಂ ಯಂತಿ। ತಮೇವ ಪ್ರಾಪ್ನುವಂತಿ। ಕೀದೃಶಾಃ ಸೋಮಾಃ ? ಸುತಾಃ ಅಭಿಷುತಾಃ ಶುಚಯಃ ದಶಾಪವಿತ್ರೇಣ * ಶೋಧಿತತ್ವಾತ್ ಶುದ್ಧಾಃ। ದಧ್ಯಾಶಿರಃ ಅವನೀಯಮಾನಂ ದಧಿ ಆಶೀಃ ದೋಷಘಾತಕಂ ಯೇಷಾಂ ಸೋಮಾನಾಂ ತೇ ದಧ್ಯಾಶಿರಃ ಸುತಪಾವ್ನೇ ಸುತಂ ಪಿಬತೀತಿ ಸುತಪಾವಾ।**" **ಈ ಕರ್ಮದಲ್ಲಿ ಸಂಪಾದಿತವಾದ ಸೋಮಗಳು ಪುನಃ ಪುನಃ ಹಿಂಡಲ್ಪಟ್ಟ ಸೋಮವನ್ನು ಕುಡಿಯುವ ಆ ಪಾನಕರ್ತೃವಿನ ಭಕ್ಷಣಕ್ಕಾಗಿ ಅವನ ಬಳಿ ಸೇರುತ್ತವೆ. ಎಂತಹ ಸೋಮಗಳು ? ದಶಾ ಪವಿತ್ರದಿಂದ ಶೋಧಿಸಲ್ಪಟ್ಟುದರಿಂದ ಶುದ್ಧವಾದುವುಗಳು. ಮತ್ತು ಮೊಸರನ್ನೇ ದೋಷನಾಶಕವಾಗಿ ಹೊಂದಿರುವ ಸೋಮಗಳು. ಹಿಂಡಿದುದನ್ನು ಕುಡಿಯುವವನು 'ಸುತಪಾವಾ'.**

'ದಧ್ಯಾಶಿರಃ' - ಎಂಬುದಕ್ಕೆ ಸಾಯಣರು ಮಾಡಿರುವ ಅರ್ಥವನ್ನು ಓದುಗರು ಗಮನಿಸಬೇಕು. ದಧಿಯಿಂದ-ಎಂದರೆ ಮೊಸರಿನಿಂದ ದೋಷ-ನಿವಾರಣೆ ಮಾಡಿಕೊಂಡಂತಹವು-ಎಂದಿದ್ದಾರೆ ಸಾಯಣರು. ಸೋಮರಸಪಾನಕ್ಕಾಗಿ ಸಾಕಾರನಾದ ಇಂದ್ರನೆಂಬ ದೇವತೆ ಬರುವ ಅದೇ ಹಳಸಿದ ಕಥೆಯಿದು. ಇಷ್ಟೇ ವೇದಗಳ ಅರ್ಥವಾದರೆ-ಅಂತಹ ವೇದಗಳ ಅಧ್ಯಯನ ಮಾಡಬೇಕಾದ ಆವಶ್ಯಕತೆಯಿಲ್ಲ.

ಆದರೆ, ಭಗವದ್ವಾಣೀ ವೇದಗಳ ಗಾಂಭೀರ್ಯ ಇಂತಹ ಭಾಷ್ಯಗಳಿಂದ ಬೆಳಕಿಗೆ ಬಾರದು. ಎಂತಹ ಅದ್ಭುತ ಮಂತ್ರವನ್ನು ಈ ಭಾಷ್ಯಕಾರರು ಎಷ್ಟು ಕೆಳ ಮಟ್ಟಕ್ಕೆ ಇಳಿಸಿ

* ದಶಾಪವಿತ್ರ ಸೋಮರಸವನ್ನು ಶೋಧಿಸಲು ಬಳಸುತ್ತಿದ್ದ ಜರಡಿಯಂತಹ ಉಪಕರಣವಿರಬೇಕು.

ಬಿಟ್ಟಿದ್ದಾರೆಂದು ನೆನೆದಾಗ ಮನಸ್ಸಿಗಾಗುವ ಆಘಾತ ಅಷ್ಟಿಷ್ಟಲ್ಲ. ವೇದಗಳ ನಿಜವಾದ ಅರ್ಥ ಗ್ರಹಿಸಿದಾಗ ಬುದ್ಧಿಗೆ ಸಿಕ್ಕುವ ನಿರ್ಭ್ರಾಂತ ಜ್ಞಾನದ ಪ್ರಕಾಶ ವಸ್ತುತಃ ಸಾಟಿಯಿಲ್ಲದುದು. ಮಹರ್ಷಿ ದಯಾನಂದರು ಈ ಮಂತ್ರದಲ್ಲಿ ಹೇಳಲ್ಪಟ್ಟಿರುವ ಇಂದ್ರ ಶಬ್ದದಿಂದ ಇಂದ್ರಿಯವಾನ್ ಜೀವನನ್ನು ಗ್ರಹಿಸಿ - "**ಸುತಪಾವ್ನೇ ಸುತಾನಾಂ ಅಭಿಮುಖ್ಯೇನ ಉತ್ಪಾದಿತಾನಾಂ ಪದಾರ್ಥಾನಾಂ ಪಾವಾ ರಕ್ಷಕೋ ಜೀವಃ। ತಸ್ಮೈ ಅತ್ರ [ಸುತಾಃ] ಉತ್ಪಾದಿತಾಃ [ಇಮೇ] ಸರ್ವೇ ಶುಚಯಃ ಪವಿತ್ರಾಃ [ಯಂತಿ] ಯಾಂತಿ। ಪ್ರಾಪ್ನುವಂತಿ। [ವೀತಯೇ] ಜ್ಞಾನಾಯ ಭೋಗಾಯ ವಾ। ವೀ ಗತಿ ವ್ಯಾಪ್ತಿ ಪ್ರಜನನಕಾಂತ್ಯಸನ ಖಾದನೇಷು। [ಸೋಮಾಸಃ] ಅಭಿಸೂಯಂತ ಉತ್ಪದ್ಯಂತ ಉತ್ತಮಾ ವ್ಯವಹಾರಾಃ ಯೇಷು ತೇ। [ದಧ್ಯಾಶಿರಃ] ದಧತಿ ಪುಷ್ಣಂತೀತಿ ದಧಯಃ ತೇ ಸಮಂತಾತ್ ಶೀರ್ಯಂತೇ ಯೇಷು।**" ಇದರ ಕನ್ನಡದ ಭಾಷಾಂತರ ಹೀಗಾಗುವುದು;- "[ಸುತಪಾವ್ನೇ] ಹಿಂಡಿ ತೆಗೆಯಲ್ಪಟ ಮುಖ್ಯತಃ ಉತ್ಪನ್ನವಾದ ಪದಾರ್ಥಗಳ [ಪಾವಾ-ಪಾವ್ನೇ] ರಕ್ಷಕನಾದ ಜೀವನಿಗೆ ಇಲ್ಲಿ ಉತ್ಪಾದಿತವಾದ ಸಮಸ್ತ [ಶುಚಯಃ] ಪವಿತ್ರವಾದುವೆಲ್ಲವೂ, [ವೀತಯೇ] ಜ್ಞಾನಕ್ಕಾಗಿ ಅಥವಾ ಭೋಗಕ್ಕಾಗಿ [ಯಂತಿ] ಲಭಿಸುತ್ತವೆ. [ವೀ–ಎಂಬ ಧಾತುವೂ ಗತಿ, ವ್ಯಾಪ್ತಿ ಪ್ರಜನನ, ಕಾಂತಿ, ಅಸನ ಮತ್ತು ಖಾದನ - ಎಂಬರ್ಥಗಳನ್ನು ಹೊಂದಿದೆ.] [ಸೋಮಾಸಃ, ಯಾವವುಗಳಿಂದ ಉತ್ತಮವಾದ. ವ್ಯವಹಾರಗಳು ಸಿದ್ಧಿಸುತ್ತವೋ, ಆ ಪದಾರ್ಥಗಳೂ] [ದಧ್ಯಾಶಿರಃ] ಪುಷ್ಟಿಕಾರಕವಾಗಿದ್ದು. ಪೋಷಣ ಕಾರ್ಯದಲ್ಲೇ ಜೀರ್ಣವಾಗುವ ವಸ್ತುಗಳೂ ಪವಿತ್ರವಾಗಿ ಮಾಡಲ್ಪಟ್ಟಿವೆ."

ಮಹರ್ಷಿಗಳು ಇಂದ್ರನಿಗೆ ಜೀವನೆಂದು ಅರ್ಥ ಮಾಡಿರುವುದು ಮಾತ್ರವಲ್ಲ; ಅದೇ ಶಬ್ದದಿಂದ ವಾಯು-ಸೂರ್ಯರನ್ನೂ ಕೂಡ ಗ್ರಹಿಸಿದ್ದಾರೆ. ಸೋಮಗಳು-ಎಂಬ ಶಬ್ದಕ್ಕೆ 'ಉತ್ತಮ ವ್ಯವಹಾರ ಸಾಧಕ ವಸ್ತುಗಳೆಂದೂ, 'ದಧ್ಯಾಶಿರಃ'–ಎಂಬ ಶಬ್ದಕ್ಕೆ "ಪುಷ್ಟಿಪ್ರದಕಾರ್ಯಕ್ಕೋಸ್ಕರ ಕ್ಷೀಣಿಸುವ ವಸ್ತು"ಗಳೆಂದೂ ವಿವರವಿತ್ತಿದ್ದಾರೆ. ಈ ಆರ್ಷದೃಷ್ಟಿಗೆ ವಿರುದ್ಧವಾಗಿ ದನಿಯೆತ್ತುವ ಸಾಮರ್ಥ್ಯ ಯಾರಿಗೂ ಇಲ್ಲ. ಆದರೂ, ಕೂಡ, 'ಇಂದ್ರ' ಶಬ್ದಕ್ಕೆ ಸೂಕ್ತದ ಆರಂಭದಿಂದ ಕೊಡಲ್ಪಟ್ಟ 'ಸರ್ವೇಶ್ವರ'–ಎಂಬರ್ಥವನ್ನೇ ಹಿಡಿದು ಹೊರಟರೆ, ಮಹಾನ್ ಆಕರ್ಷಕ ಭಾವನೆ ಈ ಮಂತ್ರದಿಂದ ಅಭಿವ್ಯಕ್ತವಾಗುತ್ತದೆ.

'ಸೋಮಾಸಃ' - ಎಂಬ ಶಬ್ದಕ್ಕೆ ಜೀವಾತ್ಮರೆಂದು ಅರ್ಥ ಮಾಡಿದರೆ, ಸುತಾಃ, ಶುಚಯಃ, ದಧ್ಯಾಶಿರಃ,-ಎಂಬ ಮೂರೂ ಗುಣವಾಚಕಗಳಾಗಿ, ಅಖಿಲ ಬ್ರಹ್ಮಾಂಡದ ಏಕೈಕ ನಾಯಕ ಹಾಗೂ ರಕ್ಷಕನಾದ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಹೇಗೆ ಅಧಿಕಾರಿಗಳಾಗುತ್ತಾರೆ.- ಎಂಬ ತಥ್ಯ ಸೊಗಸಾಗಿ ಹೊರಬೀಳುತ್ತದೆ. ಕೇವಲ ಕಲ್ಪನೆಯಿಂದ ನಾವು ಸೋಮ ಶಬ್ದಕ್ಕೆ ಜೀವಾತ್ಮನೆಂಬ ಅರ್ಥವನ್ನು ಕೊಡುತ್ತಿಲ್ಲ, ಸ್ವತಃ ವೇದಗಳಲ್ಲಿಯೇ ಈ ಶಬ್ದ ಜೀವವಾಚಕವಾಗಿ ಬಂದಿರುವುದನ್ನು ನಾವು ಕಾಣುತ್ತೇವೆ, ಪಾಠಕರು ಪ್ರಥಮ ಮಂಡಲದ ದ್ವಿತೀಯ

ಸೂಕ್ತದ ಪ್ರಥಮ ಮಂತ್ರದಲ್ಲಿಯೇ-**"ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ'** [ಋಕ್:- 1. 2. 1.] - "ಓ ಸರ್ವಪ್ರಾಣ ಸ್ವರೂಪ ದರ್ಶನೀಯ ಪ್ರಭೋ! ಈ ಜೀವರು ಸರ್ವ ಶಕ್ತಿಗಳಿಂದ ಅಲಂಕೃತರಾಗಿದ್ದಾರೆ." - ಎಂದು ಓದಿದ್ದಾರೆ. **"ಏತೇ ಅಸೃಗ್ರಮಾಶವೋऽತಿ ಹ್ವರಾಂಸಿ ಬಭ್ರವಃ । ಸೋಮಾ ಋತಸ್ಯ ಧಾರಯಾ ॥** [ಋಕ್:- 9. 63. 4.] - "ಈ ಜೀವಿತದ ಸಾರಸರ್ವಸ್ವರಾದ ಜೀವರು ಗತಿಯುಕ್ತರಾಗಿ, ಕುಟಿಲತನವನ್ನು ದಾಟಿ, ಶುಭ್ರರಾಗಿ, ವೇದಜ್ಞಾನ ಪ್ರವಾಹದಿಂದ ಮುಂದೆ ನಡೆಯುತ್ತಾರೆ." ಎಂದೂ ಹೇಳಲ್ಪಟ್ಟಿದೆ. ಪ್ರಮಾಣಗಳ ದೀರ್ಘ ಶೃಂಖಲೆಯನ್ನೇ ಹೆಣೆಯಬಹುದು. ಆದರೆ, ವಿಜ್ಞಪಾಠಕರಿಗೆ ಈ ಸಂಕೇತವೇ ಸಾಕು,

ಸೋಮರುಗಳು ಜೀವರೆಂಬುದನ್ನು ಗ್ರಹಿಸಿದಲ್ಲಿ, ಅವರು, 'ಸುತರು', ಈಶ್ವರ ಪುತ್ರರು; ಶುಭ್ರಚಾರಿತ್ರರು - ಎಂಬ ಸ್ಪಷ್ಟಾರ್ಥ ಎದುರಿಗೆ ಬರುತ್ತದೆ. **'ದಧ್ಯಾಶಿರಃ'** - ಎಂಬುದು ಮಾತ್ರ ಸ್ವಲ್ಪ ವಿವರಣಾಪೇಕ್ಷಿಯಾಗಿದೆ. **"ದಧಿ+ ಆಶಿರಃ=ದಧ್ಯಾಶಿರಃ"** - ಎಂದು ಬಿಡಿಸಿ ನೋಡಿದಾಗ, ಈ ಶಬ್ದವೂ ಸರಳವೇ ಎನಿಸುತ್ತದೆ. **"ದಧಾತೀತಿ ದಧಿ"**- "ಎತ್ತಿ ಹಿಡಿಯುವವನೇ, **ಸರ್ವಾಧಾರನಾದ ಈಶ್ವರನೇ ದಧಿ.** ಆ ದಧಿಯೊಂದಿಗೆ ಮಿಶ್ರಿತರಾದವರು, ಸಂಪರ್ಕ ಸಾಧಿಸಿಕೊಂಡ ಸತ್ಪುರುಷರು **'ದಧ್ಯಾಶಿರಃ'** ಎಂದು ನಿರ್ದೇಶಿಸಲ್ಪಡುತ್ತಾರೆ. ದಧಿ ಮೊಸರಲ್ಲ; ಅಥವಾ ಮೊಸರು ಮಾತ್ರವೇ ಅಲ್ಲ.**'ಡುದಾಞ್ ಧಾರಣೇ'** - ಧಾರಣ ಎಂಬರ್ಥವನ್ನುಳ್ಳ ಧಾತುವಿನಿಂದ ವ್ಯುತ್ಪನ್ನವಾಗಿರುವ 'ದಧಿ' ಶಬ್ದ "ಧಾರಣಕರ್ತೃ"-ಎಂಬರ್ಥವನ್ನು ಕೊಡುತ್ತದೆ. ಸರ್ವಾಧಾರನಾದ ಈಶ್ವರನಿಗಿಂತ ದೊಡ್ಡ ಧಾರಕನಾವನಿದ್ದಾನೆ ?

ಮುಂದಕ್ಕೆ ಎಲ್ಲವೂ ಸುಲಭ. ಈಶ್ವರ ಪುತ್ರರೂ, ನಿರ್ಮಲ ಚಾರಿತ್ರರೂ, ಪರಮಾತ್ಮನ ಸಂಪರ್ಕದಲ್ಲಿರುವವರೂ ಆದ ಈ ಜೀವಾತ್ಮರುಗಳು 'ವೀತಿ' ಎಂದರೆ ಆತ್ಮವಿಕಾಸವನ್ನು ಪಡೆದುಕೊಳ್ಳುವ ಸಲುವಾಗಿ 'ಸುತಾಪಾವಾ' ಎಂದರೆ ಉತ್ಪನ್ನವಾದ ಸಕಲ ಬ್ರಹ್ಮಾಂಡದ ಪರಮ ರಕ್ಷಕನಾದ ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳಲು ಮುನ್ನಡೆಯುತ್ತಾರೆ. ವೀತಿ ಹಾಗೂ ಈಶ್ವರ ಸಾಕ್ಷಾತ್ಕಾರ - ಎರಡು ಒಂದಕ್ಕೊಂದು ಹೊಸೆದುಕೊಂಡೇ ಇರುತ್ತವೆ; ಒಂದಿಲ್ಲದೆ ಮತ್ತೊಂದು ಎಂದಿಗೂ ಸಿದ್ಧಿಸದು. 'ವೀತಿ' ಶಬ್ದದ ಮೂಲ ಧಾತುವಾದ 'ವೀ' - ಎಂಬುದಕ್ಕೆ ಎಷ್ಟು ವಿಧದ ಅರ್ಥಗಳಿವೆ - ಎಂದು ಹೇಳಿಯೇ ಇದ್ದೇವೆ. ಪ್ರಗತಿಶೀಲತ್ವ, ಉತ್ತಮ ಸಂತತಿ ಪ್ರಾಪ್ತಿ, ಆತ್ಮಿಕ ವರ್ಚಸ್ಸು ಹಾಗೂ ದೈಹಿಕ ತೇಜಸ್ಸು, ದೃಢವಾದ ಪ್ರಾಣಶಕ್ತಿ ಮತ್ತು ಮಾನವೋಚಿತವಾದ ಸಾತ್ವಿಕ ಭೋಗಗಳ ಸಿದ್ಧಿ ಇವೆಲ್ಲಾ ಕೂಡಿ ಬಂದರೆ 'ಆತ್ಮ ವಿಕಾಸ' ಸಿದ್ಧಿಸಿತೆನ್ನಬಹುದು. ಮಂತ್ರದಲ್ಲಿ ಹೇಳಿರುವ ವೈಶಿಷ್ಟ್ಯಗಳನು ಗಳಿಸಿಕೊಂಡರೆ ಆತ್ಮ ವಿಕಾಸ-ಈಶ್ವರ ಸಾಕ್ಷಾತ್ಕಾರ-ಎರಡೂ ಲಭಿಸಿಯೇ ತೀರುವವು.

ನೇರವೂ, ಹೃದಯಸ್ಪರ್ಶಿಯೂ, ಬುದ್ಧಿಸಂಗತವೂ ಆದ ಈ ಅರ್ಥವನ್ನು ಬಿಟ್ಟು ಕಲ್ಪಿತವಾದ ಸಾಕಾರ ಇಂದ್ರ, ಮೊಸರು ಬೆರೆಸಿದ ಸೋಮರಸ - ಮೊದಲಾದ ಸಲ್ಲದ ಅರ್ಥಗಳನ್ನು ಗ್ರಹಿಸಿ, ಭ್ರಾಂತಿಜಾಲದಲ್ಲಿ ಬೀಳುವುದು ವಿಚಾರಶೀಲರಾದ ಮಾನವರಿಗೆ ಉಚಿತವಲ್ಲ.

ಇನ್ನು ಮುಂದಿನ ಮಂತ್ರವನ್ನು ಮನನ ಮಾಡೋಣ:-

### ಸಂಹಿತಾ ವಿಭಾಗ

**ತ್ವಂ ಸುತಸ್ಯ ಪೀತಯೇ ಸದ್ಯೋ ವೃದ್ಧೋ ಅಜಾಯಥಾಃ ।**

**ಇಂದ್ರ ಜ್ಯೈಷ್ಠ್ಯಾಯ ಸುಕ್ರತೋ ॥೬॥**

**ಪದಪಾಠ:**– ತ್ವಂ, ಸುತಸ್ಯ. ಸದ್ಯಃ, ವೃದ್ಧಃ ಅಜಾಯಥಾಃ । ಇಂದ್ರ, ಜ್ಯೈಷ್ಠ್ಯಾಯ ಸುಕ್ರತೋ ॥೬॥

**ಅನ್ವಯ:**– ಇಂದ್ರ ಸುಕ್ರತೋ ! ತ್ವಂ ಜ್ಯೈಷ್ಠ್ಯಾಯ ಸುತಸ್ಯ ಪೀತಯೇ ಸದ್ಯಃ ವೃದ್ಧಃ ಅಜಾಯಥಾಃ ॥೬॥

**ಶಬ್ದಾರ್ಥ:**– [ಇಂದ್ರ] ಓ ಸಕಲೈಶ್ವರ್ಯ ಸಂಪನ್ನ ಸರ್ವಶಕ್ತಿಯುಕ್ತ ಭಗವನ್ ! [ಸುಕ್ರತೋ] ಉತ್ತಮ ಕ್ರಿಯಾ ಕರ್ತೃವೂ, ಉತ್ತಮ ಜ್ಞಾನ ಸಂಪನ್ನನೂ ಆದ ಸರ್ವೇಶ್ವರ ! [ತ್ವಂ] ನೀನು, [ಸುತಸ್ಯ ಪೀತಯೇ] ಸಮುತ್ಪನ್ನವಾದ ಲೋಕ-ಲೋಕಾಂತರಗಳ ಪಾಲನಕ್ಕಾಗಿ, [ಜ್ಯೈಷ್ಠ್ಯಾಯ] ಹಾಗೂ ಜ್ಯೇಷ್ಠತ್ವವನ್ನು ಪ್ರಕಟಿಸುವುದಕ್ಕಾಗಿ, [ಸದ್ಯಃ] ಕ್ಷಿಪ್ರವಾಗಿಯೇ, [ವೃದ್ಧಃ] ಮುಂದುವರಿದವನು, [ಅಜಾಯಥಾಃ] ಆಗಿರುತ್ತೀಯೆ,

**ಅಥವಾ**

[ಇಂದ್ರ] ಇಂದ್ರಿಯವಂತನಾದ ಜೀವನೇ ! [ಸುಕ್ರತೋ] ಉತ್ತಮ ಜ್ಞಾನವಾನ್ ಮತ್ತು ಶ್ರೇಷ್ಠ ಕರ್ಮವಾನ್ ಜೀವಾತ್ಮನೇ [ತ್ವಂ] ನೀನು, [ಸುತಸ್ಯ ಪೀತಯೇ] ಮನನ ಚಿಂತನಗಳಿಂದ ಹೃದಯಾಂತರಾಳದಿಂದ ಉಕ್ಕಿ ಬರುವ ಭಗವದಾನಂದ ರಸದ ಪಾನಕ್ಕಾಗಿ, ಅಥವಾ, [ಸುತಸ್ಯ] ಸೃಷ್ಟವಾದ ಬ್ರಹ್ಮಾಂಡದ ಅಣು - ಅಣುವಿನಲ್ಲಿಯೂ ಹರಿಯುವ ಆನಂದ ರಸವನ್ನು, [ಪೀತಯೇ] ಪಾನ ಮಾಡಲಿಕ್ಕಾಗಿ, [ಜ್ಯೈಷ್ಠ್ಯಾಯ] ಆತ್ಮ ವಿಕಾಸದ

ಪ್ರಾಪ್ತಿಗಾಗಿ, [ಸದ್ಯಃ] * ಕ್ಷಿಪ್ರವಾಗಿ. [ವೃದ್ಧಃ] ವರ್ಧನ ಶೀಲನು, [ಅಜಾಯಥಾಃ] ಆಗಿರುತ್ತೀಯೆ.

**ತಾತ್ಪರ್ಯ:**– ಓ ಸಕಲೈಶ್ವರ್ಯವಾನ್ ಭಗವಂತ ! ಓ ಉತ್ತಮ ಪ್ರಜ್ಞಾವಾನ್ ಶುಭ ಕರ್ಮವಾನ್ ಪರಮಾತ್ಮನ್ ! ನೀನು ಅಖಿಲ ಬ್ರಹ್ಮಾಂಡದ ಸಂರಕ್ಷಣಕ್ಕಾಗಿ ಮತ್ತು ಈ ರೀತಿ ನಿನ್ನ ಹಿರಿಮೆಯನ್ನು ಅಲ್ಪಜ್ಞರಾದ ಜೀವರಿಗೆ ತಿಳಿಸುವುದಕ್ಕಾಗಿ ಶೀಘ್ರವಾಗಿಯೇ ಅಗ್ರಸ್ಥಾನೀಯನಾಗಿರುತ್ತೀಯೆ.

**ಅಥವಾ**

ಓ ಇಂದ್ರಿಯವಾನ್ ಜೀವ ! ಹೇ ಶುಭ ಕರ್ಮವಾನ್ ಜೀವಾತ್ಮನ್ ! ನೀನು ಈ ಭಗವದ್ರಚಿತವಾದ ಸೃಷ್ಟಿಯಲ್ಲಿ ಸಾರರೂಪವಾದ, ನಿನ್ನ ಪಾಲಿನ ಭೋಗವನ್ನು ಪಡೆದು ಕೊಳ್ಳುವ ಸಲುವಾಗಿ ಮತ್ತು ಉಪಲಬ್ಧವಾಗಿರುವ ಮಾನವ ಜನ್ಮವನ್ನು ಸಫಲಗೊಳಿ ಸಲು ಆತ್ಮ - ವಿಶ್ವಾಸವನ್ನು ಸಾಧಿಸಿಕೊಳ್ಳುವುದಕ್ಕಾಗಿ, ಕ್ಷಿಪ್ರವಾಗಿ, ಆಲಸ್ಯ ರಹಿತನಾಗಿ ವೃದ್ಧಿಯನ್ನು ಹೊಂದಲು ಮುಂದುವರಿಯುವವನಾಗಿರುತ್ತೀಯೆ. ನೀನು ಕೇವಲ ದೇಹದ ಜೀರ್ಣತ್ವದಿಂದಲ್ಲ: ಉತ್ತಮವಾದ ಜ್ಞಾನಾರ್ಜನೆಯಿಂದ ಹಾಗೂ ಶುಭ ಕರ್ಮದಿಂದ ಮುಂದೆ ಮುಂದೆ ನಡೆಯುವವನಾಗು.

**ಭಾಷ್ಯ:**– ಈ ಮಂತ್ರದ ಭಾಷ್ಯ ಮಾಡುವಾಗ, ಹಲವು ವಿಶಿಷ್ಟಾಂಶಗಳನ್ನು ಗಮನದಲ್ಲಿಡಬೇಕಾಗಿದೆ. ಈ ಮಂತ್ರದ ದೇವತೆಯೂ ನಮ್ಮ ಪಾಠಕರಿಗೆ ಪರಿಚಿತನಾದ ಇಂದ್ರನೇ ಆಗಿದ್ದಾನೆ. ಆದರೆ, ಇಂದ್ರ-ಶಬ್ದ ಅನೇಕಾರ್ಥ ಪ್ರಕಾಶಕವಾಗಿದೆ; ಕೇವಲ ಒಂದೇ ಒಂದು ಅರ್ಥವಲ್ಲ, ಅದಕ್ಕಿರುವುದು - ಎಂಬುದನ್ನು ಕೂಡ ಓದುಗರು ಈಗಾಗಲೇ ತಿಳಿದಿದ್ದಾರೆ. ಈ ಮಂತ್ರದ ವೈಶಿಷ್ಟ್ಯವೆಂದರೆ, ಇದನ್ನು ಪರಮಾತ್ಮನಿಗೂ ಅನ್ವಯಿಸ ಬಹುದು; ಜೀವಾತ್ಮನಿಗೂ ಕೂಡ ಅನ್ವಯಿಸಬಹುದು. ಶ್ರೀ ॥ ಮಧ್ವರು ಇದರ ಭಾಷ್ಯ ವನ್ನು ಹೀಗೆ ಬರೆದಿದ್ದಾರೆ:–

**ಸದಾ ಪೂರ್ಣಃ ಶುಭಜ್ಞಾನಃ ಜ್ಯೈಷ್ಠ್ಯೈ ವ್ಯಕ್ತ್ಯೈ ಸುತಾಪ್ತಯೇ ।**
**ನ ಕ್ವಾದಾದೇರಭಿವ್ಯಕ್ತ್ಯೋऽಭವಃ ॥**

"ನಿರ್ಮಲ ಜ್ಞಾನಯುಕ್ತನಾದ ಇಂದ್ರನೇ! ನೀನು ಸದಾ ಪೂರ್ಣನು. ಹಿಂಡಲ್ಪಟ್ಟ

---

* 'ಸದ್ಯಸ್' ಅಥವಾ 'ಸದ್ಯಃ' ಎಂಬ ಅವ್ಯಯ 'ಇಂದು, ಒಂದೇ ದಿನ, ತತ್ಕ್ಷಣ, ಇನ್ನು ಮುಂದಕ್ಕೆ, ಕೂಡಲೇ, ಹೊಸತಾಗಿ, ಸ್ವಲ್ಪ ಕಾಲದ ಹಿಂದೆ, ಇದ್ದಕ್ಕಿದ್ದಂತೆ' - ಎಂದು ಮೊದಲಾಗಿ ಹಲವಾರು ಅರ್ಥಗಳನ್ನು ಹೊಂದಿದೆ. ನಾವು ಪ್ರಕರಣದ ದೃಷ್ಟಿ ಯಿಂದ 'ಕ್ಷಿಪ್ರವಾಗಿ' ಎಂದರ್ಥ ಮಾಡಿದ್ದೇವೆ.

ಸೋಮದ ಪಾನಕ್ಕಾಗಿ ನೀನು ಬರುವುದು, ಹಸಿವು- ಮೊದಲಾದವುಗಳನ್ನು ದೂರೀಕರಿಸುವ ಸಲುವಾಗಿಯಲ್ಲ; ಆದರೆ ಎಲ್ಲ ದೇವತೆಗಳನ್ನೂ ಹೋಲಿಸಿದಲ್ಲಿ ತನ್ನ ಜ್ಯೇಷ್ಠತ್ವವನ್ನು ಅಭಿವ್ಯಕ್ತಗೊಳಿಸಲುವಾಗಿ ಮಾತ್ರ" - ಎಂದು ಶ್ರೀ ಮಧ್ವರ ವ್ಯಾಖ್ಯಾನದ ತಾತ್ಪರ್ಯ. ಸೂತ್ರದ ಆದಿಯಿಂದಲೇ ಸಾಕಾರದೇವತೆಯಾದ ಹಾಗೂ ಸೋಮಲತೆಯ ರಸಕುಡಿಯ ಲಿಕ್ಕೋಸ್ಕರ ಚಡಪಡಿಸುತ್ತಿರುವ ಇಂದ್ರನನ್ನು ಹಿಡಿದು ಬಂದಿರುವ ಶ್ರೀ ಮಧ್ವರು ಈಗ ಇದ್ದಕ್ಕಿದ್ದಂತೆ ತಮ್ಮ ನಿಲುವನ್ನು ಪರಿವರ್ತಿಸುವರೆಂದು ಭಾವಿಸುವುದೂ ತಪ್ಪೇ ಆದೀತು ಸೋಮಪಾನಾಭಿಲಾಷಿಯಾದ ಇಂದ್ರನನ್ನೇ ಅವರು ಇಲ್ಲಿಯೂ ಗ್ರಹಿಸಿದ್ದಾರೆ. "ಸದ್ಯೋ ವೃದ್ಧ" - ಎಂಬುದಕ್ಕೆ **ಸದಾಪೂರ್ಣ'** ನೆಂದೂ '**ಸುಕ್ರತುಂ'** ಎಂಬುವುದಕ್ಕೆ '**ಶುಭಜ್ಞಾನ ಯುಕ್ತ'**ನೆಂದೂ ಅವರು ಮಾಡಿರುವ ಅರ್ಥಗಳು ಮನನೀಯವಾಗಿವೆ. ವಿಶೇಷವೆಂದರೆ ಆ ಇಂದ್ರನು ಸೋಮಪಾನ ಮಾಡುವುದು ಹಸಿವು ಬಾಯಾರಿಕೆಗಳನ್ನು ತೀರಿಸಿಕೊಳ್ಳುವು ದಕ್ಕಲ್ಲ. ತನ್ನ ಜ್ಯೇಷ್ಠತ್ವದ ಪ್ರದರ್ಶನಕ್ಕಾಗಿ – ಎಂದಿಷ್ಟು ಹೆಚ್ಚಿಗೆ ಹೇಳಿದ್ದಾರೆ, ಅಷ್ಟೇ. ಪೌರಾಣಿಕ ಕಲ್ಪನೆಯ ಈ ಇಂದ್ರನ ಬಗೆಗೆ ಹೆಚ್ಚು ಬರೆಯುವ ಆವಶ್ಯಕತೆಯೋ ಇಲ್ಲ.

ಇನ್ನು ಸಾಯಣರ ಭಾಷ್ಯದತ್ತ ದೃಷ್ಟಿ ಹೊರಳಿಸೋಣ. ಅವರು ಬರಿಯುತ್ತಾರೆ– **"ಸುಕ್ರತೋ ಶೋಭನಕರ್ಮನ್! ಶೋಭನ ಪ್ರಜ್ಞಾವಾ ! ಹೇ ಇಂದ್ರ ತ್ವಂ ಸುತಸ್ಯ ಅಭಿಷುತಸ್ಯ ಸೋಮಸ್ಯ ಪೀತಯೇ ಪಾನಾರ್ಥಂ ಜ್ಯೈಷ್ಠ್ಯಾಯ ದೇವೇ ಷು ಜ್ಯೇಷ್ಠತ್ವಾರ್ಥಂಚ ಸದ್ಯಃ ತಸ್ಮಿನ್ನೇವ ಕ್ಷಣೇ ವೃದ್ಧೋಽಜಾಯಥಾಃ ಅಭಿ ವೃದ್ಧ್ಯಾ ಉತ್ಸಾಹೇನ ಯುಕ್ತೋಽಭೂಃ"** ಇವರ ಇಂದ್ರನೂ ಅದೇ ಮಧ್ವರ ಇಂದ್ರನೇ. ರಾಗವು ವೃತ್ತಿ ಅದೇ ಆಗಿದೆ. ಇದರ ಕನ್ನಡ ಭಾಷಾಂತರ ಹೀಗಾದೀತು:–ಸುಕ್ರ ತೋ – ಉತ್ತಮ ಕರ್ಮನಿಷ್ಠನೇ ! ಅಥವಾ ಉತ್ತಮ ಜ್ಞಾನಯುಕ್ತನೇ! ಓ ಇಂದ್ರ! ನೀನು ಒಳಿತಾಗಿ ಹಿಂಡಲ್ಪಟ್ಟ ಸೋಮದ ಪಾನಕ್ಕಾಗಿ, ದೇವತೆಗಳಲ್ಲಿ ನಿನ್ನ ಜ್ಯೇಷ್ಠತ್ವವನ್ನು ಪ್ರಕಟಿಸುವುದಕ್ಕಾಗಿ ಅದೇ ಕ್ಷಣದಲ್ಲಿ ಅಭಿವೃದ್ಧಿ ಉತ್ಸಾಹಗಳಿಂದ ಯುಕ್ತನಾಗಿರುತ್ತೀಯೆ. ಶ್ರೀ ಮಧ್ವರು ಸುಕ್ರತು ಎಂಬ ಶಬ್ದಕ್ಕೆ 'ಶುಭ ಜ್ಞಾನ ನೆಂದು ಬರೆದಿದ್ದರೆ, ಸಾಯಣರು ಶುಭಕರ್ಮಯುಕ್ತನೆಂದೂ ಸೇರಿಸಿದ್ದಾರೆ. ಮಧ್ವರಂತೆ ಹಸಿವೆ–ಮೊದಲಾದ ವಿಕಾರಗಳ ಸಂಕೇತ ಮಾಡದಿದ್ದರೂ ಅವರಂತೆಯೇ 'ಜ್ಯೇಷ್ಠತ್ವವನ್ನು ತೋರಿಸಿಕೊಳ್ಳಬೇಕೆಂಬ ಹಂಬಲ ವನ್ನು ಇಂದ್ರನಿಗೆ ಸುತ್ತಿಹಾಕಿದ್ದಾರೆ. ಈ ಎರಡು ಭಾಷ್ಯಗಳನ್ನೂ ಓದಿದ ಮೇಲೆ ಜಿಜ್ಞಾ ಸುವಿನ ಜ್ಞಾನ ಭಂಡಾರಕ್ಕೆ ಲಭಿಸುವದು ದೊಡ್ಡದೊಂದು ಸೊನ್ನೆ ಮಾತ್ರ

ಮಹರ್ಷಿ ದಯಾನಂದರು ಈ ಮಂತ್ರಕ್ಕೆ ಜೀವ–ಪರಕವಾದ ಅರ್ಥವನ್ನು ಮಾಡಿ ದ್ದಾರೆ, ಅವರು ಬರೆಯುತ್ತಾರೆ– **ಜೀವ ತ್ವಂ ಸುತಸ್ಯ ಉತ್ಪನ್ನಸ್ಯಾಸ್ಯ ಜಗತ್ಪ ದಾರ್ಥ ಸಮೂಹಸ್ಯ ಸಕಾಶಾತ್ ರಸಸ್ಯ ಪೀತಯೇ ಪಾನಾಯ ಗ್ರಹಣಾಯ ವಾ ಸದ್ಯಃ ಶೀಘ್ರಂ ವೃದ್ಧಃ ಜ್ಞಾನಾದಿ ಸರ್ವಗುಣ ಗ್ರಹಣೇನ ಸರ್ವೋಪಕಾ ರ ಕರಣೇಚ ಶ್ರೇಷ್ಠಃ ಅಜಾಯಥಾಃ ಪ್ರಾದುರ್ಭೂತೋಭವ. ಇಂದ್ರಾ**

**ವಿದ್ಯಾದಿಪರಮೈಶ್ವರ್ಯ ಯುಕ್ತ ವಿದ್ವನ್! ಇಂದ್ರ ಇತಿ ಪದನಾಮಸು ಪಠಿತಂ (ನಿಘಂ- 5.4) ಅನೇನ ಗಂತಾಪ್ರಾಪಕೋ ವಿದ್ವಾನ್ ಜೀವೋ ಗೃಹ್ಯತೇ ಜ್ಯೈಷ್ಠ್ಯಾಯ ಅತ್ಯುತ್ತಮ ಕರ್ಮಾನುಷ್ಠಾನಾಯ, ಸುಕ್ರತೋ! ಶ್ರೇಷ್ಠಕರ್ಮ ಬುದ್ಧಿಯುಕ್ತ ಮನುಷ್ಯ! ಪ್ರಾದುರ್ಭಾವೋ ಭವ."** ಮಹರ್ಷಿಕೃತ ಭಾಷ್ಯದ ಅರ್ಥವಿದು:- "[ತ್ವಂ] **ಜೀವನಾದ ನೀನು,** [ಸುತಸ್ಯ] **ಉತ್ಪನ್ನನಾದ ಈ ಜಗತ್ತಿನ ಪದಾರ್ಥಸಮೂಹದ;** [ಪೀತಯೇ] **ಸೇವಿಸಲು ಅಥವಾ ಗ್ರಹಿಸಲು ಸದಾ ಕ್ಷಿಪ್ರವಾಗಿ,** [ವೃದ್ಧಃ] **ಜ್ಞಾನವೇ ಮೊದಲಾದ ಸಕಲಗುಣಗಳ ಅಂಗೀಕಾರದಿಂದ ಮತ್ತು ಪರೋಪಕಾರ ಕಾರ್ಯದಲ್ಲಿ** ಶ್ರೇಷ್ಠನಾಗಿ [ಅಜಾಯಥಾಃ] **ಪ್ರಾದುರ್ಭವಿಸು.** [ಇಂದ್ರ] **ಪರಮೈಶ್ವರ್ಯಯುಕ್ತನಾದ ವಿದ್ವಾಂಸನೇ!** [ಇಂದ್ರ ಇತಿ ಪದನಾಮಸುಪಠಿತಂ [ನಿಘಂಟು – 5. 4.] ಈ ಪ್ರಮಾಣದಿಂದ ಅಗ್ರಗಾಮಿಯೂ ಅನ್ಯರಿಗೂ ಸುಖವನ್ನುಂಟು ಮಾಡುವವನೂ ಆದ ವಿದ್ವಾನ್ ಜೀವನು ಗ್ರಾಹ್ಯನಾಗಿದ್ದಾನೆ. [ಜ್ಯೈಷ್ಠ್ಯಾಯ] **ಅತ್ಯುತ್ತಮ ಕರ್ಮಾನುಷ್ಠಾನಕ್ಕಾಗಿ,** [ಸುಕ್ರತೋ] **ಓ ಶ್ರೇಷ್ಠ ಕರ್ಮಬುದ್ಧಿಯುಕ್ತಮಾನವನೇ** [ಪ್ರಾದುರ್ಭವ] ಪ್ರಕಟನಾಗು."

ಯಾವ ತೆರೆಮನದ, ವಿಶಾಲ ಹೃದಯದ, ಪೂರ್ವಾಗ್ರಹರಹಿತನಾದ ವಿಚಾರಶೀಲನಾದರೂ ಮಹರ್ಷಿಕೃತವಾದ ಭಾಷ್ಯದ ಮುಂದೆ - "ಓಹೋ ; ಪರಮಸತ್ಯವಾದ ಭಾಷ್ಯವೆಂದರೆ ಇದೇ !" ಎಂದು ಮಣಿಯಲೇ ಬೇಕು. ಇಲ್ಲಿ ತಾನು ಎಲ್ಲ ದೇವತೆಗಳಿಗಿಂತ ಅಧಿಕನೆಂಬುದನ್ನು ತೋರಿಸಿಕೊಳ್ಳಲಿಕ್ಕಾಗಿಯೇ ಸೋಮಪಾನಕ್ಕಾಗಿ ಧಾವಿಸಿ ಬರುವ ಸಾಕಾರನಾದ ಕಲ್ಪಿತನಾದ ಇಂದ್ರನ ನೆರಳೂ ಇಲ್ಲ. ಮಂತ್ರದಲ್ಲಿನ ಒಂದೊಂದು ಶಬ್ದದಲ್ಲಿಯೂ ಅದೆಷ್ಟು ಗಾಂಭೀರ್ಯವಿದೆ - ಎಂಬುದನ್ನು ಮಹರ್ಷಿ ತೋರಿಸಿಕೊಟ್ಟಿದ್ದಾರೆ. ಸುತ ಹಿಂಡಲ್ಪಟ್ಟ ಸೋಮಲತೆಯ ರಸವಲ್ಲ; ಜಗತ್ತಿನ ಸಾರಭೂತ ಭೋಗ್ಯ ವಸ್ತು ಸಮೂಹ. ವೃದ್ಧ ಎಂದರೆ ಮುದುಕನಲ್ಲ; **"ಯೋ ವೈ ಯುವಾಪ್ಯಧೀಯಾನಃ ತಂ ದೇವಾಃ ಸ್ಥವಿರಂವಿದುಃ"-** [ಮನು!– 2. 156.] "ಯಾವನು ಯುವಕನೇ ಆಗಿದ್ದರೂ, ಶಾಸ್ತ್ರಜ್ಞನಾದ ವಿದ್ವಾಂಸನಾಗಿರುತ್ತಾನೋ ಅವನನ್ನೇ ಜ್ಞಾನಿಗಳು ವೃದ್ಧನೆಂದು ತಿಳಿಯುತ್ತಾರೆ." - ಎಂಬ ಮಾನವ ಧರ್ಮಶಾಸ್ತ್ರದ ಪ್ರಮಾಣದ ಆಧಾರದಿಂದ, 'ವೃದ್ಧನೆಂದರೆ ಜ್ಞಾನಾದಿಸರ್ವಗುಣಗ್ರಾಹಿ' ಎಂದು ಹೇಳಿದ್ದಾರೆ. ಮಾತ್ರವಲ್ಲ; ವೃದ್ಧತ್ವದಲ್ಲಿ ಪರೋಪಕಾರಕರಣವನ್ನೂ ಒಂದು ಲಕ್ಷಣವಾಗಿ ಗ್ರಹಿಸಿದ್ದಾರೆ. '**ಜ್ಯೈಷ್ಠ್ಯ**'ವೆಂದರೆ ಕೇವಲ ಹಿರಿಮೆಯೆಂದಲ್ಲ; ಅತ್ಯುತ್ತಮ ಕರ್ಮಾನುಷ್ಠಾನವೆಂದೂ '**ಸುಕ್ರತು**' - ಎಂದರೆ ಕೇವಲ 'ಶುಭಜ್ಞಾನಯುಕ್ತನೆಂದಲ್ಲ. ಶ್ರೇಷ್ಠ ಕರ್ಮಜ್ಞಾನಯುಕ್ತನೆಂದು ವರ್ಣಿಸಿದ್ದಾರೆ. ಈ ಅರ್ಥಕ್ಕೆ **"ಧೀರಿತಿ ಪ್ರಜ್ಞಾ ಕರ್ಮನಾಮಸು ಪಠಿತಂ."** ಎಂಬ ಯಾಸ್ಕೋಕ್ತಿಯ ಆಧಾರವನ್ನು ಗ್ರಹಿಸಿದ್ದಾರೆ. ಹೀಗೆ ಆರ್ಷದೃಷ್ಟಿ ವೇದಗಳ ಗರಿಮೆಯನ್ನು ಗುರುತಿಸಿದೆ.

ಆದರೆ, ಈ ಮಂತ್ರ ಕೇವಲ ಜೀವಾತ್ಮನಿಗೆ ಮಾತ್ರವಲ್ಲ; ಪರಮಾತ್ಮನಿಗೂ ಅನ್ವಯಿಸು

ತ್ತದೆ - ಎಂದು ನಮಗೆ ತೋರುತ್ತದೆ. ಸೂಕ್ತಾರಂಭದಿಂದಲೂ ಇಂದ್ರ ಶಬ್ದದಿಂದ 'ಭಗವಂತ'ನೆಂದು ಗ್ರಹಿಸುತ್ತಾ ಬಂದು, ಈ ಮಂತ್ರದ ಪರಿಧಿಯಿಂದ ಅವನನ್ನು ಹೊರ ದೂಡುವುದು 'ಅವ್ಯಾಪ್ತಿ' ದೋಷಕ್ಕೆ ಆಸ್ಪದವೀಯಬಹುದು. ಮಂತ್ರದ ಪ್ರತಿಯೊಂದು ಶಬ್ದವೂ ಹೇಗೆ ಪರಮಾತ್ಮನಿಗೂ ಅನ್ವಯಿಸಬಲ್ಲದೆಂದು ಶಬ್ದಾರ್ಥದಲ್ಲಿ ತೋರಿಸಿಯೇ ಇದ್ದೇವೆ. ವಸ್ತುತಃ ಈ ಮಂತ್ರ ಪರಮಾತ್ಮನ ಸದಾ ಸ್ಮರಣೀಯವಾದ ಲಕ್ಷಣಗಳನ್ನು ಎತ್ತಿ ತೋರಿಸುತ್ತಿದೆ. ಲಕಾರವ್ಯತ್ಯಯವನ್ನು ಭಾವಿಸಿ, **'ಆಗಿರುವೆ, ಆಗಿರುತ್ತೀಯೆ** ಎಂಬುದಕ್ಕೆ ಬದಲು, **'ಆಗು'** ಎಂದರ್ಥ ಮಾಡುವುದೂ ಅಸಂಭವವಲ್ಲ. ಮಹರ್ಷಿ ದಯಾನಂದರೂ ಮಾಡಿಯೂ ಇದ್ದಾರೆ. ಹೀಗೆ ಈ ಮಂತ್ರದಿಂದ ಪರಮಾತ್ಮನ ಮತ್ತು ಜೀವಾತ್ಮನ ಸ್ಫುಟವಾದ ಅರ್ಥವನ್ನು ಗ್ರಹಿಸಬಹುದು. ಈ ಮಂತ್ರ ಪರಮಾತ್ಮನ ಗುಣ ವರ್ಣನೆಯನ್ನು ಮಾಡುವುದಲ್ಲದೆ, ಜೀವಾತ್ಮನ ಮುಂದೆ ಒಂದು ಮಹೋನ್ನತವಾದ ಆದರ್ಶವನ್ನು ಕೂಡ ಮಂಡಿಸುತ್ತಿದೆ. ಆ ದಿವ್ಯ ಭವ್ಯ ಆದೇಶವನ್ನು ಮಹರ್ಷಿ ದಯಾನಂದರ ಮಾತುಗಳಲ್ಲಿಯೇ ಮಂಡಿಸಿ, ಮುಂದಿನ ಮಂತ್ರದತ್ತ ಹೊರಳಬಹುದು. ಆ ಮಾತುಗಳಿವು - **"ಹೇ ಮನುಷ್ಯ ! ಯಾವತ್ತ್ವಂ ನ ವಿದ್ಯಾವೃದ್ಧೋ ಭೂತ್ವಾ ಸಮ್ಯಕ್ ಪುರುಷಾರ್ಥಂ ಪರೋಪಕಾರಂ ಚ ನ ಕರೋಷಿ, ನೈವ ತಾವನ್ಮನುಷ್ಯಭಾವಂ ಸರ್ವೋತ್ತಮ ಸುಖಂ ಚ ಪ್ರಾಪ್ಸ್ಯಸಿ ತಸ್ಮಾತ್ತ್ವಂ ಧಾರ್ಮಿಕೋ ಭೂತ್ವಾ ಪುರುಷಾರ್ಥೀ ಭವ."** - "ಓ ಮಾನವ ! ಎಂದಿನವರೆಗೆ ನೀನು ವಿದ್ಯಾವೃದ್ಧನಾಗಿ ಒಳಿತಾಗಿ ಪ್ರಯತ್ನವನ್ನೂ ಪರೋಪಕಾರವನ್ನೂ ಮಾಡುವುದಿಲ್ಲವೋ, ಅಂದಿನವರೆಗೆ ಮಾನವತ್ವ ವನ್ನು ಮತ್ತು ಸರ್ವೋತ್ತಮ ಸುಖವನ್ನು ಹೊಂದುವುದಿಲ್ಲ. ಆದುದರಿಂದ, ನೀನು ಧಾರ್ಮಿಕನಾಗಿ ಪುರುಷಾರ್ಥಿಯಾಗಿ ಬಾಳು." ಪ್ರತಿಕ್ಷಣವೂ, ಪ್ರತಿಯೊಬ್ಬನೂ ಪ್ರತಿಯೊಬ್ಬಳೂ ಸ್ಮರಿಸುತ್ತಾ ಇರಬೇಕಾದ ಹಾಗೂ ಕ್ರಿಯಾತ್ಮಕವಾಗಿ ಬಾಳಿಗೆ ಇಳಿಸಿಕೊಳ್ಳಬೇಕಾದ ಮಾತುಗಳಿವು.

**ಸಂಹಿತಾ ವಿಭಾಗ**

**ಆ ತ್ವಾ ವಿಶಂತ್ವಾಶವಃ ಸೋಮಾಸ ಇಂದ್ರ ಗಿರ್ವಣಃ।**

**ಶಂ ತೇ ಸಂತು ಪ್ರಚೇತಸೇ॥೭॥**

**ಪದಪಾಠಃ**:- ಆ, ತ್ವಾ, ವಿಶಂತು, ಆಶವಃ, ಸೋಮಾಸ, ಇಂದ್ರ, ಗಿರ್ವಣಃ, ಶಂ, ತೇ, ಸಂತು, ಪ್ರಚೇತಸೇ॥೭॥

**ಅನ್ವಯ**:- ಗಿರ್ವಣಃ ಇಂದ್ರ! ಆಶವಃ, ಸೋಮಾಸಃ, ತ್ವಾ ಆ ವಿಶಂತು, ಪ್ರಚೇತಸೇ ಶಂ ತೇ, ಸಂತು.

**ಶಬ್ದಾರ್ಥ** [ಗಿರ್ವಣಃ ಇಂದ್ರ] ವಾಣಿಯಿಂದ ಸ್ತುತಿಸಲ್ಪಡುವ ಸರ್ವೇಶ್ವರ! [ಆಶವ:] ಶೀಘ್ರಗಾಮಿಗಳಾದ, [ಸೋಮಾಸ:] ಜೀವಾತ್ಮರುಗಳು, [ಆ] ಎಲ್ಲೆಡೆಯಿಂದಲೂ [ತ್ವಾ] ನಿನ್ನನ್ನು, [ವಿಶಂತು] ಹೊಗಲಿ; ಪ್ರವೇಶಮಾಡಲಿ, [ಪ್ರಚೇತಸೇ] ಪ್ರಜ್ಞಾನ ಸ್ವರೂಪನಾದ, [ತೇ] ನಿನ್ನ, [ಶಂ] ಶಾಂತಿಗೆ, [ಸಂತು] ಪಾತ್ರರಾಗಲಿ.

**ಅಥವಾ**

[ಗಿರ್ವಣಃ ಇಂದ್ರ] ಶಬ್ದಗಳಿಂದ ಹೊಗಳಿಸಿಕೊಳ್ಳುವ ಇಂದ್ರಿಯವಾನ್ ಜೀವನೇ; ಶುಭಗುಣಗಳಿಂದಾಗಿ ಸ್ತುತಿಗರ್ಹನಾದ ಮಾನವ! [ಆಶವ:] ಆಲಸ್ಯರಹಿತನಾದ, [ಸೋಮಾಸ] ಮಾನವ ಸಮಾಜದ ಕೆನೆಯಂತಿರುವ, ಮಾನವತ್ವದ ರಸದಂತಿರುವ ಜೀವರುಗಳು. ಮಾನವರು [ತ್ವಾ] ನಿನ್ನನ್ನು, [ಆ] ಎಲ್ಲೆಡೆಯಿಂದಲೂ, [ವಿಶಂತು] ಸೇರುತ್ತಿರಲಿ. [ಪ್ರಚೇತಸೇ ತೇ] ಪ್ರಜ್ಞಾನವಂತನಾದ ನಿನಗೆ, [ಶಂ ಸಂತು] ಸುಖ ಶಾಂತಿಯುಕ್ತರಾಗಿಯೇ ವಿರಾಜಿಸಲಿ.

ಈ ರೀತಿ ಈ ಮಂತ್ರದಿಂದಲೂ ಪರಮಾತ್ಮ - ಜೀವಾತ್ಮರಿಬ್ಬರನ್ನೂ ಗ್ರಹಿಸಬಹುದು ಯಾವುದೇ ಎಳೆದಾಟವು ಇಲ್ಲದೆ, ಮಂತ್ರದಲ್ಲಿಲ್ಲದ ಅನೇಕ ಶಬ್ದಗಳನ್ನು ಸೇರಿಸಿಕೊಂಡು ವಿಸ್ತಾರವನ್ನೂ ಮಾಡದೆ, ಸುಗಮವಾಗಿ ಎರಡು ಅರ್ಥಗಳನ್ನೂ ಮಾಡಬಹುದಾಗಿದೆ.

**ತಾತ್ಪರ್ಯ:-** ವೇದವಾಣಿಗಳಿಂದ ಸ್ತುತ್ಯನಾದ ಪರಮಾತ್ಮನೇ! ಆಲಸ್ಯವಿಲ್ಲದವರೂ, ಸದಾ ಸತ್ಕರ್ಮನಿಷ್ಠರೂ ಆದ ಜೀವಾತ್ಮರುಗಳು ಸರ್ವರಿಗೂ ಪರಮ ಆಶ್ರಯರೂಪನಾದ ನಿನ್ನನ್ನೇ ಸೇರಲಿ. ಸ್ವತಃ ಜ್ಞಾನರೂಪನೇ ಆದ ನಿನ್ನ ಶಾಂತಿಗೆ ಜೀವರೆಲ್ಲರೂ ಪಾತ್ರರಾಗಲಿ.

**ಅಥವಾ**

ಪ್ರಶಂಸನೀಯನಾದ ಜೀವಾತ್ಮನ್! ಶುಭಗುಣಗಳ ಕಾರಣದಿಂದ ಹೊಗಳಿಕೆಗೆ ಪಾತ್ರನಾದ ಇಂದ್ರಿಯವಾನ್ ಜೀವ! ಆಲಸ್ಯವಿಲ್ಲದವರಾದ, ಮಾನವ ಜಾತಿಯ ಕೆನೆಯಂತೆ ಸಾರಸ್ವರೂಪರಾದ ಸಜ್ಜನರು ಎಲ್ಲೆಡೆಯಿಂದಲೂ ನಿನ್ನ ಸಹವಾಸಕ್ಕೆ ಆಗಮಿಸುತ್ತಿರಲಿ. ಉತ್ತಮ ಜ್ಞಾನ ಸಂಪನ್ನನಾದ ನಿನಗೆ ಅವರು ಸುಖ - ಶಾಂತಿಯುಕ್ತರಾಗಿಯೇ ವಿರಾಜಿಸಲಿ.

**ಭಾಷ್ಯ:-** ಈ ಮಂತ್ರದ ಅರ್ಥವನ್ನು ಗ್ರಹಿಸುವುದು ಬಹು ಸುಲಭವಾಗಿದೆ. ಆಶವಃ, ಗಿರ್ವಣಃ, ಪ್ರಚೇತಸೇ - ಮೂರು ಶಬ್ದಗಳು ಮಾತ್ರ ಹೊಸವೆನ್ನಬಹುದು. ಶ್ರೀ ಮಧ್ವರು, ಈ ಮಂತ್ರದ ದೇವತೆಯಾಗಿ ಹರಿಯನ್ನು ಆರಿಸಿಕೊಂಡು ಈ ರೀತಿ

ಭಾಷ್ಯ ಮಾಡಿದ್ದಾರೆ:– **"ಗೀರ್ಭಿರ್ವೃತ ಪ್ರಭೋ! ಪ್ರಕೃಷ್ಟಚೇತಾಸ್ತ್ವದ್ಭೃತ್ಯೋಽಸ್ಮೈಸ್ಯುಃ ಶಂಕರಾಃ ಸುತಾಃ॥"** ಸಂಕ್ಷೇಪದ ದೃಷ್ಟಿಯಿಂದಲೋ ಏನೋ, ಶ್ರೀ ಮಧ್ವರ ವೈಚಿತ್ರ್ಯವೇದರೆ, ಅವರು ಒಂದು ಮಂತ್ರದ ಭಾಷ್ಯವನ್ನು ಒಂದೋ ಎರಡೋ ಪೂರ್ಣವಾದ ಶ್ಲೋಕಗಳಲ್ಲಿ ಮಾಡುವುದಿಲ್ಲ. ಪರಿಣಾಮತಃ, ಶ್ಲೋಕಗಳ ಮಧ್ಯದಲ್ಲಿಯೇ ಒಂದು ಮಂತ್ರದ ವ್ಯಾಖ್ಯಾನ ಮುಗಿದು, ಉಳಿದ ಶ್ಲೋಕ - ಖಂಡದಲ್ಲಿ ಮುಂದಣ ಮಂತ್ರದ ವ್ಯಾಖ್ಯಾನ ಆರಂಭವಾಗುತ್ತದೆ. ಹೇಗೂ ಇರಲೊಲ್ಲದೇಕೆ ? ಅವರ ಈ ಮಂತ್ರದ ಭಾಷ್ಯದ ಅರ್ಥವಿದು:– "ವಾಣಿಗಳಿಂದ ಗ್ರಹಿತನಾದ (ಭಜನೀಯನಾದ ಎಂದು ಮಾಧ್ವಭಾಷ್ಯದ ಅನುವಾದಕರು ಹೇಳಿದ್ದಾರೆ) ಹಿಂಡಲ್ಪಟ್ಟ ಸೋಮಗಳು ಅವನಿಗೆ ಶಾಂತಿ ದಾಯಕವಾಗಲಿ." ಭೃತ್ಯ ಅದೆಂತು ಯಜಮಾನನೋ ! ಅದೇ ಸೋಮಲತಾರಸದ ಕತೆಯೆ ನಡೆದು ಬರುತ್ತಿದೆ. ಸೋಮರಸಪಾನಕ್ಕಾಗಿ ಹಾತೊರೆಯುವ ಇಂದ್ರನನ್ನೂ ಶ್ರೀ॥ ಮಧ್ವರು ಬಿಟ್ಟಿಲ್ಲ. ಹರಿ, ಇಂದ್ರ ಇಬ್ಬರನ್ನೂ ಆಹ್ವಾನಿಸಿದ್ದಾರೆ. ಇಂದ್ರನೇ ಹರಿಯೋ ಅಥವಾ ವೈಷ್ಣವರ ಆರಾಧ್ಯನಾದ ಶ್ರೀ ॥ ನಾರಾಯಣನೇ ಈ ಹರಿಯೋ, ಅದನ್ನು ನಿರ್ಧರಿಸಲು ಅವರ ಭಾಷ್ಯದಲ್ಲಿ ಸಾಕಾದಷ್ಟು ಸಾಮಾಗ್ರಿಯಿಲ್ಲ. ಸ್ತುತಿಸಿರುವುದು ಶ್ರೀ ಹರಿಯನ್ನು; (ಅಥವಾ ಇಂದ್ರನನ್ನೋ !) ಆದರೆ, ಪ್ರಾರ್ಥಿಸಿರುವುದು ಅವನ ಭೃತ್ಯನಿಗೆ ಸೋಮಗಳು ಸುಖಕರವಾಗಲಿ; ಶಾಂತಿದಾಯಕವಾಗಲಿ - ಎಂದು ಇದನ್ನೋದಿದ ಮೇಲೆ, ಏನಾದರೂ ಜೀವನೋಪಯೋಗೀ ತತ್ತ್ವ ಲಭಿಸಿತೆಂದು ಹೇಳಿಕೊಳ್ಳುವುದು ಸಾಧ್ಯವಿಲ್ಲ.

ಇನ್ನು ಸಾಯಣರ ಭಾಷ್ಯದತ್ತ ದೃಷ್ಟಿ ಬೀರೋಣ. **"ಹೇ ಇಂದ್ರ ! ತ್ವಾಂ ಸೋಮಾಸಃ ಸೋಮಾಃ ಆ ವಿಶಂತು. ಆಭಿಮುಖ್ಯೇನ ಪ್ರವಿಶಂತು. ಕೀದೃಶಾಃ ಸೋಮಾಃ ? ಆಶವಃ ಸವನತ್ರಯೇ ಪ್ರಕೃತಿ-ವಿಕೃತ್ಯೋರ್ವ್ಯಾಪ್ತಿಮಂತ । ಕೀದೃಶ ಇಂದ್ರಃ ?** (ಪ್ರಶ್ನೆಯನ್ನೂ ಸಂಬೋಧನದಲ್ಲಿಯೇ ಇಟ್ಟಿದ್ದಾರೆ) **ಗೀರ್ಭಿಃ ಸ್ತುತಿಭಿಃ ಸಂಭಜನೀಯ ದೇವ ವಿಶೇಷ. ಗಿರ್ವಣಾ ದೇವೋ ಭವತೀತಿ** [6. 14. ] **ಯಾಸ್ಕಃ । ತಥಾವಿಧ ಹೇ ಇಂದ್ರ ! ತೇ ತವ ಪ್ರಚೇತಸೇ ಪ್ರಕೃಷ್ಟ ಜ್ಞಾನಾಯ ಶಂ ಸುಖರೂಪಾಃ ಸೋಮಾಃ ಸಂತು । ಗಿರ್ವಣಃ ಗೃಣಂತೀತಿ ಗಿರಃ ಸ್ತುತಯಃ । ಗೃ ಶಬ್ದೇ । ಗೀರ್ಭಿರ್ವನ್ಯತೇ ಸೇವ್ಯತ ಇತಿ ಗಿರ್ವಣಾಃ । ವನ ಷಣ ಸಂಭಕ್ತೌ । ಸಂಭಕ್ತಿಃ ಸೇವಾ ।"** ಸಾಯಣರು ಅದೇ ಸಾಕಾರ ಇಂದ್ರನನ್ನು ಆಹ್ವಾನಿಸುತ್ತಾರೆ; ಅದೇ ಸೋಮರಸ ಪಾನದ ಪ್ರಲೋಭನವನ್ನು ಒಡ್ಡುತ್ತಾರೆ. "ಹೇ ಇಂದ್ರ ! ನಿನ್ನನ್ನು ಸೋಮಗಳು ಒಳ ಹೊಗಲಿ. ಮುಖ್ಯತಃ ಪ್ರವೇಶಿಸಲಿ. ಎಂತಹ ಸೋಮಗಳು ? ಆಶುಗಳು-ಎಂದರೆ ಪ್ರಾತಃಸವನ-ಮಾಧ್ಯಂದಿ ಸವನ - ಸಾಯಂ ಸವನ – ಮೂರರಲ್ಲಿಯೂ ಅಥವಾ ಪ್ರಕೃತಿ- ವಿಕೃತಿ * ಗಳಲ್ಲಿ ವ್ಯಾಪ್ತ

* ಈ ಪ್ರಕೃತಿ-ವಿಕೃತಿಗಳು ಯಾವ ತತ್ತ್ವವನ್ನು ನಿರ್ದೇಶಿಸುತ್ತವೆ - ಎಂದು ಹೇಳಲು ಖಚಿತವಾದ ಪ್ರಮಾಣಗಳಿಲ್ಲ: ಅಥವಾ ಸಿಕ್ಕುತ್ತಿಲ್ಲ. ಪ್ರಾಯಶಃ ಏನನ್ನೂ ಬೆರೆಸದ ಕೇವಲ ಸೋಮರಸವು ಪ್ರಕೃತಿಯೆಂದೂ, ಮೊಸರನ್ನೋ, ಹಿಟ್ಟನ್ನೋ ಸೇರಿಸಿ ಸಿದ್ಧಪಡಿಸಿದ

ವಾಗಿರುವಂತಹವು. ಎಂತಹ ಇಂದ್ರ ? ವಾಣಿಗಳಿಂದ, ಸ್ತುತಿಗಳಿಂದ ಒಳಿತಾಗಿ ಭಜನೀಯನಾದ ದೇವ ವಿಶೇಷ. "ವಾಣಿಗಳಿಂದ ಸ್ತುತಿಸುತ್ತಾರಾದ ಕಾರಣ ಗಿರ್ವಣಾ ದೇವನಾಗಿರುತ್ತಾನೆ." – ಎಂದು [6. 14.] ಯಾಸ್ಕರೆನ್ನುತ್ತಾರೆ. ಅಂತಹ ಇಂದ್ರನೇ ! ನಿನ್ನ ಉತ್ತಮ ಜ್ಞಾನಕ್ಕೆ ಸೋಮಗಳು ಸುಖ ರೂಪವಾಗಲಿ. ಹೊಗಳುತ್ತಾರೆಯಾದ ಕಾರಣ 'ಗಿರಃ' ಎಂದರೆ ಸ್ತುತಿಗಳು. ವನ, ಷಣವೆಂಬ ಧಾತುಗಳಿಗೆ ಸಂಭಕ್ತಿಯೆಂಬರ್ಥವಿದೆ. ಸಂಭಕ್ತಿಯೆಂದರೆ ಸೇವೆ."

ಓದುತ್ತಾ ಹೋಗಿರಿ. ಪುಟದ ಮೇಲೆ ಪುಟ ಲೇಖನಿಯು ಕಪ್ಪು ಮಸಿಯಿಂದಾಗಿ ಕಪ್ಪಗಾಗುತ್ತವೆಯೇ ಹೊರತು, ಓದಲು ಪಟ್ಟ ಶ್ರಮ, ಕಾಲ, ಶಕ್ತಿ - ಎಲ್ಲವೂ ಕೈಬಿಟ್ಟು ಹೋಗುವುದನ್ನುಳಿದರೆ, ಏನಾದರೂ ಆತ್ಮೋತ್ಕರ್ಷಕ್ಕೊದಗುವ ಸಾಮಗ್ರಿ ಸಿಕ್ಕಿತೆನಿಸುವುದಿಲ್ಲ. ಈಗ ಮಹರ್ಷಿ ದಯಾನಂದರ ಭಾಷ್ಯದತ್ತ ತಿರುಗೋಣ. ಅವರು ಇಂದ್ರ ಶಬ್ದದಿಂದ ಜೀವಾತ್ಮನನ್ನು ಗ್ರಹಿಸಿ, ಈ ರೀತಿ ಭಾಷ್ಯ ಮಾಡಿದ್ದಾರೆ:– "[ಆ] **ಸಮಂತಾತ್** [ತ್ವಾ] **ತ್ವಾಂ ಜೀವಂ,** [**ಆಶವಃ**] **ವೇಗಾದಿಗುಣಸಹಿತಾಃ ಸರ್ವಕ್ರಿಯಾವ್ಯಾಪ್ತಾಃ** [ಸೋಮಾಸಃ] **ಸಮಸ್ತ ಪದಾರ್ಥಾಃ,** [ವಿಶಂತು] ಆವಿಷ್ಟಾಭವಂತು, [ಇಂದ್ರ] **ವಿದ್ವನ್ ಜೀವ !** [ಗೀರ್ವಣಃ] **ಗೀರ್ಭಿಃ ವನ್ಯತೇ ಸಂಭಜ್ಯತೇ ಸಗಿರ್ವಣಾಃ।** '**ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ.**' [ನಿರುಕ್ತ:– 6. 14] **ದೇವಶಬ್ದೇನಾತ್ರ ಪ್ರಶಸ್ತೈಃ ಗುಣೈಃ ಸ್ತೋತುಮರ್ಹೋ ವಿದ್ವಾನ್ ಗೃಹ್ಯತೇ।** [**ಶಂ**] **ಸುಖಂ** [**ತೇ**] **ತುಭ್ಯಂ** [**ಸಂತು**] **ಭವತು।** [ಪ್ರಚೇತಸೇ] **ಪ್ರಕೃಷ್ಟಂ ಚೇತೋ ವಿಜ್ಞಾನಂ ಯಸ್ಯ, ತಸ್ಮೈ।**" ಈ ಭಾಷ್ಯದ ಕನ್ನಡ ಭಾಷಾಂತರ ಈ ರೀತಿಯಾಗುವುದು:- "ವಿದ್ವಾನ್ ಜೀವನೇ ! ವೇಗಾದಿಗುಣಯುಕ್ತವೂ, ಸರ್ವಕ್ರಿಯಾವ್ಯಾಪ್ತವೂ ಆದ ಸಮಸ್ತ ವಸ್ತುಗಳೂ ಎಲ್ಲೆಡೆಯಿಂದಲೂ ಜೀವನಾದ ನಿನ್ನನ್ನು ನಿನ್ನ ಜೀವನವನ್ನು ಪ್ರವೇಶಿಸುತ್ತಿರಲಿ. ವಾಣಿಗಳಿಂದ ಗ್ರಾಹ್ಯನಾದ, ಸಂಭಜನೀಯನಾದ ನಿನಗೆ (ಲಭಿಸುತ್ತಿರಲಿ) ಯಾಸ್ಕರು ವಾಣಿಗಳಿಂದ ಪ್ರಶಂಸಿತನಾದ ಕಾರಣ '**ಗೀರ್ವಣಾಃ**' ಎಂದರೆ '**ದೇವ**'ನೆಂದರ್ಥ - ಎಂದಿದ್ದಾರೆ. [ನಿರುಕ್ತ:– 6. 14] ದೇವಶಬ್ದದಿಂದ ಈ ಸ್ಥಾನದಲ್ಲಿ ಪ್ರಶಸ್ತ ಗುಣಗಳಿಂದ ಸ್ತುತಿಗೆ ಅರ್ಹನಾದ ವಿದ್ವಾಂಸನು ಗ್ರಹಿಸಲ್ಪಡುತ್ತಾನೆ" '**ಶಂ**' ಎನ್ನುವುದು ಸುಖದ ಹೆಸರುಗಳಲ್ಲಿ ಒಂದಾಗಿದೆ. [ನಿಘಂ:– 3. 6.] - ಎಂದು ಯಾಸ್ಕ ವಚನವಿದೆ. ಉತ್ಕೃಷ್ಟವಾದ ವಿಜ್ಞಾನವನ್ನುಳ್ಳ ನಿನಗೆ ಆ ವಸ್ತುಗಳೆಲ್ಲವೂ ಸುಖದಾಯಕವಾಗಲಿ."

ಮಹರ್ಷಿಕೃತವಾದ ಈ ಭಾಷ್ಯದಲ್ಲಿ ಹಲವು ಉದ್ಬೋಧನಗಳಿವೆ; ಪ್ರಸುಪ್ತ ಬುದ್ಧಿ

---

ಸೋಮರಸವು ವಿಕೃತಿಯೆಂದೂ ಭಾವಿಸಬಹುದು. ಅಥವಾ, ನೈಸರ್ಗಿಕ ಸಾಮಗ್ರಿಗಳಿಂದ ಮಾಡುವ ಯಾಗ 'ಪ್ರಕೃತಿ': ಮಿಶ್ರಿತ ಸಾಮಗ್ರಿಗಳಿಂದ ಮಾಡುವಂತಹುದು 'ವಿಕೃತಿ' - ಎಂದೂ ಕೂಡ ಭಾವಿಸಬಹುದಾಗಿದೆ.

ಯನ್ನು ಎಚ್ಚರಿಸುವ ಸ್ಪಷ್ಟವಾದ ಧ್ವನಿಯಿದೆ. ಮಾನವ ಕೇವಲ ಬಾಹ್ಯ ಆಕಾರದಿಂದಲ್ಲ. ಆಂತರಿಕ ಜಾಗರೂಕತೆಯಿಂದಲೂ ಮಾನವತ್ವವನ್ನು ಬೆಳೆಯಿಸಿಕೊಳ್ಳುತ್ತಾ ಹೋಗಬೇಕು; **"ಸೋಮಃ ಸುನೋತೇಃ ಯದೇನಮಭಿಷುಣ್ವಂತಿ."** [ನಿರುಕ್ತ:– 5. 1. 2,] 'ಹಿಂಡಲ್ಪಡುವುದು, ಸಾರಭೂತವಾದುದು ಸೋಮ" - ಎಂಬ ಯಾಸ್ಕೋಕ್ತಿಯ ಸೂತ್ರದ ಆಧಾರದಿಂದ, ಪ್ರಾಕೃತಿಕ ಮಹಾಭೂತಗಳ ರಸರೂಪವಾಗಿರುವ ಸಮಸ್ತ ಉತ್ಪನ್ನವಸ್ತುಗಳನ್ನೂ ಸೋಮಗಳೆಂದು ಗ್ರಹಿಸಿ, ಮಹರ್ಷಿಗಳು ವ್ಯಾಖ್ಯಾನ ಮಾಡಿದ್ದಾರೆ. ಜಗದೀಶ್ವರನ ಅತ್ಯದ್ಭುತ ರಚನೆಯಾದ ಈ ಬ್ರಹ್ಮಾಂಡದಲ್ಲಿ ನಿರರ್ಥಕವಾದ ವಸ್ತುವಾವುದೂ ಇಲ್ಲ, **"ಪರಿಚಿನ್ಮರ್ತೋ ದ್ರವಿಣಂ ಮಮನ್ಯಾತ್ ಋತಸ್ಯ ಪಥಾ ನಮಸಾ ವಿವಾಸೇತ್। ಉತ ಸ್ವೇನ ಕ್ರತುನಾ ಸಂವದೇತ ಶ್ರೇಯಾಂಸಂ ದಕ್ಷಂ ನಮಸಾ ಜಗೃಭ್ಯಾತ್॥** [ಋಗ್ವೇದ:– 10. 31 2.] - "ಸೃಷ್ಟಿಯಲ್ಲಿ ಎಲ್ಲೆಡೆಯೂ ಧನವು ತುಂಬಿ ತುಳುಕುತ್ತಿದೆ - ಎಂದ ಮಾನವನು ತಿಳಿದುಕೊಳ್ಳಬೇಕು. ಪ್ರಾಮಾಣಿಕತೆಯ ಮಾರ್ಗದಲ್ಲಿ ನಮ್ರತೆಯಿಂದ ನಡೆಯಬೇಕು. ಮತ್ತು ತನ್ನ ಸ್ವಂತ ಶುಭಕರ್ಮದ ಮೂಲಕವೇ ಮಾತನಾಡಬೇಕು, ಶ್ರೇಯಸ್ಕರವಾದ ಬಲವನ್ನು, ದಕ್ಷತೆಯನ್ನು ಅಥವಾ ದಕ್ಷತೆಯನ್ನುಳ್ಳ ಶ್ರೇಯಸ್ಸನ್ನು ಮನಸ್ಸಿನಿಂದ ಗ್ರಹಿಸಬೇಕು." - ಎಂಬ ಶ್ರುತಿಯು ಸಂಪೂರ್ಣ ಜೀವನಕ್ಕೆ ದೀಪಸ್ತಂಭವಾಗಿ ರಾಜಿಸಬಲ್ಲದು. ಹೀಗೆ ಮಹರ್ಷಿ, ಮಂತ್ರದ ಗಂಭೀರತೆಯನ್ನು ತೆರೆದು ನಮ್ಮ ಮುಂದಿಟ್ಟಿದ್ದಾರೆ. ಸೋಮವೆಂದೊಡನೆ ಲತಾ ವಿಶೇಷದ ರಸ - ಎಂದೇ ನಿರ್ಣಯಿಸಿ ಬಿಡುವ ಜನರ ಮುಂದೆ ಮಹರ್ಷಿಗಳು ಬಹು ಗಂಭೀರವಾದ ಹಾಗೂ ವಿಶಾಲವಾದ ಅರ್ಥವನ್ನಿಟ್ಟಿದ್ದಾರೆ.

ಮಹರ್ಷಿಗಳು ಕೇವಲ ಜೀವನನ್ನೇ ಪ್ರತಿಪಾದ್ಯ ವಿಷಯವನ್ನಾಗಿ ಗ್ರಹಿಸಿದ್ದರೂ ನಾವು ಹೇಗೆ ಅದೇ ಮಂತ್ರ ಈಶ್ವರನನ್ನೂ ಪ್ರತಿಪಾದಿಸಬಲ್ಲದು; ಯಾವುದೇ ಎಳೆ ದಾಟವೂ ಇಲ್ಲದೆ, ನೇರವಾಗಿ ಜೀವ-ಈಶ್ವರರಿಬ್ಬರಿಗೂ ಅನ್ವಯಿಸಬಲ್ಲದು - ಎಂದು ತೋರಿಸಿದ್ದೇವೆ. ಜೀವನನ್ನು ಗ್ರಹಿಸಿದಾಗ, ಸೃಷ್ಟ ಜಗತ್ತಿನ ಸಮಸ್ತ ವಸ್ತುಗಳೂ ಅವನ ಜ್ಞಾನವರ್ಧಕವಾಗಿ ಅವನ ವಿಕಾಸಕ್ಕೆ ಸಾಧನಗಳಾಗಲಿ – ಎಂಬ ಭಾವನೆಯೂ, ಈಶ್ವರನನ್ನು ಗ್ರಹಿಸಿದಾಗ. ಆ ಸೋಮಗಳೇ ಜೀವರಾಗಿ, ಜ್ಞಾನವೃದ್ಧಿಯ ದೆಸೆಯಿಂದ ಅವನ ಶಾಂತಿಗೆ ಪಾತ್ರರಾಗಲಿ – ಎಂಬ ಭಾವನೆಯೂ ಈ ಮಂತ್ರದಿಂದ ಅಭಿವ್ಯಕ್ತವಾಗುತ್ತದೆ. ಈಗ ಮುಂದಣ ಮಂತ್ರದ ಭಾಷ್ಯವನ್ನಾರಂಭಿಸೋಣ:–

**ಸಂಹಿತಾ ವಿಭಾಗ**

**ತ್ವಾಂ ಸ್ತೋಮಾ ಅವೀವೃಧನ್ ತ್ವಾಮುಕ್ಥಾ ಶತಕ್ರತೋ ।**

**ತ್ವಾಂ ವರ್ಧಂತು ನೋಗಿರಃ॥೮॥**

**ಪದಪಾಠ:**– ತ್ವಾಂ, ಸ್ತೋಮಾಃ, ಅವೀವೃಧನ್, ತ್ವಾಂ, ಉಕ್ಥಾ, ಶತಕ್ರತೋ, ತ್ವಾಂ, ವರ್ಧಂತು, ನಃ, ಗಿರಃ ॥೮॥

**ಅನ್ವಯ:**– ಶತಕ್ರತೋ ! ಸ್ತೋಮಾಃ ತ್ವಾಂ ಅವೀವೃಧನ್, ಉಕ್ಥಾತ್ವಾಂ (ಅವೀವೃಧನ್), ನಃ ಗಿರಃ ತ್ವಾಂ ವರ್ಧಂತು.

**ಶಬ್ದಾರ್ಥ:**- [ಶತಕ್ರತೋ] ನೂರಾರು ಕೃತಿಗಳನ್ನು ಮಾಡುವ, ನೂರಾರು ವಿಧದ ಪ್ರಜ್ಞೆಗಳನ್ನುಳ್ಳ ಪರಮಾತ್ಮನೇ ! [ಸ್ತೋಮಾಃ] ಸ್ತುತಿಗಳು, [ತ್ವಾಂ] ನಿನ್ನನ್ನು, [ಅವೀವೃಧನ್] ಅಧಿಕಾಧಿಕವಾಗಿ ಪ್ರಸಿದ್ಧಗೊಳಿಸುತ್ತಾ ಬಂದಿರುತ್ತವೆ. [ಉಕ್ಥಾ] ಪ್ರಶಂಸಾ ವಾಕ್ಯಗಳೂ ಕೂಡ, [ತ್ವಾಂ] ನಿನ್ನನ್ನು, [ಅವೀವೃಧನ್] ಪ್ರಚುರಗೊಳಿಸುತ್ತಲಿವೆ. [ನಃ], ನಮ್ಮ, [ಗಿರಃ] ಗೀತೆಗಳು. ಗುಣವರ್ಣನಗೈಯುವ ಸ್ತೋತ್ರವಾಣಿಗಳು, [ತ್ವಾಂ] ನಿನ್ನನ್ನು. [ವರ್ಧಂತು] ಅಭಿನಂದಿಸಲಿ.

**ಅಥವಾ**

[ಶತಕ್ರತೋ] ನೂರಾರು ಕರ್ಮಗಳನ್ನೆಸಗುವ, ನೂರಾರು ವಿಧದ ವಿಜ್ಞಾನ ಯುಕ್ತನಾದ ಇಂದ್ರಿಯವಾನ್ ಜೀವನೇ ! [ಸ್ತೋಮಾಃ] ಸಾಮವೇದೀಯ ಸ್ತುತಿ-ಸಮೂಹ ಗಳು, [ತ್ವಾಂ] ನಿನ್ನನ್ನು, [ಅವೀವೃಧನ್] ಆಧ್ಯಾತ್ಮಿಕದೃಷ್ಟಿಯಿಂದ ಮುಂದುವರಿಸಲಿ. [ಉಕ್ಥಾಃ] ಋಗ್ವೇದೀಯ ಜ್ಞಾನಮಯೀ ವಾಣಿಗಳೂ ಕೂಡ, [ಅವೀವೃಧನ್] ವರ್ಧಿಸುತ್ತಾ ಹೋಗಲಿ. [ನಃ] ನಮ್ಮ, [ಗಿರಃ] ಮಾತುಗಳೂ ಕೂಡ, [ತ್ವಾಂ] ನಿನ್ನನ್ನು, [ವರ್ಧಂತು] ವಿಕಾಸಗೊಳಿಸಲಿ.

**ತಾತ್ಪರ್ಯ:**- ಬಹುಕ್ರಿಯನೂ, ಬಹುಪ್ರಜ್ಞನೂ ಆದ ಭಗವಂತನೇ ! ನಾವು ಮಾಡುವ, ಸಾಮವೇದೋಕ್ತ ಸ್ತುತಿಗಳು ನಿನ್ನ ಪ್ರಸಿದ್ಧಿಯನ್ನು ಹೆಚ್ಚು ಹೆಚ್ಚಾಗಿ ಮಾಡುತ್ತಾ ಹೋಗಲಿ. ನಾವು ಉಚ್ಚರಿಸುವ ಋಗ್ವೇದದಲ್ಲಿನ ಗುಣಗಾನಯುಕ್ತ ಸ್ತೋತ್ರಗಳು ಜನತೆ ಯಲ್ಲಿ ನಿನ್ನ ಗೌರವವನ್ನು ಬೆಳೆಯಿಸಲಿ. ಹಾಗೆಯೇ, ನಮ್ಮ ಬಾಯಿಗಳಿಂದ ಹೊರಬೀಳುವ ಮಾತುಗಳು ನಿನ್ನನ್ನು, ನಿನ್ನ ಅಪಾರಕರುಣೆಗಾಗಿ ಅಭಿನಂದಿಸುತ್ತಿರಲಿ.

**ಅಥವಾ**

ಓ ಇಂದ್ರಿಯವಾನ್ ಜೀವ ! ನಾನಾ ವಿಧದ ಕರ್ಮಗಳನ್ನು ಮಾಡಬಲ್ಲವನೇ ! ಅನೇಕ ವಿಜ್ಞಾನಗಳಿಂದ ಯುಕ್ತನಾದವನೇ ! ಸಾಮಗಾನ ಮಾಡುವವರ, ಭಗವಂತನ ಸ್ತುತಿಗಳು ನಿನ್ನಲ್ಲಿ ಆಧ್ಯಾತ್ಮಿಕ ಭಾವನೆಯನ್ನು ಮತ್ತೂ ಆಳಕ್ಕಿಳಿಸಿ, ನಿನ್ನ ಅಭಿವೃದ್ಧಿಗೆ ಸಾಧಕವಾಗಲಿ. ಹಾಗೆಯೇ ಋಗ್ವೇದದ ಭಗವದ್ಗುಣಗಾನ ಮಾಡುವ ಉಕ್ತಿಗಳು ನಿನ್ನ ಆತ್ಮಾಭ್ಯುದಯ ವನ್ನು ಸಾಧಿಸಲಿ ಮತ್ತು ನಮ್ಮ ಹೃದಯಾಂತರಾಳದಿಂದ ಹೊರಟ ಉಪದೇಶವಾಣಿಗಳು ನಿನ್ನ ಆತ್ಮವಿಕಾಸಕ್ಕೆ ನೆರವಾಗಲಿ

**ಭಾಷ್ಯ:**— ಈ ಮಂತ್ರದಲ್ಲಿ ಕಠಿಣವೆನ್ನಬಹುದಾದ ಶಬ್ದಗಳಾವವೂ ಇಲ್ಲ. ಶ್ರೀ ಮಧ್ವರು ಶ್ರೀ ಹರಿಯನ್ನು, ಅಥವಾ ಶ್ರೀ ವಿಷ್ಣುವನ್ನು ದೇವತೆಯೆಂದು ಭಾವಿಸಿ, ವ್ಯಾಖ್ಯಾನಮಾಡಿದ್ದಾರೆ. ಅದರ ಯುಕ್ತಿ ಯುಕ್ತವಾದ ವಚನಗಳು ಹೀಗಿವೆ:—

**ವ್ಯಂಜಯಂತ್ಯಧಿಕಂ ಸ್ತೋಮಾಃ ಸಾಮ್ನ್ಯೃಕ್ಷ್ವನ್ಯಕೃಷ್ವಪಿ ಚೈವ ಹಿ ।**
**ಮಹಾಗುಣೈರ್ವ್ಯಂಜಯಂತು ಗಿರೋಽಸ್ಮಾಕಮಪಿ ಪ್ರಭೋ ॥**
**ಆಕಾಶವೃದ್ಧಿವದ್ವಿಷ್ಣೋರ್ವೃದ್ಧಿಃ ಸ್ಯಾನ್ನೈವ ಚಾನ್ಯಥಾ ।**
**ನ ವರ್ಧತೇ ನೋ ಕನೀಯಾನಿತಿ ಹ್ಯೇನಂ ಶ್ರುತಿರ್ಜಗೌ ॥**
**ಮಹಾತಾತ್ಪರ್ಯರೋಧಾಚ್ಚ ಶ್ರುತ್ಯರ್ಥೋ ನಾ ಪರೋ ಭವೇತ್ ॥**
**ಯದ್ಯನ್ಯಾಪೇಕ್ಷಯಾ ವೃದ್ಧಿರೀಶತ್ವಂ ಸ್ಯಾತ್ಕುತೋಽಸ್ಯ ಚ ॥**
**ಅಕ್ಷಿತೋತಿರಿತಿ ಹ್ಯಸ್ಮಾತ್ ಪೂರ್ಣಾಭಿಪ್ರಾಯತೋದಿತಾ ॥**

"ಸಾಮವೇದದಲ್ಲಿ ಮತ್ತು ಋಕ್ಕುಗಳಲ್ಲಿರುವ ಸ್ತುತಿಸಮೂಹಗಳು ನಿನ್ನನ್ನು ಅಧಿಕವಾಗಿ ವ್ಯಕ್ತಗೊಳಿಸುತ್ತವೆ. ಪ್ರಭೋ! ನಮ್ಮ ವಚನಗಳೂ ಕೂಡ ಮಹಾಗುಣಗಳನ್ನು ವರ್ಣಿಸಿ ನಿನ್ನನ್ನು ಅಭಿವ್ಯಕ್ತನನ್ನಾಗಿ ಮಾಡಲಿ."

"ವಿಷ್ಣುವಿನ ವೃದ್ಧಿಯು ಆಕಾಶದ ವೃದ್ಧಿಯಂತೆಯೇ ಹೊರತು, ಬೇರಾವ ರೀತಿಯಲ್ಲಿಯೂ ಅಲ್ಲ. [ಅಂದರೆ, ಎರಡು ವಸ್ತುಗಳನ್ನು ಒಂದರಿಂದ ಒಂದನ್ನು ಎಷ್ಟು ದೂರ ಸರಿಸುತ್ತೇವೋ, ಅವೆರಡರ ನಡುವಣ ಆಕಾಶ ಅದೇ ಪ್ರಮಾಣದಲ್ಲಿ ಹೆಚ್ಚುತ್ತಾ ಹೋಗುತ್ತದೆ. ಆದರೆ, ವಸ್ತುತಃ ಆಕಾಶ ಹಿರಿದಾಗುವುದೂ ಇಲ್ಲ: ಕಿರಿದಾಗುವುದೂ ಇಲ್ಲ ಹಾಗೆಯೇ ವಿಷ್ಣುವಿನ ವೃದ್ಧಿ—ಎಂದು ತಿಳಿಯಬೇಕು.] ಶ್ರುತಿಯು - ಅವನು ವರ್ಧಿಸುವುದೂ ಇಲ್ಲ; ಕುಗ್ಗುವುದೂ ಇಲ್ಲ - ಎನ್ನುತ್ತಲಿದೆ. ಸರ್ವವೇದಗಳ ಮಹಾತಾತ್ಪರ್ಯಕ್ಕೆ ವಿರೋಧವುಂಟಾಗುವುದರಿಂದ, (ಈ) ಶ್ರುತಿಗೆ ಬೇರೆ ಅರ್ಥಸಲ್ಲದು. ಬೇರೆಯವರ ಅಥವಾ ಬೇರೆಯದರ ಕಾರಣದಿಂದ ವಿಷ್ಣುವಿಗೆ ವೃದ್ಧಿ-ಹೆಚ್ಚುಗಾರಿಕೆ-ಬರುವುದೆನ್ನುವುದಾದರೆ, ಅವನಿಗೆ ಸ್ವಾಮಿತ್ವ ಸಲ್ಲುವುದಾದರೂ ಹೇಗೆ? 'ಅಕ್ಷಿತೋತಿ' ಎಂದಾರಂಭವಾಗುವ ಮುಂದಣ ಮಂತ್ರದಿಂದ ಅವನು ಪೂರ್ಣನೆಂಬ ಅಭಿಪ್ರಾಯವೇ ದೃಢೀಕರಿಸಲ್ಪಡುತ್ತದೆ."

ಶ್ರೀ ಮಧ್ವರ ಈ ಮಾತುಗಳು ಪೂರ್ಣತಃ ವೇದಾನುಕೂಲ ಮತ್ತು ಬುದ್ಧಿ - ಸಂಗತವಾಗಿವೆ. ವಿಕಾಸ - ಹ್ರಾಸ, ವೃದ್ಧಿ - ಕ್ಷಯ - ಎರಡೂ ವಿಕಾರಗಳೇ. ನಿರ್ವಿಕಾರನಾದ ಭಗವಂತನಿಗೆ ಈ ವಿಕಾರಗಳು ಅನ್ವಯಿಸುವುದು ಮೂರು ಕಾಲಕ್ಕೂ ಸಾಧ್ಯವಿಲ್ಲ.

ಶ್ರೀ॥ ಸಾಯಣರ ಕಥನವನ್ನೂ ಆಲಿಸೋಣ. **"[ಹೇ ಶತಕ್ರತೋ] ಬಹುಕರ್ಮನ್ ಬಹುಪ್ರಜ್ಞ! ತ್ವಾ ಇಂದ್ರಂ ತ್ವಾಂ [ಸ್ತೋಮಾಃ] ಸಾಮಗಾನಾಂ ಸ್ತೋತ್ರಾಣಿ, [ಅವೀವೃಧನ್] ವರ್ಧಿತವಂತಿ. ತಥಾ ಬಹು ಋಚಾನಾಂ**

**[ಉಕ್ಥಾ] ಶಸ್ತ್ರಾಣಿ ತ್ವಾಂ ಅವೀವೃಧನ್। ಯಸ್ಮಾತ್ ಪೂರ್ವಮೇವಮಾಸೀತ್, ತಸ್ಮಾದಿದಾನೀಮಪಿ [ನೋ] ಅಸ್ಮಾಕಂ [ಗಿರಃ] ಸ್ತುತಯಃ ತ್ವಾಂ ವರ್ಧಂತು, ವರ್ಧಯಂತು ಅತಿವೃದ್ಧಂ ಕುರ್ವಂತು."** ಇದರ ಕನ್ನಡ ಭಾಷಾಂತರ ಹೀಗಾಗುವುದು - "ಓ ಬಹು ಪ್ರಿಯನಾದ ಅಥವಾ ಬಹು ಪ್ರಜ್ಞನಾದವನೇ ! ಇಂದ್ರನಾದ ನಿನ್ನನ್ನು ಸಾಮಗಾಯಕರ ಸ್ತೋತ್ರಗಳು ವರ್ಧಿಸಿದುವು. ಮತ್ತು ಬಹು ಋಕ್ಕುಗಳನ್ನರಿತವರ ಶಸ್ತ್ರಗಳು ನಿನ್ನನ್ನು ಅಭಿವೃದ್ಧಿಗೊಳಿಸಿದವು. ಮುನ್ನ ಹೀಗಾದುದರಿಂದ, ಈಗಲೂ ನಮ್ಮ ವಾಣಿಗಳು, ಸ್ತುತಿಗಳು ನಿನ್ನನ್ನು ಬಹು ವರ್ಧಿತನನ್ನಾಗಿ ಮಾಡಲಿ."

ಶ್ರೀ|| ಸಾಯಣರು ಸೋಮಪಾನಕ್ಕಾಗಿ ಧಾವಿಸಿ ಬರುವ ಅದೇ ಸಾಕಾರ ಇಂದ್ರನನ್ನು ಸಂಬೋಧಿಸಿದಂತಿದೆ. ಮತ್ತು, ಎಲ್ಲ ಮಂತ್ರಗಳನ್ನೂ ಯಜ್ಞಕ್ಕೆಯೇ ವಿನಿಯೋಗಿಸುವ ಸಾಯಣರು **'ಉಕ್ಥಾ'** ಎಂಬ ಶಬ್ದಕ್ಕೆ **'ಶಸ್ತ್ರಗಳು'** ಎಂದರ್ಥ ಮಾಡಿರುವುದರಲ್ಲಿ ಹಿಂಸಾತ್ಮಕ ಯಜ್ಞವನ್ನೇ ನಿರ್ದೇಶಿಸುತ್ತಾರೇನೋ - ಎಂಬ ಅನುಮಾನ ಬರುತ್ತದೆ. ಯಾಸ್ಕರು **"ಉಕ್ಥಂ ವಕ್ತವ್ಯಪ್ರಶಂಸಂ."** [ನಿರುಕ್ತ:- 5. 3. 31. 10.] - "ವರ್ಣನಾರ್ಹವಾದ ಪ್ರಶಂಸೆಯುಳ್ಳವನು" - ಎಂದು ಹೇಳಿದ್ದಾರೆ. **'ಉಕ್ಥ'** ಶಬ್ದಕ್ಕೆ **'ಶಸ್ತ್ರ** ಎಂದರ್ಥ ಮಾಡಲು ಸಾಯಣರಿಗೆ ಯಾವ ಶಾಸ್ತ್ರ - ಪ್ರಮಾಣವಿದೆಯೋ ತಿಳಿಯದು.' ಸಾಯಣರು **'ಉಕ್ಥಾ ಶಸ್ತ್ರಾಣಿ'** ಎಂದಿಷ್ಟೇ ಹೇಳಿದ್ದರೂ, ಕನ್ನಡ ಭಾಷಾಂತರ ಸಮಿತಿಯ ಸಂಪಾದಕರು **"ಶಸ್ತ್ರ ಮಂತ್ರ ಪಠನದಿಂದ"** - ಎಂದು ಅನುವಾದಿಸಿದ್ದಾರೆ. ತಾತ್ಪರ್ಯತಃ, ಈ ಮಂತ್ರದ ಮೇಲಣ ಸಾಯಣ ಭಾಷ್ಯದಿಂದ ಯಾವುದೇ ಆಧ್ಯಾತ್ಮಿಕ ತತ್ತ್ವವೂ ಲಭಿಸುವುದಿಲ್ಲ.

ಈಗ ಮಹರ್ಷಿ ದಯಾನಂದರ ಈ ಮಂತ್ರಭಾಷ್ಯವನ್ನು ಪಾಠಕರು ತುಲನಾತ್ಮಕ ದೃಷ್ಟಿಯಿಂದ ಅವಲೋಕಿಸಲಿ:- [ತ್ವಾಂ] **ಇಂದ್ರಂ ಪರಮೇಶ್ವರಂ [ಸ್ತೋಮಾಃ] ಸ್ತುತಿಸಮೂಹಾಃ [ಅವೀವೃಧನ್] ವರ್ಧಯಂತಿ [ತ್ವಾಂ] ಸ್ತೋತವ್ಯಂ, [ಉಕ್ಥಾ] ಪರಿಭಾಷಿತುಮರ್ಹಾಣಿ ವೇದಸ್ಥಾನಿ ಸರ್ವಾಣಿ ಸ್ತೋತ್ರಾಣಿ, [ಶತಕ್ರತೋ] ಶತಕರ್ಮನ್ ! ಶತಪ್ರಜ್ಞ !** [ತ್ವಾಂ] **ಸರ್ವಜ್ಯೇಷ್ಠಂ [ವರ್ಧಂತು] ವರ್ಧಯಂತು. [ನಃ] ಅಸ್ಮಾಕಂ [ಗಿರಃ] ವಿದ್ಯಾಸತ್ಯ ಭಾಷಣಾದಿಯುಕ್ತಾ ವಾಣ್ಯಃ [ಗೀರಿತಿ ವಾಙ್ನಾಮಸು ಪಠಿತಂ ಇತಿಯಾಸ್ಕಃ"]** ಕನ್ನಡದಲ್ಲಿ ಇದರ ಭಾಷಾಂತರವಿದು:- "[ತ್ವಾಂ] ಇಂದ್ರನಾಥ, ಪರಮೇಶ್ವರನಾದ ನಿನ್ನನ್ನು, [ಸ್ತೋಮಾಃ] ಸ್ತುತಿ - ಸಮೂಹಗಳು, [ಅವೀವೃಧನ್] ವರ್ಧಿತನನ್ನಾಗಿ ಮಾಡುತ್ತವೆ. [ತ್ವಾಂ] ಸ್ತೋತ್ರಾರ್ಹನಾದ ನಿನ್ನನ್ನು, [ಉಕ್ಥಾನಿ] ಪರಿಭಾಷಿಸಲು, ಎತ್ತಿ ತೋರಿಸಲು, (To point out distinctly), ಅರ್ಹವಾದ, ವೇದಗಳಲ್ಲಿರುವ ಸಮಸ್ತ ಸ್ತೋತ್ರಗಳೂ, [ಶತಕ್ರತೋ] ಓ ಬಹುಕ್ರಿಯ, ಬಹುಪ್ರಜ್ಞ ! (ಮಹರ್ಷಿಗಳು ಇದರರ್ಥ ಹೇಳಲ್ಪಟ್ಟಿದೆ ಎಂದಿಷ್ಟು ಮಾತ್ರ ಬರೆದಿದ್ದಾರೆ), [ನಃ] **ನಮ್ಮ,** [ಗಿರಃ] **ವಿದ್ಯಾಸತ್ಯಭಾಷಣಾದಿ**

**ಯುಕ್ತವಾದ ವಾಣಿಗಳು, [ತ್ವಾಂ] ಸರ್ವಜ್ಯೇಷ್ಠನಾದ ನಿನ್ನನ್ನು [ವರ್ಧಂತು] ಅಭಿವೃದ್ಧಿಗೊಳಿಸಲಿ. 'ಗೀರಿತಿ ವಾಜನಾಮಸು ಪಠಿತಂ' [ನಿರುಕ್ತ:– 1 10. 8.]"**

ಈ ಮಹರ್ಷಿ ಭಾಷ್ಯದಲ್ಲಿ ಓದುಗರು ಗಮನಿಸಬೇಕಾದ ಅಲೌಕಿಕವಾದ ಅಂಶಗಳು ಹಲವಾರು ಇವೆ. ವೇದಗಳ ದೃಷ್ಟಿಯಲ್ಲಿ ಭೂತ - ವರ್ತಮಾನ - ಭವಿಷ್ಯತ್ ಆದಿ ಕಾಲ ಭೇದಗಳಿಗೆ ಎಡೆಯಿಲ್ಲ. ಕ್ರಿಯೆ ಯಾವುದೇ ಕಾಲಸೂಚಕ ಲಕಾರದಲ್ಲಿ ಬೇಕಾದರೂ ಇರಲಿ ಅದು ಮೂರು ಕಾಲಕ್ಕೂ ಅನ್ವಯಿಸುತ್ತದೆ. ಉದಾಹರಣೆಗೆ, **'ಭೂತಸ್ಯ ಜಾತಃ ಪತಿರೇಕ ಆಸೀತ್** [ಋಕ್:– 10. 121. 1. ] - ಎಂಬ ಶ್ರುತಿಗೆ "ಪ್ರಾಣಿಸಮೂಹಕ್ಕೆ ಏಕಮಾತ್ರ ಸ್ವಾಮಿಯು **'ಹಿರಣ್ಯಗರ್ಭ**'ನು + ಆಗಿದ್ದನು." - ಎಂದು ಲೌಕಿಕ ಸಂಸ್ಕೃತದಲ್ಲಿ ಅರ್ಥವಾಗುತ್ತದೆ, "ಹಿಂದೆಂದೋ ಆಗಿದ್ದನು; ಇಂದು ಸ್ವಾಮಿಯಲ್ಲ; ಮುಂದಕ್ಕೂ ಆಗಿರಲಾರನು." – ಎಂಬ ಹಾಸ್ಯಾಸ್ಪದವಾದ ಅರ್ಥವನ್ನು ಗ್ರಹಿಸಲಾಗದು. ಉಕ್ಥವೆಂದರೆ ಸಾಮವೇದೀಯ ಸ್ತುತಿ; ಸ್ತೋಮವೆಂದರೆ ಋಗ್ವೇದಸ್ಥವೆಂದು ಶ್ರೀ॥ ಮಧ್ವರೆನ್ನುತ್ತಾರೆ. ನಾಲ್ಕು ವೇದಗಳನ್ನೂ ಸಮಾನರೂಪದಿಂದ ಅಂಗೀಕರಿಸುವ ನಮಗೆ ಎಲ್ಲ ವೇದಗಳ ಸ್ತುತಿಗಳೂ ಸಮಾನರೂಪದಿಂದಲೇ ಆದರಣೀಯ.

**ಉಕ್** - ಎಂಬುದಕ್ಕೆ ಪ್ರಾಣ: ಅದರನ್ನವೇ **ಥ** [ಶತ:– 10. 4. 1. 23. ] ";"ಈ ಅಗ್ನಿಯೇ **ಉಕ್**; ಅದರ ಅನ್ನವೇ **ಥ**." [ಶತ:– 10. 4. 1. 4. ] ಅಗ್ನಿಯೇ **ಉಕ್**; ಆಹುತಿಗಳೇ **ಥ**." [ಶತ:– 10. 6. 2. 8. ] ಆದಿತ್ಯನೇ **ಉಕ್**: ಚಂದ್ರನೇ ಅವನ ಥ." [ಶತ:– 10. 6. 2. 9. ] ಪ್ರಾಣವೇ **ಉಕ್**; ತನ್ಯಾನ್ನವೇವಥಂ." **"ವಾಕ್...ಉಕ್ಥಂ"** [ಶತ:–14. 4. 4. 1. ] **"ಅನ್ನಮುಕ್ಥಾನಿ."** [ಕೌ:–11. 8. 17. 7. ] **"ಪ್ರಜಾವಾ ಉಕ್ಥಾನಿ"** [ತೈ:– 1. 8, 7. 2. ] **"ಪಶವ ಉಕ್ಥಾನಿ"**. [ಐತರೇಯ;-4. 1. 12; ] ಅಗ್ನಿಗೆ ಆಹಾರವಾದ ಆಹುತಿಗಳೇ ಉಕ್ಥ; ಸೂರ್ಯಪೋಷಿತ ಚಂದ್ರನೇ ಉಕ್ಥ; ಅನ್ನ ರಕ್ಷಿತ ಪ್ರಾಣವೇ ಉಕ್ಥ; ಅನ್ನವೇ ಉಕ್ಥ, ಪ್ರಜೆಗಳೇ ಉಕ್ಥ; ಎಂದು ಅನೇಕಾರ್ಥಗಳನ್ನು ಕಾಣುತ್ತೇವೆ. ಆದರೆ, ಶಸ್ತ್ರದ ವಿಷಯ ಎಲ್ಲಿಯೂ ಕಾಣದು.

ಮಹರ್ಷಿಗಳ ವೈಶಿಷ್ಟ್ಯ 'ತ್ವಾಂ' ಎಂಬ ಮಧ್ಯಮ ಪುರುಷದ, ಏಕವಚನದ, ದ್ವಿತೀಯಾ ವಿಭಕ್ತಿಯಲ್ಲಿರುವ ಸರ್ವನಾಮಕ್ಕೆ 'ಪರಮೇಶ್ವರನಾದ ನಿನ್ನನ್ನು, ಸ್ತುತ್ಯನಾದ ನಿನ್ನನ್ನು ಸರ್ವಜ್ಯೇಷ್ಠನಾದ ನಿನ್ನನ್ನು'–ಎಂದು ಬೇರೆ ಬೇರೆ ಗುಣದ್ಯೋತಕಗಳನ್ನು ಪ್ರಯೋಗಿಸಿರುವುದು. ಇದು ಕೇವಲ ಕಲ್ಪಿತ-ಎನ್ನಲು ಸಾಧ್ಯವಿಲ್ಲ. ಏಕೆಂದರೆ, ಮಂತ್ರದ ದೇವತೆಯಾದ 'ಇಂದ್ರ'–ಎಂಬ ಸಂಜ್ಞೆಯ (ಹೆಸರನ್ನುಳ್ಳವನ) ಅನೇಕ ಗುಣಗಳನ್ನು ಅದು ವ್ಯಕ್ತಗೊಳಿಸು

---

+ ಹಿರಣ್ಯಗರ್ಭನು ಬೇರೆ ಯಾವನೋ ದೇವತಾ ವಿಶೇಷವೆಂಬ ಕಲ್ಪನೆ ನಿರರ್ಥಕ ತೇಜೋಮಯ ಲೋಕ-ಲೋಕಾಂತರಗಳನ್ನು ತನ್ನಲ್ಲಿಯೆ ಅಡಗಿಸಿಕೊಂಡಿರುವ ಪರಮಾತ್ಮನೇ ಹಿರಣ್ಯಗರ್ಭ.

ತ್ತದೆ. **'ಇದಿ ಪರಮೈಶ್ವರ್ಯೇ'** ಎಂಬ ಧಾತು **'ಇಂದತೀತೀಂದ್ರಃ**–ಎಂಬ ಭಾವನೆಗೆ ರೂಪ ಕೊಡುತ್ತದೆ. ಪರಮೈಶ್ವರ್ಯವಂತ ಪರಮೇಶ್ವರನೇ ತಾನೇ ? **"ಸ್ತುಹಿ ಸುಷ್ಟುತಿಂ ನಮಸಾ ವಿವಾಸ."** [ಋಕ್:– 8. 96. 12.]-"ಉತ್ತಮ ಸ್ತುತ್ಯನನ್ನು ಸ್ತುತಿಸು. ನಮ್ರತೆಯಿಂದ ಆರಾಧಿಸು.": **"ಯ ಏಕ ಇತ್ತಮುಷ್ಟುಹಿ."** [ಋಕ್: -6. 45. 16.] - ಮೊದಲಾದ ಶ್ರುತಿಗಳು ಪರಮೇಶ್ವರನು ಸ್ತುತ್ಯನೆಂದು ಸಾರುತ್ತಲೇ ಇವೆ. **"ತಮು ಜ್ಯೇಷ್ಠಂ ನಮಸಾ ಹವಿರ್ಭಿಃ"** [ಋಕ್:– 7. 97. 3.] "ಆ ಸರ್ವಜ್ಯೇಷ್ಠನನ್ನು ವಿನಯದಿಂದಲೂ ಶುದ್ಧವಾದ ವ್ಯವಹಾರಗಳಿಂದಲೂ (ಸ್ತುತಿಸು)".: **"ನತೇ ವಿಷ್ಣೋ ಜಾಯಮಾನೋ ನ ಜಾತೋ..."** [ಋಕ್:– 7. 99. 2.] – "ಓ ಸರ್ವ ವ್ಯಾಪಕ ಪ್ರಭೋ ! ಹುಟ್ಟತಕ್ಕವನಾಗಲಿ, ಹುಟ್ಟಿರುವವನೇ ಆಗಲಿ ನಿನ್ನ ಹಿರಿಮೆಯನ್ನರಿಯಲಾರರು." - ಈ ಮೊದಲಾದ ಶ್ರುತಿಗಳು ಈಶ್ವರನ ಜ್ಯೇಷ್ಠತ್ವವನ್ನು ಸಾರುತ್ತಲಿವೆ. ಕೇವಲ ಧಾತುಜವಾದ ಅರ್ಥದಿಂದ ತೃಪ್ತಿಯಾಗದಿದ್ದರೆ, ಪರಮೇಶ್ವರನೆಂಬುದಕ್ಕೆ **ಉದ್ಧರ್ಷಯ ಮಘವನ್ನಾಯುಧಾನ್ಯುತ್ಸತ್ವನಾಂ ಮಾಮಕಾನಾಂ ಮನಾಂಸಿ**– [ಋಕ್:– 10. 103. 10.] "ಓ ಐಶ್ವರ್ಯವನ್ ಇಂದ್ರ ! ಜಾಗೃತನಾದ ಸಾಮರ್ಥ್ಯಶಾಲಿಗಳಾದ ನನ್ನವರ ಆಯುಧಗಳಲ್ಲಿ ಶಕ್ತ್ಯುತ್ಸಾಹ ತುಂಬಿಸು. ಮನಸ್ಸುಗಳನ್ನು ಹರ್ಷಗೊಳಿಸು".: **"ಶುನಂ ಹುವೇಮ ಮಘವಾನಮಿಂದ್ರಂ."** [ಋಕ್:– 10.104. 11.] "ಸುಖಪ್ರದನೂ, ಐಶ್ವರ್ಯಶಾಲಿಯೂ ಆದ ಇಂದ್ರನನ್ನು ಆಹ್ವಾನಿಸೋಣ."– ಮೊದಲಾದ ಶ್ರುತಿ ವಾಕ್ಯಗಳಿವೆ, ಪರಮೇಶ್ವರನೆಂದರೆ ಪರಮೈಶ್ವರ್ಯಶಾಲಿಯಲ್ಲ; ಪರಮ ಸ್ವಾಮಿ–ಎಂದೇ ಗ್ರಹಿಸಬೇಕು ಎಂಬ ಪಕ್ಷಕ್ಕೆ - **"ಇಂದ್ರೋ ದಿವ ಇಂದ್ರ ಈಶೇ ಪೃಥಿವ್ಯಾ ಇಂದ್ರೋ ಅಪಾಮಿಂದ್ರ ಇತ್ಪರ್ವತಾನಾಂ। ಇಂದ್ರೋ ವೃಧಾಮಿಂದ್ರ ಇನ್ಮೇಧಿರಾಣಾಮಿಂದ್ರಃ ಕ್ಷೇಮೇಯೋಗೇ ಹವ್ಯ ಇಂದ್ರಃ ॥"** [ಋಗ್ವೇದ:- 10. 89, 10.] "ಇಂದ್ರನೇ ದ್ಯುಲೋಕವನ್ನಾಳುತ್ತಾನೆ. ಇಂದ್ರನೇ ಪೃಥಿವಿಯನ್ನಾಳುತ್ತಾನೆ. ಇಂದ್ರನೇ ಪ್ರಜಾಮಾತ್ರರನ್ನೂ, ಜಲಧಿಗಳನ್ನೂ ಆಳುತ್ತಾನೆ. ಇಂದ್ರನೇ ಪರ್ವತಗಳನ್ನೂ, ಮೇಘರಾಜಿಯನ್ನೂ ಆಳುತ್ತಾನೆ. ಇಂದ್ರನೇ ಪ್ರಗತಿಶೀಲರನ್ನು ಆಳುತ್ತಾನೆ. ಇಂದ್ರನೇ ಬುದ್ಧಿಮಾನ್ ವೈಜ್ಞಾನಿಕರ ಮೇಲೆಯೂ ಶಾಸನ ಮಾಡುತ್ತಾನೆ. ಆ ಇಂದ್ರನೇ ಪ್ರಾಪ್ತವಾದ ಸುಖದಲ್ಲಿಯೂ, ಪ್ರಾಪ್ತವಾಗಬೇಕಾಗಿರುವ ಸುಖಕ್ಕಾಗಿಯೂ ಆಹ್ವಾನಿಸಲರ್ಹನಾಗಿದ್ದಾನೆ," ಮಹರ್ಷಿಗಳು 'ಪರಮೇಶ್ವರನನ್ನು'– ಎಂದಾಗ **ಈ ಶ್ರುತಿಯೂ ಅವರ ಕಿವಿಗಳ ಮೇಲೆ ಮೊಳಗುತ್ತಲೇ ಇದ್ದಿರಬೇಕು. "ಇಂದ್ರಂ ಮಿತ್ರಂ ವರುಣ ಮಗ್ನಿಮಾಹುಃ"** [ಅಥರ್ವವೇದ:– 9. 10. 28.]–"ಒಬ್ಬನೇ ಪರಮಾತ್ಮನನ್ನು ಇಂದ್ರ, ಮಿತ್ರ, ವರುಣ, ಅಗ್ನಿ, ಯಮ, ಸುಪರ್ಣ, ಗರುತ್ಮಾನ್, ದಿವ್ಯ, ಮಾತರಿಶ್ವಾ – ಎನ್ನುತ್ತಾರೆ. ವಿಶೇಷ ಪ್ರಜ್ಞರಾದ ಜ್ಞಾನಿಗಳು ಒಬ್ಬನೇ ಸತ್ಯಸ್ವರೂಪವನ್ನು ನಾನಾ ವಿಧವಾಗಿ ಬಣ್ಣಿಸುತ್ತಾರೆ," ಎಂಬ ಶ್ರುತಿಯನ್ನು ವೇದಗಳ ಪ್ರಥಮ ಪಾಠವನ್ನು ಕಲಿತವರೂ ಬಲ್ಲರು.

ಮಹರ್ಷಿಗಳ ಮತ್ತೊಂದು ವೈಶಿಷ್ಟ್ಯ 'ವರ್ಧಂತು ವರ್ಧಯಂತು' ಎಂಬುದರ

ವ್ಯಾಖ್ಯಾನ ಮಾಡುವಾಗ ವ್ಯಕ್ತವಾಗುತ್ತದೆ." ಭಗವತ್ ಪ್ರೀತ್ಯರ್ಥವಾಗಿ ಈ ಕಾರ್ಯ ಮಾಡು." – ಎಂದು ಹೇಳುವ ವಾಡಿಕೆ ಲೋಕದಲ್ಲಿದೆ. ಅರ್ಥಾಪತ್ತಿ ಪ್ರಮಾಣದಿಂದ, ಆ ಕಾರ್ಯ ಮಾಡದಿದ್ದರೆ ಭಗವಂತನಿಗೆ ಅಪ್ರೀತಿಯುಂಟಾಗುತ್ತದೆ. – ಎಂಬ ಭಾವ ಹೊರ ಬೀಳುತ್ತದೆ. ಹೀಗೆಯೇ ವರ್ಧನದ ವಿಷಯದಲ್ಲಿಯೂ ವಿದ್ವಾಂಸರೆನಿಸಿಕೊಂಡವರಿಗೂ ಭ್ರಾಂತ ಕಲ್ಪನೆಗಳಿವೆ. "ಭಗವಂತನನ್ನು ಸ್ತುತಿಸು, ಪ್ರಾರ್ಥಿಸು; ಆರಾಧಿಸು. ಅವನು ತೃಪ್ತನಾಗಿ, ಒಲಿದು ಹರ್ಷದಿಂದ ಉಬ್ಬಿ ನಿನ್ನ ಅಭೀಷ್ಟವನ್ನು ಪೂರ್ತಿಮಾಡುತ್ತಾನೆ." ಎಂದು ಜನ ಹೇಳುವುದುಂಟು." "ಭಗವದ್‌ಸ್ತುತಿ–ಪ್ರಾರ್ಥನೆ -ಉಪಾಸನೆಮಾಡುವುದು ಆರಾಧಕರ ಆತ್ಮೋತ್ಕರ್ಷಕ್ಕೆ ಮಾತ್ರ: ಭಗವಂತನ ಉದ್ಧಾರಕ್ಕಲ್ಲ." ಎಂಬ ಸರಳ ಸತ್ಯ ಸಹೃದಯರಾದ ಸಜ್ಜನರಿಗೂ ಕೂಡಾ ಸಿಕ್ಕದಿರುವುದು ಸೋಜಿಗವೇ ಸರಿ. ಶ್ರೀಮದಾನಂದತೀರ್ಥರು (ಶ್ರೀ ಮಧ್ವರು) ಈ ತಪ್ಪು ಗ್ರಹಿಕೆಗೆ ಕೊಡಲಿ ಪೆಟ್ಟನ್ನೇ ಹಾಕಿದ್ದಾರೆ. ಮಹರ್ಷಿ ಪ್ರವರರು ಅದೇ ಜಾಡನ್ನು ಹಿಡಿದು ನಡೆದಿದ್ದಾರೆ, **"ವರ್ಧಯಂತು"** ಎಂಬುವುದಕ್ಕೂ **"ಪ್ರಕಾಶಯಂತು"** ಎಂದರೆ **'ಬೆಳಕಿಗೆ ತರಲಿ'** - ಎಂಬ ಬುದ್ಧಿಪೂರ್ವಕವಾದ ಅರ್ಥವನ್ನು ಮಾಡಿದ್ದಾರೆ. ಹೊಗಳಿಕೆಗೆ ಹಿಗ್ಗುವುದು; ಕುತ್ಸನ (ನಿಂದೆ)ಕ್ಕೆ ಕುಗ್ಗುವುದು ಮಾನವೀಯ ಮನೋದೌರ್ಬಲ್ಯಗಳು. ಮಾನವೀಯ ಕುಂದು ಕೊರತೆಗಳನ್ನು, ವಿಕಾರಗಳನ್ನು ನಿರ್ವಿಕಾರನಾದ ಈಶ್ವರನಿಗೆ ಅನ್ವಯಿಸಹೊರಡುವುದು ಅವತಾರ ವಾದಕ್ಕೆ ಸರಿಯೆಂದು ತಲೆದೂಗುವುದು ಕೇವಲ ಬಾಲಚೇಷ್ಟೆ ಮಾತ್ರ. ತತ್ತ್ವದರ್ಶಿಗಳು ಎಂದಿಗೂ ಸರ್ವತ್ರ ವ್ಯಾಪಿನೀ ಚೇತನಶಕ್ತಿಯನ್ನು, ಸೃಜನ, ಸಂರಕ್ಷಣ ಹಾಗೂ ಸಂಹಾರಕ್ಕೆ ನಿಮಿತ್ತಕಾರಣವಾಗಿರುವ ಆ ವಿರಾಡಾತ್ಮಶಕ್ತಿಯನ್ನು ಸಾಕಾರವ್ಯಕ್ತಿಯೆಂದು ಅಂಗೀಕರಿಸರು. ಮಾನವ ಮನದ ವಿಕಲ್ಪವೃತ್ತಿ ಗೊತ್ತು-ಗುರಿಯಿಲ್ಲದೆ ಹುಚ್ಚು-ಹುಚ್ಚಾಗಿ ಅಲೆದಾಡಹತ್ತಿದಾಗ ಸಂಭವಿಸುವ ಭೀಕರ ಪರಿಸ್ಥಿತಿಯನ್ನು ವರ್ಣಿಸಲು ಯಾವುದೇ ಭಾಷೆಯಲ್ಲಿಯೂ ಸಾಕಷ್ಟು ಶಬ್ದಸಂಪತ್ತಿಲ್ಲ ಸಾಕಾರ ಪರಮಾತ್ಮನ ಕನವರಿಕೆಯುಂತಹ ಕಲ್ಪನೆಯು ಅವಾಂಛಿತವಾದ, ಮಾನವ-ಸಮಾಜಕ್ಕೆ ಸರ್ವಥಾ ಸಲ್ಲದ ಪರಿಣಾಮ ಮತ-ಮತಾಂತರಗಳ ಉದ್ಭವ. ಸಾಕಾರನಾದವನು ಸವಿಕಾರನೇ ಆದಾನು; ಅಂತಹ ಕಾಲ್ಪನಿಕ ಭಗವಂತ ಭಗವಂತನೇಅಲ್ಲ; ಅವನನ್ನು ಅಂಗೀಕರಿಸಿ ನಿರೂಪಿತವಾಗುವ ಧರ್ಮ ಧರ್ಮವೂ ಅಲ್ಲ. ಆದುದರಿಂದ, ಅಂತಹ ದೇವರ ಇರುವಿಕೆಯನ್ನು ಒಪ್ಪದ ನಾಸ್ತಿಕರು ನಾಸ್ತಿಕರಲ್ಲ: ಅಂತಹ ಧರ್ಮವನ್ನು ತಿರಸ್ಕರಿಸುವ ಮಂದಿ ಧರ್ಮದ್ರೋಹಿಗಳೂ ಅಲ್ಲ. ಅಂತಹ ಮಂದಿ ತಮ್ಮನ್ನು 'ಸ್ವತಂತ್ರ ವಿಚಾರಕರು' ಎಂಬ ಉಪಾಧಿಯಿಂದ ತಾವೇ ಸಿಂಗರಿಸಿಕೊಳ್ಳಬಹುದು; ಆದರೆ, ಯಾವ ಧರ್ಮಕ್ಕೂ ಯಾವ ದೇವರಿಗೂ ಮಣಿಯದ ಸ್ವ+ತಂತ್ರ ವಿಚಾರಕರಲ್ಲ; ಯಾವುದೋ ಕಹಿಯಾದ ಕುರುಡು ನಂಬಿಕೆಗೆ ಎದುರಾಗಿ ರೂಪತಾಳಿದ, ಪ್ರತಿಕ್ರಿಯಾವಾದಿಗಳು; ಸು+ಅತಂತ್ರ+ ವಿಚಾರಕರು ಮಾತ್ರ. ಎಂದರೆ, ಯಾವುದೇ ನಿಶ್ಚಿತವಾದ ಧ್ಯೇಯವೂ ಆದರ್ಶವೂ, ಇಲ್ಲದೆ ಕಡಿವಾಣ ಕಳಚಿದ ಕುದುರೆಯಂತೆ, ಸೂತ್ರ ಸಡಿಲವಾದ ಗಾಳಿಪಟದಂತೆ, ಯದ್ವಾತದ್ವಾ ಓಡುವ, ಬುಡವೇ ಇಲ್ಲದ ಆಲೋಚನೆಗಳನ್ನು ಜನತೆಯ ಮುಂದೆ ಮಂಡಿಸಿ, ಅತಂತ್ರವನ್ನು ಸಮಾಜದಲ್ಲಿ ಹರಡುವ ಹರಕು ಹೃದಯದ ಬರಡು ಬುದ್ಧಿಯ, ಮಲಿನ ಮನದ, ಮುರುಕು

ಮಾತಿನ ಜಂತು ವಿಶೇಷಗಳು, ಅಷ್ಟೇ.

ಮಹರ್ಷಿಗಳ ವಿಚಾರ ವೈಖರಿಯೇ ಬೇರೆ. ಸ್ವತಃ ಘನ ವಿದ್ವಾಂಸರೂ, ಸಾಕ್ಷಾತ್ಕೃತ ಧರ್ಮನಿಷ್ಠರೂ, ಪ್ರಚಂಡ ಹಾಗೂ ಪ್ರಬುದ್ಧ ಪ್ರವಚನಕಾರರೂ, ಮಹಾನ್ ತಾರ್ಕಿಕರೂ ಆದ ಆ ಮಹರ್ಷಿ ಪ್ರವರರು ಮಂತ್ರದಲ್ಲಿನ 'ನಃ ಗಿರಃ ತ್ವಾಂ ವರ್ಧಂತು' - ಎಂಬ ಶಬ್ದಗಳ ಮೇಲೆ ಅಲೌಕಿಕ ಪ್ರಕಾಶವನ್ನೆರಚುತ್ತಾ "ನಃ ವಿದ್ಯಾ ಸತ್ಯ ಭಾಷಣಾದಿ ಯುಕ್ತಾಃ ವಾಣ್ಯಃ ಸರ್ವ-ಜ್ಯೇಷ್ಠಂ ತ್ವಾಂ ವರ್ಧಂತು, ವರ್ಧಯಂತು."–ಎಂದರೆ. "ವಿದ್ಯೆ, ಸತ್ಯಭಾಷಣ ಮೊದಲಾದುದರಿಂದ ಯುಕ್ತವಾದ ನಮ್ಮ ವಾಣಿಗಳು ಸರ್ವ ಜ್ಯೇಷ್ಠನಾದ ನಿನ್ನನ್ನು ಪ್ರಕಾಶ ಪಡಿಸಲಿ." – ಎಂದು ಬರೆದಿದ್ದಾರೆ. ಮಹರ್ಷಿಗಳು ಸ್ವತಃ ವಿದ್ಯೆಯ ಅನಂತ ಸಾಗರವಾಗಿದ್ದರು; ಸತ್ಯ ಭಾಷಣ ಅವರ ಜೀವನಾಡಿಯಾಗಿದ್ದಿತು. ಸತ್ಯ ಭಾಷಣದ ಸಲುವಾಗಿಯೇ ಅವರು ೧೨–೧೩ ಸಲ ದೊಣ್ಣೆಯ ಪೆಟ್ಟಿಗೆ ಸಿಕ್ಕಿದ್ದರು. ನಾಲ್ಕಾರು ಸಾರಿ ವಿಷ-ಪ್ರಾಶನವೂ ಆಗಿದ್ದಿತು. ಕೊನೆಗೆ, ಘೋರ ವಿಷ ಕೊಡಲ್ಪಟ್ಟು, "ಓ ಈಶ್ವರ ! ಇದು ನಿನ್ನ ಇಚ್ಛೆ; ನಿನ್ನ ಇಚ್ಛೆ ಪೂರ್ಣವಾಗಲಿ !" ಎನ್ನುತ್ತಾ ಆತ್ಮ ಬಲಿದಾನ ಮಾಡಿದರು. ಇಂತಹವರಿಗಲ್ಲದೆ, ಭಗವದ್ವಾಣಿ ವೇದಗಳು ಮತ್ತಾರಿಗೆ ಅರ್ಥವಾದಾವು ?

## ಸಂಹಿತಾ ವಿಭಾಗ

**ಅಕ್ಷಿತೋತಿಃ ಸನೇದಿಮಂ ವಾಜಮಿಂದ್ರಃ ಸಹಸ್ರಿಣಂ**

**ಯಸ್ಮಿನ್ ವಿಶ್ವಾನಿ ಪೌಂಸ್ಯಾ ॥೯॥**

**ಪದಪಾಠ:-** ಅಕ್ಷಿತ+ಊತಿಃ, ಸನೇತ್, ಇಮಂ, ವಾಜಂ, ಇಂದ್ರಃ, ಸಹಸ್ರಿಣಂ, ಯಸ್ಮಿನ್, ವಿಶ್ವಾನಿ, ಪೌಂಸ್ಯಾ ॥೯॥

**ಅನ್ವಯ:-** ಯಸ್ಮಿನ್ ವಿಶ್ವಾನಿ ಪೌಂಸ್ಯಾ, (ಸಃ) ಅಕ್ಷಿತೋತಿಃ ಇಂದ್ರಃ ಇಮಂ ಸಹಸ್ರಿಣಂ ವಾಜಂ ಸನೇತ್ ॥೯॥

ಅಥವಾ

**ಈ ಐದನೇ ಸೂಕ್ತದ ಮಂತ್ರ (೩–೪–೫–೬–೭–೮) ಗಳ ಭಾಷ್ಯದ ಪೂರ್ಣ ವೆಚ್ಚ ಶ್ರೀಮತಿ ಸರೋಜಿನಿದೇವಿ ಮತ್ತು ಶ್ರೀಮಾನ್ ಬಿ. ಮಹೇಶ ಹೆಗಡೆ ಉಡುಪಿ, ಇವರುಗಳ ಸೇವೆ—**

ಅಕ್ಷಿತೋತಿಃ ಇಂದ್ರಃ ಯಸ್ಮಿನ್ ವಿಶ್ವಾನಿ ಪೌಂಸ್ಯಾ, (ತಂ) ಇಮಂ ಸಹಸ್ರಿಣಂ ವಾಜಂ ಸನೇತ್ ।

**ಶಬ್ದಾರ್ಥ**:- [ಯಸ್ಮಿನ್] ಯಾವನಲ್ಲಿ, [ವಿಶ್ವಾನಿ] ಸಮಸ್ತ, [ಪೌಂಸ್ಯಾ] ಸಾಮರ್ಥ್ಯಗಳೂ ಇವೆಯೋ, [ಸಃ] ಆ, [ಅಕ್ಷಿತೋತಿಃ] ಅಕ್ಷುಣ್ಣವಾದ ರಕ್ಷಣೆಯನ್ನುಳ್ಳ, [ಇಂದ್ರಃ] ಪರಮೇಶ್ವರನು, [ಇಮಂ] ಈ, [ಸಹಸ್ರಿಣಂ] ಸರ್ವರನ್ನೂ ಒಳಗೊಳ್ಳುವ, [ವಾಜಂ] ಆಹಾರವನ್ನು, ಜ್ಞಾನವನ್ನು, ಬಲವನ್ನು, ಹಾಗೂ ಸಂಘರ್ಷವನ್ನು [ಸನೇತ್] ದಯಪಾಲಿಸಲಿ; ಹಂಚಿಕೊಡಲಿ.

ಅಥವಾ

[ಅಕ್ಷಿತೋತಿಃ] ಅಕ್ಷಯವಾದ ರಕ್ಷಣಾ ಸಾಮರ್ಥ್ಯವನ್ನುಳ್ಳ, [ಇಂದ್ರಃ] ಪರಮೇಶ್ವರನು, [ಯಸ್ಮಿನ್] ಯಾವುದರಲ್ಲಿ, [ವಿಶ್ವಾನಿ ಪೌಂಸ್ಯಾ] ಸಕಲ ಸಾಮರ್ಥ್ಯಗಳೂ ಇವೆಯೋ, [ತಂ] ಅಂತಹ, [ಇಮಂ] ಈ, [ಸಹಸ್ರಿಣಂ] ಸಾವಿರಾರು ವಿಧದ ಸೌಕರ್ಯಗಳಿಂದ ಕೂಡಿದ, [ವಾಜಂ] ಜ್ಞಾನ-ಅನ್ನ-ಬಲಗಳನ್ನು ಹಾಗೂ ಸಂಘರ್ಷವನ್ನು,‡ [ಸನೇತ್] ಕರುಣಿಸಲಿ; ಹಂಚಿಕೊಡಲಿ.

**ತಾತ್ಪರ್ಯ**:- ಸರ್ವ ರಕ್ಷಕನಾದ ಪರಮಾತ್ಮನ ರಕ್ಷಣಾ ಸಾಮರ್ಥ್ಯ ಅಕ್ಷಯ; ಅಕ್ಷುಣ್ಣ; ಅವ್ಯಾಹತ. ಅವನಲ್ಲಿ ಸಮಸ್ತ ಶಕ್ತಿಗಳೂ ಅವಿಭಾಜ್ಯವಾಗಿ ನೆಲೆಗೊಂಡಿವೆ. ಅವನು ಸಾವಿರ-ಸಾವಿರ, ಅಸಂಖ್ಯಾತ ಸುಖಗಳಿಗೆ ಮೂಲ ಭೂತವಾದ ಆಹಾರವನ್ನು ಕರುಣಿಸುತ್ತಾನೆ, "**ಭೂರಿ ದಾ ಭೂರಿ ದೇಹಿ ನೋ ಮಾ ದಭ್ರಂ ಭೂರ್ಯಾ ಭರ। ಭೂರಿ ಘೇದಿಂದ್ರ ದಿತ್ಸಸಿ॥**" [ಋಗ್ವೇದ:- 4. 32. 20.]-"ಓ ಸರ್ವೇಶ್ವರ! ನೀನು ಹೆಚ್ಚು ಹೆಚ್ಚಾಗಿಯೇ ಕೊಡುವವನಾಗಿರುವೆ. ನಮಗೆ ತುಂಬಿಸಿ-ತುಂಬಿಸಿ ಕೊಡು. ಅಲ್ಪವನ್ನು ಕೊಡಬೇಡ. ಅಧಿಕವಾಗಿಯೇ ಕೊಡು. ನೀನು ಅಧಿಕವಾಗಿಯೇ ಕೊಡ ಬಯಸುವೆ."-ಎನ್ನುತ್ತಿದೆ ಋಗ್ವೇದ. ಉದಾರ ಸ್ವಭಾವನೂ, ಸರ್ವವನ್ನೂ ಕರುಣಿಸುವವನೂ ಆಗಿದ್ದಾನೆ-ಈ ಇಂದ್ರದೇವ.

**ಭಾಷ್ಯ**:- ಈ ಮಂತ್ರದಲ್ಲಿ ಯಾವುದೇ ಬಗೆಯ ತೊಡಕೂ ಇಲ್ಲ. ಸಾಧಾರಣ-ಬುದ್ಧಿಯುಕ್ತರಿಗೂ ಕೂಡಾ ಇದು ಸುಲಭವಾಗಿ ಅರ್ಥವಾಗುವಂತಿದೆ. ಒಂದನೆಯ ವೈಶಿಷ್ಟ್ಯವೆಂದರೆ. '**ಯಸ್ಮಿನ್ ವಿಶ್ವಾನಿ ಪೌಂಸ್ಯಾ**'- ಎಂಬ ಮೂರು ಪದಗಳನ್ನು 'ಇಂದ್ರ'ನಿಗೂ 'ವಾಜ'ಕ್ಕೂ ವಿಶೇಷಣವೆಂದು ಗ್ರಹಿಸಬಹುದು. ಎರಡನೆಯ ವೈಶಿಷ್ಟ್ಯ 'ಸನೇತ್'-ಎಂಬ

‡ ಸುಖ ದುಃಖಮಯ ಜಗತ್ತಿನಲ್ಲಿ ಕಾಮ್ಯದ ಪ್ರಾಪ್ತಿಗೂ ಅಕಾಮ್ಯದ ದೂರೀಕರಣಕ್ಕೂ ನಿರಂತರ ಹೋರಾಡುವುದೇ ಸಂಘರ್ಷ. ಪ್ರಾಧಾನ್ಯತಃ ಆಂತರಿಕ; ಗೌಣತ್ವದಿಂದ ಬಾಹ್ಯ.

ಕ್ರಿಯೆ. ಇದರ ಮೂಲವಾದ 'ಸನ್' ಧಾತುವಿಗೆ'ಪ್ರೀತಿಸು, ಬಯಸು, ಪೂಜಿಸು ಗೌರವಿಸು, ಸಂಪಾದಿಸು, ಪಡೆದುಕೊಳ್ಳು, ಅನುಗ್ರಹಪೂರ್ವಕವಾಗಿ ಸ್ವೀಕರಿಸು, ಕೊಡು, ಕರುಣಿಸು, ಹಂಚಿಕೊಡು' - ಎಂಬಿಷ್ಟು ಅರ್ಥಗಳಿವೆ. ಮಂತ್ರದ ದೇವತೆ ಅಕ್ಷಿತೋತಿಯಾದ, ಎಂದಿಗೂ ಕ್ಷೀಣಿಸದ ರಕ್ಷಣಾ ಶಕ್ತಿಯುಳ್ಳ ಸರ್ವೇಶ್ವರ–ಎಂಬುದನ್ನು ಹೃದ್ಗತವಾಗಿ ಮಾಡಿಕೊಂಡಾಗ, ಮೊದಲ ಏಳು ಅರ್ಥಗಳನ್ನು ಅವನ ಪೂರ್ಣತ್ವದಿಂದಾಗಿ ಬಿಡಬೇಕಾದೀತು. ಕರ್ಮಪದ 'ವಾಜ' ವಲ್ಲದೆ, 'ಜೀವ' ಎಂದಿದ್ದಲ್ಲಿ ಪ್ರೀತಿಸು, ಬಯಸು ಅನುಗ್ರಹಪೂರ್ವಕವಾಗಿ ಸ್ವೀಕರಿಸು-ಎಂಬರ್ಥಗಳನ್ನು ಉಳಿಸಿಕೊಳ್ಳಬಹುದು. ಆದರೆ, ಪ್ರಾಪ್ತ ಸರ್ವಸ್ವನೂ, ಪೂರ್ಣತೃಪ್ತನೂ ಆದ ಪರಮಾತ್ಮನು, ಜಡ ವಸ್ತುಗಳೋ, ವಿಶಿಷ್ಟ ಗುಣಗಳೋ, ಆದ 'ವಾಜ'ವನ್ನು ಪ್ರೀತಿಸುವ, ಬಯಸುವ, ಗೌರವಿಸುವ, ಸಂಪಾದಿಸುವ, ಪಡೆದುಕೊಳ್ಳುವ, ಅನುಗ್ರಹ ಪೂರ್ವಕವಾಗಿಯೇ ಆಗಿರಲೊಲ್ಲದೇಕೆ ಅದನ್ನು ಸ್ವೀಕರಿಸುವ ಪ್ರಶ್ನೆಯೇ ಏಳುವುದಿಲ್ಲ. ಅವನ ವ್ಯಾಪಕತ್ವದಿಂದಾಗಿ ಆ ಗುಣಗಳನ್ನೂ ಬಿಡಬೇಕು. † "ಅಯ್ಯಾ ದೇವರೇ ! ಅನುಗ್ರಹದಿಂದ ನೀನು ಇದನ್ನು ಸ್ವೀಕರಿಸು. ಓ ಇಂದ್ರದೇವ ! ಇದರಿಂದ ನಿನಗೆ ತೃಪ್ತಿಯಾಗಲಿ, ಶಕ್ತಿ ಕೂಡಿ ಬರಲಿ." - ಎಂದು ಹೇಳುವುದು ವೇದಗಳನ್ನು ಅವುಗಳ ಉನ್ನತಸ್ತರದಿಂದ ಕೆಳಕ್ಕೆ ಎಳೆತರುವುದೇ ಆಗಿದೆ. ವೈದಿಕ ಧರ್ಮೀಯರ ದುರ್ಭಾಗ್ಯದಿಂದಲೋ ಏನೋ ಶ್ರೀ ಸಾಯಣ ಭಾಷ್ಯದ ಕನ್ನಡ ಭಾಷಾಂತರ ಸಮಿತಿಯ ಸಂಪಾದಕರು ಇದೇ ಸೂಕ್ತದ ಏಳನೆಯ ಮಂತ್ರದ ಸಾಯಣ ಭಾಷ್ಯವನ್ನು ಕನ್ನಡಿಸುತ್ತಾ, **"ನಿನಗೆ ಆ ಸೋಮರಸಗಳು ಉತ್ಕೃಷ್ಟಜ್ಞಾನವನ್ನುಂಟು ಮಾಡುವುದಕ್ಕಾಗಿ ಸುಖರೂಪವಾಗಲಿ. ನೀನು ಅದರಿಂದ ತೃಪ್ತಿಗೊಳ್ಳುವುದರಿಂದ ಆ ಸೋಮರಸ ನಿನಗೆ ಸುಖವನ್ನುಂಟು ಮಾಡಲಿ."** ಎಂಬ ವಾಕ್ಯರತ್ನಗಳನ್ನು ಜೋಡಿಸಿದ್ದಾರೆ. **'ವಿಶೇಷ ವಿಷಯಗಳು'**-ಎಂಬ ಶೀರ್ಷಿಕೆಯಡಿಯಲ್ಲಿ ಈ ಸೋಮರಸವನ್ನು ಪಾನ ಮಾಡುವುದರಿಂದ, ಮನಸ್ಸಿಗೆ ಸಂತೋಷವುಂಟಾಗಿ ಸುಖವಾಗುವುದಲ್ಲದೆ. ಸೋಮಪಾನ ಮಾಡುವ ಇಂದ್ರನಿಗೆ ಬುದ್ಧಿಶಕ್ತಿಯನ್ನೂ ಹೆಚ್ಚಿಸುವುದೆಂದಭಿಪ್ರಾಯವು." ಎಂಬ ನುಡಿಗಳಿಂದ

---

† ನಿತ್ಯ–ತೃಪ್ತನೂ, ಪೂರ್ಣಾನಂದ ಬಂಧುರನೂ, ಸರ್ವರಿಗೂ ಸರ್ವವನ್ನೂ ತುಂಬಿಸಿ-ತುಂಬಿಸಿ ಕೊಡುವವನೂ, ನಿಜವಾಗಿಯೂ ಭಕ್ತರ ಬಯಕೆಯನ್ನು ಈಡೇರಿಸಿ ಕೊಡುತ್ತಿರುವವನೂ ಆದ ಸರ್ವೇಶ್ವರನಿಗೆ ಯಾವುದು ಪ್ರಾಪ್ತವಾಗಿಲ್ಲ ? ಪ್ರಾಪ್ತವಾಗಿದ್ದರೂ ಬೇಕಾದಷ್ಟನ್ನು ಪಡೆಯಲಾರದೇ ಹೋಗಿದ್ದರೆ, ಅಥವಾ, ಎಲ್ಲವೂ, ಬೇಕಾದಷ್ಟು ಸಿಕ್ಕಿದ್ದರೂ, ಆ ಪರಮಾತ್ಮನು 'ಇನ್ನೂ ಬೇಕು.'-ಎಂಬ ಜಿಪುಣಾಗ್ರೇಸರನಾಗಿದ್ದಲ್ಲಿ ಆ ಭಗವಂತನನ್ನು ಬಾಳಿಗೊಂದು ಹೊರೆಯಾಗಿ ಹೊತ್ತು ತಿರುಗುವ ಬೇಡದ ಭಕ್ತಿಯನ್ನು ಬಯಸುವ ಹತಭಾಗ್ಯನಾದ, ಪರಮದಯನೀಯನಾದ 'ಭಕ್ತ' ಈ ಹೊರೆಗೇಕೆ ಕೊರಳೀಯಬೇಕು ?

ಭಾಷ್ಯವನ್ನು ಸಿಂಗರಿಸಿದ್ದಾರೆ ! ಈ ಇಂದ್ರ ಕಲ್ಪಿತನಾದ ಸಾಕಾರ ಇಂದ್ರನೇ ಆಗಿದ್ದಲ್ಲಿ, ಮತ್ತು ಅವನು ಸ ಪ್ರಾಣನೂ. ತಿಂದು ಕುಡಿದು-ನಲಿವ-ಉಲಿವ ವ್ಯಕ್ತಿಯಾಗಿದ್ದರೆ, ಹೇಗೋ ಮೇಲೆ ಹೇಳಿದ ಅರ್ಥವನ್ನು ಹೊಂದಿಸಿಕೊಳ್ಳಬಹುದು. ಆದರೆ 'ವಿಶ್ವತ ಚಕ್ಷುಃ' ಮೊದಲಾದ ಸರ್ವವ್ಯಾಪಕ ತತ್ವಕ್ಕೆ, ನಿತ್ಯತೃಪ್ತನಿಗೆ ಹೊಂದಿಸಲಾದೀತೇ ? ಈ ಸಾಕಾರ ಇಂದ್ರನ ಅಸ್ತಿತ್ವ ಸೋಮಪಾನದಿಂದ ಅವನ ಬಲ ಬೆಳೆಯುವುದು ಎಲ್ಲವೂ ಕಾಲ್ಪನಿಕವೇ. ಶ್ರೀ ಸಾಯಣರ ಅಭಿಪ್ರಾಯವೇನೋ ನಿಸ್ಸಂದೇಹವಾಗಿ ಅದೇ-ಎಲ್ಲವೂ ಕಲ್ಪನಾ ಲೋಕ ವಿಹಾರ; ನಿದ್ರಾ ವಿಹಾರ (Somnambulism) ದಂತಹ ಒಂದು ಜಾಡ್ಯ - ಎಂದು ಹೇಳಿದರೆ ಸಾಕು. ಇಂದ್ರ ಶಬ್ದದಿಂದ ಪರಮೇಶ್ವರನು ಗ್ರಾಹ್ಯನಾದಲ್ಲಿ, ಇದು ಸರ್ವಥಾ ಅಸಂಗತ.

ಈಗ ಶ್ರೀಮಧ್ವರ ಭಾಷ್ಯವನ್ನು ಪಾಠಕರು ಅವಲೋಕಿಸಲಿ:–

**ಅನಂತ ಫಲದಂ ವಾಜಮಸ್ಮತ್ತೋ ಲಭತಾಂ ಸ ಚ।**
**ದದಾತು ವಾ ಪೌರುಷಾಣಿ ಶಕ್ತಯೋ ಯತ್ರ ಚಾಖಿಲಾಃ॥**
**ಅತಶ್ಚಾನಂತ ಶಕ್ತಿತ್ವಾನ್ನ ವೃದ್ಧ್ಯಾದ್ಯಾಃ ಕಥಂಚನ।**
**ಸರ್ವೋಪೇತೇತ್ಯೇತ ಮರ್ಥಮಭಿಪ್ರೇತ್ಯಾ ಹ ವೇದರಾಟ್॥**

"ಸರ್ವಸಾಮರ್ಥ್ಯಗಳೂ ಯಾವ ಶ್ರೀಹರಿಯಲ್ಲಿರುತ್ತವೋ. ಅವನು ನಮ್ಮಿಂದ ಅನಂತ ಫಲಪ್ರದ ಖಾದ್ಯವನ್ನು ಸೇವಿಸಲಿ ಅಥವಾ - ಭಕ್ತಕೋಟಿಗೆ ಕರುಣಿಸಲಿ."–ಇದು ವೇದವೇತ್ತಾ ವ್ಯಾಸರು ಹೇಳಿದ ಸ್ಫುಟಲಕ್ಷಣವೆನ್ನುತ್ತಾರೆ–ಶ್ರೀ॥ ಮಧ್ವ ಗುರುರಾಯರು. ಅಪ್ರಾಪ್ತವಾಗದ್ದುದನ್ನು ಗಳಿಸಿಕೊಂಡವನು ಎಂಬ ಅತೀತಕಾಲೀನ ಅಪೂರ್ಣತ್ವ ಧ್ವನಿತ ವಾಗದಿರಲೆಂದು ಗುರುವರ್ಯರು 'ಸರ್ವೋಪೇತಾ' ಎಂಬರ್ಥವನ್ನು 'ಅನಂತ ಫಲ' ಅಥವಾ 'ಅನಂತ ಫಲದ' ಮತ್ತು ಉಪೇತಾ ಎಂದು ಅವನ ನಿತ್ಯಪ್ರಾಪ್ತ ಅವ್ಯಯ ಸಾಮರ್ಥ್ಯಗಳು ನೈಸರ್ಗಿಕ ಗುಣಗಳು; ಎಂಬ ಆಶಯ ತೋರಿದ್ದಾರೆ. ಫಲ ಫಲದ ಸದಾ ಪ್ರಾಪ್ತ ಸ್ವಾಭಾವಿಕ ಶಕ್ತಿ ಸಾಮರ್ಥ್ಯ ಎಂದಿದ್ದಾರ. ಇನ್ನು ಸೋಜಿಗದ ಸೊಲ್ಲಾದ, ನಮ್ಮಿಂದ ಅನಂತ ಫಲಪ್ರದ ಖಾದ್ಯವನ್ನು ಸೇವಿಸಲಿ; ಅಥವಾ ಭಕ್ತಕೋಟಿಗೆ ಕರುಣಿಸಲಿ ಎಂಬುದರ ವಿವೇಚನೆ ಓದುಗ ರಿಗಿರಲಿ, ಉಪಾಸಕನಿಂದ ಶಕ್ತಿಗಳಿಸಬೇಕೋ, ಸರ್ವಶಕ್ತ ?

ಪರಮಾತ್ಮನನ್ನು ಶ್ರೀಹರಿಯೆಂದು ಕರೆಯಲಿ; ಹರನೆಂದೋ, ಶಿವನೆಂದೋ, ನಾರಾಯಣ ನೆಂದೋ. ವಿಷ್ಣುವೆಂದೋ ಕರೆಯಲಿ. ಅದರಲ್ಲಿ ಯಾವುದೇ ದೋಷವೂ ಇಲ್ಲ. ಆದರೆ, ಪರಮಾತ್ಮನನ್ನು ಪ್ರತಿಪಾದ್ಯನೆಂದು ಅಂಗೀಕರಿಸಿ, 'ಸನೇತ್' ಎಂಬ ಕ್ರಿಯೆಗೆ **"ಅಸ್ಮತ್ತೋ ಲಭತಾಂ ಸ ಚ"** – "ನಮ್ಮಿಂದ ವಾಜವನ್ನು ಪಡೆದುಕೊಳ್ಳಲಿ." - ಎಂದರ್ಥಮಾಡುವುದು ಪರಿಶುದ್ಧ ದಾರ್ಶನಿಕ ದೃಷ್ಟಿಯಿಂದ ಹಾಗೂ ಪರಮಾತ್ಮನು ಪೂರ್ಣ, ಪೂರ್ಣತೃಪ್ತ, ಸರ್ವಶಕ್ತ - ಎಂಬ ಪರಿಪಕ್ವ ಆಧ್ಯಾತ್ಮಿಕ ತತ್ತ್ವದ ದೃಷ್ಟಿಯಿಂದ ಸಾಧುವೆನಿಸದು. ಆದರೆ 'ವಾ'-ಎಂದು ದನಿದೆಗೆದು, 'ನಮಗೆ ಕೊಡಲಿ." - ಎಂದು ಹೇಳಿ, ಪರಮಾತ್ಮನ ಅನಂತ

ಶಕ್ತಿತ್ವವನ್ನು ಅಂಗೀಕರಿಸಿರುವುದು ಎಷ್ಟೋ ಸಮಾಧಾನಕರ. ಮಾಡುವುದಾದರೂ ಏನು ? ತಲೆತಲಾಂತರಗಳಿಂದ ರಕ್ತದ ಬಿಂದು-ಬಿಂದುವಿನಲ್ಲಿಯೂ ಸೇರಿಕೊಂಡು, ಹೊಸೆದುಕೊಂಡು ಬಂದ ಪ್ರತಿಮಾರ್ಚನೆ,ನೈವೇದ್ಯಾದಿಸಮರ್ಪಣೆ-ಮೊದಲಾದ ನಂಬಿಕೆಗಳನ್ನು ತೊಡೆದುಹಾಕಲು ಕಬೀರ-ನಾನಕರಿಗೆ ಸಾಧ್ಯವಾಗಿರಬಹುದು; ರಾಮಮೋಹನರಾಯ್-ದಯಾನಂದ ಸರಸ್ವತಿ ಗಳಿಗೆ ಸಾಧ್ಯವಾಗಿರಬಹುದು, ಆದರೆ, ಆಚಾರ್ಯರೆಲ್ಲರಿಗೂ ಅದು ಸಾಧ್ಯವಾಗಿಲ್ಲ. 'ನಮ್ಮಿಂದ ಪಡೆಯಲಿ.' ಎಂಬಿಷ್ಟನ್ನು ಬಿಟ್ಟರೆ ಶ್ರೀಮಧ್ವರ ಭಾಷ್ಯ ಮಾನಸೀಯವೇ ಆಗಿದೆ.

ಇನ್ನು ಸಾಯಣ ಭಾಷ್ಯ. "**ಇಂದ್ರಃ ಇಮಂ ವಾಜಂ ಸೋಮರೂಪಮನ್ನಂ ಸನೇತ್ ಸಂಭಜೇತ್. ಕೀದೃಶ ಇಂದ್ರಃ ? ಅಕ್ಷಿತೋತಿಃ ಅಹಿಂಸಿತ ರಕ್ಷಣಃ । ಕದಾಚಿದಪಿ ರಕ್ಷಾಂ ನ ವಿಮುಂಚತೀತ್ಯರ್ಥಃ । ಕೀದೃಶಂ ವಾಜಂ ? ಸಹಸ್ರಿಣಂ ಪ್ರಕೃತೌ ವಿಕೃತಿಷು ಚ ಪ್ರವರ್ತ ಮಾನತ್ವೇನ ಸಹಸ್ರ ಸಂಖ್ಯಾಯುಕ್ತಂ । ಯಸ್ಮಿನ್ ವಾಜೇ ವಿಶ್ವಾನಿ ಸರ್ವಾಣಿ ಪೌಂಸ್ಯಾ ಪುಂಸ್ತ್ವಾನಿ ಬಲಾನಿ ವರ್ತಂತೇ ತಾದೃಶಂ ವಾಜಮಿತಿ ಪೂರ್ವತ್ರಾನ್ವಯಃ । ಸನೇತ್ ವನ ಷಣ ಸಂಭಕ್ತೌ । ಪುಂಸಃ ಕರ್ಮಾಣಿ ಪೌಂಸ್ಯಾನಿ ।**" ಇದರ ಕನ್ನಡ ಭಾಷಾಂತರವಿದು:— "ಇಂದ್ರನು ಈ ವಾಜವನ್ನು. ಎಂದರೆ ಸೋಮರೂಪವಾದ ಅನ್ನವನ್ನು ಸೇವಿಸಲಿ. ಎಂತಹ ಇಂದ್ರನು ? ಅಕ್ಷಿತೋತಿ – ಎಂದರೆ ಅಕ್ಷುಣ್ಣವಾದ ರಕ್ಷಣವನ್ನುಳ್ಳವನು. ಎಂದಿಗೂ ರಕ್ಷಣವನ್ನು ಬಿಟ್ಟುಕೊಡದವನೆಂದರ್ಥ, ವಾಜವೆಂತಹುದು ? ಸಹಸ್ರಯುಕ್ತವಾದುದು ಪ್ರಕೃತಿಯಲ್ಲಿಯೂ ಅದರ ರೂಪಾಂತರಗಳಲ್ಲಿಯೂ‡ ಪ್ರವರ್ತಿಸುತ್ತಿರುವುದರಿಂದ ಸಹಸ್ರ ಸಂಖ್ಯಾತವಾದುದು. ಯಾವ ವಾಜ (ಅನ್ನ)ದಲ್ಲಿ ಸಮಸ್ತ ಪೌಂಸ್ಯಗಳೂ, ಎಂದರೆ ಪುಂಸ್ತ್ವ ಬಲಗಳೂ ಇರುತ್ತವೋ, ಅಂತಹ ವಾಜ – ಎಂದು ಮೊದಲಿನದಕ್ಕೆ ಅನ್ವಯಿಸ ಬೇಕು. ವನ, ಷಣ ಧಾತುಗಳಿಗೆ ಸುಭಕ್ತಿ – ಎಂಬರ್ಥವಿದೆ. 'ಪುಮಾನ್' (ಪುರುಷ)ನ ಕರ್ಮಗಳೇ ಪೌಂಸ್ಯಗಳು." ಈ ಭಾಷ್ಯವನ್ನೋದಿದ ಮೇಲೆ, ಏನಾದರೂ ಆಧ್ಯಾತ್ಮಿಕಜ್ಞಾನ ಸಿಕ್ಕಿತೆಂದು ಹೇಳಲು ಸಾಧ್ಯವಾಗುವುದಿಲ್ಲ. ಈ ಅನಿಸಿಕೆ ನಮ್ಮದು ಮಾತ್ರವಲ್ಲ, ನಾವು ಮೇಲೆ ಸೂಚಿಸಿರುವ ಭಾಷ್ಯ – ಭಾಷಾಂತರ ಸಮಿತಿಯ ಸಂಪಾದಕರಿಗೂ ಹೀಗೆಯೇ ತೋರಿ, "ಈ ಋಕ್ಕಿನ ಅಭಿಪ್ರಾಯ ಸ್ಪಷ್ಟವಾಗಿಲ್ಲ," - ಎಂದು ಹೇಳಿದ್ದಾರೆ. ಈ ಒಂದು ನಿಲುವು ಸಮನ್ವಯ ಸಾಧಕವೇ ಸರಿ. ಕೊಡುವವನೇ ದೇವ; ಕೊಳ್ಳುವವ ಉಪಾಸಕ.

ಋಕ್ಕಿನ ಅರ್ಥವೇನೋ ಸ್ಪಷ್ಟವಾಗಿಯೇ ಇದೆ, ಆದರೆ, ಸಾಯಣಭಾಷ್ಯದ ಜಾಡು ಹಿಡಿದು ನಡೆದರೆ, ಸ್ಪಷ್ಟವಾಗಿದ್ದ ಅರ್ಥವೂ ಮಸಕು – ಮಸಕಾಗಿ, ಅಸ್ಪಷ್ಟವಾಗಿ ಹೋಗುತ್ತದೆ, ಅಷ್ಟೇ. ಶ್ರೀ ಸಾಯಣರ ಬುದ್ಧಿಯ ಹಿಡಿತಕ್ಕೆ ಸಿಕ್ಕದ ರಹಸ್ಯವನ್ನು

‡ ಸೋಮದ ನಾನಾರ್ಥಗಳನ್ನು ಓದುಗರು ಓದಿಯೇ ಇದ್ದಾರೆ. "**ಸೋಮಂ ಮನ್ಯತೇ ಪಪಿವಾನ್.**" [ಋಕ್:- 10. 85. 3.] - ಎಂಬ ಋಕ್ಕೂ ಓಷಧಿ ವಿಶೇಷವನ್ನು ಗ್ರಹಿಸುತ್ತದೆ. ಮೂಲರೂಪದಲ್ಲಿ ಆ ಓಷಧಿ 'ಪ್ರಾಕೃತ'; ಮೊಸರು, ಹಿಟ್ಟುಗಳ ಮಿಶ್ರಣ ವಾದಲ್ಲಿ ಅದೇ 'ವಿಕೃತ; ವಿಪರೀತಾರ್ಥದಲ್ಲಿ ಅಲ್ಲ; ವಿಶೇಷ ಗುಣವರ್ಧಕವೆಂಬರ್ಥದಲ್ಲಿ ಮಾತ್ರ.

ಸ್ಕಂದ ಸ್ವಾಮಿಗಳು ಗುರುತಿಸಿದ್ದಾರೆ. ಇಂದ್ರನ ಗುಣವಾಚಕವಾಗಿ ಬಂದಿರುವ ಅಕ್ಷಿತೋತಿ' - ಎಂಬ ಶಬ್ದವನ್ನು ಕೇಂದ್ರ ಬಿಂದುವಾಗಿರಿಸಿಕೊಂಡು ಅನಾವಶ್ಯಕವಾದ ಅರ್ಥವಿತ್ತು, ವ್ಯರ್ಥತರ್ಕವನ್ನುಳಿದು, ಪವಿತ್ರ ಪಥ ಹಿಡಿದರೆ,ಋಕ್ಕಿನ ಅಭಿಪ್ರಾಯ ತನ್ನಷ್ಟಕ್ಕೆ ತಾನೇ ಅಭಿವ್ಯಕ್ತವಾಗುತ್ತದೆ. ಈ ರೇಖೆಯನ್ನನುಸರಿಸಿ ನಡೆದು ಸ್ಕಂದಸ್ವಾಮಿಗಳು ಬರೆಯುತ್ತಾರೆ:-

**"ಅಕ್ಷಿತಾ ಅನ್ಯೇನ ಅಹಿಂಸಿತಾ ಅಕ್ಷೀಣಾ ವಾ ಊತಿಃ ಪಾಲನಂ ಯಸ್ಯ, ಸಃ ಅಕ್ಷಿತೋತಿಃ। ಸನೇತ್ ಸಂಭಜತು ಇಮಂ ವಾಜಂ ಸಂಗ್ರಾಮಂ ಇಂದ್ರಃ ಸಹಸ್ರಿಣಂ ಯೋದ್ಧ ಸಹಸ್ರ ಯುಕ್ತಂ। ಅಸ್ಮಿನ್ ಸಂಗ್ರಾಮೇ ಅಸ್ಮದ್ರಕ್ಷಣಾಯ ಸಂ ನಿಹಿತ್ಯೋ ಭವತು ಇತ್ಯರ್ಥಃ। ಯಸ್ಮಿನ್ ಸಂಗ್ರಾಮೇ ವಿಶ್ವಾನಿ ಸರ್ವಾಣಿ ಪೌಂಸ್ಯಾ ಬಲನಾಮ ಏತತ್। ಹಸ್ತ್ಯಶ್ವರಥಪದಾತಿ ಲಕ್ಷಣಾನಿ ಬಲಾನಿ।"**

"ಅಕ್ಷಿತವಾದ, ಅನ್ಯನಿಂದ ಧ್ವಸ್ತ (ಛಿನ್ನಭಿನ್ನ)ವಾಗದ ಅಥವಾ ಅಕ್ಷೀಣವಾದ ಊತಿಯನ್ನು, ಪಾಲನೆಯನ್ನು ಹೊಂದಿರುವವನೇ ಅಕ್ಷಿತೋತಿ. ಆ ಗುಣ ವಿಶಿಷ್ಟನಾದ ಇಂದ್ರನು ಈ ವಾಜವನ್ನು ಎಂದರೆ ಯೋದ್ಧೃಸಹಸ್ರಯುಕ್ತವಾದ ಸಂಗ್ರಾಮವನ್ನು ನಡೆಯಿಸಲಿ, ಅಂದರೆ, ಯಾವ ಸಂಗ್ರಾಮದಲ್ಲಿ ಸಕಲ ಪೌಂಸ್ಯಗಳೂ, ಆನೆ-ಕುದುರೆ-ರಥ-ಕಾಲಾಳುಗಳೆಂಬ ಬಲಗಳೂ ಇರುತ್ತವೋ, ಆ ಸಂಗ್ರಾಮದಲ್ಲಿ ನಮ್ಮ ರಕ್ಷಣಕ್ಕಾಗಿ ಹತ್ತಿರವಾಗಿರಲಿ - ಎಂದು ಅರ್ಥ." ಇಲ್ಲಿಯವರೆಗೆ ಸ್ಕಂದ-ಭಾಷ್ಯ ಸತ್ಯದತ್ತ ಸಂಕೇತಿಸುವಂತೆ ಕಾಣುತ್ತದೆ. ಒಂದು ಆಕ್ಷೇಪಣೀಯವಾದ ಅಂಶವೆಂದರೆ. ಸ್ಕಂದಸ್ವಾಮಿಗಳು ಬಾಹ್ಯಯುದ್ಧವನ್ನು ಗ್ರಹಿಸಿದ್ದಾರೆ. ಮತ್ತು ಪರಿವರ್ತನಶೀಲವಾದ ಈ ಜಗತ್ತಿನಲ್ಲಿ ಯುದ್ಧಸಾಧನಗಳು ಏಕಪ್ರಕಾರವಾಗಿರಲಾರವು. ಆನೆ-ಕುದುರೆ-ರಥ-ಕಾಲಾಳುಗಳ ಕಾಲ ಎಂದಿಗೋ ತೀರಿತು. ಈಗ ಬಿಲ್ಲು-ಬಾಣಗಳ, ಗದೆ-ಮುಷ್ಟಿಯುದ್ಧಗಳ ಉಪಯೋಗಿತ್ವ ಮೊದಲಿನಷ್ಟಿಲ್ಲ. ಅಹುದು; ಟ್ಯಾಂಕ್‌ಗಳು ನಡೆಯಲಾರದೆಡೆ, ಸ್ವಯಂಚಾಲಿತ ಯುದ್ಧ-ವಾಹನಗಳು ಮುಟ್ಟಲಾಗದಕಡೆ, ಆನೆ-ಕುದುರೆ-ಒಂಟೆ-ಯಾಕ್ (ಒಂದು ವಿಧದ ಆಡು)ಗಳು ನೆರವಾಗಬಹುದು. ಸಾರ್ವಕಾಲಿಕವಾದ ವೇದಗಳು ಯಾವುದೋ ನಿರ್ದಿಷ್ಟಕಾಲದಲ್ಲಿ ಬಳಸುವ ರಣ-ಸಾಧನಗಳನ್ನು ನಿರ್ದೇಶಿಸವು. ಮತ್ತು ಈ ಆಧ್ಯಾತ್ಮಿಕ ಪ್ರಪಂಚದಲ್ಲಿ ವೇದಗಳ ಪ್ರಧಾನ ವಿಷಯ ಮಾನವ ಜೀವನದ ಬಾಹ್ಯ ವೃತ್ತಿ ವ್ಯವಹಾರ-ಆಚಾರ,ಅನುಷ್ಠಾನಗಳಲ್ಲ. ಈಗ ನಾವೆಣಿಸಿರುವ ಬಾಹ್ಯವರ್ತನೆಗಳಿಗೆ ಯಾವುದೇ ಗಣ್ಯಸ್ಥಾನವೂ ಧರ್ಮದಲ್ಲಿಲ್ಲವೆಂದಲ್ಲ; ಮಾನವನ ಬಾಹ್ಯಜೀವಿತದಲ್ಲಿ ವ್ಯಕ್ತವಾದ ಆಚಾರಗಳ ಕಡೆಗೆ ಪೂರ್ಣ ಔದಾಸೀನ್ಯದ ವೃತ್ತಿಯನ್ನೇ ಅವಲಂಬಿಸಿ ಹೊರಟಲ್ಲಿ, ಧರ್ಮ ಕೇವಲ ಶಬ್ದಗಳ ಒಂದು ಬೃಹದ್ಭಂಡಾರವಾದೀತೇ ಹೊರತು, ಇಲ್ಲಿಗೂ ಸಲ್ಲದ, ಅಲ್ಲಿಗೂ ಒಲ್ಲದ ಅಪರೀಕ್ಷಿತವಾದ, ಅನನುಷ್ಠಾತವಾದ, **"ಇದಂ ಇತ್ಥಮೇವ, ತಚ್ಚ ಅನ್ಯದೈವ."** "ಇದು ಇಂತೆಯೇ ಸರಿ; ಮತ್ತದು ಬೇರೆ ರೀತಿಯದೇ." - ಎಂಬ ನಿರ್ಭ್ರಾಂತವಾದ ನಿಲುವನ್ನು ಹಿಡಿದು ನಡೆಯಲು ಬೇಕಾದ ನೈತಿಕವಾದ ನೆಲೆಯನ್ನು ನರಸಮಾಜಕ್ಕೆ ಎರೆದು ಕೊಡಲಾರದ ಕೇವಲ ಸಿದ್ಧಾಂತಗಳ, ತತ್ತ್ವಗಳ, ಸಂಪ್ರದಾಯಗಳ, ಅಂಧವಿಶ್ವಾಸ ಪರಂಪರೆಯ ಹಾಗೂ

**ಟೊಳ್ಳು**–ಪೊಳ್ಳುಗಳ ಹೊರಲಾರದ ಹೊರೆ ಮಾತ್ರವಾಗಿ ಉಳಿದೀತು. ಬುದ್ಧಿಯ, ವಿವೇಕದ, **ತರ್ಕದ**, ವಿಶ್ಲೇಷಣೆಯ ಒರೆಗಲ್ಲಿಗೆ ಹಚ್ಚಿ ನೋಡದ, ತಳಪಾಯವಿಲ್ಲದ ನಂಬುಗೆಗಳ ಕಂತೆ **ಯಾಗಿ** ಕುಳಿತೀತು ಧರ್ಮ.

ಕುಳಿತೀತು - ಎಂಬುದೇಕೆ ? ಅದಾಗಲೇ ಆ ರೂಪದಲ್ಲಿ ಚಾಪೆ ಹಾಸಿಕೊಂಡು ಅಚ್ಚುಕಟ್ಟಾಗಿ ಕುಳಿತಿದೆ ಮಾತ್ರವಲ್ಲ; ಮಲಗಿಯೂ ಆಗಿದೆ. ಮಾನವ ಮಾತ್ರರು ಸರ್ವ ಪ್ರಥಮ ಸದಾ - ಸರ್ವದಾ, ಸರ್ವಥಾ ಸರ್ವತ್ರ ಸ್ಮರಣೆಯಲ್ಲಿಡಲೇ ಬೇಕಾದ ತೆರೆದಿಟ್ಟ ಗುಟ್ಟಿದು. ಶಾಸ್ತ್ರಗಳ, ಬಂಧವಿಮೋಚನಾ ಮಾರ್ಗವನ್ನು ತೋರಿಸುವ ಗ್ರಂಥಗಳ ವಿಧಿ - ನಿಷೇಧಾತ್ಮಕ ಆದೇಶಗಳೆಲ್ಲಾ ಒಂದೇ ಒಂದು ಅಪವಾದವೂ (Exception) ಇಲ್ಲದೆ ಮಾನವನ ಆಂತರಿಕ ಜೀವನದ ಆತ್ಮೋತ್ಕರ್ಷ ಪಥದ ಅತಿಸ್ಪಷ್ಟ ಜ್ಯೋತಿಃಸ್ತಂಭಗಳೇ ಹೊರತು, ಮಾನವ ಜೀವನದ ಬಾಹ್ಯ ಮುಖಕ್ಕೆ ಬೆಳಕನ್ನು ಬೀರುವ ಕೃತಿಗಳಲ್ಲ ಹಾಗೆಂದ ಮಾತ್ರಕ್ಕೆ, ಧರ್ಮಾನುಷ್ಠಾನಕ್ಕೆ ಯಾವುದೇ ಬಾಹ್ಯ - ಸಂಸ್ಕಾರಗಳ ಆವಶ್ಯ ಕತೆಯೂ ಇಲ್ಲವೇ ಇಲ್ಲವೆಂದು ನಾವು ಹೇಳುತ್ತಿಲ್ಲ. ಭತ್ತದ ಮೇಲಣ ಹೊಟ್ಟು ಸಿಪ್ಪೆ ಸ್ವತ: ಅಕ್ಕಿಯಲ್ಲದಿರಬಹುದು. ಆದರೆ, ಹೊಟ್ಟಿಲ್ಲದೆ ಹೋದರೆ, ಅಕ್ಕಿ ಕೈಗೆಂದುವುದು ಅಸಂಭವವೇ ಸರಿ. ಅದೇ ರೀತಿ ಬಾಹ್ಯ - ಸಂಸ್ಕಾರಗಳು ಸ್ವತ: ಧರ್ಮವಲ್ಲದಿರಬಹುದು. ಆದರೆ, ಅವು ಇಲ್ಲದೇ ಹೋದಲ್ಲಿ, ಧರ್ಮದ ಪರಿರಕ್ಷಣೆ, ಸಂವರ್ಧನೆ ಸಮಸ್ತ ಸಮಯಕ್ಕೂ, ಅಸಂಭವವೇ ಸರಿ. ಇದೇ ಕಾರಣದಿಂದ, ಮಹಾರಾಜಾ ಮನು ತನ್ನ ಮಾನವ ಧರ್ಮ ಶಾಸ್ತ್ರದಲ್ಲಿ, **ನಲಿಂಗಂ ಧರ್ಮಕಾರಣಂ.**" [6. 52. ] "**ಸಂನ್ಯಾಸಿಯು ಸರ್ವ ಜೀವರಲ್ಲಿಯೂ ಸಮಭಾವ ತಳೆದು ಸ್ವಧರ್ಮದಲ್ಲಿ - ಅದು ದೂಷಿತವೇ ಆಗಿದ್ದರೂ - ನಿಷ್ಠಾವಂತನಾಗಿರಬೇಕು. ದಂಡ, ಕಮಂಡಲು, ಕಾಷಾಯವಸ್ತ್ರಾದಿ ಹೊರಚಿಹ್ನೆಗಳು ಧರ್ಮಕಾರಣವಲ್ಲ.**" ಎಂದಿದ್ದಾನೆ. ಮತ್ತೆ, "**ಆಚಾರಃ ಪರಮೋ ಧರ್ಮಃ**"[1.108.] "ಆಚಾರವೇ ಪರಮಧರ್ಮ"-ಎಂದೂ ಸಾರಿದ್ದಾನೆ. ಕುರುಹೇ ಧರ್ಮ ಕಾರಣವಲ್ಲ: ಬಾಹ್ಯಾಚಾರದಿಂದಲೇ ಉದ್ಭವಿಸುತ್ತದೆ ಧರ್ಮ," ಈ ಎರಡೂ ಪರಸ್ಪರ ವಿರೋಧಿಗಳನ್ನು ಬೆಸೆಯುವ ಸಲುವಾಗಿ, –"**ನ ವಿಪ್ರದುಷ್ಟಭಾವಸ್ಯ ಸಿದ್ಧಿಂಗಚ್ಛಂತಿ ಕರ್ಹಿಚಿತ್**"[ಮನು : 2.97.]–ವಿಶಿಷ್ಟರೂಪದಲ್ಲಿ ಎದ್ದುಕಾಣುವ ಹಾಗೆ ದುರಾಚಾರಿಯ– ದುರ್ವಿಚಾರಿಯ ಯಾವ ಅನುಷ್ಠಾನವೂ ಫಲಪ್ರದವಾಗದು ಎಂದಿದ್ದಾನೆ.

ಶಿವದಾರ-ಶಿವಲಿಂಗಗಳ ಧಾರಣಕ್ಕಿನ್ನೂ ಸಾಕಷ್ಟು ಸಾಮರ್ಥ್ಯ ಸಿಕ್ಕಿರಲಿಲ್ಲವೇನೋ ? ಏನಾದರೇನು ? ಪ್ರೇಮಕ್ಕೆ ಕಣ್ಣಿಲ್ಲವೆನ್ನುತ್ತಾರೆ; ಸಂಪ್ರದಾಯ ಆ ಪ್ರೇಮಕ್ಕಿಂತ ಬಹು ಹೆಚ್ಚು ಅಂಧತ್ವ (ಕುರುಡುತನ)ವನ್ನು ಅರಳಿಸಿಕೊಂಡಿರಲೇ ಬೇಕು. ಕ್ರೈಸ್ತ ಬಾಂಧವರ 'ಬೈಬಲ್' ಸತ್ಯವೇದವೆಂಬ ಹೆಸರಿನಿಂದ ಜಗಜಗಿಸುತ್ತಿರುವಾಗ, ಯಜುರ್ವೇದದ ೪೦ನೆಯ ಅಧ್ಯಾಯ ಅಲ್ಪ-ಸ್ವಲ್ಪ ಶಬ್ದ ಪರಿವರ್ತನದಿಂದ. **ಈಶಾವಾಸ್ಯೋಪನಿಷತ್ತಾಗಿದ್ದು,** "**ಈಶಾವಾಸ್ಯ**"ವಾಗಿದ್ದುದು "**ಈಸಾವಾಸ್ಯ**" ವೆಂಬ ಗಂಭೀರ ರೂಪಾಂತರ ತಾಳಿ,

'ಈಡ್'-ಎಂಬ ಧಾತುವಿನಿಂದ ಹೊರಟ, "ಐಶ್ವರ್ಯವಾನ್, ಸ್ವಾಮಿ"-ಎಂಬ ಎರಡು ಮುಖ್ಯ ಅರ್ಥಗಳಿಂದ ಯುಕ್ತವಾದ '**ಈಶ್**' ಶಬ್ದದ ತೃತೀಯಾ ವಿಭಕ್ತಿಯ ರೂಪ '**ಈಶಾ**'-ಎಂಬುದು. "**ಈಶಾವಾಸ್ಯಮಿದಂ**" ಮಂತ್ರದಲ್ಲಿನ [ಯಜುರ್ವೇದ:– 40. 1.] ಈ ಶಬ್ದಕ್ಕೆ' ಐಶ್ವರ್ಯಯುಕ್ತ ಸ್ವಾಮಿಯಾದ '**ಭಗವಂತನಿಂದ**'–ಎಂದು ಅರ್ಥವಾಗುತ್ತದೆ. ಆದರೆ, ಕ್ರೈಸ್ತಮತ ವೇದೋಕ್ತವೆಂದು ಸಾಧಿಸ ಹೊರಟ ಹಲ ಪಾದರಿಗಳೂ, 'ಇಸ್ಲಾಮ್' ವೇದ ಬಾಹಿರವಲ್ಲ-ಎಂದು ಸಿದ್ಧ ಪಡಿಸುವ ಪಣತೊಟ್ಟ ಮೌಲವಿಗಳೂ, '**ಜೀಸಸ್**–' ಎಂಬುದರ ಮೂಲ ರೂಪ "**ಈಸಾ**"-ಎಂದು ಪ್ರಸರಿಸಹತ್ತಿದರು; ಆರ್ಯರ ಸಂಧ್ಯಾ ವಿಧಾನದಲ್ಲಿ ಬರುವ "**ಶೃಣುಯಾಮ ಶರದಃ ಶತಮದೀನಾಃ ಸ್ಯಾಮ ಶರದಃ ಶತಂ**". [ಯಜು:– 36. 24.] ಈ ಮಂತ್ರ ಖಂಡವನ್ನು ಪದಚ್ಛೇದ ಮಾಡುವಾಗ "**ಶರದಃ ಶತಂ ಅದೀನಾಃ ಸ್ಯಾಮ**"-ಎಂಬಲ್ಲಿ ಸ್ವಲ್ಪ ಸ್ವತಂತ್ರವೃತ್ತಿ ತೋರುವವರಾಗಿ **ಶರದಃ ಶತಮದೀನಾಃ ಸ್ಯಾಮ**" - ಎಂದು ಬಿಡಿಸಿ. ವೇದಗಳಲ್ಲಿಯೇ '**ಮದೀನಾ**' ಎಂಬ ಮಾತಿದೆ, ಹೀಗೆ ಇಸ್ಲಾಮ್ ವೇದೋಕ್ತವೇ – ಎಂದು ತೃಪ್ತರಾದರು.

ಮಹಾನ್ ವ್ಯಾಕರಣಜ್ಞನೇ ಆಗಿರಬೇಕಾಗಿಲ್ಲ. ಸಾಧಾರಣ ವ್ಯಾಕರಣಜ್ಞನೂ. "ಈಶ" ತನ್ನ ತಾಲವ್ಯವನ್ನು ಕಳಚಿಹಾಕಿ, ದಂತ್ಯವನ್ನು ಅದಾವ ನಿಯಮಾನುಸಾರ ಪಡೆದು ಕೊಂಡಿತು? 'ಶತಂ' ಆದಾವ ನಿಯಮಕ್ಕನುಸಾರ ಅನುಸ್ವಾರವನ್ನುದಾನಮಾಡಿ, 'ಅದೀನಾ'ಕ್ಕೆ 'ಮದಿನಾ' ರೂಪ ಕೊಟ್ಟಿತು?"-ಎಂದು ಕೇಳಿದರೆ ಉತ್ತರ ಹೇಳಲು ಈ ಅಧಿಕಪ್ರಸಂಗಿಗಳ ಬಳಿ ಉತ್ತರವೇನೂ ಇಲ್ಲ. ಈ ಸಾಂಪ್ರದಾಯಿಕ ಕುಟಿಲ ಚೇಷ್ಟೆ ಕ್ರೈಸ್ತ ಮುಸ್ಲಿಮರಿಗೆ ಮಾತ್ರವಲ್ಲ 'ನಮ್ಮವರು ಎನಿಸಿಕೊಂಡ ಗುರುನಾನಕ ದೇವರು ವಿಮಾನದಲ್ಲಿ ಕುಳಿತು (ಸಾಕ್ಷಾತ್ ಇಂದ್ರನೇ ಕಳುಹಿಸಿದ್ದು ಅದು) ಸ್ವರ್ಗಾರೋಹಣ ಮಾಡುತ್ತಾರೆ. ಕಬೀರರು ಹೂವಾಗಿ ಸ್ವರ್ಗಕ್ಕೆ ತೆರಳುತ್ತಾರೆ. ಹಾಗೆಯೇ 'ಬಳಿತ್ಥಾ' ಎಂದು ಆರಂಭವಾಗುವ ಋಕ್ ಸೂಕ್ತದಲ್ಲಿ 'ಮಧ್ವ' 'ಮಧ್ವಾ' ಶಬ್ದವಿದೆ, ಅದರ ಅರ್ಥ, ವಿಭಕ್ತಿ ಏನಾದರೂ ಇರಲಿ. ನಮಗೆ ಯೋಚನೆ ಏಕೆ? ಹೇಗೂ 'ಮಧ್ವಾ' ಇದೆ. ಆನಂದತೀರ್ಥರನ್ನು 'ಮಧ್ವಾಚಾರ್ಯ' ರೆಂದು ಕರೆದರಾಯಿತು. ವೇದ ತನ್ನನ್ನು ವರ್ಣಿಸದಿದ್ದರೇನು? ವೇದ ದಲ್ಲಿರುವ ಯಾವುದಾದರೂ ಶಬ್ದವನ್ನು ತನ್ನ ಹೆಸರೆಂದರೆ ತೀರಿತಲ್ಲ! ಆ ಮೇಲೆ, ವೇದ ಗಳಲ್ಲಿ ಸಾಧಾರಣ ಹೆಸರು ಬರುವುದೆಂತು? ಆದಕಾರಣ ಮಧ್ವರು ಸಾಧಾರಣ ಜೀವರಲ್ಲ ವಾಯುದೇವರ ತೃತೀಯಾವತಾರ ಅವರು. ಹನುಮನಾಗಿ ರಾಮನ ಸೇವೆಗೈದರು. ಭೀಮನಾಗಿ ಕೌರವರನ್ನು ಸದೆಬಡಿದರು; ಕಡೆಗೆ ಮಧ್ವರಾಗಿ ಅದ್ವೈತವಿಶಿಷ್ಟಾದ್ವೈತಗಳನ್ನು ಹುಡಿಗೂಡಿಸಿದರು. ಹೀಗೆಂದರೂ ಒಳಿತಿತ್ತು"ಭೀಮಸ್ತು ಬಹುಭುಕ್ ಪಿತೋಃ" ಭೀಮನೋ ಆಹಾರದ ಮಹಾನ್ ಭಕ್ಷಕ ಎಂದು ದ್ವಿತಿಯಾವತಾರಕ್ಕೆ ಗೌರವ ಕೊಟ್ಟರು.

ಸರಿ. ಮಧ್ವ ಶಬ್ದವೇನೋಸಿಕ್ಕಿತು ಆದರೆ, ಆಚಾರ್ಯರ ಜೀವಿತದಲ್ಲಿ ವಾಸು ದೇವ. ಆನಂದತೀರ್ಥ – ಎಂಬೆರಡೆ! ನಾಮಗಳು ಕಾಣುವಾಗ ಈ ಮಧ್ವ ಶಬ್ದ ಆನಂದ

ತೀರ್ಥರನ್ನೇ ನಿರ್ದೇಶಿಸುವುದೆನ್ನಲು ಪ್ರಮಾಣ ? ಆದಕಾರಣ ಒಂದು ಪ್ರಮಾಣ ಬೇಕಲ್ಲ ? ಸರಿ ಬರೆದೇ ಇಟ್ಟರು:-

**ಮಧ್ವಿತ್ಯಾನಂದ ಉದ್ದಿಷ್ಟೋವೇತಿ ತೀರ್ಥ್ಣವುದಾಹೃತಃ||**

[ತ್ರಿವಿಕ್ರಮೀಯ ತತ್ವ ದೀಪಿಕಾ]

ಮಧು - ಎಂದರೆ ಆನಂದ ಅ-ಎಂದರೆ ತೀರ್ಥ. ಮಾನವನ ಮನ ಇನ್ನೆಷ್ಟು ಕೆಳಗಿಳಿದೀತು?

ಈ ಬಗೆಯ ಪ್ರಮಾಣಗಳಿಂದ ಯಾವುದಾದರೂ ಸಂಪ್ರದಾಯವನ್ನು ರಚಿಸಲಾದೀತೇ? ಎಂದರಿಯದೆ, "ಇವರು ಸ್ಥಾಪಿಸಿದ ದ್ವೈತ ಸಿದ್ಧಾಂತವೇ ಸರಿ" - ಎನ್ನಲು ಶಕ್ಯವೇ ? ಶಾಸ್ತ್ರಗಳ ಕೋಟಿಯ ಒಂದಂಶ ಕೂಡ ಪೂರ್ತಿಯಿಲ್ಲ; ಅದೂ ಎಷ್ಟೋ ಹೋಗಿ, ಅಷ್ಟಿಷ್ಟು ಉಳಿದಿದೆ ಎಂದಿದ್ದಾರ, ಇನ್ನು ನಿಶ್ಚಯಾತ್ಮಕತೆ ಹೇಗೋ ?

ಆಯಿತು. 'ಮಧ್ವ, ಮಧ್ವಾ' ಶಬ್ದಗಳು ಬಂದವಲ್ಲ. 'ಮಧ್ವ' ಎಂಬುದಕ್ಕೆ ಮಧುರ ಗುಣಯುಕ್ತ ಜಲ, [ನಿ:- 1. 12.], ಮಾಧುರ್ಯಾದಿಗುಣಯುಕ್ತ ಯೋಗಿಯರು, ವಿದುಷಿ ಯರು, ಮಧುರ ವಿಜ್ಞಾನ, ಮಧುರ ಗುಣವಂತರು, ಮಾನನೀಯರು, ವೈದ್ಯಶಾಸ್ತ್ರ ಸಿದ್ಧ ಮಧುರರಸ, ಮಧುರ ಸ್ವಭಾವದ ಜನರು - ಮೊದಲಾದ ಅರ್ಥಗಳಿವೆ. "ಮಧ್ವಾ" - ಎಂದು, ಷಷ್ಠೀ ವಿಭಕ್ತಿಯುಕ್ತವೆಂದು ಬಂದಾಗ, "ಮಧುರವಾದ ರಸದ," ಎಂದೂ, ತೃತೀಯಾ ವಿಭಕ್ತಿ ಬಂದಾಗ - "ಮಾಧುರ್ಯದಿಂದ, ಮಧುರ ವಿಜ್ಞಾನದಿಂದ" - ಎಂದೂ ಅರ್ಥಗಳು ಹೊರಡುತ್ತವೆ. "ಆನಂದ ತೀರ್ಥ" ಎಂದು ಗ್ರಹಿಸಲು ಪ್ರಮಾಣ ?

ಈ ಮಹಾತ್ಮ ಎಲ್ಲರಂತೆ ಹುಲುಮಾನವರಲ್ಲ; ವಾಯು ದೇವರ ತೃತೀಯಾವತಾರ ಎಂದು ಡಂಗೂರ ಹಾಕಲಾಯಿತು. ಕೇಳಿರಿ:-

ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾಣಿ ರೂಪಾಣ್ಯಲಂ |
ಬಟ್ ತದ್ದರ್ಶತ ಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ |
ವಾಯೋ ರಾಮವಚೋನಯಂ ಪ್ರಥಮಜಂ ಪೃಕ್ಷೋ ದ್ವಿತೀಯಂ ವಪುಃ
ಮಧ್ವೋ ಯತ್ತು ತೃತೀಯ ಮೇತದ ಮುನಾ ಭಾಷ್ಯಂ ಕೃತಂ ಕೇಶವೇ||

[ಅಣುಭಾಷ್ಯ:- 4. 4. ಉಪಸಂಹಾರ ಶ್ಲೋಕ,]

"ವೇದವಚನದಲ್ಲಿ ಯಾವನ ಮೂರು ದಿವ್ಯರೂಪಗಳು ಸುಂದರವಾಗಿ ವರ್ಣಿತವಾ ಗಿವೆಯೋ, ಅವನಲ್ಲಿ ದೇವದೇವನ ಮಹಾತೇಜಸ್ಸು ದರ್ಶನೀಯವಾಗಿ ಹೀಗೆಯೇ ಅಡ ಗಿದೆ, ರಾಮನ ಸಂದೇಶವನ್ನು (ಸೀತೆಗೆ) ಒಯ್ದ ಹನುಮಾನ್ ವಾಯುದೇವರ ಪ್ರಥ ಮಾವತಾರ. ಪೃಕ್ಷನು ದ್ವಿತೀಯಾವತಾರ; ಮಧ್ವನಾಮಕನು ತೃತೀಯಾವತಾರ." ಇದು ತಾತ್ಪರ್ಯ. ಸೃಷ್ಟ್ಯಾದಿಯಲ್ಲಿ ಉದಿತವಾದ ವೇದಗಳಲಿ. ಕೇವಲ ಏಳೆಂಟು ಶತ

ಮಾನಗಳ ಹಿಂದೆ ತಾನೇ ಜನ್ಮವೆತ್ತಿದ ಮಧ್ವರೆಲ್ಲಿ? ವೇದಗಳು ಪರಿಶುದ್ಧ ವಿಧಿ–ನಿಷೇಧಾತ್ಮಕ ಶಾಶ್ವತ ಮಾನವಮಾತ್ರರ ಶಾಸ್ತ್ರ; ಅವುಗಳಲ್ಲಿ ಇತಿಹಾಸವಿರುವುದು ಅಸಂಭವ.

ಪಾಠಕರು, ಯಾವುದೋ ಒಂದು ಮತವನ್ನು ಗುರಿಯಾಗಿಟ್ಟುಕೊಂಡು, ಖಂಡನದ ಈ ತೀಕ್ಷ್ಣ ಬಾಣವನ್ನು ಬಿಡುತ್ತಿದ್ದೇವೆ-ಎಂದು ಭಾವಿಸಬಾರದು. ÷ ಎಣ್ಣೆ ಇಲ್ಲದಾಗ ಮಸೀದಿಯಲ್ಲಿ ಹಣತೆಗೆ ನೀರನ್ನೇ ಎರೆದು ಉರಿಸಿದ ಶಿರಡಿಯ ಸಾಯಿಬಾಬ, ಪಾಠ್ಯ – ಪುಸ್ತಕ ಓದುವುದಂತಿರಲಿ; ಪುಸ್ತಕಗಳ ಹೆಸರನ್ನೂ ಅರಿಯದ ವಿದ್ಯಾರ್ಥಿಗಳಿಗೆ 'ನಾನು ಆಶೀರ್ವದಿಸಿದ್ದೇನೆ. ನೀವು M. A. ಪಾಸಾಗುವಿರಿ, ಹೋಗಿ."–ಎಂದು ಹೇಳಿ, ವಿದ್ಯಾರ್ಥಿಗಳನ್ನು ಫಸ್ಟ್ ಕ್ಲಾಸಿನಲ್ಲಿ ಪಾಸ್ ಮಾಡಿಸಿದ ಉಪಾಸನೀ ಬಾಬಾ; ಶಿವರಾತ್ರಿಯಂದು ಬಾಯಿನಿಂದ ಅಲ್ಲ-ಜಠರದಿಂದ ಶಿವಲಿಂಗವನ್ನು ತೆಗೆದುಕೊಟ್ಟ, ಶೂನ್ಯದಿಂದ ಸ್ಥೂಲವಾದ ಚಿನ್ನ-ಬೆಳ್ಳಿ-ಕಂಚು-ಹಿತ್ತಾಳೆಗಳ ದೇವತಾ ವಿಗ್ರಹಗಳನ್ನು ಭಕ್ತರಿಗಿತ್ತ ಪುಟ್ಟಪರ್ತಿಯ ಸತ್ಯ ಸಾಯಿಬಾಬಾ-ಎಂದು ಮೊದಲಾಗಿ ಚಮತ್ಕಾರದ ಕಗ್ಗಗಳಿಗೆ ಆಶ್ರಯ ಕೊಡುವ ಕಲಿಯುಗೀ ಬಾಬಾಗಳು-ಎಲ್ಲರ ಗೋಳೂ ಇದೇ; ಬಾಳೂ ಇದೇ. ದಾದಾ ಲೇಖರಾಜನ ಸಹಜ ಯೋಗಕ್ಕೆ ಪೆದ್ದು ಪೆದ್ದಾಗಿ ಸಿಕ್ಕಿ ಬೀಳುವ ಬ್ರಹ್ಮ ಕುಮಾರೀ-ಕುಮಾರರ ಹಾಗೂ ಕೊಲೆ ಮಾಡಿಸಲೂ ಹೇಸದ ಪ್ರಿಯರಂಜನ ಸರಕಾರರ (ಆನಂದ ಮೂರ್ತಿ) ಎಲ್ಲರ ಬಾಳೂ ಒಂದೇ. ತಾವೂ ಆತ್ಮದ್ರೋಹ ಮಾಡಿಕೊಳ್ಳುವುದು; ಮುಗ್ಧ ಜನತೆಯನ್ನೂ ಮೋಸಗೊಳಿಸುವುದು. ಇಲ್ಲದ ಯಾವುದೋ ಆಕಾಶ ನಗರಿ ವಿದ್ಯೆಯೇ ಅವನ ಮಹಾ ಶಾಸ್ತ್ರ. ಓದುವುದು ರೋದನಕ್ಕೆ ಮಾತ್ರ ಕಾರಣ. ಅಕ್ಷರ ವಿದ್ಯೆ ಲಕ್ಷವಿತ್ತರೂ ಬೇಡ. ಇಂದು ಯಾರಿಗೂ ಯಾರೂ ಗುರಿ ತೋರಿಸಬೇಕಾಗಿಲ್ಲ. ಎಲ್ಲರೂ ತಮ್ಮ ತಮ್ಮ ಮಾರ್ಗವನ್ನು ತಾವೇ ಗುರುತಿಸಿಕೊಳ್ಳಬೇಕು. ಏಕೆಂದರೆ, ಎಲ್ಲರಿಗೂ ಗುರಿಯೇ ಗುರು. ಉನ್ನತಾದರ್ಶವಿರಲಿ; ಮೇಲಕ್ಕೆಯೇ ಹತ್ತುವಿರಿ. ಮಧ್ಯಮ ಮಾರ್ಗ ಹಿಡಿದಲ್ಲಿ, ಗಗನ ವಿಹಾರಿಗಳಾಗಿಯೇ ಬಾಳನ್ನು ಕಳೆದೀರಿ.

ಅಲ್ಲಲ್ಲಿ ಖಂಡನ ಖಡ್ಗದ ಪ್ರಹಾರ ಸ್ವಲ್ಪ ಹೆಚ್ಚಾಯಿತೆನಿಸಿದರೆ, ನಾವು ಓದುಗರ ಕ್ಷಮೆ ಕೋರುತ್ತೇವೆ. ವಿಮರ್ಶನ ನಮ್ಮ ಮುಖ್ಯ ಧ್ಯೇಯ; ಖಂಡನವಲ್ಲ. ಓದುಗರೂ ಈ ದೃಷ್ಟಿಕೋನದಿಂದ ಓದಬೇಕೆಂದು ಕೋರುತ್ತೇವೆ. ಇನ್ನು ಮುಂದಣ ಮಂತ್ರದ ಭಾಷ್ಯಕ್ಕೆ ಕೈಹಾಕೋಣ.

**ಈ ಐದನೇ ಸೂಕ್ತದ ೯ ನೇ ಮಂತ್ರದ ಭಾಷ್ಯದ ಪೂರ್ಣವೆಚ್ಚ ಶ್ರೀಮತಿ ವೀಣಾದೇವಿ ಜೆ. ಡಿ. ಶೆಟ್ಟಿ, ಮಂಗಳೂರು ಇವರ ಸೇವೆ.**

---

÷ ಸಂಯೋಗವಶಾತ್ ನಾವೂ ಮಾಧ್ವ ಬ್ರಾಹ್ಮಣ ಕುಟುಂಬದರೇ ಆಗಿದ್ದೇವೆ. ಆದ ಕಾರಣ ಯಾರೋ ಸ್ಮಾರ್ತ ಬ್ರಾಹ್ಮಣರ ವಿಷವಮನವಿದೆಂದು ಭಾವಿಸಬಾರದು.

## ಸಂಹಿತಾ ವಿಭಾಗ

**ಮಾ ನೋ ಮರ್ತಾ ಅಭಿದ್ರುಹನ್ ತನೂನಾಮಿಂದ್ರ ಗಿರ್ವಣಃ।**

**ಈಶಾನೋ ಯವಯಾ ವಧಂ ॥೧೦॥**

**ಪದಪಾಠ:–** ಮಾ, ನಃ, ಮರ್ತಾ:, ಅಭಿ, ದ್ರುಹನ್ ತನೂನಾಂ, ಇಂದ್ರ, ಗಿರ್ವಣಃ ಈಶಾನ:, ಯವಯ, ವಧಂ॥

**ಅನ್ವಯ:–** ಗಿರ್ವಣಃ ಇಂದ್ರ: ಮರ್ತಾ: ನ: ತನೂನಾಂ ಮಾ ಅಭಿದ್ರುಹನ್, ಈಶಾನ: ವಧಂ ಯವಯ॥

ಶಬ್ದಾರ್ಥ:– [ಗಿರ್ವಣ:] ವೇದಗಳ ಸುಸಂಸ್ಕೃತವಾದ ಶಬ್ದಗಳಿಂದ ಸ್ವೀಕೃತನೂ, ಆರಾಧ್ಯನೂ ಆದ, [ಇಂದ್ರ] ಸರ್ವೇಶ್ವರನೇ ! [ಮರ್ತಾ:] ಮೃತ್ಯುವಿಗೆ ಈಡಾಗುವ ಮಾನವರು ಮತ್ತು ಅನ್ಯ ಪ್ರಾಣಿಗಳು, [ನ:] ನಮ್ಮ, [ತನೂನಾಂ] ಶರೀರಗಳಿಗೆ [ಮಾ ಅಭಿದ್ರುಹನ್] ಎತ್ತಣಿಂದಲೂ ದ್ರೋಹ ಮಾಡದಿರಲಿ. [ಈಶಾನ:] ಸಮರ್ಥನಾದ, ನೀನು, [ವಧಂ] ಹತ್ಯೆಯನ್ನು, ಹನನಸಾಧನವನ್ನು, [ಯವಯ] ದೂರೀಕರಿಸು.

**ತಾತ್ಪರ್ಯ:–** ಓ ಕರುಣಾಮಯ, ಸರ್ವಶಕ್ತಿಮಾನ್ ಪರಮಾತ್ಮನ್ ! ನಿನ್ನಿಂದಲೇ ಪ್ರಕಟವಾದ ವೇದವಾಣಿಗಳಿಂದ ಮನನೀಯನಾದ, ವರಣೀಯನಾದ ಪರಮೇಶ್ವರ ! ಮರಣ ಶೀಲರಾದ ಮಾನವರಾಗಲಿ, ಅನ್ಯ ಹಿಂಸಕ ಪಶುಪಕ್ಷಿಗಳಾಗಲಿ ನಮ್ಮ ಶರೀರಗಳಿಗೆ ಯಾವ ಕಡೆಯಿಂದಲೂ ದ್ರೋಹ ಬಗೆಯದಿರಲಿ. ನೀನು ಈಶಾನನು, ಎಂದರೆ - ಸಮಸ್ತ ಬ್ರಹ್ಮಾಂಡದ ಏಕಮಾತ್ರ ನಿಯಂತ್ರಣಕಾರೀ ಸ್ವಾಮಿಯಾಗಿದ್ದೀಯೆ. ವಧವನ್ನು, ಹನನಸಾಧನವನ್ನು ದೂರಮಾಡು.

**ಭಾಷ್ಯ:–** ಈ ಸೂಕ್ತದ ದೇವತೆಯೂ ಅದೇ ಇಂದ್ರನು. ಈ ಮಂತ್ರದಲ್ಲಿನ ಪ್ರಾರ್ಥನೆಯ ರೂಪವನ್ನು ಗಮನಿಸಿದಾಗ, ಶರೀರಕ್ಕೆ ತನ್ನದೇ ಆದ ಸ್ಥಾನವಿದೆ. ಆತ್ಮನಿಗೆ ಹೋಲಿಸಿದಾಗ, ಅವನ ಮುಂದೆ, ಚೇತನ ಸ್ವರೂಪನಾದ ಆ ಜೀವಾತ್ಮನ ಮುಂದೆ, ಜಡವಾದ ಈ ಶರೀರದ ಮಹತ್ತ್ವ ಅಲ್ಪವೆಂದು ಕಂಡರೂ ಕೂಡ, "ಇದು ಅವಸ್ತು; ಇದಕ್ಕೇನೂ ಮಹತ್ವವಿಲ್ಲ; ಇದು ನಶ್ವರವಾದ ಕಾರಣ ಇದಕ್ಕೆ ಮಹತ್ತ್ವವೇನೂ ಇಲ್ಲ. ಇದರ ಮೇಲಣ ಮೋಹವನ್ನು, ಆತ್ಮನತ್ತ ಚಿತ್ತ ಹೊರಳಿಸಿರಿ." - ಎಂಬ ಶುಷ್ಕ ವೇದಾಂತದ ಅಪಸ್ವರವನ್ನು ವೇದಗಳು ಒಪ್ಪುವುದಿಲ್ಲ. ವೇದಗಳ ಸ್ಪಷ್ಟ ಆದೇಶವಿದು:–

ಋಜೀತೇ ಪರಿವೃಂಗ್ಧಿ ನೋಽಶ್ಮಾ ಭವತು ನಸ್ತನೂಃ।
ಸೋಮೋ ಅಧಿ ಬ್ರವೀತು ನೋಽದಿತಿಃ ಶರ್ಮ ಯಚ್ಛತು॥
[ಋಗ್ವೇದ:- 6. 75. 12.]

ಭಕ್ತನು ಭಗವಂತನಲ್ಲಿಡುವ ಮೊರೆಯಿದು:- [ಋಜೀತೇ] ಸದಾ ಸತ್ಪಥದಲ್ಲಿಯೇ, ಸದಾಚಾರದಲ್ಲಿಯೇ ನಡೆಯಿಸುವ ಪರಮೇಶ್ವರ! [ನಃ] ನಮ್ಮನ್ನು [ಪರಿವೃಂಗ್ಧಿ] ಸರ್ವ ರೀತಿಯಿಂದಲೂ ಅಭಿವೃದ್ಧಿಗೊಳಿಸು. [ನಃ ತನೂಃ] ನಮ್ಮ ದೇಹಗಳು, [ಅಶ್ಮಾ ಭವತು] ಶಿಲೆಯಾಗಲಿ; ಕಲ್ಲಿನಂತೆ ಗಟ್ಟಿಮುಟ್ಟಾಗಿರಲಿ. [ಸೋಮಃ] ಸಾರಾಸಾರ ವಿಚಾರಧಾರಕ ನಾದ ವಿದ್ವಾಂಸನು, [ನಃ] ನಮಗೆ, [ಅಧಿ ಬ್ರವೀತು] ಅಧಿಕಾರವಾಣಿಯಿಂದ ಉಪದೇಶಿಸಲಿ. [ಅದಿತಿಃ] ಅಖಂಡತ್ವವು, ಪ್ರಾಮಾಣಿಕತೆಯು, ಬಾಹ್ಯಾಭ್ಯಂತರ ಸಮನ್ವಯ ಭಾವನೆಯು, [ಶರ್ಮ ಯಚ್ಛತು] ಸುಖ-ಶಾಂತಿಗಳನ್ನು, ನಿರ್ಭಯವಾದ ಆಶ್ರಯವನ್ನು, [ಯಚ್ಛತು] ಪ್ರದಾನ ಮಾಡಲಿ."

ವಿದ್ಯಾ - ಜ್ಞಾನಗಳಲ್ಲಿ, ಯೋಗಾಭ್ಯಾಸದಲ್ಲಿ, ಶಾಸ್ತ್ರಗಳಲ್ಲಿ ಬೇಕಾದರೆ, ನಾವು ಅಸ್ಥಿ ಪಂಜರ ಮಾತ್ರರಾಗಿದ್ದ ವಿರಜಾನಂದ ದಂಡಿಗಳನ್ನೇ ಆಚಾರ್ಯರನ್ನಾಗಿ ಆರಿಸಿಕೊಳ್ಳೋಣ. ಆದರೆ, ಶರೀರದಲ್ಲಿ ಮಾತ್ರ ಮಹರ್ಷಿ ದಯಾನಂದ ಸರಸ್ವತಿಗಳನ್ನೇ ನಾವು ನಮ್ಮ ಆದರ್ಶ ವಾಗಿ ಮಾಡಿಕೊಳ್ಳಬೇಕು. ಆಗಲೇ ನಮ್ಮ ಬಾಳಿಗೆ ಬೆಳಕು ಬಂದಿತು; ಬಲ ಬಂದೀತು; ಮಾನವತ್ವದ ಮೊಗ್ಗು ಹೂವಾಗಿ ಅರಳೀತು. ನಶ್ವರವೆಂದ ಮಾತ್ರಕ್ಕೆ ಕಾಯ ಕಾರ್ಯಕ್ಕೆ ಬಾರದ ಭಾರವೆಂದು ಭಾವಿಸುವ ಬೌದ್ಧಿಕ ವೃತ್ತಿ ನಮ್ಮ ಬಳಿ ಸುಳಿಯದಿರಲಿ. ಈ ಅಥರ್ವಣೀ ಶ್ರುತಿ ಸದಾ ಕಿವಿಗಳಲ್ಲಿ ಮೊಳಗುತ್ತಿರಲಿ:-

ಬ್ರಹ್ಮಣಾ ತೇ ಬ್ರಹ್ಮಯುಜಾ ಯುನಜ್ಮಿ ಹರೀ ಸಖಾಯಾ ಸಧಮಾದ ಆಶೂ।
ಸ್ಥಿರಂ ರಥಂ ಸುಖಮಿಂದ್ರಾಧಿ ತಿಷ್ಠನ್ ಪ್ರಜಾನನ್ ವಿದ್ವಾನ್ ಉಪ ಯಾಹಿ ಸೋಮಂ॥
[ಅಥರ್ವವೇದ:-20 86. 1.]

"[ಇಂದ್ರ] ಓ ಇಂದ್ರಿಯವಾನ್ ಜೀವ! [ತೇ] ನಿನ್ನನ್ನು, [ಬ್ರಹ್ಮಯುಜಾ] ಸರ್ವ ಶ್ರೇಷ್ಠ-ಸರ್ವಜ್ಯೇಷ್ಠ ಪರಮಾತ್ಮನ ಅಭಿವರ್ಣನೆಯಿಂದ ಕೂಡಿರುವ, [ಬ್ರಹ್ಮಣಾ] ವೇದ ಜ್ಞಾನದಿಂದಲೂ, [ಸಧಮಾಧೇ] ಒಂದೇ ಕಾಯದಲ್ಲಿರುವ, [ಸಖಾಯಾ] ನಿಮಗೆ ಎಲ್ಲರಿ ಗೆಯೂ ಮೈತ್ರೀ ಭಾವನಾಲಂಕೃತನಾದ, [ಆಶೂ] ಪ್ರಮಾದಾಲಸ್ಯಗಳಿಗೆ ಓಲದೆ. ವೇಗ ದಿಂದ ಕಾರ್ಯ ಮಾಡುವ, [ಹರೀ] ಕೆಟ್ಟದನ್ನು ದಿಟ್ಟತನದಿಂದ ದೂರಕ್ಕೆ ಅಟ್ಟುವ ಮತ್ತು ಆತ್ಮನ ಉತ್ಕರ್ಷಕ್ಕಾಗಿ, ಒಳಿತನ್ನು ಎಲ್ಲಿದ್ದರೂ ಬಳಿ ತಂದು ಒಪ್ಪಿಸುವ ಪಂಚ ಜ್ಞಾನೇಂದ್ರಿಯ ಗಣವನ್ನೂ, ಪಂಚ ಕರ್ಮೇಂದ್ರಿಯ ಗಣವನ್ನೂ, [ಯುನಜ್ಮಿ] ದೇಹ ದಲ್ಲಿ ಹೂಡಿ ಕೊಡುವೆನು. [ಸ್ಥಿರ] ದೃಢವೂ, [ಸುಖಂ] ಸುಖಕರವೂ ಆದ, [ರಥಂಅಧಿ] ಮುಂದು ಮುಂದಕ್ಕೆಯೇ ನಡೆಯುವ ದೇಹವೆಂಬ ರಥದಲ್ಲಿ, [ಅಧಿ ತಿಷ್ಠನ್] ಏರಿದವನಾಗಿ

[ಪ್ರಜಾನನ್] ಜಗತ್ತಿನ ಪ್ರಕಾಶಿತ-ಅಪ್ರಕಾಶಿತ ರಹಸ್ಯಗಳನ್ನೆಲ್ಲಾ ಅರಿಯುತ್ತಾ, [ವಿದ್ವಾನ್] ವಿದ್ವಾಂಸನಾಗಿ, [ಸೋಮಂ] ವಿರಾಟ್-ವಿಶ್ವದ ಸಾರ-ಸ್ವರೂಪನೂ, ಸರ್ವೋತ್ಪಾದಕನೂ ಆದ ಭಗವಂತನ, [ಉಪಯಾಹಿ] ಬಳಿ ಸಾರು." ಇದರಿಂದ, ಶರೀರದ ಮಾಹಾತ್ಮ್ಯ ವೆಷ್ಟಿದೆ-ಎಂದು ಸುಲಭವಾಗಿಯೇ ಊಹಿಸಬಹುದಲ್ಲವೇ ? ದೇಹವೆಂಬ ಈ ರಥದ ಬಗೆಗೆ ವೇದಗಳು ಸೂಚಿಸುವುದು ಬಹಳವಿದೆ. ಗ್ರಂಥ - ವಿಸ್ತಾರ ಭಯದಿಂದ ಈ ಉದ್ಧರಣ ಗಳಿಂದಲೇ ಓದುಗರು ತೃಪ್ತರಾಗಬೇಕೆಂದು ಬಿನ್ನೈಸುತ್ತೇವೆ ಬಿನ್ನಹದ ಮಗ್ಗುಲಲ್ಲಿಯೇ ಲೇಖನಿಗೆ ಸಂಯಮದ ತತ್ತ್ವವನ್ನು ಅನ್ವಯಿಸಲಾರದೆ, ಈ ಮಂತ್ರವನ್ನು ಹೇಳಿಯೇ ಬಿಡುತ್ತೇವೆ:–

**ಉದ್ಯಾನಂ ತೇ ಪುರುಷ ನಾವಯಾನಂ ಜೀವಾತುಂ ತೇ ದಕ್ಷತಾತಿಂ ಕೃಣೋಮಿ ।**
**ಆ ಹಿ ರೋಹೇಮಮಮೃತಂ ಸುಖಂ ರಥಮಥ ಜಿವ್ರಿರ್ವಿದಥಮಾ ವದಾಸಿ॥**
[ಅಥರ್ವವೇದ:- 8 ,1. 6.]

"[ಪುರುಷ] ದೇಹವೆಂಬ ಪುರದಲ್ಲಿ ನೆಲೆಸಿರುವ ಜೀವಾತ್ಮನ್ ! [ಉತ್+ಯಾನಂ] ಊರ್ಧ್ವಗತಿಯೇ, [ತೇ] ನಿನ್ನ ಪಾಲಿನದು, [ಅವಯಾನಂ ನ] ಅಧೋಗತಿ ನಿನ್ನದೆಂದಿಗೂ ಅಲ್ಲ. [ತೇ] ನಿನಗೆ, [ಜೀವಾತುಂ] ಜೀವನ ಭೋಗವನ್ನೂ, [ದಕ್ಷತಾತಿಂ] ನೈಪುಣ್ಯವನ್ನೂ [ಕೃಣೋಮಿ] ಕೊಡುತ್ತಲಿದ್ದೇನೆ. [ಹಿ] ನಿಜವಾಗಿಯೂ, [ಇಮಂ] ಈ [ಅಮೃತಂ] ಪಕ್ಷಾಘಾತ- ಕ್ಷಯಾದಿ ವ್ಯಾಧಿಗಳಿಗೆ ಸಿಕ್ಕದೆ, ಅಂಗ-ಅಂಗದಲ್ಲಿಯೂ. ಅವಯವ-ಅವಯವ ದಲ್ಲಿಯೂ ಸ್ವಸ್ಥವಾಗಿರುವ, ಜೀವಂತವಾಗಿರುವ [ಸುಖಂ ರಥಂ] ಸುಖಪ್ರದವಾದ ಈ ದೇಹವೆಂಬ ರಥವನ್ನು. [ಆ ರೋಹ] ಏರು. [ಅಥ] ಆಮೇಲೆ, [ಜಿವ್ರಿಃ] ವಯೋ ವೃದ್ಧನೂ, ಜ್ಞಾನವೃದ್ಧನೂ ಆಗಿ, [ವಿದಥಂ] ಸರ್ವಜ್ಞನಾದ ಪರಮಾತ್ಮ, ವಿವಿಧ ವಿಜ್ಞಾನ, ಯಜ್ಞ, ಜೀವನ ಸಂಘರ್ಷ - ಮೊದಲಾದುವುಗಳನ್ನು ಕುರಿತು, [ಆ ವದಾಸಿ] ಉಪದೇಶಿಸುತ್ತಾ ಹೋಗು."

ಈ ದೇಹರಥ ತುಚ್ಛವೇ ? ಅದು ತುಚ್ಛವೇ ಆಗಿದ್ದಲ್ಲಿ, ಐಹಿಕಾಮುಷ್ಮಿಕ, ಸಾಂಸಾರಿಕ - ಪಾರಮಾರ್ಥಿಕ ವಿದ್ಯಾಗ್ರಹಣದ ಸಾಧನವಾದ ಬುದ್ಧಿಯ ಗತಿ ಏನು ? ತುಚ್ಛ ದೇಹದಲ್ಲಿನ ಬುದ್ಧಿಯೂ ತುಚ್ಛವೇ ತಾನೇ ? ಅಥರ್ವವೇದ **"ಅಷ್ಟಾ ಚಕ್ರಾ ನವದ್ವಾರಾ ದೇವಾನಾಂ ಪೂರಯೋಧ್ಯಾ"** [ಅಥರ್ವ:– 10. 2. 21. 1. -"ಮಲ ದ್ವಾರದ ಬಳಿಯಿರುವ ವೀರ್ಯ ರಕ್ಷಣಾ ಸಾಧಕವಾದ **ಮೂಲಾಧಾರ**, 2. ಅದರಿಂದ ನಾಲ್ಕಂಗುಲ ಮೇಲಿದ್ದು, ಪ್ರೇಮ - ಪ್ರಮೋದನೆಗೆ ಸಾಧಕವಾದ **ಸ್ವಾಧಿಷ್ಠಾನ,** 3. ಹೊಕ್ಕುಳ ಹಿಂದಿದ್ದು ದೈಹಿಕ - ಮಾನಸಿಕ ದುಃಖವನ್ನು ಕುಗ್ಗಿಸಲು ನೆರವಾಗುವ **ಮಣಿ ಪೂರಕ,** 4. ಹೃದಯದ ಹಿಂದಿದ್ದು ಪ್ರಾಣ-ಶಕ್ತಿಯನ್ನು ದೃಢೀಕರಿಸುವ **ಸೂರ್ಯ ಚಕ್ರ,** 5. ಆಮಾಶಯಕ್ಕಿಂತ ಸ್ವಲ್ಪ ಮೇಲಿದ್ದು, ತಾರ್ಕಿಕ-ಮಾನಸಿಕ ಶಕ್ತಿಗಳ ವರ್ಧನಕ್ಕೆ

ಸಹಾಯಕವಾದ **ಮನಶ್ಚಕ್ರ**, 6. ಹೃದಯ ಸ್ತಂಭನ-ಸ್ಥಗನ-ಉತ್ತೇಜನಗಳಿಗೆ ರೂಪ ಕೊಡುವ, ಹೃದಯದ ಬಳಿಯೇ ಇರುವ **ಅನಾಹತ ಚಕ್ರ**, 7. ಕಂಠದ ಮೂಲ ದಲ್ಲಿದ್ದು, ಬಹಿರ್ಮುಖೀ ವೃತ್ತಿಯನ್ನು ಮರೆ ಮಾಡಿ, ಆಂತರಿಕ ಶಕ್ತಿಯನ್ನೆಚ್ಚರಿಸಲು ನೆರವಾಗುವ **ವಿಶುದ್ಧಿ ಚಕ್ರ**, ಮತ್ತು 8. ಲಲಾಟದ ಹಿಂದಿದ್ದು, ಈಶ್ವರ – ಜೀವರ ಸಾಕ್ಷಾತ್ಕಾರಕ್ಕೆ ನೆರವಾಗುವ **ಭ್ರಮರ–ಗುಹಾ**–ಎಂಬ ಎಂಟು ಚಕ್ರಗಳಿಂದಲೂ, [ನವ ದ್ವಾರಾ] ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ಮೂಗ್ಗಳು, ನಾಲಗೆ ಹಾಗೂ ಮನೋ - ಬುದ್ಧಿಗಳೆಂಬ ಒಂಬತ್ತು ಬಾಗಿಲುಗಳನ್ನೂ, ಅನ್ಯೇಂದ್ರಿಯಗಳ ದೈವೀ ಶಕ್ತಿ ಯಿಂದಲೂ ಕೂಡಿದ, [ಅಯೋಧ್ಯಾ] ಹಿಂಸೆಗೆ ಈಡಾಗಬಾರದಾದ [ದೇವಾನಾಂ ಪೂ॰] ದೇವತಾ ನಗರಿ ಈ ದೇಹ." – ಎಂಬುದೇ ತಾತ್ಪರ್ಯ. ಹಗಲಿರುಳೂ ನಾವೆಲ್ಲಾ ಅದೆಷ್ಟು ಸಾರಿ 'ಪುರುಷ' ಎಂಬ ಶಬ್ದವನ್ನು ಬಳಸುತ್ತೇವೋ ? ಆದರೆ, ಜೀವನನ್ನೂ 'ಪುರುಷ' – ಎನ್ನುವುದೇಕೆ – ಎಂದೆಷ್ಟು ಜನ ಬಲ್ಲರು ? ಆಲಿಸಿರಿ:-

**ಯೋ ವೈ ತಾಂ ಬ್ರಹ್ಮಣೋ ವೇದಾಮೃತೇನಾವೃತಾಂ ಪುರಂ।**
**ತಸ್ಮೈ ಬ್ರಹ್ಮ ಚ ಬ್ರಾಹ್ಮಾಶ್ಚ* ಚಕ್ಷುಃ ಪ್ರಾಣಂ ಪ್ರಜಾಂದದುಃ॥**
[ಅಥರ್ವವೇದ:- 10. 2. 29.]

"ಅಮರನಾದ ಈಶ ನಿರ್ಮಿತವಾದ, ಅವನಿಂದ ಆವೃತವಾದ ಪರಬ್ರಹ್ಮನ ಆ ಪುರ ವನ್ನು ಯಾವನು ಬಲ್ಲನೋ, ಆವನಿಗೆ ಪರಮೇಶ್ವರನೂ ಅವನ ಮಕ್ಕಳಾದ ವಿದ್ವಾನ್ ಜೀವರೂ (ಸತ್ರ) ದರ್ಶನ ಶಕ್ತಿಯನ್ನೂ, ಪ್ರಾಣಶಕ್ತಿಯನ್ನೂ, ಉತ್ಕೃಷ್ಟ ಸಂತತಿಯನ್ನೂ ಕೊಡುತ್ತಾರೆ." ದೇಹದ ರಚನೆ, ಅಂಗೋಪಾಂಗಗಳ ಕಾರ್ಯಗಳು – ಎಲ್ಲವನ್ನೂ ಅರಿತ ವಿದ್ವಾಂಸರು ದೀರ್ಘಜೀವನದ ರಹಸ್ಯವನ್ನು ತಿಳಿಸುತ್ತಾರೆ. ಎಷ್ಟು ಉಪಕಾರಿ ಈ ದೇಹ ? **"ಪುರಂ ಯೋ ಬ್ರಹ್ಮಣೋ ವೇದ ಯಸ್ಯಾಃ ಪುರುಷ ಉಚ್ಯತೇ"** [ಅಥರ್ವ:- 10. 2. 28;] - "ಯಾವುದರ ಸಂಪರ್ಕದಿಂದಲೇ, ದೇಹವೆಂಬ 'ಪುರ'ದ ಸಂಯೋಗದಿಂದಲೇ ಜೀವನೂ, ಬ್ರಹ್ಮಾಂಡರೂಪೀಪುರದ ಸಂಪರ್ಕದಿಂದಲೇ ಈಶ್ವರನೂ 'ಪುರುಷ'ರೆನಿಸುತ್ತಾರೋ- ಅದನ್ನರಿಯಿರಿ." ಹೀಗೆ ದೇಹದ ವೈಶಿಷ್ಟ್ಯವನ್ನು ವೇದ ಸಾರುತ್ತದೆ. **"ತಸ್ಯಾಂ ಹಿರಣ್ಯಯಃ ಕೋಶಃ ಸ್ವರ್ಗೋ ಜ್ಯೋತಿಷಾವೃತಃ"** [ಅಥರ್ವ:- 10. 2. 31.] - "ಆ ಪುರದಲ್ಲಿ ಹಿತಕಾರಿಯೂ, ರಮ್ಯವೂ ಪರಬ್ರಹ್ಮನ ಜ್ಯೋತಿಯಿಂದಾವೃತವಾದ, '**ಸ್ವರ್ಗ**' ಎಂದರೆ

---

* 1934ರಲ್ಲಿ ನಾವು ವಾಲ್ಟೈರ್‌ನಿಂಬ ಹಾವಡಾ (Hourah Calcutta Ry Station ಕ್ಕೆ ಹೋಗುತ್ತಿದ್ದಾಗ ಬ್ರಾಹ್ಮಸಮಾಜಿಯೊಬ್ಬರು ನಮ್ಮೊಂದಿಗೆ ವಾದಿಸುತ್ತಾ "ಆರ್ಯಸಮಾಜ ಕ್ರೈಸ್ತ-ಮುಸ್ಲಿಮರ ವಿರುದ್ಧ ಪ್ರತಿಕ್ರಿಯೆ ಮಾತ್ರ. ಆದರೆ 'ಬ್ರಾಹ್ಮ ಸಮಾಜ' ವೇದೋಕ್ತ, ಕೇಳಿರಿ – ಎಂದು ಈ ಮಂತ್ರವನ್ನುಚ್ಚರಿಸಿದ್ದರು ! ತಮ್ಮ ಮತೀಯ ಸಂಸ್ಥೆಗೆ ಆದ್ಯಸ್ಥಾನ ಕೊಡುವ ಕಪಿಚೇಷ್ಟೆ ಒಂದು ಸಂಪ್ರದಾಯದ ಸಂಪತ್ತಲ್ಲವಷ್ಟೇ ?

ಸಾತ್ತ್ವಿಕ ಸುಖಸಾಧಕವಾದ ಹೃದಯುವೆಂಬ ಕೋಶವಿದೆ."; "**ತಸ್ಮಿನ್ ಯದ್ಯಕ್ಷ್ಮಮಾತ್ಮನ್ವತ್ ತದ್ವೈ ಬ್ರಹ್ಮವಿದೋವಿದುಃ**" [ಅಥರ್ವ:- 10. 2. 32.] - "ಆ ಹೃದಯುವೆಂಬ ಕೋಶದಲ್ಲಿ ಜೀವಾತ್ಮನೊಂದಿಗೆಯೇ ಯಾವ ನಿತ್ಯಸತ್ಯವಾದ ತತ್ತ್ವವಿದೆಯೋ ಅದನ್ನೇ ಬ್ರಹ್ಮಜ್ಞರು ತಿಳಿದುಕೊಳ್ಳುತ್ತಾರೆ."

ನಿಜ; ಬ್ರಹ್ಮ ಎಲ್ಲೆಡೆಯೂ, ಅಣು-ರೇಣು-ತೃಣ-ಕಾಷ್ಠಗಳಲ್ಲಿಯೂ ವಿರಾಜಿಸುತ್ತಿದ್ದಾನೆ. ಆದರೆ ಬಾಹ್ಯ ಜಗತ್ತಿನಲ್ಲಿ, ಸ್ಥೂಲರೂಪದ ಮೂರ್ತಿ ಮೊದಲಾದ ಪ್ರತೀಕಗಳಲ್ಲಿ ಈಶದರ್ಶನ ಮಾಡೋಣವೆಂದರೆ, ಈ ಮನ ಹಿಡಿಯುವುದು ಆ ಪ್ರತೀಕದಲ್ಲಿರುವ ವ್ಯಾಪಕನನ್ನಲ್ಲ; ಸ್ಥೂಲಪ್ರತೀಕವನ್ನೇ ! ಮೂರ್ತಿಪೂಜಾ ಮಗ್ನರು ಮುಗ್ಗರಿಸುವ ಮೆಟ್ಟಲಿದೇ. "ಪ್ರಾರಂಭಿಕ ಪಾಠದೀ ಮೂರ್ತಿಪೂಜೆ ಚಿತ್ತದ ಏಕಾಗ್ರತಾ ಸಾಧನೆಗೆ." – ಎನ್ನುತ್ತಾರೆ. ಗ್ರಹಚಾರಕ್ಕೆ, ಅವರ ಇಡೀ ಜೀವನವೇ ಈ ಪ್ರಾರಂಭಿಕ ಪಾಠ ಕಲಿಯುತ್ತ-ಕಲಿಯುತ್ತಲೇ "ಇತಿ ಶ್ರೀ" ಹಾಡಿ ಬಿಡುತ್ತದೆ. "ನಾನು ಜಗನ್ಮೂಲ ಪರಬ್ರಹ್ಮನನ್ನು ಕಾಣಬೇಕೆಂದು ಕಣ್ಮುಚ್ಚಿದಾಗಲೆಲ್ಲಾ ಈ ಕಾಳೀಮಾತೆಯ ಸ್ಥೂಲ ವಿಗ್ರಹವೇ ಮುಂದಾಗಿ ಅಡ್ಡನಿಲ್ಲುತ್ತದೆ." ಎಂದಿದ್ದಾರೆ ಮೂರ್ತಿಪೂಜಕರ ಅದ್ವಿತೀಯ ಮಹಾನಾಯಕ ಶ್ರೀ ರಾಮಕೃಷ್ಣ ಪರಮಹಂಸರು. ಅವರ ಸತ್ತ್ವ-ಸಾಮರ್ಥ್ಯವೂ ಪ್ರಾರಂಭಿಕ ಪಾಠದಲ್ಲೇ ಪರ್ಯಾವಸಾನವಾಗಿ ಹೋಯಿತು ! ಅದ್ವೈತಿಯು ತಾನೇ ಬ್ರಹ್ಮವಾಗಿರುವಾಗ ಉಪಾಸ್ಯನ್ಯಾರೋ ? ಆ ಪ್ರಸಂಗ ಇಲ್ಲಿ ಬೇಡ.

ಆದರೆ, ಹೃದಯದ ಮಾತೇ ಬೇರೆ. ಅದರಲ್ಲಿ ಜೀವಾತ್ಮನಿದ್ದಾನೆ; ಅವನು ಪ್ರಕೃತಿಗಿಂತ ಸ್ಥೂಲನಲ್ಲವಾದ ಕಾರಣ ಅವನಲ್ಲಿ ಪ್ರಕೃತಿಯಿಲ್ಲ; ಇರುವುದು ಅವನಿಗಿಂತ ಸೂಕ್ಷ್ಮವಾದ ಪರಮಾತ್ಮ ಮಾತ್ರ. ಅಲ್ಲಿ ಬ್ರಹ್ಮಸಾಕ್ಷಾತ್ಕಾರ ವೈಜ್ಞಾನಿಕ ಸತ್ಯ; ನೈಜವಾದ ಮಾರ್ಗ. ಅದೇ ಕಾರಣದಿಂದ ವೇದ "**ವೇನಸ್ತತ್ ಪಶ್ಯನ್ನಿಹಿತಂ ಗುಹಾಸತ್**" [ಯಜುರ್ವೇದ:– 32. 8. ] "ಜ್ಞಾನಿಯು ಹೃದಯಗುಹಾಸ್ಥಿತನೂ, ಅವ್ಯಕ್ತನೂ ಆದ ಪರಮಾತ್ಮನನ್ನು ಕಾಣುತ್ತಾನೆ." - ಎನ್ನುತ್ತಿದೆ. ವಿಗ್ರಹಾರಾಧನೆ ವೇದವಿರುದ್ಧ. ಕಲಾದರ್ಶನಕ್ಕೆ ಬೇಕಾದರೆ ಹಳೇಬೀಡು - ಬೇಲೂರು ಸೋಮನಾಥಪುರಗಳಿಗೆ, ಮೂಡಬಿದರೆ - ಕಾರ್ಕಳ - ವೇಣೂರು - ಕನ್ಯಾಕುಮಾರಿ - ತಿರುಪತಿಗಳಿಗೆ, ಪ್ರಕೃತಿ ಸೌಂದರ್ಯದ ಅವಲೋಕನಕ್ಕೆ ಬದರೀ - ಕೇದಾರ - ಅಮರನಾಥಗಳಿಗೆ ಯಾರೂ ಹೋಗಬಹುದು; ಆದರೆ, ಅಲ್ಲಿ ದೇವದರ್ಶನ ವಿಶಿಷ್ಟ ರೂಪದಲ್ಲಾಗುವುದು - ಎಂಬ ಭಾವನೆಯಿಂದಲ್ಲ.

ಓಡಾಡುವ ದೇವಮಂದಿರವಾದ ಈ ಮಾನವ ಶರೀರ ಸಾಧಾರಣ ವರವೇ ? ಅದಕ್ಕೆ ಕ್ಷತಿ ಬಾರದಿರಲಿ. ಯಾವ ಜೀವರಿಂದಲೂ ಈ ಈಶ್ವರೀಯ ವರದಾನ ಕುಂಠಿತವಾಗದಿರಲಿ ಎಂದು ಸರ್ವಶಕ್ತನಲ್ಲಿ ಕೇಳಿಕೊಳ್ಳುವುದರ ಮಹತ್ತ್ವ ಈಗ ಓದುಗರ ಹೃದಯಗಳನ್ನು ಸ್ಪರ್ಶಿಸಿರಬಹುದು.

"ತನ್ ವಿಸ್ತಾರೇ" - ಎಂಬ ಧಾತುವಿನ ಕಡೆ ದೃಷ್ಟಿ ಬೀರಿದಾಗ, ದೇಹ ಮಾತ್ರವಲ್ಲ.

ಮಾನವ ಜನ್ಮವನ್ನು ನಿಜವಾಗಿ ವಿಸ್ತಾರಗೊಳಿಸಲು ಬೇಕಾದ ಆಧ್ಯಾತ್ಮಿಕ ಸಂಪತ್ತು ಜ್ಞಾನ - ವಿಜ್ಞಾನಗಳ ನಿಧಿ, ಖಾದ್ಯ - ಪೇಯಗಳು, ಉಡಿಗೆ - ತೊಡಿಗೆಗಳು, ಗೃಹ - ನಗರ - ರಾಷ್ಟ್ರಗಳು - ಎಲ್ಲವೂ 'ತನು'ಗಳೇ. ಒಬ್ಬ ಶಕ್ತಿಶಾಲಿಯು ತನ್ನ ಸ್ವಾರ್ಥಕ್ಕಾಗಿ ನೂರಾರು ಜನ ಬಲಹೀನರ ಸುಲಿಗೆಗೆ ಕೈಹಾಕಿದರೆ, ಈ ನಮ್ಮ ನೆಚ್ಚಿನ ನೆಲ ನಾಕವಾಗುವ ಬದಲು ನರಕವೇ ಆದೀತು. **"ಸ ನಾಕಮಭ್ಯಾರೋಹತಿ ಯತ್ರ ಶುಲ್ಕೋನ ಕ್ರಿಯತೇ ಅಬಲೇನ ಬಲೀಯಸೇ."** [ಅಥರ್ವ:– 3. 29. 3. ] - ಎಲ್ಲಿ ದುರ್ಬಲನು ಬಲಶಾಲಿಗೆ ಶುಲ್ಕವನ್ನು, ಕಪ್ಪಕಾಣಿಕೆಗಳನ್ನು, ಸುಂಕ - ತೆರಿಗೆಗಳನ್ನು ಕೊಡಬೇಕಾಗುವುದಿಲ್ಲವೋ, ಅದೇ ನಾಕ ಎಂದರೆ ಸ್ವರ್ಗ." - ಎನ್ನುತ್ತಿವೆ ವೇದ. "ದಂಡಧಾರೀ ಭಂಡನೇ ಗಂಡಸರಿಗೂ ಗಂಡ. ಪುಂಡನ ಪುಂಡಾಟಿಕೆಯೇ ಪರಮಪಾವನ ಧರ್ಮ." ಎಂಬ ಉಪ ಸಿದ್ಧಾಂತವೇ ನಾಸ್ತಿಕ್ಯ, ಕಮ್ಯುನಿಷ್ಟ್, ಸೋಷಲಿಸ್ಟ್; ಇಂಪೀರಿಯಲಿಸ್ಟ್, ಕ್ಯಾಪಿಟಲಿಸ್ಟ್" ಮೊದಲಾದ, ಕೊಟ್ಟಕೊನೆಗೆ ಮಾನವತತ್ವವನ್ನೇ ತೀಡಿಹಾಕುವ ವಾದಗಳ ಉದ್ಗಮಸ್ಥಾನ. ಅನ್ಯಾಯದ ಪ್ರತಿಕ್ರಿಯೆ, ಆ ಅನ್ಯಾಯಕ್ಕಿಂತ ಹೆಚ್ಚು ಕೇಡಿನ ಬುಗ್ಗೆ. ಕೇವಲ ಹಣ - ಕಾಸುಗಳನ್ನಲ್ಲ; ಸ್ಥಾನ - ಮಾನಗಳನ್ನೂ, ಶಾಸನ - ಅಧಿಕಾರಗಳನ್ನೂ ವಂಚನೆಯಿಂದ ಕಸಿದುಕೊಳ್ಳುವುದೂ ಕೂಡ ಅಭಿದ್ರೋಹವೇ ! ಜಗದುತ್ಪಾದಕ - ಪಾಲಕ - ಪ್ರಳಯ ಕರ್ತನೂ, ವೇದಗಳ ಶಾಶ್ವತಾರ್ಥಯುಕ್ತವೂ, ಸಾರ್ವ - ದೇಶಿಕ - ಸಾರ್ವಕಾಲಿಕ ಸಾರ್ವಭೌಮವೂ ಆದ, ಎಂದಿಗೂ ಕುಂದು - ಕೊರತೆಗಳಿಗೆ, ಲೋಪ - ದೋಷಗಳಿಗೆ ತಿಲ ಮಾತ್ರವೂ ಎಡೆಗೊಡದ ವೇದವಾಣಿಗಳು ಮಾತ್ರ ಆ ಅನುಪಮ, ಅಪ್ರಮೇಯ - ಅದ್ವಿತೀಯ ಅನಂತ ಶಕ್ತಿಸ್ವರೂಪನನ್ನು ಯಥಾರ್ಥವಾಗಿ ಬಣ್ಣಿಸಬಲ್ಲವು. ಆ ಗಿರ್ವಣನು ವೇದವಾಕ್ಕಿನಿಂದಲೇ ಗ್ರಾಹ್ಯನಾಗುವ ಪರಮಾತ್ಮನು ಯಾವನೂ, ಯಾವನಿಗೂ, ಯಾವುದೇ ರೀತಿಯಲ್ಲಿಯೂ ದ್ರೋಹ ಬಗೆಯದೆ, ಎಲ್ಲರೂ, ಎಲ್ಲರನ್ನೂ, ಯಾವಾಗಲೂ, ಎಲ್ಲ ರೀತಿಯಿಂದಲೂ ಮೈತ್ರಿಯ ಹಾಗೂ ಪ್ರೇಮದ ದೃಷ್ಟಿಯಿಂದಲೇ ನೋಡುವಂತಾಗಲಿ. **"ಮಿತ್ರಸ್ಯ ಚಕ್ಷುಷಾ ಸಮೀಕ್ಷಾಮಹೇ."** [ಯಜು:– 36. 18. - "ನಾವು ಒಬ್ಬರನ್ನೊಬ್ಬರು ಮಿತ್ರದೃಷ್ಟಿಯಿಂದಲೇ ನೋಡೋಣ." ; **"ವಿಶ್ವಾ ಪಭೂತು ದುರ್ಮತಿ."** [ಋಕ್:– 1. 130. 7. 3.] - "ಎಲ್ಲ ದುರ್ಮತಿಯೂ ದೂರ ಸರಿದು ಹೋಗಲಿ." ; **"ಸೇಧತಂ ದ್ವೇಷ:"** [ಋಗ್ವೇದ:–] "ನರನಾರಿಯರೇ ! ದ್ವೇಷ ಭಾವನೆಯನ್ನೇ ಬಲಿಹಾಕಿರಿ." - ಎಂಬ ವೇದವಾಣಿಗಳನ್ನು ಕಡೆಗಣಿಸಿ, ಧರ್ಮವನ್ನುಳಿಸಿಕೊಳ್ಳಲು ಸಾಧ್ಯವಾದೀತೇ ?

ಈ ಮಂತ್ರದ ಉತ್ತರಾರ್ಧವೂ ಮಹದದ್ಭುತವೇ. "ಇವನು ನನ್ನ ಮತವನ್ನು ಒಪ್ಪನು, ಆದಕಾರಣ, ಇವನ ಸರ್ವನಾಶವನ್ನು ಮಾಡಿಬಿಡು." - ಎಂಬ ಪ್ರಾರ್ಥನೆ ವೈದಿಕ ಧರ್ಮೀಯರ ನಾಲಗೆಗಳ ಮೇಲೆ ಸುಳಿಯದು. **"ಈಶಾಸೋ ಯೇವಯಾ ವಧಂ."** - ಈ ಮೂರು ಮಾತುಗಳಲ್ಲಿ ಮಾನವೀಯತೆಯನ್ನೇ ಎರಕ ಹೊಯ್ದಂತಿದೆ. ಭಗವಂತನು

'ಈಶಾನ'ನು "ಅವನು ನಮ್ಮ ಜೀವಿತಕ್ಕೆ ಯಾರಿಂದಲೂ ದ್ರೋಹವಾಗದಂತೆ ನೋಡಿಕೊಳ್ಳಲಿ." - ಎಂಬ ಆತ್ಮ ನಿವೇದನವೂ ಸಹಜವೇ. ಆದರೆ, 'ಯು'ಧಾತುವಿನಿಂದ ರೂಪ ತಾಳಿರುವ 'ಯವಯ' ಎಂಬ ಶಬ್ದ ಎರಡು ಅರ್ಥಗಳಿಂದ ಕೂಡಿದೆ. **"ಯು ಮಿಶ್ರಣಾಮಿಶ್ರಣಯೋಃ"** - ಎಂದರೆ 'ಯು' ಧಾತುವಿಗೆ ಮಿಶ್ರಣ ಮತ್ತು ಅಮಿಶ್ರಣ - ಎಂಬ ವಿರುದ್ಧಾರ್ಥಗಳಿವೆ. "ಕೂಡಿಸು, ಸೇರಿಸು" - ಇದೊಂದರ್ಥ. "ದೂರೀಕರಿಸು, ಬೇರೆ ಮಾಡು." - ಇದು ಇನ್ನೊಂದರ್ಥ. ಈ ಪ್ರಕರಣದಲ್ಲಿ ಯಾವ ಅರ್ಥ ಗ್ರಾಹ್ಯ ? ವೈದಿಕ ಧರ್ಮ "ಕಣ್ಣಿಗೆ ಕಣ್ಣು, ಕಿವಿಗೆ ಕಿವಿ" - ಎಂಬ, "ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುವ ಕಾಡಾಡಿಗಳ ಕುರುಡು ಕುಣಿತವಲ್ಲ. **"ಮಾ ನಃ ಶಂಸೋ ಅರರುಷೋ ಧೂರ್ತಿಃ ಪ್ರಣಕ್ ಮರ್ತ್ಯಸ್ಯ। ರಕ್ಷಾ ಣೋ ಬ್ರಹ್ಮಣಸ್ಪತೇ॥** [ಋಗ್ವೇದ:– 1. 18. 3.] ವೈದಿಕಧರ್ಮದ ವೈಶಿಷ್ಟ್ಯ ಸೂಚಿಸಲು. ಭಗವಂತನನ್ನು ಸಂಬೋಧಿಸಲು ಬಳಸಿರುವ ಶಬ್ದವನ್ನೇ ನೋಡಿರಿ. "[ಬ್ರಹ್ಮಣಸ್ಪತೇ] ವೇದಜ್ಞಾನದ ರಕ್ಷಕನೇ ! ಅದರ ಸ್ವಾಮಿಯೇ ! [ನಃ ಶಂಸಃ] ನಮ್ಮ ಯಶಸ್ಸು, [ಮಾ ಪ್ರಣಕ್] ನಾಶ ಹೊಂದದಿರಲಿ. [ಅರರುಷಃ] ಮಹಾ ಹಿಂಸಕನಾದ, ಅತಿ ಸ್ವಾರ್ಥಿಯಾದ, ಮಹಾನ್ ಕ್ರೋಧಿಯಾದ, [ಮರ್ತ್ಯಸ್ಯ] ಮಾನವನ, [ಧೂರ್ತಿಃ] ಧೂರ್ತತನ, [ಪ್ರಣಕ್] ನಾಶವಾಗಲಿ, [ನಃ] ನಮ್ಮನ್ನು, [ರಕ್ಷ] ರಕ್ಷಿಸು" ನಮ್ಮ ನಿರ್ಮಲ ಯಶಃಪಟದ ಮೇಲೆ ಕಳಂಕ ಬಾರದಿರಲಿ. "ಹಾಗೆ ನಮ್ಮ ಕೀರ್ತಿಯನ್ನು ಧೂಳೀಪಟವಾಗಿಸಲು ಬಯಸುವ ಮಾನವ ನಷ್ಟ-ಭ್ರಷ್ಟನಾಗಿ ಹೋಗಲಿ; ಅವನು ಹುಡಿಗೂಡಿಹೋಗಲಿ." - ಎಂಬುದು ವೈದಿಕಧರ್ಮೀಯರ ಪ್ರಾರ್ಥನೆಯೇ ? ಅಲ್ಲ: ಮೂರು ಕಾಲಕ್ಕೂ ಅಲ್ಲ. ವೈದಿಕಧರ್ಮ ಸರ್ವರ ಉದ್ಧಾರಕ್ಕಾಗಿ ಭಗವಂತನಿಂದ ಉಪದಿಷ್ಟವಾಗಿದೆ. ನಮ್ಮ ನಿಂದಕನ ನಾಶದಿಂದ, ನಮ್ಮ ಆಧ್ಯಾತ್ಮಿಕ ಉತ್ಕರ್ಷವಾಗದು; ಆ ನಿಂದಕನ ಉದ್ಧಾರವೂ ಆಗದು. **"ನಿದಂ ನಿದಂ ಪವಮಾನ ನಿ ತಾರಿಷ ಆವಿಸ್ತೇ ಶುಷ್ಮೋ ಭವತು ಪ್ರಿಯೋ ಮದಃ"** [ಋಗ್ವೇದ:– 9. 79. 5.] - "[ಪವಮಾನ] ಓ ಪತಿತ ಪಾವನ ಪರಮೇಶ್ವರ ! [ನಿದಂ ನಿದಂ] ನಿಂದಕ-ನಿಂದಕನನ್ನೂ, [ನಿತಾರಿಷ] ನಿಶ್ಚಯವಾಗಿ ಕಡೆ ಹಾಯಿಸು; ಪಾಪಸಾಗರವನ್ನು ದಾಟಿಸಿಬಿಡು. [ತೇ] ನಿನ್ನ, [ಪ್ರಿಯಃ] ಪ್ರೀತಿಯೂ [ಮದಃ] ಆನಂದವೂ, [ಶುಷ್ಮಃ] ಶಕ್ತಿಯೂ, [ಆವಿಃ ಭವತು] ಬೆಳಕಿಗೆ ಬರಲಿ; ಪ್ರಕಟವಾಗಲಿ. ಅಥವಾ, [ತೇ ಪ್ರಿಯಃ ಮದಃ ಶುಷ್ಮಃ] ನಿನ್ನ ಪ್ರಿಯವೂ, ಆನಂದಕರವೂ ಆದ ಶಕ್ತಿಯು, [ಆವಿಃ ಭವತು[ ಅಭಿವ್ಯಕ್ತವಾಗಲಿ." ಹೇಗೆ ಹೇಳಿದರೂ ಭಾವನೆ ಮಾತ್ರ ಅದೇ. ವೇದಾನುಯಾಯಿಯಲ್ಲದವನು ಹೀಗೆ ಪ್ರಾರ್ಥಿಸುವುದನ್ನು ನಾವಿನ್ನೂ ಕಾಣಬೇಕಾಗಿದೆ. ಮಿರ್ಜಾ ಗುಲಾಂ ಅಹಮದ್ 'ಕಾದಿಯಾನಿಗೂ ಪಂಡಿತ ಲೇಖರಾಮರಿಗೂ ಶಾಸ್ತ್ರಾರ್ಥವಾಗಬೇಕಾಗಿದ್ದ ಕಾಲವದು. 80 ವರ್ಷಗಳ ಹಿಂದಣ ಮಾತು. ಶಾಸ್ತ್ರಾರ್ಥದ ಮುನ್ನ ಕಾದಿಯಾನೀ ಅಲ್ಲಾಹ್‌ನಲ್ಲಿ ಪ್ರಾರ್ಥನೆ ಮಾಡುತ್ತಾರೆ - "ಓ ಮೇರೇ ಮಾಲಿಕ್ ! ಯಹ ಪಂಡತ್ ತುಝ್ಕೋ, ತೇರೇ ರಸೂಲಿಲ್ಲಾ ಸಲ್ಲಿಲ್ಲಾ ಅಲೈಹೇವ ಸಲ್ಲಂ ಕೋ, ತೇರೀ ಕುರ್ ಆನ್ ಶರೀಫ್ ಕೋ ಔರ್ ಮುಝು ತೇರೇ ಆಖಿರೀ ಪೈಗಂಬರ್ ಕೋ ಕಬೂಲ್

ನಹೀಂ ಕರತಾ, ಇನೇ ಬುರೀ ಮೌತ್ ದೇ."—"ಓ ನನ್ನ ಪ್ರಭೋ! ಈ ಪಂಡಿತನು ನಿನ್ನನ್ನೂ ನಿನ್ನ ರಸೂಲ್ ಮುಹಮ್ಮದ್ ಪೈಗಂಬರರನ್ನೂ. ನನ್ನ ಪವಿತ್ರ ಕುರಾನನ್ನೂ ಮತ್ತು ನಿನ್ನ ಕೊನೆಯ ಪೈಗಂಬರನಾದ ನನ್ನನ್ನೂ ಒಪ್ಪುವುದಿಲ್ಲ. ಇವನಿಗೆ ದುರ್ಮರಣವನ್ನು ಕೊಡು!" ಪಂಡಿತ ಲೇಖರಾಮರು ಪ್ರಾರ್ಥಿಸುತ್ತಾರೆ:—"ಐ ಮೇರೇ ಪರಮ ಪಿತಾ! ಮೇರಾ ಯಹ ಪ್ಯಾರಾ ಭಾಯೀ ತೇರೇ ವೇದಮುಖದ್ದಸ್ ವ ಮುಕಮ್ಮಿಲ್ ಕಾ ಕಾಯಲ್ ನಹೀ. ಇಸ್‌ಕೇ ದಿಲ್ ಓ ದಿಮಾಗ್ ಮೇಂ ಅಸಲೀ ರೋಶನೀ ಭರ್ ದೇ ತಾಕಿ ಯಹ್ ಇನ್ಸಾನಿಯತ್ ಕೋ ಪಹಚಾನ್ ಲೇ." — "ಓ ಎನ್ನ ಪರಮಪಿತ! ಈ ನನ್ನ ಪ್ರಿಯ ಸೋದರ ನಿನ್ನ ಪವಿತ್ರ ಹಾಗೂ ಪೂರ್ಣ ವೇದಗಳ ಅನುಯಾಯಿಯಾಗಿಲ್ಲ. ಇವನ ಮಾನವತ್ವವನ್ನು ಗುರುತಿಸು ವಂತೆ ಇವನ ಹೃದಯದಲ್ಲಿ ಮತ್ತು ಬುದ್ಧಿಯಲ್ಲಿ ವಾಸ್ತವಿಕ ಪ್ರಕಾಶವನ್ನು ತುಂಬಿಸು." ಇಸ್ಲಾಮೀ–ವೈದಿಕ ಪ್ರಾರ್ಥನೆಗಳ ನಡುವಣ ವ್ಯತ್ಯಾಸವನ್ನು ಓದುಗರೇ ಗುರುತಿಸಲಿ. ಹವನ ಕ್ರಿಯೆಯ ಅಷ್ಟಾಜ್ಯಾಹುತಿ ಮಂತ್ರಗಳಲ್ಲಿ ಮೊದಲನೆಯದೇ—"**ವಿಶ್ವಾ ದ್ವೇಷಾಂಸಿ ಪ್ರಮುಮುಗ್ಧ್ಯಸ್ಮತ್**"—"ಸಕಲ ದ್ವೇಷಗಳನ್ನೂ ನಮ್ಮಿಂದ ಕಳಚಿ ಹಾಕು"—ಎಂದೇ ಕೊನೆಯಾಗುತ್ತದೆ. ಮಂತ್ರದ ಅರ್ಥವೇನು, ಅದರ ವಿನಿಯೋಗದ ಸ್ಥಾನವೇನು?" ಎಂಬು ದನ್ನೇ ತಿಳಿಯದ ಪೌರಾಣಿಕ ಪುರೋಹಿತರು, ಮೃತಕ ಶ್ರಾದ್ಧಕ್ಕೆ ಅನ್ವಯಿಸುವ ಮಂತ್ರವೆಂದು ಈ ಮಂತ್ರವನ್ನು ಹೇಳುತ್ತಾರೆ:—

**ಯೇ ಸಮಾನಾಃ ಸಮನಸೋ ಜೀವಾ ಜೀವೇಷು ಮಾಮಕಾಃ ।**
**ತೇಷಾಂ ಶ್ರೀರ್ಮಯಿ ಕಲ್ಪತಾಮಸ್ಮಿನ್ ಲೋಕೇಶತಂ ಸಮಾಃ ॥**

[ಯಜು:–೧೯. ೪೬.]

"[ಯೇ] ಯಾವ, [ಸಮಾನಾಃ] ಸಮಾನ ಸ್ಥಾನಮಾನಾರ್ಹರೋ, [ಸಮನಸಃ] ಮನೋಬಲ ಯುಕ್ತರೋ, [ಜೀವೇಷು] ಜೀವ ಮಾತ್ರರಲ್ಲಿ, [ಮಾಮಕಾಃ] ಮಮತಾ ಭಾವ ಸಂಪನ್ನರಾದ, [ಜೀವಾಃ] ಜೀವರಾಗಿರುತ್ತಾರೋ, [ತೇಷಾಂ] ಅವರ [ಶ್ರೀ] ಸಂಪತ್ತು ಹಾಗೂ ಸೌಂದರ್ಯ, [ಅಸ್ಮಿನ್ ಲೋಕೇ] ಈ ಲೋಕದಲ್ಲಿ, [ಶತಂ ಸಮಾಃ] ನೂರು ವರ್ಷಗಳಷ್ಟು ಕಾಲ, [ಮಯಿ ಕಲ್ಪತಾಂ] ನನ್ನಲ್ಲಿ ಉತ್ಪನ್ನವಾಗಲಿ." ಅಥವಾ, [ಯೇ ಜೀವಾಃ ಜೀವೇಷು ಸಮಾನಾಃ ಸಮನಸಃ] ಯಾವ ಜೀವರು ಜೀವ ಮಾತ್ರರಲ್ಲಿ ಸಮತಾಭಾವ ಸಂಪನ್ನರೂ, ಸಮಾನ–ಮನೋಯುಕ್ತರೂ ಆಗಿರುತ್ತಾರೋ, [(ತೇ) ಮಾಮಕಾಃ] ಅವರು ನನ್ನವರು" ಎಂದೂ ಅರ್ಥ ಮಾಡಬಹುದು. ಮಂತ್ರದಲ್ಲಿಲ್ಲದ 'ತೇ' ಎಂಬ ಸರ್ವ–ನಾಮ ವನ್ನು ತಂದು ಹಾಕಬೇಕಾಗುತ್ತದ. ಅಷ್ಟು ಮಾಡಿದ ಮೇಲೆಯೂ ತಾತ್ಪರ್ಯದಲ್ಲಾಗಲೀ, ಭಾವನೆಯಲ್ಲೇ ಆಗಲಿ, ಅಂತರವೇನೂ ಕಂಡು ಬರುವುದಿಲ್ಲ. ಮೃತಕ ಶ್ರಾದ್ಧದ ಪರಿಪಾಟಿಯೇ ವೇದೋಕ್ತವಲ್ಲ—ಎಂದಮೇಲೆ, ಆ ಅವೈದಿಕ ಕ್ರಿಯೆಯಲ್ಲಿ ವೇದಮಂತ್ರವನ್ನು ವಿನಿಯೋಗಿ ಸುವ ಪ್ರಶ್ನೆಯಾದರೂ ಎಲ್ಲಿ ಹೇಗೆ ಉದ್ಭವಿಸೀತು? ವೇದೋಕ್ತವಾದ ಪುನರ್ಜನ್ಮದ ಸಿದ್ಧಾಂತವನ್ನೂ, ಕರ್ಮಫಲವಾದವನ್ನೂ ಅಂಗೀಕರಿಸಿದ ಮೇಲೆ, ಮೃತಕ ಶ್ರಾದ್ಧದ ಈ ವಿಧಿಗೆ ಸ್ಥಾನವಾದರೂ ಎಲ್ಲಿ? ತಂದೆ ಪುಣ್ಯಾತ್ಮನೇ ಆಗಿದ್ದರೆ, ಅವನ ಊರ್ಧ್ವಗತಿಗೆ ಮಗನು ಮಾಡುವ ಶ್ರಾದ್ಧ ಬೇಕಾಗಿಲ್ಲ. ತಂದೆ ಪಾಪಾತ್ಮನೇ ಆಗಿದ್ದರೆ, ಮಗನು ಮಾಡುವ 'ಶ್ರಾದ್ಧ'ವೆಂಬ ಲಂಚಕ್ಕೆ ಕೈಚಾಚಿ ಭಗವಂತ ತನ್ನ ಶಾಶ್ವತ ನ್ಯಾಯದ ವಿಧಿಗೆ ವಿರುದ್ಧವಾಗಿ, ಪಾಪಿಗೆ ಸದ್ಗತಿ ಕೊಡುವ ಸಂಭವ ಇಲ್ಲವೇ ಇಲ್ಲ. "**ಶ್ರಾದ್ಧಂ ಚಾಹರಹಃ ಕುರ್ಯಾತ್**"

"ಶ್ರಾದ್ಧವನ್ನು ಪ್ರತಿ ದಿನವೂ ಮಾಡಬೇಕು"—ಎಂಬ ಮನುಪ್ರೋಕ್ತ ಆದೇಶದಂತೆ ಮಾಡಬೇಕು. ಆದರೆ ಅದು, ಮೃತರಿಗಲ್ಲ; ಜೀವಂತ ಮಾತಾ ಪಿತೃಗಳಿಗೆ ಅನ್ವಯಿಸುವ ವಿಧಿ. ಶ್ರದ್ಧೆಯಿಂದ ಜೀವಂತ ತಾಯ್ತಂದೆಗಳಿಗೆ ಮಕ್ಕಳು ಸೇವೆ ಮಾಡಬೇಕು. ಶ್ರದ್ಧೆಯಿಂದ ಮಾಡುವ ಸೇವೆಯೇ ಶ್ರಾದ್ಧ. ಜೀವ, ದೇಹದಿಂದ ಹೊರಗಾದ ಮೇಲೆ, ಪಿತೃತ್ವ, ಮಾತೃತ್ವ ಮೊದಲಾದ ಸಂಬಂಧಗಳೇ ಮುರಿದುಬೀಳುತ್ತವೆ. ಆ ಸ್ಥಿತಿಯಲ್ಲಿ ತಂದೆ ಯಾರು? ತಾಯಿ ಯಾರು? ಜಡದೇಹ–ಚೇತನ ಜೀವರು ಒಟ್ಟಿಗಿದ್ದಾಗ ರೂಪ ತಾಳಿದ್ದ ವ್ಯಕ್ತಿತ್ವ, ಶೂನ್ಯದಲ್ಲಿ ಸೇರಿಹೋಯಿತು. ಕೇವಲ ಜೀವನು ಯಾರಿಗೂ, ಯಾವ ನೆಂಟನೂ ಅಲ್ಲ. ಕೇವಲ ದೇಹವೂ ಯಾರಿಗೂ ಏನೂ ಅಲ್ಲ. ನೆಂಟಸ್ತಿಕೆ ಹೊಂದಿದ್ದ ವ್ಯಕ್ತಿತ್ವವೇ ಇಲ್ಲವೆಂದ ಮೇಲೆ, ತಂದೆ, ತಾಯಿ—ಮೊದಲಾದ ಸಂಬಂಧಗಳೂ ಕಳಚಿ ಬಿದ್ದವು. ಮತ್ತಾರಿಗೆ ಶ್ರಾದ್ಧ? ಶ್ರಾದ್ಧದಲ್ಲಿ ಬಗೆ–ಬಗೆಯ ಭಕ್ಷ್ಯ–ಭೋಜ್ಯಗಳನ್ನು ಕಬಳಿಸುವ ಪುರೋಹಿತರ ವಿಶಾಲವಾದ ಉದರಗಳೇ ಪೋಸ್ಟ್ ಬಾಕ್ಸ್‌ಗಳೆಂದು ತಿಳಿದರೂ, ಸಂಬಂಧವೇ ಇಲ್ಲದ ಜೀವರಿಗೆ ಯಾವ ವಿಳಾಸ ಬರೆದು ಈ ಪಾರ್ಸೆಲ್‌ಗಳನ್ನು ರವಾನಿಸುವುದು?

ಕೋಟಿ–ಕೋಟಿ ಜನ ಯಾವುದೋ ನಂಬಿಕೆಯಿಂದ ನಡೆಯಿಸಿಕೊಂಡು ಬಂದ ಒಂದು ಭಾವನಾತ್ಮಕ ಪದ್ಧತಿಯನ್ನು ಅಪಹಾಸ್ಯಕ್ಕೀಡು ಮಾಡುವುದು ನಮ್ಮ ಉದ್ದೇಶ್ಯವಲ್ಲ. ಕರ್ಮಫಲವಾದ ಪುನರ್ಜನ್ಮವಾದಗಳಿಗೂ ಈ ಶ್ರಾದ್ಧ ಪದ್ಧತಿಗೂ ಸಮನ್ವಯ ಸಾಧ್ಯವೇ?—ಎಂದು ವಿವೇಕವಾನ್ ಪಾಠಕರು ಆಲೋಚಿಸಲಿ—ಎಂಬ ಭಾವನೆಯಿಂದ ಈ ಟೀಕೆಯನ್ನು ಮಾಡಿದ್ದೇವೆ. ತಂದೆ, ತಾಯಿ ಮತ್ತು ಇತರ ದಿವಂಗತರನ್ನೂ ಕೃತಜ್ಞತೆಯಿಂದ ಸ್ಮರಿಸುವುದು ಹಾಗೂ ಅವರ ಹೆಸರುಗಳನ್ನು ಚಿರಸ್ಥಾಯಿಯಾಗಿ ಮಾಡಲು ಸುಯೋಗ್ಯ–ಸತ್ಪಾತ್ರರಿಗೂ, ಲೋಕ ಸೇವಾ ನಿರತ ಸಂಘಗಳಿಗೂ ದಾನ ಮಾಡುವುದು ತಪ್ಪಲ್ಲ. ಅವರು ತೀರಿಕೊಂಡು ಎಷ್ಟು ಕಾಲವಾಯಿತು, ಅವರಿಂದ ನಮಗಾದ ಉಪಕಾರಗಳೇನು—ಎಂದು ಸ್ಮರಿಸಲು. ಅವರು ತೀರಿಕೊಂಡ ದಿನ ಹವನ ಹೋಮಾನುಷ್ಠಾನ–ಭಗವದುಪಾಸನ ಮಾಡುವುದನ್ನೂ—ಪ್ರತಿದಿನ ಮಾಡಲಾಗದ ಕಾರಣ—ಒಪ್ಪಿಕೊಳ್ಳಬಹುದು. ಆದರೆ, ನಾವು ಇಲ್ಲಿ ಮಾಡುವ ಯಾವುದೇ ಕರ್ಮಕಲಾಪಗಳಿಂದ ಮೃತರಾದವರ ಆತ್ಮಗಳಿಗೆ ಶಾಂತಿ ಸಿಕ್ಕುವುದೆಂಬ ನಂಬಿಕೆ ಮಾತ್ರ ನೂರಕ್ಕೆ ನೂರಂಶ ಅವೈದಿಕ; ಅಗ್ರಾಹ್ಯ. ಮುಂದೆ ಪಿತೃದೇವತಾಕ ಸೂಕ್ತಗಳಲ್ಲಿ ಶ್ರಾದ್ಧದ ಸತ್ಯರೂಪದ ಮೇಲೆ ಪ್ರಕಾಶ ಬೀರಲಿರುವ ಕಾರಣ, ಈ ವಿಷಯಕ್ಕೆ ಇಲ್ಲಿಯೇ ಪೂರ್ಣ ವಿರಾಮ ಹಾಕೋಣ.

"**ಯುವಯ**"ದ ಬಗೆಗೆ ಹೇಳುತ್ತಿದ್ದೆವಲ್ಲ. ಯು–ಧಾತು ಮಿಶ್ರಣ ಅಮಿಶ್ರಣ—ಎಂಬೆರಡೂ ಅರ್ಥಗಳೂ ಇರುವುದರಿಂದ, "ನಮ್ಮ ತನುಗಳಿಗೆ ಮರ್ತ್ಯರಾರೂ ಅಭಿದ್ರೋಹ ಮಾಡದಿರಲಿ"—ಎಂಬ, ಪೂರ್ವಾರ್ಧದ ಅರ್ಥವನ್ನು ಗಮನಿಸಿ, "ವಧವನ್ನು ಅಥವಾ ಕೊಲೆಯ ಸಾಧನವನ್ನು ದ್ರೋಹ ಬಗೆಯುವ ಮರ್ತ್ಯರಿಂದ ದೂರದಲ್ಲಿಡು. ಅವರಿಗೆ ಅದು ಸಿಕ್ಕದಂತೆ ಮಾಡು"—ಎಂದೇ ಗ್ರಹಿಸಬೇಕಾಗುತ್ತದೆ. "**ವಧಂ ಯುವಯ**" "ಕೊಲೆಯನ್ನು ದೂರೀಕರಿಸು; ಕೊಲೆಯ ಸಾಧನಗಳನ್ನು ದೂರೀಕರಿಸು" ಹೇಗೆ ಹೇಳಿದರೂ ಭಾವನೆ ಒಂದೇ.

ಶ್ರೀ॥ ಮಧ್ವರು ಈ ಮಂತ್ರಕ್ಕೆ "**ಮಾ ಮರ್ತಾ ನಸ್ತನೂನಾಂತು ದ್ರೋಗ್ಧಾರಃ ಸ್ಯುಃ ಕಥಂ ಚನ। ಈಶೋಽಸ್ಯಪಾಕುರು ವಧಂ ತೇನ ನೋ ಮುಕ್ತಿದಾನತಃ। ಮಾನುಷೇಭ್ಯಸ್ತನೂನಾಂ ಚ ನೈವ ನೈವ ನ ಸುರ್ವಿಪತ್ತಯ। ಕಾಲೇನ ದೈವತಃ ಪ್ರಾಪ್ತಃ ಸ್ಯಾದದೇಹತ್ವತೋ ವಧಃ ॥**"—"ಮಾನವರು ನಮ್ಮ ದೇಹಗಳಿಗೆ ದ್ರೋಹಿಗಳಾಗದಿರಲಿ. ನೀನು ಈಶ್ವರನು. ಮೋಕ್ಷ ದಾನದಿಂದ ಅಂತಹ ವಧವನ್ನು ದೂರ ಮಾಡು. ಮಾನವರಿಂದ ನಮ್ಮ ಕಾಯಗಳಿಗೆ ವಿಪತ್ತುಗಳು ಬಾರದಿರಲಿ. ಕಾಲಕ್ರಮದಲ್ಲಿ, ಸಂಯೋಗ ಯೋಗದಿಂದ ಲಭಿಸುವ ಅಶರೀರತ್ವದಿಂದ ವಧ ಅಥವಾ ವಧೆ ಬರಲಿ."

ಇದೊಂದು ಸಹಜ ಆತ್ಮನಿವೇದನ. ಅದೆಷ್ಟು ಲಕ್ಷ ಯೋನಿಗಳನ್ನು ದಾಟಿದ ಮೇಲೆ ಸಿಕ್ಕುವುದೋ ಈ ಮಾನವೀ ತನು. ಜ್ಞಾನಾರ್ಜನ–ಮೋಕ್ಷಪ್ರಾಪ್ತಿಗಳಿಗೆ ನೆರವಾಗಬಲ್ಲ ಈ ದೇಹವೂ ಪೂರ್ಣಾಯುಷ್ಯವನ್ನು ಪಡೆಯದೆ ಪೊಡವಿಯಲ್ಲಿ ಪುಡಿಯಾಗಿ ಹೋದರೆ, ಮುಕ್ತಿ ಇನ್ನೆಷ್ಟು ದೂರವಾದೀತೋ?

ಶ್ರೀ॥ ಸಾಯಣರೂ "**ಹೇ ಗಿರ್ವಣ ಇಂದ್ರ! ವಿರೋಧಿನೋ ಮನುಷ್ಯಾ ಅಸ್ಮದೀಯಾಂ ಶರೀರಾಣಾಂ ಅಭಿತೋ ದ್ರೋಹಂ ಮಾ ಕುರ್ಯುಃ। ಸಮರ್ಥಸ್ತ್ವಂ ವಧಂ ವೈರಿಭಿಃ ಸಂಪದ್ಯಮಾನಂ ಅಸ್ಮತ್ ಪ್ರಥಕ್ಕುರು.**"—ಸ್ತುತಿವಾಕ್ಕುಗಳಿಂದ ಸ್ತುತ್ಯನಾದ ಇಂದ್ರನೇ! ವಿರೋಧೀ ಮಾನವರು ನಮ್ಮ ದೇಹಗಳಿಗೆ ಯಾವ ರೀತಿಯಿಂದಲೂ ಕೇಡೆಣಿಸದಿರಲಿ. ಸಮರ್ಥನಾದ ನೀನು ವೈರಿಗಳಿಂದ ಸಿದ್ಧಿಸಬಹುದಾದ ವಧೆಯನ್ನು ನಮ್ಮಿಂದ ದೂರಮಾಡು" ಎಂದಿದ್ದಾರೆ.

ಆದರೆ, ಮಹರ್ಷಿಯ ಆರ್ಷದೃಷ್ಟಿ, ಈ ಅತಿ ಸಾಧಾರಣವಾಗಿ ಕಾಣುವ ಪ್ರಾರ್ಥನೆಯ ಹಿಂದೆ ಅಡಗಿರುವ ಅತಿ ಗಂಭೀರ ಧಾರ್ಮಿಕ ನೀತಿಯೊಂದನ್ನು ನೋಡುತ್ತದೆ. **'ತನೂನಾಂ'** ಎಂಬಾಗ **'ಶರೀರ'** ಎಂದಿಷ್ಟೇ ಹೇಳದೆ, ಆರ್ಷದೃಷ್ಟಿಯಿಂದ **'ತನ ವಿಸ್ತಾರೇ'** ಎಂಬ ಗೂಢತತ್ತ್ವವನ್ನು ಕಂಡು, ಜೀವನದ ಅನ್ಯ ಸಂಪತ್ತಿ–ಸಾಮಗ್ರಿ–ಸೌಕರ್ಯಗಳನ್ನೂ ವಿವರಿಸಿರುವುದನ್ನು ಓದುಗರು ಓದಿದ್ದಾರೆ. **'ಮಾ ಅಭಿದ್ರುಹನ್'**—"ಅಭಿದ್ರೋಹ ಮಾಡದಿರಲಿ"—ಎಂಬ ಶಬ್ದಗಳ ಹಿಂದೆ, ಈ ಯೋಗಿರಾಜ ಮಹರ್ಷಿಗೆ ಒಂದು ಪೂರ್ಣ ಧರ್ಮವೇ ಕಂಡು ಅವರು ಬರೆಯುತ್ತಾರೆ:—"**ನೈವ ಕೋಽಪಿ ಮನುಷ್ಯೋಽನ್ಯಾಯೇನ***

* ಈ ಋಷಿಪ್ರಯುಕ್ತ 'ಅನ್ಯಾಯೇನ' ಶಬ್ದವನ್ನು ಹಿಡಿದು, "ಅನ್ಯಾಯ ಹಿಂಸೆ, ನ್ಯಾಯದ ಹಿಂಸೆ"—ಎರಡುಂಟೋ?"—ಎಂದು ಕೆಲವರು ಕುಹಕ ಮಾಡುವುದುಂಟು, ತಲೆಗೆ ಬಿದ್ದ ಹೇನುಗಳು, ಬಟ್ಟೆಗಳಲ್ಲಿ ಮನೆಮಾಡಿರುವ ಕೂರೆಗಳು, [ಒಂದು ಬಗೆಯ ಬಿಳಿಯ ಹೇನುಗಳು], ಖಾಯಿಲೆ ತರುವ ನೊಣ, ಇಲಿ, ತಿಗಣೆ, ಚಿಗಟಗಳು, ಪ್ರಾಣಾಪಹಾರಿಗಳಾದ ಕಾಡುಪ್ರಾಣಿಗಳು, ಹಾವು–ಚೇಳುಗಳು—ಇದನ್ನೆಲ್ಲಾ ಹಿಂಸಾಭಯದಿಂದ ಬಲಿಯಬಿಟ್ಟರೆ, ಮಾನವ ಸಮಾಜದ ಗತಿ ಏನಾದೀತು?

ಕಂಚಿದಪಿ ಪ್ರಾಣಿನಂ ಹಿಂಸಿತುಮಿಚ್ಛೇತ್ । ಕಿಂತು ಸರ್ವೈಃ ಸಹ ಮಿತ್ರತಾಮಾಚ-ರೇತ್‌ಯಥೇಶ್ವರಃ ಕಂಚಿದಪಿ ನಾಭಿದ್ರುಹ್ಯತಿ, ತಥಾ ಸರ್ವೈರ್ಮನುಷ್ಯೈರನುಷ್ಠಾತವ್ಯಮಿತಿ."—"ಯಾವನೇ ಮಾನವನೂ ಅನ್ಯಾಯದಿಂದ ಯಾವುದೇ ಪ್ರಾಣಿಯನ್ನು ಹಿಂಸಿಸಲು ಇಚ್ಛಿಸಬಾರದು. ಆದರೆ, ಎಲ್ಲರೊಂದಿಗೂ ಮೈತ್ರೀ ಭಾವನೆಯನ್ನೇ ರೂಢಿಸಿಕೊಂಡು ಆಚರಿಸಬೇಕು. ಹೇಗೆ ಈಶ್ವರನು ಯಾವನಿಗೂ ದ್ರೋಹ ಮಾಡನೋ, ಹಾಗೆ ಸರ್ವಮಾನವರೂ ವರ್ತಿಸಬೇಕು."

॥ ಐದನೆಯ ಸೂಕ್ತ ಸಮಾಪ್ತ ॥

---

"ಅಹಿಂಸಾ ಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ" [ಯೋಗ:—ಸಾಧನ:–೩೫.]" ಅಹಿಂಸಾ ಸಿದ್ಧಿಯಾದಲ್ಲಿ, ಸಾಧಕನ ಬಳಿ ಪ್ರಾಣಿಗಳು ವೈರತ್ಯಾಗವನ್ನು ಮಾಡುತ್ತವೆ"—ಎಂಬ ಪಾತಂಜಲ ಸೂತ್ರದ ಸತ್ಯತ್ವವನ್ನು ಯೋಗಾಭ್ಯಾಸದ ಮೂಲಕ ಕಂಡುಕೊಂಡವರು ಎಷ್ಟಿದ್ದಾರೆ? ಸಾಧುಜೀವರ ಕೊಲೆ ಪಾಪ. ಹಿಂಸ್ರ ಜಂತುಗಳ ಕೊಲೆ ಒಂದು ಕರ್ತವ್ಯ.

## ಭಾಷ್ಯದ ಶುದ್ಧಾ ಶುದ್ಧ ಶಬ್ದ ಸೂಚಿಕೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 3 | ೨೨ | ಪರರ್ಥ | ಪರಾರ್ಥ |
| 5 | ೧ | ವಿಂದರೆ | ಎಂದರೆ |
| 9 | ೩೨ | ಜೀನವಶಕ್ತಿಗೆ | ಜೀವನಶಕ್ತಿಗೆ |
| 10 | ೨೦ | ಆಸಿ | ಅಸಿ |
| 12 | ೧೯ | ಸತ್ಯಮಯಾ ಉದೇವಾಃ | ಸತ್ಯಮಯಾ ಉ ದೇವಾಃ |
| 17 | ೧೫ | ವರ್ಣನಿಗಂದದ | ವರ್ಣನೆಗಂದದ |
| 20 | ೨ | ಉದೇವಾಃ | ಉ ದೇವಾಃ |
| 22 | ೬ | ತವ್ಮೆಲ್ಲರಿಗೂ | ತಮ್ಮೆಲ್ಲರಿಗೂ |
| 32 | ೧ | ಗವಾಂವಾಪಾ | ಗವಾಂ ವಾ, ಪಾ |
| 34 | ೨೩ | ಅವಮೌಲ್ಯ | ಅವಮೂಲ್ಯ |
| 40 | ೬ | ಸ್ವಧಯೋ ರಪೀಚ್ಯಂ | ಸ್ವಧಯೋರಪೀಚ್ಯಂ |
| 42 | ೨ | ಉಕ್ಥೇಭಿರ್ಜಂತೇ | ಉಕ್ಥೇಭಿರ್ಜರಂತೇ |
| 51 | ೨೩ | ಮನ ಏವೆಂದ್ರು | ಮನಏವೇಂದ್ರು |
| 53 | ೧೫ | ರೀತಿಯಿದ | ರೀತಿಯಿಂದ |
| 63 | ೮ | ಹೃದಯಸ್ಪರ್ಶನೀ | ಹೃದಯಸ್ಪರ್ಶಿನೀ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 63 | ೨೧ | ಅಧಿ ದೈವತ್ತ | ಅಧಿ ದೈವದತ್ತ |
| 64 | ೩೨ | ತಮಸಾಽಖ್ಞಾನತೋಽಪಿವಾ | ತಮಸಾಽಜ್ಞಾನತೋಽಪಿವಾ |
| 80 | ೨೩ | ಅಶ್ವಿನಸ್ವಿನಾವಿತ್ಯೌರ್ಣನಾಭ | ಅಶ್ವಿರಶ್ವಿನಾವಿತ್ಯೌರ್ಣವಾಭ |
| 80 | ೨೪ | ದ್ಯಾವಾ ವೃಥಿವ್ಯಾ ವಿತ್ಯೇತೇ | ದ್ಯಾವಾ ಪೃದಿವ್ಯಾ ವಿತ್ಯೇಕೇ |
| 88 | ೧೫ | ಆನ್ವಯಃ | ಅನ್ವಯಃ |
| 94 | ೧೩ | ಪ್ರಹಪಿತಾಸರವ್ಣಾತ್ | ಪ್ರಕುಪಿತಾನರವ್ಣಾತ್ |
| 95 | ೧೨ | ಮದ್ಯಾ | ಮದ್ಯ |
| 97 | ೩ | ಯಜ್ಞನಾಂ | ಯಜ್ವನಾಂ |
| 100 | ೧ | ಬಾಷ್ಯ | ಭಾಷ್ಯ |
| 101 | ೨೫ | ಋತ್ವಿಜ್ಞಾಮಸು | ಋತ್ವಿಜ್ಯಾಮಸು |
| 105 | ೨೭ | ನಿರಸ | ನೀರಸ |
| 107 | ೨೩ | ತ್ರಿಶಂತಿ | ತ್ರಿಂಶತಿ |
| 110 | ೧೮ | ಅಜ್ಞಾನಗಳಿಗೆ | ಅಜ್ಞಾನಿಗಳಿಗೆ |
| 121 | ೧೫ | ಹೋಗವುದರಿಂದ | ಹೋಗುವುದರಿಂದ |
| 122 | ೫ | ವೋಡಾರೋಧನಾನಾಂ | ವೋಢಾರೋಧನಾನಾಂ |
| 122 | ೨೬ | ಸೂತ್ರದ | ಸೂಕ್ತದ |
| 127 | ೧೮ | ಪುರಷರೂಪನಾದ | ಪುರುಷರೂಪನಾದ |
| 128 | ೧೧ | ಪಾಜ್ಞಾಮಸು | ಪಾಜ್ಯಾಮಸು |
| 131 | ೩೧ | ಸಕಾಶತ್ | ಸಕಾಶಾತ್ |
| 132 | ೧೯ | ಧೀಃ ಭೀಃ | ಧೀಃ ಭಿಃ |
| 132 | ೧೯ | ವಾ ಸಯುತಿ | ವಾಸಯುತಿ |
| 135 | ೨೬ | ಜ್ಞಾಮಯಿವಾಣಿ | ಜ್ಞಾನಮಯಿ ವಾಣಿ |
| 137 | ೬ | ಕಲ್ಯಾ ಣೀ | ಕಲ್ಯಾಣೀ |
| 144 | ೩೨ | ಧೀಯಃ | ಧಿಯಃ |
| 149 | ೧೧ | ಸ್ವರೂಪತ್ಕೃತ್ಸ್ನಂ | ಸ್ವರೂಪಕೃತ್ಸ್ನಂ |
| 150 | ೨೭ | ದೇವತಾ ಸ್ವರೂಡ | ದೇವತಾಸ್ವರೂಪ |
| 165 | ೧೭ | ಹೃದಯುಯುದ | ಹೃದಯುದ |
| 165 | ೨೫ | ನುಪೇಶಸಂ | ಸುಪೇಶಸಂ |
| 169 | ೩೨ | [ವಿಮುಕ್ತಾಃ] | [ವಿಮುಕ್ತಾಃ] |
| 170 | ೧ | [ಅಮೂಡಾಃ] | [ಅಮೂಢಾಃ] |
| 170 | ೩೦ | ವಾಕ್ಯರಚನೆ | ವಾಕ್ಯರಚನೆ |
| 174 | ೨೮ | ನೀರಿಚ್ಛ | ನಿರೀಚ್ಛ |
| 185 | ೯ | ಭಾಷ್ಯಮಾಡತ್ತಿರುವ | ಭಾಷ್ಯಮಾಡುತ್ತಿರುವ |
| 185 | ೧೯ | ನಿಭ್ರಾಂತ | ನಿಭ್ರಾರ್ಂತ |
| 187 | ೨೭ | ಪರದೇಶ್ವರನ | ಪರಮೇಶ್ವರನ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 190 | ೭ | ಸರ್ವಥಾ | ಸರ್ವಥಾ |
| 196 | ೨೦ | ಅಹಿಂಸಕರಲ್ಲಿ | ಅಹಿಂಸಕರಲ್ಲ |
| 198 | ೪ | ಹೃದಯೇಷ್ವಂತ | ಹೃದಯೇಷ್ವಂತ |
| 206 | ೨೩ | ಮಹರ್ಷಿಗಳದ್ದ | ಮಹರ್ಷಿಗಳದ್ದು |
| 210 | ೧೮ | ಸದೃಢವಾದ | ಸುದೃಢವಾದ |
| 218 | ೨೩ | ರೀತಿಯಂಯೇಲ್ಲಿ | ರೀತಿಯಲ್ಲಿ |
| 221 | ೧೧ | ತತ್ಸತಯತ್ಸಖಿಂ | ತತ್ಪತಯತ್ಸಖಿಂ |
| 222 | ೩ | ಯೂ ನೇಷು | ಯಾನೇಷು |
| 223 | ೭ | ಸ್ವಿನ | ಸ್ವೇನ |
| 230 | ೪ | ವಜ್ರಬಾಹುರ್ಯಾಃ | ವಜ್ರಬಾಹುರ್ಯೋಃ |
| 232 | ೨೭ | ಈಗೆ ಬಯ | ಈ ಬಗೆಯ |
| 233 | ೨೬ | ಕ್ರಮವೆಂದು | ಕ್ರತುವೆಂದು |
| 234 | ೧೨ | ಮನುಪ್ಯಾಣಾಮೇವ | ಮನುಷ್ಯಾಣಾಮೇವ |
| 236 | ೨ | ತ್ವಂ | ತಂ |
| 237 | ೨೦ | ಅಸಂಖ್ಯಾತೇಪು | ಅಸಂಖ್ಯಾತೇಷು |
| 247 | ೧೩ | ನತಬ್ವರೂ | ನಾಲ್ವರೂ |
| 247 | ೧೬ | ಪಥರ್ವಣದ | ಅಥರ್ವಣದ |
| 247 | ೧೯ | ಮಹಾಶುಭಗುಣವೆಂಬ | ಮಹಾಶುಭಗುಣವೆಂದು |
| 247 | ೨೦ | ಋಗ್ವೇದ | ಋಗ್ವೇದ |
| 248 | ೫ | ಶ್ರುತಋಷಿ | ಶ್ರುತಋಷಿ |
| 248 | ೧೯ | ದೀನರನ್ನ | ಧೀನರನ್ನು |
| 250 | ೨–೩ | ನಿಚ್ಚದ್ಗಾಯತ್ರೀ | ನಿಚ ದ್ಗಾಯತ್ರೀ |
| 253 | ೨೪ | ಮತ್ರ | ಮಂತ್ರ |
| 255 | ೧೧ | ಸಂಚಾನೆ | ಸಂಚಾಲನೆ |
| 256 | ೨ | ಋತಿಜ | ಋತ್ವಿಜ |
| 257 | ೭ | ಚಿತನನ | ಚೇತನನ |
| 259 | ೧೩ | ಪ್ರತಿಯೊಂದ | ಪ್ರತಿಯೊಂದು |
| 260 | ೧೭ | ನಿತ್ಯೈನ | ನಿತ್ಯೇನ |
| 260 | ೩೧ | ಲಜ್‌ಲಕಾರ | ಲೋಟ್‌ಲಕಾರ |
| 266 | ೯ | ಯಜಃ | ಯಜ್ಞಃ |
| 268 | ೧೨ | ಕಪ್ಟಕರವಾದ | ಕಷ್ಟಕರವಾದ |
| 269 | ೧೨ | ಅಲ್ಪಜತ್ವ | ಅಲ್ಪಜ್ಞತ್ವ |
| 269 | ೮ | ಮಾಡಿರುದು | ಮಾಡಿರುವುದು |
| 270 | ೧೪ | ಹಂಸೈರಿದ | ಹಂಸೈರಿವ |
| 271 | ೨ | ಸಧುರಾಶ್ವರಂತ | ಸಧುರಾಶ್ವರಂತ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 271 | ೨೩ | ಅತುಷಾಸೋ | ಅರುಷಾಸೋ |
| 271 | ೨೪ | ರೂಪಮರುಪಂ | ರೂಪಮರುಷಂ |
| 271 | ೨೬ | ಯಕಸ್ಯ | ಯಸ್ಯ |
| 271 | ೨೭ | ರಂ | ತಂ |
| 271 | ೩೦ | ಸಿಡಿಚು | ಸಿಡಿಲು |
| 271 | ೩೧ | ನಿರ್ದೂಲ | ನಿರ್ಮೂಲ |
| 272 | ೧೨ | ಮಂತ್ರಗಳನ್ನುದ್ಧೆರಿಸುವ | ಮಂತ್ರಗಳನ್ನುದ್ಧರಿಸುವ |
| 272 | ೧೪ | ಹಂ ಸಾ | ಹಂಸಾ |
| 273 | ೧೭ | ಭಗವದಾದಂದ | ಭಗವದಾನಂದ |
| 273 | ೨೩ | ಎನು | ಎನ್ನು |
| 274 | ೧೧ | ಸರ್ವೆಭೂತೇಷು | ಸರ್ವಭೂತೇಷು |
| 274 | ೧೩ | ಪಸಂದೇಹಡುವುದಿಲ್ಲ | ಸಂದೇಹಪಡುವುದಿಲ್ಲ |
| 294 | ೨೦ | ವೇದದ ವಿದ್ವಾನ್ | ವೇದದವಿದ್ವಾನ್ |
| 294 | ೩೦ | ಜನಿಷ್ಟಂ | ಚನಿಷ್ಟಂ |
| 294 | ೩೧ | ಋಷಿಣಾಂ | ಋಷೀಣಾಂ |
| 295 | ೨೬ | ಅಭಿಷ್ಟ | ಅಭೀಷ್ಟ |
| 305 | ೩ | ವಿಚಾರಶೇಲರಾದ | ವಿಚಾರಶೀಲರಾದ |
| 307 | ೩ | ಅಭಿವ್ಯಕ್ತಗೊಳಿಸಲುವಾಗಿ | ಅಭಿವ್ಯಕ್ತಗೊಳಿಸುವ ಸಲುವಾಗಿ |
| 307 | ೧೩ | ಬರಿಯುತ್ತಾರೆ | ಬರೆಯುತ್ತಾರೆ |
| 307 | ೧೫ | ಜ್ಯೇಷ್ಠ್ಯಯ | ಜ್ಯೇಷ್ಠ್ಯಯ |
| 308 | ೧೦ | ಅಗ್ರಗಾಮಿಯೂ | ಅಗ್ರಗಾಮಿಯೂ |
| 310 | ೧೪ | ವಿಸಾರವನ್ನೂ | ವಿಸ್ತಾರವನ್ನೂ |
| 310 | ೨೭ | ಶ್ರೀ ವೇಧ್ವರು | ಶ್ರೀ ಮಧ್ವರು |
| 313 | ೮ | ಸಮಸಾ | ಮನಸಾ |
| 314 | ೧೭ | ಧ | ಥ |
| 328 | ೨೯ | ಸ್ಪಷ್ಟ್ಯದಿಯಲ್ಲಿ | ಸ್ಪಷ್ಟ್ಯದಿಯಲ್ಲಿ |
| 331 | ೨೮ | [ಯುನಜ್ಮ ] | [ಯುನಜ್ಮಿ] |
| 331 | ೧ | ನಸ್ತಮೂ | ನಸ್ತನೂಃ |
| 332 | ೯ | ಜೀವಾರತುಂ | ಜೀವಾತುಂ |
| 332 | ೨೫ | ಆಷ್ಟಾ | ಆಷ್ಟಾ |